ಧರ್ಮಾರ್ಥ ಸಾಹಿತ್ಯ ಕ್ರಮಾಂಕ ೯

# In Woods of God-Realization

THE COMPLETE WORKS OF SWAMY RAMATIRTHA

# ಪರಮಾತ್ಮಾನುಭವದ ಮಹಾರಣ್ಯಗಳಲ್ಲಿ

## ಸ್ವಾಮಿ ರಾಮತೀರ್ಥರ ಸಂಪೂರ್ಣ ಕೃತಿಗಳು

### ತೃತೀಯ ಭಾಗ

ಅನುವಾದಕ: **ಶ್ರೀ ಮೂರ್ತಿ**

ಮತ್ತು

R. ಸುಜೀನೂರು (ಹೊಳಲ್ಕೆರೆ)

ಪ್ರಕಾಶಕರು :

ಬೋಡೆ ಈಶ್ವರಸಾ ಅಂಡ್ ಸನ್ಸ್ ಛಾರಿಟಬಲ್ ಟ್ರಸ್ಟ್

ಬೆಂಗಳೂರು-೯

ಧರ್ಮಾರ್ಥ ಸಾಹಿತ್ಯ ಕ್ರಮಾಂಕ ೯

# In Woods of God-Realization

## THE COMPLETE WORKS OF SWAMY RAMATIRTA

# ಪರಮಾತ್ಮಾನುಭವದ ಮಹಾರಣ್ಯಗಳಲ್ಲಿ

## ಸ್ವಾಮಿ ರಾಮತೀರ್ಥರ ಸಂಪೂರ್ಣ ಕೃತಿಗಳು



ತೃತೀಯ ಭಾಗ

ಅನುವಾದಕ: ಶ್ರೀ ಮೂರ್ತಿ

ಪ್ರಕಾಶಕರು

ಖೋಡೆ ಈಶ್ವರಸಾ ಅಂಡ್ ಸನ್ಸ್ ಛಾರಿಟಬಲ್ ಟ್ರಸ್ಟ್

ಬೆಂಗಳೂರು–೯

**Rama guarantees that anybody in this world who hears all of Rama's speeches, would get his doubts removed, is sure to come to the conviction of his own Divinity.**

ಈ ಪ್ರಪಂಚದಲ್ಲಿ ಯಾರೇ ಆಗಲಿ ರಾಮನ ಎಲ್ಲಾ ವ್ಯಾಖ್ಯಾನಗಳನ್ನೂ ಕೇಳಿದವನು, ತನ್ನ ಸಂಶಯಗಳನ್ನೆಲ್ಲಾ ಕಳೆದುಕೊಂಡು, ತಾನೇ ದೇವರೆಂಬ ನಿಶ್ಚಯ ಜ್ಞಾನಕ್ಕೆ ಖಂಡಿತ ಬರುವನೆಂದು ರಾಮನು ಭರವಸೆ ಕೊಡುತ್ತಾನೆ.

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು
೩೧-೧೨-೧೯೬೮



ಮುದ್ರಕರು :
**ಮೋಹನ್ ಪ್ರೆಸ್**
**ಗಾಂಧೀನಗರ, ಬೆಂಗಳೂರು**

## Rama's Promise

**Whether working through many souls or alone, Rama seriously promises to infuse true life and dispel darkness and weakness from India within ten years, and within the first half of the twentieth Century, India will be restored to more than its original glory Let these words be recorded**

*Jan. 1, 1900* **Swamy Rama**

## ರಾಮನ ಪ್ರತಿಜ್ಞೆ, ವಾಗ್ದಾನ, ಭರವಸೆ

ಅನೇಕ ಚೇತನಗಳ ಮೂಲಕವಾಗಿ ಆಗಲೀ ಏಕಾಂಗಿಯಾಗಿ ಆಗಲೀ ಕಾರ್ಯಸಾಧನೆ ಮಾಡುವದರಿಂದ, ಹತ್ತು ವರ್ಷಗಳೊಳಗಾಗಿ ಭಾರತದ ಜನಾಂಗದಲ್ಲಿ ನಿಜವಾದ ಜೀವ ಚೈತನ್ಯವನ್ನು ಎರೆದು ತುಂಬುವದಾಗಿಯೂ ಭಾರತೀಯರಲ್ಲಿರುವ ಅಜ್ಞಾನಾಂಧಕಾರವನ್ನೂ (ಮನೋ) ದೌರ್ಬಲ್ಯವನ್ನೂ ತೊಲಗಿಸುವದಾಗಿಯೂ ಮತ್ತು ಇಪ್ಪತ್ತನೇ ಶತಮಾನದ ಪೂರ್ವಾರ್ಧದೊಳಗೇ ಭಾರತವು, ಅದರ ಪೂರ್ವ ವೈಭವ ಪ್ರತಿಷ್ಠೆಗಳಿಗಿಂತಲೂ ಹೆಚ್ಚಿನ ಗೌರವ ಸ್ಥಾನ ಮಾನ-ಮಹಿಮೆಗಳಲ್ಲಿ ಪುನಸ್ಸ್ಥಾಪಿತವಾಗುವುದೆಂದೂ ರಾಮನು ಗುರುತರ ಶ್ರದ್ಧೆಯಿಂದ ಭರವಸೆ ಕೊಡುತ್ತಾನೆ; ಪ್ರತಿಜ್ಞೆ ಮಾಡುತ್ತಾನೆ. ಈ ಮಾತುಗಳು ಶಾಶ್ವತವಾದ ದಾಖಲೆಯಲ್ಲಿರಲಿ.

ಜನವರಿ ೧, ೧೯೦೦ ಸ್ವಾಮಿ ರಾಮ

## Mahatma Gandhi's Message

Swami Rama's teachings have got to be propagated. He was one of the greatest souls, not only of India but of the whole world. I adore his ideals.

—M. K. GANDHI

## ಮಹಾತ್ಮಾ ಗಾಂಧಿಯವರ ಸಂದೇಶ

ಸ್ವಾಮಿ ರಾಮರ ಪ್ರಬೋಧನೆಗಳು ಪ್ರಸಾರ ಮಾಡಲ್ಪಡಬೇಕು. ಅವರು ಇಂಡಿಯಾ (ಭಾರತ)ದ ಮಹಾತ್ಮರಲ್ಲ, ಇಡೀ ಜಗತ್ತಿನ ಅತ್ಯಂತ ಶ್ರೇಷ್ಠ ಮಹಾತ್ಮರಲ್ಲಿ ಒಬ್ಬರಾಗಿದ್ದರು

ನಾನು ಅವರ ಆದರ್ಶಗಳನ್ನು ಆರಾಧಿಸುತ್ತೇನೆ.

—ಎಂ. ಕೆ. ಗಾಂಧಿ

## Mahamana Madan Mohan Malaviya's Message

The name of Swami Rama Tirtha is such as thrills my heart with ecstasy. I have never come across a greater self-realized Mahatma so far.

His message on self purification and self-realisation would be a great boon for coming generation of the country.

—M. M. Malaviya

## ಮಹಾಮನ ಮದನ ಮೋಹನ ಮಾಳವೀಯರ ಸಂದೇಶ

ಸ್ವಾಮಿ ರಾಮತೀರ್ಥರ ಹೆಸರೇ ನನ್ನ ಹೃದಯವನ್ನು ಆನಂದ ಪರವಶತೆಯಿಂದ ಪುಳಕಿತವಾಗುವಂಥಾದ್ದಾಗಿದೆ. ಇದುವರೆಗೆ ನಾನೆಂದಿಗೂ ಅವರಿಗಿಂತ ಶ್ರೇಷ್ಠರಾದ ಆತ್ಮಾನುಭವಿ ಮಹಾತ್ಮರನ್ನು ಸಂಧಿಸಿಲ್ಲ.

ಆತ್ಮಶುದ್ಧೀಕರಣ ಮತ್ತು ಆತ್ಮಾನುಭವ—ಈ ವಿಷಯಗಳ ಮೇಲಿನ ಅವರ ಸಂದೇಶವು ದೇಶದ ಮುಂದಿನ ಜನಾಂಗಕ್ಕೆ ಮಹದನುಗ್ರಹವಾಗುವುದೇ ಸರಿ.

—ಎಂ. ಎಂ. ಮಾಳವೀಯ

# ಮುನ್ನುಡಿ

ಶ್ರೀ ಸ್ವಾಮಿ ವಿವೇಕಾನಂದರೂ ಶ್ರೀ ಸ್ವಾಮಿ ರಾಮತೀರ್ಥರವರೂ ಭಾರತ ಭೂಮಿಗೆ ಮೀಸಲಾಗಿರುವ ಅಧ್ಯಾತ್ಮವಿದ್ಯೆಯ ಮರ್ಮವನ್ನು ದೂರದಲ್ಲಿರುವ ಪಾಶ್ಚಾತ್ತ್ಯದೇಶನಿವಾಸಿಗಳಿಗೂ ಯಾವ ಕ್ಲೇಶವೂ ಇಲ್ಲದೆ ಅರ್ಥವಾಗುವಂತೆ ಬಿಚ್ಚಿ ಹೇಳುವ ಹೊಣೆಯನ್ನು ಹೊತ್ತ ದಿವ್ಯ ಸಂದೇಶಹರರು. ಸ್ವಾಮಿ ವಿವೇಕಾನಂದರ ಉಪನ್ಯಾಸಗಳೂ ಗ್ರಂಥಗಳೂ ಶ್ರೀ ರಾಮಕೃಷ್ಣ ಮಿಷನ್ನಿನವರ ಮತ್ತು ಇನ್ನೂ ಕೆಲವರ ಪರಿಶ್ರಮದ ಫಲವಾಗಿ ಕನ್ನಡಕ್ಕೆ ತಕ್ಕಮಟ್ಟಿಗೆ ಇಳಿದಿರುತ್ತವೆ. ಆದರೆ ಸ್ವಾಮಿ ರಾಮತೀರ್ಥರವರ ಉಪನ್ಯಾಸಗಳು ಇಂಗ್ಲೀಷಿನಲ್ಲಿ ಪ್ರಚುರವಾಗಿದ್ದರೂ ಕನ್ನಡ ನುಡಿಯಲ್ಲಿ ಈವರೆಗೆ ಅಷ್ಟಾಗಿ ಬೆಳಕನ್ನು ಕಂಡಿರಲಿಲ್ಲ. ಆ ಕೆಲಸವು ಶ್ರೀ ಶ್ರೀ ಮೂರ್ತಿಗಳಂಥ ನುರಿತ ಲೇಖಕರ ಪಾಲಿಗೆ ಬಂದಿರುವುದು ಒಂದು ಶುಭಚಿಹ್ನೆ ಎನ್ನಬಹುದು.

ಶ್ರೀ ಶ್ರೀ ಮೂರ್ತಿಗಳು ಸ್ವಾಮಿಗಳ ಅಭಿಪ್ರಾಯಗಳನ್ನು ಬಹುಕಾಲಗಳಿಂದಲೂ ಶ್ರದ್ಧಾಭಕ್ತಿಗಳಿಂದ ಚಿಂತನೆ ಮಾಡಿದವರು. ಕನ್ನಡಿಗರಿಗೆ ಹೃದಯಂಗಮವಾಗುವಂತೆ ಮೂಲದ ಅಭಿಪ್ರಾಯವನ್ನು ಲಲಿತವಾದ ಶೈಲಿಯಲ್ಲಿ ಪ್ರತಿಬಿಂಬಿಸುವ ಪ್ರಯತ್ನವನ್ನು ಮಾಡಿರುತ್ತಾರೆ. ಸ್ವಾಮಿಗಳು ಅನುಭವೈಕ ಪ್ರಮಾಣವಾಗಿ ಆಯಾ ಸಂದರ್ಭದಲ್ಲಿ ತಮ್ಮ ಅಂತಃಕರಣದಲ್ಲಿ ಸ್ಫುರಿಸಿದಂತೆ ಕೆಲವು ಕಡೆ ಸಂಕ್ಷಿಪ್ತವಾಗಿಯೂ ಕೆಲವುಕಡೆ ಪುನರುಕ್ತಿಯನ್ನು ಲಕ್ಷಿಸದೆಯೂ ಹೇಳಿರುವ ವಿಷಯಗಳು ಕೋಮಲಮತಿಗಳಾದ ವಾಚಕರಿಗೆ ಒಗ್ಗುವ ರೀತಿಯಲ್ಲಿ ಮಾರ್ಪಡಿಸಬೇಕಾದ ಆವಶ್ಯಕತೆಯನ್ನು ಕಂಡುಕೊಂಡು ತಮ್ಮ ಭಾಷಾಂತರೀಕರಣ ಕಾರ್ಯವನ್ನು ಅತ್ಯುತ್ತಮ ರೀತಿಯಲ್ಲಿ ನಿರ್ವಹಿಸಿರುತ್ತಾರೆ. ಈ ಗ್ರಂಥವು ಕನ್ನಡನಾಡಿನ ಅಧ್ಯಾತ್ಮಚಿಂತಕರಿಗೆಲ್ಲಾ ಮಾರ್ಗದರ್ಶಿಯಾಗಿ ಪ್ರಚಾರಕ್ಕೆ ಬರುವಂತೆ ಅನುಗ್ರಹಿಸಲೆಂದು ಶ್ರೀಮನ್ನಾರಾಯಣ ಭಗವಂತನನ್ನು ಪ್ರಾರ್ಥಿಸುತ್ತೇನೆ.

ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಭಿಃ
ಅಧ್ಯಾತ್ಮ ಪ್ರಕಾಶ ಕಾರ್ಯಾಲಯ
ಹೊಳೇನರಸೀಪುರ

# ಬಿನ್ನಹ

ಈಶ್ವರಾನುಗ್ರಹದಿಂದ ಈಗ ಸುಮಾರು ನಲವತ್ತನಾಲ್ಕು ವರ್ಷಗಳ ಹಿಂದೆಯೇ ಪೂಜ್ಯ ಸ್ವಾಮಿ ರಾಮತೀರ್ಥರ "In Woods of God-Realization" ಎಂಬ ಗ್ರಂಥದಲ್ಲಿಯ ಅವರ ಉಪನ್ಯಾಸಗಳಲ್ಲಿ ಕೆಲವು ಭಾಗಗಳನ್ನು ಓದಿ ಹೃದಯವು ಅತಿಶಯವಾಗಿ ಪ್ರಭಾವಿತವಾಯಿತು. ಅವರು ತಮ್ಮ ಉಪನ್ಯಾಸಗಳಲ್ಲಿ ಪ್ರಯೋಗಿಸಿರುವ "My own Self in the form of ladies and gentlemen!" "ಮಹಿಳೆಯರ ಮತ್ತು ಮಹನೀಯರ ರೂಪದಲ್ಲಿರುವ ನನ್ನ ಆತ್ಮವೆ!" ಎಂಬ ಅವರ ಅಪೂರ್ವವೂ ಅಸಾಧಾರಣವೂ ಅದ್ವೈತ ಪ್ರಬೋಧಕವೂ ಆದ ಸಂಬೋಧನೆಯಿಂದ ಹೃದಯದಲ್ಲಿ ಅಧ್ಯಾತ್ಮದ ಅರುಣೋದಯವಾಗಿ, ಅಲ್ಲಿ ಗುಪ್ತ-ಸುಪ್ತವಾಗಿದ್ದ ಆಧ್ಯಾತ್ಮಿಕ ಸಂಸ್ಕಾರವು ಎಚ್ಚರಗೊಂಡಿತು. ಆ ಕ್ಷಣದಿಂದ ಸ್ವಾಮಿ ರಾಮತೀರ್ಥರು ಹೃದಯದಲ್ಲಿ ಪ್ರತಿಷ್ಠಿತರಾದರು; "ರಾಮ ಬಾದ್ಷಾ"ನ ಪ್ರಭುತ್ವವು ಪ್ರಾರಂಭವಾಯಿತು. ಮುಂದಿನ ಜೀವನವು ಈ ರೀತಿಯಲ್ಲಿ ರೂಪಿತವಾಗುವುದಕ್ಕೆ ಅವರ ಅನುಗ್ರಹವೇ ಬಹಳ ಮಟ್ಟಿಗೆ ಕಾರಣವಾಯಿತು-ಎನ್ನಬಹುದು.

ಅವರು ಪರಮ ವಿರಕ್ತರೂ ಮಹಾ ತ್ಯಾಗಶೀಲರೂ ಇದ್ದಂತೆಯೇ ಉಜ್ಜ್ವಲ ರಾಷ್ಟ್ರಪ್ರೇಮಿಗಳೂ ಆಗಿದ್ದರು. ಅವರ ಉತ್ಕಟವಾದ ಅದ್ವೈತಾನುಭವವು ಹೊರ ಹೊಮ್ಮಿದ ಲೌಕಿಕರೂಪವೇ ಅವರ ವಿಲಕ್ಷಣವಾದ ರಾಷ್ಟ್ರಭಾವನೆಯಾಗಿತ್ತು. ವಿರಾಡಾತ್ಮನ ಅನುಭವದಿಂದ ಅವರು ರಾಷ್ಟ್ರವನ್ನಾಗಲೀ ಲೋಕವನ್ನಾಗಲೀ ತಮ್ಮಿಂದ ಬೇರೆಯಾಗಿ ತಿಳಿಯಲಿಲ್ಲ. ಆ ವಿಷಯದಲ್ಲಿ ಅವರು ಹೇಳಿರುವದೇನೆಂದರೆ,

"Let me feel I am India-the whole of India. The land of India is my body. The Cape Comorine is my feet, the Himalayas my head "

"ಇಂಡಿಯಾದೇಶವೇ ನಾನೆಂದು-ಇಡೀ ಇಂಡಿಯಾದೇಶವೇ ನಾನೆಂದು-ಮನಃಪೂರ್ವಕವಾಗಿ ಭಾವಿಸುತ್ತೇನೆ. ಇಂಡಿಯಾದೇಶವೇ ನನ್ನ ದೇಹ. ಕೇಪ್ ಕಾಮರಿನ್-ಕನ್ಯಾಕುಮಾರಿಯೇ-ನನ್ನ ಪಾದ, ಹಿಮಾಲಯವೇ ನನ್ನ ಮಸ್ತಕ. ನನ್ನ ಕೇಶಗಳಿಂದ ಗಂಗೆಯೂ ನನ್ನ ಶಿರಸ್ಸಿನಿಂದ ಬ್ರಹ್ಮಪುತ್ರಾ-ಸಿಂಧೂ ನದಿಗಳೂ

ಹರಿಯುತ್ತವೆ. ನಾನು ನಡೆಯುವಾಗ ಇಂಡಿಯಾನೇ ನಡೆಯುವುದೆಂದು ಭಾವಿಸುತ್ತೇನೆ. ನಾನು ಉಸಿರಾಡುವಾಗ ಇಂಡಿಯಾದೇಶವೇ ಉಸಿರಾಡುವದೆಂದು ಭಾವಿಸುತ್ತೇನೆ. ನಾನು ಮಾತನಾಡುವಾಗ ಇಂಡಿಯಾನೇ ಮಾತನಾಡುವುದೆಂದು ಭಾವಿಸುತ್ತೇನೆ, ಅರಿಯುತ್ತೇನೆ ನಾನೇ ಇಂಡಿಯಾ (ಭಾರತ), ನಾನೇ ಶಂಕರ, ನಾನೇ ಶಿವ ! ರಾಷ್ಟ್ರಭಕ್ತಿಯ ಅತ್ಯುನ್ನತ ಅನುಭವವೇ ಇದು. ಇದೇ ವ್ಯವಹಾರ-ವೇದಾಂತ, ಅನುಷ್ಠೇಯ-ವೇದಾಂತ, ಕ್ರಿಯಾಶೀಲ ವೇದಾಂತ ! ”

ಈ ಭವ್ಯವಾದ ಭಾವನೆಗಳು ಯಾರಲ್ಲಿ ನಿಜವಾದ ರಾಷ್ಟ್ರಭಕ್ತಿಯನ್ನೂ ವಿಶ್ವಾತ್ಮ ಭಾವನೆಯನ್ನೂ ಚಿಮ್ಮಿಸಲಾರವು ?

ರಾಮತೀರ್ಥರ ಇಂಥಾ ಉಜ್ಜ್ವಲವಾದ, ಅನೇಕ ಮಹಾಕಾವ್ಯಗಳು ಈಗ ಸುಮಾರು ನಾಲ್ಕು ದಶಕಗಳಿಗೂ ಹೆಚ್ಚು ಕಾಲ ಮನೋಮಂದಿರದಲ್ಲಿ ಮೊರೆಯುತ್ತಾ ಸಂಸ್ಕಾರ ವೀಣೆಯನ್ನು ಮಿಡಿಯುತ್ತಾ ಬಂದಿವೆ.

ಆದರೆ, ಅವರ ಜೀವನ ಚರಿತ್ರೆಯನ್ನೂ ಸಮಸ್ತ ಉಪನ್ಯಾಸಗಳನ್ನೂ ಆಂಗ್ಲ ಭಾಷಾಮೂಲದಿಂದ ಕನ್ನಡದಲ್ಲಿ ಅನುವಾದ ಮಾಡುವ ಸೌಭಾಗ್ಯವನ್ನು ಗುರುವರ್ಯ ರಾಮರೇ ಅನುಗ್ರಹಿಸಿದ್ದಾರೆಂದರೆ ಅತಿಶಯೋಕ್ತಿಯಲ್ಲ ಈ ಪವಿತ್ರ ಕಾರ್ಯಕ್ಕೆ ಪ್ರೇರಿಸುವದಕ್ಕೂ ಎಳ್ಳಷ್ಟೂ ಲಾಭದಾಶೆಯಿಲ್ಲದೆ ಉದಾರವಾಗಿ ಧನ ಸಹಾಯ ಮಾಡುವದಕ್ಕೂ ಶ್ರೀ ರಾಮತೀರ್ಥರ ಪರಮಾನುಗ್ರಹವು (ಶ್ರೀರಾಮಾನುಗ್ರಹವು) ಪ್ರಕಾಶಕರಾದ "ಧರ್ಮಸೇವಾ ಧುರೀಣ" ಶ್ರೀಮಾನ್ ಸೋಲೆ ಲಕ್ಷ್ಮಣಸಾರವರ ಸ್ನೇಹರೂಪವನ್ನು ತಾಳಿತು ರಾಮತೀರ್ಥರ ಜೀವನಚರಿತ್ರೆಯ 6,000 ಪ್ರತಿಗಳು ಅವರ ಉಪನ್ಯಾಸಗಳ ಪ್ರಥಮಭಾಗದ 2,000 ಪ್ರತಿಗಳು, ಆ ಉಪನ್ಯಾಸಗಳ ದ್ವಿತೀಯ–ತೃತೀಯ ಭಾಗಗಳ 10,000 ಪ್ರತಿಗಳು–ಉತ್ತಮ ಕಾಗದದಲ್ಲಿ ಮುದ್ರಣ ಮಾಡಿಸಿ, ಬೈಂಡ್ ಮಾಡಿಸಿರುವ ಇಷ್ಟು ಸಾಹಿತ್ಯವನ್ನೂ ಧರ್ಮಾರ್ಥವಾಗಿ -ಪ್ರಾಣ ಉಚಿತವಾಗಿ–ಶ್ರೀ ಲಕ್ಷ್ಮಣಸಾರವರು ಭಕ್ತರಲ್ಲಿ ಹಂಚುತ್ತಿದ್ದಾರೆಂದರೆ, ಅವರ ತ್ಯಾಗ ಶೀಲತೆಯನ್ನೂ ಪೂಜ್ಯ ಶ್ರೀ ಶ್ರೀ ದ್ವಾರಕಾ ಜಗದ್ಗುರುಗಳು ರಾಷ್ಟ್ರಪತಿಗಳ (ಸರ್ S. ರಾಧಾಕೃಷ್ಣನ್‌ರ) ಮೂಲಕ ಅನುಗ್ರಹಿಸಿರುವ "ಧರ್ಮಸೇವಾಧುರೀಣ" ಎನ್ನುವ ಬಿರುದಿನ ಔಚಿತ್ಯವನ್ನೂ ಸಾರ್ಥಕತೆಯನ್ನೂ ಕಾಣಬಹುದು.

"ಪರಮಾತ್ಮಾನುಭವದ ಮಹಾರಣ್ಯಗಳಲ್ಲಿ" ಎಂಬ ರಾಮತೀರ್ಥರ ಈ

ಉಪನ್ಯಾಸಗಳ –ಸುಮಾರು–1400 ಪುಟಗಳ ಮೂರುಭಾಗಗಳಂವ ಅವರ ಎಲ್ಲಾ ಉಪನ್ಯಾಸಗಳೂ ಮುಗಿದಂತಾದರೂ ಅವರ ಕೃತಿಗಳಲ್ಲಿ "Heart of Rama" "ರಾಮಹೃದಯ", "Parables of Rama" "ರಾಮರ–ಅಧ್ಯಾತ್ಮ ಬೋಧಕ–ರೂಪಕ ಕಥೆಗಳು" ಇತ್ಯಾದಿ ಉಳಿದಿರುತ್ತವೆ. ಈ ಮಹಾ ಕಾರ್ಯಕ್ಕೆ ವ್ಯಕ್ತಿಯಲ್ಲಿ ಸಾಕಷ್ಟು ಯೋಗ್ಯತೆಯಿಲ್ಲವಾದರೂ ಬಹುಕಾಲದಿಂದ ಹೃದಯದಲ್ಲಿ ವಾತ್ಸಲ್ಯದಿಂವ ನೆಲೆಸಿರುವ ಸ್ವಾಮಿರಾಮರೇ ಅವಶ್ಯವಾದ ಶಕ್ತಿಯನ್ನು ದಯಪಾಲಿಸಿ ತಮ್ಮ ಸೇವೆಯನ್ನು ನಡೆಸಿಕೊಂಡಿವ್ವಾರೆಂಬ ನಂಬಿಕೆಯಿದೆ.

ಬಾದರಾಯಣರು ಬ್ರಹ್ಮಸೂತ್ರಗಳಲ್ಲಿ, "ಆವೃತ್ತಿರಸಕೃದುಪದೇಶಾತ್" ಎಂದು ಹೇಳಿರುವಂತೆ ವೇದಾಂತ ತತ್ತ್ವಗಳನ್ನು ಮಂದ ಮಧ್ಯಮಾಧಿಕಾರಿಗಳಿಗೆ ಪುನಃ ಪುನಃ ಅನೇಕಾವರ್ತಿ ಉಪದೇಶಮಾಡುವದು ಅವಶ್ಯವಾಗಿರುತ್ತದೆ. ಆದ್ದರಿಂಧ ಸ್ವಾಮಿರಾಮರ ಉಪನ್ಯಾಸಗಳಲ್ಲಿಯೂ ಒಂದೇ ವಿಷಯದ ಪುನರಾವರ್ತನೆಗಳು ಹೆಚ್ಚಾಗಿ ತೋರಬಹುದು ಆದರೆ, ಯಾರಿಗೆ ವೇದಾಂತವನ್ನು ಬಾಲಪಾಠದಿಂದಲೂ ಬೋಧಿಸಬೇಕಾಗಿತ್ತೋ ಅಂಧಾ ಜಪಾನೀಯರೂ ಅಮೆರಿಕನ್‌ರೂ ಸ್ವಾಮಿಗಳ ಶ್ರೋತೃಗಳಾಗಿದ್ದರೆಂಬದನ್ನು ನಾವು ಮರೆಯಬಾರದು. ಇದರಲ್ಲಿ ಮೆಚ್ಚಬೇಕಾದ ಒಂದು ಉತ್ತಮ ಗುಣವೂ ಇದೆ. ಏನೆಂದರೆ, ಸ್ವಾಮಿ ರಾಮತೀರ್ಥರ ಉಪನ್ಯಾಸ ಗಳು ನಮ್ಮಲ್ಲಿ ಎಲ್ಲಾ ಮಟ್ಟದ ಅಧಿಕಾರಿಗಳಿಗೂ ಉಪಯುಕ್ತವಾಗಿವೆ. ಪ್ರತಿಯೊಂದು ಉಪನ್ಯಾಸದಲ್ಲಿಯೂ ಸಾಮಾನ್ಯವಾಗಿ ಇರುವ ಅವರ ಸಣ್ಣ ಸಣ್ಣ ಕಥೆಗಳು ಎಲ್ಲರಿಗೂ ಸ್ವಾರಸ್ಯಕರವಾಗಿಯೂ ಸೂಕ್ಷ್ಮತತ್ತ್ವವನ್ನು ಸುಲಭವಾಗಿ ತಿಳಿಸುವುದಾಗಿಯೂ ಎಂದಿಗೂ ಮರೆಯದಂಧವಾಗಿಯೂ ಇವೆ.

ಈ ಅನುವಾದವು ಬಹಳ ಮಟ್ಟಿಗೆ ಭಾವಾನುವಾದ; ಕೆಲವು ಕಡೆ ಸ್ವೇಚ್ಛಾನುವಾದ ಮೂಲದಲ್ಲಿರುವ ಪುನರಾವರ್ತನೆಗಳನ್ನು ಸಾಧ್ಯವಾದಷ್ಟು ಬಿಟ್ಟಿದೆ. ಮೂಲದಲ್ಲಿ ಗೂಢವೂ ಗರ್ಭಿತವೂ ಆಗಿರುವ ಅರ್ಥವನ್ನೂ ಭಾವವನ್ನೂ ಧ್ವನಿಯನ್ನೂ ಈ ಅನುವಾದದಲ್ಲಿ ಬಿಚ್ಚಲೂ ಬೆಳೆಸಲೂ ಕೆಲವು ಕಡೆ ಹೆಚ್ಚು ಸ್ವಾರಸ್ಯ ಕರವಾಗಿ ಮಾಡಲೂ ಪ್ರಯತ್ನ ಪಟ್ಟಿದೆ. ಮೂಲದಲ್ಲಿರುವ ವೀರ್ಯವನ್ನೂ ತತ್ತ್ವವನ್ನೂ (Force) ಚೇತಶ್ಶಕ್ತಿಯನ್ನೂ (Spirit) ಸಾಧ್ಯವಾದಷ್ಟು ಕಳೆ ಗುಂದಿಸದಂತೆ ನಿರೂಪಿಸಲೂ ಪ್ರಯತ್ನ ಮಾಡಿದೆ ಅಮುಖ್ಯವಾಗಿ ಕಾಣುವ ಕೆಲವು ವಿಷಯಗಳನ್ನು ಕೈಬಿಟ್ಟಿದೆ, ಸಹ. ಎಂದೆಂದಿಗೂ ಅಮರರಾಗಿ ಎಲ್ಲರ ಹೃದಯದಲ್ಲಿಯೂ ಚೈತನ್ಯ ಸ್ವರೂಪರಾಗಿರುವ ಸ್ವಾಮಿ ರಾಮತೀರ್ಥರು ಈಗಲೂ

ಇಲ್ಲಿ ಹೃದಯದಲ್ಲಿದ್ದು ಹೆಚ್ಚು ಸ್ವಾತಂತ್ರ್ಯವನ್ನು ವಹಿಸಿ ತಮ್ಮ ಕಾರ್ಯವನ್ನು ನಡೆಸಿಕೊಂಡಿದ್ದಾರೆ.

ಸ್ವಾಮಿಗಳ ಶಿಷ್ಯರಾದ ಪೂರಣಸಿಂಗರು,

"Preface to the First edition of 'In Woods of God-Realisation'

"ಪರಮಾತ್ಮಾನುಭವದ ಮಹಾರಣ್ಯಗಳಲ್ಲಿ" ಈ ಗ್ರಂಥದ ಪ್ರಥಮ ಪ್ರಕಟನೆಯ ಉಪೋದ್ಘಾತದಲ್ಲಿ ಹೇಳಿರುವದೇನೆಂದರೆ, " . . ಅವರ ಉಪನ್ಯಾಸಗಳು ಅವರಿಂದ ಪುನಃ ಪರಿಶೀಲನೆಯ ಹಾಗೂ ಪರಿಷ್ಕರಣದ ಲಾಭವನ್ನು ಪಡೆಯುವದಕ್ಕೆ ಅವಕಾಶವಾಗಲಿಲ್ಲ. ಅವರು ತೆಗೆದು ಹಾಕಬಹುದಾಗಿದ್ದ ಎಷ್ಟೋ ವಿಷಯಗಳು ಇನ್ನೂ ಅವುಗಳಲ್ಲಿ ಉಳಿದಿವೆ ; ಮತ್ತು ಅವರು ಸೇರಿಸಬಹುದಾಗಿದ್ದ ಎಷ್ಟೋ ವಿಷಯಗಳು ಅವುಗಳಲ್ಲಿ ಅಭಾವವಾಗಿವೆ. ಅವರು ಅವುಗಳನ್ನೆಲ್ಲಾ ಸಂಪೂರ್ಣವಾಗಿಯೇ ಪುನಃ ಬೇರೆ ರೂಪದಲ್ಲಿ ರಚಿಸಬೇಕೆಂದಿದ್ದರು. ತಮ್ಮ ಉಪದೇಶವನ್ನು ಕ್ರಮಬದ್ಧವಾಗಿ ಪ್ರತಿಪಾದಿಸುವದಕ್ಕಾಗಿ ತಮ್ಮ ಮನಸ್ಸಿನಲ್ಲಿದ್ದ ಇನ್ನೂ ಎಷ್ಟೋ ಹೆಚ್ಚಿನ ವಿಚಾರಗಳನ್ನೂ ಸೇರಿಸಿ, ಆ ಕೈಬರೆಹದಲ್ಲಿದ್ದ ಮುಖ್ಯ ವಿಷಯದ ಅಮೂಲ್ಯ ಭಾಗಗಳನ್ನು ವಾಸ್ತವವಾಗಿಯೂ ಹೊಸದಾಗಿಯೇ ಬರೆಯಗಿ ಬೇಕೆಂಬ ಉದ್ದೇಶವುಳ್ಳವರಾಗಿದ್ದರು.... ಆದರೆ ಮುಖ್ಯವಾಗಿ ಎರಡು ಕಾರಣಗಳಿಗಾ ಅವರ ಉದ್ದೇಶವು ಪೂರ್ಣವಾಗಲಿಲ್ಲ. ಅವರ ಮಹಾ ಸಮಾಧಿಗೆ ಎರಡು ವರ್ಷಗಳಿಗೆ ಮುಂಚೆ, ಈ ಹಿಂದೆ ಹೇಳಿರುವ ಅವರ ಕಾರ್ಯಯೋಜನೆಯ ಸಿದ್ಧತೆಗಾಗಿ ಅತ್ಯಂತ ಶ್ರದ್ಧಾದರಗಳಿಂದ ಭಾಷ್ಯಸಹಿತವಾದ ಮೂಲ ವೇದವನ್ನು ಸಂಪೂರ್ಣವಾಗಿ ಅಧ್ಯಯನ ಮಾಡುವದಕ್ಕೆ ಪ್ರಾರಂಭಿಸಿದರು. ಆದರೆ, ಅವರ ಸ್ವಂತ ಲೇಖನಗಳನ್ನೇ ಪರಿಷ್ಕರಿಸುವದಕ್ಕೂ ವ್ಯವಸ್ಥೆಗೊಳಿಸುವದಕ್ಕೂ ಅದೇ ಕಾಲವನ್ನೇ ಹೆಚ್ಚು ಲಾಭಕರವಾಗಿ ಉಪಯೋಗಿಸಬಹುದಾಗಿತ್ತು. ಆದರಿಂದ ಅವರ ಲೇಖನ-ಭಾಷಣಗಳು ಹೆಚ್ಚು ಭವ್ಯವೂ ದಿವ್ಯವೂ ಶಾಶ್ವತಸ್ಮಾರಕವೂ ಆಗಿರುತ್ತಿದ್ದವು. ಎರಡನೆಯ ಕಾರಣವೆಂದರೆ, ಅಂಥಾ ಕಾರ್ಯಸಾಧನೆಗೆ ಅವರ ಬುದ್ಧಿಯನ್ನು ಪ್ರಚೋದಿಸಬಹುದಾದ ಆಶಾ ಆಕಾಂಕ್ಷೆಗಳಿದ್ದ ಜನರ ಸಂಪರ್ಕದಿಂದ ದೂರವಾಗಿ, ಅವರಿಗೆ ಅತ್ಯಂತ ಪ್ರಿಯವಾದ ಹಿಮಾಲಯದ ಏಕಾಂತದಲ್ಲಿ ಅವರು ಹಗಲಿರುಳೂ ಧ್ಯಾನಮಗ್ನರಾಗಿದ್ದುದರಿಂದ ಅವರ ಮನಸ್ಸು ಮೇಲು ಮೇಲಿನ ಭೂಮಿಕೆಗಳಿಗೆ ಏರುತ್ತೇರುತ್ತಾ ಅನಂತದಲ್ಲಿ ಕರಗಿಹೋಗಿ ತನ್ನತನವನ್ನೇ ಕಳೆದುಕೊಂಡಿತು.

" ಈ ಲೇಖಕನು (ಪೂರಣಸಿಂಗ್) ಕೊನೆಯಸಲ ಅವರ ಜೊತೆಯಲ್ಲಿ (ಹಿಮಾಲಯದಲ್ಲಿ) ಇದ್ದಾಗ ಸ್ವಾಮಿಗಳು ಬಹಳ ಮಟ್ಟಿಗೆ ಯಾವಾಗಲೂ ಮೌನವಾಗಿಯೇ ಇರುತ್ತಿದ್ದರು. ಓದುವದರಲ್ಲಿಯೂ ಬರೆಯುವದರಲ್ಲಿಯೂ ಸಹ ಅವರಿಗೆ ಆಸಕ್ತಿಯು ಕ್ಷೀಣವಾಗಿತ್ತು. ಅವರನ್ನು ಪ್ರಶ್ನೆಮಾಡಿದಾಗ ಮಾತ್ರ ಅವರ ಪ್ರಜ್ಞಾಸ್ಥಿತಿಯ ರಹಸ್ಯವನ್ನು ವಿವರಿಸುತ್ತಿದ್ದರು.

" ಈ ಅತ್ಯಂತ ಗಾಢವಾದ ಮೌನವನ್ನು ಆಗ ಅವರು, 'Death in-life' 'ಜೀವನದಲ್ಲಿ ಸಾವು' ಎನ್ನುತ್ತಿದ್ದರು. ಬಾಳಿನಲ್ಲಿ ಒಬ್ಬನು ಹೆಚ್ಚು ಹೆಚ್ಚಾಗಿ ಸತ್ತಷ್ಟೂ ಅವನಿಂದ ಇತರರಿಗೆ ಸ್ವಾಭಾವಿಕವಾಗಿಯೂ ತಾನೇ ತಾನಾಗಿಯೂ ಹೆಚ್ಚು ಹೆಚ್ಚು ಒಳ್ಳೆಯದಾಗುತ್ತದೆ ಎಂದು ನಮಗೆ ಹೇಳುತ್ತಿದ್ದರು. 'ರಾಮನು ಕೈಗೊಂಡಿರುವ ಕಾರ್ಯವನ್ನು ಮುಗಿಸುವಂತೆ ಕಾಣಲಾರದು. ಆದರೆ, ಎಲ್ಲಾ ಯೋಚನೆಗಳನ್ನೂ ಯೋಜನೆಗಳನ್ನೂ ಇಚ್ಛೆಗಳನ್ನೂ ಧ್ಯೇಯಗಳನ್ನೂ ಮೀರಿ (ಅಂತಿಮವಾಗಿ) ಹೋದಾಗ ಆ ಕಾರ್ಯವು ಎಂದೋ ಒಂದು ಕಾಲದಲ್ಲಿ ಎಲ್ಲಕ್ಕಿಂತಲೂ ಹೆಚ್ಚು ಉತ್ತಮವಾಗಿಯೇ ನೆರವೇರುತ್ತದೆ ಎಂಬದು ರಾಮನಿಗೆ ಗೊತ್ತಿದೆ.' ಎನ್ನುತ್ತಿದ್ದರು.

" ಈ ಭಾವನೆ ಅವರಲ್ಲಿ ಎಷ್ಟು ದೃಢವಾಗಿತ್ತೆಂದರೆ, ಎಷ್ಟೆಷ್ಟು ಬಗೆಯಿಂದ ಪ್ರಾರ್ಥನೆ ಮಾಡಿದರೂ ಅವರಿಂದ ಅವರ ಆ ಕೃತಿಯನ್ನು ಬರೆಯುವದಕ್ಕೆ ಪ್ರಾರಂಭಿಸುವಂತೆ ಮಾಡುವದು ಸಹ ನಮ್ಮಿಂದ ಸಾಧ್ಯವಾಗಲಿಲ್ಲ." ಹೀಗೆ ಪೂರಣಸಿಂಗರು ಹೇಳಿದ್ದಾರೆ.

ಪರಮಪೂಜ್ಯ, ಸಚ್ಚಿದಾನಂದಸ್ವರೂಪ (ಬ್ರಹ್ಮೀಭೂತ) ಶ್ರೀ ಶ್ರೀ ನಿತ್ಯಾನಂದ ಸ್ವಾಮಿಗಳವರ (ಗಣೇಶಪುರೀ-ಮುಂಬಯಿ) ಅನುಗ್ರಹದಿಂದ ನಮ್ಮ ಹಿಂದಿನ ಗ್ರಂಥಗಳ ಪ್ರಕಟಣೆಗೆ ಸಹಾಯವಾಗಿರುವಂತೆ ಈ ಗ್ರಂಥಗಳ ಪ್ರಕಾಶಕ್ಕೂ ಪ್ರಚಾರಕ್ಕೂ ತಮ್ಮ " ಖೋಡೆ ಈಶ್ವರಸಾ ಅಂಡ್ ಸನ್ಸ್, ಛಾರಿಟಬಲ್ ಟ್ರಸ್ಟ್, ಬೆಂಗಳೂರು-೯ " ಮೂಲಕ ಸಹಾಯವಾಗಿರುವ ಗುರುಭಕ್ತರಾದ ಶ್ರೀಮಾನ್ ಖೋಡೆ ಲಕ್ಷ್ಮಣಸಾ ದಂಪತಿಗಳಿಗೂ ಅವರ ಗೋಕುಲ ಸದೃಶವಾದ ಪ್ರೇಮಮಯ ತುಂಬು ಕುಟುಂಬಕ್ಕೂ ಭಗವಂತನು ಆಯುರಾರೋಗ್ಯವನ್ನೂ ಇನ್ನೂ ಹೆಚ್ಚಿನ ಸಂಪತ್ತನ್ನೂ ಸುಖಸಮೃದ್ಧಿಯನ್ನೂ ಧರ್ಮವೃದ್ಧಿಯನ್ನೂ ತ್ಯಾಗಬುದ್ಧಿಯನ್ನೂ ಭಗವದ್‌ಭಕ್ತಿ–ಜ್ಞಾನಗಳನ್ನೂ ಮನಶ್ಶಾಂತಿಯನ್ನೂ ಕರುಣಿಸಲೆಂದು ಪ್ರಾರ್ಥನೆ.

ಚಿಚ್ಛಕ್ತಿಪ್ರಭಾವ ಮೊದಲಾದ ಹಿಂದಿನ ಗ್ರಂಥಗಳಿಗೆ ಆಶೀರ್ವಾದ ಪೂರ್ವಕ ವಾಗಿ ತಮ್ಮ ಮುನ್ನುಡಿಗಳನ್ನು ಅನುಗ್ರಹಿಸಿರುವಂತೆ ಈ ಗ್ರಂಥಗಳಿಗೂ ಮುನ್ನುಡಿಯನ್ನು ಕರುಣಿಸಿರುವ ಹೊಳೇನರಸೀಪುರದ ಪ್ರಖ್ಯಾತ ಅಧ್ಯಾತ್ಮಪ್ರಕಾಶ ಕಾರ್ಯಾಲಯದ ಪೂಜ್ಯ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳಿಗೆ ಅನಂತ ವಂದನೆಗಳು.

ಸ್ನೇಹಪೂರ್ಣ ಸಹಕಾರದಿಂದ ಈ ಗ್ರಂಥಗಳನ್ನು ಸುಂದರವಾಗಿ ಮುದ್ರಣ ಮಾಡಿಕೊಟ್ಟಿರುವ "ಮೋಹನ್ ಪ್ರೆಸ್ ಗಾಂಧಿನಗರ" ಇದರ ಮಾಲೀಕರಿಗೂ ಕೆಲಸಗಾರರಿಗೂ ಭಗವಂತನು ಕಲ್ಯಾಣವನ್ನು ಮಾಡಲೆಂದು ಹಾರೈಕೆ.

ಬೆಂಗಳೂರು
22-12-1968. ಶ್ರೀ ಮೂರ್ತಿ.

**ಈ ಲೇಖಕರ ಇತರ ಗ್ರಂಥಗಳು :—**

೧. ಶ್ರೀ ಬನವಸಿಯ ದತ್ತಾತ್ರೇಯ ಯೋಗೀಂದ್ರ—ಸದ್ಗುರು ಚರಿತಾಮೃತ (ಪದ್ಯ ಮತ್ತು ಗದ್ಯ)
೨. ದೇವರು ಯಾರು ? (ವಿಜ್ಞಾನವೂ ವೇದಾಂತವೂ) ಮಲ್ಲಾಡಿಹಳ್ಳಿ
೩. ದೈವ ಮತ್ತು ಪೌರುಷ (Fate and Free will)
೪. ಸಮಗ್ರಸಾಧನ (೨ ಭಾಗಗಳು ಅನಾಥ ಸೇವಾಶ್ರಮ, ಮಲ್ಲಾಡಿಹಳ್ಳಿ)
೫. ಚಿಚ್ಛಕ್ತಿ ಪ್ರಭಾವ (ಇದೊಂದು ಮಹಾಗ್ರಂಥ—ಸಂಯುಕ್ತ ಕರ್ನಾಟಕ)
೬. ಶ್ರೀ ಸ್ವಾಮಿ ರಾಮತೀರ್ಥರ ಜೀವನ ಚರಿತ್ರೆ
೭. ಪರಮಾತ್ಮಾನುಭವದ ಮಹಾರಣ್ಯಗಳಲ್ಲಿ (೧ನೇ ಮತ್ತು ೨ನೇ ಭಾಗಗಳು)
೮. ಯೋಗವಾಸಿಷ್ಠದ ಸಾರ ಮತ್ತು ಭಗವತೀ ಚೂಡಾಲೆಯ ಆಖ್ಯಾನ (ಕೀರ್ತನ ರೂಪ)
೯. ಹೊಸ ಮನಸ್ಸು (Fresh Mind)

# ವಿಷಯಾನುಕ್ರಮಣಿಕಾ

# ಶುದ್ಧಿಪತ್ರ

(ಇಲ್ಲಿ ತಲೆಬರಹದ ಸಾಲನ್ನು ಲೆಕ್ಕಕ್ಕೆ ತೆಗೆದುಕೊಂಡಿರುವದಿಲ್ಲ)

## ಪ್ರಸ್ತಾವನೆಯಲ್ಲಿ

| ಪುಟ | | ಸಾಲು | ಇರುವದು | ಇರಬೇಕಾದುದು |
|---|---|---|---|---|
| ೫ | ಮೇಲಿನಿಂದ | ( ) | ತಮೋವಾಹಂ | ತ್ವಮೇವಾಹಂ |
| ೨೧ | ಮೇಲಿನಿಂದ | ೧೫ | ಲೇಖನಗಳನೂ | ಲೇಖನಗಳನ್ನೂ |

## ಗ್ರಂಥದಲ್ಲಿ

| | | | | |
|---|---|---|---|---|
| 2 | ಕೆಳಗಿನಿಂದ | 3 | ವಿಶ್ವವಿದ್ಯಾನಿಲಯ | ವಿಶ್ವವಿದ್ಯಾನಿಲಯ |
| 11 | ಮೇಲಿನಿಂದ | 11 | ಸಿಷ್ಕೃಷ್ಟವಾಗಿ | ನಿಷ್ಕೃಷ್ಟವಾಗಿ |
| 12 | ಕೆಳಗಿನಿಂದ | 1 | ವೇದಾಂಶ | ವೇದಾಂತ |
| 13 | ,, | 11 | ಜ್ಞಾತೃವೇ | ಜ್ಞಾತೃವೇ ಬೇರೆ |
| 14 | ,, | 1 | ಕ್ರಿಯೆಯಾ | ಕ್ರಿಯೆಯೂ |
| 23 | ಮೇಲಿನಿಂದ | 8 | ಪಶ | ಪಶು |
| 34 | ,, | 14 | ಮಿಃಕ್ಕ | ಮಿಂಕ್ಕ |
| 37 | ,, | 5 | ಮಾಡಿದ್ದರೆ | ಮಾಡದಿದ್ದರೆ |
| 50 | ಕೆಳಗಿನಿಂದ | 7 | ಚಾಲಕವಾಗದ್ದ | ಚಾಲಕನಾಗಿದ್ದವನು |
| 52 | ,, | 9 | ಸಂಗುಣೇಶ್ವರ | ಸಗುಣೇಶ್ವರ |
| 53 | ಮೇಲಿನಿಂದ | 10 | ಅರಿತ್ತಿದ್ದೇನೆಂಬ | ಅರಿತಿದ್ದೇನೆಂಬ |
| 53 | ,, | 11 | ತಿಳಯುದವರಿಗೆ | ತಿಳಿಯುದವರಿಗೆ |
| 53 | ,, | 14 | ಗ್ರಥದ | ಗ್ರಂಥದ |
| 54 | ,, | 11 | ಆವನು | ಅವನು |
| 54 | ಕೆಳಗಿನಿಂದ | 3 | ನಾಯುಸ್ಥಾನ | ನ್ಯಾಯುಸ್ಥಾನ |
| 55 | ,, | 4 | ವಿಜಾನದ | ವಿಜ್ಞಾನದ |
| 61 | ಮೇಲಿನಿಂದ | 13 | ಅನುಭವಿಸಿದ್ದಿರಾ ? | ಅನುಭವಿಸಿದ್ದೀರಾ ? |
| 67 | ,, | 5 | ಸಾಕ್ಷಯೂ | ಸಾಕ್ಷಿಯೂ |
| 67 | ,, | 8 | ಮಳೆಯು | ಮಳೆಯು |
| 70 | ಕೆಳಗಿನಿಂದ | 1 | ಹೆಚ್ಚಂ | ಹೆಚ್ಚು |
| 72 | ಮೇಲಿನಿಂದ | 4 | ಮೂರದವರೆಗೂ | ದೂರದವರೆಗೂ |
| 75 | ಕೆಳಗಿನಿಂದ | 1 | ಸ್ವತಂತ | ಸ್ವಾತಂತ್ರ್ಯ |

| ಪುಟ | | ಸಾಲು | ಇ ು | ೇಕಾದುದು |
|---|---|---|---|---|
| 76 | ಮೇಲಿನಿಂದ | 1 | ಇಲ್ಲ | ವಿಲ್ಲ |
| 76 | ,, | 9 | ಮಗೂ | ಪಂಗೂ |
| 85 | ,, | 13 | ಎನೋ | ಏನೋ |
| 93 | ಕೆಳಗಿನಿಂದ | 2 | ಅಶೆ | ಆಶೆ |
| 104 | ,, | 1 | ಇದೊಂದು | ಇನ್ನೊಂದು |
| 105 | ಮೇಲಿನಿಂದ | 5 | ಆಕರ್ಷಣಶಕ್ತಿ | ಆಕರ್ಷಣಶಕ್ತಿಯೇ |
| 105 | ಕೆಳಗಿನಿಂದ | 7 | ಸ್ವಭಾವವನ್ನ | ಸ್ವಭಾವವನ್ನು |
| 105 | ,, | 8 | ಸ್ವಭಾವವನ್ನು | ಸ್ವಭಾವವನ್ನು |
| 109 | ,, | 3 | ಮಾಡ | ಮಾಢ |
| 111 | ಮೇಲಿನಿಂದ | 8 | ಹೋಗಂ | ಹೋಗು |
| 111 | ,, | 10 | ಇಲ್ಲಿ' | ಇಲ್ಲ, |
| 112 | ,, | 10 | ಹೇಯುವಾದದು | ಹೇಯುವಾದುದೂ |
| 112 | ಕೆಳಗಿನಿಂದ | 4 | ಬಿದಮೇಲೆ | ಬಿದ್ದಮೇಲೆ |
| 113 | ,, | 1 | ಕಣೆದುರಿಗೆ | ಕಣ್ಣೆದುರಿಗೆ |
| 120 | ಮೇಲಿನಿಂದ | 2 | ಭರ್ಮಗಳ | ಧರ್ಮಗಳ |
| 124 | ಕೆಳಗಿನಿಂದ | 8 | ಬೆುರೆ | ಬೇರೆ |
| 125 | ಮೇಲಿನಿಂದ | 12 | ಸತು | ಸತ್ತು |
| 127 | ,, | 5 | ಹೆಚ್ಚಾಗಿ | ಹೆಚ್ಚಾಗಿ |
| 128 | ಕೆಳಗಿನಿಂದ | 6 | ಉದ್ದಿಷ್ವ | ಉದ್ದಿಷ್ಟ |
| 134 | ,, | 8 | ಅಜ್ಞೆ | ಆಜ್ಞೆ |
| 136 | ಮೇಲಿನಿಂದ | 7 | ಉಪದೇಶಿಸುತ್ತವೆ | ಉಪದೇಶಿಸುತ್ತದೆ |
| 136 | ಕೆಳಗಿನಿಂದ | 2 | ಕ್ರೇಳುವ | ಕೇಳುವ |
| 136 | ,, | 1 | ಕಿಮಿಕೀಟಗಳು | ಕ್ರಿಮಿಕೀಟಗಳು |
| 137 | ,, | 13 | ದೇದಾಂತಿಗಳಾದ | ವೇದಾಂತಿಗಳಾದ |
| 138 | ಮೇಲಿನಿಂದ | 7 | ಆಧಿಕಾರವಿಲ್ಲ | ಅಧಿಕಾರವಿಲ್ಲ |
| 138 | ,, | 8 | ಪುತ್ತು | ಮತ್ತು |
| 139 | ,, | 4 | ಸಂಭೋಗಾಂಕ್ಷೆಯೂ | ಸಂಭೋಗಾಕಾಂಕ್ಷೆಯೂ |
| 140 | ,, | 4 | ಅಲ್ಲದೆ | ಇಲ್ಲದೆ |
| 140 | ,, | 6 | ಬಲ್ಲರಾದರೆ | ಬಲ್ಲಿರಾದರೆ |
| 140 | ,, | 17 | ಅಸ್ಥತೆಗಳಿಗೂ | ಅಸ್ವಸ್ಥತೆಗಳಿಗೂ |
| 143 | ಕೆಳಗಿನಿಂದ | 12 | ಯೂಕ್ಲಿಡ್‌ನ | ಯೂಕ್ಲಿಡ್‌ನ |
| 144 | ಮೇಲಿನಿಂದ | 8 | ವೈಷಮ್ಯವನು | ವೈಷಮ್ಯವನ್ನು |
| 145 | ಕೆಳಗಿನಿಂದ | 12 | ನಾನೆಪ್ಟು | ನಾನೆಷ್ಟು |
| 147 | ಮೇಲಿನಿಂದ | 12 | ದಿನಗಳ | ದಿನಗಳು |

| ಪುಟ | | ಸಾಲು | ಇರುವದು | ಇರಬೇಕಾದುದು |
|---|---|---|---|---|
| 147 | ,, | 16 | ಮಾಲೆಯಲ್ಲಿ | ಮೂಲೆಯಲ್ಲಿ |
| 148 | ಮೇಲಿನಿಂದ | 3 | ನಂಬುವುದು | ನಂಬಬಹುದು |
| 148 | ,, | 13 | ನಿಜಜವಾದ | ನಿಜವಾದ |
| 148 | ಕೆಳಗಿನಿಂದ | 3 | ದೇಹನಲ್ಲಿ | ದೇಹದಲ್ಲಿ |
| 149 | ಮೇಲಿನಿಂದ | 6 | ಪಷಪಾತವೂ | ಪಕ್ಷಪಾತವೂ |
| 151 | ಕೆಳಗಿನಿಂದ | 13 | ಮುಷ್ಯನನ್ನು | ಮನುಷ್ಯನನ್ನು |
| 152 | ,, | 11 | ರೂಢಿಯಾಗದೆ | ರೂಢಿಯಾಗಿದೆ |
| 153 | ಮೇಲಿನಿಂದ | 8 | ಹಗವಾಗಿದೆ | ಹಗ್ಗವಾಗಿದೆ |
| 154 | ,, | 2 | ತಿಳಿದಿದ್ದಿರೋ | ತಿಳಿದಿದ್ದೀರೋ |
| 154 | ಕೆಳಗಿನಿಂದ | 11 | ಆವನ | ಅವನ |
| 155 | ಮೇಲಿನಿಂದ | 6 | ಲಿವಿಲಿವಿ | ವಿಲಿವಿಲಿ |
| 155 | ,, | 12 | ಅಡಲಿಲ್ಲ | ಆಡಲಿಲ್ಲ |
| 157 | ಕೆಳಗಿನಿಂದ | 7 | ಹೇಳಲಾರೆಯಾವರೂ | ಹೇಳಲಾರೆಯಾದರೂ |
| 159 | ,, | 13 | ತಮ್ಮ್ರ , ತಮ್ಮಾ , | ತಮ್ಮಾ |
| 160 | ,, | 11 | ಮೇಲ್ಭಾಗದ | ಮೇಲ್ಭಾಗ |
| 160 | ,, | 10 | ಎಂದಂ | ಎಂದು |
| 199 | ,, | 13 | ತನ್ನ | (ಇಲ್ಲಿ ಹೆಚ್ಚಾಗಿದೆ) |
| 200 | , | 2 | ಇಡಬೇಕೆಂದ | ಇಡಬೇಕೆಂದು |
| 214 | ಕೆಳಗಿನಿಂದ | 4 | ತಮ್ಮನ್ನು | ನಮ್ಮನ್ನು |
| 231 | ಮೇಲಿನಿಂದ | 10 | ಬುದ್ಧಿಯುಂದಿರುಗಿ | ಬುದ್ಧಿಯು ಹಿಂದಿರುಗಿ |
| 265 | ,, | 1 | ಎನ್ನು ರೋ | ಎನ್ನುವಿರೋ |
| 273 | ,, | 9 | ಪರಯನಾಗಿಯೋ | ಪರೆಯನಾಗಿಯೋ |
| 273 | ಕೆಳಗಿನಿಂದ | 2 | ಕಿಯಾತ್ಮಕ | ಕ್ರಿಯಾತ್ಮಕ |
| 277 | ಮೇಲಿನಿಂದ | 10 | ಜನರು | ಜನರ |
| 301 | ,, | 2 | ಅಸ್ಪಷ್ಟೋಚರಿತ | ಅಸ್ಪಷ್ಟೋಚ್ಚರಿತ |
| 302 | ಕೆಳಗಿನಿಂದ | 2 | ಮಾಳುದಿದು | ಮಾಳ್ಪುದಿದು |
| 307 | ಮೇಲಿನಿಂದ | 8 | ಸಾಂಪ್ರದಾಯಪಿಯತೆ | ಸಂಪ್ರದಾಯಪ್ರಿಯತೆ |
| 307 | ಕೆಳಗಿನಿಂದ | 6 | ಕೂರ | ಕ್ರೂರ |
| 307 | ,, | 3 | ಯಾರ್ಕೊ | ಯಾರೋ |
| 320 | ,, | 7 | ಕುರಣವೆಂದು | ಕಾರಣವೆಂದು |
| 326 | ,, | 10 | Ignoramus | Ignorance |
| 385 | ಮೇಲಿನಿಂದ | 11 | ಹೊಟೆಯ | ಹೊಟ್ಟೆಯ |
| 386 | ,, | 5 | ಡಬ್ಬಾಳಿಕೆ | ದಬ್ಬಾಳಿಕೆ |
| 386 | ಕೆಳಗಿನಿಂದ | 3 | ಎಲ್ಹಾ | ಎಲ್ಲಾ |

| ಪುಟ | | ಸಾಲು | ಇರುವದು | ಇರಬೇಕಾದುದು |
|---|---|---|---|---|
| 389 | ಮೇಲಿನಿಂದ | 10 | ಅಮೆರಿಕಾದಲ್ಲ | ಅಮೆರಿಕಾದಲ್ಲಿ |
| 392 | ,, | 7 | ಕಾಮುನೆಯು | ಕಾಮನೆಯು |
| 395 | ,, | 2 | ತಪು | ತಪ್ಪು |
| 399 | ,, | 1 | ಹಲವರು...ವಾದಿಸುತ್ತಾರೆ | ಇದು ಒಂದೇಸಲ ಇರಬೇಕು |
| 409 | ,, | 2 | ದರ್ಗ | ವರ್ಗ |
| 409 | ಕೆಳಗಿನಿಂದ | 10 | ಧ್ವೇಷಿಸುವಂತೆಯೂ | ದ್ವೇಷಿಸುವಂತೆಯೂ |
| 437 | ,, | 6 | ಮುದ್ದಾಡುತ್ತಿವೆ | ಮುದ್ದಾಡುತ್ತಿವೆ. |
| 443 | ಮೇಲಿನಿಂದ | 4 | ವಿವೇಶ | ವಿದೇಶ |
| 450 | ,, | 14 | ಸುಮನಾಗಿದೆ | ಸಮನಾಗಿದೆ |
| 455 | ,, | 11 | ಯುಮ | ಯಾವ |
| 458 | ಕೆಳಗಿನಿಂದ | 2 | ಸುವೇರು | ಸುಮೇರು |
| 462 | ,, | 9 | ಸೋತ್ರಗಳನ್ನು | ಸ್ತೋತ್ರಗಳನ್ನು |
| 462 | ,, | 7 | ಆವನಲ್ಲಿಗೆ | ಅವನಲ್ಲಿಗೆ |
| 464 | ಮೇಲಿನಿಂದ | 3 | ಮುಖ್ಯೈಮಂಯುಖ್ಯೈಃ ॥ | ಮುಖ್ಯೈರ್ಮಮುಖ್ಯೈಃ ॥ |
| 473 | ,, | 10 | ಸಾಧಾರಣವಾಗಿ | ಸಾಧಾರವಾಗಿ |
| 476 | ಕೆಳಗಿನಿಂದ | 8 | ಮೂರುತಗಳಂತೆ | ಮಾರುತಗಳಂತೆ |
| 477 | ಮೇಲಿನಿಂದ | 4 | ದೈತ್ಯರುಗಳ | ಪಕ್ಷದೈತ್ಯರುಗಳ ದಂಡು |
| 498 | ,, | 12 | ಸರ್ವತಾ | ಸರ್ವಥಾ |
| 513 | ಕೆಳಗಿನಿಂದ | 12 | ನಿಮ್ಮನ್ನು | ನಿಮ್ಮಲ್ಲಿ |
| 516 | ,, | 6 | ಅಷ್ಟಾವಕ್ರ | ಅಷ್ಟಾವಕ್ರ |
| 518 | ಮೇಲಿನಿಂದ | 3 | ವತೆ | ವತ್ಸೆ |
| 519 | ಕೆಳಗಿನಿಂದ | 9 | ನಿವ್ಯ | ದಿವ್ಯ |
| 531 | ,, | 7 | ನಿವೈರವೂ | ನಿರ್ವೈರವೂ |



ಸ್ವಾಮಿ ರಾಮತೀರ್ಥರು, ೧೯೦೫ ಲಕ್ನೋ

# Rama's Mission

## ರಾಮನು ಪ್ರಸಾರಮಾಡುವ ಉಜ್ಜ್ವಲ ಧರ್ಮತತ್ತ್ವ ಘೋಷಣ

ನಿಮ್ಮ ಎದೆಯಲ್ಲಿ ಮಿಡಿಯುತ್ತಿರುವವನು ರಾಮ ; ನಿಮ್ಮ ಕಣ್ಣುಗಳಿಂದ ನೋಡುತ್ತಿರುವವನು ರಾಮ ; ನಿಮ್ಮ ನಾಡಿಯಲ್ಲಿ ತುಡಿ ತುಡಿದು ಮಿಡಿಯುತ್ತಿರುವವನು ರಾಮ ; ಹೂವುಗಳಲಿ ನಸುನಕ್ಕು ನಲಿಯುವವನು ರಾಮ , ಪಳ್ಳನೆ ಹೊಳೆದೆಳೆವ ಮಿಂಚಿನಲಿ ಗೊಳ್ಳನೆ ನಗು ಬೀರುವವನು ರಾಮ , ಜೀವನದೀನದಗಳಲಿ ಮೊರೆ ಮೊರೆದು ಮೊಳಗುತಿರುವವನು ರಾಮ , ಕಡಲ ಕಲ್ಲೋಲದಲಿ ಭೋರ್ಗರೆಯುತಿರುವವನು ರಾಮ ; ಪರ್ವತಾರಣ್ಯಗುಹೆಗಳಲಿ ನಿಶ್ಶಬ್ದ ಮೌನಿಯಾಗಿರುವವನು ರಾಮ. ನಾವು ಬ್ರಾಹ್ಮಣರೆಂಬ ಅಭಿಮಾನವನ್ನು ಬೀಸಿ ಎಸೆಯಿರಿ : ನಾನು ಸ್ವಾಮಿ ಎಂಬ ದುರಭಿಮಾನವನ್ನು ಸುಡಿರಿ, ಜನರಿಂದ ಬೇರೆ ಓರಿದಾಗಿ ತೋರಿಸುವ ಬಿರುದುಗಳನ್ನೂ ಗೌರವದ ಪದವಿಗಳನ್ನೂ ಸಮುದ್ರದಲ್ಲಿ ಎತ್ತಿ ಎಸೆಯಿರಿ. ಪ್ರಿಯತಮ (-ತಮೆ) ! ನೀನೇ ರಾಮ ! ನೀವು ಯಾರೇ ಆದರೂ ರಾಮನು ನಿಮ್ಮ ನಿಜವಾದ ಆತ್ಮ ನೀವು ಪಂಡಿತರಾದರೂ ಪಾಮರರಾದರೂ ರಾಮನು ನಿಮ್ಮ ಆತ್ಮ. ನೀವು ಧನಿಕರಾಗಿರಬಹುದು, ಅಥವಾ ದರಿದ್ರರಾಗಿರಬಹುದು, ಹೆಣ್ಣಾಗಿರಬಹುದು, ಅಥವಾ ಗಂಡಾಗಿರಬಹುದು, ಸಾಧುವಾಗಿರಬಹುದು, ಪಾಪಿಯಾಗಿರಬಹುದು, ನೀವು ಕ್ರಿಸ್ತನಾಗಿರಬಹುದು ಅಥವಾ ಕ್ರಿಸ್ತನನ್ನು ಮೋಸದಿಂದ ಶತ್ರು ವಶಮಾಡಿದ ಪರಮ ದ್ರೋಹಿಯಾದ ಜೂಡಾಸ್‌ನೇ ಇರಬಹುದು, ನೀವು ಕೃಷ್ಣನಾದರೂ ಇರಬಹುದು ಅಥವಾ ಗೋಪಿಯಾದರೂ ಆಗಿರಬಹುದು. ರಾಮನಂತೂ ನಿಮ್ಮ ಆತ್ಮನೇ ಸರಿ. ತಾನು ದೇವರೆಂದೂ ನೀವೂ ದೇವರೆಂದೂ ರಾಮನು ಗರ್ಜಿಸಿ ಗರ್ಜಿಸಿ ನಿಮ್ಮ ಹೃದಯದಲ್ಲಿ ತುಂಬಿ ಒಂದೊಂದು ನಿಮಿಷದಲ್ಲಿಯೂ ಒಂದೊಂದು ನಡೆಯಿಂದಲೂ ಅದನ್ನು ಸಾರುತ್ತಾನೆ

ಜರ್ಮನಿ, ಇಂಗ್ಲೆಂಡ್, ಅಮೆರಿಕಾ, ಇಂಡಿಯಾ ಮೊದಲಾದ ಎಲ್ಲವನ್ನೂ ರಾಮನು ಅಲ್ಲಾಡಿಸಿ ಕೊಡವಿ ಕೊಡವಿ ಸ್ವತಂತ್ರವಾಗುವಂತೆ ಮಾಡಬೇಕು. ರಾಮನು ಹಳೆಯ ಆಟದಿಂದ ದಣಿದು ಸೋತಿದ್ದಾನೆ. ಓ ಸ್ವಪ್ನಸಂಚಾರಿಯೆ !

# Lessons from Rama's Message

## ರಾಮನ ಸಂದೇಶದ ಪಾಠಗಳು

“In woods of God Realization” “ಪರಮಾತ್ಮಾನುಭವದ ಮಹಾರಣ್ಯಗಳಲ್ಲಿ” ಎಂಬ ಗ್ರಂಥದ ಈ ಮೂರನೆಯ ಭಾಗದಿಂದ ಸ್ವಾಮಿ ರಾಮ ತೀರ್ಥರು ಮುಖ್ಯವಾಗಿ ಅಮೆರಿಕಾದಲ್ಲಿ ಮಾಡಿದ ಉಪನ್ಯಾಸಗಳ ಸಂಗ್ರಹವು ಮುಗಿಯುತ್ತದೆ. ಈ ಉಪನ್ಯಾಸಗಳಲ್ಲದೆ, ಉರ್ದು ಮತ್ತು ಹಿಂದಿ ಭಾಷೆಗಳಲ್ಲಿ, ಎಲ್ಲಾ ಆತ್ಮೋನ್ನತಿಕರವಾದಂಥ ಅವರ ಅನೇಕ ಮೂಲ ಲೇಖನಗಳೂ ಇವೆ; ಮತ್ತು ಅವರು ಪೂರ್ವ-ಪಶ್ಚಿಮ ದೇಶಗಳ ತತ್ತ್ವಶಾಸ್ತ್ರಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನಮಾಡುವಾಗ ಅವರಿಗೆ ಲಭಿಸಿದ ಮನನೀಯವಾದ ಮಹದ್ವಾಕ್ಯಗಳನ್ನು ಎತ್ತಿ ಬರೆದಿಟ್ಟಿರುವ ಅತಿಶಯ ಸುಂದರ-ಸ್ವಾರಸ್ಯವಾದ ಸಾಹಿತ್ಯ ಸಂಗ್ರಹವೂ ಇದೆ. ಅವಕಾಶವಾದಾಗ ಇದನ್ನೂ “In words of God Realization” ಗ್ರಂಥದ ನಾಲ್ಕನೇ ಐದನೇ ಭಾಗಗಳಾಗಿ ಆಂಗ್ಲಭಾಷೆಯಲ್ಲಿ (ಕನ್ನಡ ಅನುವಾದದಲ್ಲಿ) ಪ್ರಕಟಿಸುವ ಅಭಿಲಾಷೆಯಿದೆ.

ಅವರು ತಮ್ಮ ಉಪನ್ಯಾಸಗಳಲ್ಲಿ ಅಷ್ಟು ಉತ್ಸಾಹದಿಂದ ಅವಿರತವಾಗಿ ಪ್ರತಿಪಾದಿಸಿದ ಸಂದೇಶದ ಮುಖ್ಯವಿಷಯವೇನು ?- ಎಂಬ ವಿಚಾರದಲ್ಲಿ ಈಗ ಒಂದು ಮಾತನ್ನು ಹೇಳಬಹುದಾಗಿದೆ. ಈ ಗ್ರಂಥಭಾಗಗಳನ್ನು ಆಕಸ್ಮಿಕವಾಗಿ ಮೊದಲಸಲ ಓದುವ ವಾಚಕರೂ ಸಹ ಇದನ್ನು ಗಮನಿಸದಿರಲಾರರು. ಅವರು, ದೇಶ-ಕಾಲ-ನಿಮಿತ್ತಗಳಿಗೆ ಹೊರಚ್ಚಾಗಿಯೂ ಸ್ವಯಂಪ್ರಕಾಶವಾಗಿಯೂ ಇರುವ ಒಂದೇ ಒಂದು ಸದ್ವಸ್ತುವಿದೆಯೆಂದು ಹೇಳುತ್ತಾರೆ. ಅದನ್ನು ವಿವರಿಸುವದು ತೀರಾ ಅಸಾಧ್ಯ; ಮತ್ತು ಅದೇ ನೀನಾಗಿದ್ದಿ. ಅದನ್ನು ತಿಳಿ, ಅದನ್ನು ಅನುಭವದಲ್ಲಿ ತಂದುಕೊ. ಈ ಪ್ರಪಂಚದಲ್ಲಿ ನಿಮಗೆ ತೋರುವ ಬಗೆಬಗೆಯ ತೋರಿಕೆಗಳೆಲ್ಲಾ ಬರಿ ತೋರಿಹಾರುವ ಪ್ರಕೃತಿವಿಲಾಸ, ಅದಕ್ಕೆ ಸ್ವತಂತ್ರವೂ ಸ್ಥಿರವೂ ಆದ ಆಧಾರವಿಲ್ಲ. ಹಿಂದೂ ಇಂದೂ ಮುಂದೂ ಎಂದೆಂದೂ ಒಂದೇ ಬಗೆಯಾಗಿರುವ ಸರ್ವಜ್ಞವೂ ಸರ್ವಶಕ್ತವೂ ಪೂರ್ಣಾನಂದವೂ ಆಗಿರುವ ನಿಮ್ಮ ಆತ್ಮಸ್ವರೂಪದ ಅರಿವಿಲ್ಲದಿರುವದೇ ಎಲ್ಲಾ ಅನರ್ಥಕ್ಕೂ

ಕಾರಣವಾಗಿದೆ ;–ಎಂದು ಅವರು ಹೇಳುತ್ತಾರೆ ಈ ಪ್ರಪಂಚದಲ್ಲಿ ಒಂದೇ ರೋಗವಿದೆ, ಮತ್ತು ಅದಕ್ಕೆ ಒಂದೇ ಚಿಕಿತ್ಸೆಯಿದೆ. ನಮ್ಮ ನಿಜವಾದ ಆತ್ಮನ ಅರಿವಿಲ್ಲದಿರುವದೇ-ಅಜ್ಞಾನವೇ-ಮುಖ್ಯವಾದ ವ್ಯಾಧಿಯಾಗಿದೆ; ಅದೇ ದೈಹಿಕ, ಮಾನಸಿಕ, ಆಧ್ಯಾತ್ಮಿಕವಾಗಿ ಅನೇಕ ವಿಧವಾದ ನೋವುಗಳಾಗಿ ತೋರಿಕೊಳ್ಳುತ್ತಿದೆ. ಚಿಕ್ಕದಾಗಿ ಹೇಳಬಹುದಾದರೆ, ಇದೇ ಅವರ ವೇದಾಂತ ತತ್ತ್ವ, ಆದರ್ಶಭಾವ, ಧ್ಯೇಯ. ಅವರು ಸಾರಭೂತವಾದ ಆತ್ಮೈಕ್ಯ ಭಾವವನ್ನು ಹೀರಿಕೊಂಡಿದ್ದಾರೆ "ಸಚ್ಚಿದಾನಂದ ಸ್ವರೂಪ ಆತ್ಮನೇ ನಾನು" ಎಂಬ ಸರ್ವೋತ್ಕೃಷ್ಟವಾದ ಅರಿವಿನ ಅತ್ಯುನ್ನತ ಸ್ಥಿತಿಯಿಂದ ಅವರು ನಿಮಿಷಮಾತ್ರವೂ ಚಲಿಸುತ್ತಿರಲಿಲ್ಲ. ಅಷ್ಟು ದೃಢವಾಗಿ ಅವರು ಆ ಅನುಭವದಲ್ಲಿ ನೆಲೆಗೊಂಡಿದ್ದರು. ಅವರು ಪರಮಾತ್ಮಾನುಭವದಲ್ಲಿ ಯಾವಾಗಲೂ ಅಷ್ಟು ಮುಳುಗಿರುತ್ತಿದ್ದುದರಿಂದ, ಅವರ ಕೊನೆಯ ದಿನಗಳಲ್ಲಿ ಅವರು ವಾಸ್ತವವಾಗಿಯೂ ದೇಹಭಾವನೆಯಿಲ್ಲದೆ ಇರುತ್ತಿದ್ದರು. ಗುರುವಾಗಿ ಉಪದೇಶಮಾಡಬೇಕೆಂದು ಅವರೊಳಗೆ ಅತ್ಯಂತ ಪ್ರಬಲ ಪ್ರೇರಣೆಯಾದಾಗ ಮಾತ್ರ, ಜನರ ಅಪರೂಪವಾಗಿ ಅವರು ತಮ್ಮ ಸಹಜ ಸಮಾಧಿಯಿಂದ ಹೊರ ಬರುತ್ತಿದ್ದರು. ಆಗ ಅವರು ಪ್ರಾಪಂಚಿಕವಾದ ಪ್ರತಿಯೊಂದು ಸಮಸ್ಯೆಯನ್ನೂ-ಅದು ದೊಡ್ಡದಾಗಲಿ, ಚಿಕ್ಕದಾಗಲಿ, ರಾಜಕೀಯವಾಗಲಿ, ಸಾಮಾಜಿಕವಾಗಲಿ, ಧಾರ್ಮಿಕವಾಗಲಿ, ಸಾಂಸ್ಕೃತಿಕವಾಗಲಿ, ರಾಷ್ಟ್ರೀಯವಾಗಲಿ, ಅಂತರರಾಷ್ಟ್ರೀಯವಾಗಲಿ-ವೇದಾಂತದ ಅತ್ಯಂತ ಉನ್ನತವಾದ ಸ್ಥಾನದಿಂದ ನೋಡುತ್ತಿದ್ದರು. ಅವರ ಸ್ಥಾನದ ಆ ಉನ್ನತಿಯ ಎತ್ತರದಿಂದಾಗಿ ಅವರ ತೀರ್ಮಾನಗಳೂ ಸಿದ್ಧಾಂತಗಳೂ ಸಾಮಾನ್ಯವಾಗಿ ಅಷ್ಟು ಪ್ರಿಯಕರವೆನಿಸುವದಿಲ್ಲ, ಮತ್ತು ಸಾಮಾನ್ಯ ಲೌಕಿಕರಿಗೆ ಸುಲಭ ಸಾಧ್ಯವಾಗುವದಿಲ್ಲ.

ಅವರು ಅಮೆರಿಕೆಯಲ್ಲಿ ಇದ್ದಷ್ಟುಕಾಲ, ವೇದಾಂತ ತತ್ತ್ವವನ್ನು ಪ್ರಸಾರ ಮಾಡುವದರ ಜೊತೆಗೆ, ಭಾರತೀಯರ ಸಹಾಯಾರ್ಥವಾಗಿ, ತಮ್ಮ ಸ್ವಂತಬಲದಿಂದಲೇ ಬಹಳ ಪ್ರಯತ್ನವನ್ನು ಮಾಡಿದರು ಯಾವ ಬಗೆಯ ವ್ಯಕ್ತಿಪರವಾದ ಪ್ರಚಾರ ಕಾರ್ಯಕ್ಕೂ ಅವರು ಸಂಪೂರ್ಣ ವಿರೋಧವಾಗಿದ್ದುದರಿಂದ, ಅವರ ಸೇವಾ ಸಾಹಸಗಳ ದಾಖಲೆಯನ್ನು ಇಡುವದಕ್ಕೆ ಅವರು ಅವಕಾಶಕೊಡದುದ್ದರಿಂದ ನಮ್ಮ ದುರ್ದೈವವೇ ಸರಿ ಆದರೆ ಅವರ ಅಮೆರಿಕೆಯ ಕೆಲವು ಉಪನ್ಯಾಸಗಳಿಂದ, ಭಾರತಮಾತೆಯ ಹಿಂದುಳಿದ ಸ್ಥಿತಿಗಾಗಿ ಅವರ ವ್ಯಥೆಯು ಎಷ್ಟು ತೀವ್ರವಾಗಿತ್ತೆಂಬುದು ವ್ಯಕ್ತವಾಗುತ್ತದೆ. ಅಮೆರಿಕಾ ಮತ್ತು ಯುರೋಪ್ ಜನಾಂಗಗಳು, ಅಲ್ಲಿನ

ಮಹತ್ತರವಾಗಿ ಆಚರಣೆಯಲ್ಲಿ ತಂದಿರುವ ವೇದಾಂತವನ್ನು ವ್ಯವಹಾರದಲ್ಲಿ ರೂಢಿಸದಿರುವದೊಂದೇ ಭಾರತದೇಶದ ಭೌತಿಕ ಹೀನಸ್ಥಿತಿಗೆ ಕಾರಣವೆಂದು, ಅವರು ತಮ್ಮದೇ ಆದ ವಿಶಿಷ್ಟರೀತಿಯಲ್ಲಿ ಮತ್ತೆ ಮತ್ತೆ ಸಾರಿ ಸಾರಿ ಹೇಳುತ್ತಿದ್ದರು.

ಭಾರತ ಸಮಾಜದ ಉದ್ಧಾರಕ್ಕೆ ಅವರು ಸೂಚಿಸಿರುವ ಚಿಕಿತ್ಸೆಗಳಲ್ಲಿ ಕೆಲವು ವಿಧಾನಗಳನ್ನು ಪರೀಕ್ಷಿಸುವದು ಇಲ್ಲಿ ಅಪ್ರಾಸಂಗಿಕವಾಗಲಾರದು ಉದಾಹರಣೆಗೆ, ಹಿಂದೂಗಳ ಅಭ್ಯಾಸದಲ್ಲಿರುವ ಮೂರ್ತಿಪೂಜೆಯು ಅವರಿಗೆ ಬಹಳ ಮಟ್ಟಿಗೆ ಒಪ್ಪಿಗೆಯಾಗಿರಲಿಲ್ಲ. ಪ್ರಪಂಚದ ಎಲ್ಲಾಮತಧರ್ಮಗಳನ್ನೂ ಅವರು, "ತಸ್ಯೈವಾಹಂ—ಅವನವನು ನಾನು", "ತವೈವಾಹಂ—ನಿನ್ನವನು ನಾನು", "ತ್ವಮೇವಾಹಂ—ನೀನೇ ನಾನು, ಅಥವಾ ತದೇವಾಹಂ—ಅವನೇ ನಾನು" ಎಂಬ ಭಾವ–ಜ್ಞಾನ ವಿಕಾಸದ ಮೂರು ವರ್ಗಗಳಲ್ಲಿ ವಿಂಗಡಿಸಿ, ಈ ಎಲ್ಲವನ್ನೂ ಒಪ್ಪಿ ಅನುಗ್ರಹಿಸಿದರೂ ಭಾರತೀಯರ ಪ್ರತಿಭೆಗೆ 'ತ್ವಮೇವಾಹಂ-ನೀನೇ ನಾನು, ಅಥವಾ ತದೇವಾಹಂ–ಅವನೇ ನಾನು" ಎಂಬ ಕೊನೆಯ ಅನುಭಾವದ ಶುದ್ಧವೂ ಸರಳ ಸುಂದರವೂ ಸತ್ಯವೂ ಆದ ವೇದಾಂತವೇ ಸರ್ವೋತ್ತಮವಾಗಿ ಹೊಂದಿಕೆಯಾದುದೆಂದು ಅವರ ನಿಶ್ಚಿತಾಭಿಪ್ರಾಯವಾಗಿದ್ದಿತು ಇಷ್ಟೇಅಲ್ಲ; ಅವರ ಅಭಿಪ್ರಾಯದಲ್ಲಿ, ಈ ಕೇಂದ್ರ ವೇದಾಂತ ಚಿಂತನೆಯು ಜನಸಾಮಾನ್ಯರಲ್ಲಿ ಅಭಾವವಾದುದೇ ಭಾರತೀಯರು ಒಟ್ಟಿಗೆ ಅನೇಕ ಶತಮಾನಗಳು ದಾಸ್ಯದಲ್ಲಿ ಬಿದ್ದಿರುವದಕ್ಕೆ ಕಾರಣವಾಯಿತು. ತಿಳಿದೋ ಕೊನೆಗೆ ತಿಳಿಯದೆಯೋ ವೇದಾಂತದ ಆದರ್ಶ ತತ್ತ್ವಗಳನ್ನು ನಮ್ಮ ನಿತ್ಯಜೀವನದಲ್ಲಿ ಅಳವಡಿಸಿಕೊಂಡ ಹೊರತು ನಮ್ಮ ನಿಜವಾದ ಪ್ರಗತಿಗೆ ವಾಸ್ತವವಾಗಿಯೂ ಹೆಚ್ಚು ಅವಕಾಶವಿಲ್ಲ. "ಓ ದೇವರೆ! ನಾವು ನಿನ್ನ ದಾಸರು, ಗುಲಾಮರು, ನಮ್ಮನ್ನು ದುಃಖ–ದುರವಸ್ಥೆಗಳಿಂದ ಪಾರುಮಾಡು" ಎಂದು ನಾವು ಬೇಡಲು 'ಆರಂಭಿಸಿದ್ದರಿಂದ, 'ಭಾವಿಸಿದಂತೆ ಆಗುವೆವೆಂಬ' ಭಾವನೆಯ ಆಧ್ಯಾತ್ಮಿಕ ನಿಯಮದ ಪ್ರಕಾರ, ಒಟ್ಟಿಗೆ ಅನೇಕ ವರ್ಷಗಳು, ನಮ್ಮ ಇಷ್ಟದೇವರ ದಾಸರಾಗಿ ಅಲ್ಲವಾದರೂ ಪರಕೀಯರ ಗುಲಾಮರಾಗಿ ಮಾಡಲ್ಪಟ್ಟೆವು "ಯೂರೋಪ್–ಅಮೆರಿಕಾ ಜನರೂ ಸಹ ಈ ರೀತಿಯಲ್ಲಿಯೇ ಬೇಡುತ್ತಾರೆ; ಆದರೂ ಅವರೇಕೆ ನಮ್ಮಂತೆ ಬೇರೆಯವರ ಗುಲಾಮರಾಗಲಿಲ್ಲ?" ಎಂದರೆ, ಧರ್ಮವು ಹಿಂದೂಗಳಿಗೆ ಹೃದಯಕ್ಕೆ ಸಂಬಂಧಪಟ್ಟು ಅನುಭವವಾಗಿರುವಂತೆ ಅವರಲ್ಲಿ ಬಹುಜನರಿಗೆ ಆಗಿಲ್ಲವೆಂದು ರಾಮತೀರ್ಥರು ಹೇಳುತ್ತಾರೆ. ಪಾಶ್ಚಾತ್ಯರು ತಮ್ಮ ಹೃದಯಾಂತರಾಳದಲ್ಲಿ ಭೌತಿಕ ಸಂಪದಭಿವೃದ್ಧಿಯನ್ನೂ ಸಮೃದ್ಧಿಯನ್ನೂ ಬಯಸುತ್ತಾರೆ, ಹಂಬಲಿಸುತ್ತಾರೆ; ಅವರಿಗೆ ಧರ್ಮವು ಸಾಮಾನ್ಯವಾಗಿ ಹೊರಗಿನ ಒಂದು ಮೋಜು, ಮರ್ಯಾದೆ,

ಬಾಹ್ಯೋಪಚಾರ, ಬಾಹ್ಯಾಡಂಬರ, ಕೇವಲ ಸಂಪ್ರದಾಯ. ಆದರೆ, ಹಿಂದೂಗಳಿಗಾದರೋ ಧರ್ಮವು ಅವರ ಕೇವಲ ಜೀವದ ಉಸಿರು. ಸ್ವಾಮಿ ದಯಾನಂದ ಸರಸ್ವತಿಗಳಂತೆ ಅವರೂ ಪ್ರಾಚೀನ ವೇದಸಾಹಿತ್ಯದಲ್ಲಿ ವಿಗ್ರಹಾರಾಧನೆಯ [illegible], ಸೆಲೆಯೋ ಇಲ್ಲವೆಂದು ಹೇಳುತ್ತಿದ್ದರು. ಹಾಗಾದರೆ ಇಂಡಿಯಾದೇಶದಲ್ಲಿ ವಿಗ್ರಹಾರಾಧನೆಯನ್ನು ಮೊದಲು ಯಾರು ತಂದರು?—ಎಂದು ಅವರ [illegible]ತ್ತಾರೆ. ಅದಕ್ಕೆ ಅವರೇ ತೀರ ಗಂಭೀರವಾಗಿ, ಆದರೆ ಜನಗಳಿಗೆ ನಗು ಉಕ್ಕಿ ಬೀಳಿಸುವಂತೆಯೂ ಇರುವ ಖಂಡಿತ ಮಾತನ್ನು ಹೇಳುತ್ತಾರೆ: ಸುಮಾರು 2000 ವರ್ಷಗಳ ಹಿಂದೆ, ಹಿಂದೂಗಳ ಮತಧರ್ಮದಲ್ಲಿ ಕ್ರೈಸ್ತ[illegible] ಪ್ರತಿಮಾಪೂಜೆಯ ಪದ್ಧತಿಯನ್ನು ಪ್ರವೇಶಮಾಡಿದರೆಂದು ಅವರು ಹೇಳುತ್ತಾರೆ. ಅದು ಏನಾದರೂ ಇರಲಿ; ಧರ್ಮಗಳ ಇತಿಹಾಸ[illegible] ಬೇಕಾದರೆ, ಆ ದಿಕ್ಕಿನಲ್ಲಿ ಸಂಶೋಧನೆಗಳನ್ನು ನಡೆಸಲಿ. ಅವರ ಪ್ರಕಾರ, ಈಗ ಅತ್ಯವಶ್ಯವಾದ ಸಾಧನೆಯೆಂದರೆ, ನಾವು ಪರಮಾತ್ಮಾನುಭವದ ಅತ್ಯಂತ ಉನ್ನತ ಶಿಖರಕ್ಕೆ ಏರಬೇಕಾದುದೇ ಆಗಿದೆ. ನಾನು ದೇಹವಲ್ಲ, ನಾನು ಮನಸ್ಸಲ್ಲ, ನಾನು ಬುದ್ಧಿಯಲ್ಲ, ಅಹಂಕಾರವೂ ಅಲ್ಲ; ನಾನು "ಸಚ್ಚಿದಾನಂದ ಬ್ರಹ್ಮವೇ ಆಗಿದ್ದೇನೆ" ಎಂಬೀ ಪ್ರಧಾನತತ್ತ್ವದಲ್ಲಿ-ಕೇಂದ್ರೀಕೃತವಾದಲ್ಲಿ-ಇರುವ ಅಚಲವಾದ ವಿಶ್ವಾಸವೇ ಪ್ರಾಪಂಚಿಕವಾದ ಎಲ್ಲಾ ಕ್ಷೇತ್ರಗಳಲ್ಲಿಯೂ ಮತ್ತು ಆಧ್ಯಾತ್ಮಿಕ ಜೀವನದಲ್ಲಿಯೂ ಕ್ರಮ ಕ್ರಮವಾಗಿ ಯಶಸ್ಸಿಗೆ ಒಯ್ಯುತ್ತದೆ; ಎಂದು ರಾಮತೀರ್ಥರು ಹೇಳುತ್ತಾರೆ.

ಹಿಂದೂಗಳ ಸಾಮಾಜಿಕ ಜೀವನ ವಿಷಯದಲ್ಲಿ ಅವರು ಜಾತಿಪದ್ಧತಿಗೆ ಸಂಪೂರ್ಣವಾಗಿ ವಿರೋಧಿಗಳಾಗಿದ್ದರು. ಹಿಂದೂಗಳ ಜಾತಿವ್ಯವಸ್ಥೆಗೆ [illegible]ವೃತ್ತಿ ವಿಭಾಗದ ಸರಳ ನಿಯಮವೇ ಆಧಾರವಾಗಿದ್ದಿತು. ಅಷ್ಟರಿಂದ, ಅದು ಉಪಯುಕ್ತವಾದುದರಿಂದ ಪ್ರಪಂಚದ ಎಲ್ಲಾ ದೇಶಗಳಲ್ಲಿಯೂ [illegible] ಈಗಲೂ ಇದೆ. ಆದರೆ ಸಾವಿರಾರು ವರ್ಷಗಳಿಂದ ಅದರ [illegible] ಬೆಳೆದಿರುವ ಕಾಠಿಣ್ಯವು ಮಹಾ ವಿಪತ್ತಾಗಿಯೂ ವಿನಾಶಕರವಾಗಿಯೂ ಪರಿಣಮಿಸಿದೆ. ಕಸುಬುಗಳ ಶ್ರಮವಿಭಾಗದಲ್ಲಿ ಮಾತ್ರ ಉಪಯೋಗವಾಗಬೇಕಾದ ವ್ಯವಸ್ಥೆಯು ಮನುಷ್ಯ ಸಾಮಾನ್ಯರನ್ನು ವಿಭಾಗಿಸಿ ಪ್ರತ್ಯೇಕಿಸುವ ದುರ್ವ್ಯವಸ್ಥೆಯಾಗಿದೆ. ಆದರೂ ಈ ಸಂಸ್ಥೆಯ ನಿಯಮ-ನಿಬಂಧನೆಗಳನ್ನು ಹೊಟ್ಟೆಗೆ [illegible]. [illegible] ಬೆಳವಣಿಗೆಗೆ ಹೊಟ್ಟು ಕೆಲವು ಕಾಲದ ಮಿತಿಯವರೆಗೆ ಅವಶ್ಯ[illegible], [illegible] ಕಬ್ಬಿಣದಂತೆ ಗಡುಸಾಗಿ ಎಂದೂ ಬದಲಾಯಿಸದಂತಾದರೆ, [illegible] ಬೆಳವಣಿಗೆಗೆ ಅದು ಖಂಡಿತವಾಗಿಯೂ ಮಾರಕವೇ ಆಗುತ್ತದೆ. ಶ್ರುತಿ[illegible]

ಸರ್ವಕಾಲದಲ್ಲಿಯೂ ಸತ್ಯವಾದುದೆಂದೂ ಅವರೆ, ವರ್ಣ ವ್ಯವಸ್ಥೆಯ ನಿಯಮ-ನಿಬಂಧನೆಗಳನ್ನು ಶಾಸನಮಾಡುವ ಸ್ಮೃತಿಯು ಮಾತ್ರ ಆಯಾ ಕಾಲಗಳ ಜರೂರಾದ ಆವಶ್ಯಕತೆಗಳಿಗೆ ಅನುಸಾರವಾಗಿ ಬದಲಾಯಿಸುತ್ತಿರಬೇಕೆಂದೂ ಅವರು ಸಾಧ್ಯವಾದಷ್ಟೆಲ್ಲಾ ಒತ್ತಿ ಒತ್ತಿ ಸಾರುತ್ತಾರೆ. "ಜಡವಾದ ನಿಯಮಗಳನ್ನು ದೇವರೆಂಬಂತೆ ಏಕೆ ಆರಾಧಿಸುತ್ತೀರಿ? ನಿಮಗಾಗಿ ಅವು ಇವೆಯೋ ಹೊರತು, ಅವುಗಳಿಗಾಗಿ ನೀವಿಲ್ಲ ಅವುಗಳನ್ನು ಕಲ್ಪಿಸಿದವರು ನೀವೇ ಅಲ್ಲವೆ? ಹೀಗಿರುವಾಗ ಅವುಗಳೇಕೆ ನಿಮ್ಮ ಮೇಲೆ ಪ್ರಭುತ್ವವನ್ನು ನಡೆಸಬೇಕು? ಮುಂದುವರಿಯಬೇಕೆಂಬ ಮನಸ್ಸಿದ್ದರೆ ಹಿಂದೂಗಳು ಈ ಓಬೀರಾಯನ ಕಾಲದ ಜಾತಿಪದ್ಧತಿಯನ್ನು ಒಮ್ಮೆಗೇ ನಿರ್ಮೂಲಮಾಡಿ ಒಂದು ರಾಷ್ಟ್ರದ ಒಂದೇ ಜನಾಂಗವಾಗಿ ಒಟ್ಟುಗೂಡಬೇಕು." ಎಂದು ಅವರು ಹೇಳುತ್ತಾರೆ.

ಅವರ ಕಾಲದ ನಿತ್ಯಜೀವನದಲ್ಲಿ ಸ್ತ್ರೀ-ಶೂದ್ರರು ಪಡೆದಿದ್ದ ಶೋಚನೀಯ ಸ್ಥಿತಿಯು ಕಡೆಗೆ ಅವರ ಪೂರ್ಣ ಹೃದಯವು ನೊಂದು ಹೋಗುತ್ತಿತ್ತು. ಅವರು ಮರದ ಬೇರುಗಳಿಗೆ ಅವರನ್ನು ಹೋಲಿಸುತ್ತಾರೆ. ಬೇರುಗಳು ಕ್ಷೀಣಿಸಿ ಹಾಳಾಗುತ್ತಿದ್ದರೆ, ಮರವು ಎಂದೂ ಚಿಗುರಿ ಬೆಳೆಯುವುದಿಲ್ಲ. ಅವರನ್ನು ನಾವು ಅಜ್ಞಾನದ ಕತ್ತಲೆಯಲ್ಲಿ ತುಳಿದಿಟ್ಟಿರುವುದರಿಂದ ಅವರಿಗೆ ವಿದ್ಯಾಭ್ಯಾಸಮಾಡಿಸಿ ಅವರ ವಿಮೋಚನೆಗೆ ಪರಮಾವಧಿಯಾಗಿ ಪ್ರಯತ್ನಪಟ್ಟ ಹೊರತು, ರಾಷ್ಟ್ರನಿರ್ಮಾಣ ಕಾರ್ಯಗಳ ಯಾವ ಕ್ಷೇತ್ರದಲ್ಲಿಯೂ ನಾವು ನಿಜವಾದ ಅರ್ಥದಲ್ಲಿ ಮುಂದುವರಿಯುವುದಕ್ಕೆ ಅವಕಾಶವಾಗಲಿ, ಭರವಸೆಯಾಗಲೀ ಇಲ್ಲ, - ಎಂದು ಅವರು ಹೇಳುತ್ತಾರೆ.

ಅವರು ತಮ್ಮ ಅಮೆರಿಕಾದ ಭಾಷಣಗಳಲ್ಲಿ ನಮ್ಮ ಮೊದಲಿನ ಗಮನವನ್ನು ಸೆಳೆದಿರುವ, ವರ್ತಮಾನಕಾಲದ ಇತರ ಎರಡು ಅತ್ಯಂತ ಮುಖ್ಯವಾದ ಸಮಸ್ಯೆಗಳು ಯಾವವೆಂದರೆ,--ಭಯಂಕರ ವೇಗದಿಂದ ಹೆಚ್ಚುತ್ತಿರುವ ಭಾರತದ ಜನಸಂಖ್ಯೆ ಮತ್ತು ದಾರಿದ್ರ್ಯ. ಇಂಡಿಯಾದೇಶವು ಪ್ರಾಯಶಃ ಪ್ರಪಂಚದಲ್ಲಿಯೇ ಅತ್ಯಂತ ಹೆಚ್ಚಾದ ಜನಸಾಂದ್ರತೆಯುಳ್ಳ, ಮತ್ತು ಅತ್ಯಂತ [illegible] ಬಡತನದಿಂದ ಭಂಗಪಡುತ್ತಿರುವ ದೇಶವಿರಬಹುದೆಂದು ಅವರು ಹೇಳಿದ್ದಾರೆ. ಈ ಸಮಸ್ಯೆಯ ವಿಷಯದಲ್ಲಿ ಅವರು,- ಒಂದು ದೇಶದ ಜನಸಂಖ್ಯೆಯನ್ನು ಹತೋಟಿಯಿಂದ ಯೋಗ್ಯ ಮಿತಿಯಲ್ಲಿ ಇಟ್ಟುಕೊಳ್ಳದಿದ್ದರೆ, ವಿನಾಶಕರವಾದ ಅಂಟುರೋಗಗಳೂ ಯುದ್ಧಗಳೂ ಭೂಕಂಪಗಳೂ— ಇವೇ ಮೊದಲಾದ ಅನೇಕ ವಿಪತ್ತುಗಳು ಆ ದೇಶದ ಮೇಲೆ ನಿಯಮಿತವಾಗಿಯೂ ದಾಳಿ ಮಾಡುವುವೆಂದು ತ್ರೇತಾಯುಗದ ವಸಿಷ್ಠ ಮಹರ್ಷಿಗಳು ಹೇಳಿದ್ದಾರೆಂದು

— ಇತಿಹಾಸಪೂರ್ವದ ಸಾಧಾರವಾದ ಓತೋಕ್ತಿಯನ್ನು ಉದಾಹರಿಸುತ್ತಾರೆ ಐವತ್ತು ವರ್ಷಗಳ ಹಿಂದೆಯೇ ರಾಮತೀರ್ಥರು ಈ ಗುರುತರವಾದ ಸಮಸ್ಯೆಯ ವಿಷಯದಲ್ಲಿ ಅಷ್ಟು ಹೌಹಾರಿಸುವಂಥ ಎಚ್ಚರಿಕೆಯನ್ನು ಕೊಟ್ಟಿದ್ದರಾದರೂ ಈ ಸಮಸ್ಯೆಯ ಉಗ್ರತೆಯು ಕಡಿಮೆಯಾಗುವದಕ್ಕೆ ಬದಲು ಇವತ್ತು ಇನ್ನೂ ಹೆಚ್ಚು ಭಯಂಕರವಾಗಿದೆ. ಈ ಕೇಡನ್ನು ಕಡಿಮೆ ಮಾಡುವದಕ್ಕೆ ಅವರು ಕೆಲವು ಉಪಾಯಗಳನ್ನು ಸೂಚಿಸಿದರಲ್ಲದೆ, ಪರಲೋಕದ ಸುಖಕ್ಕಾಗಿ ಇಹಲೋಕದಲ್ಲಿ ದೊಡ್ಡ ಸಂತಾನ ಪರಂಪರೆಯನ್ನು ಬೆಳೆಸಿ ಹೋಗುವದು ಅತ್ಯಂತ ಅವಶ್ಯ ಧರ್ಮವೆಂದು ಹಿಂದೂಗಳಲ್ಲಿರುವ ನಂಬಿಕೆಯನ್ನು ಅವರು ತಿರಸ್ಕಾರದಿಂದ ಕಂಡರು. ನಾವು ನಮ್ಮ ಆಧ್ಯಾತ್ಮಿಕ ಶ್ರೇಯಸ್ಸನ್ನು ನಮ್ಮ ಸ್ವಂತ ಪ್ರಯತ್ನದಿಂದ ಸಾಧಿಸಬೇಕಲ್ಲದೆ ಬೇರೆ ಯಾರಿಂದಲೂ ಸಾಧ್ಯವಲ್ಲವೆಂದೂ ದೇವರಿಂದ ಕೂಡ ಸಹಾಯವಾಗಲಾರದೆಂದೂ ಅವರು ಸ್ಪಷ್ಟವಾಗಿ ಹೇಳಿದರು.

ಬಡತನದ ಸಮಸ್ಯೆಯು ಅತ್ಯಂತ ಪ್ರಸಿದ್ಧವೇ ಇರುವದರಿಂದ ಅದನ್ನು ಮತ್ತೆ ಮತ್ತೆ ಹೇಳುವ ಅಗತ್ಯವಿಲ್ಲ. ಅದೇ ಮೂಲ ಸಮಸ್ಯೆಯೆಂದೂ ಎಲ್ಲಾ ಸಮಸ್ಯೆಗಳಿಗಿಂತಲೂ ಹೆಚ್ಚಿನ ಸಮಸ್ಯೆಯೆಂದೂ ಅವರು ಹೇಳುತ್ತಾರೆ. ಅದರ ಉಗ್ರತೆಯನ್ನು ಕಡಿಮೆ ಮಾಡುವದಕ್ಕೆ ನೀವು ಏನು ಮಾಡುವದಕ್ಕೂ ಸಾಧ್ಯವಿಲ್ಲವಾದರೆ, ನಿಮ್ಮ ನಾಡಿನ ಜನರಿಗೆ ಜೀವನದ ಕೇವಲ ಅತ್ಯಗತ್ಯ ವಸ್ತುಗಳಾದ ಅನ್ನ, ವಸ್ತ್ರ, ವಸತಿಗಳನ್ನೂ ನೀವು ಪೂರೈಸಲಾರಿರಾದರೆ, ಪ್ರಗತಿಪಥದಲ್ಲಿ ಒಂದು ಅಂಗುಲವನ್ನೂ ನೀವು ಮುಂದುವರಿಯುವ ಆಶೆಯನ್ನು ಹೊಂದಿರಲಾರಿರಿ; ಎಂದು ಅವರು ಹೇಳುತ್ತಾರೆ. ಹಸುವಿನ ಸಾಧುಸ್ವಭಾವವು ಮನೆಯ ಮಾತಾಗಿದೆಯಷ್ಟೆ. ಆದರೆ ಒಂದೆರಡು ಹಸುಗಳಿಗೆ ಮಾತ್ರ ಮೇವಿರುವ ಒಂದು ಆವರಣದಲ್ಲಿ ಹತ್ತು ಹಸುಗಳನ್ನು ಕೂಡಿದರೆ, ಅಂಥಾ ಅತ್ಯಂತ ಸೌಮ್ಯ ಸ್ವಭಾವದ ಆ ಪಶುಗಳು ಕೂಡ ಆಹಾರಕ್ಕಾಗಿ ಒಂದರೊಡನೊಂದು ಸ್ಪರ್ಧಿಯವಾಗಿರುವ ಬಗೆಯ [illegible]. ಆದ್ದರಿಂದ ಈ ಪರಿಸ್ಥಿತಿಯನ್ನು ಸುಧಾರಿಸುವದಕ್ಕಾಗಿ ವ್ಯವಸಾಯ ಮುಂತಾದ ಉತ್ಪಾದನೆಗಳಲ್ಲಿ ವೈಜ್ಞಾನಿಕ ವಿಧಾನಗಳನ್ನು ಅವಲಂಬಿಸಬೇಕೆಂದು ಅವರು ಬೋಧಿಸುತ್ತಿದ್ದರು ಅಮೇರಿಕಾದೇಶಕ್ಕೆ ಹೋಗಿ ವೈಜ್ಞಾನಿಕ ಕಲೆಗಳಲ್ಲಿಯೂ ಉದ್ಯೋಗಗಳಲ್ಲಿಯೂ ಸಂಪೂರ್ಣ ಜ್ಞಾನವನ್ನು ಪಡೆಯಬೇಕೆಂದು ಅವರು ಭಾರತದ ವಿದ್ಯಾರ್ಥಿಗಳಾದ ತರುಣರಿಗೆ ಹೃತ್ಪೂರ್ವಕವಾಗಿ ಬಿಟ್ಟುವಾದ ಹೇಳಿ ಪ್ರೋತ್ಸಾಹಿಸುತ್ತಿದ್ದರು. ಅಂಥಾ ಪರಿಣತ ವಿದ್ಯಾರ್ಥಿಗಳಿಗೆ ಅಮೇರಿಕೆಯ ವಿಶ್ವವಿದ್ಯಾಲಯಗಳಲ್ಲಿಯೂ ಕಾರ್ಖಾನೆಗಳಲ್ಲಿಯೂ ಹೆಚ್ಚಿನ ಶಿಕ್ಷಣ ಕೊಡುವದಕ್ಕಾಗಿ ವಿದ್ಯಾರ್ಥಿವೇತನಗಳನ್ನೂ

ಉಚಿತ ಸಹಾಯಗಳನ್ನೂ ನೀಡಬೇಕೆಂದು ಅವರು ಅಮೆರಿಕಾಜನರಲ್ಲಿ ಮೊರೆಯಿಟ್ಟರು. ಇಷ್ಟೆಲ್ಲಾ ಆದರೂ ಅವರು—ಈಗ ನಾವು ಮರುಳಾಗಿರುವ—ಪರಿದ ಮಟ್ಟದ ದುಬಾರಿಯ ಜೀವನದ ಮೋಹಜಾಲಕ್ಕೆ ಸಂಪೂರ್ಣ ವಿರೋಧಿಗಳಾಗಿದ್ದರು ಒಂದು ಒರಟು ಬಟ್ಟೆಯು ನಮ್ಮನ್ನು ಚಳಿಯ ಕೊರೆತದಿಂದ ಕಾಪಾಡುವದಾದರೆ, ರೇಷ್ಮೆಯ ವಸ್ತ್ರದ—ಪೀತಾಂಬರದ-ಅಗತ್ಯವೇನು ? ಎಂದು ಅವರು ಕೇಳುತ್ತಾರೆ. ಯವೆಯ ಅಥವಾ ಜವೆ ಗೋಧಿಯ ಅಥವಾ ರಾಗಿ—ಜೋಳಗಳ ನುಚ್ಚು ಹಾಲೂ ವಿದ್ಯಾರ್ಥಿಗಳಿಗೆ ಸಾಕಷ್ಟು ಪುಷ್ಟಿಯನ್ನೂ ತುಷ್ಟಿಯನ್ನೂ ಕೊಡುವದಾದರೆ, ಹೆಚ್ಚಿನ ಕೊಬ್ಬನ್ನು ಬೆಳೆಸುವ ತುಪ್ಪವೇಕೆ ?-ಎಂದು ಅವರು ಕೇಳುತ್ತಾರೆ. ಸ್ವಲ್ಪದರಲ್ಲಿ ಹೇಳುವದಾದರೆ, ಅವರು ಉನ್ನತ ವಿಚಾರಕ್ಕೂ ಆದರೆ ಅತಿ ಸರಳವೂ ಸುಲಭವೂ ಸತ್ತ್ವಯುತವೂ ಆದ ಜೀವನಕ್ಕೂ ಪ್ರೇರಕರಾಗಿದ್ದರು

ಹೀಗೆ, ಇಂಡಿಯಾದೇಶದ ಸಂಬಂಧವಾಗಿ ಅವರು ಅಮೆರಿಕೆಯಲ್ಲಿ ಮಾಡಿದ ಭಾಷಣಗಳಲ್ಲಿ ಪ್ರಾಯಶಃ ಜೀವನದ ಪ್ರತಿಯೊಂದು ವೃತ್ತಿಯ ಮೇಲೂ ತಮ್ಮದೇ ಆದ ವೇದಾಂತದೃಷ್ಟಿಯಿಂದ ಮಾಡಿದ, ಇವತ್ತು ಕೂಡ ಹಿತ-ವಿಹಿತವೆಂದು ತೋರುವ, ಸೂಚನೆಗಳನ್ನು ನಾವು ಕಾಣಬಹುದು. ಆದರೆ, ಅವರು ವಿದೇಶ ಪ್ರವಾಸದಿಂದ ಸ್ವದೇಶಕ್ಕೆ ಹಿಂದಿರುಗಿದ ಮೇಲೆ ಅವುಗಳನ್ನು ಹೆಚ್ಚು ಒತ್ತಿ ಹೇಳಲಿಲ್ಲ. ಅದೇಕೆ ?—ಎಂದು ಯಾರಿಗೆ ಗೊತ್ತು ? ದೇಶವು ಪರಕೀಯರ ದಾಸ್ಯದಿಂದ ವಿಮೋಚನೆಮಾಡಲ್ಪಟ್ಟ ಹೊರತು, ಜೀವನದ ಯಾವ ವಲಯದಲ್ಲಿಯೂ ನಿಜವಾದ ಪ್ರಗತಿಯ ರೀತಿಯಿಂದ ವಾಸ್ತವವಾದ ಏನನ್ನೂ ಸಾಧಿಸುವದು ಸಾಧ್ಯವಲ್ಲವೆಂದು ಪ್ರಾಯಶಃ ಅವರು ತಮ್ಮ ನಿರ್ಮಲ ದೃಷ್ಟಿಯಲ್ಲಿ ಕಂಡಿರಬೇಕು. “ಧರ್ಮಕ್ಕೆ ಮರುಳಾಗಿರತಕ್ಕವರೂ ದೇವರ ದರ್ಶನವನ್ನು ಬಯಸತಕ್ಕವರೂ ಪರಮಾತ್ಮಾನುಭವಕ್ಕಾಗಿ ಹಂಬಲಿಸತಕ್ಕವರೂ ಆದ ಓ ಭಾರತೀಯರೇ ! ನಿಮ್ಮ ದೇಶದೊಡನೆಯೂ ನಿಮ್ಮ ದೇಶದ ಜನಾಂಗದೊಡನೆಯೂ ನೀವು ಸಂಪೂರ್ಣವಾಗಿ ತಾದಾತ್ಮ್ಯವನ್ನು ಪಡೆದ ಹೊರತು, ನಿಮ್ಮ ಗುರಿಯನ್ನು ನೀವು ಎಂದೆಂದಿಗೂ ಮುಟ್ಟಲಾರಿರಿ. ನಿಮ್ಮ ದೇಶದ ಪ್ರೇಮದಿಂದ ನಿಮ್ಮ ಹೃದಯದ ಪ್ರತಿಯೊಂದು ಎಳೆಯೂ ಮಿಡಿದು ಕೊಳ್ಳದೆ, ಬಡಿದುಕೊಳ್ಳದೆ, ಧರ್ಮದ ಅತ್ಯಂತ ಉನ್ನತವಾದ ಧ್ಯೇಯವನ್ನು ಸಾಧಿಸುವ ಭರವಸೆಯಿಲ್ಲ. ಮೊದಲು ನಿಮ್ಮ ಸಹಾನುಭೂತಿಯನ್ನೂ ಕನಿಕರವನ್ನೂ ವಿಶಾಲಗೊಳಿಸಬೇಕು. ನಿಮ್ಮ ಕುಟುಂಬದ ಅಥವಾ ಯಾವದೊಂದು ಜಾತಿ-ಮತದ ಸಂಕುಚಿತವಾದ ಎಲ್ಲೆಕಟ್ಟಿನಲ್ಲಿ ಸೆರೆಯಾಳಾಗಿ ಉಳಿದರೆ, ನೀವು ಆಧ್ಯಾತ್ಮಿಕವಾಗಿ ಮುಂದುವರಿಯಲಾರಿರಿ. ಅದಕ್ಕಾಗಿ ನಿಮ್ಮನ್ನು ನೀವು ಇಡೀ ರಾಷ್ಟ್ರದೊಡನೆ ಒಂದಾಗಿ

ಭಾವಿಸಬೇಕು ; ಮತ್ತು ಅವರ ಪ್ರತಿಯೊಬ್ಬ ನಾಗರಿಕ ವ್ಯಕ್ತಿಯಲ್ಲಿಯೂ ಇದೇ ಭಾರತವೇ ವ್ಯಕ್ತವಾಗಿರುವುದನ್ನು ಗುರುತಿಸಬೇಕು. ಜಾತಿ-ಮತ ವಿಭಾಗಗಳು ಅಮೆರಿಕಾದಲ್ಲಿ ಭಾರತಕ್ಕಿಂತಲೂ ಕಡಿಮೆಯೇನಿಲ್ಲ. ಆದರೆ ಅವರು ರಾಷ್ಟ್ರಕ್ಕಾಗಿ ಮಹತ್ತಮ ಬಲಿದಾನವನ್ನು ಮಾಡುವುದನ್ನೂ ಒಪ್ಪುವಷ್ಟು ಆಳವಾಗಿ ರಾಷ್ಟ್ರ ಭಾವನೆಯೂ ಭಕ್ತಿಯೂ ಪ್ರತಿಯೊಬ್ಬ ಅಮೆರಿಕದ ನಾಗರಿಕನ ಹೃದಯದಲ್ಲಿಯೂ ಇಳಿದಿರುತ್ತದೆ. ಇದೇ ಅವರ ಅನುಭವಗತವಾದ ವ್ಯವಹಾರ-ವೇದಾಂತ. ನೀವು ಬ್ರಾಹ್ಮಣರಾದರೆ ನಿಮ್ಮ ದೇಶದ ಪುರೋಭಿವೃದ್ಧಿಗಾಗಿ ನಿರಂತರ ಶೋಧನೆಯನ್ನೂ ಯೋಜನೆಯನ್ನೂ ಮಾಡಿ, ನಿಮ್ಮ ಎಲ್ಲಾ ಬೌದ್ಧಿಕ ಶಕ್ತಿಗಳನ್ನೂ ತಪಶ್ಶಕ್ತಿಯನ್ನೂ ದೇಶದ ಸೇವೆಗಾಗಿ ಧಾರೆಯೆರೆಯಬೇಕು. ನೀವು ಕ್ಷತ್ರಿಯರಾದರೆ ನಿಮ್ಮ ದೇಶಕ್ಕಾಗಿ ಜೀವವನ್ನು ಅರ್ಪಿಸುವುದಕ್ಕೆ ಸಿದ್ಧರಾಗಿ. ನೀವು ವೈಶ್ಯರಾದರೆ ನಿಮ್ಮ ಸಂಪತ್ತನ್ನು ದೇಶದ ಉಪಯೋಗಕ್ಕಾಗಿ ಪವಿತ್ರ ಮುಡಿಪಾಗಿ ಇಡುವುದು. ಏಳಿರಿ, ಎಚ್ಚರಗೊಳ್ಳಿರಿ ; ಇವತ್ತು ಸಮಸ್ತ ಜನರ ಅಭಿವೃದ್ಧಿಗೆ ಈ ರಾಷ್ಟ್ರನಿಷ್ಠೆಯ ಧರ್ಮದ ಹೊರತು ಬೇರೆ ಮಾರ್ಗವಿಲ್ಲ.'' ಅವರು ಹೀಗೆ ಸಾರಿ ಹೇಳಿದರು.

ಬ್ರಾಹ್ಮಣರೂ ಕ್ಷತ್ರಿಯರೂ ವೈಶ್ಯರೂ ದೇಶಹಿತಕ್ಕಾಗಿ ಸ್ವಾರ್ಥತ್ಯಾಗ ಮಾಡುವಂತೆ ಅವರು ಹುರಿದುಂಬಿಸಿದರು. ಹಿಂದೂಗಳಲ್ಲಿ ಶೂದ್ರರು ಕೀಳಾಗಿ ಕಾಣುತ್ತಿದ್ದ ಶ್ರಮಜೀವನವನ್ನು ಸಂನ್ಯಾಸಿಗಳು ಸಹ ಒಪ್ಪಿಕೊಂಡು ದೇಶಕ್ಕಾಗಿ ಕಷ್ಟಪಟ್ಟು, ಕೈಮುಟ್ಟಿ ಕೆಲಸಮಾಡುವಂತೆ ಪ್ರೋತ್ಸಾಹಿಸಿದರು. ಹೀಗೆ ಅವರು ದೇಶಭಕ್ತಿಯನ್ನು ಆಧ್ಯಾತ್ಮಿಕವಾಗಿ ಮಾಡಿದರು ; ನಿಸ್ಸಂದೇಹವಾಗಿ ಅನೇಕ ಉದಾತ್ತ ಜೀವರಿಗೆ ಆ ಕಾಲದಲ್ಲಿ ಸ್ಫೂರ್ತಿಯನ್ನು ಕೊಟ್ಟು, ಮಾತೃಭೂಮಿಯ ಸೇವೆಗೆ ಅವರನ್ನು ಸಿದ್ಧರನ್ನಾಗಿ ಮಾಡಿದರು.

ಅವರು ಸಮಾಜವಾದವನ್ನೂ (Socialism) ಪ್ರತಿಪಾದಿಸಿದರು. ಖಾಸಗಿ, ಸ್ವಂತ ಆಸ್ತಿಯನ್ನು ಹೊಂದಿರುವ ಪದ್ಧತಿಗೆ ವಿರೋಧವಾಗಿರುವುದರಿಂದ ವೇದಾಂತವೂ ಸಮಾಜವಾದವೂ—ಆ ಅರ್ಥದಲ್ಲಿ—ಒಂದೇ ಸಮನಾದವು ಎಂದು ಅವರು ಹೇಳಿದರು. ಈ ಒಂದು ದೃಷ್ಟಿಯಿಂದ ಈ ಎರಡರ ಗುರಿ ಒಂದೇ. ನೀವು ಶರೀರವಲ್ಲ, ನೀವು ಮನಸ್ಸಲ್ಲ. ನೀವು ಆತ್ಮನಾಗಿರುವುದರಿಂದ ಎಲ್ಲದರಲ್ಲಿ ಎಲ್ಲವೂ ಆಗಿದ್ದೀರಿ ಎಂದು ವೇದಾಂತವು ಹೇಳುತ್ತದೆ. ಆದ್ದರಿಂದ ಈ ವಾದದಲ್ಲಿ ಸ್ವಂತ ಆಸ್ತಿಯ ಪ್ರಶ್ನೆಯೇ ಇಲ್ಲ. ಇತರರ ಶೋಷಣೆಗೆ ಕಾರಣವಾಗುವುದರಿಂದ ಸಮಾಜವಾದವು ಖಾಸಗಿ ಆಸ್ತಿಯನ್ನು ನಿಷೇಧಿಸುತ್ತದೆ. ಅಷ್ಟು ದೂರದವರೆಗೆ ಅವೆರಡೂ ಒಂದೇ.

ಆದರೆ, ಸಮಾಜವಾದದಲ್ಲಿ ಅಡಗಿರುವ (ಜಮೀನುಗಳೂ ಇತರ ಉತ್ಪತ್ತಿ ಸಾಧನಗಳೂ ಎಲ್ಲರ ಉಪಯೋಗಕ್ಕಾಗಿ ಜನಸಾಮಾನ್ಯದ ಸ್ವಾಮ್ಯವಾಗಿರಬೇಕೆಂಬ) ಸಮಷ್ಟಿವಾದದ-ಸಾಮುದಾಯಿಕ ಮಾನವ-ಶಕ್ತಿಯು, ಭಾವನೆಯು ವೇದಾಂತದ ಸತ್ತ್ವಕ್ಕೆ ವಿರೋಧ. ನೀವು ಯಾರಿಗೂ ಗುಲಾಮರಲ್ಲ; ಆದರೆ ಸರ್ವಕ್ಕೂ ಪ್ರಭು-ಎಂದು ಅವರು ಹೇಳುತ್ತಾರೆ. ನಿಮ್ಮ ಆತ್ಮನನ್ನು ಅವಶ್ಯವಾದರೆ ಇಡೀ ಜಗತ್ತಿನ ವಿರುದ್ಧವಾಗಿ ನಿಲ್ಲಿಸುವುದೆಂದು ಅವರೆನ್ನುತ್ತಾರೆ.

ಇಂಡಿಯಾ ದೇಶದ ಸಂಬಂಧವಾದ ಅವರ ಅಮೆರಿಕಾದ ಉಪನ್ಯಾಸಗಳಿಂದ ಸ್ಪಷ್ಟವಾಗುವ ಬೋಧನೆಗಳಲ್ಲಿ ಮೇಲಿನವು ಕೆಲವು ಭಾರತದಲ್ಲಿ ವರ್ತಮಾನ ಕಾಲದಲ್ಲಿರುವ ಪರಿಸ್ಥಿತಿಗೂ ಲಾಭದಾಯಕವಾಗಿ ಇವುಗಳನ್ನೇ ಅನ್ವಯಿಸಬಹುದು. ಅವರು ವೇದಾಂತಿಗಳೂ ಜೀವನ್ಮುಕ್ತರೂ ಆಗಿದ್ದರೂ ಹೃದಯಾಂತರಾಳದಲ್ಲಿ ದೇಶಭಕ್ತರಾಗಿದ್ದರು. ಆದರೆ ಅವರ ಆ ದೇಶಭಕ್ತಿಯು ಅಪೂರ್ವವೂ ಅನುಪಮವೂ ಆದುದು. ಕ್ರಿ. ಶ. 1901 ರಷ್ಟು ಹಿಂದೆಯೇ ಅವರು ಅಚ್ಚರಿಯ ಉದ್ಗಾರ ಮಾಡಿದ್ದರು "ಅನೇಕ ಜೀವರ ಮೂಲಕವಾಗಲೀ ಒಂಟಿಯಾಗಲೀ ಪ್ರಯತ್ನ ಮಾಡುವವನಿಂದ ನಿಜವಾದ ಜೀವನತತ್ತ್ವವನ್ನು ತುಂಬಿ ಹತ್ತು ವರ್ಷಗಳೊಳಗಾಗಿ ಇಂಡಿಯಾದೇಶ ಅಂಧಕಾರವನ್ನೂ ದೌರ್ಬಲ್ಯವನ್ನೂ ತೊಲಗಿಸುವನೆಂದೂ ಮತ್ತು ಇಪ್ಪತ್ತನೆಯ ಶತಮಾನದ ಪೂರ್ವಾರ್ಧದೊಳಗೆ ಇಂಡಿಯಾ ದೇಶವು ತನ್ನ ಪೂರ್ವ ವೈಭವಕ್ಕಿಂತಲೂ ಹೆಚ್ಚಿನ ಗೌರವದ ಸ್ಥಾನಮಾನಗಳಲ್ಲಿ ಪುನಃ ಪ್ರತಿಷ್ಠಾಪಿತವಾಗುವದೆಂದೂ ರಾಮನು ಗಂಭೀರವಾದ ಭರವಸೆಯನ್ನು ಕೊಡುತ್ತಾನೆ. ಈ ಮಾತುಗಳು ಶಾಶ್ವತವಾದ ದಾಖಲೆಯಾಗಲಿ." ಈ ವಿಲಕ್ಷಣವಾದ ಭರವಸೆಯು ಖಂಡಿತವಾಗಿಯೂ ರಾಜಕಾರಣಿಯ ಮುನ್ನೋಟವಾಗಲೀ ದೈವಜ್ಞನ ಭವಿಷ್ಯವಾಣಿಯಾಗಲೀ ಯೋಗಸ್ಥ ಮನಸ್ಸಿನ ಕಲ್ಪಿತ ಕಥೆಯಾಗಲೀ ಆಗಿರಲಿಲ್ಲ. ಅದು ಆತ್ಮಾನುಭವಿಯ ಗುರುತರವಾದ ಭರವಸೆಯಾಗಿದ್ದಿತು; ಸತ್ಯವಾದ ವಾಗ್ದಾನವಾಗಿದ್ದಿತು ಅಷ್ಟಲ್ಲದೆ ಅವರ ಸ್ವಕೀಯ ದೃಷ್ಟಿಗನುಗುಣವಾಗಿ ಪೂರ್ಣ ಹೊಣೆಗಾರಿಕೆಯಿಂದ ಅಕ್ಷರಶಃ ಆ ಮಾತು ಪಾಲನೆಯಾಯಿತು-ಸಾಧನೆಯಾಯಿತು. ಈ ಪ್ರಪಂಚದಲ್ಲಿ ವಸ್ತುವಾಗಲೀ ಶಕ್ತಿಯಾಗಲೀ ಏನೊಂದೂ ಎಂದೂ ನಷ್ಟವಾಗುವದಿಲ್ಲ, ಮಂಜೂ ನೀರೂ ಆವಿಯೂ ಒಂದೇ ಆಗಿವೆ ರೂಪಗಳು ಬದಲಾವಣೆಯಾಗುತ್ತವೆಯೇ ಹೊರತು ವಸ್ತುವಲ್ಲ. ಆಶೆಗಳೂ ಬಯಕೆಗಳೂ ಹಂಬಲಗಳೂ ಲಾಲಸೆಗಳೂ ಮನಸ್ಸಿನ ಶಕ್ತಿಗಳು. ಅವುಗಳು ನಾಶವಾಗುವದಿಲ್ಲ. ಈ ಎಲ್ಲವೂ ಸಕಾಲದಲ್ಲಿ ಸಫಲವಾಗುತ್ತವೆ. ಅನಾಸಕ್ತನೂ ನಿಸ್ವಾರ್ಥಿಯೂ ಆದ ದೇಶಭಕ್ತ ಮಹಾತ್ಮನ

ಆಶೆಗಳು ಫಲವನ್ನು ಪಡೆಯಲು ಹೆಚ್ಚು ಶಕ್ಯವುಳ್ಳವಾಗಿರುತ್ತವೆ. ಅಂಥ ಸಾಧುವಿ ಯಲ್ಲಿರಬಹುದಾದ ಲೋಕ ಹಿತಾರ್ಥವಾದ ಭಾವನೆಗಳೂ ಕಾಮನೆಗಳೂ ನದಿ ಗಳಿಂದಲೂ ಮರಗಳಿಂದಲೂ ಕಲ್ಲುಗಳಿಂದಲೂ ಸಹ ಸಾಕ್ಷಾತ್ತಾಗಿ ಸ್ವತಃ ಪ್ರಕೃತಿ ಯಿಂದಲೇ-ಸಂಗ್ರಹ ಮಾಡಲ್ಪಟ್ಟು, ಅನುಕೂಲವಾದ ಸಮಯ ಒದಗಿದೊಡನೆಯೇ ಅತ್ಯಂತ ಆಶ್ಚರ್ಯಕರವಾಗಿ ಪವಾಡದಂತೆ ಫಲರೂಪದಿಂದ ಪ್ರಕಟವಾಗುತ್ತವೆ, ಎಂದು ಅವರು ಹೇಳುತ್ತಾರೆ. ರಾಮತೀರ್ಥರು ಜೀವನ್ಮುಕ್ತರಾಗಿದ್ದರು. 1906 ರಲ್ಲಿ ಗಂಗಾ ನದಿಯಲ್ಲಿ ಸ್ನಾನಮಾಡುವಾಗ ಮಹಾ ನಿರ್ವಾಣವನ್ನು ಹೊಂದಿದರು. ಹೀಗೆ ಪುನರ್ಜನ್ಮವು ಅವರಿಗೆ ಕೊನೆಯಾಯಿತು. ಅವರು ಸರ್ವರಲ್ಲಿ ಸರ್ವಸ್ವರೂ ಆಗಿದ್ದರು. ಪ್ರತಿಯೊಬ್ಬ ಜೀವನ್ಮುಕ್ತನೂ ಹೀಗೆಯೇ ಸರಿ. ಆದರೆ ಅವರ ಸಾತ್ತ್ವಿಕ ವಾದ ಆಶೆಯೂ ಗಂಭೀರವಾದ ಭರವಸೆಯೂ ವ್ಯರ್ಥವಾಗದೆ ಅವರ ಇಚ್ಛೆಯಂತೆ ವಾಸ್ತವವಾಯಿತು, ಸತ್ಯವಾಯಿತು.

ಅವರ ಬೋಧೆಗನುಸಾರವಾಗಿ ನಡೆದುಕೊಂಡು ಅತ್ಯಂತ ಸಾಮಾನ್ಯರಿಂದ ಅತ್ಯಂತ ಶ್ರೇಷ್ಠರ ವರೆಗೂ ಎಲ್ಲಾ ಜನರಲ್ಲಿಯೂ ಅದನ್ನೇ ಪ್ರಸಾರ ಮಾಡುವದಕ್ಕೆ ರಾಮನ ಪ್ರೇಮಿಗಳಿಗೆ ಈಗ ಸರಿಯಾದ ಕಾಲವಾಗಿದೆ

ರಾಮೇಶ್ವರ ಸಹಾಯ ಸಿನ್ಹಾ

ಸಾರನಾಥ, ವಾರಣಾಸಿ, ([illegible])

25-2-1957.

# Introduction

## ಪ್ರಸ್ತಾವನಾ

ಇದು "In woods of God-Realization" "ಪರಮಾತ್ಮಾನುಭವದ ಮಹಾರಣ್ಯಗಳಲ್ಲಿ" ಗ್ರಂಥದ ಕೊನೆಯ ಭಾಗ ಈ ಮೂರು ಭಾಗಗಳಲ್ಲಿ ಬ್ರಹ್ಮೀಭೂತ ಸ್ವಾಮಿ ರಾಮತೀರ್ಥರ ಎಲ್ಲಾ ಉಪನ್ಯಾಸಗಳೂ ಪತ್ರಗಳೂ ಲೇಖನಗಳೂ ಮತ್ತು ಪದ್ಯಗಳೂ ಮುಗಿದಿವೆ ಅವರ ಹದಿಮೂರು (ನೋಟ್‌ಬುಕ್ಸ್) ಟಿಪ್ಪಣಿ ಪುಸ್ತಕಗಳಿಂದ ವಿಷಂಖ ಲೇಖನಗಳನ್ನು ಹೇಗಿದ್ದವೋ ಹಾಗೆಯೇ ಎತ್ತಿಕೊಂಡು ಪ್ರಕಟಿಸಿದೆ. ಕೆಲವು ಕಾರಣಗಳಿಗಾಗಿ ಅವರ ನಾಲ್ಕನೇ ನೋಟ್ ಬುಕ್ಕನ್ನು ಮುಂದೆ ಬೇರೆಯಾಗಿ ಪ್ರಕಟಿಸುವದಕ್ಕಾಗಿ ಮೀಸಲಾಗಿಟ್ಟಿದೆ ಬಂಡವಾಳ ಪದ್ಧತಿಯ ಕೇಡುಗಳ ಮೇಲೆ ಸ್ವಾಮಿಗಳ ಒಂದು ಉಪನ್ಯಾಸವಿದೆ. ಆದರೆ, ಕಾಯಿದೆ ಬಲ್ಲವರ ಉತ್ತಮವಾದ ಸಲಹೆಯ ಮೇಲೆ ಅದನ್ನು ಬಿಟ್ಟುಬಿಡಬೇಕಾಯಿತು. ರಾಮತೀರ್ಥರ ಪ್ರಕಟವಾಗದಿರುವ ಇನ್ನೂ ಕೆಲವು ನೋಟ್‌ಬುಕ್‌ಗಳು ಲಾಹೋರಿನ ಲಾಲ್ ಹರಲಾಲ್ ಸಾಹಬ್, ನಾಜಿರ್, ಡಿಸ್ಟ್ರಿಕ್‌ಕೋರ್ಟ್, ಇವರಲ್ಲಿ ಇವೆಯೆಂದು ತಿಳಿಯಿತು. ಆ ಪುಸ್ತಕಗಳಲ್ಲಿರುವ ವಿಷಯಗಳನ್ನೂ ಅಥವಾ ಆಯ್ದ ವಿಷಯಗಳನ್ನೂ ಈ ಭಾಗದಲ್ಲಿ ಸೇರಿಸಬಹುದೆಂದು ಆ ಮಹನೀಯರನ್ನು ಕೆಲವು ಕಾಲ ಆ ಪುಸ್ತಕಗಳನ್ನು ಕೊಟ್ಟಿರುವದಕ್ಕಾಗಿ ಬಹಳವಾಗಿ ಪ್ರಾರ್ಥಿಸಿದೆ. ಆದರೆ, ಅವರೇಕೋ ಒಲಿಯಲಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ ಈ ಲೇಖನಗಳನ್ನು ಬಿಟ್ಟರೆ, ನನಗೆ ಚೆನ್ನಾಗಿ ತಿಳಿದಮಟ್ಟಿಗೆ, ಸ್ವಾಮಿಗಳು ತಮ್ಮ ಪ್ರಿಯ ಶಿಷ್ಯರಾದ ವಿದ್ವಾನ್ R S. ನಾರಾಯಣಸ್ವಾಮಿಗಳಿಗೆ ಅನುಗ್ರಹಿಸಿ ಕೊಟ್ಟುಹೋದ ಅವರ ಮೂಲ ಹಸ್ತಲೇಖಗಳನ್ನು ಆಧರಿಸಿ ಪ್ರಕಟವಾಗಿರುವ ಈ ಗ್ರಂಥಗಳು ಸರ್ವಗ್ರಾಹಿಯೂ ಸಂಪೂರ್ಣವೂ ಸಮಗ್ರವೂ ಆಗಿವೆ.

ಈ ಭಾಗದ ಪ್ರಕಟಣೆಯಲ್ಲಿ ಭಾಯಿ ಪೂರಣಸಿಂಗರು ಯಾವ ಭಾಗವನ್ನೂ ವಹಿಸಿಲ್ಲವೆಂದು ಹೇಳಬೇಕಾಗಿದೆ. ಸ್ವಾಮಿ ನಾರಾಯಣರೂ ನಾನೂ ಮಾತ್ರವೇ

ಸಮಾಧಾನಕ್ಕೂ ಸಂತೋಷಕ್ಕೂ ಕಾರಣವಾಗಿದೆ. ಆಧ್ಯಾತ್ಮಿಕವಾದ ಹಸಿವಿನಿಂದ ಸತ್ಯವನ್ನೂ ಮನಶ್ಶಾಂತಿಯನ್ನೂ ಬಯಸುವ ಜಿಜ್ಞಾಸ ಗಳಿಗೂ ಮುಮುಕ್ಷುಗಳಿಗೂ ಪರಮ ಪುರುಷಾರ್ಥವನ್ನು ಅನುಗ್ರಹಿಸುವ ಈ ಪ್ರಕಟಣೆಯು ಸಾಹಸಕ್ಕಾಗಿ, ಗೌರವದ ಉಪಚಾರೋಕ್ತಿಗಳಲ್ಲಿ ನಿಷ್ಕಪಟವಾಗಿಯೂ ಪ್ರೀತಿಪೂರ್ವಕವಾಗಿಯೂ ಶ್ಲಾಘಿಸಿ ಅಭಿನಂದಿಸುವ ನಾಲ್ಕಾರು ಪತ್ರಗಳಿಲ್ಲದೆ (ಕೆಲವು ಕಾಲ) ಒಂದು ವಾರವೂ ಕಳೆಯುವದಿಲ್ಲ*. ಪೂಜ್ಯ ಪ್ರಾಚೀನತೆಯ ಈ ಪವಿತ್ರ ಭೂಮಿಯಲ್ಲಿ ಪಾಶ್ಚಾತ್ಯ ನಾಗರೀಕತೆಯು ಪ್ರವೇಶಮಾಡಿ ಒಂದು ಶತಮಾನದ ಮೇಲೆ ಆಗಿದ್ದು ಕೇವಲ ಭೌತಿಕ ಸುಖದ ಕಡೆ ಜನರ ಮನಸ್ಸು ಅನಿವಾರ್ಯವಾಗಿ ಎಳೆಯುತ್ತಿದ್ದರೂ ಸತ್, ಆನಂದ, ಶಾಂತಿ, ಪ್ರೇಮ, ಭಕ್ತಿ, ಜ್ಞಾನ, ವಿಜ್ಞಾನ (Wisdom) ಧ್ಯಾನ, ಯೋಗ, ಮುಕ್ತಿ-ಇವುಗಳ ಮಹದನುಗ್ರಹದ ಅಮೋಘ ಸಂಪತ್ತಿನಲ್ಲಿ ನಮ್ಮ ಪ್ರಿಯವಾದ ಮಾತೃಭೂಮಿಯು ಶ್ರದ್ಧಾಪೂರ್ಣ ಹಂಬಲವನ್ನು ಇನ್ನೂ ಕಳೆದುಕೊಳ್ಳದೇ ಇರುವದು ನಮ್ಮ ಪುಣ್ಯವೇ ಸರಿ.

ನಮ್ಮೀ ಪ್ರಪಂಚದಲ್ಲಿ, ಇದರ ಇತಿಹಾಸದ ಅತ್ಯಂತ ಗಂಡಾಂತರ ಸಮಯದಲ್ಲಿ ಆಗಾಗ ತೋರಿಕೊಳ್ಳುವ ಮಹಾಪುರುಷರಲ್ಲಿ ತತ್ತ್ವಜ್ಞಾನಿಗಳೂ ಕವಿಗಳೂ ಬೋಧಕರೂ ದಿವ್ಯಾತ್ಮರೂ ಆದ ಸ್ವಾಮಿರಾಮರೂ ಒಬ್ಬರೆಂದು ನನಗೆ ತೋರುತ್ತದೆ. ಅವರು ಖಂಡಿತವಾಗಿಯೂ ಭರತವರ್ಷದ ಅತ್ಯಂತ ಪ್ರಖ್ಯಾತರೂ ಶ್ರೇಷ್ಠರೂ ಆದ ಪುತ್ರರಲ್ಲಿ ಒಬ್ಬರಾಗಿದ್ದು ಅತ್ಯಂತ ಅವಶ್ಯವಾದಾಗ ನಮ್ಮಲ್ಲಿಗೆ ಬಂದರು. ನಮ್ಮಲ್ಲಿ ಆಗಲೇ ಅತಿಯಾಗಿರುವ ಯಾವದೊಂದು ಹೊಸ ಮತವನ್ನಾಗಲೀ ಸಮಾಜವನ್ನಾಗಲೀ ಸ್ಥಾಪಿಸುವದಕ್ಕಾಗಿ ಅಥವಾ ಯಾವ ಹಳೆಯ ಮೃತ ಧರ್ಮವನ್ನು ಅಥವಾ ಪೂಜಾ ಪದ್ಧತಿಯನ್ನು ಉಜ್ಜೀವನ ಮಾಡುವದಕ್ಕಾಗಿ ಇಂಡಿಯಾದ ಇತಿಹಾಸರಂಗದಲ್ಲಿ ಅವರು ತೋರಿಕೊಂಡವರಲ್ಲ ಯಾವ ನೂತನ ಸಿದ್ಧಾಂತವನ್ನಾಗಲೀ ತತ್ತ್ವಶಾಸ್ತ್ರವನ್ನಾಗಲೀ ಪ್ರಸಾರ ಮಾಡುವದಕ್ಕಾಗಿ ಅವರು ಬಂದವರಲ್ಲ. ಯಾವದೊಂದು ಹೊಸ ಸಂಸ್ಥೆಯನ್ನು ಸಂಸ್ಥಾಪಿಸುವದಕ್ಕಾಗಿ ಅಥವಾ ಗುರುನಾನಕ್‌ರಂತೆ ಹಿಂದೂ ಮುಸಲ್ಮಾನರನ್ನು ಕೂಡಿಸುವದಕ್ಕಾಗಿ (ನಿಸ್ಸಂದೇಹವಾಗಿ ಅವಕಾಶವಿದ್ದರೂ) ಅವರು ಬಂದವರಲ್ಲ. ಆದರೆ ಸಂಕುಚಿತ ರಾಷ್ಟ್ರಭಾವನೆಯೂ ಜನಾಂಗ ಭಾವನೆಯೂ

---

*ಈ ಮಾತು ಈ ಕನ್ನಡ ಅನುವಾದಕ್ಕೂ ಅಕ್ಷರಶಃ ಅನ್ವಯಿಸುತ್ತದೆ, ಅಷ್ಟೇ ಅಲ್ಲ, ಈ ಕನ್ನಡ ಅನುವಾದ (ಉಚಿತ) ಧರ್ಮಾರ್ಥ ಸಾಹಿತ್ಯವಾದುದರಿಂದ ಹೆಚ್ಚಾಗಿ ಅನ್ವಯಿಸುತ್ತದೆ. ವಾಚಕ ಭಕ್ತರಿಂದ ನೂರಾರು ಮೆಚ್ಚಿಕೆಯ ಪತ್ರಗಳು ಬಂದಿವೆ.

ಇಲ್ಲದ ಅವರ ಧರ್ಮಪ್ರಸಾರವು ಸಾರ್ವತ್ರಿಕವೂ ಸರ್ವಸಮ್ಮತವೂ ವಿಶ್ವವ್ಯಾಪಿಯೂ (Universal and cosmopolitan) ಆಗಿತ್ತು. ಈ ಕ್ರಿಸ್ತಶಕ ಇಪ್ಪತ್ತನೆಯ ಶತಮಾನದಲ್ಲಿ, ಈ ವಿಜ್ಞಾನ ಯುಗದಲ್ಲಿ, ಐಶ್ವರ್ಯಕ್ಕಾಗಿಯೂ ಕೈಗಾರಿಕಾ ಉದ್ಯೋಗಗಳಿಗಾಗಿಯೂ ಉದ್ವೇಗಪೂರ್ಣ ಭಾವಾಂತರದಿಂದಲೂ ಪ್ರತಿದೃಷ್ಟಿಯಿಂದಲೂ ಸಮಾಜವಾದದಿಂದಲೂ ಬರಿ ಬದುಕಿರುವುದಕ್ಕಾಗಿಯೇ ನಡೆಯುವ ಕದನ ಕಷ್ಟದಿಂದಲೂ ಅವಕ್ಕೆ ಸಂಬಂಧಪಟ್ಟ ಎಲ್ಲಾ ಕೇಡುಗಳಿಂದಲೂ ತುಂಬಿರುವ ಈ ದಿನಗಳಲ್ಲಿ ಇಡೀ ಪ್ರಪಂಚಕ್ಕೂ ವಿಶೇಷವಾಗಿ ಇಂಡಿಯಾದೇಶಕ್ಕೂ ಅತ್ಯಂತ ಶ್ರೇಷ್ಠವೂ ಆದ ಅಧ್ಯಾತ್ಮ ತತ್ತ್ವಗಳನ್ನು ಬೋಧಿಸುವುದೂ ಉಪದೇಶಿಸುವುದೂ ಅವರ ಮಹತ್ತಾದ ಧ್ಯೇಯವೂ ಮಹತ್ವದ ಜೀವನಕಾರ್ಯವೂ ಆಗಿದ್ದವು.

ಈ ಉಪದೇಶವೇ ಅಲ್ಲವೆ, ಈ ಕಾಲದಲ್ಲಿ ನಮಗೆ ಅತ್ಯಂತ ಅವಶ್ಯವಾಗಿರುವುದು ? ಅವರ ಆಧ್ಯಾತ್ಮಿಕ ಸಂದೇಶವೂ ಹೆಚ್ಚು ಉನ್ನತವೂ ಪವಿತ್ರವೂ ಆದ ಜೀವನದ ಉಪದೇಶವೂ ಈ ಸಮಯದಲ್ಲಿ ಅತ್ಯಂತ ಮಹತ್ವದ ಆವಶ್ಯಕತೆಯುಳ್ಳವೆ ?
ಅವರು ಸೂರ್ಯನು ಮುಳುಗುವ ಅಮೆರಿಕಾದಲ್ಲಿಯೂ ಸೂರ್ಯನು ಉದಯವಾಗುವ ಜಪಾನಿನಲ್ಲಿಯೂ ಮಾತೃಭೂಮಿಯಾದ ಭಾರತದಲ್ಲಿಯೂ ಉಪದೇಶಮಾಡಿದರು. ಹೀಗೆ, ವಿಶ್ವ ಜನಾಂಗ ಯೂರೋಪ್ ಜನಾಂಗ, ಕಪ್ಪು ಜನರು-ಬಿಳಿ ಜನರು, ಸ್ತ್ರೀಯರು-ಪುರುಷರು, ವಿದ್ಯಾವಂತರು-ಅವಿದ್ಯಾವಂತರು, ವೃದ್ಧರು-ತರುಣರು, ಧನಿಕರು-ದರಿದ್ರರು ಎಂಬ ಯಾವ ಭೇದವನ್ನೂ ಎಣಿಸದ ಅವರ ಧರ್ಮಪ್ರಸಾರವು ವಿಶ್ವ ವ್ಯಾಪಕವೂ ಸಾರ್ವತ್ರಿಕವೂ ಸರ್ವಸಮ್ಮತವೂ ಆಗಿತ್ತು. ಕ್ರೈಸ್ತಮತದ ಪ್ರಭಾವಕ್ಕೂ ಶಕ್ತಿಗೂ, ಬೆಳೆಯುತ್ತಿರುವ ಇಸ್ಲಾಂಧರ್ಮದ ಪ್ರಗತಿಗೂ ವಿರುದ್ಧವಾಗಿ, ಸೂಕ್ಷ್ಮಾಭಿರುಚಿ-ಸಂಸ್ಕೃತಿಗಳು ಮುಂದುವರಿಯುತ್ತಿರುವ ಪಾಶ್ಚಾತ್ಯದೇಶಗಳಲ್ಲಿ ಸಹ, ಅತಿ ಮಹತ್ವ ಕೊಡುವ ಜಾತಿ, ಮತ, ವರ್ಣ, ಜನಾಂಗ ಮೊದಲಾದ ಯಾವ ಭೇದವನ್ನೂ ಅವರು ಆದರಿಸದೆ, ಸರ್ವ ಸಮಾನತ್ವದಿಂದ ಮಾಡಿದ ಉಪದೇಶವು ತಮ್ಮ ದೇಶಕ್ಕೂ ಬೇರೆ ದೇಶಗಳಿಗೂ ಅಪಾರ ಮಹತ್ವದ್ದೂ ಅತ್ಯಧಿಕ ಪರಿಣಾಮಗರ್ಭಿತವೂ ಆಗಿತ್ತು.

ರಾಮತೀರ್ಥರ ಮುಗ್ಧಗೊಳಿಸುವ ವ್ಯಕ್ತಿತ್ವವು ಆಧ್ಯಾತ್ಮಿಕ ಜಿಜ್ಞಾಸುಗಳಿಗೆ ಮಾತ್ರ ಆಕರ್ಷಕವಾಗಿಲ್ಲ ಅವರು ಸ್ನೇಹವೂ ವಿಶ್ವಾಸವೂ ಪ್ರೀತಿಯೂ ಆದ ದೇಶಭಕ್ತಿಯುಳ್ಳವರೂ ಭಾರತಮಾತೆಯ ನಿಜವಾದ ಪ್ರೇಮಿಗಳೂ ಋಷಿ-ಮುನಿಗಳ, ಸಂನ್ಯಾಸಿ-ಯೋಗಿಗಳ ಮಹಾತ್ಮರ ಮಹಾತಪಸ್ವಿಗಳ, ಮಹಾ ವಿದ್ವಾಂಸರ,

ಹಾಗೆಯೇ ಮಹಾಯೋಧರ, ಮಹಾರಾಜರ–ಮಹಾವೀರರ ಜನ್ಮಭೂಮಿಯಾದ ಭಾರತದ ಯೋಗ್ಯ ಪುತ್ರರೂ ಪವಿತ್ರ ಆರ್ಯಾವರ್ತದ ನಿಷ್ಠಾವಂತ ಸೇವಕರೂ ದೇಶಕ್ಕಾಗಿ ಬಲಿದಾನ ಮಾಡಿದವರೂ ಎಂದು ಮನಸ್ಸಿನ ಮೇಲೆ ಪ್ರಬಲವಾಗಿ ಮುದ್ರೆಯೊತ್ತುತ್ತಾರೆ.

ಅವರು ರಾಷ್ಟ್ರಧರ್ಮವನ್ನು ಸ್ಪಷ್ಟವಾಗಿ ಬೋಧಿಸಿದ್ದಾರೆ. ಮಹತ್ತಾದ ಐತಿಹಾಸಿಕ ಗತಕಾಲದ ಉತ್ತರಾಧಿಕಾರಿಗಳಾಗಿ ನಮ್ಮ ತಾಯ್ನಾಡಿಗೆ ನಾವು ಹೊತ್ತಿರ ಬೇಕಾದ ಮಹತ್ತಾದ ಹೊಣೆಯ ಎಚ್ಚರಿಕೆಯನ್ನು ಅವರ ಸ್ಫೂರ್ತಿಯುಕ್ತ ಭಾಷಣ ಗಳು ನಮ್ಮಲ್ಲಿ ಪ್ರೇರೇಪಿಸುತ್ತವೆ. 1906ರಲ್ಲಿ ಅವರು ಮುಕ್ತರಾದ ಮೇಲೆ, ಅವರ ವಿಷಯದಲ್ಲಿ ಪ್ರಕಟವಾಗಿರುವ ಅನೇಕ ಶ್ಲಾಘನೆಯ ಲೇಖನಗಳಲ್ಲಿ, ಪ್ರಪಂಚ ದಲ್ಲಿದ್ದೂ ಪ್ರಾಪಂಚಿಕರಾಗಿರದಿದ್ದ ಸ್ವಾಮಿ ರಾಮತೀರ್ಥರ ಮಹಾ ನಿಸ್ಸ್ವಾರ್ಥವಾದ ವ್ಯಕ್ತಿತ್ವದ ನೈಜರಾಷ್ಟ್ರಭಕ್ತಿಯ ವೀರಲಕ್ಷಣವನ್ನು ಯಾರೂ ಗಮನಿಸದೆ, ಗೌರವಿಸದೆ ಇರುವದು ಬಹಳ ವಿಲಕ್ಷಣವಾಗಿ ತೋರುತ್ತದೆ ಜಟಿಲವಾದ ಆಧ್ಯಾತ್ಮಿಕ ಸಮಸ್ಯೆಗಳ ಮೇಲೆ ಅವರು ನಿಷ್ಪಕ್ಷಪಾತವಾಗಿ ಬರೆದಂತೆಯೇ ಭಾರತದ ಸ್ವಾತಂತ್ರ್ಯದ ಮೇಲೂ ನಿರ್ಭಯವಾಗಿಯೂ ಧೈರ್ಯವಾಗಿಯೂ ಅವರು ಮಾತನಾಡುತ್ತಿದ್ದರು ಮತ್ತು ಬರೆಯುತ್ತಿದ್ದರು. ಭಾರತದ ಪರವಾಗಿ ಅಮೆರಿಕಾ ಜನರಿಗೆ ಮಾಡಿಕೊಂಡ ಮನವೆಯಲ್ಲಿ ಅವರು ಹೇಳಿರುವಂತೆ, ಅವನತಿಯನ್ನು ಪಡೆದಿರುವ ಮಾತೃಭೂಮಿಯ ಹಿತೋನ್ನತಿ ಸಾಧನೆಗಾಗಿ ಪರರಾಷ್ಟ್ರಗಳೆದುರು ಅವರು ವಾದಿಸುವದರಲ್ಲಿಯಾಗಲೀ, ಶತಮಾನಗಳ ಕಾಲ ಕ್ಷೀಣದಶೆಯನ್ನೂ ಪತನವನ್ನೂ ಹೊಂದಿದ ಮೇಲೆ ಅಯೋಗ್ಯರೂ ಪತನಶೀಲರೂ ಆದ ಭಾರತಮಾತೆಯ ಸಂತತಿಯವರು ಹೇಗೆ ಎಚ್ಚೆತ್ತು, ಎದ್ದು, ಪ್ರಗತಿಯನ್ನು ಸಾಧಿಸಬೇಕೆಂಬದನ್ನು ವಿವರಿಸುವದರಲ್ಲಿಯಾಗಲೀ ಅವರು ತೋರಿಸಿರುವ ಮಹಾಧೈರ್ಯವನ್ನೂ ಸತ್ಯಧರ್ಮಗಳಿಗಾಗಿ ಚಿತ್ರಹಿಂಸೆಯನ್ನು ಸಹಿಸಿ, ಸರ್ವಸ್ವವನ್ನೂ ಬಲಿದಾನಮಾಡುವ ಅವರ ಉತ್ಸಾಹವನ್ನೂ ನಮ್ಮಲ್ಲಿಯ ಬೇರೆ ಉತ್ತಮ ಸಂನ್ಯಾಸಿಗಳಲ್ಲಿಯೂ ಅತ್ಯಂತ ವಿರಳವಾಗಿ ಕಾಣಬಹುದೆಂದರೆ ತಪ್ಪಾಗಲಾರದು. ಅವರು ಅಂಥಾ ಧೀರರೂ ವೀರರೂ ನಿಸ್ಸ್ವಾರ್ಥಿಗಳೂ ಸ್ವಾತಂತ್ರ್ಯ ಪ್ರಿಯರೂ ಆದ ಮಹಾಪುರುಷರಲ್ಲದಿದ್ದರೆ ಅವರೇದೂ ನಮಗೆ ಈಗಿನಷ್ಟು ಗೌರವಾರ್ಹ ಪ್ರಿಯಪೂಜ್ಯವ್ಯಕ್ತಿಯಾಗುತ್ತಿರಲಿಲ್ಲ. ಯಾರು ಭಯಂಕರ ಹುಲಿಗಳ, ಹೆಬ್ಬಾವುಗಳ, ವಿಷಸರ್ಪಗಳ ಮಧ್ಯದಲ್ಲಿಯೇ ವಾಸಿಸುತ್ತಿದ್ದರೂ ಅವುಗಳಿಗೆ ಹೆದರಲಿಲ್ಲವೋ ಯಾರು, ಪಾಳುಬಿದ್ದ, ಶ್ಮಶಾನಸದೃಶವಾದ ಅತ್ಯಂತ ನಿರ್ಜನ ಪ್ರದೇಶ ದಲ್ಲಿಯೂ ಗಹನವಾದ ಪರ್ವತಾರಣ್ಯ ಗುಹೆಗಳಲ್ಲಿಯೂ ಭಯಪಡಲಿಲ್ಲವೋ,

ಹಿಮಾಲಯದಲ್ಲಿ ಅತ್ಯುನ್ನತವಾದ ಸುಮೇರು (ಬಂದರ್ ಪುಚ್ಛ್) ಶೃಂಗವನ್ನು ಏರು ವಾಗ ಒಂದು ಹೆಜ್ಜೆ ಜಾರಿದರೂ ಕ್ಷಣಾರ್ಧದಲ್ಲಿ ಮೃತ್ಯು ಮುಖದಲ್ಲಿಯೇ ಬೀಳುವ ಅತ್ಯಂತ ಸನ್ನಿಹಿತವಾದ ಅಪಾಯದ ಶುಭ ಪ್ರತೀಕ್ಷೆಯಿದ್ದರೂ ಯಾರು ತಮ್ಮ ಗುರಿಯನ್ನು ಮುಟ್ಟುವ ದೃಢ ನಿಶ್ಚಯದಿಂದ ಹಿಮ್ಮೆಟ್ಟಲಿಲ್ಲವೋ ಯಾರು ಪ್ರಚಂಡ ಮೃತ್ಯುವನ್ನು ಜಯಿಸಿದುದರಿಂದ ಜನನ ಮರಣಗಳನ್ನು ಸಮವಾಗಿ ಕಾಣುತ್ತಿದ್ದರೋ ಅಂಥವರು ಎಷ್ಟೇ ಮಹತ್ತಾಗಿಯೂ ಪ್ರಬಲವಾಗಿಯೂ ಪ್ರಚಂಡವಾಗಿಯೂ ಇರಲಿ ಅಂಥಾ ಮಾನವ ಶಕ್ತಿಗೆ ಎಂದಾದರೂ ಅಂಜುವದುಂಟೆ ? ಹೀಗೆ ಅವರು ಪರಿಪೂರ್ಣ ನಿರ್ಭಯರೂ ಸ್ವಾತಂತ್ರ್ಯಪ್ರಿಯರೂ ಜನನ ಮರಣಗಳ ವಿಷಯದಲ್ಲಿ ಸಂಪೂರ್ಣ ನಿರ್ಲಕ್ಷ್ಯ ಭಾವವುಳ್ಳವರೂ ತಮ್ಮ ಭವಿಷ್ಯದ ವಿಚಾರದಲ್ಲಿ ಕೇವಲ ಅನಾಸಕ್ತರೂ ಇದ್ದುದರಿಂದಲೇ ಸರ್ಕಾರದ ಸಂಬಂಧವಾಗಲೀ ಧರ್ಮಸಂಬಂಧ ವಾಗಲೀ ಪೌರೋಹಿತ್ಯ ಸಂಬಂಧವಾಗಲೀ ನಾಗರೀಕತೆಯ ಸಂಬಂಧವಾಗಲೀ ಸತ್ಯ - ಧರ್ಮ–ನ್ಯಾಯಗಳನ್ನು ನಿರ್ಭಯವಾಗಿ ಪ್ರತಿಪಾದಿಸುತ್ತಿದ್ದರು. ಈ ಗುಣವೇ ಅವರ ಮಹಿಮೆಗೆ ಕಾರಣವಾದುದು ; ಇದರಿಂದಲೇ ಅವರು ಈ ಯುಗದಲ್ಲಿ ಕಾಣಿಸಿ ಕೊಂಡ ಯಾವ ಮಹಾತ್ಮರಿಗೂ ಕಡಿಮೆಯವರೆನಿಸಲಿಲ್ಲ. ತಮ್ಮ ಸ್ವಂತ ಮತ್ತು ತಮ್ಮ ಬಂಧು ಬಾಂಧವರ ಸುರಕ್ಷಿತತೆಯನ್ನೂ ಹಿತಾಸಕ್ತಿಗಳನ್ನೂ ಭದ್ರಪಡಿಸಿಕೊಂಡು "ಅತ್ಯಲ್ಪವಾದ ವಿರೋಧವೂ ಪ್ರತಿಭಟನೆಯೂ ಉಳ್ಳ ದಾರಿಯಲ್ಲಿ ಕೆಲಸಮಾಡ ಬೇಕು" ಎಂಬ ಮೂಲತತ್ತ್ವದ ಸುಲಭವೂ ಸುಸೂತ್ರವೂ ಆದ ಉದ್ದೇಶವನ್ನು ಇಟ್ಟುಕೊಂಡು ಪ್ರಾರಂಭಿಸುವ ಅನೇಕ ಉಪದೇಶಕರನ್ನೂ ಬೋಧಕರನ್ನೂ ನಾಯಕ ರನ್ನೂ ಸುಧಾರಕರನ್ನೂ ಅವರು ಮೀರಿ ಅಸಾಧಾರಣ ಮಹಾತ್ಮರಾಗಿ ಬೆಳಗುತ್ತಿರು ವದು ಆ ಮಹಾ ಸದ್ಗುಣಗಳಿಂದಲೇ. ಇದರಿಂದಲೇ ಅವರು ನಿಜವಾದ ಸನ್ಯಾಸಿ ಗಳೂ ಸಾಧುಗಳೂ ಆದುದು. ಕುತ್ಸಿತವಾದ ಲಾಭದ ಆಶೆಯಾಗಲೀ ಕೀರ್ತಿಕಾಮನೆ ಯಾಗಲೀ ನಿಂದೆಯ ಭಯವಾಗಲೀ ಇಲ್ಲದೆ, ಲಕ್ಷಾಧೀಶ–ಕೋಟ್ಯಧೀಶರಾದ ಮಹಾಧನಿಕರ ವಶವರ್ತಿಯಾಗದಿರುವ ಸರಳ ನಗ್ನಸತ್ಯವನ್ನು ಸ್ವಚ್ಛಂದವಾದ ಅಮೆರಿಕೆ ಯಲ್ಲಿಯೂ ಈ ದೇಶದಲ್ಲಿಯೂ ನಿರ್ದಾಕ್ಷಿಣ್ಯವಾಗಿಯೂ ನಿರ್ಭಯವಾಗಿಯೂ ಸ್ಪಷ್ಟವಾಗಿಯೂ ಹೇಳಿದ್ದರಿಂದ ಲೌಕಿಕ ಅಧಿಕಾರ-ಶಕ್ತಿಗಳಿಂದ ಅವರು ಎಷ್ಟು ಉಪದ್ರವವನ್ನೂ ಕಷ್ಟವನ್ನೂ ಅನುಭವಿಸಬೇಕಾಯಿತೆಂಬುದು ಅವರ ಅತಿಶಯಪ್ರೇಮಿ ಗಳಲ್ಲಿಯೂ ಪ್ರಶಂಸಕರಲ್ಲಿಯೂ ಅನೇಕರಿಗೆ ತಿಳಿಯದು. ಸಮಯಸಾಧಕ ರಾಜಕೀಯ ಕಾರ್ಯಕೌಶಲದಿಂದ ಸುಳ್ಳು ಮರೆಗುಕೊಡದೆ ಯಥಾರ್ಥವಾದ ಸರಳ ಸತ್ಯವನ್ನು ನಿರ್ಲಕ್ಷ್ಯವಾಗಿ ಹೇಳುವ ಮಹಾವೀರರಾದುದರಿಂದಲೇ ಅವರು ಸಂಸ್ಥೆಗಳನ್ನೂ ಸರ್ಕಾರಗಳನ್ನೂ ನಾಗರಿಕತೆಗಳನ್ನೂ ಸಂಪ್ರದಾಯಗಳನ್ನೂ 'ಫ್ಯಾಷನ್'ಗಳನ್ನೂ

ಪೌರೋಹಿತ್ಯವನ್ನೂ ಕಪಟಸುಧಾರಕರನ್ನೂ ಹೇಡಿಗಳಾದ ನಾಯಕರನ್ನೂ ಟೀಕಿಸುವ ದರಲ್ಲಿಯೂ ತಿರಸ್ಕರಿಸುವದರಲ್ಲಿಯೂ ಸತ್ತ್ವಯುತವಾದ ಪರಿಣಾಮವಿದೆ.

ಈಚಿನ ಅಂದಾಜು ಲೆಕ್ಕದಂತೆ ಈ ದೇಶದಲ್ಲಿರುವ ಐವತ್ತೆರಡು ಲಕ್ಷ ಸಾಧುಗಳಿಗೆ ಸ್ವಾಮಿ ರಾಮತೀರ್ಥರು ಸಂನ್ಯಾಸಧರ್ಮದ ನಿಜವಾದ ಆದರ್ಶವನ್ನು ತಮ್ಮ ಸ್ವಂತ ಜೀವನದ ಉನ್ನತವಾದ ನಿದರ್ಶನದಿಂದ ಎದುರಿಗಿಟ್ಟು ತೋರಿಸಿ, ಮಾತೃಭೂಮಿಗೆ ಮಹತ್ತಾದ ಸೇವೆಯನ್ನು ಸಲ್ಲಿಸಿದ್ದಾರೆ. ಸಂನ್ಯಾಸವೆಂದರೆ ಕೇವಲ ನಿಷ್ಕ್ರಿಯವಾಗಿ ಏಕಾಂತವಾದ ಮರೆಯಲ್ಲಿ ಅಡಗಿಕೊಂಡು ದೇಹದಂಡನೆಯನ್ನೂ ತಪಶ್ಚರ್ಯವನ್ನೂ ಮಾಡುವದೇ ಆಗಿದೆ-ಎಂಬ ತಪ್ಪಾದ ಮತ್ತು ಹಾನಿಕರವಾದ ತಿಳಿವಳಿಕೆಯ ನಿರರ್ಥಕತೆಯನ್ನೂ ಹಾಸ್ಯಾಸ್ಪದವಾದ ಹುಚ್ಚುತನವನ್ನೂ ಅವರು ತಮ್ಮ ಜೀವನದಿಂದಲೂ ಉಪದೇಶಗಳಿಂದಲೂ ತೋರಿಸಿಕೊಟ್ಟಿದ್ದಾರೆ. ಅವರು ಜೊತೆಯ ಜನರಲ್ಲಿ ಸಂಕೋಚವಿಲ್ಲದೆ ಸರಳವಾಗಿ ಜೀವಿಸಿ ವ್ಯವಹರಿಸಿದರು ; ಅವರು ಅತ್ಯಂತವಾಗಿ ಮುಂದುವರಿದು ನಾಗರಿಕವಾದ ದೇಶಗಳಲ್ಲಿ ದೂರವಾಗಿಯೂ ವಿಸ್ತಾರವಾಗಿಯೂ ಸಂಚಾರಮಾಡಿದರು , ಒಳ್ಳೆಯ ಮನೋಭಾವದಿಂದ ತಮ್ಮ ಸಮೀಪಕ್ಕೆಬಂದ ಎಲ್ಲರೊಡನೆಯೂ ಅವರು ವಿಚಾರಮಾಡಿ, ಚರ್ಚಿಸಿ, ಬೋಧಿಸಿದರು; ಅವರು ಉಪನ್ಯಾಸಮಾಡಿದರು ; ಬರೆದರು. ಗೃಹಸ್ಥಜೀವನ, ಮಾಂಸಾಹಾರ ಮೊದಲಾದ ವಿಷಯಗಳನ್ನೂ ವಿಚಾರಮಾಡಿದರು ; ಬಿಡುವಿಲ್ಲದೆ ನಡೆಸಿದ ಈ ಕಾರ್ಯಗಳಿಂದ ಅವರು ಸಂನ್ಯಾಸವೆಂದರೆ ಜನರನ್ನು ಬಿಟ್ಟು, ದೂರಹೋಗಿ, ಕೆಲಸವಿಲ್ಲದೆ, ಮೂಲೆಯಲ್ಲಿ ತನ್ನಷ್ಟಕ್ಕೆ ತಾನು ಆರಾಮವಾಗಿ ಕುಳಿತಿರುವದಲ್ಲವೆಂಬದನ್ನು ತೋರಿಸಿ, ವೇದಾಂತವೆಂದರೆ ಮಾನವನ ನಿತ್ಯಜೀವನದ ಅತ್ಯಂತ ತೊಡಕಾದ ವ್ಯಾಪಾರಗಳಿಗೂ ಆಧುನಿಕ ನಾಗರಿಕತೆಯ ನವನೂತನ ಸಮಸ್ಯೆಗಳಿಗೂ ಉಪಯೋಗಿಸಿಕೊಳ್ಳಬಹುದಾದ ವ್ಯವಹಾರಸಾಧ್ಯವಾದ ತತ್ತ್ವಶಾಸ್ತ್ರವೆಂಬದನ್ನು ಸ್ಥಾಪಿಸಿದರು. ಅವರು ಅನ್ನಪಾನಾದಿಗಳಲ್ಲಿ ಅತಿಮಿತವಾದ ಸರಳ ಜೀವನವನ್ನು ನಡೆಸಿದರೂ ಸ್ವಲ್ಪವೂ ಬಿಡುವಿಲ್ಲದೆ ದುಡಿಯುವ ಕ್ರಿಯಾಶೀಲ ಜೀವನದಿಂದ ನಮ್ಮ ಎಲ್ಲಾ ಸಂನ್ಯಾಸಿಗಳಿಗೂ ಯೋಗ್ಯವಾದ ದಾರಿಯನ್ನೂ ಜೀವನಕ್ರಮವನ್ನೂ ತೋರಿಸಿದ್ದಾರೆ. ಆಲೋಚನೆಮಾಡಿ ಆರಿಸಿಕೊಳ್ಳದೆ, ಕೂಡಲೇ ಸ್ಮರಿಸಬಹುದಾದರೆ ಶ್ರೀ ರಾಮಕೃಷ್ಣ ಪರಮಹಂಸರು, ವಿವೇಕಾನಂದರು, ಸ್ವಾಮಿ ರಾಮತೀರ್ಥರು, ಅವರ ಮುಖ್ಯ ಶಿಷ್ಯರಾದ ಸ್ವಾಮಿ ನಾರಾಯಣರು, ಬಾಲಬ್ರಹ್ಮಚಾರಿ ದಯಾನಂದ ಸರಸ್ವತಿಗಳು ಇವರೇ ಮೊದಲಾದ ಕೆಲವು ಮಹಾತ್ಮರ ಆದರ್ಶವಾದ ದಿವ್ಯಜೀವನದಲ್ಲಿ ನಿದರ್ಶನವಾದ, ವೇದಾಂತದ ಅತ್ಯಂತ

ಉನ್ನತವಾದ ಬೋಧೆಗಳನ್ನು ನಮ್ಮ ಸಾಧು ಸಂತರಲ್ಲಿ (ಒಳ್ಳೆಯ ಉದ್ದೇಶವುಳ್ಳವರಾದರೂ ಒಳ್ಳೆಯ ನಿರ್ದೇಶನವಿಲ್ಲದ) ಕೆಲವು ಲಕ್ಷ ಸಜ್ಜನರಾದರೂ ತಮ್ಮ ವಾಸ್ತವವಾದ ಜೀವನದಲ್ಲಿ ಶ್ರದ್ಧಾದರಗಳಿಂದ ಸಾಧಿಸಿ ಅನುಭವದಲ್ಲಿ ತಂದುಕೊಂಡರೆ ನಮ್ಮ ಭಾರತದ ಭಾವೀ ಜೀವನದಲ್ಲಿ ಎಂಥಾ ಪ್ರಾಮುಖ್ಯವೂ ಪ್ರಬಲವೂ ಆದ ಪರಿಣಾಮವಾಗಬಹುದು! ಅದೆಂಥ ಮಹತ್ತರವಾದ ಸುಧಾರಣೆಯಾಗಬಹುದು! ಭಾರತೀಯ ಜೀವನದ ಸ್ಥಿತಿಗತಿಗಳಲ್ಲಿ ಓ! ಅದೆಂಥಾ ಆಶ್ಚರ್ಯಕರವಾದ ಕ್ರಾಂತಿಯಾಗಬಹುದು! ಇವರೆಲ್ಲರೂ ಉದ್ಯೋಗಶೀಲತೆಯ ಮತ್ತು ಪ್ರಾಮಾಣಿಕ ಕಾರ್ಯದ ಘನತೆಗೌರವಗಳನ್ನು ಬೆಳೆಸಿದ್ದಾರೆ; ಮತ್ತು ಸಂನ್ಯಾಸದ ನಿಜವಾದ ಮನೋಭಾವಕ್ಕೆ—ಅನಾಸಕ್ತವಾದರೂ—ಕಾರ್ಯಚಟುವಟಿಕೆಯಿಂದ ತುಂಬಿದ ಶ್ರಮಪೂರಿತವಾದ ಜೀವನವೂ ಹೋರಾಟವೂ ಅಸಂಗತವೂ ಅವಮಾನಕರವೂ ಅಲ್ಲವೆಂದು ತೋರಿಸಿದ್ದಾರೆ. ಕೇವಲ ಯೌವನದ ಭರದಲ್ಲಿಯೂ ಆಶಾದಾಯಕವಾದ ಪ್ರಾಪಂಚಿಕ ಜೀವನವೃತ್ತಿಯ ಪ್ರಾರಂಭದಲ್ಲಿಯೂ (ಎಷ್ಟೋ ಜನರ ಜೀವನ ಪಥದಲ್ಲಿ ದೊಡ್ಡ ಪ್ರತಿಬಂಧಕಗಳಾಗಿಯೂ ಪ್ರಲೋಭನಗಳಾಗಿಯೂ ಪರೀಕ್ಷೆಗಳಾಗಿಯೂ ಪರಿಣಮಿಸುವ ಇವುಗಳಿಗೆ ವಶವಾಗದೆ) ಪ್ರಾಪಂಚಿಕವಾದ ಎಲ್ಲಾ ಪ್ರತೀಕ್ಷೆಗಳನ್ನೂ ಎಲ್ಲಾ ಸಂಬಂಧಗಳನ್ನೂ ಸಂಪರ್ಕಗಳನ್ನೂ ಸಾವಧಾನವಾಗಿ ಯೋಚಿಸಿ, ಬುದ್ಧಿಪೂರ್ವಕವಾಗಿ ತ್ಯಾಗಮಾಡಿದ ನಿಸ್ಸ್ವಾರ್ಥತೆಯ ಶೌರ್ಯವು ಸ್ವದ ಮತ್ತು ಮಾತೃಭೂಮಿಯ ಅತ್ಯವಶ್ಯಕವಾದ ಸೇವೆಯು (ಇದುವರೆಗಿರುವ ಎಷ್ಟೋ ಉದಾಹರಣೆಯ ಜೊತೆಗೆ) ಹೆಚ್ಚಿನ ಮಹತ್ವದ ಉದಾಹರಣೆಯಾಗಿದೆ.

ಆತ್ಮಬಲಿದಾನ (ಸ್ವಾರ್ಥತ್ಯಾಗ) ಮತ್ತು ತ್ಯಾಗಧರ್ಮದ ಅತ್ಯಂತ ಉನ್ನತವಾದ ಉದಾಹರಣೆಯೇ ಸ್ವಾಮಿ ರಾಮರಾಗಿದ್ದಾರೆ.

ಆದರೆ, ಸಂನ್ಯಾಸಿಗಳಾಗಿ ಮಾತ್ರವೇ ಅವರು ಉತ್ತಮ ಉದಾಹರಣೆಯಾಗಿ ಭಾರತದ ಉನ್ನತ ಸೇವೆಯನ್ನು ಸಲ್ಲಿಸಿದರೆಂದಲ್ಲ ಅವರು ತಮ್ಮ ಗುರುಗಳಿಗೆ ಬರೆದಿರುವ ಪತ್ರಗಳ ಪ್ರಕಟಣೆಯಿಂದ ಇತ್ತೀಚೆಗೆ ಬೆಳಕು ಚೆಲ್ಲಿರುವ ಅವರ ವಿದ್ಯಾರ್ಥಿ ಜೀವನವು ಸಹ ನಮ್ಮ ವಿದ್ಯಾರ್ಥಿಗಳಿಗೂ ತರುಣರಿಗೂ ಮಾರ್ಗದರ್ಶಕವಾಗಿ ಅವರ ಅನೇಕ ಸಂಕಷ್ಟಗಳನ್ನೂ ಸಮಸ್ಯೆಗಳನ್ನೂ ಪರಿಹರಿಸುವದಾಗಿದೆ ಹೇಗಾದರೂ ಆಗಲಿ, ಈಗ ಈ ಬಡದೇಶದಲ್ಲಿ ನಮ್ಮ ಬಡ ವಿದ್ಯಾರ್ಥಿಗಳು ತಮ್ಮ ಬಡತನಕ್ಕೆ ಭಯಪಡದೆ, ಅವರ ಕಷ್ಟಗಳನ್ನು ಹೇಗೆ ಎದುರಿಸಬಹುದೆಂಬುದನ್ನು ಅವರ ಸ್ಕೂಲ್—ಕಾಲೇಜುಗಳ ಜೀವನ ವರ್ತನಗಳಿಂದ ಅವರು ತೋರಿಸಿಕೊಟ್ಟಿದ್ದಾರೆ,

ಅವರ ಭಯಭಕ್ತಿಗಳೂ ವಿಧೇಯತೆಯೂ ಅವರ ಲಜ್ಜಾಶೀಲತೆಯೂ (ಹ್ರೀಃ) ವಿನಯವೂ ಜೊತೆ ವಿದ್ಯಾರ್ಥಿಗಳಲ್ಲಿ ಅವರ ಸಹಾನುಭೂತಿಯೂ ಎಂಥಾ ಪರೀಕ್ಷಾ ಸಂದರ್ಭದಲ್ಲಿಯೂ ಅಚಲವಾದ ಅವರ ಸಮಾಧಾನವೂ ಮನಶ್ಶಾಂತಿಯೂ, ಸತತ ವಾಗಿ ಅನಾರೋಗ್ಯವಿದ್ದರೂ ಅವರ ಪ್ರಯೋಗಶೀಲತೆಯು ಮತ್ತು ಉದ್ಯೋಗ ಪ್ರಿಯತೆಯು ಅಭ್ಯಾಸವೂ ಅವರ ಸ್ವಾಭಿಮಾನವೂ, ಅವರ ಆದರದ ಅತಿಥಿ ಸತ್ಕಾರೋತ್ಸಾಹವೂ, ಸಂನ್ಯಾಸಸ್ವೀಕಾರಕ್ಕೆ ಮುಂಚೆಯೇ ಅವರು ಉತ್ತಮ ಉಪ ನ್ಯಾಸಕರೆಂಬ ಜನಪ್ರಿಯತೆಯೂ ಕೀರ್ತಿಯೂ, ನಾಳೆಗೇನೆಂಬ ಚಿಂತೆಯಿಲ್ಲದ ಅವರ ನಿರ್ಲಕ್ಷ್ಯತೆಯೂ ಅವರ ನೂರಾರು (1100) ಪತ್ರಗಳ ವಾಚನದಿಂದ ವ್ಯಕ್ತವಾಗುವ ಕೆಲವು ಅಸಾಧಾರಣ ಗುಣಗಳು.

ಅವರನ್ನು ಅತಿಶಯವಾಗಿ ಮೆಚ್ಚಿಕೊಂಡಿರುವವರೂ ಪ್ರೀತಿಸುವವರೂ ಎಷ್ಟು ಹೆಚ್ಚು ಸಂಖ್ಯೆಯಿಂದ ಭಾರತದಲ್ಲೆಲ್ಲಾ ವ್ಯಾಪಿಸಿದ್ದಾರೆಂಬದನ್ನೂ ಈ ಪ್ರಪಂಚದಲ್ಲಿ ಅವರು ಬದುಕಿದ್ದ ಅಲ್ಪಕಾಲದಲ್ಲಿ, ಅವರು ಒಮ್ಮೆಯೂ ಸಂದರ್ಶನ ವೀಯದಿದ್ದ ನಮ್ಮ ದೇಶದ ಹಲವು ಭಾಗಗಳಲ್ಲಿ ಕೂಡ ಜನರ ಮೇಲೆ ಅವರು ಎಷ್ಟು ಡಂಭವೂ ಆಡಂಬರವೂ ಇಲ್ಲದ ದಿವ್ಯ ಪ್ರಭಾವವನ್ನು ಬೀರಿದ್ದಾರೆಂಬುದನ್ನೂ ತಿಳಿದರೆ ಮಹದಾಶ್ಚರ್ಯವಾಗುತ್ತದೆ. ಅವರ ಉಪನ್ಯಾಸಗಳನ್ನೂ ಲೇಖನಗಳನ್ನೂ ಒಳಗೊಂಡಿರುವ ಈ ಕೃತಿಗಳು ಈಗಾಗಲೇ ಗುಜರಾತಿ, ಮರಾಠಿ, ಹಿಂದಿ, ತಮಿಳು ಮೊದಲಾದ ಪ್ರಾದೇಶಿಕ ಭಾಷೆಗಳಲ್ಲಿ ಪರಿವರ್ತನೆಯನ್ನು ಹೊಂದಿ ಹೆಚ್ಚು ಹೆಚ್ಚಾಗಿ ಪ್ರಚಾರವಾಗುತ್ತಿವೆ. ಸ್ವತಃ ಸ್ವಾಮಿ ನಾರಾಯಣರಿಂದಲೇ ಉರ್ದು ಭಾಷಾಂತರ ವಾಗಿದೆ.

ಈ ಮೇಲಿನ ಎಲ್ಲಾ ವಿಚಾರಗಳಿಂದಲೂ ಸ್ವಾಮಿ ರಾಮರು, ಆಯುಷ್ಯವು ತೀರುವದಕ್ಕೆ ಮುಂಚೆಯೇ ಎನ್ನುವಂತೆ, ಆಕಸ್ಮಿಕವಾಗಿ ನಮ್ಮನ್ನು ಬಿಟ್ಟು ಹೋಗದಿದ್ದರೆ ಎಷ್ಟು ಪ್ರಭಾವವನ್ನು ಬೀರಬಹುದಾಗಿತ್ತೋ ಅದಕ್ಕಿಂತಲೂ ಹೆಚ್ಚು ಪ್ರಾಮುಖ್ಯವೂ ಶಕ್ತಿಯುತವೂ ವ್ಯಾಪಕವೂ ಸ್ಥಿರವೂ ಆದ ಪ್ರಭಾವವನ್ನು ನಮ್ಮ ದೇಶದ ಭಾವೀ ಜೀವನಗತಿಯ ಮೇಲೆ ಈಗಲೇ ಬೀರಿದ್ದಾರೆಂಬದು ಸ್ಪಷ್ಟವಾಗುತ್ತದೆ. ಅವರು ಈಗ ಸದೇಹಿಗಳಾಗಿ ರಕ್ತಮಾಂಸಗಳಲ್ಲಿ ಇಲ್ಲದಿರುವದರಿಂದಲೇ ಅವರ ಬೆಲೆಯನ್ನು ಪ್ರಾಯಶಃ ಹೆಚ್ಚಾಗಿ ಅರಿತು ಅರ್ಥಮಾಡಿಕೊಳ್ಳಬಹುದು. ರಾಮರ ಉಪದೇಶಗಳನ್ನು ಒಟ್ಟುಗೂಡಿ ಅಭ್ಯಾಸಮಾಡುವದಕ್ಕಾಗಿಯೂ ಚರ್ಚಿಸಿ ಪರಸ್ಪರ ಅಭಿಪ್ರಾಯಗಳನ್ನು ವಿನಿಮಯಮಾಡಿಕೊಳ್ಳುವದಕ್ಕಾಗಿಯೂ ದೇಶದ ಆದ್ಯಂತವಾಗಿ

ಎಲ್ಲೆಡೆಗಳಲ್ಲಿ ಅವರ ಬೋಧೆಗಳನ್ನು ವಿವರಿಸಿ ಪ್ರಸಾರ ಮಾಡುವದಕ್ಕೆ ಯಾವ ಕ್ರಮವನ್ನು ಅನುಸರಿಸಬೇಕೆಂಬದನ್ನು ವಿಚಾರಿಸಿ ನಿರ್ಣಯಿಸುವದಕ್ಕಾಗಿಯೂ ವರ್ಷಕ್ಕೆ ಒಂದು ಸಲ, ಸಾಧ್ಯವಾದರೆ ಅಥವಾ ಅನುಕೂಲವಾದರೆ, ರಾಮರ ಜನ್ಮ ದಿನದಲ್ಲಿಯೋ ಅಥವಾ ನಿರ್ಯಾಣ ದಿನದಲ್ಲಿಯೋ ಯಾವದಾದರೂ ಕೇಂದ್ರಸ್ಥಳವಾದ ದೆಹಲಿಯಂಥ ನಗರದಲ್ಲಿಯೋ ಅಥವಾ ಬೇರೆ ಬೇರೆ ಸಹೋದರ ಭಕ್ತರಿಂದ ಆಹ್ವಾನಿತ ರಾಗಿ ಸರದಿಯಿಂದ ಬೇರೆ ಬೇರೆ ಸ್ಥಳಗಳಲ್ಲಿಯೋ ಅವರ ಎಲ್ಲಾ ಸಾಚಾ ಮತ್ತು ನಿಷ್ಠಾವಂತ ಅನುರಾಗಿಗಳೂ ಪ್ರಶಂಸಕರೂ ಭಕ್ತರೂ ಸೇರಿ ಅಧ್ಯಾತ್ಮಸಭೆಯನ್ನು ನಡೆಸಬಹುದೆಂದು ಸೂಚಿಸುವದು ಅಪ್ರಾಸಂಗಿಕವಾಗಲಾರದು.

ಈ ಪ್ರಕಟಣೆಯ ಮಹಾಸಾಹಸದಲ್ಲಿ ಮಹತ್ವಾದ ಮತ್ತು ಅಮೂಲ್ಯವಾದ ಸಹಾಯಮಾಡಿರುವ ಸಕಲ ಮಹನೀಯರಿಗೂ ಅತ್ಯಂತ ಅಭಿನಂದನೆಗಳನ್ನು ಸಲ್ಲಿಸ ಬೇಕಾಗಿದೆ. ಸ್ವಾಮಿ ನಾರಾಯಣರು ಮೊದಲಿಂದ ತುದಿಯವರೆಗೂ ಮಾರ್ಗ ದರ್ಶಿಗಳೂ ಸಹಾಯಕರೂ ಆಗಿದ್ದಾರೆ. ಅವರ ಸಹಾಯವಿಲ್ಲದಿದ್ದಿದ್ದರೆ ಈ ಸೇವಾಕಾರ್ಯವಾಗುತ್ತಿರಲಿಲ್ಲ. ಕೆಲವರು ಗುಣದೋಷ ವಿಮರ್ಶೆಯಿಂದಲೂ ಅಮೂಲ್ಯವಾದ ಸೂಚನೆಗಳಿಂದಲೂ ಕೆಲವರು ಭಾಷೆಯಲ್ಲಿ ಅವಶ್ಯವಾದ ಸುಧಾರಣೆ ಗಳನ್ನು ಮಾಡುವದರಿಂದಲೂ ಕೆಲವರು ಮೂಲ ಹಸ್ತಲಿಖಿತಗಳಿಂದ ನಕಲು ಮಾಡುವದರಲ್ಲಿಯೂ ಟೈಪ್‌ಮಾಡುವದರಲ್ಲಿಯೂ ಅಚ್ಚಿನ ಕರಡುಗಳನ್ನು ತಿದ್ದುವಾಗ ಮೂಲ ಲೇಖನಗಳಿಂದ ಓದಿ ಹೇಳುವದರಲ್ಲಿ ಕೆಲವರೂ ..ಸಹಾಯ ಮಾಡಿದ್ದಾರೆ........ .

ಅವರೆಲ್ಲರ ಮೇಲೂ ರಾಮರ ಅನುಗ್ರಹವಾಗಲಿ. ರಾಮರ ದಿವ್ಯವೂ ಉನ್ನತಿ ಕರವೂ ಆದ ಉದಾಹರಣೆಯನ್ನು ಅನುಸರಿಸಿ ಸತ್ಯ-ಧರ್ಮ-ನ್ಯಾಯಗಳ ತ್ರಿಶೂಲವನ್ನು (ಶಿಲುಬೆಯನ್ನು) ಹೊತ್ತು ನಡೆಯುವ ಭಾಗ್ಯವು ಅನೇಕರಿಗೆ ಒದಗಲಿ !

.... .... ........

ದೆಹಲಿ (ಡೆಲ್ಲಿ)
26-4-1913

ಅಮೀರ್‌ಚಂದ್.

# ಸ್ವಾಮಿ ರಾಮತೀರ್ಥ

ಸ್ವಾಮಿ ರಾಮರ ಜೀವನವು ವಿಶ್ವಪ್ರೇಮವನ್ನೂ ವಿಶ್ವಶಾಂತಿಯನ್ನೂ ಬೋಧಿಸುವ ದಿವ್ಯಗಾನದಂತೆ ಇದೆ ಮಹಿಮಾಪೂರ್ಣವಾದ ಉಪನಿಷತ್ತುಗಳಿಂದ ಉದಿಸಿರುವ ಪವಿತ್ರ ಜ್ಞಾನಗಂಗೆಯಂತೆಯೇ ಆ ಜೀವನವಾದರೂ ಇದೆ. ಅದು ಮಾನವನನ್ನು ಅಪಸ್ವರದಿಂದ ಸುಸ್ವರಕ್ಕೂ ವೈಷಮ್ಯದಿಂದ ಸಾಮ್ಯಕ್ಕೂ ಸಮತೆಗೂ ಭೇದದಿಂದ ಅಭೇದಕ್ಕೂ ಏಕತ್ವಕ್ಕೂ ಅಹಂಕಾರದಿಂದ ಆತ್ಮಕ್ಕೂ ಸರ್ವಾತ್ಮಕ್ಕೂ ಸಾಗಲು ಮನ ಒಲಿಸುತ್ತದೆ. ಅವರು ಮನುಷ್ಯನನ್ನು ದ್ವೇಷದಿಂದ ಅನುರಾಗಕ್ಕೂ ಯುದ್ಧದಿಂದ ಶಾಂತಿಗೂ ಹಿಂದಿರುಗಲು ಕರೆಯಿತ್ತರು. ಅವರಿಂದ ಎಲ್ಲರಿಗೂ ಹಿತೇಚ್ಛೆಯೂ ಪ್ರೀತಿ-ವಿಶ್ವಾಸ–ಉದಾರ ಭಾವನೆಗಳೂ ಪ್ರವಹಿಸಿದವು. ಅವರು ಮನುಷ್ಯನ ಮತ್ತು ಪ್ರಕೃತಿಯ ಅಂತರಂಗದ ಕವಿಗಳಾಗಿದ್ದರು. ಅವರಿಗೆ ಸಮಸ್ತ ಮಾನವರೂ ಪ್ರಾಣಿಗಳೂ ಪದಾರ್ಥಗಳೂ ದೇವರಾಗಿದ್ದವು. 'ಅಹಂ ಬ್ರಹ್ಮಾಸ್ಮಿ' 'ನಾನೇ ದೇವರು' ಎಂಬ ದಿವ್ಯವಾದ ಬಂಗಾರದ ದೇಹದ (ಭಂಗಹರದೇಹದ) ಈ ಪರಮ ಹಂಸವು 'ತತ್ತ್ವಮಸಿ' 'ಅದೇ ನೀನು' ಮತ್ತು 'ಸರ್ವಂ ಖಲ್ವಿದಂ ಬ್ರಹ್ಮ' 'ಈ ಎಲ್ಲವೂ ಬ್ರಹ್ಮವೇ' ಎಂಬ ಎರಡು ಸುವರ್ಣ ಪಕ್ಷಗಳ ಸಮ ತೋಲನ (ಯೋಗ)ದಿಂದ ತನ್ನ ಜೀವನದ ಪ್ರತಿಯೊಂದು ನಿಮಿಷದಲ್ಲಿಯೂ ಹಾರುತ್ತಾ ಅನಂತವಾದ ಚಿದಾಕಾಶದಲ್ಲಿ ಏರುತ್ತಾ ಏರುತ್ತಾ ವಿಲೀನವಾಯಿತು.

ಸ್ವಾಮಿ ರಾಮತೀರ್ಥರ ಮೊದಲ ಹೆಸರು ತೀರ್ಥರಾಮ ಎಂದಿತ್ತು. ಅವರು ಗೃಹಸ್ಥರಾಗಿದ್ದಾಗ ಅವರಿಗೆ ಗೋಸಾಯಿ ತೀರ್ಥರಾಮ ಎಂಬ ಹೆಸರಿತ್ತು. ಅವರು ದೀಪಾವಳಿಯಾದ ಮರುದಿನ ಬುಧವಾರ ತಾ॥ 22–10–1873 ಪಂಜಾಬ್ ದೇಶದ ಗುಜರನ್‌ವಾಲಾ ಜಿಲ್ಲೆಯಲ್ಲಿ ಮುರಳೀವಾಲಾ ಎಂಬ ಹಳ್ಳಿಯಲ್ಲಿ ಬಡ ಬ್ರಾಹ್ಮಣ ಕುಟುಂಬದಲ್ಲಿ ಹೀರಾನಂದ ಗೋಸ್ವಾಮಿಯವರಿಗೆ ಪುತ್ರನಾಗಿ ಜನಿಸಿದರು. ಮುರಳೀವಾಲದ ಗೋಸ್ವಾಮಿ ಬ್ರಾಹ್ಮಣರು,ಹಿಂದೀ ಭಾಷೆಯ ತುಳಸೀರಾಮಾಯಣದ ಪ್ರಸಿದ್ಧ ಕರ್ತೃಗಳಾದ ಗೋಸ್ವಾಮಿ ತುಳಸೀದಾಸರ ವಂಶಸ್ಥರಲ್ಲಿ ದೂರದ ಸಂತತಿ ಯವರೆಂದು ತಿಳಿದು ಬರುತ್ತದೆ. ಅವರ ತಂದೆಯವರಾದ ಗೋಸ್ವಾಮಿ ಹೀರಾನಂದರು ಆಗಾಗ ಪೆಷಾವರ್ ಮತ್ತು ಸ್ವತ್ ಪ್ರಾಂತ್ಯಗಳ ಧಾರ್ಮಿಕ ಪ್ರವಾಸದಿಂದ

ಪಡೆಯುತ್ತಿದ್ದ ಸಂಪಾದನೆಯಲ್ಲದೆ ಅವರ ಜೀವನಕ್ಕೆ ಬೇರೆ ಆಧಾರವಿರಲಿಲ್ಲ. ಅವರು ಪಂಜಾಬ್‌ದೇಶದ (ಭಾರತದ) ವಾಯುವ್ಯ ಗಡಿನಾಡಿನ ಹಿಂದೂ ಜನಗಳ ಕುಲ ಗುರುಗಳಾಗಿದ್ದರು. ಹೀರಾನಂದರು ಕಾಲಕಾಲಕ್ಕೆ ತಮ್ಮ ಶಿಷ್ಯರಲ್ಲಿಗೆ ಪೌರೋಹಿತ್ಯನಿಮಿತ್ತವಾಗಿ ಸಂಚಾರ ಹೋಗಬೇಕಾಗುತ್ತಿದ್ದಿತು. ಸ್ವಾಮಿ ರಾಮರು ಅಥವಾ ತೀರ್ಥರಾಮರು ಜನನವಾದ ಕೆಲವು ದಿನಗಳಲ್ಲಿಯೇ ಅವರ ತಾಯಿಯು ಸ್ವರ್ಗಸ್ಥರಾದರು. ಆದ್ದರಿಂದ ಆಕಳ ಹಾಲಿನಿಂದಲೇ ಅವರನ್ನು ಸಾಕಿದರು. ಅವರು ಪಂಜಾಬಿಯಾದರೂ ಮುಂದೆ ಅವರ ಮುಖ್ಯವಾದ ಆಹಾರವು ಅನ್ನ (ಅಕ್ಕಿ), ಹಾಲು ಆಗಿದ್ದಿತು. ಹಾಲು ಅವರಿಗೆ ಅತಿಶಯ ಪ್ರಿಯವಾದ ಆಹಾರವಾಗಿದ್ದಿತು. ಅವರು ದೊಡ್ಡವರಾದ ಮೇಲೆ ಒಂದೊಂದು ಸಲ ಐದು ಸೇರು ಹಾಲನ್ನಾದರೂ ಕುಡಿಯುತ್ತಿದ್ದರು. ಅವರು ಮಗುವಿನಿಂದಲೂ ಬಹಳ ಸೂಕ್ಷ್ಮಬುದ್ಧಿಯುಳ್ಳವರೂ ಏಕಾಂತಪ್ರಿಯರೂ ಧ್ಯಾನಶೀಲರೂ ಆಗಿದ್ದರು.

ಅವರು ಐದನೇ ವಯಸ್ಸಿನಲ್ಲಿ ಪ್ರೈಮರಿ ಸ್ಕೂಲಿಗೆ ಸೇರಿಸಲ್ಪಟ್ಟರು. ಅವರ ಬಾಲ್ಯ–ಕೌಮಾರಾವಸ್ಥೆಗಳು ಕಠಿಣತರವಾದ ವಿದ್ಯಾಭ್ಯಾಸದಲ್ಲಿ ಕಳೆಯಿತು. ಅವರು ಮೇಲುಮೇಲಿನ ತರಗತಿಗಳಿಗೆ ಉತ್ತೀರ್ಣರಾಗಿ ಹೋದಾಗ, ಬಡವರಾದ ಅವರ ತಂದೆಯವರಿಗೆ ಅವರನ್ನು ಓದಿಸಲು ಸಾಧ್ಯವಾಗಲಿಲ್ಲ. ಆದ್ದರಿಂದ ಅವರು ವಿದ್ಯಾರ್ಥಿಗಳಾಗಿದ್ದಾಗ ಅತ್ಯಂತ ದಾರಿದ್ರ್ಯದಲ್ಲಿ ಕಷ್ಟಪಡಬೇಕಾಯಿತು. ಅಗ್ಗವಾದ ಮತ್ತು ಬಹಳ ಒರಟಾದ ಕೈಮಗ್ಗದ ಬಟ್ಟೆಯಿಂದ ಮಾಡಿದ ಷರ್ಟು ಪಂಜಾಬಿಯ ಷರಾಯಿಗಳೂ ಸಣ್ಣ ರುಮಾಲೂ ಅವರ ಉಡಿಗೆಯಾಗಿದ್ದವು. ಆಗಿನ ಕಾಲದಲ್ಲಿ ಅವರ ಎಲ್ಲಾ ಬಟ್ಟೆಗಳಿಗೂ ಒಟ್ಟು ಮೂರು ರೂಪಾಯಿ ಆಗುತ್ತಿತ್ತು. ಅವರು ಐದನೇ ತರಗತಿಯಲ್ಲಿ ಓದುತ್ತಿದ್ದಾಗ ಅವರ ಶಾಲೆಯ ಪುಸ್ತಕಗಳ ಜೊತೆಗೆ ಪರ್ಷಿಯನ್ ಭಾಷೆಯಲ್ಲಿ ಪ್ರಸಿದ್ಧವಾದ ಗುಲಿಸ್ತಾನ್ ಮತ್ತು ಬೋಸ್ತಾನ್ ಎಂಬ ಗ್ರಂಥಗಳನ್ನು ಓದಿ ಮುಗಿಸಿದ್ದರು. ಅವರು ಆಟಕ್ಕೇ ಹೋಗುತ್ತಿರಲಿಲ್ಲ. ತಮ್ಮ ಎಲ್ಲಾ ಹೊತ್ತನ್ನೂ ಉರ್ದು ಮತ್ತು ಪರ್ಷಿಯನ್ ಸಾಹಿತ್ಯವನ್ನು ಓದುವದರಲ್ಲಿ ಕಳೆಯುತ್ತಿದ್ದರು. ಅವರು ತಮ್ಮ ಹತ್ತನೇ ವರ್ಷದಲ್ಲಿ ತಮ್ಮ ಹಳ್ಳಿಯಿಂದ ಏಳು ಮೈಲಿಗಳ ದೂರದಲ್ಲಿರುವ ಗುಜರನ್‌ವಾಲಾದಲ್ಲಿ ಹೈಸ್ಕೂಲಿಗೆ ಸೇರಿದರು. ಅಲ್ಲಿ ಅವರ ತಂದೆಯ ಸ್ನೇಹಿತರೂ ಅತಿಶಯ ಧರ್ಮಾತ್ಮರೂ ಸತ್ಪುರುಷರೂ ಆಗಿದ್ದ ಭಗತ್‌ಧನ್ನಾರಾಂಜೀ ಎಂಬವರ ರಕ್ಷಣೆಯಲ್ಲಿ ಇಡಲ್ಪಟ್ಟರು. ಬಾಲಕ ತೀರ್ಥರಾಮರು ಧನ್ನಾರಾಂ ಜೀಯವರನ್ನೇ ತಮ್ಮ ಆಧ್ಯಾತ್ಮಿಕ ಗುರುಗಳನ್ನಾಗಿ ಭಾವಿಸಿದರು. ಅವರು ಇನ್ನೂ ಹದಿನಾಲ್ಕೂವರೆ ವರ್ಷ ಇರುವಾಗ 188೪ರಲ್ಲಿ ಎಂಟ್ರೆನ್ಸ್ ಪರೀಕ್ಷೆಯಲ್ಲಿ

ಅವರ ಶಾಲೆಯ ಉತ್ತೀರ್ಣರಾದ ವಿದ್ಯಾರ್ಥಿಗಳಲ್ಲಿ ಪ್ರಪ್ರಥಮರಾಗಿಯೂ ಇಡೀ ಪಂಜಾಬ್ ವಿಶ್ವವಿದ್ಯಾನಿಲಯದಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳ ಶ್ರೇಣಿಯಲ್ಲಿ ೩೮ನೇ ಸ್ಥಾನವನ್ನು ಪಡೆದರು. ಮುಂದೆ ಕಾಲೇಜಿನಲ್ಲಿ ಓದುವದಕ್ಕೆ ಅವರಿಗೆ ಅದರಿಂದ ಸಹಾಯವಾಗಿ ವಿದ್ಯಾರ್ಥಿ ವೇತನವು ಸಿಕ್ಕಿತು. ಅವರ ಕಾಲೇಜಿನ ವಿದ್ಯಾಭ್ಯಾಸ ಕಾಲದಲ್ಲಿ ಮಧ್ಯರಾತ್ರಿಯಲ್ಲಿ ಓದುವದಕ್ಕೆ ದೀಪದ ಎಣ್ಣೆಗಾಗಿ ಒಂದೊಂದು ದಿನ ಅವರು ಊಟವನ್ನೇ ಬಿಟ್ಟುಬಿಡುತ್ತಿದ್ದರೆಂದು ಅವರ ಜೊತೆಯ ವಿದ್ಯಾರ್ಥಿಗಳು ಹೇಳುತ್ತಿದ್ದರು. ಎಷ್ಟೋ ಸಮಯ ಅವರು ದಿವಸಗಟ್ಟಲೆ ಉಪವಾಸವಿರಬೇಕಾಗುತ್ತಿತ್ತಾದರೂ ಮುಖದ ಮೇಲೆ ಆ ಕ್ಲೇಶದ ಸೂಚನೆಯನ್ನು ಸ್ವಲ್ಪವೂ ತೋರಿಸಿಕೊಳ್ಳದೆ ಶಾಂತವಾದ ಹಸನ್ಮುಖದಿಂದಲೇ ಯಥಾಪ್ರಕಾರ ಕ್ರಮವಾಗಿ ಕಾಲೇಜಿಗೆ ಹೋಗಿ ಬರುತ್ತಾ ತಪ್ಪದೆ ಅಭ್ಯಾಸದಲ್ಲಿ ನಿರತ ರಾಗಿರುತ್ತಿದ್ದರು.

ಆರ್ಯ ಜನಾಂಗದ ಲಕ್ಷಣವುಳ್ಳ ಮಾದರಿಯ ಅವರ ಮುಖವು ಮೃದುವೂ ಸುಂದರವೂ ಆಗಿದ್ದಿತು. ಆಳವಾಗಿ ಕಪ್ಪಾಗಿದ್ದ ಅವರ ಹೊಳಪಿನ ಕಣ್ಣುಗಳು ಅಂತರಾತ್ಮನ ಗೂಢವನ್ನೂ ಪ್ರೇಮವನ್ನೂ ತೋರಿಸುತ್ತಿದ್ದವು. ವಿಶಾಲವಾಗಿಯೂ ಪ್ರಧಾನವಾಗಿಯೂ ಕಾಣುತ್ತಿದ್ದ ಅವರ ದೊಡ್ಡ ಹಣೆಯು ಉನ್ನತವಾದ ಬುದ್ಧಿ ಶಕ್ತಿಯನ್ನು ಸೂಚಿಸುತ್ತಿದ್ದಿತು. ಅವರ ತುಟಿಗಳ ಸುತ್ತಲೂ ಹೆಣ್ಣಿನ ಕೋಮಲತೆ ಯಿದ್ದಿತು. ಅವರು ಗಂಭೀರಭಾವದಲ್ಲಿದ್ದಾಗ ಕೆಳತುಟಿಯು ಮೇಲಿನ ತುಟಿಗೆ ದುಂಡಾದ ಸಣ್ಣ ಗದ್ದದ ಮೇಲೆ ಒತ್ತಿ ಅದಮ್ಯವಾದ ಸಂಕಲ್ಪಶಕ್ತಿಯನ್ನು ತೋರಿಸುತ್ತಿತ್ತು. ಮುಂದೆ ಅವರು ಇಂಥಾ ಪ್ರಖ್ಯಾತವ್ಯಕ್ತಿ ಆಗಬಹುದೆಂಬ ಸೂಚನೆಯು ಅಥವಾ ಭರವಸೆಯು, ಅವರು ಕಾಲೇಜು ವಿದ್ಯಾರ್ಥಿಯಾಗಿದ್ದಾಗ ಅಷ್ಟಾಗಿ ಅವರಲ್ಲಿ ತೋರುತ್ತಿರಲಿಲ್ಲ. ಆದರೂ ಆಗ ಅವರನ್ನು ನೋಡಿದ ಯಾರಿಗಾದರೂ ಅವರ ದೈವೀ ಸ್ವಭಾವವೂ ಅಪರೂಪವಾಗಿ ಕಾಣಬಹುದಾದ ಜೀವನದ ನಿಷ್ಕಪಟವೂ ನಿಷ್ಕಳಂಕವೂ ಪರಿಶುದ್ಧವೂ ಆದ ಗುಣವೂ ಯಾರ ಮನಸ್ಸಿನ ಮೇಲಾದರೂ ಅಸಾಧಾರಣವಾದ ಮುದ್ರೆಯೊತ್ತುತ್ತಿತ್ತು. ವಿನೀತ ಕನ್ಯೆಯಂತೆ ಲಜ್ಜಾಶೀಲರಾಗಿದ್ದರು. ಚೆಲುವಾದ ಬಿಳುಪು ಬಣ್ಣದ ತೆಳುವಾದ ಸಣ್ಣದೇಹದ ಮೂಲಕ ಅವರು ಪ್ರೇಮದ ಬೆಳಕಿನಲ್ಲಿ ಪರಿಶುದ್ಧ ಪಾರದರ್ಶಕವಾಗಿ ತೋರುತ್ತಿದ್ದರು. ಆದರೆ ನಿರಾಡಂಬರವಾದ ಆ ನಮ್ರ ಸ್ವಭಾವದೊಳಗೆ, ಅತಿ ಪವಿತ್ರವಾದುದರಿಂದ ವ್ಯಕ್ತಮಾಡಲಾಗದೆಂದು ಅವರು ಭಾವಿಸಿದ ಉದಾತ್ತವಾದ ಉದ್ದೇಶಗಳೂ ಉನ್ನತವಾದ ಆಕಾಂಕ್ಷೆಗಳೂ ಉಳ್ಳ

ಒಂದು ಮಹದ್ವ್ಯಕ್ತಿತ್ವವು ಹುದುಗಿದ್ದಿತು. ಕಷ್ಟಕಾರ್ಪಣ್ಯಗಳ ಕಣ್ಣೀರಿನಿಂದಲೂ ಹೃದಯದಲ್ಲಿ ಶಿಷ್ಯನ ನಮ್ರತೆಯಿಂದಲೂ ಕನ್ಯಾಮಣಿಯ ಮೌನದಿಂದಲೂ ವಿಶ್ವಚೇತನನಿರ್ಧಾರದಿಂದಲೂ ಈ ದೇವತಾ ಸ್ವರೂಪನಾದ ವಿದ್ಯಾರ್ಥಿಯು ಜ್ಞಾನ ದೇಗುಲದಲ್ಲಿ ಧರ್ಮಯೋಧನಂತೆ ರಾತ್ರಿಹಗಲೂ ಬಹಳ ಶ್ರಮಿಸುತ್ತಿದ್ದರು. ಅವರು ಯಾವಾಗಲೂ ಸಹಪಾಠಿಗಳಲ್ಲಿ ಮುಂದಾಳಾಗಿರುತ್ತಿದ್ದರು. ಅವರ ಅಧ್ಯಯನವು ಅಪಾರವಾಗಿದ್ದಿತು. ಅವರು ಸ್ವಾಮಿಗಳಾಗಿದ್ದಾಗ ಸಾಹಿತ್ಯದಲ್ಲಿಯೂ ತತ್ತ್ವಶಾಸ್ತ್ರದಲ್ಲಿಯೂ ಅವರಿಗಿದ್ದ ಜ್ಞಾನವೂ ಬೋಧವೂ ಅದ್ಭುತವಾಗಿದ್ದಿತು. ಮಾನವನ ಸಮಸ್ತ ವಿಚಾರವ್ಯಾಪ್ತಿಯೂ ಅವರಿಗೆ ಅವಗತವಾಗಿದ್ದಂತೆ ಇದ್ದಿತು.

ಅವರು ಎಂಟ್ರೆನ್ಸ್ ಪರೀಕ್ಷೆಯನ್ನು ಮುಗಿಸಿದ ಕೂಡಲೇ ಓದುವದನ್ನು ಬಿಟ್ಟು, ಯಾವದಾದರೂ ಉದ್ಯೋಗಕ್ಕೆ ಸೇರಿಕೊಂಡು, ಸಂಪಾದನೆಮಾಡಿ, ಕುಟುಂಬ ಭರಣಕ್ಕೆ ತಮಗೆ ಸಹಾಯವಾಗಬೇಕೆಂದು ಅವರ ತಂದೆಯವರು ಬಹಳ ಆಗ್ರಹ ಮಾಡಿದರೂ ಜಗ್ಗದೆ ಮುಂದೆ ಓದುವದಕ್ಕಾಗಿ ಅವರು ಲಾಹೋರಿಗೆ ಹೋಗಿ ಮಿಷನ್ ಕಾಲೇಜನ್ನು ಸೇರಿಕೊಂಡರು. ಇಲ್ಲಿ ಅವರು ಬಹಳ ತೀವ್ರವಾದ ಹಣಕಾಸಿನ ಮುಗ್ಗಟ್ಟಿಗೆ ಸಿಕ್ಕು ಅತಿಶಯ ಪ್ರತಿಕೂಲ ಪರಿಸ್ಥಿತಿಯಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಬೇಕಾಯಿತು. ಇದರಿಂದ ಅವರ ಆರೋಗ್ಯವು ಕೆಟ್ಟು ಆಗಾಗ ಕಾಹಿಲೆ ಬೀಳುತ್ತಿದ್ದರು. ಈ ಕಷ್ಟಗಳು ಸಾಲದೆಂದು ಅವರು ಓಂದೆ ಸಂಸ್ಕೃತವನ್ನು ಕಲಿತಿರಲಿಲ್ಲವಾದರೂ ಅದನ್ನು ಐಚ್ಛಿಕ ವಿಷಯಗಳಲ್ಲಿ ಒಂದನ್ನಾಗಿ ತೆಗೆದುಕೊಂಡರು. ಇಷ್ಟೆಲ್ಲಾ ಕಷ್ಟಗಳಿದ್ದರೂ ೧೮೯೦ರಲ್ಲಿ ಎಫ್. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಪ್ರಥಮಸ್ಥಾನವನ್ನು ಪಡೆದರು. ಅವರು ಬಿ. ಎ. ಕ್ಲಾಸಿನಲ್ಲಿ ಓದುವ ವಿದ್ಯಾರ್ಥಿಯಾಗಿದ್ದಾಗಲೇ ಅವರ ಹೆಂಡತಿಯನ್ನೂ ಜೊತೆಗಿಟ್ಟುಕೊಂಡು ಜೀವನವನ್ನು ನಡೆಸಬೇಕಾಯಿತು. ಆಗ ಅವರಿಗೆ ಸಾಕಷ್ಟು ಸಂಪಾದನೆ ಇರಲಿಲ್ಲವಾದ್ದರಿಂದ, ಎರಡು ಹೊತ್ತು ಊಟಮಾಡುವದೇ ಕಷ್ಟವಾಗಿತ್ತು. ಅವರು ಜೀವನದ ಪ್ರತಿ ನಿಮಿಷವನ್ನೂ ತಮ್ಮ ಮಹದ್‌ವ್ಯಕ್ತಿತ್ವವನ್ನು ಬೆಳೆಸುವದಕ್ಕಾಗಿ ವಿನಿಯೋಗಿಸುತ್ತಿದ್ದರು. ಅತ್ಯಂತ ಸರಳ ಜೀವನವೂ ಉನ್ನತ ಭಾವನಾ–ವಿಚಾರಗಳೂ ಅವರ ಬಾಳಿನ ಗುಟ್ಟಾಗಿತ್ತು. ಅವರು ಆಧ್ಯಾತ್ಮಿಕ ಸಾಧನೆಗೂ ಕಾಲವನ್ನು ಉಪಯೋಗಿಸುತ್ತಿದ್ದುದರಿಂದ ಆ ವರ್ಷ ಬಿ. ಎ. ಪರೀಕ್ಷೆಯಲ್ಲಿ ಎಲ್ಲಾ ವಿಷಯಗಳ ಒಟ್ಟಿನ ಅಂಕಗಳಲ್ಲಿ ಪಂಜಾಬ್ ವಿಶ್ವವಿದ್ಯಾನಿಲಯಕ್ಕೇ ಅತ್ಯಂತ ಹೆಚ್ಚಿನ ಗುಣಾಂಕಗಳನ್ನು ಗಳಿಸಿದರೂ ಇಂಗ್ಲೀಷ್‌ನಲ್ಲಿ ಮೂರು ಗುಣಾಂಕಗಳು ಕಡಿಮೆ ಬಂದುದರಿಂದ ಅವರು ಉತ್ತೀರ್ಣರಾಗಲಿಲ್ಲ. ಮರುವರ್ಷ ೧೮೯೩ರಲ್ಲಿ ಬಿ. ಎ. ಪರೀಕ್ಷೆಯಲ್ಲಿ ಪಂಜಾಬ್ ಯೂನಿವರ್ಸಿಟಿಗೇ

ಪ್ರಥಮ ಸ್ಥಾನದಲ್ಲಿ ತೇರ್ಗಡೆಯಾದರು. ಆದುದರಿಂದ ಅವರಿಗೆ ತಿಂಗಳಿಗೆ 60 ರೂ ಗಳು ವಿದ್ಯಾರ್ಥಿವೇತನವು ಬರುವಂತಾಯಿತು.

ಈಗ ಅವರ ೧೯॥ ವರ್ಷ ವಯಸ್ಸಿನಲ್ಲಿ ಲಾಹೋರಿನ ಗೌರ್ನಮೆಂಟ್ ಕಾಲೇಜಿನಲ್ಲಿ ಮ್ಯಾಥಮ್ಯಾಟಿಕ್ಸ್ (ಗಣಿತಶಾಸ್ತ್ರದ) ಎಂ. ಎ. ಕ್ಲ್ಯಾಸಿಗೆ ಸೇರಿದರು. ೧೮೯೫ರಲ್ಲಿ ಅವರು ಮ್ಯಾಥಮ್ಯಾಟಿಕ್ಸ್ ಎಂ. ಎ., ಪದವಿಯನ್ನು ಬಹಳ ಹೆಚ್ಚಿನ ಗುಣಾಂಕಗಳಿಂದ ಪಡೆದರು. ಆ ವರ್ಷವೇ ಅವರಿಗೆ ಸಿಯಾಲ್‌ಕೋಟ್‌ನಲ್ಲಿ ಅಮೆರಿಕನ್ ಮಿಷನ್ ಹೈಸ್ಕೂಲಿನಲ್ಲಿ ಮಾಸ್ಟರ್ ಕೆಲಸವಾಯಿತು. ೧೮೯೭ರಲ್ಲಿ ಲಾಹೋರಿನ ಫೋರ್‌ಮನ್ ಕ್ರಿಶ್ಚಿಯನ್ ಕಾಲೇಜಿನಲ್ಲಿ ಅವರಿಗೆ ಮ್ಯಾಥಮ್ಯಾಟಿಕ್ಸ್ ಪ್ರೊಫೆಸರ್ ಕೆಲಸವಾಯಿತು. ಕೆಲವು ಕಾಲದ ಮೇಲೆ ಲಾಹೋರ್ ಓರಿಯಂಟಲ್ ಕಾಲೇಜಿನಲ್ಲಿ ಅವರು ರೀಡರ್ ಕೆಲಸವನ್ನು ಪಡೆದರು ಆಗ ಅವರು ಉಪನಿಷತ್ತು ಗಳನ್ನೂ ಬ್ರಹ್ಮಸೂತ್ರಗಳನ್ನೂ ಗೀತೆಯನ್ನೂ ಯೋಗವಾಸಿಷ್ಠವನ್ನೂ ಚೆನ್ನಾಗಿ ಅಧ್ಯಯನ ಮಾಡಿದರು. ಇದರಿಂದ ಅವರ ಹೃದಯವು ತೀವ್ರ ಪರಿವರ್ತನೆ ಯಾದುದರಿಂದ ಕೇವಲ ಪ್ರೊಫೆಸರ್ ಆಗಿಯೋ ಗೃಹಸ್ಥರಾಗಿಯೋ ಉಳಿಯುವದು ಸಾಧ್ಯವಾಗಲಿಲ್ಲ. ಅವರು ಪಾಶ್ಚಾತ್ತ್ಯ ತತ್ತ್ವಶಾಸ್ತ್ರವನ್ನೂ ಆಳವಾಗಿ ಅಭ್ಯಾಸ ಮಾಡಿ ಶುದ್ಧ ನೈತಿಕ–ಆಧ್ಯಾತ್ಮಿಕ ಜೀವನವನ್ನು ನಡೆಸುತ್ತಿದ್ದರು.

ಅವರು ಕಾಲೇಜಿನಲ್ಲಿ ಓದುತ್ತಿರುವಾಗಲೇ ಹಫೀಸ್, ಮೌಲಾನಾ ರೂಂ, ಮಾಘ್ರಾಬಿ, ಉಮರ್ ಖಯಾಂ ಇವರೇ ಮೊದಲಾದ ಪರ್ಷಿಯಾದ ಸೂಫಿ ಮಹಾಂತರ ಸಾಹಿತ್ಯವನ್ನು ಅಭ್ಯಾಸಮಾಡಿದ್ದರು. ಪ್ರಾಚ್ಯ ಮತ್ತು ಪಾಶ್ಚಾತ್ತ್ಯ ತತ್ತ್ವಶಾಸ್ತ್ರಗಳ ಸಾಹಿತ್ಯ ಸ್ರೋತಸ್ಸಿನಲ್ಲಿ ಈಜಾಡಿದ್ದರು. ಉಪನಿಷತ್ತುಗಳನ್ನು ಅನೇಕಸಲ ಓದಿದ್ದರು. ಹಿಂದೀ, ಉರ್ದು, ಪಂಜಾಬೀ ಕವಿ–ಕಾವ್ಯಗಳ ಸೌಂದರ್ಯಕ್ಕೂ ಸವಿಗೂ ಮರುಳಾಗಿದ್ದರು.

ಅವಿರತವಾದ ಅಭ್ಯಾಸದ ತೀವ್ರ ಶ್ರಮವೂ ಪರಿಸ್ಥಿತಿಯ ಕಾಠಿಣ್ಯವೂ ಆರೋಗ್ಯವನ್ನು ಕೆಡಿಸಿದ್ದವು. ಅವರು ಎಂ. ಎ. ಪರೀಕ್ಷೆಯಲ್ಲಿ ಪದವೀಧರರಾಗಿ ಬಂದಾಗ, ಅವರು ಹೊತ್ತು ತಿರುಗುತ್ತಿದ್ದ ಎಲುಬಿನ ಗೂಡಿನಂತಿದ್ದ ದೇಹದಲ್ಲಿ ಪ್ರಾಣವು ಹೇಗೆ ಕಷ್ಟದಿಂದ ಸಿಕ್ಕಿಕೊಂಡಿರಬಹುದೆಂದು ಕಂಡವರೆಲ್ಲಾ ಆಶ್ಚರ್ಯ ಪಡು ತ್ತಿದ್ದರು. ಅವರ ಮೂಳೆಗಳ ಮೇಲೆ ಮಾಂಸಖಂಡಗಳೇ ಇರಲಿಲ್ಲ. ಅವರ ದೊಡ್ಡ ತಲೆಯು ತೆಳುವಾದ ಮೂಳೆಯ ಕೊಕ್ಕರೆಯ ಕುತ್ತಿಗೆಯ ಮೇಲೆ ಒಲೆದಾಡು

ವಂತಿತ್ತು. ಧ್ವನಿಯು ಕರ್ಕಶವಾಗಿ ಮಾತಾಡುವದು ಕಷ್ಟವಾಗಿತ್ತು. ದೇಹದಿಂದ ಅಷ್ಟು ದುರ್ಬಲರಾಗಿದ್ದರು. ಆದರೆ ದೇಹವನ್ನು ಬಲಪಡಿಸಿಕೊಳ್ಳಲೇಬೇಕೆಂದು ದೃಢ ನಿರ್ಧಾರಮಾಡಿದರು. ಕ್ರಮಬದ್ಧವಾದ ಶಾರೀರಕ ವ್ಯಾಯಾಮದಿಂದಲೂ ಸ್ವಲ್ಪ ಹೆಚ್ಚು ಪ್ರಮಾಣದ ಕ್ಷೀರಸೇವನೆಯಿಂದಲೂ ಸ್ವಲ್ಪ ಕಾಲದಲ್ಲಿಯೇ ಆರೋಗ್ಯವನ್ನೂ ಬಲವನ್ನೂ ಸುಧಾರಿಸಿಕೊಂಡರು. ಹೊಸ ಹೊಸ ರೀತಿಯ ವ್ಯಾಯಾಮವನ್ನು ಕಂಡುಹಿಡಿಯುವದರಲ್ಲಿ ಸಂತೋಷಗೊಳ್ಳುತ್ತಿದ್ದರು. ಅಂದಿನಿಂದ ಅವರೆಂದೂ ಪ್ರತಿದಿನದ ವ್ಯಾಯಾಮವನ್ನು ಬಿಡುತ್ತಿರಲಿಲ್ಲ. ಅವರು ಕೊನೆಗೆ ಗಂಗೆಯಲ್ಲಿ ತೇಲಿ ಹೋಗುವದಕ್ಕೆ—ನಿರ್ಯಾಣಕ್ಕೆ—ಕೆಲವು ನಿಮಿಷಗಳ ಮುಂಚೆ ಸಹ ನದೀ ತೀರದಲ್ಲಿ ವ್ಯಾಯಾಮ ಮಾಡಿದ್ದರು. ಹೀಗೆ ತೆಳುವಾದ ಕೃಶ ಶರೀರದಿಂದ ಜಿಂಕೆಯಂತೆ ಅಥವಾ ಸಾರಗದಂತೆ ಚಪಲವೂ ವೇಗವೂ ಸತ್ತ್ವಯುತವೂ ಆದ ಬಲಿಷ್ಠದೇಹವನ್ನು ಸಂಪಾದಿಸಿದರು. ಅವರು ಮಹಾವೇಗಶಾಲಿಗಳಾದ ನಡಿಗೆಗಾರರಾಗಿದ್ದರು ಅವರು ಸ್ವಾಮಿಗಳಾದ ಮೇಲೆ ಹಿಮಾಲಯದಲ್ಲಿ ದಿನಕ್ಕೆ ನಲವತ್ತು ಮೈಲಿಗಳ ಮೇಲೆ ನಡೆಯುತ್ತಿದ್ದರು. ಅವರು ಅಮೆರಿಕಾದಲ್ಲಿ ಅಲ್ಲಿಯ ಕೆಲವು ಸೈನಿಕರ ಜೊತೆಯಲ್ಲಿ ನಲವತ್ತು ಮೈಲಿಗಳ ಓಟದ ಪಂದ್ಯದಲ್ಲಿ ವಿನೋದಕ್ಕಾಗಿ ಸ್ಪರ್ಧಿಸಿ, ಓಡಿ, ಜಯಶಾಲಿಯಾದ ಸೈನಿಕನಿಗಿಂತಲೂ ಎರಡು ಗಂಟೆಗಳ ಕಾಲ ಮುಂಚೆಯೇ ಬಂದು ಗುರಿಯನ್ನು ಸೇರಿದರು ಅವರು ಒಮ್ಮೆ ಸ್ಯಾನ್ ಫ್ರ್ಯಾನ್ಸಿಸ್ಕೋ ನಗರದ ರಸ್ತೆಯಲ್ಲಿ ವೇಗವಾಗಿ ನಡೆದು ಹೋಗುತ್ತಿದ್ದಾಗ ಒಬ್ಬ ಅಮೆರಿಕನ್ ಎದುರಾಗಿ "ಏನು ? ನಿಮ್ಮದೇ ದೇಶವೆಂಬಂತೆ ನಡೆಯುತ್ತೀರಲ್ಲ ?" ಎಂದು ಟೀಕಿಸಲು, ಅವರು ನಗುನಗುತಾ, "ಹೌದು ; ಸಂದೇಹವೇ ಇಲ್ಲ," ಎಂದು ಹೇಳಿ ನಡದೇ ಬಿಟ್ಟರು. ಮೊಣಕಾಲಿನ ಮೇಲೆ ಒಂದು ದಪ್ಪ ಬಟ್ಟೆಯನ್ನು ಸುತ್ತಿಕೊಂಡು ಕಂಬಳಿಯನ್ನು ಹೊದ್ದು ಗಂಗೋತ್ರಿ, ಜಮ್ನೋತ್ರಿ, ಬದರೀನಾಥ ಮೊದಲಾದ ಶಿಖರಗಳನ್ನು ಅವರು ಏರಿದರು. ಜಮ್ನೋತ್ರಿಯಿಂದ ಗಂಗೋತ್ರಿಗೆ ಹಿಮರಾಶಿಯಲ್ಲಿಯೂ ಹಿಮ ಪ್ರವಾಹದಲ್ಲಿಯೂ ದಾಟಿದರು. ಹಿಮಪರ್ವತಗಳಲ್ಲಿಯೇ ವಾಸಿಸಿ, ಗೊಂಡಾರಣ್ಯದ ಗುಹೆಗಳಲ್ಲಿಯೇ ಏಕಾಂಗಿಯಾಗಿ ವಾಸಿಸುತ್ತಿದ್ದರು. ಗಿರಿಜನರು ಅವರನ್ನು—ಸ್ವಾಮಿಗಳನ್ನು—ದೇವರೆಂದೇ ನಂಬಿದ್ದರು, ಕರೆಯುತ್ತಿದ್ದರು ಆ ಪರ್ವತಗಳಲ್ಲಿ ವೇಗವಾಗಿ ಹರಿಯುತ್ತಿದ್ದ ಮಳೆಗಾಲದ ಪ್ರವಾಹಗಳಲ್ಲಿ ಕೂಡ ಈ ದೇವರು ಆ ಗಿರಿಜನರ ದನಕರುಗಳನ್ನು ಈಚೆ ದಂಡೆಯಿಂದ ಆಚೆ ದಂಡೆಗೆ ದಾಟಿಸಿ ಕೊಡುತ್ತಿದ್ದರು. ಮಧ್ಯರಾತ್ರಿಯಲ್ಲಿ ಧ್ಯಾನಮಾಡುತ್ತಿದ್ದ ತಮ್ಮ ಆಸನವನ್ನು ಬಿಟ್ಟು, ಕತ್ತಲಿನ ಕಾನನದಲ್ಲಿ ಮೃತ್ಯುವನ್ನೂ ಭಯವನ್ನೂ, ಎದುರಿಸಿ, ಸ್ವಚ್ಛಂದವಾಗಿ ಅಲೆದಾಡುತ್ತಿದ್ದರು. ಲಾಹೋರಿನಲ್ಲಿ ಅವರು ವಿದ್ಯಾರ್ಥಿದಶೆಯಲ್ಲಿದ್ದಾಗ ಸಾಕಷ್ಟು

ಸರಿಯಾದ ಆಹಾರವಿಲ್ಲದೆ ಉಪವಾಸದಿಂದ ಅತ್ಯಂತ ಕೃಶ ಶರೀರಿಯಾಗಿದ್ದ ಅವರನ್ನು ನೋಡಿದ್ದ ಜನರು, ಈ ಹಿಮಾಲಯ ಪರ್ವತಗಳಲ್ಲಿ ಇಷ್ಟು ನಿರ್ಭಯವಾಗಿಯೂ ಧೈರ್ಯವಾಗಿಯೂ ನಿರ್ಲಕ್ಷ್ಯವಾಗಿಯೂ ಆವೇಶ–ರಭಸ ಪೂರ್ಣವಾಗಿಯೂ ಇಷ್ಟು ಬಲಿಷ್ಠವಾಗಿಯೂ ಗುಲಾಬಿಯ ಬಣ್ಣದಿಂದ ತೇಜಸ್ವಿಯಾಗಿಯೂ ಇದ್ದ ಈ ಕಾಡುಮನುಷ್ಯ ರಾಮರಲ್ಲಿ ಅವರ ಬಳಲಿ–ಕಳೆಗುಂದಿ–ಬಿಳಿಚಿಕೊಂಡ ಆ ಹಳೆಯ ಬಡಕಲು ಮುಖವನ್ನು ಗುರುತಿಸುವದು ಸಾಧ್ಯವೇ ಇರಲಿಲ್ಲ. ಅವರ ಈಗಿನ ಮುಖವು ತುಂಬಿತ್ತು; ಅಂದವಾಗಿ ಕಳೆಗಟ್ಟಿತ್ತು, ಉನ್ಮನೀ ಭಾವದ ಆನಂದದ ಅಮಲಿನಿಂದ ಕಣ್ಣುಗಳು ಅರ್ಧನಿಮೀಲಿತವಾಗಿರುತ್ತಿದ್ದವು. ಈ ಎಲ್ಲಾ ಪುಷ್ಕಲ ದೈಹಿಕ–ಆಧ್ಯಾತ್ಮಿಕ ಶಕ್ತಿಯ ಸಮೃದ್ಧಿಯಿಂದ ಸ್ವಾಮಿರಾಮರು ತಮ್ಮ ಜೀವಮಾನದ ಮೇರುಕೃತಿಯೆಂಬ ತಮ್ಮ ದಿವ್ಯವಾದ ವ್ಯಕ್ತಿತ್ವವನ್ನೇ ಲೋಕಕ್ಕೆ ಅರ್ಪಿಸಿದರು.

ಸ್ವಾಮಿ ರಾಮರ ವ್ಯಕ್ತಿತ್ವವು ಸ್ಫೋಟಕವಾಗಿದ್ದಿತೆಂದು ಹೇಳಬಹುದು. ಅವರು, ಏನೂ ಹೇಳುವದಕ್ಕೆ ಇಲ್ಲವೇನೋ ಎಂಬಂತೆ ಎಷ್ಟೋ ತಿಂಗಳು ಮೌನವಾಗಿ ನಿಶ್ಶಬ್ದವಾಗಿರುತ್ತಿದ್ದರು. ಆನಂದದಲ್ಲಿ ಮುಳುಗಿ ಕರಗಿರುತ್ತಿದ್ದರು. ಅನಂತರ, ಅವರು ಒಮ್ಮೆಗೇ ಜ್ವಾಲಾಮುಖಿಯಂತೆ ಬಗೆಯೊಡೆದು ಭಾವಾವೇಶದಿಂದ ತಮ್ಮ ವಿಚಾರಗಳನ್ನು ಉಚ್ಛೃಂಖಲವಾಗಿ ಹರಿಬಿಡುತ್ತಿದ್ದರು ಅಥವಾ ವ್ಯಕ್ತಮಾಡುತ್ತಿದ್ದರು. ಅವರು ಯಾವಾಗ ಮಾತನಾಡಿದರೂ ಬರೆದರೂ ಹೊಸದಾಗಿಯೂ ಉಲ್ಲಾಸಕರವಾಗಿಯೂ ಇರುತ್ತಿದ್ದಿತು. ಅವರು ಜನರ ಮಧ್ಯದಲ್ಲಿ ಹೆಚ್ಚುಕಾಲ ಇರಲು ಸಾಧ್ಯವಿಲ್ಲವೆಂಬಂತೆ ತೋರುತ್ತಿತ್ತು. ಜನರ ಸಹವಾಸದಿಂದ ಏನೋ ನಷ್ಟವಾದಂತೆ, ಆತ್ಮವು ಬಳಲಿದಂತೆ ಅನಿಸುತ್ತಿದ್ದುದರಿಂದ, ಅವರು ಅದನ್ನು ಪುನಃ ತುಂಬಿಕೊಳ್ಳುವದಕ್ಕೆ ಮತ್ತೆ ಮತ್ತೆ ಪರ್ವತಾರಣ್ಯಗಳ ಏಕಾಂತಕ್ಕೆ ಓಡಿಹೋಗುತ್ತಿದ್ದರು. ಅಲ್ಲಿ ಅವರು ಹರಿಯುವ ಜಲಝರಿಗಳೊಡನೆಯೂ ವಿಶಾಲ ವೈಭವವಾದ ಅನಂತಾಕಾಶದೊಡನೆಯೂ ಶಾಂತವಾದ ತಾದಾತ್ಮ್ಯವನ್ನು ಅನುಭವಿಸಿ, ಬಿಸಿಲಿನಲ್ಲಿ ಬಂಡೆಗಳ ಮೇಲೆ ದೇಹವನ್ನು ಕೆಡವಿ, ಕಣ್ಣುಮುಚ್ಚಿಕೊಂಡು ಗಂಟೆಗಟ್ಟಲೆ ಮಲಗಿರುತ್ತಿದ್ದರು.

ಅತಿಶಯ ಸುಸಂಸ್ಕೃತವೂ ವಿಕಸಿತವೂ ಆದ ಸ್ವಾಮಿ ರಾಮರ ರಾಗ–ಭಾವಗಳು (Emotion), ಅವರ ವ್ಯಕ್ತಿತ್ವದ ಇನ್ನೊಂದು ಅತ್ಯಾಕರ್ಷಕವಾದ ವೈಲಕ್ಷಣ್ಯವಾಗಿತ್ತು. ಗಭೀರವಾದ ನಿಷ್ಕಪಟ ಸರಳ ಭಾವವು ಅವರ ನಯನಗಳಿಂದ ಹೇರಳ

ವಾಗಿ ವ್ಯಷ್ಟಿಯಾಗುತ್ತಿರುವದೋ ಎನ್ನುವಂತಿತ್ತು. ಅವರ ಮುಗ್ಧಭಾವದ, ಪ್ರೀತಿಯ ನೋಟದ, ನಡೆನುಡಿಗಳ ಮಾಧುರ್ಯಕ್ಕೆ ಯಾರಾದರೂ ಮರುಳಾಗದಿರುವದೇ ಸಾಧ್ಯವಿರಲಿಲ್ಲ. ಮಹಮ್ಮದೀಯರಾಗಲೀ ಹಿಂದೂಗಳಾಗಲೀ ಅವರನ್ನು ಒಂದೇ ಬಗೆಯಿಂದ ಪ್ರೀತಿಸುತ್ತಿದ್ದರು. ಬೇರೆ ಬೇರೆ ಜನಾಂಗಗಳ ಜನರು ಸ್ವಾಮಿ ರಾಮರಲ್ಲಿ ತಮ್ಮ ಕುಟುಂಬ ಸಂಬಂಧವಾದ ಜನನ್ನೇ ಕಂಡು ಪ್ರೇಮಿಸುತ್ತಿದ್ದರು. ಅಮೆರಿಕನ್‌ರು ಅವರನ್ನು ಅಮೆರಿಕನ್ ಎಂದೇ ಜಪಾನೀಯರು ಅವರನ್ನು ಜಪಾನೀಯರೆಂದೇ ಪರ್ಷಿಯನ್‌ರು ಅವರನ್ನು ಪರ್ಷಿಯನ್ ಎಂದೇ ಭಾವಿಸುತ್ತಿದ್ದರು.

ಸ್ವಾಮಿ ರಾಮರ ದರ್ಶನವೆಂದರೆ, ಅತ್ಯುಚ್ಚವಾದ ಹೊಸಭಾವನೆಗಳಿಂದಲೂ ಹೊಸ ಆದರ್ಶಗಳಿಂದಲೂ ಹೊಸ ಶಕ್ತಿಗಳಿಂದಲೂ ಹೊಸ ದೃಷ್ಟಿಯಿಂದಲೂ ಹೊಸದರ್ಶನಗಳಿಂದಲೂ ಸ್ಫೂರ್ತಿ ಪಡೆಯುವದೇ ಆಗಿದ್ದಿತು.

ಅವರ ಸಾನ್ನಿಧ್ಯದ ಮೋಹಕತೆಗೂ ಮೆಚ್ಚುಗೆಗೂ ಕಾರಣವಾದ ಇನ್ನೊಂದು ವಿಶೇಷವೆಂದರೆ, ಅವರ ಶಿಖರೋಪಮವಾದ ಅತ್ಯುಚ್ಚ ಬುದ್ಧಿಶಕ್ತಿ ಮತ್ತು ಧೀರವಾದ ವಿಚಾರ ಸ್ವಾತಂತ್ರ್ಯ. ಅವರು ಏನನ್ನು ಬೋಧಿಸಿದರೂ ಅದು ಅವರ ಸಾಧನೆಯಲ್ಲಿಯೂ ಜೀವನದಲ್ಲಿಯೂ ಅನುಭವ ಪಡೆದದ್ದೇ ಆಗಿದ್ದಿತು. ಸತ್ಯವನ್ನು ಕಂಡುಹಿಡಿಯುವದಕ್ಕೆ ಭೌತಿಕವಿಜ್ಞಾನದಲ್ಲಿ ಆಧಾರ ಪ್ರಮಾಣಗಳ (Authority) ಅಧಿಕಾರ ತೂಕವು ಬಹಳ ಕಡಿಮೆಯಾಗಿರುವಂತೆ ವ್ಯಕ್ತಿ ಜೀವನದ ಅಂತರಂಗದ ಧರ್ಮದಲ್ಲಿಯೂ ತತ್ತ್ವಶೋಧನೆಯಲ್ಲಿಯೂ ಅವುಗಳ ಕಾಟವು ಅತ್ಯಲ್ಪವಾಗಿರಬೇಕು. ಅಥವಾ ಇಲ್ಲವಾಗಬೇಕು. ಪ್ರತಿಯೊಬ್ಬರೂ ಅವರವರ ಜೀವನದ ಗೆಲವು-ಸೋಲುಗಳ ಮೂಲಕ ದೇವರಲ್ಲಿಗೆ—ಸತ್ಯದೆಡೆಗೆ—ಹೋಗಬೇಕು. ಜೀವನವೇ ಅತ್ಯಂತ ಮಹತ್ತಾದ ದಿವ್ಯದರ್ಶನ—ದೈವಿಕವಾದ ಜ್ಞಾನ-ಪ್ರಕಾಶನ.

ತೀರ್ಥರಾಮರು ತಮ್ಮ ಅತ್ಯುನ್ನತ ಪಾರಮಾರ್ಥಿಕ ಧ್ಯೇಯಸಾಧನೆಗಾಗಿ ಪೂರ್ಣಸಿದ್ಧತೆಮಾಡಿಕೊಂಡು, ೧೯೦೦ ರ ಜುಲೈ ತಿಂಗಳಲ್ಲಿ ತಮ್ಮ ಉದ್ಯೋಗವನ್ನು ತ್ಯಾಗಮಾಡಿ, ಹೆಂಡತಿಮಕ್ಕಳನ್ನೂ ಕರೆದುಕೊಂಡು ಕೆಲವು ಸಂಗಡಿಗರೊಡನೆ ಹಿಮಾಲಯದ ಅರಣ್ಯಕ್ಕೆ ಹೋದರು. ೧೯೦೧ ರಲ್ಲಿ ಗೋಸಾಯಿ ತೀರ್ಥರಾಮರು ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಸ್ವಾಮಿ ರಾಮತೀರ್ಥರಾದರು. ಅವರು ಹಿಮಾಲಯದಲ್ಲಿ ಗಂಗೋತ್ರಿ, ಯಮುನೋತ್ರಿ, ಕೇದಾರನಾಥ, ಬದರೀನಾರಾಯಣ,

ಮೊದಲಾದ ಅನೇಕ ಕ್ಷೇತ್ರಗಳನ್ನು ಸಂದರ್ಶನಮಾಡಿ, ಹಿಮಾಚಲದಲ್ಲಿ ದೀರ್ಘಕಾಲ ತಪಸ್ಸುಮಾಡಿದರು.

ಎರಡು ವರ್ಷಗಳು ಹಿಮಾಲಯದ ತಪಸ್ಸಿನಲ್ಲಿ ಸ್ವಾಮಿ ರಾಮರು ಅನುಭವಿಸಿದ ಆನಂದವನ್ನು ಬೀರುವದಕ್ಕಾಗಿ ಅಧ್ಯಾತ್ಮಪ್ರಚಾರಮಾಡುವ ಉತ್ಸಾಹದಿಂದ ಉರಿಯುತ್ತಾ ಕೆಳಗಿಳಿದು ಮೈದಾನಕ್ಕೆ ಬಂದರು. ೨೮-೮-೧೯೦೨ ರಲ್ಲಿ ಅವರು ತಮ್ಮ ಶಿಷ್ಯರಾದ ಸ್ವಾಮಿ ನಾರಾಯಣರೊಂದಿಗೆ ಕಲ್ಕತ್ತಾದಿಂದ ಹಡಗಿನಲ್ಲಿ ಜಪಾನಿಗೆ ಹೋದರು. ಅಲ್ಲಿ ಅವರು ಹದಿನೈದು ದಿನಗಳು ಮಾತ್ರ ಇದ್ದರು. ಜಪಾನ್ ಜನರ ಸಭೆಯಲ್ಲಿ ಮಾತನಾಡುವದಕ್ಕಾಗಿ ಅವರು ಎರಡುಸಲ ಆಹ್ವಾನಿತರಾದರು. ಟೋಕಿಯೋದ ಒಂದು ಕ್ರೈಸ್ತ ವೃತ್ತಪತ್ರಿಕೆಯು ಅವರನ್ನು "ಉತ್ಸಾಹಶಾಲಿಗಳಾದ ವೇದಾಂತ ತತ್ತ್ವಪ್ರಸಾರಕರು" ಎಂದು ಉನ್ನತಭಾವದಲ್ಲಿ ಅತಿಶಯ ಮೆಚ್ಚುಗೆಯಿಂದ ಪ್ರಚುರ ಪಡಿಸಿತು.

ಸ್ವಾಮಿ ರಾಮರು ಜಪಾನಿನಲ್ಲಿ ಅನೇಕ ಉಪನ್ಯಾಸಗಳನ್ನು ಮಾಡಿ ಅಮೆರಿಕಾಕ್ಕೆ ಹೋದರು. ಅಲ್ಲಿ ಅವರು ಒಂದೂವರೆ ವರ್ಷಗಳಿದ್ದು ವೇದಾಂತದ ಮೇಲೂ ಅದಕ್ಕೆ ಸಂಬಂಧಪಟ್ಟ ಇತರ ವಿಷಯಗಳ ಮೇಲೂ ಹಲವು ಉಪನ್ಯಾಸಗಳನ್ನು ಮಾಡಿದರು. ಅವರು ಅಮೆರಿಕನ್‌ರಿಗೆ ಅತ್ಯಂತ ಪ್ರಿಯರಾದರು. ಅಲ್ಲಿಯೂ ಅವರು ಬಹಳಕಾಲ ಏಕಾಂತದಲ್ಲಿಯೇ ಇರುತ್ತಿದ್ದರು. ಅಲ್ಲಿ ಅವರು ಸರಳವಾದ ಜೀವನ ವನ್ನು ನಡೆಸುತ್ತಿದ್ದರು, ಅಡವಿಯಿಂದ ತಮ್ಮ ಕಟ್ಟಿಗೆಯನ್ನು ತಾವೇ ತಲೆಯ ಮೇಲೆ ಹೊತ್ತು ತರುತ್ತಿದ್ದರು. ಅವರ ಕೃತಿಯ ಮತ್ತು ಜೀವನದ ಮೇಲೆ ಶ್ಲಾಘನೆಯ ಲೇಖನಗಳು ಪ್ರಕಟವಾಗಿದ್ದ ಅನೇಕ ವೃತ್ತ ಪತ್ರಿಕೆಗಳ ಭಾಗಗಳನ್ನು ಸ್ಯಾಕ್ರಮೆಂಟೋ ನದಿಯಲ್ಲಿ ತೇಲಿಬಿಟ್ಟ ಅವರ ನಿರ್ಲಕ್ಷ್ಯತೆಗಾಗಿ ಕ್ಯಾಲಿಫೋರ್ನಿಯಾದ ಜನರು ಬೆರ ಗಾದರು. ಅವರು ಅಮೆರಿಕನ್‌ರ ಮೇಲೆ ಶಾಶ್ವತವಾದ ಪರಿಣಾಮವನ್ನುಂಟು ಮಾಡಿದರು. ಅನೇಕ ಅಮೆರಿಕನ್‌ರು ಅವರನ್ನು ಜೀವಂತ ಕ್ರಿಸ್ತನೆಂದು ತಿಳಿದಿದ್ದರು. ಅವರನ್ನು ಅನೇಕ ಸ್ತ್ರೀಪುರುಷರೂ ಮತ್ತು ಆಗಿನ ಅಮೆರಿಕನ್ ಪ್ರೆಸಿಡೆಂಟ್ ಸಹ ದರ್ಶನ ಮಾಡಿದರು.

ಇಂಡಿಯಾಕ್ಕೆ ಹಿಂದಿರುಗುವಾಗ ಅವರು ಈಜಿಪ್ಟಿಗೆ ಹೋಗಿ ಅಲ್ಲಿ ಒಂದು ಅತ್ಯಂತ ದೊಡ್ಡದಾದ ಮಸೀದಿಯಲ್ಲಿ ಮಹಮ್ಮದೀಯ ಸಭಿಕರ ಮುಂದೆ

ಪರ್ಷಿಯನ್ ಭಾಷೆಯಲ್ಲಿ ಉಪನ್ಯಾಸ ಮಾಡಿದರು. ಪರದೇಶಗಳಲ್ಲಿ ಎರಡೂವರೆ ವರ್ಷಗಳು ಪ್ರವಾಸಮಾಡಿ ಅವರು ೧೯೦೪ ರ ಇಂಡಿಯಾಕ್ಕೆ ಹಿಂದಿರುಗಿದರು.

ಇಂಡಿಯಾದಲ್ಲಿಯೂ ಅನೇಕ ಸ್ಥಳಗಳಲ್ಲಿ ಅವರು ಸಂಚಾರಮಾಡಿ ವ್ಯವಹಾರ ಯೋಗ್ಯ (Practical) ವೇದಾಂತವನ್ನು ಪ್ರಸಾರ ಮಾಡಿದರು. ೧೯೦೫ ರಲ್ಲಿ ಅವರು ಹೃಷೀಕೇಶದಲ್ಲಿ ಕೇವಲ ಏಕಾಂತವನ್ನು ಸೇರಿದರು. ೧೯೦೬ ರಲ್ಲಿ ಟೆಹರಿಯಿಂದ ೬೦ ಮೈಲಿಗಳ ದೂರದಲ್ಲಿ ೧೨,೯೦೦ ಅಡಿಗಳ ಎತ್ತರದಲ್ಲಿ ವಸಿಷ್ಠಾಶ್ರಮದಲ್ಲಿ ವಾಸಮಾಡಲು ಪ್ರಾರಂಭಿಸಿದರು.

ಅವರು ಒಮ್ಮೆ ಹರಿದ್ವಾರದಲ್ಲಿ ಸುಮಾರು ಒಂದು ತಿಂಗಳು ಅಸ್ವಸ್ಥರಾಗಿ ಮಲಗಿದ್ದಾಗ ಚಿರಸ್ಮರಣೀಯವಾದ ಒಂದು ಸ್ವಾರಸ್ಯವಾದ ಘಟನೆ ನಡೆಯಿತು. ಒಂದು ದಿನ, ಅನಿರೀಕ್ಷಿತವಾಗಿ, ಅವರ ಪೂರ್ವಾಶ್ರಮದ ಪತ್ನಿಯು ತಮ್ಮ ಆರು ವರ್ಷಕ್ಕೂ ಕಡಿಮೆ ವಯಸ್ಸಿನ ಚಿಕ್ಕ ಮಗನನ್ನೂ ಅವರ (ಸ್ವಾಮಿಗಳ) ಮಲ ತಾಯಿಯನ್ನೂ ಕರೆದುಕೊಂಡು, ಸ್ವಾಮಿಗಳು ಅಮೆರಿಕಾದಿಂದ ಹಿಂದಿರುಗಿದ ತರುಣದಲ್ಲಿ, ಅವರ ದರ್ಶನಕ್ಕಾಗಿ, ಹೆಚ್ಚಿನ ಖರ್ಚಿನಿಂದ, ದೂರ ಪಂಜಾಬಿನಿಂದ ಬಂದರು. ಮೊದಲೇ ಬಹಳ ಬಡ ಕುಟುಂಬ. ಒಂಟಿಯಾಗಿ ಸಂಪಾದಿಸುತ್ತಿದ್ದ ಸಮರ್ಥರಾದ ಪ್ರೊಫೆಸರ್ ತೀರ್ಥರಾಮರು ತಮ್ಮೊಳಗೆ ತುಂಬಿ ತುಳುಕುತ್ತಿದ್ದ ಉಜ್ಜ್ವಲವಾದ ಜ್ಞಾನವೈರಾಗ್ಯಗಳನ್ನು ತಡೆದುಕೊಳ್ಳಲಾರದೆ ಹೆಂಡತಿ-ಮಕ್ಕಳನ್ನು ತ್ಯಾಗಮಾಡಿ ಸಂನ್ಯಾಸ ತೆಗದುಕೊಂಡು ಸ್ವಾಮಿರಾಮತೀರ್ಥರಾಗಿದ್ದರು. ಆಗ ಇಡೀ ಕುಟುಂಬವನ್ನು ದೇವರ ಕರುಣೆಗೆ ಒಪ್ಪಿಸಿದಂತಾಯಿತು. ಯಾವ ಬಗೆಯ ಆಶ್ರಯವೂ ಆಸ್ತಿಯೂ ದುಡಿಮೆಯೂ ಇಲ್ಲದೆ ಅವರು ಭಕ್ತರ ಸಹಾಯದಿಂದ ಬದುಕಬೇಕಾಗಿತ್ತು. ಅಂಥಾ ಪರಿಸ್ಥಿತಿಯಲ್ಲಿ ಅವರು ಪ್ರೀತಿಯಿಂದ ಸ್ವಾಮಿಗಳ ಸಂದರ್ಶನಕ್ಕಾಗಿ ಅಷ್ಟು ದೂರ ಎಷ್ಟೋ ಖರ್ಚುಮಾಡಿಕೊಂಡು ಬರುವದೆಂದರೆ ಮಹಾ ಸಾಹಸವೇ ಆಗಿತ್ತು. ಸ್ವಾಮಿಗಳನ್ನು ನೋಡದೆ ಬಹಳ ಕಾಲವಾಗಿದ್ದುದರಿಂದ, ಅವರ ವಿಯೋಗದಿಂದ ಉಂಟಾದ ತಮ್ಮ ಕೇವಲ ಮಾನಸಿಕ ಯಾತನೆಯನ್ನು ಕಳೆದುಕೊಳ್ಳುವುದಕ್ಕಾಗಿ ಅವರ ಕುಟುಂಬದವರು ಪ್ರಾಯಶಃ ಸಾಲಮಾಡಿಕೊಂಡೋ ಪ್ರಯಾಣದ ವೆಚ್ಚಕ್ಕಾಗಿ ಕಷ್ಟದಿಂದ ಬೇಡಿಕೊಂಡೋ ಹರಿದ್ವಾರಕ್ಕೆ ಬಂದಿದ್ದರು. ಸ್ವಾಮಿಗಳ ಸಮೀಪದಲ್ಲಿ ಶುಶ್ರೂಷೆ ಮಾಡುತ್ತಿದ್ದ ಪೂರಣಸಿಂಗರು ಆ ಬಡ ದರ್ಶನಾರ್ಥಿಗಳು ಬಂದಿರುವದನ್ನು ತಿಳಿದು ಸ್ವಾಮಿಗಳಲ್ಲಿ ಹೋಗಿ ಅರಿಕೆಮಾಡಿದರು. ಅವರಿಗೆ ಬೇನೆಯು ಗುಣವಾಗಿದ್ದರೂ ಬಹಳ ಬಳಲಿಕೆಯೂ ನಿಶ್ಶಕ್ತಿಯೂ

ಇದ್ದುದರಿಂದ ಅವರು ಹಾಸಿಗೆಯಲ್ಲಿಯೇ ಮಲಗಿದರು. ಅವರ ಕೆನ್ನೆಗಳು ಹಿಂದಿನಂತೆ ಕಳೆಗಟ್ಟುತ್ತಿದ್ದವು; ಅವರ ಆಳವಾದ ಕಪ್ಪು ಕಣ್ಣುಗಳು ಹೊಳೆಯಲು ತೊಡಗಿದ್ದವು. ಅವರು ಕನ್ನಡಕವನ್ನು ತರಿಸಿ, ತಮ್ಮ ಕಾಷಾಯ ವಸ್ತ್ರದಿಂದ ಆ ಗಾಜುಗಳನ್ನು ಚೆನ್ನಾಗಿ ಒರೆಸಿ ತಿಕ್ಕಿ ಹಾಕಿಕೊಂಡರು. ಅವರ ಹಿಂದಿನ ಹೆಂಡತಿಯೂ ತಾಯಿಯೂ ಚಿಕ್ಕ ಮಗುವೂ ಬಂದಿರುವದನ್ನು ಹೇಳಿದ್ದುದರಿಂದ, ಏನು ಉತ್ತರ ಹೇಳಬೇಕೆಂದು ಅವರು ಅಷ್ಟು ಹೊತ್ತೂ ಯೋಚಿಸುತ್ತಿದ್ದಂತೆ ತೋರಿತು.

ಆಗ ಅವರು "ಪೂರಣಜೀ! ನಿನ್ನಲ್ಲಿ ಏನಾದರೂ ಹಣವಿದೆಯೆ?" ಎಂದು ಕೇಳಿದರು. ಅದಕ್ಕೆ ಪೂರಣಜೀ "ಹೌದು ಸ್ವಾಮಿ! ಎಷ್ಟು ಬೇಕೆಂದು ಹೇಳಿದರೆ ಕೊಡಬಹುದು." ಎಂದರು.

ಸ್ವಾಮಿಜೀಃ "ಪೂರಣಜೀ! ಅವರನ್ನು ರೈಲ್ವೇಸ್ಟೇಷನ್ನಿಗೆ ಕರೆದುಕೊಂಡು ಹೋಗಿ, ಪಂಜಾಬಿಗೆ ಹಿಂದಿರುಗುವದಕ್ಕಾಗಿ ಟಿಕೆಟ್ ಕೊಡಿಸು. ನನ್ನ ಗಂಗೆಯಲ್ಲಿ ಅವರು ಸ್ನಾನಮಾಡಲಿ; ಹಿಂದಿರುಗಿ ಹೋಗಲಿ. ಅವರು ನನ್ನನ್ನು ನೋಡಲು ಸಾಧ್ಯವಿಲ್ಲ," ಎಂದು ಕಠಿಣವಾಗಿ ದಯಾದಾಕ್ಷಿಣ್ಯಗಳಿಲ್ಲದೆ ಹೇಳಿದರು. ಪೂರಣ ಸಿಂಗರು ಆ ಮುಂದಿನ ಪ್ರಸಂಗವನ್ನು ಹೀಗೆ ಹೇಳಿದ್ದಾರೆ. "ನಾನು ಆಗ ಒಂದು ತಿಂಗಳಿಂದ, ಅವರಲ್ಲಿ ನನಗಿದ್ದ ಸಣ್ಣದೊಂದು ಮೂಕ ಪಶುಪ್ರೇಮದಿಂದ ಅವರ ಜೊತೆಗಿದ್ದೆ. ಆದರೆ ಹೃದಯಶೂನ್ಯವಾದ ಅವರ ಆ ಉತ್ತರವನ್ನು ಕೇಳಿ ದೊಡನೆಯೇ ನನ್ನ ಹೃದಯದಲ್ಲಿ ಬೆಂಕಿ ಹತ್ತಿಕೊಂಡಂತೆ ಆಗಿ ನನ್ನಲ್ಲಿದ್ದ ಎಲ್ಲಾ ಶಾಂತಿಯೂ ಒಮ್ಮೆಗೇ ಸ್ಫೋಟವಾದಂತೆ ಆಯಿತು. ನಾನು ಕೂಡಲೇ ಬೆಂಕಿ ಕಾರುವಂತೆ 'ನಮಸ್ತೇ! ಸ್ವಾಮಿಜೀ! ನಾನೂ ಹೊರಡುತ್ತೇನೆ; ನಿಮ್ಮನ್ನು ನಾನು ಪುನಃ ಎಂದೆಂದೂ ನೋಡುವದಿಲ್ಲ. ಆಹಾ! ನೀವು! ಆ ಬಡ ಕುಟುಂಬಕ್ಕೆ ಪಾಪ! ಮೂಲಾಧಾರವೂ ಮುಖ್ಯಾಶ್ರಯವೂ ಆಗಿರಬೇಕಾಗಿದ್ದ ನೀವು, ನಿರ್ದಯ ವಾಗಿ ಕಿತ್ತು ಹರಿದುಕೊಂಡು ಬಂದಿರಿ. ಪಾಪ! ಅವರು ಅಷ್ಟು ದೂರದಿಂದ ತಮ್ಮ ಪುಡಿಕಾಸನ್ನು ತಾವು ಖರ್ಚುಮಾಡಿಕೊಂಡು ಬಂದಿದ್ದಾರೆ ಅಂಥವರು ನಿಮ್ಮ ಲಕ್ಷ್ಯದಲ್ಲಿಯೇ ಇಲ್ಲ. ನೀವು ಯಾವೂರು ದಾಸರೆಂದೂ ನೀವವರನ್ನು ಕೇಳುವಂತಿಲ್ಲ. ಆದರೆ ನಾವು, ಮೂಢ ಬಾಲಕರು, ಏನೂ ಅರಿಯದೆ, ನಿಮ್ಮ ಸುತ್ತಲೂ ಅಟವಾಡಿಕೊಂಡು, ನೀವು ಮಹಾತ್ಮರೆಂದೂ ವಿಶ್ವಪ್ರೇಮಿಗಳೆಂದೂ ವಿಶ್ವಕುಟುಂಬಿಗಳೆಂದೂ ನೀವೇ ದೇವರೆಂದೂ ಹೊಗಳಿ ಹೊಗಳಿ, ನಿಮ್ಮನ್ನು ವಿನೋದಪಡಿಸುತ್ತಿರುವ ಅಲ್ಪರಾದ ನಾವು ನಿಮಗೆ ಹೆಚ್ಚಿನವರು. ನೀವು ನಮಗೆ

ಪತ್ನಿಯು ಅವರನ್ನೇ ನೋಡುತ್ತಾ ಮೌನವಾಗಿ ನಿಂತಿದ್ದಳು. ಅವರಿಬ್ಬರ ಮಧ್ಯದಲ್ಲಿ ಒಂದೂ ಮಾತು ನಡೆಯಲಿಲ್ಲ. ಆದರೆ ಸ್ವಾಮಿಗಳು ಗಂಟೆಹೊಡೆದಂತೆ ನಗುತ್ತಾ ತಮ್ಮ ಮಲತಾಯಿಯ ಜೊತೆಯಲ್ಲಿ ಸ್ವಲ್ಪ ಹೊತ್ತು ಮಾತನಾಡುತ್ತಿದ್ದರು. ಅವರು ತಮ್ಮ ಕುಟುಂಬದ ಪ್ರತಿಯೊಬ್ಬರ ಯೋಗಕ್ಷೇಮವನ್ನೂ ಪ್ರೇಮದಿಂದ ವಿಚಾರಿಸಿದರು ; ಹೀಗೆ ಈ ಪ್ರಸಂಗವನ್ನು ಮುಗಿಸಿ ಅವರನ್ನು ಕಳಿಸಿ ಕೊಟ್ಟರು. ಅಲ್ಪ ಚೇತಸರು ಅಥವಾ ಸಾಮಾನ್ಯರು ಮತ್ತು ಮಹಾತ್ಮರು ಒಂದೇ ಗಾಳಿಯನ್ನು ಉಸಿರಾಡುತ್ತಾ ಒಂದೇ ನೆಲ, ಜಲ, ಬಿಸಿಲಿನಿಂದ ಜೀವಿಸಿದ್ದರೂ ಅವರ ಸಂಬಂಧ–ಸಹವಾಸಗಳು ಸ್ನೇಹ–ಸೌಹಾರ್ದಗಳಿಂದ ಬೆಳೆದು ಬೆಳಗದೆ, ಒಡೆದು ದೂರವಾಗಿ ದುಃಖದಲ್ಲಿ ಕೊನೆಗೊಳ್ಳಬಹುದು. ಆ ಯಾತ್ರಿಕನು, ಅಂತು, ಹೊರಟು ಹೋದರು.

ಪೂರಾ ಒಂದು ವರ್ಷದ ಮೇಲೆ ಪೂರಣಜೀಯು ಸ್ವಾಮಿಗಳೊಡನೆ ಏಕಾಂತದಲ್ಲಿ ಹಿಮಾಲಯದ ಮೈದಾನವಲ್ಲಿ ಕುಳಿತಿರುವಾಗ, ಆ ಹಿಂದಿನ ಪ್ರಸಂಗವನ್ನು ನೆನೆಸಿಕೊಂಡು ಹೇಳಿದ್ದೇನೆಂದರೆ,

“ಪೂರಣಜೀ ! ಒಂದು ವರ್ಷದ ಹಿಂದೆ, ಹರಿದ್ವಾರದಲ್ಲಿ ರಾಮನ ಕುಟುಂಬದವರನ್ನು ಕಳಿಸಿಕೊಡಬೇಕೆಂದು ರಾಮನು ನಿನಗೆ ಹೇಳಿದಾಗ, ನೀನೆಷ್ಟು ಕೋಪಾವಿಷ್ಟನಾದೆ ! ಆದರೆ ರಾಮನಿಗೂ ಹೃದಯವಿದೆ, ಬಂಧುವಿದೆ, ಪ್ರಿಯವಿದೆ. ಆದರೆ, ಆಗ ಅವನು ಧರಿಸಿರುವ ಸಂನ್ಯಾಸ ವೇಷದ ನಿಯಮವನ್ನು ಪಾಲಿಸಬೇಕೆಂದು ಬಯಸಿದನು. ಅವರನ್ನು ನೋಡಲು ನಿರಾಕರಿಸಿದ್ದು ಕೇವಲ ತೋರಿಕೆಗೆ ಮಾತ್ರ ; ಕೇವಲ ಔಪಚಾರಿಕ. ದೇವನ ವಿಷಯದಲ್ಲಿಯಾಗಲೀ ಮಾನವನ ವಿಷಯದಲ್ಲಿಯಾಗಲೀ ರಾಗಭಾವಗಳೂ ರಸಭಾವಗಳೂ ಭಾವಾವೇಗಗಳೂ (Emotion) ಹೃದಯವನ್ನು ಇನ್ನೂ ಕಲಕುತ್ತಿರುವವರೆಗೂ ಮನುಷ್ಯನು ತನ್ನ ವೈಯಕ್ತಿಕ ಸಂಬಂಧಗಳನ್ನು ಹೇಗೆ ಮರೆತಿರಲು ಸಾಧ್ಯ ? ಭಾವಶೂನ್ಯವಾದ ಪಾಷಾಣಗಳಂತೆ ಕವಿಗಳೂ ಕಲ್ಲಾಗಿ ನಿಸ್ಸತ್ತ್ವವಾಗುವದಕ್ಕೆ ಸಾಧ್ಯವಿಲ್ಲ. ಮನೋವೇದನೆಯೇ ಇಲ್ಲದಂತೆ ಭಾವನಾಶೂನ್ಯವಾಗುವದು ಆಧ್ಯಾತ್ಮಿಕ ವಿಕಸನವಲ್ಲ. ಅವರು ಕೀಟ್ಸ್ (Keats) ಕವಿಯನ್ನು ಕಠಿಣ ಶಬ್ದಗಳಿಂದಲೇ ಕೊಂದರು. ಆಧ್ಯಾತ್ಮಿಕ ಅನುಭವವು ಹೆಚ್ಚು ಬೆಳೆದಷ್ಟೂ ಭಾವನಾ ವಿಶೇಷವೂ ಬೆಳೆಯುತ್ತದೆ.

“ಪೂರಣಜೀ ! ಆ ದಿನ ಬ್ರಹ್ಮಾನಂದನ* ತಾಯಿಯ ಮುಖವು ಎಂಥಾ

---

*ಇದು, ಸ್ವಾಮಿಗಳ ಕೊನೆಯ ಮಗನ ಹೆಸರು.

ದೈವೀಕಳೆಯಿಂದ ಬೆಳಗುತ್ತಿತ್ತು! ಆಕೆಯು ಅಂದು ಪೂಜನೀಯ ರೂಪವನ್ನು ಪಡೆದಂತೆ ಕಂಡಳು ; ಅಲ್ಲವೆ ?

"ನೀನು ಮದುವೆಯಾಗಿರುವದು ರಾಮನಿಗೆ ಸಂತೋಷ. ಏಷ್ಟು ಹೇಳಿದರೂ ವಿಚಾರಮಾಡಿ ನೋಡಿದರೆ, ವಿವಾಹಿತ ಜೀವನವೇ ಹೆಚ್ಚು ಸ್ಥಿರತೆಯುಳ್ಳದು. ನೀವು ದಂಪತಿಗಳಿಬ್ಬರೂ ಇಲ್ಲಿಗೆ ಬಂದು ಈ ಹಿಮಾಲಯದ ಶಿಖರಗಳ ಮೇಲೆ ವಾಸಮಾಡಬಹುದು."

ಅವರು ಅತಿನಮ್ರವೂ ಪರಿಶುದ್ಧವೂ ಆದ ಬಡ ವಿದ್ಯಾರ್ಥಿದಶೆಯಿಂದ ವಿಶ್ವ ಪ್ರಜ್ಞೆಯುಳ್ಳ ಉತ್ಸಾಹ ಭರಿತ ಪೂರ್ಣಮಾನವರಾಗಿ ಬೆಳೆದಿದ್ದರು. ಅವರಲ್ಲಿ ಗಂಭೀರವಾದ ಏಕಾಗ್ರತೆಯಿದ್ದರೂ ವಿಲಕ್ಷಣವಾಗಿ ಚಿಮ್ಮುತ್ತಿರುವ ಚೈತನ್ಯದಿಂದ ಯಾವಾಗಲೂ ಉಲ್ಲಾಸ ಉಕ್ಕುತ್ತಿತ್ತು. ಅವರಲ್ಲಿ ಅಕ್ಷಯವಾದ ಆನಂದದ ಬುಗ್ಗೆ ಹತ್ತಿಕ್ಕಲಾರದ ನಗುವಿನ ರೂಪದಲ್ಲಿ ಸ್ಫೋಟವಾಗುತ್ತಿತ್ತು. ಅವರ ದೃಷ್ಟಿಯಲ್ಲಿ ಔನ್ನತ್ಯವೂ ವರ್ತನೆಯಲ್ಲಿ ಔದಾರ್ಯವೂ ಗಾಂಭೀರ್ಯವೂ ತುಂಬಿದ್ದವು. ಹಗುರವಾದ ಅವರ ವೇಗದ ನಡಿಗೆಯಲ್ಲಿ ಜಿಗಿದಾಡುವ ಜಿಂಕೆಯು ಸೋತುಬಿಟ್ಟಿತು. ಅವರು ದಿವ್ಯವಾದ ಆನಂದ ಮಧುಪಾನದಿಂದ ಉನ್ಮತ್ತರಾಗಿ ಹುಚ್ಚೆದ್ದು ಕುಣಿಯುವಾಗ, ದೈವೀ ತೇಜಸ್ಸಿನಿಂದ ಅವರ ಮುಖವು ಉದ್ದೀಪ್ತವಾಗಿಯೂ ನೇತ್ರಗಳು ನಿಮೀಲಿತವಾಗಿಯೂ ಆನಂದ ಬಾಷ್ಪಪರಿಪೂರಿತವಾಗಿಯೂ ಇರುತ್ತಿದ್ದವು. ಅವರು ರಾವೀ ನದಿಯ ತೀರದಲ್ಲಿ, ವಿಶ್ವವನ್ನೇ ಉತ್ಕಟಪ್ರೇಮದಿಂದ ಆಲಿಂಗಿಸುವಂತೆ, ತಮ್ಮ ಕೈಗಳನ್ನು ವಿಶಾಲವಾಗಿ ಬಿಚ್ಚಿ ಭಾವೋದ್ವೇಗದಿಂದ ಓಂಕಾರವನ್ನು ಹುಚ್ಚರಂತೆ ಕೂಗಿಡುತ್ತಿದ್ದರು. ಅವರ ಸುತ್ತಲಿದ್ದ ವನವೃಕ್ಷಗಳೂ ಕಲ್ಲು ಬಂಡೆಗಳೂ ಬೆಟ್ಟ ಗುಡ್ಡಗಳೂ ಸಹ ಅವರ ಭಾವಾವೇಶದ ಸ್ಪಂದನಗಳಿಂದ ಪ್ರಭಾವಿತವಾಗಿ ಕಂಪಿಸುವಂತೆ ತೋರುತ್ತಿತ್ತು !

ಗಾಳಿಗಳು ಅವರೊಡನೆ ಪಿಸುಗುಟ್ಟಿ ಆಟವಾಡುವಂತೆಯೂ ಕಲ್ಲುಗಳು ಮಾತಾಡುವಂತೆಯೂ ತೋರುತ್ತಿತ್ತು. ಅವರು ಓರಿಯಂಟಲ್ ಕಾಲೇಜಿನಲ್ಲಿ ರೀಡರ್ (Reader of Mathematics) ಆಗಿದ್ದಾಗ, ದೇಹದ ಪ್ರಜ್ಞೆಯೇ ಇಲ್ಲದವರಂತೆ ಕಾಲೇಜಿಗೆ ಹೋಗಿ ಬರುತ್ತಿದ್ದರು. ಅವರು ಮಿಷನ್‌ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾಗ ಅವರ ಪ್ರತಿಯೊಬ್ಬ ವಿದ್ಯಾರ್ಥಿಯನ್ನೂ ಕುರಿತು "ಓ, ಪ್ರಿಯತಮ ಕೃಷ್ಣ ! ನೀನು ಸರ್ವಜ್ಞನಲ್ಲವೆ ? ನಾನು ನಿನಗೆ ತಿಳಿಸುವುದೇನಿದೆ ?"

ಎನ್ನುತ್ತಿದ್ದರು. ಅವರು ತಮ್ಮ ವಿದ್ಯಾರ್ಥಿಗಳಿಗೆ ಹೀಗೆ ಸ್ಫೂರ್ತಿಯನ್ನು ಕೊಟ್ಟು, ಅವರಿಂದಲೇ ಸುಲಭವಾಗಿ ಲೆಕ್ಕಗಳನ್ನು ಮಾಡಿಸುತ್ತಿದ್ದರು.

ಒಂದು ದಿನ ತೀರ್ಥರಾಮರು ಲಾಹೋರ್ ಮಿಷನ್ ಕಾಲೇಜಿನ ಪ್ರಿನ್ಸಿಪಾಲ್‌ರಾದ ಡಾಕ್ಟರ್ ಈವಿಂಗ್ (Dr. Ewing) ಸಾಹೇಬರಲ್ಲಿ ಹೋಗಿ, ಅವರನ್ನು ಕುರಿತು, "ನೀವು ಕ್ರಿಸ್ತನನ್ನು ಪೂಜಿಸುತ್ತೀರಲ್ಲವೆ, ನೀವು ಅವನನ್ನು ಕಣ್ಣಿನಿಂದ ನೋಡಿದ್ದೀರಾ ? ಇಲ್ಲ ; ನೋಡಿರಲಿಕ್ಕಿಲ್ಲ. ನೋಡಿ, ನೋಡಿ, ಈವಿಂಗ್ ! ನಿಮ್ಮ ಎದುರಿಗೇ ಕ್ರಿಸ್ತನಿದ್ದಾನೆ ; ಇಗೋ, ಇಲ್ಲಿಯೇ ನಿಂತಿದ್ದಾನೆ, ನೋಡಿ !" ಎಂದು ಅವರು ಬೆರಗಾಗುವಂತೆ ಆವೇಶದಿಂದ ಉದ್ಗಾರಮಾಡಿದರು.

ಹೀಗೆ ಅವರ ದಿವ್ಯಭಾವೋನ್ಮಾದವು ಮಿತಿಮೀರಿ ಉಕ್ಕುವಂತಿತ್ತು. ಆಗಿನ ಕಾಲದಲ್ಲಿ ಅವರು ತಮ್ಮಲ್ಲಿ ತಾವು ನೆಲೆನಿಂತು, ಆತ್ಮಲೀನರೂ ಓಂಕಾರೋಚ್ಚಾರಣೆಯಿಂದ ಆನಂದ ತುಂದಿಲರೂ ಆಗಿ ಬೀದಿಯಲ್ಲಿ ನಡೆಯುತ್ತಿದ್ದರೆ ಅವರ ನಡಿಗೆಯಿಂದ ರಸ್ತೆಯೇ ರೋಮಾಂಚನಗೊಳ್ಳುವಂತಿತ್ತು. ಲಾಹೋರ್ ರಸ್ತೆಗಳಲ್ಲಿ ಅವರನ್ನು ಕಂಡವರೆಲ್ಲಾ ಅವರಲ್ಲಿ ವಿಲಕ್ಷಣವಾದ ಆಕರ್ಷಣೆಯನ್ನು ಅನುಭವಿಸಿ ಮುಗ್ಧರಾಗುತ್ತಿದ್ದರು. ಅವರು ಜನರಿಗೆ "ನೀವೇ ದೇವರೆಂದು ಹೇಳಿ ; ನಡು ರಾತ್ರಿಯಲ್ಲಿ ಮನೆಯ ಮಹಡಿಯ ಮೇಲು ಮಾಳಿಗೆಯ ಮೇಲೆ ನಿಂತು, ಓ ಮನುಷ್ಯ 'ನಾನೇ ದೇವರು, ನಾನೇ ದೇವರು' ಎಂದು ಕೈಯೆತ್ತಿ ಸಾರು." ಎಂದು ಘಂಟಾಘೋಷವಾಗಿ ಒತ್ತಿ ಹೇಳುತ್ತಿದ್ದರು.

ಲಾಹೋರಿನ ಡಾಕ್ಟರ್. ಮಹಮದ್ ಇಕ್ಬಾಲರು (Dr. Mohammad Iqbal) ಒಮ್ಮೆ ತೀರ್ಥರಾಮರಲ್ಲಿಗೆ ಹೋಗಿದ್ದಾಗ ತಾವು ಕಂಡಿದ್ದನ್ನು ಹೇಳಿರುವದೇನೆಂದರೆ, "ಒಂದು ದಿನ ನಾನು ಅವರಲ್ಲಿಗೆ ಹೋಗಿದ್ದಾಗ ಅವರಿಗೆ ತೀವ್ರವಾದ ಹೊಟ್ಟೆ ಶೂಲಿಯಿಂದ ನುಲಿತವು ಬಂದಿತ್ತು. ನರಮಂಡಲದ ಎಳೆತ–ಸೆಳೆತಗಳಿಂದ ಮೂಳೆಯ ಪಂದರದಂತಿದ್ದ ಅವರ ಶರೀರವು ವೃತ್ತಾಕಾರವಾಗಿಯೂ ಅರ್ಧ ವೃತ್ತಾಕಾರವಾಗಿಯೂ ಬಿಲ್ಲಿನಂತೆ ಬಾಗಿ ಸೆಟೆದು ಪುಟಿಯುತ್ತಿತ್ತು. ಅವರು ಇದರಿಂದ ಲಿವಿ ಲಿವಿ ಒದ್ದಾಡಿ ಯಮ ಯಾತನೆಯನ್ನು ಅನುಭವಿಸುತ್ತಿದ್ದರೂ ಗಂಟೆ ಹೊಡೆದಂತೆ ನಗುತ್ತಾ "ಓ ಇಕ್ಬಾಲ್ ! ರಾಮನ ಕೋಟಿ ಕೋಟಿ ಶರೀರಗಳಲ್ಲಿ ಇದೊಂದು ಶರೀರಕ್ಕೆ ಈ ವ್ಯಥೆಯು ಬಂದ ಮಾತ್ರಕ್ಕೆ ನಷ್ಟವೇನು ? ಕಷ್ಟವೇನು ? ನಾನು ನಕ್ಕು ನಕ್ಕು ನಲಿಯುತ್ತೇನೆ. ನನ್ನ ಮಿಕ್ಕ ಎಷ್ಟೋ ಕೋಟಿ ಶರೀರಗಳು

ಡಾಕ್ಟರ್ ಇಕ್ಬಾಲರು, ಶ್ರೀರ್ಥರಾಮರಿಗೆ ಹುಚ್ಚು ಹಿಡಿದಿದ್ದರೆ, ಚಿತ್ತ ಸ್ವಾಸ್ಥ್ಯವೂ ವಿವೇಕ ಪ್ರಜ್ಞೆಯೂ ಬೇರೆ ಯಾರಲ್ಲಿಯೂ ಸ್ವಲ್ಪವೂ ಉಳಿದಿರಲು ಸಾಧ್ಯವಿಲ್ಲವೆಂದೂ ಅವರದು ಸ್ಪಿನೋಜನ (Spinoza) ಹುಚ್ಚುತನವೆಂದೂ ಪ್ರವಾದಿಯ ಕವಿಭಾವವೆಂದೂ ವಾದಿಸಿ ಹುಚ್ಚು ಟೀಕಾಚಾರ್ಯರುಗಳ ಬಾಯಿ ಕಟ್ಟಿಸಿದ್ದರು.

ಅವರು ಜಪಾನಿಗೆ ಹೋಗಿದ್ದಾಗಲೂ ಅಮೆರಿಕಾದಲ್ಲಿದ್ದ ಕೆಲವು ಕಾಲವೂ ವಿಲಕ್ಷಣ ಆನಂದಾವೇಶದ ರಭಸದಿಂದ ಅವರ ವ್ಯಕ್ತಿತ್ವವು ಎಲ್ಲರ ಮೇಲೆ ತನ್ನದೇ ಆದ ಮಹತ್‌ಪ್ರಭಾವ ಬೀರುವದರಲ್ಲಿ ಅದ್ಭುತ ಸಾಂಕ್ರಾಮಿಕವಾಗಿತ್ತು. ಅವರಲ್ಲಿ ಉರಿಯುತ್ತಿದ್ದ ದಿವ್ಯಭಾವದಿಂದ ಎಷ್ಟೋಜನ ಉನ್ನತ ಭಾವೋದ್ದೀಪನವನ್ನು ಪಡೆದರು. ಆದರೆ ಅವರು ಅಮೆರಿಕಾದಿಂದ ಹಿಂದಿರುಗಿದ ಅನಂತರ ಅವರಲ್ಲಿದ್ದ ಧ್ಯಾನಯೋಗಿಯ ಸೂಕ್ಷ್ಮವಾದ ಉಲ್ಲಾಸಭರಿತ ದಿವ್ಯ ಸ್ಫೂರ್ತಿಯು ಹಾರಿ ಹೋಗಿ ಅದರ ಸ್ಥಳದಲ್ಲಿ ಉದಾತ ವಿಚಾರ-ಪ್ರತಿಭೆಗಳ ಉಜ್ಜ್ವಲ ಪ್ರಭೆಯು ವಿರಾಜಿಸುತ್ತಿತ್ತು. ಅವರು ತಮ್ಮ ಹಿಂದಿನ ಉನ್ನತ ತುರ್ಯಾನಂದದ ದೈವೀ ಸ್ಫೂರ್ತಿಯನ್ನು ಪುನಃ ಪಡೆಯಲು ಮತ್ತೆ ಮತ್ತೆ ಏಕಾಂತವಾಸಕ್ಕೆ ಹೋಗುತ್ತಿದ್ದರು. ಕ್ರಿಸ್ತನ ಜೀವನದಲ್ಲಿಯೂ ಅವನ ಕೊನೆಗಾಲದಲ್ಲಿ ಹೀಗೆಯೇ ಆಗಿತ್ತೆಂದು ಬೈಬಲ್‌ನ ವಿಮರ್ಶಾತ್ಮಕವಾದ ಅಧ್ಯಯನದಿಂದ ಅವರ ಪರಿಶೀಲನೆಗೆ ಬಂದಿತ್ತು.

"Who has touched me, my power is gone"

"ನನ್ನನ್ನು ಮುಟ್ಟಿದವರಾರು ? ನನ್ನ ಶಕ್ತಿಯು ಹರಿದು ಹೋಯಿತು." ಎಂದು ಸಮರ್ಥ ಕ್ರಿಸ್ತನೂ ಲೋಕ ಸಂಸರ್ಗದಿಂದ ತಪಶ್ಶಕ್ತಿಯು ಕ್ಷೀಣವಾಗುವದನ್ನು ತನ್ನ ಸಹಜವಾದ ಉದ್ಗಾರದಿಂದ ವ್ಯಕ್ತಮಾಡಿದ್ದನು. ಇದು ಯಾರಿಗೂ ಬದಲಾಗದ ಕಠೋರ ಸತ್ಯ.

ಪರಮಾತ್ಮ ಪ್ರಜ್ಞೆಯ ದೈವಾವೇಶವು ಹೇಗೆ ಉತ್ಕರ್ಷಾಪಕರ್ಷಗಳಿಗೂ ಪರಿಳಿತಗಳಿಗೂ ಒಳಗಾಗಬಹುದು—ಎಂಬುದನ್ನು ರಾಮತೀರ್ಥರೇ ಅನೇಕ ಸಂದರ್ಭಗಳಲ್ಲಿ ವಿವರಿಸುತ್ತಿದ್ದರು. ಅವರ ಪ್ರಸಿದ್ಧ ಉದಾಹರಣೆಯೇ ಕ್ರಿಸ್ತನದಾಗಿತ್ತು. ಆದರೆ ಅವರಲ್ಲಿದ್ದ ತತ್ತ್ವಜ್ಞಾನವು ಅವರ ಧ್ಯಾನೋನ್ಮಾದವನ್ನು ನುಂಗಿತ್ತು. ಅವರ ಹಿಂದಿನ ಹುಚ್ಚು ಆವೇಶವನ್ನು ಮತ್ತೆ ಪಡೆದುಕೊಳ್ಳುವದಕ್ಕೆ ಅವರಿಗಿಂತಲೂ

ಹೆಚ್ಚಿನ ಆನಂದಾವೇಶವುಳ್ಳವರ ಸಹವಾಸವು ಅವರಿಗೆ ದೊರಕಲಿಲ್ಲ; ಜೊತೆಗಿದ್ದ ಅವರ ಮುಗ್ಧ ಶಿಷ್ಯರಿಂದ ಅವರಿಗೆ ಆ ಸಹಾಯವಾಗಲಿಲ್ಲ. ಅಜೀರ್ಣವ್ಯಾಧಿ ಮೊದಲಾದ ಅವರ ದೈಹಿಕ ಬಾಧೆಗಳೂ ಅವರ ಉತ್ಸಾಹದ ಕುಸಿತಕ್ಕೆ ಕಾರಣವಾಗಿದ್ದವು. ತಮ್ಮ ಮುಖ್ಯ ಶಿಷ್ಯರಾದ ಸ್ವಾಮಿ ನಾರಾಯಣರನ್ನು ತಮ್ಮಿಂದ 15 ಮೈಲಿಗಳ ದೂರದಲ್ಲಿ ವಾಸಮಾಡಬೇಕೆಂದೂ ತಾವು ಕರೆದಾಗ ಬರಬೇಕೆಂದೂ ಅವರು ಆಜ್ಞೆಮಾಡಿದ್ದರಿಂದ ಅವರ ಬಾಧೆಯನ್ನು ಪರಿಹರಿಸುವದಕ್ಕೆ ನಾರಾಯಣರು ಮಾಡಿದ ಪ್ರಯತ್ನವೂ ಫಲವಾಗಲಿಲ್ಲ ಪ್ರಪಂಚದ ದುಃಖವನ್ನು ಕಳೆದು ಅದನ್ನು ಉದ್ಧಾರಮಾಡುವದಕ್ಕಾಗಿ, ಮಹಾತ್ಮರು ತಮ್ಮ ಉಕ್ಕೇರುತ್ತಿರುವ ಆನಂದವನ್ನೇ ನೀಡಿ ತಾವು ನಿರ್ಗುಣ–ನೀರವ–ನಿಸ್ತರಂಗ ಶಾಂತಾತ್ಮರಾಗುತ್ತಾರೆ. ಜ್ಞಾನವಾಗಲೀ ಧ್ಯಾನವಾಗಲೀ ವೃತ್ತಿರೂಪವಾದುದರಿಂದ ಅವುಗಳಿಗೆ ತಾರುಣ್ಯ-ವಾರ್ಧಕ್ಯಗಳೂ ಪಾಕ–ಪರಿಪಾಕಗಳೂ ಉಬ್ಬರವಿಳಿತಗಳೂ ಇರಬಹುದೆಂಬುದು ಸ್ವಾಭಾವಿಕ.

ಇದೇ ಅನುಭವಕ್ಕೆ ಹಲವು ದೃಷ್ಟಾಂತಗಳು ಪುರಾಣೇತಿಹಾಸಗಳಲ್ಲಿಯೂ ಇವೆ. ಶ್ರೀಕೃಷ್ಣನು ತತ್ತ್ವಜ್ಞಾನಿಯೂ ಸ್ಥಿತಪ್ರಜ್ಞನೂ ಜೀವನ್ಮುಕ್ತನೂ ಇದ್ದನೆಂಬುದೇನು? ಅವನು ಭಗವಂತನೇ ಆಗಿದ್ದನು. ಆದರೂ ಕುರುಕ್ಷೇತ್ರಯುದ್ಧದಲ್ಲಿ ಅರ್ಜುನನಿಗೆ ಭಗವದ್ಗೀತೆಯನ್ನು ಉಪದೇಶಮಾಡಿ ತನ್ನ ವಿಶ್ವರೂಪವನ್ನು ತೋರಿಸಿದಾಗ ಕೃಷ್ಣನಲ್ಲಿ ಇದ್ದ ಉತ್ಸಾಹವೂ ದೈವಾವೇಶವೂ ದಿವ್ಯಸ್ಫೂರ್ತಿಯೂ ಅನಂತರ ಬಹಳ ಕಾಲದ ಮೇಲೆ ವಿರಾಮ ಸಮಯದಲ್ಲಿ ಅರ್ಜುನನ ಬೇಡಿಕೆಯಂತೆ ಅವನಿಗೆ "ಅನುಗೀತೆ"ಯನ್ನು ಕೃಷ್ಣನೇ ಬೋಧಿಸಿದಾಗ ಅವನಲ್ಲಿರಲಿಲ್ಲ.

ಇದೇ ಬಗೆಯ ಅನೇಕ ಉದಾಹರಣೆಗಳನ್ನು ಕೊಡಬಹುದು.

ಅವರೇ ಹೇಳುತ್ತಿದ್ದಂತೆ, ಪರಮಾನಂದದ ಆವೇಶವುಳ್ಳ ಅಂಥ ಮಹಾತ್ಮರು ಲೋಕಹಿತಸಾಧನೆಗೆಂದು ಏನನ್ನಾದರೂ ಮಾಡುವದಕ್ಕೆ ಹೋಗದೆ ಸುಮ್ಮನೆ ಶಾಂತವಾಗಿರಬೇಕು. ಅವರು ಪರಮಾತ್ಮ ಚಿಂತನದ ತೀವ್ರ ತಪಸ್ಸಿನಿಂದ ಉರಿಯುತ್ತಾ ಜೀವಿಸಿದ್ದರೆ ಸಾಕು. ಅವರ ಸಾನ್ನಿಧ್ಯಮಾತ್ರದಿಂದಲೇ ಲೋಕವು ಉನ್ನತಿಯನ್ನು ಪಡೆಯುತ್ತದೆ.

ವಿಧೇಯರಾದ ಸತ್ಪುತ್ರರಿಗೂ ಬುದ್ಧಿಶಾಲಿಗಳಾದ ವಿದ್ಯಾರ್ಥಿಗಳಿಗೂ ವಾತ್ಸಲ್ಯಪೂರ್ಣ ಅಧ್ಯಾಪಕರಿಗೂ ವಿವೇಕಿಗಳಾದ ಗೃಹಸ್ಥರಿಗೂ ಸೇವಾಪ್ರವೃ

ನಾಗರಿಕರಿಗೂ ಉಜ್ಜ್ವಲ ರಾಷ್ಟ್ರಭಕ್ತರಿಗೂ ಪ್ರೇಮಾವೇಶದ ಭಗವದ್‌ಭಕ್ತರಿಗೂ ಸಾಧನಪರರಾದ ಸಾಧುಗಳಿಗೂ ವಿರಕ್ತರಾದ ಸಂನ್ಯಾಸಿಗಳಿಗೂ ನಿಸ್ಸ್ಪೃಹರಾದ ತಪಸ್ವಿಗಳಿಗೂ ಉತ್ಸಾಹಭರಿತ ಧರ್ಮಪ್ರಚಾರಕರಿಗೂ ಶ್ರದ್ಧಾವಂತ ಸನಾತನಿಗಳಿಗೂ ಕ್ರಾಂತಿಕಾರಕ ಸುಧಾರಕರಿಗೂ ಜೀವನ್ಮುಕ್ತರಿಗೂ ಅನುಭಾವಿಗಳಿಗೂ ಸ್ವಾಮಿರಾಮ ತೀರ್ಥರ ಜೀವನವು ಅಚ್ಚು ಮೆಚ್ಚಿನ ಉಚ್ಚವಾದ ಆದರ್ಶಗಳಿಂದ ತುಂಬಿದೆ.

ರಾಮತೀರ್ಥರು ಇಂಡಿಯಾದಲ್ಲಿ ಅನೇಕ ವರ್ಷಗಳು ಸಂಚಾರಮಾಡಿ ವ್ಯವಹಾರ ಯೋಗ್ಯ (Practical) ವೇದಾಂತವನ್ನು ಪ್ರಸಾರ ಮಾಡಿದರು. ೧೯೦೫ರಲ್ಲಿ ಅವರು ಹೃಷೀಕೇಶದಲ್ಲಿ ಕೇವಲ ಏಕಾಂತವನ್ನು ಸೇರಿದರು. ೧೯೦೬ರಲ್ಲಿ ಟೆಹರಿಯಿಂದ ೬೦ ಮೈಲಿಗಳ ದೂರದಲ್ಲಿ ೧೨, ೯೦೦ ಅಡಿಗಳ ಎತ್ತರದಲ್ಲಿ ವಸಿಷ್ಠಾಶ್ರಮದಲ್ಲಿ ವಾಸಮಾಡಲು ಪ್ರಾರಂಭಿಸಿದರು ಅವರ ೩೩ನೇ ವಯಸ್ಸಿನಲ್ಲಿ ಅವರು ಗಂಗಾನದಿಯಲ್ಲಿ ಸ್ನಾನಮಾಡುತ್ತಿದ್ದಾಗ ಹತೋಟಿಯಲ್ಲಿ ಸಿಕ್ಕದ ವೇಗವಾದ ಪ್ರವಾಹವು ಅವರ ದೇಹವನ್ನು ಕೊಚ್ಚಿಕೊಂಡು ಹೋಯಿತು

ಆ ಆಕಸ್ಮಿಕ ಮಹಾಸಮಾಧಿಯ—ಜಲಸಮಾಧಿಯ—ದುರಂತ ದಿನದ ಬೆಳಿಗ್ಗೆ, ಅವರು ಸ್ನಾನಕ್ಕೆ ಹೊರಡುವ ಸ್ವಲ್ಪ ಮುಂಚೆ ಆ ವಿಷಾದಕರ ಘಟನೆಗೆ ಕೆಲವು ನಿಮಿಷಗಳ ಹಿಂದೆ—ಅವರು ತಮ್ಮ ಜೀವನದ ಅಂತಿಮ ಮುಹೂರ್ತದಲ್ಲಿ ಬರೆದ ಒಂದು ಉರ್ದು ಲೇಖನದ ಕೊನೆಯಲ್ಲಿ ಮುಕ್ತಾಯಗೊಂಡಿರುವ ಚರಮ ಶ್ಲೋಕದಲ್ಲಿ, ಸನ್ನಿಹಿತವಿರುವ ಮೃತ್ಯುವಿನ ವಿಷಯವಾಗಿ ತಮ್ಮ ಮನಸ್ಸಿಗಾದ ಮುನ್ಸೂಚನೆಯನ್ನು ವ್ಯಕ್ತಮಾಡಿದ್ದಾರೆ. ಅದೇನೆಂದರೆ ·

"ಓ ಮೃತ್ಯುವೇ ! ನಿನಗೆ ಇಚ್ಛೆಯಾದರೆ ಈ ದೇಹವನ್ನು ಯಥೇಚ್ಛೆಯಾಗಿ ತೆಗೆದುಕೊಂಡು ಹೋಗು. ನಾನು ಬದುಕುವದಕ್ಕೆ ಇನ್ನೂ ಹೆಚ್ಚಾಗಿ ಅನೇಕ ದೇಹಗಳಿವೆ. ನಾನು ಚಂದ್ರನ ರಜತಮಯವಾದ ತಂತುಗಳನ್ನೂ ಸೂರ್ಯನ ಸುವರ್ಣಮಯವಾದ ಕಿರಣಗಳನ್ನೂ ಧರಿಸಿ ಸುಖವಾಗಿ ಜೀವಿಸಬಲ್ಲೆ. ನಾನು ಬೆಟ್ಟಗಳ ಹಳ್ಳಗಳಾಗಿಯೂ ಹೊಳೆಗಳಾಗಿಯೂ ಹಾಡುತ್ತಾ ಮೊರೆಯುತ್ತಾ ಸ್ವಚ್ಛಂದವಾಗಿ ಅಲೆದಾಡುತ್ತೇನೆ. ಸಾಗರದ ತರಂಗಗಳಲ್ಲಿ ನಾನು ಸಂತೋಷವಾಗಿ ಕುಣಿಯುತ್ತಿರುತ್ತೇನೆ. ಮಂದ ಮಾರುತನ ಮನೋಹರ ವಿಲಾಸವು ನಾನೇ ; ಉನ್ಮತ್ತ ಮಾರುತನು ನಾನೇ. ನನ್ನೀ ರೂಪಗಳು ಬದಲಾವಣೆಯ ಸಂಚಾರೀಭಾವ ಗಳು. ಮೇರುಶಿಖರದಿಂ ಕೆಳಗಿಳಿದು ಬಂದೆ ; ಬಾಗಿಲುಗಳನು ತಟ್ಟಿದೆನು ;

ನಿದ್ರಿಪರನೆಚ್ಚರಿಸಿದೆ. ಸಂತೈಸಿದೆನೊಬ್ಬನಂ, ಇನ್ನೊಬ್ಬನ ಕಣ್ಣೀರುಗಳನೊರಸಿದೆ. ಕೆಲವರಿಗೆ ಹೋರಿದೆ ; ಇತರರ ಮುಸುಕುಗಳ ತೆಗೆದೊಗೆದ ನಾನಿದನು ನೋಂಕಿದನು, ಅದನು ಸ್ಪರ್ಶಿಸಿ. ತೆಗೆದೆ ನಾ ಟೋಪಿಯನು, ಒಗೆದು ನಾ ಓಡಿಸಿಸು ನನ್ನೊಡನೆ ಇಡೆನು ಏನನ್ನೂ, ಯಾರೂ ನನ್ನನ್ನು ಕಂಡು ಹಿಡಿಯಲಾರರು. "

ಸ್ವಾಮಿರಾಮರ ಸಂದರ್ಶನವನ್ನು ಯಾರು ಮಾಡಿದರೂ ಅವರ ಜೀವನವೇ ಹೊಸಬಗೆಯಾಗುತ್ತಿತ್ತು. ಆ ಚೇತನದ ಅಲ್ಪತನವೂ ಕ್ಷುದ್ರತನವೂ ಅವರ ದರ್ಶನ ಮಾತ್ರದಿಂದ ಮಾಯವಾಗುತ್ತಿತ್ತು ; ಮಾನುಷ ವ್ಯಕ್ತಿಯು ಆ ಕ್ಷಣವೇ ದಿವ್ಯ ಭಾವದ ಉನ್ನತ ಸ್ವರ್ಗೀಯ ಭೂಮಿಕೆಗೆ ಎತ್ತಲ್ಪಡುತ್ತಿತ್ತು. ಅವರ ಸಾಕ್ಷಾತ್ ಸಂಪರ್ಕ ಹೊಂದಿದವರ ಕಣ್ಣುಗಳಲ್ಲಿ ಅವರ ಕಣ್ಣುಗಳಿಂದ, ಜೀವನದ ವಿಷಯದಲ್ಲಿ, ಸಂಪೂರ್ಣ ಲೋಕಾತೀತ (ಲೋಕವನ್ನು ಮೀರಿದ) ದೃಷ್ಟಿಯು ಮಿಂಚಿ ಚಿಮ್ಮುತ್ತಿತ್ತು. ಅವರ ವ್ಯಕ್ತಿತ್ವವು ಸಮ್ಮೋಹಕವಾಗಿದ್ದಿತು. ಸರ್ವದಾ ಲಾಸ್ಯ ವಾಡುತ್ತಿದ್ದ ಅವರ ಮಂದಹಾಸವು ಸುತ್ತಲೆಲ್ಲಾ ಬೆಳಕು ಬೀರುವಂತೆ ತೋರುತ್ತಿತ್ತು. ಆ ಪ್ರಸರಣದ ಪರಿಧಿಯಲ್ಲಿ ಸಿಕ್ಕವರ ಪ್ರೀತಿ-ವಿಶ್ವಾಸಗಳನ್ನು ನಿಮಿಷದಲ್ಲಿ ಸೆಳೆದುಕೊಳ್ಳುತ್ತಿತ್ತು. ಸ್ವಾಮಿ ರಾಮರು ಕವಿ-ಸಂನ್ಯಾಸಿಗಳೂ ತತ್ತ್ವಜ್ಞ-ಸಂತರೂ ಆನಂದೋನ್ಮತ್ತ ಯತೀಶ್ವರರೂ ಆಗಿದ್ದರು. ಅವರ ಅಂತ ರಂಗದ ಜ್ಞಾನಪ್ರಕಾಶವು ಸುತ್ತಲೂ ಎಲ್ಲರ ಮೇಲೂ ಸೌಂದರ್ಯ-ಪ್ರೇಮಗಳ ದಿವ್ಯ ಪ್ರಭಾಮಂಡಲವನ್ನು ಪ್ರಸರಿಸುತ್ತಿತ್ತು.

ಸ್ವಾಮಿ ರಾಮರು ಸಹಜವಾದ ಭೂಮಾನಂದೈಶ್ವರ್ಯದ ಆಢ್ಯತೆಯಿಂದ ತಮ್ಮನ್ನು ತಾವು 'ರಾಮ ಬದ್ಶಹ' ಎಂದು ಕರೆದುಕೊಳ್ಳುತ್ತಿದ್ದರು. ಅವರು ಜೀವನದ ತತ್ತ್ವಜ್ಞಾನವನ್ನು 'ವ್ಯವಹಾರ ವೇದಾಂತ'. "Practica Vedanta" ಎಂದು ಕರೆಯುತ್ತಿದ್ದರು ಅವರ ಉಪದೇಶಗಳು ಪ್ರಾಚೀನ ಸಿದ್ಧಾಂತಗಳ ಹಾಗೂ ಶಾಸ್ತ್ರಗಳ ಪುನರುಚ್ಚಾರಣೆ ಮಾತ್ರ ಆಗಿರಲಿಲ್ಲ ಸತ್ಯದ ಪರೀಕ್ಷೆಯನ್ನು ಬುದ್ಧಿಗೆ ಒಪ್ಪುವಂತೆ, ವಿಚಾರಸಮ್ಮತವಾಗಿ ಗ್ರಹಿಸುವದರಲ್ಲಿಯೂ ಅದನ್ನು ವ್ಯವಹಾರಸಾಧ್ಯವಾಗಿ ಮಾಡುವದರಲ್ಲಿಯೂ ಜೀವನದ ವಾಸ್ತವಾನು ಭವದಲ್ಲಿ ತರುವದರಲ್ಲಿಯೂ ಸಾಧಿಸಬೇಕೆಂದು ಅವರು ಹೇಳುತ್ತಿದ್ದರು ; ವಿಚಾರ ಮಾಡದೆ, ಸಾರ್ವತ್ರಿಕವಾದ ಅನುಭವಕ್ಕೆ ಹೋಲಿಸಿ ನೋಡದೆ, ಯಾವದನ್ನೂ ಸುಮ್ಮನೆ ಒಪ್ಪಿಕೊಳ್ಳಬಾರದೆಂದೂ ಹೇಳುತ್ತಿದ್ದರು. ಭೌತವಿಜ್ಞಾನ (Physics)

ರಸಾಯನ ಶಾಸ್ತ್ರ (Chemistry), ಪ್ರಾಣಿಶಾಸ್ತ್ರ (Biology) ಮೊದಲಾದವುಗಳನ್ನು ಪ್ರಯೋಗಶಾಲೆಯಲ್ಲಿ ಪರೀಕ್ಷೆ-ಪರೀಕ್ಷೆ-ಪ್ರಯೋಗಗಳಿಗೆ ಗುರಿಪಡಿಸಿ ವಿಚಾರದ ಒರೆಗಲ್ಲಿಗೆ ತಿಕ್ಕಿ ಅವುಗಳ ತತ್ತ್ವಗಳನ್ನು ಕಂಡುಹಿಡಿದಂತೆಯೇ ಧರ್ಮತತ್ತ್ವ-ಅಧ್ಯಾತ್ಮತತ್ತ್ವಗಳನ್ನೂ ವಿವೇಚನೆಯಿಂದ ಪರಿಶೀಲಿಸಿ ಒಪ್ಪಿಕೊಳ್ಳಬೇಕೆಂದೂ ಅವರು ಹೇಳುತ್ತಿದ್ದರು.

ಗಾಢವಾದ ರಾಗೋಜ್ಜ್ವಲತೆಯಿಂದಲೂ ಸೌಂದರ್ಯಾನುಭವದ ಕವಿಸಹಜವಾದ ಆನಂದದಿಂದಲೂ ಸುತ್ತಲಿರುವವರೊಡನೆ ತೋರಿಸುತ್ತಿದ್ದ ಏಕಾತ್ಮತೆಯ ಭಾವದಿಂದಲೂ ವಿಶಾಲವಾದ ಮಾನವೀಪ್ರೇಮದಿಂದಲೂ ಅವರು ಕೇವಲ ವಿದ್ವಾಂಸರಾದ ಶುಷ್ಕ ವೇದಾಂತಿಗಳಿಂದ ಭಿನ್ನರಾಗಿದ್ದರು. ಓಂಕಾರ ಗಾನವೇ ಅವರ ನಿತ್ಯದ ಆಹಾರವಾಗಿತ್ತು. ಸಹಜವಾಗಿ, ತಮ್ಮನ್ನು ತಾವು ತಮ್ಮ ವಿರೋಧಿಗಳಲ್ಲಿಯೂ ಕಾಣುತ್ತಿದ್ದ ಗಾಢವಾದ ಭಾವಾವೇಗವು ಅವರ ಶತ್ರುವಿನ ಹೃದಯವನ್ನೂ ವಶಪಡಿಸಿಕೊಳ್ಳುತ್ತಿತ್ತು. ಫೈಜಾಬಾದ್‌ನಲ್ಲಿ ಅವರನ್ನು ಇರಿದು ಕೊಲ್ಲುವದಕ್ಕಾಗಿ ತನ್ನ ವಸ್ತ್ರದಲ್ಲಿ ಕಠಾರಿಯನ್ನು ಮುಚ್ಚಿಟ್ಟುಕೊಂಡು ಬಂದಿದ್ದ ಒಬ್ಬ ಮತಾಂಧ ಮಹಮ್ಮದೀಯನ ಕೋಪಾವಿಷ್ಟವಾದ ವಿತಂಡವಾದವು ಅವರ ಮೋಹಕವಾದ ಮಂದಹಾಸದಿಂದಲೂ ಓಂಕಾರೋಚ್ಚಾರಣೆಯಿಂದಲೂ ಶಾಂತವಾಗಿ, ಆ ವೈರಿಯೂ ಪಶ್ಚಾತ್ತಾಪದಿಂದ ಅವರಿಗೆ ಶರಣಾಗತನಾಗಿ ಕ್ಷಮೆಯನ್ನು ಬೇಡಿ ಸಾಧುವಾದನೆಂಬದು ರಾಮತೀರ್ಥರ ಜೀವನದಲ್ಲಿ ನಡೆದ ವಿಸ್ಮಯಕಾರಕವಾದ ವಾಸ್ತವ ಘಟನೆ. ಅವರ ಕಾಂತಶಕ್ತಿಯ ವ್ಯಕ್ತಿತ್ವವು ಅಷ್ಟು ಸಮ್ಮೋಹಕವಾಗಿತ್ತು.

ಸ್ವಾಮಿ ವಿವೇಕಾನಂದರಂತೆಯೇ ಸ್ವಾಮಿರಾಮತೀರ್ಥರೂ ಭಾರತದಲ್ಲಿ ಆಧ್ಯಾತ್ಮಿಕ ಪುನರುಜ್ಜೀವನವನ್ನು ಉಂಟುಮಾಡಿದರು. ಆಧುನಿಕ ಭಾರತದ ವಿಚಾರ-ಭಾವನೆಗಳ ನಿರ್ಮಾಪಕರಾದ ವಿಭೂತಿಪುರುಷರಲ್ಲಿ ಸ್ವಾಮಿರಾಮತೀರ್ಥರೂ ಮುಖ್ಯರಾದವರು. ಜಡತೆಯನ್ನು ಕಳೆದೆದ್ದು, ಹಗಲು ಕನಸುಗಳನ್ನೂ ಬರಡಾದ ಕರ್ಮಾಚರಣೆಗಳನ್ನೂ ಕೈ ಬಿಟ್ಟು, ತನ್ನನ್ನು ತಾನು ಜಯಿಸುವದರಿಂದ ರಾಷ್ಟ್ರ ಸ್ವಾತಂತ್ರ್ಯವನ್ನು ಸಾಧಿಸಬೇಕೆಂದು ಅವರು ಭಾರತೀಯರನ್ನು ತಮ್ಮ ಬುದ್ಧಿವಾದಗಳಿಂದ ಬಡಿದೆಬ್ಬಿಸಿದರು. ಅವರು ತಮ್ಮ ಅಮೇರಿಕಾದ ಪ್ರವಾಸ-ಪ್ರವಚನಗಳಲ್ಲಿ, ಪಾಶ್ಚಾತ್ಯರು ಪೌರ್ವಾತ್ಯರನ್ನು ರಾಜಕೀಯ-ಆರ್ಥಿಕಾದಿ ರಂಗಗಳಲ್ಲಿ ಶೋಷಣೆ ಮಾಡುತ್ತಿರುವದನ್ನು, ನಿರ್ಭಯವಾಗಿ-ಯಾವ ನಿಷ್ಠುರ ರಾಜಕಾರಣಿಗೂ ಕಡಿಮೆ ಇಲ್ಲದಂತೆ-ಆದರೆ ನಿಷ್ಠುರವಾಗದಂತೆ, ಆತ್ಮೀಯತೆಯಿಂದ

ಅವರ ಮನಸ್ಸನ್ನು ಒಲಿಸಿಕೊಳ್ಳುವ ರೀತಿಯಲ್ಲಿ ಖಂಡಿಸುತ್ತಿದ್ದರು. ಹಿಂದುಳಿದಿರುವ ತಮ್ಮ ಮಾತೃಭೂಮಿಯ ಪರವಾಗಿ ಧೈರ್ಯೋತ್ಸಾಹಗಳಿಂದ ವಾದಿಸುತ್ತಿದ್ದರು. ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ವೀರಾವೇಶದಿಂದ ಹೋರಾಡಿದ ಕಾಂಗ್ರೆಸ್ ನಾಯಕರಲ್ಲಿ ಅನೇಕರಿಗೆ ಸ್ವಾಮೀ ರಾಮತೀರ್ಥರೇ ಪ್ರೇರಕಶಕ್ತಿಯೂ ಮಾರ್ಗದರ್ಶಕ ಧ್ರುವತಾರೆಯೂ ಆಗಿದ್ದರು. ಅವರು ೧೯೦೦ ರಲ್ಲಿ ೫೦ ವರ್ಷಗಳಿಗಿಂತಲೂ ಮುಂಚೆಯೇ ಭಾರತವು ಸ್ವಾತಂತ್ರ್ಯವನ್ನು ಪಡೆಯುವದೆಂದು ಹೇಳಿದ್ದ ಭವಿಷ್ಯವು ವಾಸ್ತವ ಘಟನೆಯಾಗಿರುವದು ಲೋಕಪ್ರಸಿದ್ಧವಾದುದು.

ಓಂ ! ಓಂ ! ಓಂ !



**ಪೂಜ್ಯಸ್ವಾಮಿ ನಿತ್ಯಾನಂದರು**
ಗಣೇಶಪುರಿ–ಮುಂಬಯಿ

# Idealism and Realism Reconciled in the Light of Vedanta - 1

# ವೇದಾಂತದೃಷ್ಟಿಯಿಂದ ವಿಜ್ಞಾನಸತ್ಯತಾವಾದ ಮತ್ತು ವಿಷಯಸತ್ಯತಾವಾದ- ಇವುಗಳ ಸಮನ್ವಯ

## ತಾ|| 13-1-1903ರಲ್ಲಿ ಸ್ಯಾನ್‌ಫ್ರಾನ್ಸಿಸ್ಕೋ ನಗರದ "ಗೋಲ್ಡನ್ ಗೇಟ್ ಹಾಲ್" ನಲ್ಲಿ ಮಾಡಿದ ಉಪನ್ಯಾಸ

The only Real and Ideal one in the form of ladies and gentlemen

(ಒಂದು ದೃಷ್ಟಿಯಿಂದ) ವಸ್ತುವೇ ಸತ್ಯವಾಗಿಯೂ (ಇನ್ನೊಂದು ದೃಷ್ಟಿಯಿಂದ) ಚಿತ್ತವೇ ಸತ್ಯವಾಗಿಯೂ ಈ ಸ್ತ್ರೀ ಪುರುಷರೂಪದಿಂದ ತೋರುತ್ತಿರುವ ಎಲೈ ಒಂದು ನಿಗೂಢ ತತ್ತ್ವವೆ !

ಈ ರಾತ್ರಿಯಲ್ಲಿ ವಿಚಾರಮಾಡಬೇಕಾದ ವಿಷಯವು ಬಹಳ ಗಹನವೂ ಜಟಿಲವೂ ಕಠಿಣವೂ ಆದುದು. ತತ್ತ್ವವಿಚಾರದ ಪರಿಚಯವನ್ನು ಸ್ವಲ್ಪ ಮಟ್ಟಿಗಾದರೂ ಆಗಲೇ ಪಡೆದವರು ಮಾತ್ರ ಈ ವಿಚಾರ ಸರಣಿಯನ್ನು ಚೆನ್ನಾಗಿ ಅನುಸರಿಸಿ ಗ್ರಹಿಸಿ ಆದ್ಯಂತವಾಗಿ ಅರ್ಥಮಾಡಿಕೊಳ್ಳಬಲ್ಲರು. ಈ ಗಹನ ವಿಚಾರಗಳನ್ನು ಅರ್ಥಮಾಡಿಕೊಳ್ಳಲಾರದೆ ನಿಮ್ಮ ಮನಸ್ಸಿಗೆ ಆಯಾಸವೂ ಬೇಸರವೂ ಆಗಿ, ನೀವೆಲ್ಲರೂ ಹೊರಟು ಹೋದರೂ ಅಥವಾ ಲೋಕವೆಲ್ಲಾ ಬಂದು ಕೇಳಿ 'ಆಹಾ ! ಎಂಥಾ ಅಪೂರ್ವವಾದ ದಿವ್ಯ ವಿಚಾರ !' ಎಂದು ಆಶ್ಚರ್ಯಾನಂದವನ್ನು ವ್ಯಕ್ತಮಾಡಿದರೂ ರಾಮನಿಗೆ ವ್ಯತ್ಯಾಸವೇನೂ ತೋರುವದಿಲ್ಲ. ಜನರ ಮೆಚ್ಚುಗೆಯನ್ನು ಪಡೆಯಬೇಕೆಂಬ ಎಲ್ಲಾ ಆಶೆಯನ್ನೂ ಮೀರಿ ಸತ್ಯವು ನಿಂತಿದೆ. ಜನರು ಅರಿಯಲಿ, ಅರಿಯದಿರಲಿ, ಮೆಚ್ಚಲಿ ಮೆಚ್ಚದಿರಲಿ, ವೈಜ್ಞಾನಿಕ ನಿಯಮಗಳು ಹಿಂದೂ ಜಗತ್ತನ್ನು ಆಳುತ್ತಿದ್ದವು, ಈಗಲೂ ಆಳುತ್ತಿವೆ, ಮುಂದೆ ಎಂದೆಂದೂ ವಿಶ್ವವನ್ನೆಲ್ಲಾ ಆಳುತ್ತಿರುತ್ತವೆ. ಗುರುತ್ವಾಕರ್ಷಣನಿಯಮವನ್ನು ಸರ್ ಇಸ್ಸಾಕ್ ನ್ಯೂಟನ್ನನು ಕಂಡುಹಿಡಿಯುವದಕ್ಕೆ ಮುಂಚೆಯೂ ಅದು ಅದೇ ಗುರುತ್ವಾಕರ್ಷಣ ನಿಯಮವಾಗಿಯೇ ಇದ್ದಿತು. ಜನರು

ಕಂಡುಹಿಡಿಯದೇ ಇರಬಹುದಾದ ನಿಯಮಗಳೂ ಇವೆ; ಆದರೂ ಅವು ಪ್ರಪಂಚವನ್ನು ಆಳುತ್ತಿವೆ. ಅನರ್ಘ್ಯವಾದ ಒಂದು ವಜ್ರವು ಒಂದು ಗಣಿಯಲ್ಲಿರಬಹುದು, ಯಾರೂ ಅದನ್ನು ಕಾಣದೆ, ತೆಗೆದುಕೊಳ್ಳದೆ ಇರಬಹುದು; ಆದರೂ ಅದು ತನ್ನ ವೈಭವದಲ್ಲಿ ತಾನು ಪ್ರಕಾಶಿಸುತ್ತಲೇ ಇರುತ್ತದೆ. ಜನರು ಅದನ್ನು ತೆಗದುಕೊಂಡು ತಮ್ಮ ಮಸ್ತಕದ ಮೇಲೆ ಇಟ್ಟುಕೊಳ್ಳಲಿ, ಅಥವಾ ಪೂರಾ ಅಲಕ್ಷ್ಯಮಾಡಲಿ ಆ ವಜ್ರಕ್ಕೆ ಅದೇನೂ ವ್ಯತ್ಯಾಸಮಾಡುವುದಿಲ್ಲ.

ಈ ದಿವಸದ ವಿಷಯವೇನೊ ಕಠಿಣವಾದುದೇ; ಆದರೆ ನೀವು ಏಕಾಗ್ರತೆಯಿಂದ ಗಾಢವಾಗಿ ಗಮನವಿಟ್ಟು ಆಲಿಸಿದುದೇ ಆದರೆ ನೀವದನ್ನು ಅರ್ಥಮಾಡಿಕೊಳ್ಳಬಲ್ಲಿರಿ. "ಅಷ್ಟು ಗಹನವೂ ವಿಚಾರಪರಿಪ್ಲುತವೂ ಆದ ತಾತ್ತ್ವಿಕ ವಿಷಯಗಳ ಮೇಲೆ ಮಾತನಾಡುವದರಿಂದ ಪ್ರಯೋಜನವೇನು? ನಮಗೆ ಅವು ಬೇಕಾಗಿಲ್ಲ. ಗಟ್ಟಿ ನಾಣ್ಯವೇನಾದರೂ ಇದ್ದರೆ ನಮಗೆ ಬೇಕು; ವ್ಯವಹಾರ—ಯೋಗ್ಯವಾದುದೂ ವ್ಯವಹಾರಸಾಧ್ಯವಾದುದೂ ನಮಗೆ ಬೇಕು"—ಎಂದು ನೀವು ಹೇಳಬೇಕಾಗಿಲ್ಲ ರಾಮನು ವ್ಯವಹಾರ್ಯವಾದ ವಿಷಯಗಳ ಮೇಲೆಯೇ ಮಾತನಾಡುತ್ತಿದ್ದಾನೆ; ಆದರೆ ವಿಚಾರಪೂರ್ಣವೂ ಊಹಾತ್ಮಕವೂ ಅದ ತತ್ತ್ವವಿವೇಚನೆಯೂ ನಮಗೆ ಬೇಕಾಗುತ್ತದೆ. ಯುಕ್ತಿಯುಕ್ತವಾದ ತತ್ತ್ವವಿಚಾರದ ಆಧಾರವಿಲ್ಲದೆ ಯಾವ ವಾಸ್ತವ ವಿಷಯವನ್ನೂ ಸಮಂಜಸವಾಗಿ ವಿವರಿಸುವದಕ್ಕೆ ಸಾಧ್ಯವಾಗುವುದಿಲ್ಲ. ನಿಮ್ಮ ಎಲ್ಲಾ ಸಾಧನೆಯೂ ಏನು? ನಿಮ್ಮ ಜ್ಞಾನಶಕ್ತಿಯೂ ಇಚ್ಛಾಶಕ್ತಿಯೂ ಕ್ರಿಯಾಶಕ್ತಿಯಾಗಿ ಪರಿವರ್ತನೆ ಹೊಂದುವದಲ್ಲದೆ ಬೇರೇನೂ ಅಲ್ಲ. ನೀವು ಏನನ್ನಾದರೂ ಬರೆಯಬೇಕಾದರೆ, ನಿಮ್ಮ ಲೇಖನಿಯು ಚಲಿಸುವದಕ್ಕೆ ಮೊದಲೇ ಪೂರಾ ವಿಷಯವು ನಿಮ್ಮ ಮನಸ್ಸಿನಲ್ಲಿ ವಿಚಾರರೂಪದಲ್ಲಿ ಬರಬೇಕು; ಕೃತಿಗೆ ಮೊದಲು ಮತಿಯೂ ಆಚರಣೆಗೆ ಮೊದಲು ವಿಚಾರಣೆಯೂ ಪ್ರಯೋಗಕ್ಕೆ ಮೊದಲು ಚಿಂತನ ಯೋಗವೂ ಯಾವಾಗಲೂ ಮುನ್ನಡೆದಿರುತ್ತವೆ. ನೀವು ಎಲ್ಲಿಗಾದರೂ ಹೋಗ ಬೇಕಾದರೆ, ಅಭ್ಯಾಸ ಬಲದಿಂದ ನೀವು ಯಾಂತ್ರಿಕವಾಗಿ ನಡೆದುಹೋಗಬಹುದು; ಇದಕ್ಕೆ ಯೋಚನೆ ಬೇಡವೆಂದು ತೋರುತ್ತದೆ. ಆದರೆ ನಿಮ್ಮ ನರನಾಡಿಗಳನ್ನೂ ಮಾಂಸಖಂಡಗಳನ್ನೂ ಚಲನವಲನಗಳನ್ನೂ ನಿಯಮಿಸುವ ಆ ಸಂಬಂಧವಾದ ಆಲೋಚನೆಯಿಲ್ಲದೆ ಒಂದು ಹೆಜ್ಜೆಯನ್ನೂ ಇಡುವುದು ಸಾಧ್ಯವಲ್ಲ. ಮೊದಲೇ ಮನಸ್ಸಿನಲ್ಲಿ ವಿಶ್ವವಿದ್ಯಾನಿಲಯದ ವಿಷಯವಾಗಿಯೂ ಅಲ್ಲಿ ಯಾವ ಬಗೆಯ ವಿದ್ಯಾಭ್ಯಾಸವನ್ನು ಮಾಡಬೇಕೆಂಬ ವಿಚಾರದಲ್ಲಿಯೂ ಆಲೋಚನೆಮಾಡದೆ ಯಾವ ವಿದ್ಯಾರ್ಥಿಯೂ ಕಾಲೇಜಿಗೆ ಹೋಗುವದಿಲ್ಲ. ಒಬ್ಬ ಕಳ್ಳನು ಯಾವನೊಬ್ಬ ಧನಿಕನ

ಐಶ್ವರ್ಯದ ವಿಷಯವಾಗಿ ಸಮಾಚಾರವನ್ನು ಯಾವಗಲೂ ಕೇಳಿ ಕೇಳಿ ಅವನ ಮನಸ್ಸಿನಲ್ಲಿ ಮೂಡುವ ಆಲೋಚನೆಗಳೇ ಕೃತಿರೂಪದಲ್ಲಿ ಪರಿವರ್ತನೆಹೊಂದಿ ಆ ಸಾಹುಕಾರನ ಮನೆಗೆ ಕನ್ನಹಾಕುವದಕ್ಕೆ ಧೈರ್ಯ ತಂದುಕೊಳ್ಳುತ್ತಾನೆ. ಯಾವ ಮನೋವ್ಯಾಪಾರವೂ ಇಲ್ಲದೆ, ಮಾಡಬೇಕಾದ ಕೆಲಸದ ವಿಷಯವಾಗಿ ಮೊದಲೇ ಯಾವ ಆಲೋಚನೆಯನ್ನೂ ಮಾಡದೆ, ಯಾವ ಕಾರ್ಯವನ್ನೂ ಮಾಡುವುದಕ್ಕೆ ಆಗುವುದಿಲ್ಲ

ಆದ್ದರಿಂದ ರಾಮನು ನಿಮ್ಮ ನಿಜಾತ್ಮನ ದೇವತ್ವವನ್ನು ಶ್ರೋತೃಗಳಾದ ನಿಮ್ಮೆಲ್ಲರ ಕಿವಿಗಳಲ್ಲಿ ಭೇರಿಹೊಡೆದು ಹೃದಯಗಳಲ್ಲಿ ತೂರಿ ತೂರ್ಯನಿನದಗೊಳಿಸು ವಂತೆ ಪ್ರಯತ್ನಮಾಡುತ್ತಾನೆ ಇದು ನಿಮ್ಮ ಹೃದಯಗಳಲ್ಲಿ ದಿನದಿನವೂ ಹೆಚ್ಚು ಹೆಚ್ಚು ಆಳವಾಗಿ ಇಳಿಯಲಿ ; ಗಂಟೆ ಗಂಟೆಗೂ ನಿಮ್ಮ ಮನಸ್ಸುಗಳಲ್ಲಿ ಇದು ಹೆಚ್ಚು ಹೆಚ್ಚಾಗಿ ಭೇದಿಸಲಿ , ಹೀಗಾದರೆ, ವ್ಯರ್ಥವಾದ ಊಹಾಪೋಹವೆಂದು ತೋರುವ ನಿಮ್ಮ ಮನಶ್ಶಕ್ತಿಯು, ವೈಜ್ಞಾನಿಕ ನಿಯಮಗಳ ಪ್ರಕಾರ, ಅತ್ಯಂತ ಉದಾತ್ತವಾದ ಕಾರ್ಯರೂಪವಾಗಿ ಪರಿವರ್ತನೆ ಹೊಂದುವದನ್ನು ಕಾಣುತ್ತೀರಿ, ಮತ್ತು ಈ ವಿಜ್ಞಾನವು ನಿಮ್ಮ ಸುಖದಲ್ಲಿಯೂ ಆನಂದದಲ್ಲಿಯೂ ರೂಪುಗೊಳ್ಳುವದನ್ನು ನೋಡುತ್ತೀರಿ.

"ವೇದಾಂತದ ದೃಷ್ಟಿಯಲ್ಲಿ, ವಿಜ್ಞಾನ-ಸತ್ಯತಾವಾದವೂ (ಜ್ಞೇಯ) ವಿಷಯ ಸತ್ಯತಾವಾದವೂ ಒಂದಕ್ಕೊಂದು ಅವಿರೋಧವಾಗಿ ಒಂದಾಗಿವೆ" ಎನ್ನುವದೇ ಈ ದಿನದ ವಿಷಯ ಇದನ್ನೇ ಬೇರೊಂದು ರೀತಿಯಲ್ಲಿ ಹೇಳುವುದಾದರೆ, "ವೇದಾಂತ ದಲ್ಲಿ ದರ್ಶನವಿವೇಚನೆ" ಎನ್ನುವದೇ ಈ ದಿನದ ವಿಷಯ. ತತ್ತ್ವಶಾಸ್ತ್ರಜ್ಞರಿಗೆ ಇದು ಅತ್ಯಂತ ಮಹತ್ವದ ವಿಚಾರ.

ವಿಜ್ಞಾನವೇ-ಅರಿವೇ-ಸತ್ಯವೆನ್ನುವ ವಾದ (Idealism) ಮತ್ತು ಜ್ಞೇಯ (ವಸ್ತು)ವೇ-ವಿಷಯವೇ-ಸತ್ಯವೆನ್ನುವ ವಾದ (Realism) ಎಂದರೆ ಏನು ?– ಎನ್ನುವದನ್ನು ನಿಮಗೆ ಸ್ವಲ್ಪ ಹೇಳಬೇಕಾಗಿದೆ. ಈ ವಿಷಯಗಳನ್ನು ವಿವರವಾಗಿ ವಿಚಾರಮಾಡುವುದಕ್ಕೆ ನಮಗೆ ಕಾಲಾವಕಾಶವಿಲ್ಲ. ಸಂಕ್ಷೇಪವಾಗಿ ಹೇಳುವ ದಾದರೆ, ನಮಗೆ ತೋರುವಂತೆ ಈ ಪ್ರಪಂಚವು ಸತ್ಯವಾದ ವಸ್ತುವಿಲಾಸ-ಎನ್ನುವ ನಂಬಿಕೆ ಅಥವಾ ವಿಚಾರವೇ ವಸ್ತು–ಸತ್ಯ ವಾದ (Realism); ನಮಗೆ ತೋರುವ ರೀತಿಯಲ್ಲಿ ಪ್ರಪಂಚವಿಲ್ಲ ; ಪ್ರಪಂಚವೇನೋ ಇದೆ, ಆದರೆ ಅದು ನಮಗೆ

ತೋರುವಂತೆಯೋ ಇಲ್ಲ-ಎಂಬ ವಿಚಾರಸರಣಿಯೇ, ಅರಿವೇ ಸತ್ಯ, ಎನ್ನುವ ವಾದವು (Idealism). ಆದರೆ ವಸ್ತು-ಸತ್ಯವಾದದ ಪ್ರಕಾರ, ವಸ್ತುಗಳು ನಮಗೆ ಹೇಗೆ ತೋರುತ್ತವೆಯೋ ಹಾಗೆಯೇ ತಮ್ಮಷ್ಟಕ್ಕೆ ತಾವೇ ಸ್ವತಂತ್ರವಾಗಿ ಸತ್ಯವಾಗಿವೆ-ಎನ್ನುತ್ತಾರೆ. ವಿಜ್ಞಾನವೇ (ಅರಿವೇ) ಸತ್ಯವೆಂಬ ವಾದದಲ್ಲಿ ಅನೇಕ ಶಾಖೆಗಳಿವೆ. ಬರ್ಕಲಿ (Berkeley) ಮತ್ತು ಫಿಕ್ಟೆ (Fichte) ಮಹಾಶಯರ ವಿಜ್ಞಾನ-ಸತ್ಯವಾದವು ವಿಷಯಿನಿಷ್ಠವಾದ (ಜ್ಞಾತೃನಿಷ್ಠವಾದ) ಆಂತರಿಕ-ವಿಜ್ಞಾನ ಸತ್ಯತಾ ವಾದ (Subjective Idealism) ವಾಗಿದೆ. ಬಾಹ್ಯಸಂಬಂಧವಾದ (ವಿಷಯನಿಷ್ಠ) (ಜ್ಞೇಯನಿಷ್ಠ) ವಾದ ವಿಜ್ಞಾನ-ಸತ್ಯತಾ ವಾದವು (Objective Idealism) ಪ್ಲೇಟೋ (Plato) ಮತ್ತು ಕ್ಯಾಂಟ್ (Kant) ಮಹಾಶಯರದು. ಇವೆರಡಕ್ಕೂ ಭಿನ್ನವಾಗಿ "ಕೇವಲ ವಿಜ್ಞಾನ-ಸತ್ಯತಾವಾದವೂ" (Absolute Idealism) ಇದೆ ಇದು ಹೆಗೆಲ್ (Hegel) ಮತ್ತು ಷೆಲ್ಲಿ (Shelley) ಮಹಾಶಯರ ಮತ್ತು ಅದೇ ವಿಚಾರ ಸರಣಿಯ ಇತರ ಪ್ರಭೃತಿಗಳ ವಾದವು ಬೆಯಿನ್ (Bain) ಮತ್ತು ಮಿಲ್ (Mill) ಮೊದಲಾದ ಅನೇಕ ತತ್ತ್ವವೇತ್ತರೂ ವಸ್ತು-ಸತ್ಯತಾ ವಾದವನ್ನೂ ಎತ್ತಿ ಹಿಡಿದಿದ್ದಾರೆ. ವಿಜ್ಞಾನ-ಸತ್ಯತಾ ವಾದದ ಅಥವಾ ವಿಷಯ-ಸತ್ಯತಾ ವಾದದ ಅನೇಕ ಶಾಖೆಗಳನ್ನು ಈಗ ವಿವರಿಸುವುದು ಸಾಧ್ಯವಲ್ಲ ನಾವು ಈ ರಾತ್ರಿಯ ವಿಚಾರದಲ್ಲಿ ಬರ್ಕ್ಲೀಯ ಆಂತರಿಕ ಸಂಬಂಧವಾದ ವಿಷಯಿನಿಷ್ಠ ವಿಜ್ಞಾನ-ಸತ್ಯತಾ (Subjective Idealism) ವಾದವನ್ನಾಗಲೀ ಪ್ಲೇಟೋ ಮತ್ತು ಕ್ಯಾಂಟ್ ಮಹಾಶಯರ ಬಾಹ್ಯಸಂಬಂಧವಾದ ವಿಷಯನಿಷ್ಠ ವಿಜ್ಞಾನ-ಸತ್ಯತಾ (Objective Idealism) ವಾದವನ್ನಾಗಲೀ ಹೆಗೆಲ್ ಅಥವಾ ಷೆಲ್ಲಿಗಳ ಕೇವಲ ವಿಜ್ಞಾನ-ಸತ್ಯತಾ (Absolute Idealism) ವಾದವನ್ನಾಗಲೀ ವಿಮರ್ಶೆಮಾಡುವುದಿಲ್ಲ. ಈ ಬೇರೆ ಬೇರೆ ವಾದಗಳ ವಿಷಯದಲ್ಲಿ ವೇದಾಂತದ ವಿಚಾರವೇನಿದೆಯೆನ್ನುವದನ್ನು ಎಲ್ಲರೂ ಸುಲಭವಾಗಿ ತಿಳಿಯುವದಕ್ಕೆ ಸಹಾಯಕವಾಗುವಷ್ಟು ಮಾತ್ರ ಈ ವಾದಗಳನ್ನು ಸೂಚಕವಾಗಿ ಪ್ರಸ್ತಾವಿಸೋಣ.

ವಿಷಯವನ್ನು ಪ್ರಾರಂಭಿಸುವದಕ್ಕೆ ಮೊದಲು ವಿಷಯಿ (Subject) ಮತ್ತು ವಿಷಯ (Object) ಎಂಬೀ ಎರಡು ಶಬ್ದಗಳ ಅರ್ಥವನ್ನು ವಿವರಿಸಬೇಕು. ಈ ಎರಡು ಶಬ್ದಗಳನ್ನು ಬೇರೆ ಬೇರೆ ಅರ್ಥದಲ್ಲಿ ಬಳಸುತ್ತಾರೆ. ಇವುಗಳಿಗೆ ವ್ಯಾಕರಣ ಶಾಸ್ತ್ರದಲ್ಲಿ ಒಂದು ಅರ್ಥವಾದರೆ, ರೂಢಿಯ ವ್ಯವಹಾರದಲ್ಲಿ ಬೇರೆ ಅರ್ಥವಿದೆ, ತತ್ತ್ವಶಾಸ್ತ್ರದ ಮಾತಿನಲ್ಲಿ ಈ ಶಬ್ದಗಳಿಗೆ ಮತ್ತೆ ಬೇರೆ ವಿಶಿಷ್ಟಾರ್ಥವೇ ಇದೆ. ತತ್ತ್ವಶಾಸ್ತ್ರದ ಭಾಷೆಯಲ್ಲಿ ವಿಷಯಿ (Subject) ಎಂದರೆ ಅರಿಯುವವನು ;

ಮತ್ತು ವಿಷಯ (Object) ಎಂದರೆ ಅರಿಯಲ್ಪಡುವ ವಸ್ತು. ಈ ಪೆನ್ಸಿಲ್ಲನ್ನು ನೀವು ನೋಡುತ್ತಿದ್ದೀರಿ, ಇದನ್ನು ನೋಡುತ್ತಿರುವ, ಅರಿಯುತ್ತಿರುವ ನೀವು ವಿಷಯಿ, ನಿಮ್ಮಿಂದ ನೋಡಲ್ಪಡುತ್ತಿರುವ, ಅರಿಯಲ್ಪಡುತ್ತಿರುವ ಈ ವಸ್ತುವೇ ವಿಷಯ. ಹೀಗೆ ಸಾಮಾನ್ಯ ಮಾತಿನಲ್ಲಿ ವಿಷಯಿ ಎಂದರೆ ಅರ್ಥಗ್ರಾಹಕ ಅಥವಾ ಬುದ್ಧಿ (The understanding or the Intellect)- ಆದರೆ ವೇದಾಂತದ ದೃಷ್ಟಿಯಿಂದ ಈ ಗ್ರಾಹಕವಾದ ಬುದ್ಧಿಯನ್ನೂ ವಿಚಾರ ಸಾಧನವಾದ ಕರಣವನ್ನೂ ವಿಷಯಿ ಎಂದು ಕರೆಯಬಾರದು ; ಏಕೆಂದರೆ ಇದೂ ವಿಷಯವೇ ಆಗಿದೆ ಇಂದ್ರಿಯ ಗ್ರಾಹ್ಯವಾದ ಯಾವ ವಸ್ತುವಾದರೂ ವಿಷಯವೆನಿಸುತ್ತದೆ ಬುದ್ಧಿಯನ್ನೂ ಬುದ್ಧಿಯ ವಿಚಾರವನ್ನೂ ಸ್ವಭಾವವನ್ನೂ ಅದರ ವ್ಯಾಪಾರದ ನಿಯಮಗಳನ್ನೂ ಕುರಿತು ನಾವು ಆಲೋಚನೆಮಾಡಬಹುದು; ಅವನ್ನು ಇದಿರಿಟ್ಟು ವಿಚಾರದ ಕಣ್ಣಿನಿಂದ ನೋಡಬಹುದು. ಹೀಗೆ ಬುದ್ಧಿಯನ್ನು ಕುರಿತು ನಾವು ಎಷ್ಟರ ಮಟ್ಟಿಗೆ ವಿಚಾರ ಮಾಡಬಹುದೋ ಅದನ್ನು ಅರಿಯಬಹುದೋ ನೋಡಬಹುದೋ ಅಷ್ಟರ ಮಟ್ಟಿಗೆ ಅದು ವಿಷಯವೇ ಹೊರತು ವಿಷಯಿ ಅಲ್ಲ ನಿಜವಾದ ವಿಷಯಿಯನ್ನು ಅಥವಾ ಜ್ಞಾತೃವನ್ನು ಅರಿಯುವದಕ್ಕಾಗಲೀ ಭಾವಿಸುವದಕ್ಕಾಗಲೀ ಸಾಧ್ಯವಲ್ಲ; ಅದನ್ನು ಕಾಣುವದೂ ಸಾಧ್ಯವಿಲ್ಲ. ಎಲ್ಲವನ್ನೂ ಅರಿಯತಕ್ಕ ಮೂಲ ಜ್ಞಾತೃವನ್ನು-ಜ್ಞಾತಾರನನ್ನು-ಹೇಗೆ ಏತರಿಂದ ಅರಿಯಬೇಕು ? ಸಕಲವನ್ನೂ ಅರಿಯತಕ್ಕವನು ಅರಿಯಲ್ಪಡುವದು ಹೇಗೆ ? (ವಿಜ್ಞಾತಾರಮರೇ ಕೇನ ವಿಜಾನೀಯಾತ್-ಉ.) ನಿಜವಾದ ವಿಷಯಿಯು ಅರಿಯತಕ್ಕವನೇ (ಜ್ಞಾತೃವೇ) ಹೊರತು ಅರಿಯಲ್ಪಡತಕ್ಕವನಲ್ಲ (ಜ್ಞೇಯವಲ್ಲ). ಯಾವದಾದರೂ ಅರಿಯಲ್ಪಟ್ಟ (ಜ್ಞೇಯವಾದ) ಕ್ಷಣದಲ್ಲಿಯೇ ಅದು ವಿಷಯವಾಗುತ್ತದೆ ; ವಿಷಯಿಯಾಗಿ ಉಳಿಯುವುದಿಲ್ಲ. ಆದರ ಸಾಮಾನ್ಯ ರೂಢಿಯ ಭಾಷೆಯಲ್ಲಿ ವಿಷಯಿಯೆಂದರೆ ವಿಷಯಗ್ರಾಹಕವಾದ ಬುದ್ಧಿ, ವಿವೇಚಕ ಪ್ರಜ್ಞೆ, ಆಲೋಚನಾ ಶಕ್ತಿ, ಯುಕ್ತಾಯುಕ್ತ ಪರಿಜ್ಞಾನ, ಹೇತುಮತಿ (Reason) ಎಂದಾಗುತ್ತದೆ. ವೇದಾಂತದ ಪ್ರಕಾರ ನಿಜವಾದ ವಿಷಯಿಯು, ನಿಜವಾದ ಜ್ಞಾತೃವು ನಿಜವಾದ ಆತ್ಮನೇ ಹೊರತು ಬೇರೆ ಅಲ್ಲ ಅನಂತವೂ ಅಖಂಡವೂ ಆಗಿರುವುದು ಅದೊಂದೇ ಎಲ್ಲಾ ದೇಹಗಳಲ್ಲಿಯೂ ಇರುವದು ಅದೊಂದೇ. ಈ ಸಂಬಂಧದಲ್ಲಿ ನೀವು ದಯವಿಟ್ಟು ಒಂದು ಸಂಸ್ಕೃತ ಶಬ್ದವನ್ನು ಸಹ ನೆನಪಿಟ್ಟುಕೊಳ್ಳಬೇಕು. ಸಂಸ್ಕೃತ ಭಾಷೆಯಲ್ಲಿ ಸಬ್‍ಜೆಕ್ಟ್ (Subject-ವಿಷಯಿ) ಎನ್ನುವುದನ್ನು ದ್ರಷ್ಟಾ ಎಂದೂ ಆಬ್‍ಜೆಕ್ಟ್ (Object-ವಿಷಯ) ಎನ್ನುವುದನ್ನು ದೃಶ್ಯ ಎಂದೂ ಕರೆಯುತ್ತಾರೆ. ಸಂಸ್ಕೃತದಲ್ಲಿ ನಿಜವಾದ ಸಬ್‍ಜೆಕ್ಟು

ವಿಷಯಿಯು ಬ್ರಹ್ಮವೇ, ಆತ್ಮನೇ. ಆತ್ಮ ಎಂಬ ಶಬ್ದವನ್ನು ಇಂಗ್ಲಿಷ್‌ನಲ್ಲಿ ಷೋಪನ್ ಹೇರ್‌ನ(Schopenhauer) ವಿಲ್ (Will)-ಇಚ್ಛಾಶಕ್ತಿ, ಸಂಕಲ್ಪಶಕ್ತಿ ಎಂದೋ ಹೆಗೆಲ್‌ನ (Hegel) ಹಾರ್ಡ್ ಇಂಟೆಲೆಕ್ಟ್ (Hard Intellect) ಆ್ಯಬ್ಸಲ್ಯೂಟ್ ಇಂಟೆಲೆಕ್ಟ್ (Absolute Intellect)-ಗಡುಸಾದ ಬುದ್ಧಿ ದೃಢವಾದ ಬುದ್ಧಿ, ಕೇವಲ ಬುದ್ಧಿ, ನಿರಪೇಕ್ಷ ಬುದ್ಧಿ, ನಿರುಪಾಧಿಕ ಬುದ್ಧಿ, ಸ್ವತಂತ್ರಬುದ್ಧಿ ಎಂದೋ ಕರೆಯಬಹುದು. ಹೆಗೆಲ್ ಮತ್ತು ಷೋಪೆನ್‌ಹಾವರ್ ಇವರಿಬ್ಬರೂ ಪರಸ್ಪರ ವಿರೋಧಿಗಳು, ಪ್ರತಿಕಕ್ಷಿಗಳು ಎಂಬುವುದು ನಿಮಗೆ ತಿಳಿದೇ ಇದೆ. ಅವರಿಬ್ಬರೂ ಒಬ್ಬರ ಮೇಲೊಬ್ಬರು ಯಾವಾಗಲೂ ಕತ್ತಿಯನ್ನೆಳೆದೇ ನಿಂತಿರುತ್ತಾರೆ. ಆದರೆ ವೇದಾಂತವು ಅವರಿಬ್ಬರಿಗೂ ವಿರೋಧವನ್ನು ಕಳೆದು ರಾಜಿ ಮಾಡಿಸುತ್ತದೆ; ಸಮನ್ವಯಮಾಡಿ ತೋರಿಸುತ್ತದೆ. ಷೋಪೆನ್ ಹಾವರ್‌ನ (Absolute will of Schopenhauer) ಕೇವಲ ನಿರಂಕುಶವಾದ ಸಂಕಲ್ಪ ಶಕ್ತಿಯು ಹೆಗೆಲ್ ಮಹಾಶಯನ (Absolute Intellect of Hegel) ಕೇವಲ ನಿರಪೇಕ್ಷವಾದ ಬುದ್ಧಿಯೇ ಆಗಿದೆ; ಅವನು ಹಾಗೆಂದು ಕರೆಯುವದನ್ನೇ ಇವನು ಹೀಗೆಂದು ಕರೆಯುತ್ತಾನೆ; ಇವರಿಬ್ಬರ ಮಾತು ಬೇರೆಯಾಗಿ ಕಂಡರೂ ಅರ್ಥ ಒಂದೇ ಎಂದು ವೇದಾಂತವು ಹೇಳುತ್ತದೆ. ಆದ್ದರಿಂದ ನಿರುಪಾಧಿಕ ಆತ್ಮನನ್ನೇ (Absolute Self) ಬ್ರಹ್ಮವೆಂದು ಕರೆದಿದೆ. ಇದನ್ನೇ ಕೇವಲ ಸರ್ವಸ್ವತಂತ್ರ ಇಚ್ಛಾಶಕ್ತಿ, ನಿರಂಕುಶ ಸಂಕಲ್ಪ ಶಕ್ತಿ (Absolute Will), ಕೇವಲ ನಿರಪೇಕ್ಷ ಸ್ವತಂತ್ರಬುದ್ಧಿ (Absolute Intellect), ಕೇವಲ ಸತ್ತಾ ಸಾಮಾನ್ಯ, (Absolute Existence), ಕೇವಲ ಪೂರ್ಣಾನಂದ (Absolute Bliss) ಎಂದೂ ಹೇಳಿದೆ

**ಆದ್ದರಿಂದ ನಿಜವಾದ (ವಿಷಯಿಯು) ದ್ರಷ್ಟನು-ಜ್ಞಾತೃವು ನಿಜವಾದ ಆತ್ಮನೇ. ಆದರೆ ಬುದ್ಧಿಯಲ್ಲಿ ಅಥವಾ ಅರಿವಿನಲ್ಲಿ ಹೊಳೆಯುವ ಆತ್ಮನೇ ವ್ಯಾವಹಾರಿಕ ದ್ರಷ್ಟಾ (Practical Subject) ಹೀಗೆ ಬುದ್ಧಿ ಎಂಬ ಕರಣದ ಉಪಾಧಿಯಿಂದ ಕೂಡಿದ ನಿಜವಾದ ಆತ್ಮನೇ ದ್ರಷ್ಟಾ, ವಿಷಯಿ ಜ್ಞಾತೃ (Subject) ಎಂದು ಕರೆಯಲ್ಪಡುತ್ತಾನೆ**

ವಿಷಯ–ಸತ್ಯತಾ ವಾದಿಗಳು ತಮ್ಮ ಪಕ್ಷವನ್ನು ಸಮರ್ಥನ ಮಾಡುವುದಕ್ಕೆ ಮುಂದಿಡುವ ಯುಕ್ತಿಗಳೇನು ? ಮತ್ತು ವಿಜ್ಞಾನ–ಸತ್ಯತಾ ವಾದಿಗಳು ತಮ್ಮ ವಾದವನ್ನು ಮಂಡಿಸುವದಕ್ಕೆ ಪ್ರತಿಪಾದಿಸುವ ಪ್ರಮಾಣ ಯುಕ್ತಿಗಳೇನು ? ಇದೊಂದು ವಿಸ್ತಾರವಾದ ವಿಷಯ ; ಆದರೆ ನಾವು ಸಂಕ್ಷೇಪವಾಗಿ ಇದನ್ನು ವಿಚಾರ

ಮಾಡೋಣ. ನಿಮ್ಮ ಬರ್ಕ್ಲೆಯನ್ನು ಪರಾಮರ್ಶಮಾಡುವದಕ್ಕೆ ಈಗ ಸಮಯವಿಲ್ಲ. ವಿಜ್ಞಾನ-ಸತ್ಯತಾ ವಾದಿಗಳಲ್ಲಿ ಬರ್ಕ್ಲೆಯೇ ಪ್ರಧಾನ ಪುರುಷ. ಅವನು ತನ್ನ ತತ್ತ್ವ ವಿವೇಚನೆಯಲ್ಲಿ ಹೇಗೆ ಒಮ್ಮೆಗೇ ಚುರುಕಾಗಿ ಭರಾಟೆಯಿಂದ ಪ್ರಾರಂಭಿಸುತ್ತಾನೆ, ವೇದಾಂತ ಶಾಸ್ತ್ರದ ಕೈಯಲ್ಲಿ ಕೈಯಿಟ್ಟು ನಿಕರವಾಗಿ ನಡೆಯುವವರೆಗೂ ಅವನು ಹೇಗೆ ಮೇಲೆ ಮೇಲೆ ಏರುತ್ತಾ ಹೋಗುತ್ತಾನೆ, ವೇದಾಂತಶಾಸ್ತ್ರದ ವಿಚಾರಸರಣಿಯಿಂದ ಒಡೆದು ಬೇರೆ ಹೊರಟ ಕ್ಷಣವೇ ಅವನು ಹೇಗೆ ದಾರಿ ತಪ್ಪಿ ವಕ್ರ ವಕ್ರವಾದ ಬಳಸುಹಾದಿಯಲ್ಲಿ ಬೀಳುತ್ತಾನೆ–ಎಂಬೀ ವಿಚಾರಗಳು ಬಹಳ ಕುತೂಹಲಕರವಾಗಿವೆ. ಇದೊಂದು ಬಹಳ ಆಸಕ್ತಿಯನ್ನು ಕೆರಳಿಸುವ ಸ್ವಾರಸ್ಯವಾದ ವಿಷಯ. ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ಮುಂದೋ ಅಲ್ಲಿಯ ಪ್ರಾಧ್ಯಾಪಕರ ಸಮ್ಮುಖದಲ್ಲಿಯೋ ಉಪನ್ಯಾಸ ಮಾಡುವುದಕ್ಕೆ ರಾಮನಿಗೆ ಅವಕಾಶ ಸಿಕ್ಕಿದರೆ ಈ ವಿಷಯವನ್ನು ತೆಗೆದುಕೊಳ್ಳಬಹುದು. ಅವನ ತತ್ತ್ವಶಾಸ್ತ್ರದಲ್ಲಿ ಅವನ ವಿಚಾರಕ್ರಮದ ಕೊನೆಯ ಭಾಗವು ಅದರ ಮೊದಲ ಭಾಗಕ್ಕೆ ಎಷ್ಟು ವಿರೋಧವಾಗಿದೆ, ಎಷ್ಟೆಷ್ಟು ಚೇತನ ಸತ್ತೆಗಳಲ್ಲಿ (In so many spirits) ಅವನು ಹೇಗೆ ಅವಶ್ಯವಾಗಿ ನಂಬಿಕೆಯನ್ನು ಇಡಲೇ ಬೇಕಾಯಿತು, ಈ ವಿಶ್ವದ ಆಡಳಿತ ನಡೆಸುವುದಕ್ಕೆ ಹೇಗೆ ಅವನು ಒಬ್ಬ ಸಗುಣೇಶ್ವರನನ್ನು (Personal God) ಅವಶ್ಯವಾಗಿ ತರಲೇ ಬೇಕಾಯಿತು, ಅವನ ತತ್ತ್ವಶಾಸ್ತ್ರದ ಪ್ರಕಾರ ಈ ಪ್ರಪಂಚದಲ್ಲಿ ಪ್ರತಿಯೊಂದು ವಸ್ತುವಿಗೂ ಒಂದೊಂದು ಚೇತನ ಸತ್ತೆಯ ಆಧಾರವಿಲ್ಲದೆ ಹೇಗೆ ಯಾವ ವಸ್ತುವೂ ಇರುವದು ಸಾಧ್ಯವಿಲ್ಲ, ಅವನ ತತ್ತ್ವವಿವೇಚನೆಯಲ್ಲಿ ಇನ್ನೂ ಏನೇನು ಅಸಂಬದ್ಧಗಳೂ ಅಸಂಗತಗಳೂ ತರಲ್ಪಟ್ಟಿವೆ, ಎಂಬೆಲ್ಲವನ್ನೂ ವಿಚಾರಮಾಡಿದರೆ ಜಿಜ್ಞಾಸುಗಳಿಗೆ ರಸವತ್ತಾದ (ಬೌದ್ಧಿಕ) ಔತನವೇ ಆಗಬಹುದು. ಒಳ್ಳೆಯದು, ಆದರೆ ಈ ವಿಷಯವನ್ನು ಈಗ ತೆಗೆದುಕೊಳ್ಳುವದಿಲ್ಲ.

ವಿಜ್ಞಾನ-ಸತ್ಯತಾ ವಾದಿಗಳು ಮುಂದೊಡ್ಡುವ ಯುಕ್ತಿಗಳಲ್ಲಿ ಈ ಮುಂದಿನ ಎರಡೋ ಮೂರೋ ಮುಖ್ಯವಾದವು. ಮೊದಲನೆಯದೇನೆಂದರೆ, ನಿಮ್ಮಲ್ಲಿಯೋ ಚಟುವಟಿಕೆಯಿಲ್ಲದೆ, ಚಲನ ವಲನವಿಲ್ಲದೆ, ಅರಿವಿನ ಕ್ರಿಯೆಯಿಲ್ಲದೆ ನೀವು ಏನನ್ನೂ ನೋಡಲಾರಿರಿ ; ಗ್ರಹಿಸಲಾರಿರಿ. ಈ ಪ್ರಪಂಚದಲ್ಲಿ ನೀವು ಇಂದ್ರಿಯಗಳಿಂದ ಏನನ್ನಾದರೂ ಗ್ರಹಿಸುವದಾದರೆ, ಅದು ನಿಮ್ಮಲ್ಲಿರುವ ವಿಷಯಿಯ–ದ್ರಷ್ಟೃವಿನ–ವ್ಯಾಪಾರದಿಂದ ಮಾತ್ರ ಚಟುವಟಿಕೆಯಿಂದ ಮಾತ್ರ. ನೀವು ಏನನ್ನೋ ಬರೆಯುತ್ತಿದ್ದೀರಿ ಎನ್ನೋಣ, ನಿಮ್ಮ ಮನಸ್ಸು ಲೇಖನದಲ್ಲಿಯೂ ಲೇಖನಿಯಲ್ಲಿಯೂ ಇದೆ ; ಆಗ ಒಂದು ಹಾವೇ ನಿಮ್ಮ ಮುಂದೆ ಹರಿದು ಹೋದರೂ ನೀವದನ್ನು ನೋಡುವದಿಲ್ಲ

ಆಗ ನಿಮಗೆ ಆ ಹಾವು ಹಾವೇ ಅಲ್ಲ. ಆ ಹಾವು ಅಲ್ಲಿಲ್ಲ ಈ ಸಂದರ್ಭದಲ್ಲಿ ವಿಜ್ಞಾನ–ಸತ್ಯತಾ ವಾದಿಗಳು ಹೇಳುವುದೇನೆಂದರೆ, ನಿಮ್ಮ ಚಟುವಟಿಕೆಯು, ನಿಮ್ಮ ಮನಸ್ಸಿನ ಚಲನವಲನವು ಅಥವಾ ನಿಮ್ಮಲ್ಲಿರುವ ದ್ರಷ್ಟೃವಿನ–ಜ್ಞಾತೃವಿನ–ಕ್ರಿಯಾ ವಿಲಾಸವು ಇಲ್ಲವಾದರೆ, ಅಲ್ಲಿ ವಸ್ತುವೇ ಇಲ್ಲ ನೀವು ನಿದ್ರಿಸುತ್ತಿರುವಾಗ, ನಿಮ್ಮಲ್ಲಿರುವ ಜ್ಞಾತೃವು (ವಿಷಯಿಯು) ಸ್ತಬ್ಧನಾಗಿ, ಕ್ರಿಯಾಶೂನ್ಯನಾಗಿ, ಇರುವದರಿಂದ ಸುತ್ತಲೂ ಶಂಖಗಳನ್ನು ಊದಿ ಭೇರಿಗಳನ್ನು ಬಾರಿಸಿದರೂ ನಿಮಗೆ ಕೇಳಿಸುವುದಿಲ್ಲ. ಕೆಲವು ಸಮಯ ಜನರು ನಿದ್ರಿಸುತ್ತಿರುವಾಗ ತಮ್ಮ ಕಣ್ಣುಗಳನ್ನು ಮುಚ್ಚಿಕೊಳ್ಳುವದೇ ಇಲ್ಲ; ಅರ್ಧ ತೆರೆದಿರುತ್ತಾರೆ, ಇನ್ನು ಕೆಲವರು ನಿದ್ರಿಸುತ್ತಿರುವಾಗ, ಅವರ ಕಣ್ಣುಗಳು ಪೂರಾ ಮುಚ್ಚಿಕೊಳ್ಳದೆ ತಾವಾಗಿಯೇ ಅರೆ ತೆರೆದಿರುತ್ತವೆ. ಅಂಥವರ ಕಣ್ಣುಗಳ ಎದುರಿಗೆ ಎಷ್ಟೋ ವಸ್ತುಗಳು ಇರುತ್ತವೆ ಅವರ ಕಣ್ಣು ಗುಡ್ಡೆಗಳ ಒಳಗೆ ಹಿಂಭಾಗದಲ್ಲಿರುವ ಪ್ರಕಾಶಗ್ರಾಹಿಯಾದ ಪೊರೆಯ (ಅಕ್ಷಿಪಟಲದ) ಮೇಲೆ ಕಣ್ಣೆದುರಿಗಿರುವ ಆ ವಸ್ತುಗಳ ರೂಪವೂ ಮೂಡಿರುತ್ತದೆ, ಆದರೂ ನಿದ್ರಿಸುತ್ತಿರುವ ಆ ಜನರು ಆ ವಸ್ತುಗಳನ್ನು ನೋಡುವುದಿಲ್ಲ ಈ ಸಂದರ್ಭದಲ್ಲಿ ನಿದ್ರಿಸುತ್ತಿರುವ ನಿಮ್ಮ (ಆ ಜನರ) ಮನಸ್ಸು ನಿಷ್ಕ್ರಿಯವಾಗಿರುವದರಿಂದಲೂ ನಿಮ್ಮಲ್ಲಿರುವ ಜ್ಞಾತೃವು ತನ್ನ ಕ್ರಿಯಾಶಕ್ತಿಯನ್ನು ಒತ್ತಾಯಿಸುತ್ತಿಲ್ಲವಾದ್ದರಿಂದಲೂ ನೀವು ವಸ್ತುಗಳನ್ನು ನೋಡುವದಿಲ್ಲ; ಅಥವಾ ವಿಷಯಗಳನ್ನು ಗ್ರಹಿಸುವುದಿಲ್ಲ ಮನಸ್ಸಿನ ಚಟುವಟಿಕೆಯಿಲ್ಲದೆ, ವ್ಯಾಪಾರವಿಲ್ಲದೆ ಈ ಪ್ರಪಂಚದಲ್ಲಿ ನೀವು ಏನನ್ನಾದರೂ ನೋಡಬಲ್ಲಿರಾ ? ಅರಿಯಬಲ್ಲಿರಾ ? ಇಲ್ಲ. ನಿಮ್ಮ ಮನಸ್ಸನ್ನು ನೀವು ಪ್ರವೃತ್ತಿಯಾಗಗೊಡದೆ ಸ್ತಬ್ಧವಾಗಿರಿಸಿಕೊಂಡು ಈ ಮೇಜನ್ನೋ ಆ ಗೋಡೆಯನ್ನೋ ನೋಡುವುದಕ್ಕೆ ಯತ್ನಮಾಡಿ, ರಾಮನ ಮಾತುಗಳನ್ನು ಕೇಳುವುದಕ್ಕೆ ಪ್ರಯತ್ನಮಾಡಿ, ಜಡವಾಗಿ ಚಲಿಸದಿರುವ ಮನಸ್ಸಿನಿಂದ ಯಾವ ವಿಷಯವನ್ನಾದರೂ ಗ್ರಹಿಸುವುದಕ್ಕೆ ಸಾಹಸಮಾಡಿ, ನೋಡಿ, ಸಾಧ್ಯವೆ ? ಮನಸ್ಸಿನಿಂದ ಭಾವಿಸದೆ ಆಲೋಚನೆಮಾಡದೆ, ಕಲ್ಪನೆಮಾಡದೆ ಏನನ್ನಾದರೂ ನೋಡಲು ಸಾಧ್ಯವೆ ? ಎಂದಿಗೂ ಇಲ್ಲ. ಆದ್ದರಿಂದ ಈ ಜಗತ್ತೆಲ್ಲಾ ಕೇವಲ ಭಾವನಾರೂಪವಲ್ಲದೆ ಬೇರಿಲ್ಲ; ನೀವು ನಿಮ್ಮ ಕಲ್ಪನೆಯನ್ನೇ ಹೊರಚಾಚಿ ಅದರಂತೆ ಪ್ರಪಂಚವನ್ನು ಕಾಣುತ್ತಿದ್ದೀರಿ. ಈ ಪ್ರಪಂಚವಿದೆಯೆಂದು ನಿಮಗೆ ಹೇಗೆ ಗೊತ್ತು ? ಅದು ಇದೆಯೆನ್ನುವದಕ್ಕೆ ನಿಮ್ಮ ಇಂದ್ರಿಯಗಳೇ ಸಾಧನವಲ್ಲವೆ ? ಪ್ರಮಾಣವಲ್ಲವೆ ? ಆದರೆ ಇಂದ್ರಿಯಗಳು ಸ್ವತಂತ್ರವಾಗಿ ಸಾಧನವಲ್ಲ, ಪ್ರಮಾಣವಲ್ಲ, ತಮ್ಮಷ್ಟಕ್ಕೆ ತಾವೇ ವಿಷಯಗಳನ್ನು ಗ್ರಹಿಸಲಾರವು. ಮನಸ್ಸು ಇಂದ್ರಿಯಗಳೊಡನೆ ಸೇರಿದಾಗಲೇ ಅವು ವಿಷಯಗಳನ್ನು ಗ್ರಹಿಸಬಲ್ಲವು. ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ, ಇಂದ್ರಿಯಗಳು ವಿಷಯಗಳನ್ನು ಗ್ರಹಿಸಲಾರವು

ಅಥವಾ ಗ್ರಹಿಸುವದಿಲ್ಲ, ಮನಸ್ಸೇ ಇಂದ್ರಿಯಗಳ ಮೂಲಕ ವಿಷಯಗಳನ್ನು ಗ್ರಹಿಸುತ್ತದೆ. ಈ ಮನಸ್ಸೇ ಅಥವಾ ಅರ್ಥಗ್ರಹಣವೇ (Understanding) ವಿಷಯಿ ಅಥವಾ ಜ್ಞಾತೃವೆಂದು ನೆನಪಿಡಬೇಕು ಮನಸ್ಸಿನ ಚಟುವಟಿಕೆಯಿಲ್ಲದೆ, ಮನೋವ್ಯಾಪಾರವಿಲ್ಲದೆ, ನೀವು ಏನನ್ನೂ ಕೇಳಲಾಗುವುದಿಲ್ಲ, ಏನನ್ನೂ ನೋಡಲಾಗುವುದಿಲ್ಲ, ಮಾಡಲಾಗುವದಿಲ್ಲ, ಗ್ರಹಿಸಲಾಗುವದಿಲ್ಲ ಆದ್ದರಿಂದ ವಿಜ್ಞಾನ-ಸತ್ಯತಾ ವಾದಿಗಳು ಹೇಳುವದೇನೆಂದರೆ, "ಈ ಪ್ರಪಂಚವು ಸತ್ಯವೆಂದೂ ಕಾಣುವ ಈ ವಸ್ತುಗಳೆಲ್ಲಾ ಸ್ವತಂತ್ರವಾಗಿಯೇ ವಾಸ್ತವವೆಂದೂ ತಿಳಿದಿರುವ ಓ ಪ್ರಪಂಚದ ಜನರೆ! ತಪ್ಪು ತಿಳಿವಳಿಕೆಗೆ ಬಲಿಯಾಗಿ ನಿಮ್ಮನ್ನು ನೀವು ಮರೆಯಬೇಡಿರಿ. ಈ ಎಲ್ಲಾ ವಸ್ತುಗಳನ್ನೂ ನೀವೇ ಸೃಷ್ಟಿಸಿದ್ದೀರಿ. ನಿಮ್ಮ ಕಲ್ಪನೆಯಿಂದಲೇ ಇವೆಲ್ಲಾ ಕಾಣುತ್ತಿವೆ. ನಿಮ್ಮ ಚಿತ್ತವೇ, ಅರಿವೇ ವಿಜ್ಞಾನವೇ, ಭಾವನೆಯೇ ಈ ಪ್ರಪಂಚವಾಗಿ ತೋರುತ್ತಿದೆ. ಆದ್ದರಿಂದ ವಿಜ್ಞಾನ ಒಂದೇ ಸತ್ಯ! ಪ್ರಪಂಚವು ನಿಜವಲ್ಲ" ವಿಜ್ಞಾನ-ಸತ್ಯತಾ ವಾದಿಗಳು ಹೇಳುವದು ಹೀಗೆಯೇ! ಇದು, ವೇದಾಂತಿಗಳು ಹೇಳುವಂತೆಯೇ ತೋರುತ್ತಿದೆ. ಆದರೆ ರಾಮನು ಹೇಳುವದೇನೆಂದರೆ, ಬರ್ಕ್ಲೀ, ಪ್ಲೇಟೋ, ಹೆಗೆಲ್, ಕ್ಯಾಂಟ್, ಫಿಕ್ಟೆ, ಷೆಲ್ಲಿ, ಷೋಪೆನ್‌ಹೋವರ್ ಮೊದಲಾದ ವಿಜ್ಞಾನ-ಸತ್ಯತಾ ವಾದಿಗಳು ವೇದಾಂತ ತತ್ತ್ವವನ್ನೇ ಪ್ರತಿಪಾದಿಸುವಂತೆ ತೋರಿದರೂ ವೇದಾಂತವು ನಿರೂಪಿಸುವ ದರ್ಶನ ವಿಚಾರವು (Theory of Perception) ಇವರೆಲ್ಲರ ವಿಚಾರ ವಿವೇಚನೆಯನ್ನೂ ಮೀರಿ ಬಹಳದೂರ ಮೇಲೇರುತ್ತದೆ. ಈ ಜನರು ಪರಸ್ಪರ ವಿರೋಧದಿಂದಲೂ ಘರ್ಷಣೆಯಿಂದಲೂ ಕಲಹಮಾಡುತ್ತಾರೆ ಆದರೆ ವೇದಾಂತಶಾಸ್ತ್ರವು ಇವರೆಲ್ಲರ ವಿರೋಧಗಳನ್ನೂ ಹೋಗಲಾಡಿಸಿ, ಎಲ್ಲರಲ್ಲಿರುವ ಸಮಾನ ಗುಣಗಳನ್ನು ತೋರಿಸಿ, ಸೌಹಾರ್ದವನ್ನೂ ಸ್ನೇಹವನ್ನೂ ಉಂಟುಮಾಡುತ್ತದೆ. ಇವರೆಲ್ಲರೂ ವ್ಯಕ್ತಿಯಲ್ಲಿರುವ ಜ್ಞಾತೃವನ್ನು ಅಥವಾ ಜೀವಾತ್ಮನನ್ನು-ವಿಷಯಿಯನ್ನು (Subjective Self) ಅತ್ಯಂತ ಶ್ರೇಷ್ಠ ಮಹತ್ವವನ್ನು ಕೊಟ್ಟು ದೇವತ್ವಕ್ಕೆ ಏರಿಸುತ್ತಾರೆ. ಆದರೆ ವೇದಾಂತವು ಆ ತತ್ತ್ವಜ್ಞರಂತೆ ಜ್ಞಾತೃವಿನ ಅಹಂಕಾರವನ್ನು ಅತಿಶಯ ಗೌರವಿಸಿ ಮಹಿಮಾವಂತವೆಂದು ಮಾಡಿ ಕೈಲಾಸಕ್ಕೇರಿಸಿ ಅದೇ ಪರಮೇಶ್ವರನೆಂದು ಸ್ತುತಿಸುವದಿಲ್ಲ. ನಮ್ಮ ವಾದ-ವಿಚಾರ-ಸಿದ್ಧಾಂತಗಳ ಅಭಿಮಾನವನ್ನೂ ಇಷ್ಟಾನಿಷ್ಟಗಳ ಅಭಿನಿವೇಶವನ್ನೂ ಪೂರ್ವಾಗ್ರಹಗಳನ್ನೂ ಬಿಟ್ಟು ಬಿಚ್ಚುಮನಸ್ಸಿನಿಂದಲೂ ನಿರ್ಮಲದೃಷ್ಟಿಯಿಂದಲೂ ಸತ್ಯವನ್ನು ಶೋಧಿಸಿದೆಯೋ ಹಾಗೇ, ಸತ್ಯಕ್ಕಾಗಿಯೇ ಇದ್ದುದನ್ನು ಇದ್ದಂತೆ ಅರಿಯಬೇಕು.

ಈ ವಿಜ್ಞಾನ-ಸತ್ಯತಾ ವಾದಿಗಳು ಮುಂದೊಡುವ ಇನ್ನೊಂದು ಯುಕ್ತಿ ಇದೆ:

ಜನರು ಸಾಮಾನ್ಯವಾಗಿ ಸತ್ಯವೆಂದು ತಿಳಿಯುವ ಈ ಪ್ರಪಂಚವನ್ನು ವಿಚಾರಶೀಲರಾದ ವಿವೇಕಿಗಳು ಸತ್ಯವೆಂದು ತಿಳಿಯಬಾರದು. ಏಕೆಂದರೆ, ಪ್ರಪಂಚವೆಲ್ಲ ಇಂದ್ರಿಯಗೋಚರ ವಾದುದು. ನಮ್ಮ ಇಂದ್ರಿಯಗಳು ಹೇಗೆ ತೋರಿಸುತ್ತಿವೆಯೋ ಹಾಗೆಯೇ ಪ್ರಪಂಚ ವಿದೆಯೆಂದು ತಿಳಿದಿದ್ದೇವೆ. ಇದರಲ್ಲಿ ನಮ್ಮ ಇಂದ್ರಿಯಗಳನ್ನು ನಾವು ಅತಿಯಾಗಿ ನಂಬಿದ್ದೇವೆ. ನಾವು ಪ್ರಪಂಚವು ಸತ್ಯವೆಂದು ನಂಬಿರುವದಕ್ಕೆ ನಮಗೆ ನಮ್ಮ ಇಂದ್ರಿಯ ಗಳೆ ಪ್ರಮಾಣ. ನಮ್ಮ ಇಂದ್ರಿಯಗಳನ್ನು ನಾವು ನಂಬಬಹುದೆ, ಎಂದು ಅವುಗಳ ಗುಣ-ಧರ್ಮ-ಸ್ವಭಾವಗಳನ್ನೇ ಪರೀಕ್ಷೆ ಮಾಡಿದರೆ ನಮಗೆ ನಿರುತ್ಸಾಹವುಂಟಾಗುತ್ತದೆ ; ನಮ್ಮ ನಂಬಿಕೆಯು ಕೇವಲ ಭ್ರಮೆ ಎನ್ನಿಸುತ್ತದೆ. ಇಂದ್ರಿಯಗಳನ್ನು ಪರೀಕ್ಷೆಮಾಡದೆ ನಂಬಿ ತುಂಬಾ ಮೋಸಹೋಗಿದ್ದೇವೆ ಎನ್ನಿಸದೇ ಇರದು. ಉದಾಹರಣೆಗಾಗಿ ಇಂದ್ರಿಯಗಳಲ್ಲಿ ನಮ್ಮ ಕಣ್ಣನ್ನು ತೆಗೆದುಕೊಳ್ಳೋಣ. ಮನುಷ್ಯನ ಕಣ್ಣಿಗೆ ಕಂಡಂತೆಯೇ ಇರುವೆಯ ಕಣ್ಣಿಗೆ ಕಾಣುವದಿಲ್ಲ ಮನುಷ್ಯನ ಕಣ್ಣಿಗೆ ಕಾಣುವ ವಸ್ತುಗಳೇ ಆನೆಯ ಕಣ್ಣಿಗೆ ಹೆಚ್ಚು ದೊಡ್ಡದಾಗಿ ಕಾಣುತ್ತವೆ ಕಪ್ಪೆಯ ಕಣ್ಣಿಗೆ, ನೀರಿನಲ್ಲಿ ನೋಡಿದರೆ, ವಸ್ತುಗಳು ಸ್ವಚ್ಛವಾಗಿ ಕಾಣುತ್ತವೆ ಹೊರಗೆ ಗಾಳಿಯಲ್ಲಿರುವ ವಸ್ತುಗಳು ಅದರ ಕಣ್ಣಿಗೆ ಮಂಜು ಕವಿದಿರುವಂತೆ ಮಬ್ಬಾಗಿ ಕಾಣುತ್ತವೆ. ಈಗ ಯಾರ ಕಣ್ಣನ್ನು ನಂಬಬೇಕು ? ಮನುಷ್ಯನ ಕಣ್ಣನ್ನು ನಂಬೋಣವೆ ? ಆನೆಯ ಕಣ್ಣನ್ನು ನಂಬೋಣವೆ ? ಇರುವೆಯ ಕಣ್ಣನ್ನು ನಂಬೋಣವೆ ? ಬಹುಸಂಖ್ಯಾತ ಜೀವಿಗಳ ಅಭಿಪ್ರಾಯದ ಮೇಲೆ ತತ್ತ್ವವನ್ನು ನಿರ್ಣಯಮಾಡುವುದಾದರೆ ಪ್ರಪಂಚ ದಲ್ಲಿ ಮನುಷ್ಯರಿಗಿಂತ ಇರುವೆಗಳೇನೂ ಸಂಖ್ಯೆಯಲ್ಲಿ ಕಡಿಮೆ ಇಲ್ಲ ನಮ್ಮ ಕಣ್ಣು ಸೂಕ್ಷ್ಮದರ್ಶಕ ಲೆನ್ಸುಗಳ ತತ್ತ್ವದ ಮೇಲೆ ರಚಿಸಲ್ಪಟ್ಟರೆ, ಅಥವಾ ನಮ್ಮ ಕಣ್ಣು ಗಳಲ್ಲಿ ಸಹಜವಾಗಿರುವ ಲೆನ್ಸನ್ನು ಒಳಗೆ ಹಿಂದಿರುವ ಅಕ್ಷಿಫಲಕಕ್ಕೆ (Retina) ಬೇರೆ ಬಗೆಯಲ್ಲಿ ಅಳವಡಿಸಿದರೆ, ಆಗ ಈ ಪ್ರಪಂಚವು ನಮಗೆ ತೀರಾ ಬೇರೆ ಬಗೆಯಲ್ಲಿಯೇ ಕಾಣುತ್ತದೆ. ನಮ್ಮ ಕಣ್ಣುಗಳ ಅಕ್ಷಿಫಲಕವನ್ನು ದೂರದರ್ಶಕ ತತ್ತ್ವದ ರೀತಿಯಲ್ಲಿ ವ್ಯವಸ್ಥೆಗೊಳಿಸುವದಾದರೆ ಪ್ರಪಂಚವೆಲ್ಲಾ ನಮಗೆ ಪೂರಾ ಬದಲಾವಣೆ ಹೊಂದಿ ದಂತೆಯೇ ತೋರುತ್ತದೆ. "ನೋಡು, ನಗು" "Look and Laugh" ಎನ್ನುವ ಗೊಂಬೆಯನ್ನು ನೀವು ನೋಡಿರಬಹುದು. ಅಥವಾ ಹಾಸ್ಯಾಸ್ಪದವಾಗಿ ತೋರುವ ಹೊರ ಉಬ್ಬಿನ ಎರಡು ಚೂರುಗಳುಳ್ಳ ಗಾಜನ್ನು ನೋಡಿರಬಹುದು. ಆ ಗಾಜಿನ ಮೂಲಕ ನಾವು ನೋಡಿದರೆ, ಎಲ್ಲಾ ವಸ್ತುಗಳೂ ಹುಚ್ಚುಹುಚ್ಚಾಗಿ, ಹಾಸ್ಯಾಸ್ಪದವಾಗಿ ಕಾಣುತ್ತವೆ. "ನೋಡು-ನಗು" ಎನ್ನುವ ಗಾಜಿನ ವಿನೋದ ವಸ್ತುವಿನ ಮೂಲಕ ನೋಡಿದರೆ ಅತ್ಯಂತ ಸುಂದರವಾದ ಮುಖವು ಸಹ, ಅತಿ ಉದ್ದವಾಗಿ, ಗದ್ದವು ಭೂಮಿಗೂ ತಲೆಯು ಶನಿಗ್ರಹಕ್ಕೂ ಮುಟ್ಟಿರುವಂತೆ ವಿಕಾರವಾಗಿ

ತೋರುತ್ತದೆ. ಆ ಹುಚ್ಚಾಟದ ಗಾಜಿನಿಂದಲೇ ಅದೇ ಮುಖವನ್ನು ಇನ್ನೊಂದು ರೀತಿಯಲ್ಲಿ ನೋಡಿದರೆ ಮುಖದ ಉದ್ದವು ಮಾತ್ರ ಹಾಗೇ ಇದ್ದು, ಒಂದು ಕಿವಿಯು ಇಂಡಿಯಾದವರೆಗೂ ಇನ್ನೊಂದು ಕಿವಿಯು ಚೈನಾದವರೆಗೂ ಎಳೆದಿರುವಂತೆ ತೋರುತ್ತದೆ. ಒಳ್ಳೆಯದು, ಆ ತತ್ತ್ವದ ಮೇಲೆ ನಮ್ಮ ಕಣ್ಣುಗಳನ್ನು ವ್ಯವಸ್ಥೆಗೊಳಿಸುವದಾದರೆ ನಮ್ಮ ಪಾಲಿಗೆ, ದೃಷ್ಟಿಗೆ, ಪ್ರಪಂಚವೇ ಪೂರಾ ಬದಲಾಗುತ್ತದೆ. ಕಿವಿ, ಮೊದಲಾದ ಇತರ ಇಂದ್ರಿಯಗಳ ವಿಚಾರವೂ ಹೀಗೆಯೇ. ಇದೇ ಪ್ರಕಾರವಾಗಿ ನಮ್ಮ ಶರೀರದ ನರನಾಡಿಗಳೂ ಮಾಂಸಖಂಡಗಳೂ ಬೇರೆ ಬಗೆಯಲ್ಲಿ ವ್ಯವಸ್ಥಿತವಾದರೆ ಇಡೀ ಜಗತ್ತೇ ಬೇರೆ ಬಗೆಯಾದಂತೆ ತೋರುತ್ತದೆ. ಇದಕ್ಕೆ ಉತ್ತರವಾಗಿ ನೀವು ಹೀಗೆ ಹೇಳಬಹುದು : ನಮ್ಮ ಶರೀರದ ಇಂದ್ರಿಯಗಳೂ ನರನಾಡಿಗಳೂ ಮಾಂಸಖಂಡಗಳೂ ಹೀಗೆ ಅಳವಡಿಸಿ ಹೊಂದಿಸಲ್ಪಟ್ಟರೆ, ಅವು ಬದಲಾಯಿಸದೆ, ಎಂದೆಂದೂ ಸಿಷ್ಕೃಷ್ಟವಾಗಿ ಹೀಗೆಯೇ ಇರಬೇಕು—ಎಂದು. ಆದರೆ ಅದು ಸರಿಯಲ್ಲ. ಏಕೆಂದರೆ, ವಿಕಾಸವಾದದ ನಿಯಮ ಪ್ರಕಾರ ಎಲ್ಲವೂ ಬದಲಾವಣೆ ಹೊಂದುತ್ತಿವೆ ; ಹೊಂದಲೇ ಬೇಕು. ಆದ್ದರಿಂದ ನಮಗೆ ತೋರುವ ರೂಪದಲ್ಲಿಯೇ ಪ್ರಪಂಚವಿಲ್ಲ. ನಮಗೆ ತೋರುವ ಬಗೆಯಲ್ಲಿ ಪ್ರಪಂಚವು ಸುಳ್ಳಾಗಿದೆ, ನಿಜವಲ್ಲ, ಕೇವಲ ಭ್ರಮೆ, ಭ್ರಾಂತಿ, ಮಿಥ್ಯಾ, ಮಾಯೆ. ವಿಜ್ಞಾನ–ಸತ್ಯತಾವಾದಿಗಳು ಹೀಗೆಲ್ಲಾ ಹೇಳುತ್ತಾರೆ.

ಅವರು ತಮ್ಮ ವಾದವನ್ನು ಸಾಧಿಸುವದಕ್ಕೆ ಬೇರೆ ಅನೇಕ ಯುಕ್ತಿಗಳನ್ನು ನಿರೂಪಿಸುತ್ತಾರೆ. ಅದನ್ನು ವಿವರಿಸುವದಕ್ಕೆ ಹೊರಟರೆ ವಿಜ್ಞಾನ-ಸತ್ಯತಾ (Idealism) ವಾದವನ್ನು ಮನಗಾಣಿಸುವುದಕ್ಕೇ ಎಷ್ಟೋ ರಾತ್ರಿಗಳು ಬೇಕಾಗಬಹುದು.

ಈಗ ವಸ್ತು-ಸತ್ಯತಾ (Realism) ವಾದವನ್ನು ತೆಗೆದುಕೊಳ್ಳೋಣ. ಈ ವಾದಿಗಳು ಹೇಳುವದೇನೆಂದರೆ ; "ವಿಜ್ಞಾನ ಒಂದೇ ಸತ್ಯವೆಂಬ ಎಲೈ ವಾದಿಗಳೆ, ನೀವು ಹೇಳುವದು ಸರಿಯಲ್ಲ, ಅದು ಪೂರಾ ತಪ್ಪು. ನಾವು ಕಾಣುತ್ತಿರುವ ವಸ್ತುಗಳೆಲ್ಲಾ ನಮ್ಮ ಕಲ್ಪನಾಶಕ್ತಿಯ ಸೃಷ್ಟಿ ಮಾತ್ರ—ಎಂದು ಹೇಳುತ್ತಿರುವ ನಿಮ್ಮ ಮಾತು ನಿಜವಾದರೆ, ಆ ಗೋಡೆ ಇರುವಲ್ಲಿ ದಯವಿಟ್ಟು ಕುದುರೆಯನ್ನು ಸೃಷ್ಟಿಸಿರಿ. ಆ ಗೋಡೆಯು ಕುದುರೆಯಂತೆ ಕಾಣಲಿ. ಓ, ವಿಜ್ಞಾನ-ಸತ್ಯತಾ ವಾದಿಗಳೆ ! ಇಡೀ ಜಗತ್ತು ಈ ಅಲ್ಪ ಜ್ಞಾತೃವಿನ-ದ್ರಷ್ಟಾನ ಪರಿಜ್ಞಾನದ (Understanding) ಅಥವಾ ಮಾನಸಸೃಷ್ಟಿಯ ಪರಿಣಾಮ ಮಾತ್ರವೆಂದು ನೀವು ಹೇಳುವದಾದರೆ ಈ

ಕರವಸ್ತ್ರವನ್ನು ಸಿಂಹವನ್ನಾಗಿ ಮಾಡಿ ಅಥವಾ ಈ ಪೆನ್ಸಿಲ್ಲನ್ನು ದೊಡ್ಡ ಮಂದಿರವನ್ನಾಗಿ ಮಾಡಿ ಇದು ಖಂಡಿತ ನಿಮ್ಮಿಂದ ಸಾಧ್ಯವಿಲ್ಲ. ಆ ಗೋಡೆಯು ಯಾವಾಗಲೂ ಯಾರಿಗೂ ಗೋಡೆಯೆಂದೇ ತೋರಿಕೊಳ್ಳುತ್ತಿದೆ ; ಅದು ನಾಳೆ ಎಲ್ಲರಿಗೂ ಕುದುರೆ ಯಾಗಿ ತೋರುವದಿಲ್ಲ ಹಾಗೆಯೇ ಎಲ್ಲಾ ವಸ್ತುಗಳೂ ಅವು ತೋರುವ ರೂಪ ದಿಂದಲೇ ನಿಜವಾಗಿವೆ. ಆದ್ದರಿಂದ ಪ್ರಪಂಚವು ಸತ್ಯವೆನ್ನುವುದು ನಿಸ್ಸಂದೇಹ."

ವಸ್ತು-ಸತ್ಯತಾ ವಾದಿಗಳ ಈ ಎಲ್ಲಾ ಆಕ್ಷೇಪಗಳಿಗೂ ವಿಜ್ಞಾನ-ಸತ್ಯತಾ ವಾದಿಗಳು ಸಮಾಧಾನದ ಉತ್ತರ ಹೇಳುತ್ತಾರೆ, ಆದರೆ ನಾವೀಗ ಈ ಎಲ್ಲಾ ಆಕ್ಷೇಪ-ಸಮಾಧಾನಗಳ ವಿಮರ್ಶೆಯನ್ನು ತೊಗೆದುಕೊಳ್ಳುವದಕ್ಕೆ ಆಗುವದಿಲ್ಲ. ಆದರೂ ಒಂದೆರಡು ಮಾತನ್ನು ಹೇಳಬಹುದು. "ನಮ್ಮ ಕಲ್ಪನಾ ಶಕ್ತಿಯಿಂದ ಏನನ್ನು ಬೇಕಾದರೂ ಸೃಷ್ಟಿಸಬಹುದು. ಈಗಲೇ ಸಾಧ್ಯವಾಗದಿರಬಹುದು, ಕಾಲಾಂತರದಲ್ಲಿ ಸಾಧ್ಯವಾಗಬಹುದು. ಆದ್ದರಿಂದ ಇದು ಕೇವಲ ಕಾಲದ ಪ್ರಶ್ನ ಅಷ್ಟೆ. ದೇವತೆಗಳನ್ನೋ ದೆವ್ವ-ಭೂತ-ಪಿಶಾಚಿಗಳನ್ನೋ ನಾವು ಕಲ್ಪಿಸಿಕೊಂಡರೆ, ಅವನ್ನು ಎಷ್ಟೋ ಸಮಯ ಕಣ್ಣಾರೆ ಕಾಣುತ್ತೇವೆ. ನಾವು ಏನನ್ನಾದರೂ ಕಲ್ಪಿಸಲು ತೊಡಗಿದರೆ, ಕೂಡಲೇ ಅದು ಮನಸ್ಸಿನಲ್ಲಿ ಕಾಣಿಸಿಕೊಳ್ಳುತ್ತದೆ ನಾವೆಲ್ಲರೂ ನಮ್ಮ ಕನಸಿನಲ್ಲಿ ಬೇಕಾದ ವಸ್ತುಗಳನ್ನು ಸೃಷ್ಟಿಸಿಕೊಳ್ಳುವದಿಲ್ಲವೆ? ಅಲ್ಲಿ ನಮ್ಮ ಕಲ್ಪನಾ ಶಕ್ತಿಯು ಯಾವ ವಸ್ತುವನ್ನು ಬೇಕಾದರೂ ಸೃಷ್ಟಿಸಿಕೊಂಡು ಅನುಭವಿಸುತ್ತದೆ. ಹೇಗೆ ಕನಸೋ ಹಾಗೆ ಎಚ್ಚರ" ಎಂದು ಮುಂತಾಗಿ ವಿಜ್ಞಾನ-ಸತ್ಯತಾ ವಾದಿಗಳು ಹೇಳುತ್ತಾರೆ. ಆದರೆ ಈ ಉತ್ತರಗಳು ವಸ್ತು-ಸತ್ಯತಾ ವಾದಿಗಳಿಗೆ ಸಮಾಧಾನ ಕೊಡುವದಿಲ್ಲವಾದುದರಿಂದ ಅವರ ಪ್ರತ್ಯಾಕ್ಷೇಪಗಳು ಇದ್ದೇ ಇವೆ. ಈ ಪ್ರಶ್ನೋತ್ತರಗಳಲ್ಲಿ ನಾವೀಗ ಪ್ರವೇಶಿಸುವದಕ್ಕಾಗುವದಿಲ್ಲ.

ಈ ಪ್ರಪಂಚವು **ನನ್ನ** ಭಾವನೆ, **ನನ್ನ** ಕಲ್ಪನೆ, **ನನ್ನ** ಸೃಷ್ಟಿ-ಎಂದು ವೇದಾಂತವೂ ಹೇಳುತ್ತದೆ. ಆದರೆ, ಅದು ಹೀಗೆ ಹೇಳುವಾಗಲೂ ಅದನ್ನು ವಿಜ್ಞಾನ-ಸತ್ಯತಾ ವಾದವೆಂದು ಹೇಳುವದಕ್ಕೆ ಆಗುವದಿಲ್ಲ. ರಾಮನು ಹೀಗೆ ಹೇಳಿದರೆ, ನಿಮಗೆ ಬಹಳ ಆಶ್ಚರ್ಯವಾಗಿ ತೋರಬಹುದು. ಅದನ್ನೇ ಪುನಃ ಹೇಳುತ್ತೇನೆ. ವೇದಾಂತವು ಒಂದು ಬಗೆಯ ವಿಜ್ಞಾನ-ಸತ್ಯತಾ ವಾದವೆಂದೇ (A kind of Idealism) ಯೂರೋಪ್-ಅಮೆರಿಕಾ ದೇಶದಲ್ಲಿರುವ ಜನರೆಲ್ಲಾ ತಿಳಿದಿದ್ದಾರೆ. ಮತ್ತು ಇದುವರೆಗೆ ರಾಮನ ಕೈಯಲ್ಲಿ ಹಾದುಹೋಗಿರುವ ಎಲ್ಲಾ ಯೂರೋಪಿಯನ್ ತತ್ತ್ವಶಾಸ್ತ್ರಜ್ಞರ ಲೇಖನಗಳೂ ಗ್ರಂಥಗಳೂ, ವೇದಾಂತ

ಶಾಸ್ತ್ರವು ವಿಜ್ಞಾನ-ಸತ್ಯತಾವಾದವೆಂದೇ ನಿರೂಪಿಸುವದಾಗಿವೆ. ಆದರೆ, ಈ ಜನರು ವೇದಾಂತವನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲವೆಂದು ರಾಮನು ಹೇಳುತ್ತಾನೆ. ಬರ್ಕ್ಲೀ ಅಥವಾ ಪ್ಲೇಟೋ ಮಹಾಶಯನ ವಿಜ್ಞಾನ-ಸತ್ಯತಾ ವಾದದಂತೆ ವೇದಾಂತವು ವಿಜ್ಞಾನ-ಸತ್ಯತಾ ವಾದವಲ್ಲ ವೇದಾಂತವು ಆ ಪಾಶ್ಚಾತ್ತ್ಯರ ವಾದಕ್ಕಿಂತಲೂ ಎಷ್ಟೋ ಹೆಚ್ಚು ಉನ್ನತವಾದುದು ಮತ್ತು ಉತ್ತಮವಾದುದು.

ಈ ಪ್ರಪಂಚವು ವ್ಯಕ್ತಿಯಲ್ಲಿರುವ ಜ್ಞಾತೃವೂ ದ್ರಷ್ಟೃವೂ ವಿಷಯಿಯೂ ಆದ ಅಲ್ಪ ಜೀವಿಯ ಅಲ್ಪ ಮನಸ್ಸನ್ನು ಅವಲಂಬಿಸಿ, ಆಧರಿಸಿಕೊಂಡು ನಿಂತಿರುವಂತೆ ಪಾಶ್ಚಾತ್ತ್ಯ ವಿಜ್ಞಾನ-ಸತ್ಯತಾ ವಾದಿಗಳು ಮಾಡಿದ್ದಾರೆ ಆದರೆ "ಪ್ರಪಂಚವೆಲ್ಲಾ **ನನ್ನ** ಭಾವನೆ, **ನನ್ನ** ಕಲ್ಪನಾ ಮಾತ್ರ" ಎಂದು ವೇದಾಂತವು ಹೇಳುವಾಗ "ಪ್ರಪಂಚವು ವ್ಯಕ್ತಿಯಲ್ಲಿರುವ ಅಲ್ಪ ಜ್ಞಾತೃವಿನ ಅಲ್ಪ ಜೀವನ, ಅಲ್ಪ ಮನಸ್ಸಿನ ಭಾವನಾ ಮಾತ್ರ ಕಲ್ಪನಾಮಾತ್ರ, ಸೃಷ್ಟಿ ಮಾತ್ರ" ಎಂದೇನೂ ಅರ್ಥವಲ್ಲ

"ಕನಸುಗಳೆಲ್ಲಾ ಜ್ಞಾತೃವಿನ (Subject) ಸೃಷ್ಟಿ' ಎಂದು ಬರ್ಕ್ಲೀ ಹೇಳಿದಾಗ ಅವನು ಭಯಂಕರ ತಪ್ಪನ್ನು ಮಾಡಿದ. ಕನಸಿನ ಜೀವನೂ ಎಚ್ಚರದ ಜೀವನೂ ಒಂದೇ ಎಂದು ತಿಳಿದುದು ಅವನ ಭಾರಿ ತಪ್ಪು. ಹಿಂದಿನ ಉಪನ್ಯಾಸದಲ್ಲಿ ತಿಳಿಸಿದಂತೆ, ಕನಸಿನಲ್ಲಿ ತೋರಿಕೊಳ್ಳುವ ಜ್ಞಾತೃವೇ-ವಿಷಯಿಯೋ-ಬೇರೆ, ಎಚ್ಚರದಲ್ಲಿ ತೋರಿಕೊಳ್ಳುವ ಜ್ಞಾತೃವೇ ಎನ್ನುವದು ನಿಮಗೆ ತಿಳಿದೇ ಇದೆ. ಕನಸಿನಲ್ಲಿ ತೋರಿಕೊಳ್ಳುವ ವಿಷಯಿಯು ಕನಸಿನ ಪ್ರಪಂಚ—ವಿಷಯದ ಜಾತಿಗೇ ಸೇರಿದವನು. ನಮ್ಮೆಲ್ಲರ ಎಚ್ಚರದಲ್ಲಿತೋರಿಕೊಳ್ಳುವ ವಿಷಯಿಯು ಎಚ್ಚರದ ಪ್ರಪಂಚ--ವಿಷಯದ ಜಾತಿಗೇ ಸೇರಿದವನು ಆದರೆ ಬರ್ಕ್ಲೀಯು ಎಚ್ಚರದ ಜ್ಞಾತೃ (ಕರ್ತೃ, ಭೋಕ್ತೃ) ವನ್ನೇ ಕನಸಿನ ಜ್ಞಾತೃ (ಕರ್ತೃ, ಭೋಕ್ತೃ)ವನ್ನಾಗಿ ತೆಗೆದುಕೊಂಡನು. ಈ ಪ್ರಪಂಚವು ಎಚ್ಚರದ ಜ್ಞಾತೃವಿನ ಅಥವಾ ಕನಸಿನ ಜ್ಞಾತೃವಿನ ಸೃಷ್ಟಿಯಲ್ಲ, ಈ ಪ್ರಪಂಚವು ನಿಜವಾದ ದೇವರೂ ನಿಜವಾದಆತ್ಮನೂ ಪರಮಾತ್ಮನೂ ಆದ **ನನ್ನ** ಸೃಷ್ಟಿ.

ಈಗ ನಾವು "ವೇದಾಂತ ದೃಷ್ಟಿಯಲ್ಲಿ ವೇದನದ ಅಥವಾ ದರ್ಶನದ ವಿಚಾರ" ವೇನು ? (The Vedantic Theory of Perception) ಎಂಬ ವಿಷಯವನ್ನು ತೆಗೆದುಕೊಳ್ಳೋಣ.

ವಿಜ್ಞಾನ-ಸತ್ಯತಾ ವಾದಿಗಳಿಗೆ ವೇದಾಂತವು ಹೇಳುವದೇನೆಂದರೆ, "ಎಲ್ಲಿ

ವಿಜ್ಞಾನವೇ ಸತ್ಯವೆನ್ನುವ ವಾದಿಗಳೇ ! ಈ ಪ್ರಪಂಚದ ಎಲ್ಲಾ ನಾಮರೂಪಗಳೂ ವಸ್ತುಗಳ ಎಲ್ಲಾ ಗುಣಧರ್ಮಗಳೂ ಜ್ಞಾತೃವಿನ ವ್ಯಾಪಾರವಿಲ್ಲದೆ, ಚಟುವಟಿಕೆಯಿಲ್ಲದೆ, ಮನೋಭಾವನೆಯಿಲ್ಲದೆ ಉಂಟಾಗಲಾರವು ಅಥವಾ ತೋರಲಾರವು ಎಂದು ನೀವು ಹೇಳುವದು ಸರಿಯಾಗಿದೆ. ಪ್ರಪಂಚದ ತೋರಿಕೆಯು ಜ್ಞಾತೃವಿನ ಮನಸ್ಸನ್ನು ಅಥವಾ ಅರ್ಥಗ್ರಾಹಕಶಕ್ತಿಯ ಕ್ರಿಯೆಯನ್ನು (Activity of the Understanding) ಅವಲಂಬಿಸಿದೆ ಎಂದು ನೀವು ಹೇಳುವುದು ಸರಿಯಾಗಿಯೇ ಇದೆ. ನಿಮ್ಮ ವಿಚಾರವು ಅಷ್ಟರವರೆಗೆ ಮಾತ್ರ ಸರಿ. ಆದರೆ ಈ ಅಲ್ಪವಾದ ಜ್ಞಾತೃವಿನ ಈ ಅಲ್ಪವಾದ ಮನಸ್ಸಿನ ಹೊರಗೆ ಯಾವ ಪ್ರಪಂಚವೂ ಇಲ್ಲ ಎಂದು ನೀವು ಹೇಳುವದು ಮಾತ್ರ ಸರಿಯಲ್ಲ".

ಇದು ಅತಿಶಯ ಗಹನವಾದ ವಿಚಾರ; ಶ್ರದ್ಧೆಯಿಂದಲೂ ಏಕಾಗ್ರ ಚಿತ್ತದಿಂದಲೂ ಈ ವಿಚಾರ ಸರಣಿಯನ್ನು ಸೂಕ್ಷ್ಮವಾಗಿ ಅನುಸರಿಸಿ ಅರ್ಥಮಾಡಿಕೊಂಡರೆ ಮಾತ್ರ ತಿಳಿಯುತ್ತದೆ.

ವೇದಾಂತವು ವಸ್ತು-ಸತ್ಯತಾ ವಾದಿಗಳನ್ನು ಕುರಿತು ಹೇಳುವುದೇನೆಂದರೆ, "ನಮ್ಮ ಹೊರಗೆ ಅಥವಾ ಜ್ಞಾತೃವಿನ ಹೊರಗೆ ಯಾವದೊಂದು ಸತ್ತೆಯ ಕ್ರಿಯಾ ವಿಲಸವಿಲ್ಲದೆ, ಪ್ರಕೃತಿವಿಲಾಸವಾದ ಈ ಪ್ರಪಂಚವು ತೋರುವುದು ಸಾಧ್ಯವಿಲ್ಲ" ಎಂದು ನೀವು ಹೇಳುವದು ಸರಿಯಾಗಿಯೇ ಇದೆ. "ನಮ್ಮ ಇಂದ್ರಿಯಂಗಳ ಮೇಲೆ ಹೊರಗಿನ ವಸ್ತುಗಳು ನಡೆಸುವ ಕ್ರಿಯೆಯಿಂದ ನಮಗೆ ಪ್ರಪಂಚವು ತೋರುತ್ತಿದೆ' ಎಂದು ನೀವು ಹೇಳುವದು ನ್ಯಾಯವಾಗಿದೆ ಹೌದು ಹೊರಗಿನ ಯಾವದೊಂದು ಬಗೆಯ ಕ್ರಿಯೆಯಿಲ್ಲದೆ ನಾವು ವಸ್ತುಗಳನ್ನು ನೋಡಲಾರೆವು ; ನಮಗೆ ವಿಷಯಗಳು ಗೋಚರವಾಗುತ್ತಿರಲಿಲ್ಲ. ವಸ್ತು-ಸತ್ಯತಾ ವಾದದಲ್ಲಿ ಇಷ್ಟುಮಾತ್ರ ಸರಿಯಾಗಿದೆ. ಆದರೆ ನಮ್ಮ ಎಲ್ಲಾ ಇಂದ್ರಿಯ ಜ್ಞಾನಕ್ಕೆ ಅಥವಾ ವಿಷಯದರ್ಶನಕ್ಕೆ ಅಥವಾ ವಿಷಯ ವೇದನೆಗೆ ಕೇವಲ ಮತ್ತು ಪೂರಾ ಹೊರಗಿನ ಕ್ರಿಯೆಯೇ ಕಾರಣವಲ್ಲದೆ ಜ್ಞಾತೃವಿನ ಕ್ರಿಯೆಯಲ್ಲ ಎಂದು ಹೇಳುವದು ಮಾತ್ರ ಸರಿಯಲ್ಲ ವಿಷಯ-ಸತ್ಯತಾ ವಾದಿಗಳು ಹೀಗೆ ಹೇಳುವದು ಮಾತ್ರ ತಪ್ಪು. ಇದನ್ನು ಇನ್ನಷ್ಟು ಸ್ಪಷ್ಟಗೊಳಿಸಬಹುದು. ಈ ಪ್ರಪಂಚದಲ್ಲಿ ಯಾವುದಾದರೂ ಒಂದು ವಸ್ತುವನ್ನು ತೆಗೆದುಕೊಳ್ಳಿ. ಉದಾಹರಣೆಗೆ ಈ ಪೆನ್ಸಿಲ್ಲನ್ನು ತೆಗೆದುಕೊಳ್ಳಿ. ಈ ಪೆನ್ಸಿಲ್ಲಿನಲ್ಲಿ ಈ ಬಣ್ಣವು ಕಾಣುವದಕ್ಕೆ ಕಾರಣವೇನು ? ಜ್ಞಾತೃವಿನ ಕ್ರಿಯೆಯೂ ಹೊರಗಿನ ಪ್ರತಿಕ್ರಿಯೆಯೂ ಇದರಲ್ಲಿ ಬಣ್ಣವು ತೋರುವುದಕ್ಕೆ ಕಾರಣವೆಂದು ನೀವು ಹೇಳಬಹುದು.

ನಿಮ್ಮ ಕಣ್ಣುಗಳು ಬಣ್ಣಗುರುಡಾಗಿದ್ದರೆ, ಈ ಪೆನ್ಸಿಲ್‌ನಲ್ಲಿ ನೀವು ಈ ಬಣ್ಣವನ್ನು ಕಾಣುವದಿಲ್ಲ ಬಣ್ಣವು ಈ ಪೆನ್ಸಿಲ್‌ನಲ್ಲಿರುವ ಗುಣ. ಬಣ್ಣವು ಬದಲಾವಣೆ ಹೊಂದತಕ್ಕದು. ನಮ್ಮ ಕಣ್ಣಿಗೆ ಕಾಮಾಲೆ ರೋಗವು ಬಂದು ದೃಷ್ಟಿ ಕೆಟ್ಟಿದ್ದರೆ, ಪೆನ್ಸಿಲ್‌ನಲ್ಲಿ ನಮಗೆ ಬೇರೆ ಬಣ್ಣವು ಕಾಣಬಹುದು. ಪೆನ್ಸಿಲ್‌ನ ತೂಕವನ್ನು ತೆಗೆದುಕೊಳ್ಳೋಣ. ಎಲ್ಲಾ ಸ್ಥಳಗಳಲ್ಲಿಯೂ ಒಂದೇ ತೂಕವು ಕಾಣುವದಿಲ್ಲ. ನಾವಿದನ್ನು ಸಾವಿರಾರು ಅಡಿಗಳ ಎತ್ತರದಲ್ಲಿ ತೂಗಿದರೆ, ಚಂದ್ರಗ್ರಹದಲ್ಲಿ ಅಥವಾ ಆಳವಾದ ಗಣಿಯೊಳಗೆ ತೂಗಿದರೆ, ಬೇರೆ ಬೇರೆ ತೂಕಗಳನ್ನೇ ತೋರಿಸುತ್ತದೆ. ಇಂಡಿಯಾದಲ್ಲಿ ತೂಗಿದ ಒಂದು ವಸ್ತುವನ್ನು ಲಂಡನ್ನಿನಲ್ಲಿ ತೂಗಿದರೆ ಬೇರೆ ಬೇರೆ ತೂಕ ಗಳನ್ನೇ ತೋರಿಸುತ್ತದೆ. ಹೀಗೆ ಒಂದು ವಸ್ತುವಿನ ಬಣ್ಣವೂ ತೂಕವೂ ಕೂಡ ಬದಲಾವಣೆಹೊಂದತಕ್ಕವಾಗಿವೆ.

ಚಳಿಗಾಲದಲ್ಲಿ ಮುಟ್ಟಿದರೆ ಬೆಚ್ಚಗೆ ಕಾಣುವ ನೀರನ್ನೇ ಬೇಸಿಗೆಯಲ್ಲಿ ಮುಟ್ಟಿ ದರೆ, ಅದು ತಣ್ಣಗೆ ಕಾಣುತ್ತದೆ. ಏಕೆ ? ನೀರಿನಲ್ಲಿರುವ ಉಷ್ಣವು ಒಂದೇ ಬಗೆಯಾ ಗಿದ್ದರೂ ನೀರನ್ನು ಮುಟ್ಟುವಾಗ ನಮ್ಮ ದೇಹದಲ್ಲಿರುವ ಉಷ್ಣವು ವ್ಯತ್ಯಾಸವಾಗಿ ರುವದರಿಂದ ನೀರಿನ ಉಷ್ಣತೆಯಲ್ಲಿಯೇ ಹೆಚ್ಚುಕಡಿಮೆಯಾಗಿ ತೋರುತ್ತದೆ ಆದ್ದರಿಂದ ಜ್ಞಾತೃವಿನಲ್ಲಿರುವ ಹೆಚ್ಚುಕಡಮೆಯು ವಸ್ತುಗಳ ಗುಣಗಳಲ್ಲಿಯೂ ಹೆಚ್ಚುಕಡಿಮೆಯನ್ನು ತೋರಿಸುತ್ತದೆ.

ಈ ಪೆನ್ಸಿಲ್ಲು ಏತರಿಂದ ಮಾಡಲ್ಪಟ್ಟಿದೆ ? ಬರ್ಕ್ಲಿ ಮತ್ತು ಅಂಥಾ ಕೆಲವರ ಅಭಿಪ್ರಾಯದಂತೆ, ಈ ಪೆಸ್ಸಿಲ್ಲು ಕೆಲವು ಗುಣ ಧರ್ಮಗಳ ಕಂತೆ (ಮೂಟೆ) ಯಲ್ಲದೆ ಬೇರಲ್ಲ. ಇದರಲ್ಲಿರುವ ಎಲ್ಲಾ ಗುಣಧರ್ಮಗಳನ್ನೂ ಕಳೆದುಬಿಟ್ಟರೆ, ಪ್ರತ್ಯೇಕ ವಸ್ತುವಿನ ರೂಪದಲ್ಲಿ ಏನೂ ಉಳಿಯುವದಿಲ್ಲ. ಆದರೆ ಕ್ಯಾಂಟ್ ಮಹಾಶಯನ ಪ್ರಕಾರ ಎಲ್ಲಾ ಗುಣಧರ್ಮಗಳನ್ನು ಕಳೆದರೂ ಅವುಗಳಿಗೆ ಆಧಾರವಾಗಿ ತಾನೇ ತಾನಾಗಿರುವ ವಸ್ತು ತತ್ತ್ವವು (The thing in itself) ಉಳಿದೇ ಉಳಿಯುತ್ತದೆ. ಆದರೆ ಪ್ಲೇಟೋ ಮಹಾಶಯನ ವಿಚಾರದಂತೆ, ವಸ್ತುವಿನ ಎಲ್ಲಾ ಗುಣಧರ್ಮ ಗಳನ್ನು ಕಳೆದರೂ ಅವುಗಳ ಹಿನ್ನೆಲೆಯಲ್ಲಿ ತನ್ನಷ್ಟಕ್ಕೆ ತಾನಿರುವ ವಸ್ತು ತತ್ತ್ವದ ಭಾವನೆಯು ಉಳಿದಿರುತ್ತದೆ. ಇದನ್ನು ಇನ್ನಷ್ಟು ಸ್ಪಷ್ಟಪಡಿಸಬಹುದು. ವೇದಾಂತವು ಹೇಳುವದೇನೆಂದರೆ, ಪೆನ್ಸಿಲ್‌ನಲ್ಲಿ ಈ ಎಲ್ಲಾ ಗುಣಧರ್ಮಗಳೂ ಕಾಣುವದಕ್ಕೆ ಕಾರಣವೇನೆಂದರೆ, ಜ್ಞಾತೃವಿನಲ್ಲಿರುವ ಚಟುವಟಿಕೆ, ಕ್ರಿಯೆ. ಇದೇನೋ ನಿಜ ; ಆದರೆ ಜ್ಞಾತೃವಿನ ಮನಸ್ಸಿನಲ್ಲಿ ಕ್ರಿಯೆಯನ್ನು ಕೆರಳಿಸಿದ್ದೇಕೆ? ಕ್ರಿಯೆಗೆ ಪ್ರಚೋದಕವಾದುದು

ಯಾವದು ? ಇದೇ ಮುಖ್ಯವಾದ ಪ್ರಶ್ನೆ. ಜ್ಞಾತೃವಿನ ಮೇಲೆ ಕ್ರಿಯೆಯನ್ನು ನಡೆಸಿ, ಜ್ಞಾತೃವಿನ ಮನಸ್ಸಿನಲ್ಲಿ ಕ್ರಿಯೆಯನ್ನೋ ಪ್ರತಿಕ್ರಿಯೆಯನ್ನೋ ಪ್ರೇರಿಸುವದಕ್ಕೆ ಕಾರಣವಾದುದು ಹೊರಗೆ ಏನೋ ಇರಬೇಕು. ಜ್ಞಾತೃವಿನಲ್ಲಿ ಕೆರಳಿದ ಪ್ರತಿಕ್ರಿಯೆ ಪರಿಣಾಮವಾಗಿ ಹೊರಗಿನ ವಸ್ತುವಿನಲ್ಲಿ ಗುಣಧರ್ಮಗಳು ಕಲ್ಪಿತವಾಗಿ ಸ್ಥಾಪಿಸಲ್ಪಟ್ಟು ತೋರುತ್ತವೆ. ಜ್ಞಾತೃವಿನ ಮನೋವ್ಯಾಪಾರಕ್ಕೆ ಮೊದಲೇ ವಸ್ತುವಿನ ಗುಣಧರ್ಮಗಳೇ ಮನಸ್ಸಿನ ಮೇಲೆ ಪರಿಣಾಮ ಮಾಡಿ, ಮನಸ್ಸಿನಲ್ಲಿ ಕ್ರಿಯೆಯನ್ನೋ ಪ್ರತಿಕ್ರಿಯೆಯನ್ನೋ ಉತ್ತೇಜಿಸಿತೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ಮನಸ್ಸಿನ ಕ್ರಿಯೆಯ ಅಥವಾ ಪ್ರತಿಕ್ರಿಯೆಯ ಅನಂತರವೇ ವಸ್ತುವಿನಲ್ಲಿ ಗುಣಗಳು ತೋರುವದರಿಂದ ಅವು ಮೊದಲೇ ಇದ್ದವೆಂದು ಹೇಳುವುದಕ್ಕೆ ಬರುವದಿಲ್ಲ. ಆದರೂ ಮನಸ್ಸಿನಲ್ಲಿ ಕ್ರಿಯೆಯನ್ನು ಕೆರಳಿಸುವದಕ್ಕೆ ಹೊರಗೆ ಏನೋ ಇರಲೇ ಬೇಕು ಕಣ್ಣುಗಳ ಮೇಲೆ ಪರಿಣಾಮಮಾಡಿ ರೂಪವನ್ನು ತೋರಿಸುವದಕ್ಕೂ ಕಿವಿಗಳ ಮೇಲೆ ಪರಿಣಾಮಮಾಡಿ ಶಬ್ದವನ್ನು ಕೇಳಿಸುವದಕ್ಕೂ ನಾಲಿಗೆಗೆ ರುಚಿಯನ್ನು ಹಸ್ತಕ್ಕೆ ಸ್ಪರ್ಶವನ್ನು ತೋರಿಸುವದಕ್ಕೂ ಕಾರಣವಾಗಿ ಹೊರಗಿನ ವಸ್ತುವಿನಲ್ಲಿ ಅದರ ಗುಣಧರ್ಮಗಳಲ್ಲದೆ ಅವಕ್ಕೆ ಆಧಾರವಾಗಿ ಯಾವುದೊಂದು ಸತ್ತಾ ಇರಲೇಬೇಕು. ಕಣ್ಣುಗಳ ಮೇಲೂ ಕಿವಿಗಳ ಮೇಲೂ ನಾಸಿಕದ ಮೇಲೂ ನಾಲಿಗೆಯ ಮೇಲೂ ಸ್ಪರ್ಶದ ಮೇಲೂ ತನ್ನ ಪ್ರಭಾವವನ್ನು ಬೀರುವುದಕ್ಕೆ ಹೊರಗೆ ಏನೋ ಇರಲೇ ಬೇಕು. ಈ ಪೆನ್ಸಿಲ್ಲನ್ನು ತಿಂದರೆ ನಿಮ್ಮ ಆರೋಗ್ಯವನ್ನು ಇದು ಕೆಡಿಸುತ್ತದೆ. ಹೊರಗೆ ಏನೂ ಇಲ್ಲವೆಂದು ಹೇಗೆ ಹೇಳುತ್ತೀರಿ ? ಹೊರಗೆ ಸಹ ಏನೋ ಒಂದು ಸತ್ತೆ ಇದೆ. ಈ ಇರುವಿಕೆಯು ನಮ್ಮ ಇಂದ್ರಿಯಗಳ ಮೇಲೆ ಪರಿಣಾಮಮಾಡಿದ ಕೂಡಲೇ ಅವು ಮನಸ್ಸಿಗೆ ಆ ವರ್ತಮಾನವನ್ನು ತಿಳಿಸುತ್ತವೆ ; ಆಗ ಮನಸ್ಸಿನಲ್ಲಿ ಪ್ರತಿಕ್ರಿಯೆ ಮಾಡುತ್ತದೆ. ಇದರಿಂದ ದೃಶ್ಯದಲ್ಲಿ ವಸ್ತುವಿನ ಗುಣಧರ್ಮಗಳು ಕಲ್ಪಿತವಾಗಿ ತೋರುತ್ತವೆ. ಇದನ್ನು ಹೀಗೆಂದೂ ಹೇಳಬಹುದು ಇಲ್ಲಿ ಒಂದು ಕೈಯಿ ಇದೆ, ಅಲ್ಲಿ ಇನ್ನೊಂದು ಕೈಯಿ ಇದೆ. ಒಂದೇ ಕೈ ಯಾವ ಶಬ್ದವನ್ನೂ ಮಾಡಲಾರದು. ಎರಡು ಒಂದನ್ನೊಂದು ತಟ್ಟಿದರೆ, ಇಗೋ ಶಬ್ದವಾಗುತ್ತದೆ. ಇಲ್ಲಿ ಒಂದು ಕಡೆಯಲ್ಲಿ ಕ್ರಿಯೆಯೂ ಇನ್ನೊಂದು ಕಡೆಯಲ್ಲಿ ಪ್ರತಿಕ್ರಿಯೆಯೂ ಉಂಟಾದವು. ಇದರ ಪರಿಣಾಮವಾಗಿ ಶಬ್ದ ಹುಟ್ಟಿತು. ಇಲ್ಲಿ ಒಂದು ವೈಒಲಿನ್ ಅಥವಾ ಪಿಟೀಲು ಇದೆ. ನೀವು ಕೈಬೆರಳಿನಿಂದ ಇದರ ತಂತಿಯನ್ನು ಮೀಟಿದರೆ, ಶಬ್ದ ಅಥವಾ ನಾದ ಹೊರಬರುತ್ತದೆ. ನಿಮ್ಮ ಬೆರಳಿನಿಂದ ಕ್ರಿಯೆಯೂ ತಂತಿಯಿಂದ ಪ್ರತಿಕ್ರಿಯೆಯೂ ಉಂಟಾಯಿತು. ಅದರಿಂದ ಶಬ್ದವು ಹುಟ್ಟಿತು. ಅಥವಾ ತಂತಿಯಿಂದ ಕ್ರಿಯೆಯೂ ಬೆರಳುಗಳಿಂದ ಪ್ರತಿಕ್ರಿಯೆಯೂ ಉಂಟಾಯಿತೆಂದೂ ಹೇಳಬಹುದು.

ಇದೇ ಪ್ರಕಾರ ಸರೋವರದಲ್ಲಿ ಅಥವಾ ಸಮುದ್ರದಲ್ಲಿ ಒಂದು ತೆರೆಯು ಈ ಕಡೆಯಿಂದಲೂ ಇನ್ನೊಂದು ತೆರೆಯು ಆ ಕಡೆಯಿಂದಲೂ ಹೊರಳಿ ಬಂದು ಒಂದನ್ನೊಂದು ಅಪ್ಪಳಿಸುವದರಿಂದ ಹೇರಳವಾದ ನೊರೆಯು ಉತ್ಪನ್ನವಾಗುತ್ತದೆ. ಇಲ್ಲಿ ಒಂದು ಬೆಂಕಿಯ ಕಡ್ಡಿಯಿದೆ ; ಇದನ್ನು ಆ ಉಪ್ಪುಕಾಗದದ (ಮರಳುಕಾಗದ) ಮೇಲೆ ಉಜ್ಜಿದರೆ ಬೆಂಕಿ ಹೊತ್ತುತ್ತದೆ , ಇಲ್ಲೊಂದು ವಿದ್ಯುಚ್ಛಕ್ತಿಯ ಧನಧ್ರುವವೂ ಅಲ್ಲೊಂದು ಋಣಧ್ರುವವೂ ಇವೆ. ಇವುಗಳು ಒಂದನ್ನೊಂದು ಸೇರಿದರೆ ವಿದ್ಯುತ್ತಿನ ಕಿಡಿಗಳನ್ನು ಕಾಣುತ್ತೇವೆ. ಹೀಗೆ ಎರಡು ಕಡೆಗಳಿಂದಲೂ ಹುಟ್ಟುವ ಕ್ರಿಯೆ-ಪ್ರತಿ ಕ್ರಿಯೆಗಳು ದೃಶ್ಯವಿಲಾಸವನ್ನು ಉಂಟುಮಾಡುತ್ತವೆ.

ಆದ್ದರಿಂದ, ವೇದಾಂತಕ್ಕೆ ಅನುಸಾರವಾಗಿ ನಾವು ಆತ್ಮನೆಂದು ಕರೆಯುವ ಸ್ವತಂತ್ರ ತತ್ತ್ವವು (Thing-in-itself) ಅಥವಾ ಕೇವಲ ವಸ್ತು ತತ್ತ್ವವು ನಮ್ಮ ಬುದ್ಧಿಯಲ್ಲಿದೆ. ನಮ್ಮ ಬುದ್ಧಿಯಲ್ಲಿ ನಿಜವಾದ ಆತ್ಮನು ಜೀವಂತನಾಗಿರುವದಲ್ಲದೆ, ಈ ಪ್ರಪಂಚದಲ್ಲಿರುವ ಪ್ರತಿಯೊಂದು ವಸ್ತುವಿನಲ್ಲಿಯೂ (ಗುಣಧರ್ಮಗಳಿಗೆ ಆಶ್ರಯವಾಗಿ) ತಾನು ತಾನೇ ಆಗಿರುವ ವಸ್ತುತತ್ತ್ವವು ಅಥವಾ ವಸ್ತು ಸತ್ತೆಯು (The Thing-in-itself or the Reality) ಇದೆ. ಈ ಪೆನ್ಸಿಲ್‌ನಲ್ಲಿ ಅಪರಿಗೆ ನಿಲುಕದ, ಅರಿಯುವುದಕ್ಕೆ ಸಾಧ್ಯವಿಲ್ಲದ, ಎಲ್ಲಾ ಗುಣಧರ್ಮಗಳಿಗೂ ಮೀರಿ ದೂರವಿರುವ ಏನೋ ಒಂದು ತತ್ತ್ವವಿದೆ ಅಥವಾ ವಸ್ತು-ಸತ್ತೆಯಿದೆ, ಅಥವಾ ಸತ್ತಾಸಾಮಾನ್ಯವಿದೆ ಅದೇ ನಮ್ಮ ಬುದ್ಧಿಯಲ್ಲಿಯೂ ಇದೆ. ಹೊರಗಿರುವ ಸತ್ತೆಯು ಅಥವಾ ಬರೀ ಇರುವಿಕೆಯು, ಅಂದರೆ-ಉದಾಹರಣೆಗಾಗಿ ಈ ಪೆನ್ಸಿಲ್‌ನಲ್ಲಿರುವ ದೇವತ್ವವು ಅಥವಾ ಕೇವಲತ್ವವು ಮತ್ತು ಬುದ್ಧಿಯಲ್ಲಿರುವ ಕೇವಲತ್ವವು ಎರಡು ಕೈಗಳಂತೆ ಇವೆ, ಅಥವಾ ಎರಡು ಕಡೆಯಿಂದ ಉರುಳಿ ಬರುವ ತೆರೆಗಳಂತೆ ಇವೆ ಇವೆರಡೂ ಒಂದಕ್ಕೊಂದು ಹೊಡೆದ ಕೂಡಲೇ ಕೈಚಪ್ಪಾಳೆಯ ಶಬ್ದದಂತೆಯೂ ಸಮೃದ್ಧಿಯಾದ ನೊರೆಯಂತೆಯೂ ಪೆನ್ಸಿಲ್‌ನಲ್ಲಿ ಗುಣ-ಧರ್ಮಗಳು ತೋರಿಕೊಳ್ಳುತ್ತವೆ. ಅಥವಾ ಇನ್ನೊಂದು ರೀತಿ ಹೇಳಬಹುದು ಬುದ್ಧಿಯಲ್ಲಿರುವ ವಿದ್ಯುತ್ತಿನ ಧನಧ್ರುವವೂ ಪೆನ್ಸಿಲ್‌ನಲ್ಲಿರುವ ಋಣಧ್ರುವವೂ ಒಟ್ಟು ಸೇರುವದರಿಂದ ಪೆನ್ಸಿಲ್‌ನಲ್ಲಿ ತೋರುವ ವಿಶ್ವದ ವರ್ಣ-ಗುಣ ವಿಲಾಸವುಂಟಾಗುತ್ತದೆ. ವೇದಾಂತದ ಭಾಷೆಯಲ್ಲಿ, ದೃಶ್ಯವೂ ದ್ರಷ್ಟನೂ ಸಂಯೋಗವಾದ ಕ್ಷಣದಲ್ಲಿಯೇ ವಸ್ತುಗಳು ಅಥವಾ ವಿಷಯಗಳು ಗೋಚರವಾಗುತ್ತವೆ. ಪೆನ್ಸಿಲ್‌ನಲ್ಲಿರುವ ನಿಜಾತ್ಮನಿಗೂ (ದೃಶ್ಯ)

ಬುದ್ಧಿಯಲ್ಲಿರುವ ನಿಜಾತ್ಮನಿಗೂ* (ದ್ರಷ್ಟಾ) ಸಂಯೋಗವಾಗಿ ಕ್ರಿಯೆ-ಪ್ರತಿಕ್ರಿಯೆಗಳು ಉಂಟಾದ ಕೂಡಲೇ ಗುಣ-ಧರ್ಮ ವಿಲಾಸವು ಗೋಚರವಾಗುತ್ತದೆ.

ಆದ್ದರಿಂದ ಜ್ಞಾತೃವಿನಲ್ಲಿ ಕ್ರಿಯಾವಿಲಾಸ (ವ್ಯಾಪಾರ) ವಿಲ್ಲದೆ ಯಾವ ವಿಷಯವೂ ಗೋಚರವಾಗುವದಿಲ್ಲ ಎಂದು ವಿಜ್ಞಾನ-ಸತ್ಯತಾ ವಾದಿಗಳು ಕಂಠೋಕ್ತವಾಗಿ ಹೇಳುವದು ಸರಿಯಾಗಿದೆ ; ಆದರೆ ಜ್ಞಾತೃವಿನ ಕ್ರಿಯಾವಿಲಾಸವೇ ಸ್ವತಂತ್ರವಾಗಿ ದೃಶ್ಯವಿಲಾಸವನ್ನು ಉಂಟುಮಾಡುತ್ತದೆಯೆಂದು ಅವರು ಹೇಳುವದು ಮಾತ್ರ ತಪ್ಪು. ಏಕೆಂದರೆ ಅವರು, ಹೇಳುವುದರಲ್ಲಿ, ಎದುರಾಳಿಯೂ ಸರಿಸಮವೂ ಆದ ಪ್ರತಿಕ್ರಿಯೆಯಿಲ್ಲದೆ ಯಾವ ಕ್ರಿಯೆಯೂ ಇರಲಾರದು (There can be no action without an equal and opposite reaction) ಎನ್ನುವ ಅತ್ಯಂತ ಅಬಾಧಿತವೂ ಕಠೋರವೂ ಆದ ವೈಜ್ಞಾನಿಕ ನಿಯಮವನ್ನು ಮುರಿಯುತ್ತಾರೆ. "ಈ ಎಲ್ಲಾ ಜಗತ್ತೂ ಜ್ಞಾತೃವಿನ ಕ್ರಿಯಾವಿಲಾಸದಿಂದಲೇ ಸೃಷ್ಟಿಯಾಗಿದೆ" ಎಂದು ಅವರು ಹೇಳುವಾಗ, ಎಲ್ಲಿಂದಲೋ ಪ್ರತಿಕ್ರಿಯೆ ಇಲ್ಲದೆ ಜ್ಞಾತೃವಿನಲ್ಲಿ ಕ್ರಿಯೆಯು ಹುಟ್ಟುತ್ತದೆಯೆಂಬುದು ಅಸಂಭವ ಎನ್ನುವ ಸತ್ಯವನ್ನು ಅವರು ಕಡೆಗಣಿಸುತ್ತಾರೆ. ಹಾಗೆಯೇ "ಈ ಪ್ರಪಂಚದಲ್ಲಿ ತನ್ನದೇ ಆದ ಸತ್ತೆ ಇದೆ, ನಿಜವಿದೆ ; ಆದ್ದರಿಂದ ಇದು ಕೇವಲ ಜ್ಞಾತೃವನ್ನೇ ಅವಲಂಬಿಸಿದೆ-ಎನ್ನುವದು ತಪ್ಪು" ಎಂದು ವಿಷಯ-ಸತ್ಯತಾ ವಾದಿಗಳು ಹೇಳುವದು ಸರಿ. ಅವರ ಮಾತಿನಲ್ಲಿ 'ಈ ಪ್ರಪಂಚದಲ್ಲಿ ತನ್ನದೇ ಆದ ಸತ್ತೆ ಇದೆ' ಎನ್ನುವ ಇಷ್ಟು ಮಾತ್ರ ಸರಿ. ಆದರೆ "ಈ ಪ್ರಪಂಚ ವಿಲಾಸವು ತನ್ನಷ್ಟಕ್ಕೆ ತಾನೇ ಸತ್ಯವಾಗಿದೆ; ಅದು ಸ್ವತಂತ್ರವಾಗಿಯೇ ನಿಲ್ಲಬಲ್ಲದು. ಎಂದು ಅವರು ಹೇಳುವದು ಮಾತ್ರ ತಪ್ಪು. ಏಕೆಂದರೆ, (ಈ ಪ್ರಪಂಚದಲ್ಲಿ ತೋರುವ ನಾಮರೂಪಗಳೂ ಭಿನ್ನಭೇದಗಳೂ ವಸ್ತುಗಳ ಗುಣಧರ್ಮಗಳೂ ಇವುಗಳ) ದೃಶ್ಯವಿಲಾಸವು, ಪ್ರಪಂಚವಸ್ತುವಿನಲ್ಲಿರುವ ನಿಜ ತತ್ತ್ವದ ಪ್ರತಿಕ್ರಿಯೆಯನ್ನು ಅವಲಂಬಿಸಿರುವಂತೆಯೇ ಜ್ಞಾತೃವಿನ ಕ್ರಿಯಾವಿಲಾಸವನ್ನೂ ಅವಲಂಬಿಸಿದೆ.

ಈ ವಿವರಣೆಯಲ್ಲಿ ದೊಡ್ಡ ಆಕ್ಷೇಪವೊಂದು ಬರುತ್ತದೆ : ಇದುವರೆಗೆ ಕ್ರಿಯೆ-ಪ್ರತಿಕ್ರಿಯೆಗಳ ವಿಚಾರವನ್ನೇ ಹೇಳಿದೆ. "ಅಖಂಡದಲ್ಲಿ, ಅನಂತದಲ್ಲಿ

---

*ವಸ್ತುಗಳ ಗುಣ-ಧರ್ಮಾದಿಗಳನ್ನೂ ನಾಮರೂಪಗಳನ್ನೂ ಮೀರಿ, ಎಲ್ಲಾ ಪ್ರಾಣಿಗಳಲ್ಲಿಯೂ ಪದಾರ್ಥಗಳಲ್ಲಿಯೂ ಆಕಾಶದಂತೆ ಅಖಂಡವಾಗಿಯೂ ಸರ್ವಸಮವಾಗಿಯೂ ತುಂಬಿರುವ ನಿರುಪಾಧಿಕನೂ ನಿಷ್ಕ್ರಿಯನೂ ಆಗಿರುವ ನಿಜಾತ್ಮನಲ್ಲಿ ಎರಡೆಂಬುದೂ ಎರಡರ ಸಂಯೋಗವೆಂಬುದೂ ಕ್ರಿಯೆ-ಪ್ರತಿಕ್ರಿಯೆ ಎಂಬದೂ ಔಪಚಾರಿಕ

ಕ್ರಿಯೆ-ಪ್ರತಿಕ್ರಿಯೆಗಳು ಹೇಗೆ ಉಂಟಾಗಬಲ್ಲವು ?" ಎಂಬದೇ ಈ ಆಕ್ಷೇಪ. ಇದು ಸರಿ. ಅನಂತವಾದ ನಿಜತತ್ತ್ವದಲ್ಲಿ ವಸ್ತುತತ್ತ್ವದಲ್ಲಿ ಅಥವಾ ಆತ್ಮತತ್ತ್ವದಲ್ಲಿ ಕ್ರಿಯೆ ಪ್ರತಿಕ್ರಿಯೆಗಳು ಇಲ್ಲವೆಂಬುದೇ ಸರಿ. ಆದರೆ ಇತರ ತತ್ತ್ವಶಾಸ್ತ್ರಜ್ಞರ ವಾದಗಳ ಲ್ಲಿರುವ ಗುಣದೋಷಗಳನ್ನು ತೋರಿಸುವದಕ್ಕಾಗಿ ಅವರ ಮಾತುಗಾರಿಕೆಯನ್ನೇ ಉಪ ಯೋಗಿಸಿ ವಿವೇಚನೆ ಮಾಡಿದೆವು. ನಿರುಪಾಧಿಕವೂ ನಿರ್ಗುಣವೂ ಆದ ಕೇವಲ ಸತ್ಯ ದಲ್ಲಿ ಕ್ರಿಯೆ-ಪ್ರತಿಕ್ರಿಯೆಗಳಿಲ್ಲವಾದರೂ ಒಳಗೆ ಚಿತ್ತಕ್ಕೂ (ಬುದ್ಧಿಗೂ) ಹೊರಗೆ ವಸ್ತುವಿಗೂ ಕೇವಲ (ಮಹತ್) ತತ್ತ್ವವನ್ನೂ (Absolute will) ಕೇವಲ (ಪರಾ) ಶಕ್ತಿಯನ್ನೂ (Absolute Energy) ಸಂಬಂಧಪಡಿಸಿ ಸೋಪಾಧಿಕವಾಗಿ ವಿಚಾರ ಮಾಡುವಾಗ ಕ್ರಿಯೆ-ಪ್ರತಿಕ್ರಿಯೆಗಳ ಮಾತನಾಡಬಹುದು. ವಸ್ತುವಿನ ಉಪಾಧಿ ಯಿಂದ ಕೂಡಿದ ಕೇವಲ ತತ್ತ್ವವು ಮಸ್ತಕದ ಮೆದುಳಿನ ಅಥವಾ ಬುದ್ಧಿಯ ಉಪಾಧಿಯಿಂದ ಕೂಡಿದ ಕೇವಲ ತತ್ತ್ವದ ಮೇಲೆ ಅಥವಾ ಎದುರಾಗಿ ಕ್ರಿಯೆಯನ್ನೋ ಪ್ರತಿಕ್ರಿಯೆಯನ್ನೋ ನಡೆಸುತ್ತದೆ.

ಇದಕ್ಕೊಂದು ಉದಾಹರಣೆಯನ್ನು ಕೊಡಬಹುದು : ಈ ಪಾತ್ರೆಯಲ್ಲಿ ಆಕಾಶವಿದೆ, ಪೊಳ್ಳಿದೆ, ಬಯಲಿದೆ; ಆ ಪಾತ್ರೆಯಲ್ಲಿಯೂ ಆಕಾಶವಿದೆ. ಆದರೆ ನಿಜವಾಗಿ ಆಕಾಶವು ಅಖಂಡವೂ ಏಕವೂ ಆಗಿದೆ. ಆದರೂ ಆ ಪಾತ್ರೆಯಲ್ಲಿ ಕಾಣುವ ಆಕಾಶ, ಈ ಪಾತ್ರೆಯಲ್ಲಿ ಕಾಣುವ ಆಕಾಶ ಎಂದು ವ್ಯವಹರಿಸಬಹುದು. ನಿಜವಾಗಿ ನೋಡಿದರೆ, ಈ ಕರವಸ್ತ್ರವನ್ನು ಬಳಸಿದಂತೆ ಆಕಾಶವನ್ನು ಬಳಸುವದಕ್ಕೆ ಬರುವದಿಲ್ಲ. ಆಕಾಶವು – ಅವಕಾಶವು – (Space) ಅಖಂಡವಾದುದರಿಂದ ಅದನ್ನು ವಿಭಾಗ ಮಾಡುವದಕ್ಕೂ ಹರಿದು ಚೂರು ಚೂರು ಮಾಡುವದಕ್ಕೂ ಬರುವದಿಲ್ಲ. ಅದು ಏಕಾಖಂಡವಾದುದು. ಕ್ಯಾಂಟ್‌ಮಹಾಶಯನ ಅಭಿಪ್ರಾಯದಂತೆ ಆಕಾಶವು (Space) ವಸ್ತುನಿಷ್ಠವಾಗಿ ಹೊರಗಿಲ್ಲ, ಅದು ಜ್ಞಾತೃನಿಷ್ಠವಾಗಿ ಒಳಗಿದೆ. ಅದನ್ನು ಒಡೆದು ತುಂಡು ಮಾಡುವದಕ್ಕೆ ಆಗುವದಿಲ್ಲ. ಹಾಗೆಯೇ ನಿಜವಾದ ಆತ್ಮನು ಅಥವಾ ನಿಜ ಸತ್ತೆಯು, ಕೇವಲವೂ ಅನಂತವೂ ಆದ ನಿಜತತ್ತ್ವವು ಅಖಂಡವೂ ಏಕವೂ ಆದುದು. ಅದನ್ನು ಕತ್ತರಿಸುವದಕ್ಕಾಗಲೀ ವಿಭಾಗಿ ಸುವದಕ್ಕಾಗಲೀ ಆಗುವದಿಲ್ಲ. ಆದರೆ ಅದನ್ನು ಈ ಪ್ರಪಂಚದ ವಸ್ತು ಗಳಿಗೆ ಸಂಬಂಧಪಡಿಸಿ ಮಾತನಾಡುವಾಗ ಬುದ್ಧಿಗೋ ಯಾವದೊಂದು ವಸ್ತು ವಿಗೋ ಅವುಗಳ ಪರಸ್ಪರ ಕ್ರಿಯೆ–ಪ್ರತಿಕ್ರಿಯೆಗಳಿಗೋ ಸಂಬಂಧ ಹಚ್ಚಿ ವಿಚಾರ ಮಾಡಿದರೆ ತಪ್ಪೇನೂ ಆಗುವದಿಲ್ಲ, ನ್ಯಾಯವಾಗಿಯೇ ಇರುತ್ತದೆ. ಉದಾಹರಣೆ ಗಾಗಿ, ಈ ಪಾತ್ರೆಗೆ ಸಮೀಪವಾಗಿ ಈ ನನ್ನ ಕೈಯನ್ನು ತರುತ್ತೇನೆ. ಕೈಯಲ್ಲಿರುವ

ಆಕಾಶವು ಪಾತ್ರೆಯಲ್ಲಿರುವ ಆಕಾಶವನ್ನು ಸಮೀಪಿಸಿ ಎರಡೂ ಸೇರಿ ಒಂದಾಗುತ್ತವೆ. ಈಗ ಕೈಯಲ್ಲಿರುವ ಆಕಾಶವು ಪಾತ್ರೆಯಲ್ಲಿರುವ ಆಕಾಶವಾಗುತ್ತದೆ. ಈ ಆಕಾಶವು ಮೊದಲೂ ಒಂದೇ ಆಗಿತ್ತು ; ಈಗ ನಮ್ಮ ಕಣ್ಣಿಗೆ ಕೈಯಲ್ಲಿರುವ ಆಕಾಶವು ಪಾತ್ರೆಯಲ್ಲಿರುವ ಆಕಾಶವಾಗಿ ಕಾಣುತ್ತದೆ.

ಹೀಗೆ, ಜ್ಞಾತೃವಿಗೆ ಆಧಾರವಾದ ಕೇವಲ ಸತ್ಯವು (Absolute Reality) ಜ್ಞೇಯವಸ್ತುವಿಗೆ ಆಧಾರವಾದ ಕೇವಲ (ತತ್ತ್ವದಲ್ಲಿ) ಸತ್ತೆಯಲ್ಲಿ ಒಂದಾದಾಗ ಜ್ಞಾತೃವೂ ಜ್ಞೇಯವೂ ಸೇರಿ ಒಂದಾಗುತ್ತವೆ—ಎಂದು ವೇದಾಂತವು ಹೇಳುತ್ತದೆ.

Action and reaction take place, not in reality in the Athman, but they take place in the Athman as defined by the 'limited'.

**ಕ್ರಿಯೆ-ಪ್ರತಿಕ್ರಿಯೆಗಳು ಸಂಭವಿಸುವದು, ನಿಜವಾಗಿಯೂ ಆತ್ಮನಲ್ಲಿ ಅಲ್ಲ, ಆದರೆ ಅವು ವಸ್ತು-ಶಕ್ತಿಗಳ-ಜ್ಞಾತೃ-ಜ್ಞೇಯಗಳ ಪರಿಮಿತಿಯಲ್ಲಿ ಅಡಗಿದಂತಿರುವ ಸೋಪಾಧಿಕ ಆತ್ಮನಲ್ಲಿ ಸಂಭವಿಸುತ್ತವೆ.**

ಇಲ್ಲಿ ನೋಡಿ. ಸಮುದ್ರದಲ್ಲಿ ಒಂದು ಕಡೆಯಿಂದ ನೀರಿನ ಅಲೆಯು ಉಬ್ಬೇರಿ ಬರುತ್ತದೆ ; ಇನ್ನೊಂದು ಕಡೆಯಿಂದ ಎದುರಾಗಿ ಇನ್ನೊಂದು ನೀರಿನ ಅಲೆ ಬೆಟ್ಟದಂತೆ ಏರೇರಿ ಬರುತ್ತದೆ. ಒಂದು ಅಲೆಯು ಎಷ್ಟರಮಟ್ಟಿಗೆ ನೀರೋ ಇನ್ನೊಂದು ಅಲೆಯೂ ಅಷ್ಟರಮಟ್ಟಿಗೆ ನೀರೇ ಆಗಿದೆ. ಆ ಅಲೆಗಳು ಒಂದನ್ನೊಂದು ಅಪ್ಪಳಿಸುವಾಗ ಎರಡೂ ನೀರೇ ಆಗಿರುತ್ತವೆ. ಅಲೆಗಳಲ್ಲಿ ಬದಲಾವಣೆಯಾಗುವದೇ ಹೊರತು ನೀರಿನಲ್ಲಿ ಬದಲಾವಣೆಯಿಲ್ಲ. ಕ್ರಿಯೆ-ಪ್ರತಿಕ್ರಿಯೆಗಳೂ ಅಲೆಗಳಲ್ಲಿ ಉಂಟಾಗುವವೇ ಹೊರತು ನೀರಿನಲ್ಲಿ ಅಲ್ಲ. ಆದರೆ ಒಂದು ಅಲೆಯ ರೂಪದಲ್ಲಿರುವ ನೀರು ಇನ್ನೊಂದು ಅಲೆಯ ರೂಪದಲ್ಲಿರುವ ನೀರಿನೊಡನೆ ಸಂಘರ್ಷವಾದ ಕೂಡಲೇ ಫೇನವಿಲಾಸ ಉಂಟಾಗುತ್ತದೆ- ವಿಪುಲವಾದ ನೊರೆ ಉಂಟಾಗುತ್ತದೆ. ಇಲ್ಲಿ ಒಂದೇ ಆದ ನೀರು ಅಲೆಯೆಂಬ ನಾಮರೂಪದ ಉಪಾಧಿಯ ಪರಿಮಿತಿಯಲ್ಲಿ ತೋರಿಕೊಂಡಂತೆ ಅಖಂಡೈಕ ಸತ್ಯವಾದ ಆತ್ಮವೂ ವಸ್ತುಶಕ್ತಿಗಳ ಅಥವಾ ಜ್ಞಾತೃ-ಜ್ಞೇಯಗಳ ಉಪಾಧಿಯ ಮೂಲಕ ಕ್ರಿಯೆ-ಪ್ರತಿಕ್ರಿಯೆಗಳನ್ನು ಒಳಗೊಂಡು ಪ್ರಪಂಚವಿಲಾಸವಾಗಿ ತೋರಿಕೊಳ್ಳುತ್ತದೆ. ಚಿತ್ತದ (ಬುದ್ಧಿಯ) ಉಪಾಧಿಯಿಂದ ತೋರಿಕೊಳ್ಳುವ

ಕೇವಲ ಸತ್ಯವು, ವಸ್ತುವಿನ ಉಪಾಧಿಯಿಂದ ತೋರಿಕೊಳ್ಳುವ ಕೇವಲ ಸತ್ಯದೊಡನೆ ಸಂಘಟ್ಟನೆಯಾದಾಗ ಈ ಪ್ರಪಂಚವಸ್ತುಗಳ ಗುಣ-ಧರ್ಮ-ಸ್ವಭಾವ-ಪ್ರಭಾವಗಳ ವಿಲಾಸವು ಗೋಚರವಾಗುತ್ತದೆ. ಇದು, ಒಂದೇ ಶಕ್ತಿಯಿರುವ ಎರಡು ಕೈಗಳ ಚಪ್ಪಾಳೆಯಿಂದ ಉಂಟಾಗುವ ಶಬ್ದವಿಲಾಸದಂತಿದೆ, ಎನ್ನಬಹುದು

ಚಿತ್ತದಲ್ಲಿರುವ ಕೇವಲ ಸತ್ಯವೂ ವಸ್ತುವಿನಲ್ಲಿರುವ ಕೇವಲ ಸತ್ಯವೂ ಒಂದೇ. ಆದರೆ ಚಿತ್ತವು (ಜ್ಞಾತೃವು) ವಸ್ತುವಿನೊಡನೆ (ಜ್ಞೇಯದೊಡನೆ) ಸಂಪರ್ಕವಾದಾಗ ಎರಡರ ಹಿನ್ನೆಲೆಯಾದ ಸತ್ಯವು ಒಂದೇ ಇದ್ದರೂ ಸೃಷ್ಟಿಚಮತ್ಕಾರವು ಗೋಚರ ವಾಗುತ್ತದೆ. ಈ ಪ್ರಪಂಚದಲ್ಲಿರುವ ಎಲ್ಲಾ ವಸ್ತುಗಳಿಗೂ ಆಧಾರವಾಗಿ ಒಂದೇ ಸತ್ಯವಿದೆ,-ಎನ್ನುವ ವಿಷಯವನ್ನು ಈಗ ಹೆಚ್ಚು ಸ್ಪಷ್ಟಪಡಿಸಬೇಕು. ಇಲ್ಲಿ ಒಂದು ಲೇಖನಿ ಇದೆ. ಈ ಲೇಖನಿಯೆಂಬ ದ್ರವ್ಯದಲ್ಲಿ (ವಸ್ತುವಿನಲ್ಲಿ) ಕೆಲವು ಗುಣ-ಧರ್ಮ ಗಳೂ ಇವೆ ಮತ್ತು ಇವಕ್ಕೆ ಆಧಾರವಾಗಿ ಕೇವಲ ಸದ್ವಸ್ತುವೂ ಇದೆ. ಎಲ್ಲಾ ವಸ್ತುಗಳಲ್ಲಿಯೂ ಆಧಾರವಾಗಿ ನಿಜತತ್ತ್ವ ಒಂದಿದೆಯೆಂದು ಅಂಗೀಕರಿಸುವದಕ್ಕೆ ನಮಗೆ ನ್ಯಾಯವಾದ ಕಾರಣಗಳಿವೆಯೆಂದು ನಿಮಗೆ ತಿಳಿದೇ ಇದೆ. ಏಕೆಂದರೆ ಬುದ್ಧಿಯ ಪ್ರತಿಕ್ರಿಯೆಯ ಪರಿಣಾಮವಾಗಿ ತೋರುವ ಗುಣಧರ್ಮಗಳಿಗೆ ಆಶ್ರಯ ವಾಗಿ, ವಸ್ತುವಿನಲ್ಲಿ ಬುದ್ಧಿಯನ್ನು ಕೆರಳಿಸುವ ಏನೋ ಒಂದು ನಿಜತತ್ತ್ವ (The Thing-in-itself) ಇರಲೇಬೇಕು. ಗುಣಧರ್ಮಗಳು ಮೊದಲೇ ಸ್ವತಂತ್ರ ವಾಗಿ ತಾವಾಗಿಯೇ ಇರುವದು ಸಾಧ್ಯವಿಲ್ಲ. ಪ್ರತಿಯೊಂದು ವಸ್ತುವಿಗೂ ಆಧಾರ ವಾಗಿ ನಿಜತತ್ತ್ವ ಒಂದಿರಬೇಕು ಎಂದು ಒಪ್ಪಿದರೂ ಒಂದು ವಸ್ತುವಿನಲ್ಲಿರುವ ನಿಜತತ್ತ್ವವು ಇನ್ನೊಂದು ವಸ್ತುವಿನಲ್ಲಿರುವ ನಿಜತತ್ತ್ವವಾಗಿರದೆ ಬೇರೆಯೇ ಇರ ಬಹುದು; ಹೀಗೆ ಒಂದೊಂದು ವಸ್ತುವಿನಲ್ಲಿಯೂ ಇರುವ ಒಂದೊಂದು ನಿಜತತ್ತ್ವವು ಬೇರೆ ಬೇರೆಯೇ ಇದ್ದು ಅನೇಕ, ಅಸಂಖ್ಯಾತ ನಿಜತತ್ತ್ವಗಳಿರಬಹುದು ಎಂಬ ಸಂಶಯ ಬರುವದು ಸ್ವಾಭಾವಿಕ.

ಪ್ಲೇಟೋ ಮಹಾಶಯನು ಸಹ ಇದೇ ತಪ್ಪನ್ನು ಮಾಡಿದ್ದಾನೆ. ಬೇರೆ ಬೇರೆ ವಸ್ತುಗಳಿಗೆ ಆಧಾರವಾದ ನಿಜವಾದ ವಸ್ತುತತ್ತ್ವವನ್ನು ಆಯಾ ವಸ್ತುಗಳಿಗೆ ಅನು ಗುಣವಾಗಿ ಬೇರೆ ಬೇರೆಯೆಂದೇ ಅವನು ತೆಗೆದುಕೊಂಡಿದ್ದಾನೆ. ಯಾವದೊಂದು ವಾದಸರಣಿಯನ್ನು ಅತಿಯಾಗಿ ಬೆಳೆಸಿ, ಎಳೆದು, ಅದು ಅಸಂಗತವೆಂದು ತೋರುವಂತೆ ಮಾಡುವ ಅತಿವಾದದ ಪದ್ಧತಿಯ ದೃಷ್ಟಿಯಿಂದ ನೋಡಿದರೆ ಪ್ಲೇಟೋವಾದದಲ್ಲಿ ತರ್ಕದೋಷವೂ ಭ್ರಾಂತಿಯೂ ಅಡಗಿರುವದು ಕಾಣುತ್ತದೆ. ಪ್ರತಿಯೊಂದು

ವಸ್ತುವಿಗೂ ಆಧಾರವಾದ ನಿಜತತ್ತ್ವವು ಅನೇಕವಾಗಿದೆ ಎಂಬ ಅವನ ಗ್ರಹಿಕೆಯು ತಪ್ಪಾದುದು ಎಂಬುದನ್ನು ತೋರಿಸಬಹುದು. ವಸ್ತುವಿನಲ್ಲಿ ತೋರುವ ಬಣ್ಣವೂ ತೂಕವೂ ಮೃದುತ್ವ ಅಥವಾ ಕಠಿಣತ್ವವೂ ರುಚಿ ಮೊದಲಾದ ಗುಣಗಳೂ ನಮ್ಮ ಮನಸ್ಸಿನಲ್ಲಿ ಉಂಟಾದ ಪ್ರತಿಕ್ರಿಯೆಯ ಪರಿಣಾಮವಾಗಿವೆ. ಆದರೆ ವಸ್ತುವಿನಲ್ಲಿ ರುವ ನಿಜತತ್ತ್ವವು ಎಲ್ಲಾ ಗುಣಧರ್ಮಗಳನ್ನೂ ಮೀರಿ ಯಾವ ಗುಣಧರ್ಮವೂ ಇಲ್ಲದ್ದಾಗಿದೆ. ಈ ಪ್ರಪಂಚದಲ್ಲಿರುವ ಎಲ್ಲಾ ಭೇದಗಳಿಗೂ ಗುಣಧರ್ಮಗಳೇ ಕಾರಣ. ಆದ್ದರಿಂದ ಗುಣಧರ್ಮಗಳಿಲ್ಲದ ತತ್ತ್ವದಲ್ಲಿ ಭೇದಕ್ಕೂ ಅನೇಕತ್ವಕ್ಕೂ ಕಾರಣವೇ ಇಲ್ಲ. ಒಂದು ವಸ್ತುವು ಇನ್ನೊಂದು ವಸ್ತುವಿನಿಂದ ಬೇರೆ ಎನ್ನುವದಕ್ಕೆ ಅವುಗಳ ಬೇರೆ ಬೇರೆ ಗುಣಗಳೇ ಕಾರಣ. ಆದರೆ ನಿಜತತ್ತ್ವವು ಗುಣಧರ್ಮಗಳನ್ನು ಮೀರಿದೆ ಎಂದು ನಾವೇ ಹೇಳಿ ಅದು ಬೇರೆ ಬೇರೆ ಅನೇಕವಾಗಿದೆ ಎಂದೂ ನಾವೇ ಹೇಳಿದರೆ ಅದನ್ನು ಪುನಃ ನಾವೇ ಗುಣಧರ್ಮಗಳಿಗೆ ವಶಪಡಿಸಿದಂತೆ ಆಗುತ್ತದೆ. ಮೊದಲು ಗುಣಗಳಿಗೆ ಅತೀತವಾದುದು ಎಂದು ತೆಗದುಕೊಂಡ ತತ್ತ್ವವನ್ನೇ ಕೊನೆ ಯಲ್ಲಿ ಗುಣಗಳಿಗೆ ಅಧೀನವಾದುದು ಎಂದು ತಾನೇ ಹೇಳಿದರೆ ತನ್ನನ್ನು ತಾನೇ ವಿರೋಧಿಸಿಕೊಂಡಂತಾಯಿತು. ಪ್ಲೇಟೋ ಮಾಡಿದ ತಪ್ಪೇ ಇದು.

ಒಂದು ವಸ್ತುವಿನಲ್ಲಿ ಆಧಾರವಾಗಿರುವ ನಿಜತತ್ತ್ವವು ಇನ್ನೊಂದು ವಸ್ತುವಿನಲ್ಲಿ ಆಧಾರವಾಗಿರುವ ನಿಜತತ್ತ್ವದಿಂದ ಬೇರೆಯಾಗಿದೆ-ಎಂದು ಹೇಳುವದಕ್ಕೆ ಯಾರಿಗೂ ಅಧಿಕಾರವಿಲ್ಲ. ಹಾಗೆ ಹೇಳಿದರೆ ಅಯುಕ್ತವೂ ಅಸಂಗತವೂ ಆಗುತ್ತದೆ. ಪೆನ್ಸಿಲ್ ನಲ್ಲಿ ಆಧಾರವಾದ ಇರುವಿಕೆಯು ಲೇಖನಿಯಲ್ಲಿ ಆಧಾರವಾದ ಇರುವಿಕೆಯಿಂದ ಬೇರೆಯಾಗಿದೆ, ಎಂದರೆ ತಪ್ಪಾಗುತ್ತದೆ. ಮನಸ್ಸಿಗೂ ಜ್ಞಾತೃವಿಗೂ ಬುದ್ಧಿಗೂ ಅಥವಾ ಚಿತ್ತಕ್ಕೂ ಆಧಾರವಾದ ನೈಜವು ಆಕಳಿಗೋ ಹೋರಿಗೋ ಎಮ್ಮೆಗೋ ಆಧಾರವಾದ ನೈಜಕ್ಕಿಂತಲೂ ಬೇರೆ ಎನ್ನುವುದಕ್ಕೆ ಯಾರಿಗೂ ಅಧಿಕಾರವಿಲ್ಲ. ಈ ಮೇಜಿಗೆ ಆಧಾರವಾದ ಆತ್ಮನಿಂದ ಈ ಲೇಖನಿಗೆ ಆಧಾರವಾದ ಆತ್ಮನು ಬೇರೆ ಎನ್ನುವದು ಸರಿಯಲ್ಲ, ನಿಜವಲ್ಲ. ಎಂದೂ ಯಾವ ಕಾರಣದಿಂದಲೂ ಬದಲಾವಣೆ ಹೊಂದದಿರುವ ನಿಜತತ್ತ್ವವು ಎಲ್ಲಕ್ಕೂ ಆಧಾರವಾಗಿ ಒಂದೇ ಆಗಿದೆ.

ಇದನ್ನು ಹೆಚ್ಚು ಸ್ಪಷ್ಟಪಡಿಸುವದಕ್ಕಾಗಿ ಇನ್ನೊಂದು ಉದಾಹರಣೆಯನ್ನು ಕೊಡಬಹುದು. ಇಲ್ಲಿ ಸುಂದರವೂ ಸ್ವಚ್ಛವೂ ಆದ ಗೋಡೆಯಿದೆ. ಒಬ್ಬರು ಬಂದು ಇದರ ಮೇಲೆ ಸುಂದರವಾದ ರೇಖಾಚಿತ್ರಗಳನ್ನೂ, ತ್ರಿಕೋಣಗಳನ್ನೂ ವೃತ್ತ ಗಳನ್ನೂ ದೀರ್ಘವೃತ್ತಗಳನ್ನೂ ಬರೆಯಬಹುದು. ಇನ್ನೊಬ್ಬ ಚಿತ್ರಕಾರನು

ಬಂದು ಈ ಗೋಡೆಯ ಮೇಲೆ ಇನ್ನೊಂದು ಸ್ಥಳದಲ್ಲಿ ಘೋರವಾದ ಯುದ್ಧ ವೊಂದನ್ನು ಚಿತ್ರಿಸಬಹುದು. ಮತ್ತೊಬ್ಬನು ಬಂದು ಇನ್ನೊಂದೆಡೆಯಲ್ಲಿ ಈ ಗೋಡೆಯ ಮೇಲೆ ಶಾಂತವಾದ ಆಶ್ರಮವೊಂದನ್ನೂ, ಅದರಲ್ಲಿ ಶಿಷ್ಯಮಂಡಲಿ ಸಹಿತ ರಾದ ಋಷಿ-ಮುನಿಗಳನ್ನೂ ಅಥವಾ ಪತಿ-ಪತ್ನೀ ಪುತ್ರ-ಮಿತ್ರ-ಬಾಂಧವರ ಒಂದು ಸರಸ ಸುಂದರ ಸಂಸಾರವನ್ನೂ ಚಿತ್ರಿಸಬಹುದು. ಬಗೆ ಬಗೆಯಾದ ಈ ಎಲ್ಲಾ ಚಿತ್ರಗಳಿಗೂ ಹಿನ್ನೆಲೆಯಲ್ಲಿ ಸಮಾನವಾಗಿ, ಒಂದೇ ಸದ್ವಸ್ತುವಾದ ಗೋಡೆಯಿದೆ. ಹಾಗೆಯೇ ಈ ಪ್ರಪಂಚದಲ್ಲಿ ನಮಗೆ ತೋರುವ ಎಲ್ಲಾ ವಸ್ತುಗಳಿಗೂ ಅಧಾರವಾಗಿ ಒಂದೇ ಸತ್ಯವಿದೆ. ಇಲ್ಲಿ ನಮಗೆ ಕಾಣುವ ಕುದುರೆಯಾಗಲೀ ಕತ್ತೆಯಾಗಲೀ ಪಶ ವಾಗಲೀ ಪಕ್ಷಿಯಾಗಲೀ ಮನುಷ್ಯನಾಗಲೀ ನಾಯಿಯಾಗಲೀ ಒಂದೇ ಗೋಡೆಯ ಮೇಲೆ ಬರೆದಿರುವ ಚಿತ್ರಗಳಂತಿವೆ ಎಲ್ಲಕ್ಕೂ ಆಧಾರವಾಗಿ ಎಲ್ಲವುಗಳಲ್ಲಿಯೂ ಇರುವ ಆತ್ಮ ಒಂದೇ. ಕನಸಿನಲ್ಲಿ ಕಂಡ ಪ್ರಾಣಿಗಳೂ ಪದಾರ್ಥಗಳೂ ಪರ್ವತ ಗಳೂ ನದಿಗಳೂ ನಗರಗಳೂ ನಾಗರಿಕರೂ ಎಲ್ಲಾ ಎಚ್ಚರವಾದ ಮೇಲೆ ಒಂದೂ ನಿಜವೆಂದು ತೋರದೆ ಮಾಯವಾಗುತ್ತವೆ.

ಇಲ್ಲಿ ಒಂದು ಅತಿಸೂಕ್ಷ್ಮವೂ ಗಹನವೂ ಆದ ತತ್ತ್ವವಿದೆ, ಪ್ರಶ್ನೆಯಿದೆ. ಇದು ಈಗಲೇ ಎಲ್ಲರಿಗೂ ಅರ್ಥವಾಗುವದು ಕಠಿಣವಾಗಿ ತೋರಬಹುದು. ಆದರೆ ಇನ್ನೂ ಕೆಲವು ಉಪನ್ಯಾಸಗಳನ್ನು ಕೇಳಿದ ಮೇಲೆ ಇದು ಪೂರಾ ಅರ್ಥವಾಗಬಹುದು. ಆದರೂ ಈ ಜಟಿಲ ವಿಚಾರವನ್ನು ಒಮ್ಮೆ ಕೇಳಿರುವದು ಪ್ರಯೋಜನವಾಗುತ್ತದೆ.

ಈ ಪ್ರಪಂಚದ ರಚನೆಗೆ ಕಾರಣವಾದ ಗುಣಗಳ ವಿಷಯವೇನು? ತತ್ತ್ವವೇನು? ಪ್ರಕೃತಿವಿಲಾಸವಾದ ಈ ಪ್ರಪಂಚ ಸೃಷ್ಟಿಗೆ ಗುಣಗಳೇ ಕಾರಣವಾಗಿವೆ. ಆದರೆ ಈ ಗುಣಗ ಳಿಗೆ ಕೇವಲ ಸತ್ಯವೇ ಆಧಾರವಾಗಿದೆ. ಇವು ಸತ್ಯವನ್ನೇ ಅವಲಂಬಿಸಿವೆ ಆಶ್ರಯಿಸಿವೆ. ಈ ದೃಷ್ಟಿಯಿಂದ ಗುಣರಹಿತವಾದ ಕೇವಲ ಸತ್ಯದಲ್ಲಿಯೂ ಒಂದು ಗುಣವಿದೆ ಎನ್ನಬಹುದು. ಇದೇನೆಂದರೆ, ಗುಣಗಳಿಗೆಲ್ಲಾ ಆಶ್ರಯವೂ ಆಧಾರವೂ ಆಗಿರುವದೇ ಈ ಒಂದು ಗುಣ. ಹಾಗಾದರೆ ಕೇವಲ ನಿರುಪಾಧಿಕವೂ ನಿರಪೇಕ್ಷವೂ ನಿರ್ಗುಣವೂ ಆಗಿದೆ ಎನ್ನುವ ಸತ್ಯವು ಕೇವಲ ನಿರ್ಗುಣವಲ್ಲ ಎಂದಾಗುತ್ತದೆ. ಏಕೆಂದರೆ ಸಕಲ ಗುಣಗಳಿಗೂ ಆಧಾರವಾಗಿರುವ ಒಂದು ಗುಣವಾದರೂ ಅದರಲ್ಲಿದೆ. ಹಾಗಾದರೆ ಸತ್ಯವು ಕೇವಲವಾದುದು-ಎನ್ನುವದು ಹೇಗೆ ? ಇದನ್ನು ನಾವು ಸಾಕ್ಷಾ ತ್ಕಾದ ಸ್ವಂತ ಅನುಭವದಿಂದ ಅಥವಾ ಅಪರೋಕ್ಷಾನುಭೂತಿಯಿಂದ ಹೇಳುತ್ತೇವೆ. ನಿಮ್ಮ ಸ್ವಂತ ಇಂದ್ರಿಯಗಳ ಅನುಭವದ ಪ್ರಮಾಣದ ಮೇಲೆ ನೀವು ಹೇಗೆ ಈ

ಪ್ರಪಂಚವು ಸತ್ಯವೆನ್ನುವಿರೋ ಹಾಗೆಯೇ ಹೆಚ್ಚು ಉನ್ನತವಾದ ಅಥವಾ ಪರ ಮೋಚ್ಚವಾದ ಆಧ್ಯಾತ್ಮಿಕ ಅನುಭವದ ಪ್ರಮಾಣದ ಮೇಲೆ ನಾವು ಹೇಳುವದೇನೆಂದರೆ, ಕೇವಲ ಸತ್ಯದ ಪೂರ್ಣಾನುಭವವಾದಾಗ ಈ ಎಲ್ಲಾ ಗುಣಗಳೂ ದೇಶ-ಕಾಲ-ನಿಮಿತ್ತ ಗಳೂ ನುಳ್ಳೆನಿಸುತ್ತವೆ, ಇಲ್ಲವಾಗುತ್ತವೆ, ಮಾಯವಾಗುತ್ತವೆ. ಹೀಗೆ ಕೇವಲ ಸತ್ಯದ ದೃಷ್ಟಿಯಿಂದ ಈ ಗುಣಗಳು ಎಂದೂ ಇರಲೇ ಇಲ್ಲ. ಆದರೆ ಗುಣಗಳ ದೃಷ್ಟಿಯಿಂದ ಅವು ತಮಗೆ **ಅಧಿಷ್ಠಾನವಾದ** ಕೇವಲವನ್ನೇ ಅವಲಂಬಿಸಿವೆ. (ಅಧಿಷ್ಠಾನವಾದ ಕೇವಲ ಸತ್ಯದಲ್ಲಿ ಎಲ್ಲಾ ಗುಣಗಳು ಅಥವಾ ಗುಣಾತ್ಮಕವಾದ ಪ್ರಪಂಚವು ಹಗ್ಗದಲ್ಲಿ ಹಾವಿನಂತೆ ಅಧ್ಯಸ್ತವಾಗಿವೆ-ಕಲ್ಪಿತವಾಗಿವೆ.) ಇಲ್ಲಿ ಒಂದು ಜಟಿಲವಾದ ಸಮಸ್ಯೆಯಿದೆ ಇಲ್ಲೊಂದು ವಿರೋಧವಿದೆ ಅಥವಾ ವಿರೋಧಾಭಾಸ ವಿದೆ. ಇದಕ್ಕೆ ಸಮಾಧಾನ ಕೊಡುವ ಉತ್ತರವನ್ನು ಕಂಡುಕೊಳ್ಳಬೇಕು. ಈ ಗಹನ ತತ್ತ್ವಕ್ಕೇ ಸಮಸ್ಯೆಗೇ ಮಾಯೆ ಎನ್ನುವದು. ವಾಸ್ತವವಾಗಿಯೂ ಕೇವಲ ಸತ್ಯವು ಕೇವಲವೇ ಸರಿ. ಅದು ಎಲ್ಲಾ ಗುಣಗಳಿಗೂ ಅತೀತವಾಗಿದೆ. ಆದರೆ ಗುಣಗಳ ದೃಷ್ಟಿಯಿಂದ, ಗುಣಗಳು ಆ ಕೇವಲವನ್ನೇ ಅವಲಂಬಿಸಿವೆ, ಆಶ್ರಯಿಸಿವೆ. ಇದೇ ಅತ್ಯಂತ ಪ್ರಮುಖವಾದ ಸಮಸ್ಯೆ. ಇದಕ್ಕೆ ಕಂಡುಕೊಂಡ ಪರಿಹಾರವೇ ಪ್ರಪಂಚದ ಎಲ್ಲಾ ಕಷ್ಟಗಳಿಗೂ ಪರಿಹಾರವನ್ನು ಕೊಡುತ್ತದೆ.

ಈ ವಿಷಯಗಳು ಕೇವಲ ಊಹಾಪೋಹದ ವಿಚಾರಗಳಲ್ಲ. ಇವುಗಳ ಸಂಬಂಧವಾಗಿ ಸುಮ್ಮನೆ ಮಾತನಾಡಿ ಬಿಡುವದಲ್ಲ. ಯುರೋಪ್ ದೇಶದ ತತ್ತ್ವಶಾಸ್ತ್ರಜ್ಞರು ಈ ವಿಷಯಗಳನ್ನು ಕೇವಲ ವಿಚಾರದ ವಸ್ತುಗಳನ್ನಾಗಿ ಮಾಡಿ ಕೊಳ್ಳುತ್ತಾರೆ ಆದರೆ ಇಂಡಿಯಾ ದೇಶದ ತತ್ತ್ವಜ್ಞಾನಿಗಳು ಹಾಗೆ ಮಾಡುವದಿಲ್ಲ. ಭಾರತೀಯ ತತ್ತ್ವವೇತ್ತರ ದೃಷ್ಟಿಯಲ್ಲಿ, ತಾತ್ತ್ವಿಕ ವಿಚಾರದಿಂದ ಪ್ರಮಾಣೀಕರಿ ಸಲ್ಪಟ್ಟ ಒಂದು ವಿಷಯವು ಅನುಭವದಿಂದ ಪರೀಕ್ಷಿಸಲ್ಪಡದೆ, ಸ್ವಂತ ಪ್ರಯೋಗ ದಿಂದ ಸ್ವಾನುಭವದಲ್ಲಿ ಆಳವಾಗಿ ಅಳವಡದೆ ಇದ್ದರೆ, ಅರ್ಧಮಾತ್ರ ಸಿದ್ಧಪಟ್ಟಂತೆ. ಈ ವಿಷಯದ ವಿಚಾರವನ್ನು ನಾವು ಕೇಳಿದಾಗ ಬೌದ್ಧಿಕವಾಗಿ ಅದು ಬಹಳ ಮಧುರ ವಾಗಿ ಕಾಣುತ್ತದೆ; ಆದರೆ ಆಹಾ ! ನಮ್ಮ ಅನುಭವದಲ್ಲಿ ಒಮ್ಮೆ ನಾವದನ್ನು ಮನಗಂಡರೆ ಅದು ಎಲ್ಲಾ ಮಾಧುರ್ಯದ ಸಾರವಾಗಿಯೂ ಆನಂದ ಸರ್ವಸ್ವ ವಾಗಿಯೂ ಪರಿಣಮಿಸುತ್ತದೆ. ಅದೇ ಪರಮ ಪುರುಷಾರ್ಥವಾದುದರಿಂದ ಆ ಅಮೋಘ ತತ್ತ್ವವನ್ನು ನಾವು ಅನುಭವದಲ್ಲಿ ತಂದುಕೊಳ್ಳಬೇಕು. "ಸಮಸ್ತ ವಿಶ್ವಕ್ಕೂ ಆಧಾರವಾದ ಕೇವಲ ಸತ್ಯವೇ ನಾನು" ಎನ್ನುವ ತತ್ತ್ವವು ಅನುಭವಕ್ಕೆ ಬಂದು ಜೀವನದಲ್ಲಿ ಅಳವಟ್ಟರೆ, ಆಗ ನೀವು ದೇಹವನ್ನೂ ಮನಸ್ಸನ್ನೂ ಮೀರಿ

ನಿಲ್ಲುತ್ತೀರಿ ಈ ದೇಹವೇನೂ ಜ್ಞಾತೃವಲ್ಲ. ಎರಡು ಅಲೆಗಳು ಒಂದನ್ನೊಂದು ಅಪ್ಪಳಿಸುವದರಿಂದ ಉಂಟಾದ ನೊರೆಯಂಥ ಒಂದು ವಸ್ತು, ಈ ದೇಹ. ಇದು ವಿಷಯಿಯಲ್ಲ, ವಿಷಯ ಈ ದೇಹವೆಂಬ ನೊರೆಯು ನೀವಲ್ಲ. ಈ ಎಲ್ಲಾ ಪ್ರಪಂಚವೂ ಈ ಸಮಸ್ತ ವಿಶ್ವವಿಲಾಸವೂ ಯಾವ ಮಹಾ ಚಿತ್ ಸಾಗರದಲ್ಲಿ ತೋರಿ ಕೊಳ್ಳುವ ಕೇವಲ ಅಲೆಗಳೂ ಸುಳಿಗಳೂ ಆಗಿವೆಯೋ ಅಂಥಾ ಅಪಾರ ಕೇವಲ ಸತ್ಯವೇ ನೀವಾಗಿದ್ದೀರಿ. ಇದನ್ನು ಅನುಭವಕ್ಕೆ ತಂದುಕೊಂಡು ಮುಕ್ತರಾಗಿರಿ, ಸಂಪೂರ್ಣ ಮುಕ್ತರಾಗಿರಿ ನೀವು ನಿಜವಾದ ಸತ್ಯವೇ, ಸತ್ಯವಾದ ಕೇವಲವೇ (ಕೈವಲ್ಯವೇ) ಆಗಿದ್ದರೂ ಅದನ್ನು ಅನುಭವವಡೆಯುವದಿಲ್ಲವೆಂದರೆ ಆಶ್ಚರ್ಯ ಗಳಿಗೆಲ್ಲಾ ಆಶ್ಚರ್ಯವಲ್ಲವೆ ? ಓ ! ಅದೇ ಆಗಿರಿ. ಆಹಾ ! ಇದಕ್ಕಿಂತಲೂ ಶುಭ ವಾರ್ತೆ ಯಾವದು ? ಎಂಥಾ ದಿವ್ಯವಾದ ಉಪದೇಶ ! ನೀವೇ ಕೇವಲ ಸತ್ಯ ಅದನ್ನು ಅನುಭವಮಾಡಿ, ಮುಕ್ತರಾಗಿರಿ

ಇದು ನಿಮ್ಮ ದಿವ್ಯಾನುಭವವಾಗಲಿ–
ಗಲಿತ ದೇಹವ ಗಾಳಿ ತೂರಲಿ,
ಮೃತ್ಯುವನಂತವೆನ್ನ ಸಮಾಧಿಮಾಡಲಿ ;
ಎಲ್ಲ ಕಿವಿಗಳು ಎನ್ನ ಕಿವಿಗಳು ; ಎಲ್ಲ ಕಂಗಳು ಎನ್ನ ಕಂಗಳು,
ಎಲ್ಲ ಕೈಗಳು ಎನ್ನ ಕೈಗಳು ; ಎಲ್ಲ ಮನಗಳು ಎನ್ನ ಮನಗಳು,
ಮೃತ್ಯುವನು ನುಂಗಿದೆನು ; ಭೇದವೆಲ್ಲವ ಹೀರಿದೆನು,
ಎಷ್ಟೊಂದು ಸವಿ, ಸತ್ತ್ವ ಮೋಕ್ಷ್ ಒಳಿತ ನಾ ಪಡೆದಿಹೆನು !

ಓಂ ! ಓಂ ! ಓಂ !

## Idealism and Realism Reconciled in the Light of Vedanta - II

# ವೇದಾಂತದ ದೃಷ್ಟಿಯಲ್ಲಿ ವಿಜ್ಞಾನ-ಸತ್ಯತಾವಾದ ಮತ್ತು ವಸ್ತು-ಸತ್ಯತಾವಾದ ಇವುಗಳ ವಿರೋಧ ಪರಿಹಾರ, ಸಂಧಾನ

### ಅಮೆರಿಕಾದಲ್ಲಿ ತಾ॥ 4-4-1904 ರಲ್ಲಿ ಮಾಡಿದ ಉಪನ್ಯಾಸ.

ಸಂಪನ್ನ ಸ್ತ್ರೀ ಪುರುಷರಲ್ಲಿರುವ ನನ್ನ ಆತ್ಮವೆ !

ಪ್ರಪಂಚವಿದೆಯೆಂದು ನಿಮಗೆ ಹೇಗೆ ತೋರಿತು ? ಇಂದ್ರಿಯಗಳಿಂದ ಇಂದ್ರಿಯಗಳನ್ನು ನಂಬಬಹುದೆ ? ಉದಾಹರಣೆಗಾಗಿ, ನಮಗೆ ತೋರಿದಂತೆ ಪ್ರಪಂಚವು ಹೀಗೆ ಹೀಗೆ ಇದೆಯೆಂದು ಹೇಳುತ್ತೇವೆ — ಎಂದು ಇಟ್ಟುಕೊಳ್ಳೋಣ. ಆದರೆ ಆನೆಗೂ ಕಣ್ಣುಗಳಿವೆ. ಈ ಪ್ರಪಂಚವು ಅವಕ್ಕೆ ಹೇಗೆ ಕಾಣುತ್ತಿರಬಹುದು ? ಮೀನುಗಳಿಗೆ ಅದು ಹೇಗೆ ಕಾಣಬಹುದು ? ಇರುವೆಗಳಿಗೆ ? ಅವಕ್ಕೆ ಎಲ್ಲವೂ ಧೂಳಿನ ದೊಡ್ಡ ಮೋಡವಾಗಿ ಕಾಣಬಹುದು ಅವುಗಳಿಗೆ ಕಾಣಬಹುದಾದ ರೀತಿ ಅದೇ. ಆನೆಗಳಿಗೆ ಎಲ್ಲವೂ ಬಹಳ ದೊಡ್ಡದಾಗಿ ಕಾಣಬಹುದು. ಮನುಷ್ಯನಿಗೆ ಮಾತ್ರ ಹೀಗೆ ಕಾಣುತ್ತದೆ. ಒಂದೊಂದು ಪ್ರಾಣಿಗೆ ಒಂದೊಂದು ರೀತಿಯಲ್ಲಿ ಕಂಡರೂ ನಮಗೆ ಕಾಣುವಂತೆಯೇ ಪ್ರಪಂಚವಿದೆ—ಎನ್ನುವದು ಸರಿಯಾಗಬಹುದೆ ? ಮನುಷ್ಯ ರಲ್ಲಿಯೇ ಕಣ್ಣುಗಳಲ್ಲಿ ವ್ಯತ್ಯಾಸವುಳ್ಳವರಿಗೂ ದೋಷವುಳ್ಳವರಿಗೂ ಪ್ರಪಂಚವು ಬೇರೆ ಬಗೆಯಾಗಿಯೇ ತೋರುತ್ತದೆ. ಮಕ್ಕಳಾಟದ ನಗೆಗೇಡಿನ ಗಾಜಿನ ಮೂಲಕ ನೋಡಿದರೆ ಪ್ರಪಂಚವೆಲ್ಲಾ ಹುಚ್ಚಾಪಟ್ಟೆಯಾಗಿಯೇ ಕಾಣುತ್ತದೆ. ಇದನ್ನೆಲ್ಲಾ ವಿಚಾರ ಮಾಡಿದರೆ, ಇಂದ್ರಿಯಗಳನ್ನು ನಂಬುವದು ತಪ್ಪಾಗಿ ತೋರುತ್ತದೆ. ಕಣ್ಣುಗಳಂತೆಯೇ ಮಿಕ್ಕ ಎಲ್ಲಾ ಇಂದ್ರಿಯಗಳೂ ನಂಬಿಕೆಗೆ ಅರ್ಹವಲ್ಲವೆಂದು ಸಿದ್ಧವಾಗುತ್ತದೆ.

ಮಗುವಿಗೆ ಕಣ್ಣು, ಕಿವಿ, ಮೂಗು ಮೊದಲಾದ ಎಲ್ಲಾ ಇಂದ್ರಿಯಗಳೂ ಇವೆ. ಆದರೂ ಅದು ವಸ್ತುಗಳನ್ನು ನೋಡುವದಿಲ್ಲ. ಇದು ಗೋಡೆ. ಇದು ಪುಸ್ತಕ ಎಂದು ಮೊದಲಾಗಿ ತಾಯಿಯು ಪುನಃ ಪುನಃ ಹೇಳಿಕೊಟ್ಟು ಅದನ್ನು ಸಮ್ಮೋಹನಗೊಳಿಸಿದಾಗಲೇ ಆ ಮಗುವಿಗೆ ಆಯಾ ವಸ್ತುಗಳ ಜ್ಞಾನವಾಗುವದು.

ಪಂಚಮಹಾಭೂತಗಳಿವೆ. ನಮಗೆ ಪಂಚೇಂದ್ರಿಯಗಳಿರುವವರೆಗೂ ನಮ್ಮ ಅನುಭವದಲ್ಲಿ ಪಂಚಮಹಾಭೂತಗಳಿರುತ್ತವೆ. ಪಂಚೇಂದ್ರಿಯಗಳಿಗೆ ಅನುಗುಣವಾದ ಪಂಚಭೂತಗಳೂ ಪಂಚವಿಷಯಗಳೂ ಯಾವವೆಂದರೆ ;

ಶ್ರೋತ್ರ · ಆಕಾಶ ಶಬ್ದ
ತ್ವಕ್ : ವಾಯು : ಸ್ಪರ್ಶ
ನೇತ್ರ : ಅಗ್ನಿ : ರೂಪ
ರಸನೆ : ಜಲ : ರಸ
ನಾಸಿಕ : ಭೂಮಿ : ಗಂಧ

ಭಾವನೆಗಳೇ ನಿಜವೆಂದು ಯಾರು ತಿಳಿದಿರುವರೋ ಅವರು ವಿಜ್ಞಾನ-ಸತ್ಯತಾ ವಾದವನ್ನೇ ಪರಮ ಸತ್ಯವೆಂದೂ ಅದನ್ನು ಸಮರ್ಥನೆ ಮಾಡುವದಕ್ಕೆ ತಮ್ಮ ಪಕ್ಷದಲ್ಲಿ ಬೇಕಾದಷ್ಟು ಯುಕ್ತಿಗಳಿವೆಯೆಂದೂ ಹೇಳುತ್ತಾರೆ ಉದಾಹರಣೆಗೆ, ದ್ರಷ್ಟಾ ಇಲ್ಲದೆ, ದೃಶ್ಯವು ಕಾಣುವದು ಹೇಗೆ ? ನೋಡುವವನಿಲ್ಲದೆ ಈ ಗೋಡೆಯು ಕಾಣುವದು ಹೇಗೆ ? ಗೋಡೆಯಲ್ಲಿ ನಿಜವಾದುದೇನೂ ಇಲ್ಲವೆಂದೂ ಭಾವನೆಯೇ ಗೋಡೆಯನ್ನು ಸೃಷ್ಟಿಸಿತೆಂದೂ ವಶ್ಯಸುಪ್ತಿಯಿಂದ ಸಂಮೋಹಿತನಾದವನು (Hypnotized) ಆವಾಹಕನ ಸೂಚನೆಯ ಪ್ರಕಾರ ಗೋಡೆಯನ್ನು ಬೇರೆ ಬೇರೆ ವಸ್ತುಗಳನ್ನಾಗಿ ನೋಡಬಲ್ಲನೆಂದೂ ಹೇಳುತ್ತಾರೆ. ವಶ್ಯಸುಪ್ತಿಯಲ್ಲಿರುವ ಮನುಷ್ಯನಿಗೆ ಈ ನೆಲವಿದ್ದಲ್ಲಿ ಸರೋವರವಿದೆಯೆಂದು ಸೂಚಿಸಿದ ಕೂಡಲೇ ಅವನು ಈ ನೆಲದಲ್ಲಿ ಮೀನು ಹಿಡಿಯುವದಕ್ಕೇ ತೊಡುಗುತ್ತಾನೆ.

ಆದರೆ, ಗೋಡೆಯು ಬಹಳ ನಿಜವೆಂದೂ ನಮ್ಮ ಭಾವನೆಗೆ ಸಂಬಂಧವಿಲ್ಲದೆ ಗೋಡೆಯು ಸ್ವತಂತ್ರವಾಗಿದೆಯೆಂದೂ ವಿಷಯ-ಸತ್ಯತಾ ವಾದಿಗಳು ಹೇಳುತ್ತಾರೆ. ನಾವು ಗೋಡೆಯನ್ನು ನೋಡುತ್ತೇವೆ, ಕೈಯಿಂದ ಮುಟ್ಟುತ್ತೇವೆ, ಅದನ್ನು ಹೊಡೆದು ಶಬ್ದವನ್ನೂ ಕೇಳಬಹುದು, ಅದರ ಗಂಧವನ್ನೂ ಮೂಸಿ ನೋಡಬಹುದು

ಅದನ್ನು ತಿಂದರೆ, ಅದು ನಿಜವೆಂದು ಹೊಟ್ಟೆಯು ಹೇಳುತ್ತದೆ  ಆದ್ದರಿಂದ ವಿಷಯ ಸತ್ಯತಾ ವಾದಿಗೂ ಬೇಕಾದಷ್ಟು ಯುಕ್ತಿಗಳಿವೆ. ಆದರೆ ಒಂದು ವಸ್ತುವು ತೋರ ಬೇಕಾದರೆ ಮನಸ್ಸೂ ಬೇಕು, ವಿಷಯವೂ ಬೇಕು—ಎಂದು ರಾಮನು ಹೇಳುತ್ತಾನೆ ವಶೀಕರಣ ವಿದ್ಯೆಗೆ ಬಲಿಯಾದವನಿಗೆ ಗೋಡೆಯು ಬೇರೆ ವಸ್ತುವಾಗಿ ತೋರಬಹು ದೆಂದು ಒಪ್ಪಿದರೂ ಆವಾಹಕನು ತನಗೆ ಇಷ್ಟವಾದ ವಸ್ತುವನ್ನು ಸೂಚಿಸಿ ಕುದುರೆ ಯೆಂದೋ ಸರೋವರವೆಂದೋ ತೋರಿಸುವದಕ್ಕೆ ಆಧಾರವಾಗಿ ಯಾವದಾದರೊಂದು ವಸ್ತು ಇರಲೇ ಬೇಕು  ಒಂದು ವಸ್ತುವು ತೋರುವದಕ್ಕೆ ಜ್ಞಾತೃವೂ ಬೇಕು, ವಿಷಯವೂ ಬೇಕು.

ಇಂಡಿಯಾದಲ್ಲಿ ಒಮ್ಮೆ ಇಬ್ಬರು ಜಗಳವಾಡುತ್ತಿದ್ದರು. ಜನರು ಅವರನ್ನು ದರ್ವೇಶಿಗಳು ಎನ್ನುತ್ತಿದ್ದರು. ಒಬ್ಬನ ಹೆಸರು ಶ್ರೀಮಾನ್ ಕಾಡುಮರ; ಇನ್ನೊಬ್ಬನ ಹೆಸರು ಶ್ರೀಮಾನ್ ಕೊಡಲಿ. ಒಂದು ಪ್ರಸಂಗದಲ್ಲಿ ಶ್ರೀಯುತ ಕೊಡ ಲಿಯು ಅತಿಶಯ ಕೋಪೋದ್ರೇಕದಿಂದ ರೇಗಾಡಿ ಆ ಶ್ರೀಯುತ ಕಾಡುಮರನಿಗೆ ಹೇಳಿದನು ''ಪಾಪಿಷ್ಠ ! ನಿನ್ನನ್ನು ಕಡಿದುರುಳಿಸಿ ತುಂಡು ತುಂಡು ಮಾಡುತ್ತೇನೆ" ಅದಕ್ಕೆ ಮರ ಹೇಳಿದನು ''ಆದರೆ ಮಹಾಸ್ವಾಮಿ, ನಿಮ್ಮ ಹಿಂದೆ ನನ್ನನ್ನು ಇಟ್ಟು ಕೊಳ್ಳಲೇ ಬೇಕು. ಇಲ್ಲವಾದರೆ ಪಾಪ! ನೀವೇನೂ ಮಾಡಲಾರಿರಿ.'' ಮರನು ನೇಡಿನಿಂದ ರೇಗದೆ ಹೀಗೆ ಜಾಣತನದಿಂದ ಹೇಳಿದ್ದೇಕೆಂದರೆ ಕೊಡಲಿಯು ಹಿಂದುಗಡೆ ಮರದ ಕಾವನ್ನು ಹಾಕದಿದ್ದರೆ ಕೊಡಲಿಯು ಏನೂ ಮಾಡಲಾರದು. ಹೀಗೆ ವಿಜ್ಞಾನ-ಸತ್ಯತಾ ವಾದವೂ ವಿಷಯ-ಸತ್ಯತಾ ವಾದವೂ ಒಂದನ್ನೊಂದು ಅವಲಂಬಿ ಸಿವೆ. ಈ ಎರಡರಲ್ಲಿ ಪ್ರತಿಯೊಂದೂ ಇನ್ನೊಂದರ ಕೈಯನ್ನು ಹಿಡಿದೇ ನಡೆಯ ಬೇಕಾಗಿದೆ

ಈಗ ಒಂದು ಉಪ್ಪು ಕಾಗದದ ಮೇಲೆ ದೀಪದ ಕಡ್ಡಿಯನ್ನು ಗೀಚಿದರೆ ಬೆಂಕಿ ಹೊತ್ತುತ್ತದೆ. ಬೆಂಕಿಯು ಮೊದಲು ಉಪ್ಪುಕಾಗದದಲ್ಲಿಯೂ ಇರಲಿಲ್ಲ, ಕಡ್ಡಿಯ ಲ್ಲಿಯೂ ಇರಲಿಲ್ಲ. ಆದರೆ ಇವೆರಡರ ತಿಕ್ಕಾಟದಿಂದ ಬೆಂಕಿಯು ಹುಟ್ಟಿತು. ಎರಡು ಕೈಗಳಿಂದ ಚಪ್ಪಾಳೆಯನ್ನು ಹೊಡೆಯುತ್ತೇವೆ. ಆದರಿಂದ ಶಬ್ದ ಉಂಟಾಗು ತ್ತದೆ. ಆ ಶಬ್ದವು ಬಲಗೈಯಲ್ಲಿಯೂ ಇರಲಿಲ್ಲ, ಎಡಗೈಯಲ್ಲಿಯೂ ಇರಲಿಲ್ಲ, ಆದರೆ ಇವೆರಡರ ತಾಡನದಿಂದ ಉಂಟಾಯಿತು. ಎರಡು ಕೈಗಳಲ್ಲಿರುವ ಆತ್ಮವು ಒಂದೇ. ರಾಮನು ನಿಮಗೆ ಕಾಗೆಯ ವಿಷಯವನ್ನು ಹೇಳಬೇಕಾಗಿದೆ. ಕಾಗೆಗೆ ಕಣ್ಣು ಗೂಡುಗಳು ಎರಡಿದ್ದರೂ ಕಣ್ಣು ಗುಡ್ಡೆಯು ಮಾತ್ರ ಒಂದೇ ಇದೆಯೆಂದು

ಹೇಳುತ್ತಾರೆ. ಕಾಗೆಯು ಬಲಗಡೆ ನೋಡಬೇಕಾದರೆ, ಕಣ್ಣುಗುಡ್ಡೆಯನ್ನು ಬಲದ ಕುಳಿಗೆ ತಿರುಗಿಸುತ್ತದೆ; ಎಡಗಡೆ ನೋಡಬೇಕಾದರೆ ಅದನ್ನು ಎಡದ ಕುಳಿಗೆ ತಿರುಗಿಸುತ್ತದೆ. ಅದು ಒಂದೇ ಕಣ್ಣನ್ನು ತನ್ನ ಇಷ್ಟ ಪ್ರಕಾರ ಬಲಗಡೆಗೂ ಎಡಗಡೆಗೂ ತಿರುಗಿಸಿ ನೋಡುತ್ತದೆ ಆ ಎರಡು ವಾದಗಳ ವಿಚಾರವೂ ಹೀಗಿದೆ. ಎರಡು ದೊಡ್ಡ ತೆರೆಗಳು ಎದುರಾಳಿಯಾಗಿ ಬಂದು ಒಂದನ್ನೊಂದು ಬಡಿದರೆ ತುರಾಯಿಯಂಥ ಬಿಳಿಯ ನೊರೆ ಉಂಟಾಗುತ್ತದೆ. ಆದರೆ ಆ ಎರಡು ತೆರೆಗಳಲ್ಲಿರುವ ನೀರು ಮಾತ್ರ ಒಂದೇ. ಮಗುವು ಹುಟ್ಟಬೇಕಾದರೆ ತಂದೆ, ತಾಯಿ ಇಬ್ಬರೂ ಬೇಕು; ಒಬ್ಬರಿಂದಲೇ ಹುಟ್ಟುವದಿಲ್ಲ ಅವರನ್ನು ದೇವರು, ಮತ್ತು ಪವಿತ್ರಾತ್ಮ ಎನ್ನಬಹುದು.

ನಾವು ಕಾಣುತ್ತಿರುವ ಪ್ರಪಂಚ ವಿಲಾಸವು ಜ್ಞಾತೃ ಅಥವಾ ದ್ರಷ್ಟಾ ಮತ್ತು ಜ್ಞೇಯ ಅಥವಾ ದೃಶ್ಯ ಈ ಎರಡರ ಸಂಯೋಗದಿಂದ ಉಂಟಾಗುತ್ತದೆ. ಇವೆರಡೂ ಒಂದನ್ನೊಂದು ಅವಲಂಬಿಸಿವೆ, ಆದ್ದರಿಂದ ಪ್ರಪಂಚವಿಲಾಸವು ಒಂದರಿಂದಲೇ ಉಂಟಾಗುವುದಿಲ್ಲ ಇದರಿಂದ ದೃಶ್ಯವಿಲಾಸದ ವಿವರಣೆಯನ್ನು ಕೊಡಬೇಕಾದರೆ ವಿಜ್ಞಾನ-ಸತ್ಯತಾ ವಾದಿಯೂ ಮತ್ತು ವಸ್ತು-ಸತ್ಯತಾ ವಾದಿಯೂ ಇಬ್ಬರೂ ಸೇರಿ ಸ್ನೇಹದಿಂದ ಪರಸ್ಪರ ಪೂರಕವಾಗಿ ಹೇಳಿಕೆ ಕೊಡಬೇಕಾಗುತ್ತದೆ ಯಾರೊಬ್ಬರಿಂದಲೇ ಸಾಧ್ಯವಲ್ಲ.

ಇಂಡಿಯಾದಲ್ಲಿ ಕೆಲವು ಮನೆಗಳಲ್ಲಿ ಅನೇಕ ಕನ್ನಡಿಗಳಿರುತ್ತವೆ; ಗೋಡೆಗಳನ್ನೂ ಮೇಲು ಮಾಳಿಗೆಯ ಒಳಮುಖವನ್ನೂ ಕನ್ನಡಿಗಳಿಂದ ಮುಚ್ಚಿರುವುದುಂಟು ಅಂಥಾ ಒಂದು ಮನೆಯಲ್ಲಿ ಒಮ್ಮೆ ಒಂದು ನಾಯಿಯು ಪ್ರವೇಶಮಾಡಿತು. ಅದು ತನ್ನ ಸುತ್ತಲೂ ನೂರಾರು ನಾಯಿಗಳನ್ನು ನೋಡಿತು ಅದು ಮೇಲೆ ನೋಡಿದಾಗಲೂ ಅಲ್ಲಿಯೂ ತನ್ನ ಮೇಲೆ ನೂರಾರು ನಾಯಿಗಳು ಎರಗಿ ಬೆನ್ನಟ್ಟಿ ಬಂದಂತೆ ಕಂಡು ಗಾಬರಿಗೊಂಡು, ಬೊಗಳುವದಕ್ಕೂ ಕಿರಿಚುವದಕ್ಕೂ ಅವುಗಳ ಮೇಲೆ ತಾನೂ ಬಿದ್ದು ಸುತ್ತಲೂ ಕಚ್ಚುವದಕ್ಕೂ ಕುಣಿಯುವುದಕ್ಕೂ ತೊಡಗಿತು. ಇದು ಬಾಯಿ ಕಳೆದು ಕಚ್ಚುವುದಕ್ಕೆ ಹೋದಾಗ ಸುತ್ತಲೂ–ಅವುಗಳೂ ಬಾಯಿ ಕಳೆದು ಕಚ್ಚುವದಕ್ಕೆ ಓಡಿ ಬರುತ್ತಿದ್ದವು ಹೀಗೆ ಸುತ್ತಲೂ ಕಚ್ಚುವದಕ್ಕೆ ಓಡಿ ಬರುತ್ತಿರುವ ನಾಯಿಗಳ ಮಧ್ಯದಿಂದ ತಪ್ಪಿಸಿಕೊಳ್ಳಲಾರದೆ, ಒಳಗೇ ದಿಕ್ಕೆಟ್ಟು ಓಡೋಡಿ ಗೋಡೆಗೆ ಬಡಿದು ಹಿಂದಕ್ಕೆ ಬಿದ್ದು, ಎಗರಾಡಿ, ಕೂಗಿ ಕೂಗಿ, ಕುಣಿ ಕುಣಿದು ಸುಸ್ತಾಗಿ

ಕೆಳಗೆ ಬಿದ್ದಿತು. ಅದು ಭಯದಿಂದಲೂ ಸಿಟ್ಟಿನಿಂದಲೂ, ಕುಣಿದಾಟ–ಕೂಗಾಟ ಗಳಿಂದಲೂ ದಾಳಿಯಿಂದಲೂ ಅತೀವ ಆಯಾಸಪಟ್ಟು, ನಿರ್ವಿಣ್ಣವಾಗಿ ನೆಲವನ್ನು ಕಚ್ಚಿ ಪ್ರಾಣ ಬಿಟ್ಟಿತು. ಮನೆಯ ಯಜಮಾನನು ಒಳಗೆ ಬಂದು ನೋಡಿ ಸತ್ತು ಬಿದ್ದಿದ್ದ ನಾಯಿಯನ್ನು ಹೊರಗೆತ್ತಿಹಾಕಿದನು.

ಅನಂತರ ಒಬ್ಬ ಸುಂದರ ರಾಜಕುಮಾರನು ಆ ಕೋಣೆಯೊಳಗೆ ಬಂದು ಸುತ್ತಲಿರುವ ಕನ್ನಡಿಗಳಲ್ಲಿ ತನ್ನದೇ ಆದ ನೂರಾರು ಸುಂದರವಾದ ಪ್ರತಿಬಿಂಬ ಗಳನ್ನು ನೋಡಿ ಮೆಚ್ಚಿ ಸಂತೋಷಪಟ್ಟನು. ಅವನು ಆ ಕನ್ನಡಿಗಳ ಪ್ರತಿಬಿಂಬ ಗಳಲ್ಲಿ ಮೊದಲು ತನ್ನ ಚೆಲುವಾದ ಮುಖಭಾವವನ್ನೂ ರೂಪಲಕ್ಷಣಗಳನ್ನೂ ವರ್ಚಸ್ಸನ್ನೂ ವಿಶಾಲವಾದ ನೇತ್ರವನ್ನೂ ಮಾಟಾದ ಮೂಗು–ಬಾಯಿಗಳನ್ನೂ ಅನಂತರ ಕೇಶ, ಕಿರೀಟ, ಉಡಿಗೆಗಳನ್ನೂ, ಹೀಗೆ ಒಂದೊಂದನ್ನೇ ನೋಡಿ ಮೆಚ್ಚಿ ಸಂತೋಷಪಡುತ್ತಿದ್ದನು. ಸುತ್ತಲೂ ಕಾಣುವ ಬೇರೆ ಬೇರೆ ನೂರಾರು ರೂಪ ಗಳೆಲ್ಲಾ ತನ್ನ ಒಬ್ಬನದೇ ಎಂದು ಅವನು ನಿಶ್ಚಿತವಾಗಿ ತಿಳಿದಿದ್ದರಿಂದ ಅವನಿಗೆ ಆನಂದ ವಾಯಿತು. ಪ್ರಪಂಚದಲ್ಲಿ ನಾನಾ ವಸ್ತುಗಳೂ ನಾಮರೂಪಗಳೂ ಕಂಡರೂ ಎಲ್ಲವು ಗಳಲ್ಲಿಯೂ ಇರುವ ಆತ್ಮನು ತಾನೊಬ್ಬನೇ, ತಾನೇ ಬೇರೆ ಬೇರೆ ನಾಮ ರೂಪ ಗಳಿಂದ ತೋರಿಕೊಳ್ಳುತ್ತಿರುವುದು,—ಎಂದು ನಿಶ್ಚಯವಾಗಿ ತಿಳಿದಾಗಲೇ ಅಂಥಾ ತತ್ತ್ವಜ್ಞನಿಗೆ ವಿಶ್ರಾಂತಿ ದೊರಕುತ್ತದೆ. ಇಲ್ಲವಾದರೆ ನಮ್ಮ ಪಾಡು ಆ ನಾಯಿಯ ಪಾಡಾಗುತ್ತದೆ. ನಮಗೆ ಯಾವಾಗಲೂ ಎಲ್ಲರಿಂದಲೂ ಭಯವೇ–ಸಂಶಯವೇ —ಅಪಾಯವೇ. ಇವನು ನನ್ನನ್ನು ಮೋಸಮಾಡಬಹುದು ; ಅವನು ನನಗೆ ಏನೋ ಅಪಾಯಮಾಡುತ್ತಾನೆ, ಆ ಇನ್ನೊಬ್ಬನು ನನ್ನಿಂದ ಏನು ಕಸಿದುಕೊಳ್ಳುತ್ತಾನೋ ? ಹೀಗೆ ಪ್ರತಿಯೊಬ್ಬನೂ ತನ್ನಿಂದ ಬೇರೆ ಎಂದು ತಿಳಿದಿರುವದರಿಂದ ಎಲ್ಲರೊಡನೆಯೂ ನಮಗೆ ಹೋರಾಟವೇ ತಪ್ಪುವದಿಲ್ಲ. ಆದರೆ ಒಮ್ಮೆ ನಾವು ಸತ್ಯವನ್ನು ಮನಗಂಡು ಆ ರಾಜಕುಮಾರನಂತೆ ಸಂತೋಷದಿಂದ ಸುಮ್ಮನಾದೆವಾದರೆ, ನಿರ್ವಿಕಾರಿಯೂ ಮುಕ್ತವೂ ಆದ ಆತ್ಮವನ್ನು ಯಾರೂ ವಂಚಿಸಲಾರರೆಂದು ನಿಶ್ಚಿಂತರಾಗುತ್ತೇವೆ. ನಾವು ಬಾಳಿನಲ್ಲಿ ಮೇಲೆ ಮೇಲೆಯೇ ತೇಲುತ್ತಿರುವಾಗ ನಾಯಿಯಂತೆ ಕೂಗಿ ಕಚ್ಚಾಡುತ್ತಿರುತ್ತೇವೆ ; ಆದರೆ ಆಳವಾಗಿ ಮುಳುಗಿದಾಗ ಸತ್ಯವನ್ನರಿತು ಸಮಾಧಾನ ಹೊಂದಿ ಸುಮ್ಮನಾಗುತ್ತೇವೆ. ಅಥವಾ ನಾಯಿಯಂತೆ ಕಚ್ಚಾಡುವಾಗ ಜೀವಸಾಗರದ ಮೇಲೆ ಮೇಲೆ ತೇಲಾಡುತ್ತಾ, ಸತ್ಯವನ್ನರಿತಾಗ ಮೇಲ್ಮೈಯ ಒಳಗೆ ಮುಳುಗಿ ಆಳ ದಲ್ಲಿ ಕೇವಲ ಸತ್ಯದ ಸಾಮ್ರಾಜ್ಯದಲ್ಲಿ ನೆಲೆಸಿರುತ್ತೇವೆ.

ಉದಾಹರಣೆಗಾಗಿ, ಕನಸಿನಲ್ಲಿರುವ ಜ್ಞಾತೃವು ಪರ್ವತವನ್ನೇರಿ ಒಂದು ಸಿಂಹ ವನ್ನು ಸಮೀಪಿಸಿದಾಗ, ಅದು ಅವನನ್ನು ಹರಿದು ಚೂರು ಚೂರು ಮಾಡುತ್ತದೆ. ಅಥವಾ ಇನ್ನೊಮ್ಮೆ ಅವನು ಒಂದು ಕೆಸರು ಗುಂಡಿಯಲ್ಲಿ ಸಿಕ್ಕಿಕೊಳ್ಳುತ್ತಾನೆ ; ಅಥವಾ ಮತ್ತೊಮ್ಮೆ ಕನಸಿನಲ್ಲಿ ಅವನು ಗಂಗಾಪ್ರವಾಹದಲ್ಲಿ ಕೊಚ್ಚಿ ಹೋಗುತ್ತಾನೆ,— ಎಂದಿಟ್ಟುಕೊಳ್ಳೋಣ. ಈಗ ಕನಸಿನ ಜ್ಞಾತೃವು ನಿಜವಾಗಿದ್ದರೆ ಅದು ತನ್ನ ಕನಸೆಂದೂ ತನಗೆ ಕಾಣುತ್ತಿರುವ ಪರ್ವತವೂ ಸಿಂಹವೂ ಅದರ ಹಿಂಸೆಯೂ ಎಲ್ಲಾ ಕಲ್ಪನೆ ಮಾತ್ರವೆಂದೂ ತಿಳಿದು, ಸಿಂಹವು ಹರಿದು ತಿನ್ನುವಾಗ ಅವನು ಕಿರಿಚುತ್ತಲೂ ಅಳುತ್ತಲೂ ಇರಲಿಲ್ಲ. ಅಥವಾ ಕೆಸರಿನಲ್ಲಿ ಸಿಕ್ಕಿಕೊಂಡಂತೆ ಕಂಡಾಗ ಅಥವಾ ಗಂಗೆಯು ಸೆಳೆದುಯ್ಯುತ್ತಿರುವಾಗ ಅವನು ಭಯಪಡುತ್ತಿರಲಿಲ್ಲ. ಈಗ ಈ ಕನಸಿನ ವಸ್ತುಗಳು ನಿಜವಾದವೆಂದಿಟ್ಟುಕೊಂಡರೆ, ಸಿಂಹವು ಕನಸುಕಾಣುವವನನ್ನು ನಿಜವಾಗಿಯೂ ಕೊಲ್ಲಬೇಕು, ಅಥವಾ ಹಾಸಿಗೆಯೆಲ್ಲಾ ಕೆಸರಾಗಬೇಕು ಅಥವಾ ಗಂಗಾ ಜಲದಿಂದ ಹಾಸಿಗೆ-ಬಟ್ಟೆಗಳೆಲ್ಲಾ ತೊಯ್ದಿರಬೇಕು, ಕೊಚ್ಚಿಕೊಂಡು ಹೋಗಿರಬೇಕು. ಆದರೆ ಇದು ಯಾವದೂ ಆಗಿರುವದಿಲ್ಲ. ಆದ್ದರಿಂದ ಕನಸಿನ ಚಿತ್ತವೂ ನಿಜವಲ್ಲ, ವಸ್ತುವೂ ನಿಜವಲ್ಲ; ಆ ಜ್ಞಾತೃವೂ ನಿಜವಲ್ಲ, ಜ್ಞೇಯವೂ ನಿಜವಲ್ಲ, ಆ ವಿಜ್ಞಾನವೂ (ಅರಿವೂ) ನಿಜವಲ್ಲ. ವಿಷಯಿಯೂ ನಿಜವಲ್ಲ, ವಿಷಯವೂ ನಿಜವಲ್ಲ. ಆದರೆ ಈ ಎರಡೂ ನಿಜವಲ್ಲದಿದ್ದರೂ ಈ ಎರಡೂ ಕೂಡಿಯೇ ಕನಸಾಗುತ್ತದೆ. ಗಣಿತ ಶಾಸ್ತ್ರದ ಸಂಕೇತಗಳಿಂದ ಈ ತತ್ತ್ವವನ್ನು ಹೀಗೆ ತಿಳಿಸಬಹುದು.

ಮೇಜು = ಗುಣಮೇ + ಅ(ಅಜ್ಞೇಯವಾದ ಕೇವಲ ಸತ್ಯ)
ಹಲಗೆ = ಗುಹ + ಅ(ಅಜ್ಞೇಯ ಸತ್ಯ)
ಜಾಜಿ = ಗುಜಾ + ಅ(ಅಜ್ಞೇಯ ಸತ್ಯ)

ಇಲ್ಲಿ ಮೇಜಿನ ಗುಣದೊಂದಿಗೆ ಅಜ್ಞೇಯವಾದ ಕೇವಲ ಸತ್ಯವು ಸೇರಿದರೆ ಮೇಜು.

ಹಲಗೆಯ ಗುಣಗಳೊಂದಿಗೆ ಅಜ್ಞೇಯವು ಸೇರಿದರೆ ಹಲಗೆ.
ಜಾಜಿಯ ಗುಣಗಳೊಂದಿಗೆ ಅಜ್ಞೇಯವು ಸೇರಿದರೆ ಜಾಜಿ.

ಜಾಜಿಯು ಬೆಳ್ಳಗಿದೆ, ಹೂವಿನಲ್ಲಿ ದಳಗಳಿವೆ, ಸುವಾಸನೆಯಿದೆ, ಕೋಮಲ ವಾಗಿದೆ, ಮೊದಲಾಗಿ ಇವೆಲ್ಲಾ ಜಾಜಿಯ ಹೂವಿನ ಗುಣಗಳು, ಅಜ್ಞೇಯದಲ್ಲಿ ಈ

ಗುಣಗಳೆಲ್ಲಾ ಸೇರಿ ಜಾಜಿಯ ಹೂವಾಗಿದೆ. ಎಲ್ಲದರಲ್ಲಿಯೂ ಅಜ್ಞೇಯವು ಮಾತ್ರ ಒಂದೇ, ಸಮಾನ ಅದೇ ಅವೆಲ್ಲವುಗಳಲ್ಲಿರುವ ಸತ್ಯ, ಆತ್ಮ.

ಈಗ ನಾವು ಈ ತತ್ತ್ವವನ್ನು ರೇಖಾಗಣಿತದ ಸಂಕೇತಗಳಿಂದಲೂ ಸೂಚಿಸಬಹುದು ಇಲ್ಲಿ ಎರಡು ಐಸಾಸೆಲೀಸ್‌ ತ್ರಿಕೋಣಗಳನ್ನೂ (Isosceles triangle) ಇವುಗಳಲ್ಲಿ ದ್ವಿಬಾಹುಗಳು ಸಮನಾಗಿವೆ). ನಾಲ್ಕು ಸಮಕೋನಗಳುಳ್ಳ ದೀರ್ಘ ಚತುರಸ್ರ-ನೀಳಚೌಕ- (Rectangle) ಒಂದನ್ನೂ ತೆಗೆದುಕೊಳ್ಳೋಣ.







ಈಗ ಈ ಎಲ್ಲಾ ರೇಖಾಕೃತಿಗಳನ್ನೂ ಒಟ್ಟು ಸೇರಿಸುವದರಿಂದ ಷಡ್ಭುಜವ ಷಡ್ರೇಖಾಕೃತಿ (Hexagon) ಉಂಟಾಗುತ್ತದೆ. ಇದು, ಇದರಲ್ಲಿ ಸೇರಿರುವ ಸಮದ್ವಿಬಾಹು ತ್ರಿಕೋನಗಳಂತೆಯೂ (Isosceles triangles) ಇಲ್ಲ ದೀರ್ಘ ಚತುರಸ್ರ (Rectangle) ದಂತೆಯೂ ಇಲ್ಲ. ತ್ರಿಕೋನಗಳಲ್ಲಿ ಆಗಲೀ ದೀರ್ಘ ಚತುರಸ್ರದಲ್ಲಿ ಆಗಲಿ ಎಲ್ಲಾ ಬಾಹುಗಳೂ ಸಮನಾಗಿಲ್ಲ. ಆದರೆ ಷಡ್ರೇಖಾಕೃತಿಯು ಎಲ್ಲಾ ಬಾಹುಗಳೂ ಸಮನಾಗಿವೆ ಸಮದ್ವಿಬಾಹು ತ್ರಿಕೋನಗಳಲ್ಲಿ ಲಘುಕೋನಗಳನ್ನು ಮಾಡಬಹುದಾಗಿತ್ತು. ಆದರೆ ಷಡ್ರೇಖಾಕೃತಿಯಲ್ಲಿ ಅದನ್ನು ತರಲಾಗುವದಿಲ್ಲ.

ಇಲ್ಲಿ ಬೇರೆ ಬೇರೆ ರೇಖಾಕೃತಿಗಳು ಸೇರಿ ಪ್ರತಿಯೊಂದು ಭಾಗದಲ್ಲಿಯೂ ಪೂರಾ ಹೊಸದಾಗಿಯೇ ಇರುವ ಒಂದು ರೇಖಾಕೃತಿಯಾಗಿದೆ

ಹೀಗೆಯೇ ಎರಡಂಶ ಜಲಜನಕವೂ ಒಂದಂಶ ಆಮ್ಲಜನಕವೂ ಸೇರಿ ನೀರಾಗಿದೆ ನಾವು ಜಲಜನಕವನ್ನೂ ಆಮ್ಲಜನಕವನ್ನೂ ಬೇರೆ ಬೇರೆ, ಸುಲಭವಾಗಿ ಉಸಿರಿನಲ್ಲಿ ಸೇವಿಸಬಹುದು. ಆದರೆ ಅವೆರಡೂ ಕ್ರಮವಾಗಿ ಒಟ್ಟು ಸೇರಿದರೆ (ಉಸಿರಾಡಲಾಗದ) ತೀರಾ ಬೇರೆಯಾದ ನೀರಾಗುತ್ತದೆ. ಆ ಎರಡು ಅನಿಲಗಳೂ ದಾಹ್ಯಗಳು (Combustible–ಉರಿಯುತ್ತವೆ) ; ಆದರೆ ನೀರು ಹಾಗಲ್ಲ, ಅದು ಉರಿಯನ್ನು ಆರಿಸುತ್ತದೆ

ಇದು ದೃಶ್ಯವಿಲಾಸದ ತತ್ತ್ವವನ್ನು ವಿವರಿಸುತ್ತದೆ ಇದರಿಂದ ವಿಷಯಿಯೂ (ಚಿತ್ತವೂ) ವಿಷಯವೂ ಎರಡೂ ನಿಜವಲ್ಲವೆಂದು ಸ್ಪಷ್ಟವಾಗುತ್ತದೆ.

ಇದೆಲ್ಲಾ ಬರೀ ವಾಚಾರಂಭಣ, ಶಬ್ದಗಳ ಚೆಲ್ಲಾಟ ಎಂದು ವೇದಾಂತವು ಹೇಳುತ್ತದೆ. ಶಬ್ದಗಳ ಹೋರಾಟದಿಂದ ಏನು ಪ್ರಯೋಜನ ? ಎರಡನೆಯದಿಲ್ಲದೆ ಒಂದಾಗಿರುವ ಸತ್ಯವಾದ ಆತ್ಮವೇ ನಾವಾಗಿದ್ದೇವೆ. ಎರಡನೆಯದಾವದೂ ಇಲ್ಲದಿರುವದರಿಂದ ಆತ್ಮಸ್ವರೂಪರಾದ ನಾವು ಪೂರ್ಣದ ಅಂಶವೆಂದೂ ಹೇಳುವುದಕ್ಕೆ ಆಗುವದಿಲ್ಲ ಆದ್ದರಿಂದ ನಾವು ಪೂರ್ಣಾತ್ಮರು ಎನ್ನುವದೇ ಸತ್ಯ. ಅಖಂಡವಾದ ಪೂರ್ಣ ಸತ್ಯದಲ್ಲಿ ಭಾಗಗಳಿಲ್ಲ. ಈಗ ನೀವೆಲ್ಲರೂ ಆ ಸತ್ಯವೇ ಆಗಿದ್ದೀರಿ.

ಓಂ ! ಓಂ ! ಓಂ !

## Maya or the When and Why? of the World

## ಮಾಯಾ ಅಥವಾ ಪ್ರಪಂಚ ಸೃಷ್ಟಿಯು ಯಾವಾಗ? ಮತ್ತು ಏಕೆ?

### ತಾ|| 15-1-1903ರಲ್ಲಿ ಸ್ಯಾನ್‌ಫ್ರಾನ್ಸಿಸ್ಕೋ 'ಗೋಲ್ಡನ್ ಗೇಟ್ ಹಾಲ್'ನಲ್ಲಿ ಮಾಡಿದ ಉಪನ್ಯಾಸ

The Ruler, Governor, Controller of Maya in the form of ladies and gentlemen,

ಸಭ್ಯರಾದ ಈ ಸ್ತ್ರೀಪುರುಷರಲ್ಲಿರುವ ಮಾಯೆಯ ಪ್ರಭುವೂ ನಿಯಂತೃವೂ ಆದ ಮಹೇಶ್ವರನೆ *

ಈ ದಿನ ರಾತ್ರಿಯ ಉಪನ್ಯಾಸ ವಿಷಯವು ಮಾಯಾ. ಆಳದಲ್ಲಿ ಇಳಿಯದೆ, ಮೇಲೆ ಮೇಲೆ ತೇಲುವ ಹೊರಮೈಯ ನೋಟದ ವಿಮರ್ಶಕರು ವೇದಾಂತಶಾಸ್ತ್ರದಲ್ಲಿ ಬಂದಿರುವ ಈ ಮಾಯಾವಾದವು ಅತ್ಯಂತ ದುರ್ಬಲವಿಚಾರ, ಎನ್ನುತ್ತಾರೆ. ಈ ದಿನ ಈ ಅತ್ಯಂತ ದುರ್ಬಲ ವಿಷಯವನ್ನೇ ತೆಗೆದುಕೊಳ್ಳೋಣ. ಮಾಯೆ ಎಂದರೇ ನೆಂಬದನ್ನು ಸ್ಪಷ್ಟವಾಗಿ ವಿಶದಪಡಿಸಿದರೆ, ವೇದಾಂತದಲ್ಲಿರುವ ಮಿಕ್ಕ ಎಲ್ಲವನ್ನೂ ಒಪ್ಪಿಕೊಳ್ಳಬಹುದು; ಏಕೆಂದರೆ ಉಳಿದೆಲ್ಲವೂ ಅತಿಶಯ ಸ್ವಾಭಾವಿಕವಾಗಿಯೂ ಸರಳವಾಗಿಯೂ ಸ್ಪಷ್ಟವಾಗಿಯೂ ಹಿತಕರವಾಗಿಯೂ ಪ್ರಯೋಜನಕರವಾಗಿಯೂ ಇವೆಯೆಂದು ವೇದಾಂತಶಾಸ್ತ್ರವನ್ನು ಅಭ್ಯಾಸಮಾಡಿರುವ ಎಲ್ಲಾ ತತ್ತ್ವಶಾಸ್ತ್ರವೇತ್ತರೂ ವಿಚಾರಕರೂ ಒಮ್ಮತದಿಂದ ಹೇಳುತ್ತಾರೆ. ಇದೊಂದು ಬಿಚ್ಚಲಾರದ ಕಗ್ಗಂಟು, ತೊಡಕು, ಮತ್ತು ವೇದಾಂತ ವಿದ್ಯಾರ್ಥಿಗಳ ದಾರಿಯಲ್ಲಿರುವ ಎಡವುಗಲ್ಲು, ಮುಗ್ಗರಿಸುವ ಹಳ್ಳ, ಎಂದು ಅನೇಕರು ತಿಳಿದಿದ್ದಾರೆ. ಇದೊಂದು ಮಹತ್ವಾದ ವಿಷಯ. ಇದನ್ನು ಕೂಲಂಕಷವಾಗಿ ವಿಚಾರಮಾಡಿ ಮುಗಿಸಿಬಿಡಬೇಕಾದರೆ ಇದೊಂದು

---

*ಮಾಯಾಂ ತು ಪ್ರಕೃತಿಂ ವಿದ್ಧಿ, ಮಾಯಿನಂ ತು ಮಹೇಶ್ವರಂ

ವಿಷಯಕ್ಕೇ ಹತ್ತು ಉಪನ್ಯಾಸಗಳನ್ನಾದರೂ ಮೀಸಲಾಗಿ ವಿನಿಯೋಗಿಸಬೇಕಾಗುತ್ತದೆ. ಹಾಗಾದರೆ, ಸೂರ್ಯನ ಕೆಳಗೆ ಅಥವಾ ಭೂಮಿಯ ಮೇಲೆ ಉತ್ತರಿಸಲಾಗದಿರುವ ಯಾವ ಪ್ರಶ್ನೆಯೂ ಉಳಿಯದಿರುವಷ್ಟು ಆ ವಿಷಯವು ಸ್ಪಷ್ಟವೂ ಸ್ವಚ್ಛವೂ ಆಗುತ್ತದೆ. ಎಲ್ಲವನ್ನೂ ಸರಳ-ಸುಲಭವಾಗುವಂತೆ ಮಾಡಬಹುದು. ಆದರೆ ಅದಕ್ಕೆ ಕಾಲಾವಕಾಶವು ಬೇಕಾಗುತ್ತದೆ. ಆದರೆ ಆತುರದ ವಾಚಕರೂ ಅವಸರದ ಶ್ರೋತೃಗಳೂ ಅದನ್ನು ಚೆನ್ನಾಗಿ ಗ್ರಹಿಸಲಾರರು

ಪ್ರಶ್ನೆಯೇನೆಂದರೆ, "ಈ ಪ್ರಪಂಚವೇಕೆ"? "ಈ ಪ್ರಪಂಚವೆಲ್ಲಿಂದ?" ಅಥವಾ ಇದನ್ನೇ ವೇದಾಂತದ ಭಾಷೆಯಲ್ಲಿ ಹೇಳುವದಾದರೆ, "ಈ ವಿಶ್ವದಲ್ಲಿ ಈ ಅಜ್ಞಾನ ಏಕಿದೆ?" ಈ ವಿಶ್ವವು ನಿಜವಲ್ಲವೆಂದೂ ಕೇವಲ ದೃಶ್ಯವಿಲಾಸಮಾತ್ರವೆಂದೂ ವೇದಾಂತವು ಉಪದೇಶಿಸುತ್ತದೆ ಅಜ್ಞಾನವು ಶಾಶ್ವತವಲ್ಲ, ಈ ಎಲ್ಲಾ ಪ್ರಕೃತಿವಿಲಾಸವೂ ನಿಜವಲ್ಲ, ನಿತ್ಯವಲ್ಲ ಈಗ ಪ್ರಶ್ನೆ ಏನೆಂದರೆ, "ಈ ಅಜ್ಞಾನ ಏಕಿರಬೇಕು? "ಈ ಪ್ರಪಂಚವಿಲಾಸಕ್ಕೆ ಕಾರಣವಾದ ಈ ಅಜ್ಞಾನವು, ಅಥವಾ ಈ ಎಲ್ಲಾ ನಾನು ಮತ್ತು ನೀನು ಎನ್ನುವದಕ್ಕೂ ಎಲ್ಲಾ ಭಿನ್ನ ಭೇದಗಳಿಗೂ ಮೂಲವಾಗಿರುವ ಈ ಮಾಯೆಯು ನಿಜವಾದ ಆತ್ಮನನ್ನು ಏಕೆ ಮುಸುಕಿ ತಲೆಯೆತ್ತದಂತೆ ಅಡಗಿಸಿಬಿಡಬೇಕು? ಈ ಮಾಯೆ ಅಥವಾ ಅಜ್ಞಾನವು ದೇವರಿಗಿಂತಲೂ ಹೆಚ್ಚು ಪ್ರಬಲವಾಗಿ ಏಕಿದೆ? ಇದೇ ಮುಖ್ಯವಾದ ಪ್ರಶ್ನೆ

ಸಾಮಾನ್ಯ ಜನರ ಮಾತಿನಲ್ಲಿ ಮತ್ತು ಬೇರೆ ತತ್ತ್ವಶಾಸ್ತ್ರಜ್ಞರ ಹಾಗೂ ದೈವಶಾಸ್ತ್ರನಿಪುಣರ ಭಾಷೆಯಲ್ಲಿ ಪ್ರಶ್ನೆ ಏನೆಂದರೆ; "ಈ ಪ್ರಪಂಚವು ಇರುವದಾದರೂ ಏಕೆ?" 'ದೇವರು ಈ ಪ್ರಪಂಚವನ್ನು ಏಕಾದರೂ ಸೃಷ್ಟಿಸಿದ್ದಾನು? – ಅವನು ಏಕಾದರೂ ಸೃಷ್ಟಿಸಬೇಕಾಗಿತ್ತು?' ವೇದಾಂತವು ಹೇಳುವದೇನೆಂದರೆ, "ಇಲ್ಲ, ತಮ್ಮ, ಈ ಪ್ರಶ್ನೆಯನ್ನು ಕೇಳುವದಕ್ಕೆ ನಿನಗೆ ಅಧಿಕಾರವಿಲ್ಲ. ಈ ಪ್ರಶ್ನೆಗೆ ಉತ್ತರವೇ ಇಲ್ಲ ಆದರೆ ಪರೀಕ್ಷಾ-ಪ್ರಯೋಗ-ಸಾಧನಾನುಭವಗಳಿಂದ, ನಿನಗೆ ತೋರುವ ಈ ಪ್ರಪಂಚವು ನಿಜವಾಗಿಯೂ ದೇವರಲ್ಲದೆ ಬೇರಲ್ಲ; ಮತ್ತು ನೀನು ಅಧ್ಯಾತ್ಮ ಸಾಧನೆಯಲ್ಲಿ ಮುಂದುವರಿದು ಸಾಕಷ್ಟು ಮೇಲೇರಿದರೆ ನಿನಗೆ ಈ ಪ್ರಪಂಚವು ತೋರದೇ ಹೋಗುತ್ತದೆ,—ಎಂದು ನಿನಗೆ ನೇರವಾಗಿಯೂ ಕೊನೆಯದಾಗಿ ನಿಸ್ಸಂದೇಹವಾಗಿಯೂ ನಿಶ್ಚಿತವಾಗಿಯೂ ತೋರಿಸಬಹುದು ಆದರೆ, ಈ ಪ್ರಪಂಚವು ಇರುವದಾದರೂ ಏಕೆ? ಎಂಬೀ ಪ್ರಶ್ನೆಗೆ ಉತ್ತರವನ್ನು ಹೇಳುವುದರಿಂದ ಹಿಂಜರಿಯುತ್ತೇವೆ ಈ ಪ್ರಶ್ನೆ ಹಾಕುವದಕ್ಕೆ ನಿನಗೆ ಅಧಿಕಾರವೇ ಇಲ್ಲ" ಈ

ಪ್ರಶ್ನೆಗೆ ಮಾತ್ರ ಉತ್ತರವನ್ನು ಹೇಳುವದು ತನಗೆ ಸಾಧ್ಯವೇ ಇಲ್ಲವೆಂದು ವೇದಾಂತವು ಸರಳವಾಗಿ ತನ್ನ ಅಸಮರ್ಥತೆಯನ್ನು ಒಪ್ಪಿಕೊಳ್ಳುತ್ತದೆ. ಈ ಮಾತಿಗಾಗಿ ಎಲ್ಲಾ ಮತಧರ್ಮ ಶಾಸ್ತ್ರಜ್ಞರೂ (Theologians) ತತ್ತ್ವ ಸಿದ್ಧಾಂತ ಪ್ರತಿಪಾದಕರೂ (Dogmatizers) ಮತ್ತು ಆಳವಾದ ವಿಚಾರವಿಲ್ಲದ ತತ್ತ್ವಶಾಸ್ತ್ರಜ್ಞರೂ ಹೆಮ್ಮೆಯಿಂದ ಮುಂದೆ ಬಂದು "ಓ! ನೋಡಿ, ವೇದಾಂತಶಾಸ್ತ್ರವು ಎಷ್ಟು ಅಪೂರ್ಣವಾಗಿದೆ, ನ್ಯೂನತೆಯುಳ್ಳದಾಗಿದೆ. 'ಈ ಪ್ರಪಂಚವು ಯಾವ ಕಾರಣದಿಂದ, ಏತಕ್ಕಾಗಿ ಸೃಷ್ಟಿಯಾಯಿತು?' ಎಂಬ ಪ್ರಶ್ನೆಗೆ ಉತ್ತರವನ್ನೇ ಹೇಳಲಾರದು," ಎನ್ನುತ್ತಾರೆ

ವೇದಾಂತವು ಹೇಳುವದೇನೆಂದರೆ, "ತಮ್ಮ, ಈ ಪ್ರಶ್ನೆಯೇ ಉಚಿತವಲ್ಲ ವೆಂದೂ ಆದ್ದರಿಂದ ಇದನ್ನು ಕೇಳುವದಕ್ಕೆ ವಿವೇಕಿಗಳಾದ ಯಾರಿಗೂ ಅಧಿಕಾರವಿಲ್ಲ ವೆಂದೂ ಇದಕ್ಕೆ ಉತ್ತರವೇ ಇಲ್ಲವೆಂದೂ ನಾವಾಗಲೀ ಯಾರೇ ಆಗಲೀ ಇದಕ್ಕೆ ಉತ್ತರ ಹೇಳುವದೂ ಸಾಧ್ಯವಿಲ್ಲವೆಂದೂ ನಮಗಂತೂ ಶಕ್ತಿಯಿಲ್ಲವೆಂದೂ ಮುಚ್ಚು ಮರೆಯಿಲ್ಲದೆ, ಸರಳವಾಗಿ ಒಪ್ಪಿಕೊಳ್ಳುತ್ತೇವೆ 'ಈ ಪ್ರಪಂಚವು ಏಕೆ ಸೃಷ್ಟಿ ಯಾಯಿತು? ಯಾವಾಗ ಸೃಷ್ಟಿಯಾಯಿತು? ಯಾರಿಂದ ಸೃಷ್ಟಿಯಾಯಿತು? ಹೇಗೆ ಸೃಷ್ಟಿಯಾಯಿತು? ... ... ...' ಮೊದಲಾದ ಅತ್ಯಂತ ಕುತೂಹಲಕರವಾದ, ಆದರೆ ಅತ್ಯಂತ ಅಸಂಬದ್ಧವಾದ ಪ್ರಶ್ನೆಗಳಿಗೆ ನೀವಾಗಲೀ ಯಾರೇ ಆಗಲೀ ಕೊಡಬಹುದಾದ ಉತ್ತರವನ್ನೇ ಸೂಕ್ಷ್ಮವಾಗಿ ಎಚ್ಚರದಿಂದ ಪರೀಕ್ಷೆ ಮಾಡಿ. ನಿಮ್ಮಲ್ಲಿ ಅತ್ಯಂತ ನಿಪುಣರಾದವರು ಕೊಡಬಹುದಾದ ಅತ್ಯಂತ ಚತುರ ಉತ್ತರವೂ ಉತ್ತರವೇ ಆಗಲಾರದೆಂದು ನಿಮಗೇ ಮನವರಿಕೆಯಾಗುತ್ತದೆ ಎಲ್ಲಾ ತತ್ತ್ವ ಶಾಸ್ತ್ರಗಳೂ ವಿಜ್ಞಾನ ಶಾಸ್ತ್ರಗಳೂ ಜ್ಞಾತದಿಂದ ಅಜ್ಞಾತಕ್ಕೆ—ಅರಿತಿರುವದರಿಂದ ಅರಿಯದಿರುವದಕ್ಕೆ—ತಮ್ಮ ಶೋಧವನ್ನೂ ವಿಚಾರವನ್ನೂ ಬೆಳೆಸಿಕೊಂಡು ಮುಂದು ವರಿಯಬೇಕು. ಕುದುರೆಯ ಹಿಂದೆ ಗಾಡಿಯನ್ನು ಕಟ್ಟದೆ ಕುದುರೆಯ ಮುಂದೆ ಗಾಡಿ ಯನ್ನು ನಿಲ್ಲಿಸಬಾರದು ಅಜ್ಞಾತವೂ ಅಜ್ಞೇಯವೂ ಆದ ತತ್ತ್ವದಿಂದ ಪ್ರಾರಂಭಿಸಿ ಅನಂತರ ಜ್ಞೇಯಕ್ಕೆ ಬರಬೇಡಿ" ಹೀಗೆಂದು ವೇದಾಂತವು ಹೇಳುತ್ತದೆ

ಆದ್ದರಿಂದ ಆ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಹಿಡಿಯುವದಕ್ಕೆ ಪ್ರಯತ್ನ ಮಾಡುವದೆಲ್ಲಾ ವ್ಯರ್ಥ ಕಾಲಹರಣವೆಂದೂ ವ್ಯರ್ಥ ಶ್ರಮವೆಂದೂ ವೇದಾಂತವು ಹೇಳುತ್ತದೆ. ಪೊದೆಯಲ್ಲಿ ಅಡಗಿರುವ ಎರಡು ಹಕ್ಕಿಗಳನ್ನು ಹಿಡಿಯುವ ಸಂಭ್ರಮ ದಲ್ಲಿ ಕೈಯಲ್ಲಿರುವ ಹಕ್ಕಿಯನ್ನೂ ಹಾರಿಬಿಟ್ಟಂತೆ ಈ ಸಾಹಸವಿದೆ. ಪೊದೆಯ

ಹತ್ತಿರ ಉಪಾಯದಿಂದ ಮೆಲ್ಲನ ತೆವಳಿ ಹೋಗುವಪದರೊಳಗಾಗಿ ಆ ಹಕ್ಕಿಗಳು ಹಾರಿ ಹೋಗುತ್ತವೆ , ಕೈಯಲ್ಲಿರುವ ಹಕ್ಕಿಯು ಕಪೆ ಎಚ್ಚರ ತಪ್ಪುವದರಿಂದ ಅದೂ ತಪ್ಪಿಸಿಕೊಳ್ಳುತ್ತದೆ ಎಂದೂ ಯಾರಿಂದಲೂ ಸಮಾಧಾನ ಸಿಗಲಾರದ ಈ ಮೋಹಕ ಪ್ರಶ್ನೆಯ ಉತ್ತರದ ಬೇಟೆಯಲ್ಲಿ ಆಯುಷ್ಯವೆಲ್ಲಾ ಕಳೆದು ಹೋಗುತ್ತದೆ ; ಅಲ್ಲದೆ, ಈ ಮಾಯಾಮೃಗದ ಬೆನ್ನಟ್ಟದೆ ನಿಜವಾದ ಅಧ್ಯಾತ್ಮ ಸಾಧನೆ ಮಾಡಿದ್ದರೆ, ನಮ್ಮೊಳಗೇ ಪಡೆದುಕೊಳ್ಳಬಹುದಾಗಿದ್ದ ನಿಜವಾದ ಸಮಾಧಾನದ ಯೋಗವೂ ತಪ್ಪಿ ಹೋಗುತ್ತದೆ.

ಇದಕ್ಕೆ ಇನ್ನೂ ಒಂದು ದೃಷ್ಟಾಂತವನ್ನು ಕೊಡಬಹುದು ಒಂದು ನದಿಯು ಹರಿಯುತ್ತಿತ್ತು. ಅದರ ದಂಡೆಯ ಮೇಲೆ ಕೆಲವು ಜನರು ನಿಂತುಕೊಂಡು " ಈ ನದಿಯ ಮೂಲವು ಯಾವದು ? ಇದು ಎಲ್ಲಿಂದ ಹುಟ್ಟಿ ಹರಿದು ಬರುತ್ತಿದೆ ?" ಮೊದಲಾದ ಪ್ರಶ್ನೆಯೆತ್ತಿ ತತ್ತ್ವಶಾಸ್ತ್ರಜ್ಞರಂತೆ, ದಾರ್ಶನಿಕರಂತೆ ಊಹಾಪೋಹ ಮಾಡುತ್ತಿದ್ದರು. ಅವರಲ್ಲಿ ಒಬ್ಬನು " ಈ ನದಿಯು ಗುಡ್ಡಗಳಲ್ಲಿ ಬಂಡೆಗಳಿಂದಲೂ ಕಲ್ಲುಗಳಿಂದಲೂ ಹುಟ್ಟಿ ಬರುತ್ತಿದೆ ಗುಡ್ಡಗಳಲ್ಲಿ ನೀರು ಅಕ್ಷಯವಾದ ಚಿಲುಮೆಯಿಂದ ಚಿಮ್ಮಿ ಚಿಮ್ಮಿ ಹರಿದು ಬರುತ್ತಿದೆ. ಈ ನದಿಗೆ ಇದೇ ಕಾರಣ." ಎಂದು ಹೇಳಿದನು. ಆಗ ಇನ್ನೊಬ್ಬನು " ಓ ! ಸುಳ್ಳು ಸುಳ್ಳು , ಅದು ಅಸಾಧ್ಯ : ಕಲ್ಲುಗಳು ಬಹಳ ಗಟ್ಟಿ, ಒರಟು, ಕಠಿಣ, ಗಡುಸು, ಆದರೆ ನೀರು ಎಷ್ಟು ದ್ರವರೂಪವಾಗಿಯೂ ಮೃದುವಾಗಿಯೂ ಇದೆ ! ಮೃದುವಾದ ನೀರು ಅಷ್ಟು ಕಠಿಣವಾದ ಕಲ್ಲಿನಿಂದ ಹೇಗೆ ಹುಟ್ಟಿ ಬರುವದು ಸಾಧ್ಯ ? ಅಸಾಧ್ಯ, ಅಸಾಧ್ಯ. ಕಠಿಣವಾದ ಕಗ್ಗಲ್ಲು ಅಷ್ಟು ಮೃದುವಾದ ನೀರನ್ನು ಸ್ರವಿಸುವದೆಂದರೆ ನಮ್ಮ ಬುದ್ಧಿ ವಿಚಾರ ಒಪ್ಪಲಾರದು ಕಗ್ಗಲ್ಲು ಕೋಮಲವಾದ ಜಲವನ್ನು ಕೊಡುವದು ನಿಜವಾದರೆ, ಈ ಕಲ್ಲನ್ನು ಕೈಯಿಂದ ಹಿಂಡುತ್ತೇನೆ, ನೋಡೋಣ ಎಲ್ಲಿ ? ಎಷ್ಟು ಹಿಂಡಿ ಹಿಸುಕಿದರೂ ಇದರಿಂದ ಒಂದು ಹನಿಯೂ ನೀರು ಬರುವದಿಲ್ಲವಲ್ಲ. ಆದ್ದರಿಂದ ಆ ಬೆಟ್ಟಗಳಿಂದ ಈ ನದಿಯು ಹರಿದು ಬರುತ್ತಿದೆಯೆಂಬುದು ಕೇವಲ ಅಸಂಬದ್ಧ ಆದರೆ ನನಗೊಂದು ಒಳ್ಳೆಯ, ನ್ಯಾಯವಾದ ವಿಚಾರವು ಹೊಳೆಯುತ್ತಿದೆ. ಏನೆಂದರೆ, ಎಲ್ಲಿಯೋ ಅದ್ಭುತ ವಿಗ್ರಹನಾದ ದೈತ್ಯನೊಬ್ಬನು ಇರಬೇಕು ಅವನ ಮೈ ಬೆವೆತು ಹರಿದಿದ್ದೇ ಈ ನದಿ ಇರಬೇಕು. ಜನರ ಮೈ ಬೆವರಿ ನೀರು ಹರಿಯುವದನ್ನು ನಿತ್ಯವೂ ನಾವು ನೋಡುತ್ತೇವೆ. ಇದು ಎಲ್ಲರ ಅನುಭವ , ಆದ್ದರಿಂದ ಈ ನದಿಯೂ ಬೆವರುತ್ತಿರುವ ಯಾವನೊಬ್ಬ ರಾಕ್ಷಸನ ಮೈಯಿಂದ ಹರಿಯುತ್ತಿರಬೇಕು, ಇದೇ ವಿಚಾರಸಮ್ಮತವೂ ನ್ಯಾಯವೂ ಆಗಿ ತೋರುತ್ತದ ಇದನ್ನೇ ನಮ್ಮೆಲ್ಲರ

ಬುದ್ಧಿಯೂ ಒಪ್ಪಿಕೊಳ್ಳಬಹುದು ಎಲ್ಲಾ ರೀತಿಯಿಂದಲೂ ಇದೇ ಸರಿ " ಎಂದು ಹೇಳಿದನು. ಅದಕ್ಕೆ ಮತ್ತೊಬ್ಬನು, "ಇಲ್ಲ, ಇಲ್ಲ, ಯಾವನೋ ಒಬ್ಬ ದೈತ್ಯ ಎಲ್ಲಿಯೋ ನಿಂತು ಉಗುಳುತ್ತಿರಬೇಕು ಈ ನದಿಯು ಅವನ ಉಗುಳು," ಎಂದನು ಬೇರೊಬ್ಬನು ಈ ಯಾವ ವಾದಗಳನ್ನೂ ಒಪ್ಪಿಕೊಳ್ಳದೆ, "ಇವೆಲ್ಲಾ ಬರೀ ಸುಳ್ಳು ಬೆವರಿದರೆ, ಉಗುಳಿದರೆ ಇಷ್ಟೊಂದು ನೀರು ಬರುವದುಂಟೆ? ಯಾವನೋ ಒಬ್ಬ ಮಹಾದೈತ್ಯ ಮೂತ್ರವಿಸರ್ಜನೆ ಮಾಡುತ್ತಿರಬೇಕು ಇದೇ ಈ ನದಿಗೆ ಕಾರಣ. ನದಿಯ ಸ್ವಲ್ಪ ನೀರಿನಲ್ಲಿ ಅದರ ಆ ಗುಣ ಕಾಣುವದಿಲ್ಲ ಎಲ್ಲಾ ನದಿಗಳೂ ಸೇರಿದ ಸಮುದ್ರದಲ್ಲಿರುವ ಅಪಾರವಾದ ಉಪ್ಪಿನ ಗುಣದಿಂದ ನನ್ನ ವಾದವು ಸತ್ಯವೆಂದು ಸಿದ್ಧವಾಗುತ್ತದೆ." ಎಂದು ಕಂಠೋಕ್ತವಾಗಿ ಸಾರಿ ಹೇಳಿದನು.

ಆಗ, 'ಬೆಟ್ಟದಿಂದ ಈ ನೀರು ಚಿಮ್ಮಿ ಹರಿದು ಬರುತ್ತಿದೆ' ಎಂದು ಕಣ್ಣಾರೆ ಕಂಡು ಹೇಳಿದ ಆ ಮೊದಲ ಜನರು, "ನೋಡಿ, ಬೆವರಿನಿಂದಲೂ ಉಗುಳಿನಿಂದಲೂ ಮೂತ್ರದಿಂದಲೂ ನೀರು ಬರುವದನ್ನು ಎಲ್ಲರೂ ನೋಡಿರುವದರಿಂದ, ನಿತ್ಯವೂ ನೋಡುತ್ತಿರುವದರಿಂದ ನಿಮ್ಮ ಒಂದೊಂದು ವಾದವೂ ಕೆಲ ಕೆಲವು ಜನರಿಗೆ ನ್ಯಾಯ ವಾಗಿಯೂ ಎಲ್ಲರಿಗೂ ಸಂಭವನೀಯವಾಗಿಯೂ ತೋರಬಹುದು ಬೆಟ್ಟದ ಮೇಲೇರಿಹೋಗಿ, ಕಲ್ಲುಗಳ ಮಧ್ಯದಿಂದಲೇ ನೀರು ನಿರರ್ಗಳವಾಗಿ ಹರಿಯುತ್ತಿರುವ ದನ್ನು ಎಂದೂ ನೋಡಿಲ್ಲದ ಜನರು ಇದನ್ನೆಂದೂ ಒಪ್ಪದಿರಬಹುದು. ಆದರೂ ಇದು ಸತ್ಯ; ಕಲ್ಲು ಬಂಡೆಗಳಿಂದಲೇ ನೀರು ತಡೆಯಿಲ್ಲದೆ, ಬಿಡುವಿಲ್ಲದೆ ಚಿಮ್ಮಿ ಚಿಮ್ಮಿ ಹರಿದು ಬರುತ್ತಿರುವದು ಪರಮ ಸತ್ಯ." ಎಂದು ಹೇಳಿದರು. ಇದು ಅವರ ವಾದ ವಾಗಿರಲಿಲ್ಲ, ಅವರು ಸ್ವತಃ ಕಣ್ಣಾರೆ ಕಂಡಿದ್ದ ನೇರ ಅನುಭವದ ಫಲವಾದ ಮಾತಾ ಗಿತ್ತು. ಮಿಕ್ಕ ಎಲ್ಲರ ಹೇಳಿಕೆಯೂ ಅವರವರ ಊಹಾಪೋಹದ ವಾದವಾಗಿತ್ತು.

ಇದೇ ಪ್ರಕಾರವಾಗಿ "ಈ ಪ್ರಪಂಚ ಪ್ರವಾಹದ–ಈ ವಿಶ್ವಪ್ರವಾಹದ— ಮೂಲವೇನು? ಈ ಜೀವಸರಿತ್ತಿನ ಉಗಮ ಯಾವದು? ನಮ್ಮೆಲ್ಲರ ಬಾಳು ಹೊಳೆಯ ಹುಟ್ಟು ಎಲ್ಲಿ? ಯಾವಾಗ? ಏತಕ್ಕಾಗಿ? ಇದರ ಅಂತಿಮ ಗಮ್ಯವೆಲ್ಲಿ?" ಮೊದಲಾದ ಈ ಪ್ರಶ್ನೆಗಳಿಗೆಲ್ಲಾ ನದಿಯ ಮೂಲದ ವಿಷಯಕ್ಕೆ ತಮ್ಮ ತಮ್ಮ ಅನು ಭವದಂತೆ, ಬೆವರು, ಉಗುಳು, ಉಚ್ಚೆ ಮೊದಲಾದವುಗಳಲ್ಲಿ ಒಂದಿರಬಹುದೆಂದು ಊಹಿಸಿ ಸಿದ್ಧಾಂತಮಾಡಿದ ಜನರಂತೆ, ತಮ್ಮ ಸುತ್ತಲ ಅನುಭವಕ್ಕೆ ಒಪ್ಪಾಗುವ ರೀತಿ ಯಲ್ಲಿ ವಾದಗಳನ್ನು ಜೋಡಿಸುತ್ತಾರೆ. ಅವರು ಹೇಳುವದೇನೆಂದರೆ, "ಎಲ್ಲಾ

ಜನಸಾಮಾನ್ಯರ ಅನುಭವವನ್ನೇ ತೆಗೆದುಕೊಳ್ಳೋಣ. ಇಲ್ಲಿ ನಮ್ಮ ಚಪ್ಪಲಿ (ಬೂಟ್ಸ್) ಗಳಿವೆ ಇವನ್ನು ಮಾಡಿದ ಮೋಚಿ, ಚಮ್ಮಾರನಿದ್ದಾನೆ ಅವನಿಗೆ ಉದ್ದೇಶವಿದೆ, ಅವನಲ್ಲಿ ಇವುಗಳನ್ನು ತಯಾರಿಸುವ ರೀತಿಯು, ತಂತ್ರ–ಸಂವಿಧಾನಗಳ ಸಂಚೂ ಇದೆ ಇವೆಲ್ಲಾ ಇಲ್ಲದೆ ಚಪ್ಪಲಿ ಆಗುವದಿಲ್ಲ. ನಮ್ಮಲ್ಲಿ ವಾಚುಗಳಿವೆ, ಗಡಿಯಾರಗಳಿವೆ ನಾವು ವಾಸಮಾಡುವ ಮನೆಗಳಿವೆ ಇವುಗಳನ್ನೆಲ್ಲಾ ಮಾಡುವ ಒಬ್ಬ ಕರ್ತೃ ಬೇಕು, ಅವನಿಗೆ ಉದ್ದೇಶಬೇಕು ಅವುಗಳನ್ನೆಲ್ಲಾ ತಯಾರಿಸುವ ಜಾಣತನ, ಕುಶಲತೆ ಅವನಲ್ಲಿರಬೇಕು. ಹೀಗೆ ಕಾರ್ಯರೂಪವಾದ ಯಾವ ವಸ್ತುವಿಗಾದರೂ ಕರ್ತೃ, ಉದ್ದೇಶ ಕಾರ್ಯ-ಕೌಶಲ ಮೊದಲಾದವುಗಳಿರಬೇಕು. ಇವಿಲ್ಲದೆ ಯಾವ ಕಾರ್ಯವೂ ಸಾಧ್ಯವಲ್ಲ ಇದೇ ನ್ಯಾಯವನ್ನು ಈ ಜಗತ್ತಿಗೆ ಏಕೆ ಅನ್ವಯಿಸಬಾರದು? ಹೊಂದಿಸಿ ನೋಡೋಣ ಚಮ್ಮಾರ, ಕಮ್ಮಾರ, ಅಕ್ಕಸಾಲಿ, ಬಡಗಿ, ಶಿಲ್ಪಿ, ಯಂತ್ರ ಶಿಲ್ಪಿ ಮೊದಲಾದವರಂತೆ ಈ ಜಗತ್ತಿಗೂ ಅದೇ ರೀತಿಯ ಒಬ್ಬ ಕರ್ತೃವಿರಬೇಕು ಅವನಿಗೆ ಸಂಕಲ್ಪವೂ ಉದ್ದೇಶವೂ ಚಾತುರ್ಯವೂ ಇರಬೇಕು ಇಷ್ಟೆಲ್ಲಾ ಇಲ್ಲದೆ ಈ ಜಗತ್ತೆಂಬ ಕಾರ್ಯವಾಗಿರಲಾರದು. ಇದನ್ನು ಮಾಡಿದವನಿಲ್ಲದೆ ಈ ಜಗತ್ತಾಗಿರಲು ಹೇಗೆ ಸಾಧ್ಯ ?"

ಅವರು ಹೀಗೆ ತರ್ಕಮಾಡಿ, ಈ ಪ್ರಪಂಚವನ್ನು ಸೃಷ್ಟಿಮಾಡುವವಕ್ಕೆ ಸಗುಣ-ಸಾಕಾರನಾದ ಒಬ್ಬ (ಪರಮ) ಪುರುಷ ಈಶ್ವರನಿರಬೇಕೆಂದು ಕಲ್ಪಿಸುತ್ತಾರೆ. ಯಾವದೋ ಪುರುಷರೂಪದಲ್ಲಿರುವ ದೇವರು (Some personal God) ಇದನ್ನು ಸೃಷ್ಟಿಸಿರಬೇಕೆಂದೂ ಅವನು ಅಂತರಿಕ್ಷದಲ್ಲಿ ಮೋಡಗಳ ಮೇಲೆ, (ಪಾಪ! ಅಲ್ಲಿ ಆ ಬಡಪಾಯಿ ಚಳಿಯಿಂದ ಸೆಟೆದು ಸಾಯಬಹುದೆಂಬ ಕರುಣೆಯೂ ಇಲ್ಲದೆ) ಇರಬೇಕೆಂದೂ ಭಾವಿಸುತ್ತಾರೆ.

ಅವರಾ ವಾದವು ಬಹಳ ನ್ಯಾಯವಾಗಿಯೂ ವಿಚಾರಸಮ್ಮತವಾಗಿಯೂ ಅನುಭವಗಮ್ಯವಾಗಿಯೂ ಸುಂದರವಾಗಿಯೂ ಕಾಣುತ್ತದೆ ಆದರೆ, ಆ ಸಮುದ್ರ ನೀರು ಒಬ್ಬ ಮಹಾದೈತ್ಯನ ಬೆವರೋ ಉಗುಳೋ ಉಚ್ಚೆಯೋ ಆಗಿರಬೇಕೆಂದು ಊಹಿಸಿದವರ ವಾದದಂತೆಯೇ 'ಈ ಪ್ರಪಂಚವನ್ನೂ ಯಾರೋ ಸೃಷ್ಟಿಮಾಡಿರಬೇಕು' ಎಂಬುವರ ವಾದವೂ (ಅದೇ ಜಾತಿಯದಾಗಿ) ಕಾಣುತ್ತದೆ

ವೇದಾಂತವು ಅಂಥಾ ವಾದವನ್ನೇನೂ ಪ್ರತಿಪಾದಿಸುವದಿಲ್ಲ, ಖಂಡಿತವಾಗಿಯೂ ಇಲ್ಲ. ಅದು ಹೇಳುವದು ಇಷ್ಟೇ "ನೋಡಿ, ನೀವೇ ಪರೀಕ್ಷೆಮಾಡಿ, ಪ್ರಯೋ-

ಮಾಡಿ ಶಾಸ್ತ್ರ-ಗುರುಗಳ ಉಪದೇಶದಲ್ಲಿ ಶ್ರದ್ಧೆಯನ್ನಿಟ್ಟು ಪ್ರಯತ್ನಮಾಡಿ, ಸಾಧನ ಮಾಡಿ, ಸಾಮಾನ್ಯ ಅಜ್ಞದೃಷ್ಟಿಯಲ್ಲಿ ಈ ಪ್ರಪಂಚವು ಎಲ್ಲರಿಗೂ ಹೇಗೆ ಕಾಣುವದೋ ಹಾಗಿಲ್ಲವೆಂದು ನಿಮ್ಮ ಸ್ವಂತ ಅನುಭವಕ್ಕೇ ಬರುತ್ತದೆ. ಅದು ಹೇಗೆ ? ಎನ್ನು ವಿರೋ. ಆ ನದಿಯ ದೃಷ್ಟಾಂತವನ್ನೇ ತೆಗೆದುಕೊಳ್ಳೋಣ ನಿಜವಾಗಿಯೂ ಬೆಟ್ಟದ ಮೇಲೆ ಕಲ್ಲುಗಳ ಮಧ್ಯದಿಂದ ಈ ನದಿಯು ಚಿಮ್ಮಿ ಹರಿದು ಬರುತ್ತಿರುವ ದೆಂದು ಮಾತ್ರ ನಾನು ಹೇಳಬಲ್ಲೆ. ಇದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಇದು ನನ್ನ ನೇರವಾದ ಅನುಭವ ನೀವು ಯಾರೂ ಅಲ್ಲಿಗೆ ಹೋಗಿ ನೋಡಿಲ್ಲವಾದ್ದರಿಂದ ಇದನ್ನು ನಂಬದಿರಬಹುದು. ಆದರೆ ಕಲ್ಲುಗಳಿಂದ ನೀರು ಹುಟ್ಟಿ ಬರುವದು ಸಾಧ್ಯವೆ ? ಎನ್ನುವ ನಿಮ್ಮ ಸಂಶಯಕ್ಕೆ ಮಾತ್ರ ಸಮಾಧಾನ ಹೇಳುವ ಶಕ್ತಿ ನನಗಿಲ್ಲ ದಿರಬಹುದು. ನೀವು ಕಷ್ಟಪಟ್ಟಾದರೂ ನನ್ನ ಜೊತೆಗೆ ಆ ಬೆಟ್ಟವೇರಿ ಆ ಸ್ಥಳಕ್ಕೆ ಬನ್ನಿ ; ಬಂಡೆಗಳ ಒಳಗಿನಿಂದ ನೀರು ಬುಗ್ಗೆ ಬುಗ್ಗೆಯಾಗಿ ಬುಳು ಬುಳು ಹರಿದು ಬರುತ್ತಿರುವದನ್ನು ನೀವೇ ನೋಡುತ್ತೀರಿ. ಅದು ಹೇಗೆ ಸಾಧ್ಯವೆಂದು ನಾನು ವಿವರಿಸಲಾರೆನಾದರೆ ನನ್ನನ್ನು ಬೈಯಬೇಡಿ. ಆ ನೀರನ್ನು ಬೈಯಿರಿ , ನಿಮ್ಮ ತರ್ಕ ಬುದ್ಧಿಗೆ ಹುಚ್ಚುಹಿಡಿಸುವಂತೆ ನದಿಯು ಕಲ್ಲುಗಳಿಂದಲೇ ಹೊರಗೆ ಬರುತ್ತಿದೆ ಇದು ವಾಸ್ತವ ವಿಷಯ ; ಸತ್ಯ. ನೀವೇ ಬಂದು ನೋಡಿ ; ಪರೀಕ್ಷೆ ಮಾಡಿ ".

ಹಾಗೆಯೇ ವೇದಾಂತವು ಹೇಳುವದೇನೆಂದರೆ ; " ಈ ಮಾಯೆ ಅಥವಾ ಅಜ್ಞಾನ ಏಕಿದೆ ? ಎನ್ನುವದನ್ನು ನಾನು ವಿವರಿಸುವದಕ್ಕೆ ಸಾಧ್ಯವಿರಲಿ, ಇಲ್ಲದಿರಲಿ, ಅದು ಇರುವದಂತು ವಾಸ್ತವ. ನನ್ನ ದೃಷ್ಟಿ ಕೇವಲ ಪ್ರಯೋಗಶೀಲವೂ ಶಾಸ್ತ್ರೀಯವೂ ವೈಜ್ಞಾನಿಕವೂ ಆದುದು. ನಾನು ಯಾವ ಊಹಾ-ಕಲ್ಪನೆಯನ್ನೂ ಮಾಡುವದಿಲ್ಲ . ವಾದವನ್ನೂ ಹೂಡುವದಿಲ್ಲ. ಪ್ರಪಂಚದ ಮೂಲವನ್ನೂ ಕಾರಣ ವನ್ನೂ ತಿಳಿಸಬಲ್ಲೆನೆಂದೂ ಹೇಳಿಕೊಳ್ಳುವದಿಲ್ಲ, ಈ ಗೂಢವನ್ನರಿಯುವದು ಬುದ್ಧಿಯ ವಿಚಾರವನ್ನೂ ಗ್ರಾಹ್ಯಶಕ್ತಿಯನ್ನೂ ಮೀರಿದೆ ಎಂದು ಮಾತ್ರ ಹೇಳುತ್ತೇನೆ. ಇದೇ ವೇದಾಂತದ ನಿಲುವು. ' ಪ್ರಪಂಚವು ಏಕೆ ತೋರುತ್ತಿದೆ ? ' ಎಂಬ ಪ್ರಶ್ನೆಗೆ, 'ನೀನು ನೋಡುವದರಿಂದ ತೋರುತ್ತದೆ' ಎಂಬುದೇ ಉತ್ತರ 'ನೀನು ನೋಡದಿದ್ದರೆ ಪ್ರಪಂಚವಿಲ್ಲವೇ ಇಲ್ಲ ' ಪ್ರಪಂಚವಿದೆಯೆಂದು ನಿನಗೆ ಹೇಗೆ ಗೊತ್ತು? ನೀನು ನೋಡುವದರಿಂದ ತಾನೇ ? ಹಾಗಾದರೆ ನೋಡಬೇಡ ; ನೋಡದಿದ್ದರೆ ಪ್ರಪಂಚ ವೆಲ್ಲಿದೆ ? ಕಣ್ಣುಗಳನ್ನು ಮುಚ್ಚಿಕೊ ; ಪ್ರಪಂಚದ ಐದರಲ್ಲಿ ಒಂದು ಭಾಗವೇ ಕಣ್ಮರೆಯಾಯಿತು ಕಣ್ಣುಗಳಿಂದ ನೋಡುತ್ತಿರುವ ಪ್ರಪಂಚವು ಇಲ್ಲವೇ ಇಲ್ಲ.

ನಿಮ್ಮ ಕಿವಿಗಳನ್ನು ಮುಚ್ಚಿಕೊಂಡರೆ, ಪ್ರಪಂಚದ ಐದು ಭಾಗಗಳಲ್ಲಿ ಇನ್ನೂ ಒಂದು ಭಾಗ ಹೋಯಿತು. ನಿಮ್ಮ ಮೂಗನ್ನು ಮುಚ್ಚಿಕೊಂಡರೆ, ಹಿಂದಿನ ಸಾಧನೆಯೊಡನೆ ಪ್ರಪಂಚದ ಮೂರು ಭಾಗವೇ ಹೋಯಿತು. ರುಚಿಯನ್ನೂ ನೋಡದೆ ಸ್ಪರ್ಶ ಮಾಡದಿದ್ದರೆ ಪ್ರಪಂಚದ ಐದಕ್ಕೆ ಐದು ಭಾಗವೂ ಹೋಯಿತು ಹೀಗೆ ನಿಮ್ಮ ಯಾವ ಇಂದ್ರಿಯವನ್ನೂ ಉಪಯೋಗಿಸದಿದ್ದರೆ ಪ್ರಪಂಚವೇ ಇರುವುದಿಲ್ಲ. ನೀವು ಐದು ಇಂದ್ರಿಯಗಳ ವ್ಯಾಪಾರಕ್ಕೂ ಅವಕಾಶಕೊಟ್ಟರೆ, ಪ್ರಪಂಚವು ಪೂರ್ಣವಾಗಿ ನಿಮ್ಮ ಎದುರು ನಿಲ್ಲುತ್ತದೆ, ಆಗ ಅದು ಪರಮಸತ್ಯವಾಗಿ ಕಂಡು 'ನಾನು ಏಕೆ ಇದ್ದೇನೆ ಹೇಳು ?' ಎಂದು ನಿಮ್ಮನ್ನೇ ಕೇಳುತ್ತದೆ, ಕಾಡುತ್ತದೆ. ನಿಮ್ಮಿಂದಲೇ ಸೃಷ್ಟಿಯಾದ ಭೂತವು ನಿಮ್ಮನ್ನೇ ನುಂಗಲು ಬರುತ್ತದೆ. ನೀವೇ ಸೃಷ್ಟಿಮಾಡಿಕೊಂಡರೂ ಅದನ್ನೇ ನೀವು ಮರೆಯುತ್ತೀರಿ. ನೀವು ಕಲ್ಪಿಸಿಕೊಳ್ಳುವದರಿಂದ ಅದು ಕಾಣುತ್ತದೆ; ಅದ್ದರಿಂದ ಏಕೆ ಕಾಣುತ್ತದೆ ? ಏಕೆ ಕಲ್ಪಿಸಿಕೊಳ್ಳುತ್ತೀರಿ ? ಇದಕ್ಕೆ ನೀವೇ ಉತ್ತರ ಹೇಳಬೇಕು. ನನ್ನನ್ನೇಕೆ ಕೇಳುತ್ತೀರಿ ? ಪ್ರಪಂಚವನ್ನು ನೀವೇ ಸೃಷ್ಟಿಸಿಕೊಳ್ಳುತ್ತೀರಿ."

ಕನ್ನಡಿಯಲ್ಲಿ ಒಂದು ಸುಂದರವಾದ ಮಗುವಿದೆಯೆಂದು ಯಾರೋ ದೊಡ್ಡವರೊಬ್ಬರು ಒಂದು ಮಗುವಿಗೆ ತಮಾಷೆಗಾಗಿ ಹೇಳಿದರು. ಮಗುವು ಅದನ್ನು ನಂಬಿ ಕುತೂಹಲದಿಂದ ಆ ಇನ್ನೊಂದು ಮಗುವನ್ನು ನೋಡುವದಕ್ಕಾಗಿ ಮನೆಯಲ್ಲಿರುವ ದೊಡ್ಡ ಕನ್ನಡಿಯ ಮುಂದೆ ನಿಂತು ನೋಡಿತು. ಅದರಲ್ಲಿರುವ ಆ ಮಗುವನ್ನು ನೋಡಿ ಸಂತೋಷದಿಂದ ಕೂಗಿ ತಾಯಿಯನ್ನು ಕರೆದು ಆ ಕನ್ನಡಿಯ ಮಗುವನ್ನು ತೋರಿಸಿತು. "ಅಮ್ಮಾ ಈ ಮಗು ಯಾವದು ? ಎಲ್ಲಿಂದ ಬಂತು ? ಏಕೆ ಬಂತು ? ಯಾವಾಗ ಬಂತು ? ಇದು ಹೋಗುವದು ಹೇಗೆ ? ಇದನ್ನು ತೊಲಗಿಸು ಇದು ನನ್ನ ತಿಂಡಿಯನ್ನು ಕಸಕೊಳ್ಳುತ್ತದೆ ನೋಡು, ಇದನ್ನು ಓಡಿಸು." ಎಂದು ಕೂಗಾಡಿತು. ತಾಯಿಯು "ಮಗು, ಆ ಕನ್ನಡಿಯಲ್ಲಿ ಬೇರೆ ಮಗು ಇಲ್ಲ, ಅದು ನಿನ್ನ ಪ್ರತಿಬಿಂಬವೇ ಅದು ನಿಜವಾದ ಮಗುವಲ್ಲ ಅದು ನಿಜವಾಗಿದ್ದರೆ, ಅದು ಯಾವದು ? ಎಲ್ಲಿಂದ ಬಂತು ? ಏಕೆ ಬಂತು ? ಮೊದಲಾದ ಎಲ್ಲಾ ಪ್ರಶ್ನೆಗಳಿಗೂ ಉತ್ತರ ಹೇಳಬಹುದಾಗಿತ್ತು." ಎಂದು ಸಮಾಧಾನ ಹೇಳಿದಳು. ಆದರೆ ದೂರ ಹೋಗಿದ್ದ ಮಗುವು ಪುನಃ ಕನ್ನಡಿಯ ಮುಂದೆ ಬಂದು ನಿಂತು "ನೋಡಮ್ಮ ಇಲ್ಲಿ ಮಗುವಿಲ್ಲ ಎನ್ನುತ್ತೀಯೆ, ನೀನು ಸುಳ್ಳು ಹೇಳುತ್ತೀಯೆ ; ನಿಜವಾದ ಮಗು ಈ ಕನ್ನಡಿಯಲ್ಲಿದೆ ನೋಡು, ಇದು ನನ್ನ ಬಿಸ್ಕೆಟ್ ಕಸಕೊಳ್ಳುತ್ತದೆ, ಓಡಿಸು " ಎಂದು ಅಳುವದಕ್ಕೆ ತೊಡಗಿತು. ಕನ್ನಡಿಯಲ್ಲಿ ಮಗುವಿಲ್ಲ ಎಂದ ತಾಯಿಯ ಮಾತನ್ನು ಪರೀಕ್ಷಿಸುವದಕ್ಕಾಗಿ ಮಗುವು ಕನ್ನಡಿಯ ಮುಂದೆ ಹೋದ ಕೂಡಲೇ ತಾನೇ ಕನ್ನಡಿಯಲ್ಲಿ ತನ್ನ

ಪ್ರತಿಬಿಂಬದಿಂದ ಮಗುವನ್ನು ಕಲ್ಪಿಸಿ—ಅದು ತನ್ನ ಸೃಷ್ಟಿಯೇ ಎಂದು ತಿಳಿಯುವೆ ಹೇಳಿದರೂ ಒಪ್ಪದೆ—"ನೋಡಿಲ್ಲಿ ಮಗುವಿದೆ ; ಇಲ್ಲ ಎನ್ನುತ್ತಿ, ಸುಳ್ಳು ಹೇಳುತ್ತಿ ಮೊದಲು ಇದನ್ನು ತೊಲಗಿಸು ; **ನಾನು ಇಲ್ಲಿಯೇ ನಿಂತಿರುತ್ತೇನೆ.** ಇದನ್ನು ಓಡಿಸು." ಎಂದು ತಾಯಿಗೆ ಹೇಳಿ ಅಳುತ್ತಿತ್ತು

ಹೀಗೆಯೇ ನೀವು "ಈ ಪ್ರಪಂಚವು ಏಕೆ ಸೃಷ್ಟಿಯಾಯಿತು ? ಹೇಗಾಯಿತು ? ಯಾವಾಗಾಯಿತು ? ಯಾರಿಂದಾಯಿತು ? " ಎಂದು ಈ ಪ್ರಪಂಚದ ಮೂಲವನ್ನು ವಿಚಾರ ಮಾಡುವದಕ್ಕೆ ತೊಡಗಿದ ಕೂಡಲೇ ಅದನ್ನು ನೀವೇ ಸೃಷ್ಟಿಸಿಕೊಳ್ಳುತ್ತೀರಿ "ಈ ಪ್ರಪಂಚವು ನಿಮ್ಮ ಕಲ್ಪನೆಯೇ, ನಿಮ್ಮ ಅಜ್ಞಾನದ ಪ್ರತಿಫಲನವೇ ಆಗಿದೆ, ಹೀಗೆಂದು ವೇದಾಂತವು ನಿಮಗೆ ಹೇಳಿದರೆ-ಆ ಮೂಢ ಬಾಲಕನಂತೆ-ನಿಮ್ಮ ಬಾಲಬುದ್ಧಿಯು ಅದನ್ನು ಒಪ್ಪುವದಿಲ್ಲ. ನಿಮ್ಮ ಮನಸ್ಸಿಗೂ ಅದರ ಕಲ್ಪನೆಗೂ ಸಂಬಂಧವಡದೆ, ಪ್ರಪಂಚವೊಂದು ತಾನೇ ಸ್ವತಂತ್ರವಾಗಿ ಸತ್ಯವಾಗಿದೆ, ಎಂದು ನೀವೇ ದೃಢನಿಶ್ಚಯದಿಂದ ಕಲ್ಪಿಸಿಕೊಂಡಿರುವದರಿಂದ ಅದಕ್ಕೆ ಕಾರಣ, ಕರ್ತೃ ಅವನ ಉದ್ದೇಶ, ಸೃಷ್ಟಿಯ ಸಂವಿಧಾನದ ರಹಸ್ಯ, ಕಾಲ ಇದರ ನಿವೃತ್ತಿ ಮೊದಲಾದ ಯಾವದನ್ನೂ ನೀವು ಕಂಡುಹಿಡಿಯುವದು ಸಾಧ್ಯವಿಲ್ಲ. ಸೃಷ್ಟಿಯ ಮೂಲವನ್ನು ಕಾಣುವದು ಅಥವಾ ಅರಿಯುವದು ಹೇಗೆ ಸಾಧ್ಯ ? ಇದರಿಂದಾಚೆಗೆ ಇರುವದನ್ನು ತಿಳಿಯುವುದು ಹೇಗೆ ? ಇದನ್ನು ಮೀರುವದು ಹೇಗೆ ?

ಇದನ್ನೇ ಹೆಚ್ಚು ಸ್ಪಷ್ಟಪಡಿಸಬೇಕಾಗಿದೆ. ಬ್ರಹ್ಮಾಂಡದ ಸಂಕ್ಷೇಪಾಕೃತಿಯೆಂದು ಭಾವಿಸಲ್ಪಡುವ ಈ ಪಿಂಡಾಂಡದ ದೃಷ್ಟಿಯಿಂದಲೂ ಭೌತಾತೀತವಾದ ಆಧ್ಯಾತ್ಮಿಕ ದೃಷ್ಟಿಯಿಂದಲೂ ಇದನ್ನು ವಿಚಾರಮಾಡಬೇಕು. ಎಲ್ಲಿಯೋ ಇರುವ ಸೃಷ್ಟಿಕರ್ತ ನಾದ ಒಬ್ಬ ಲೌಕಿಕ ದೇವರು ಈ ಜಗತ್ತನ್ನು ಸೃಷ್ಟಿಮಾಡಿದನೆಂದು ಕೆಲವರು ಹೇಳು ತ್ತಾರೆ. ಈ ಪ್ರಪಂಚವನ್ನು—ಬಡಗಿ ಮೊದಲಾದವರು ಒಂದು ಮನೆಯನ್ನು ನಿರ್ಮಾಣಮಾಡಿದಂತೆ—ದೇವರು ಎಲ್ಲಿಯೋ ನಿಂತು ಸೃಷ್ಟಿಸಿರಬೇಕು. ಅವನು ಎಲ್ಲಿ ನಿಂತಿದ್ದ ? ಅವನು ಎಲ್ಲಿಯಾದರೂ ನಿಂತಿದ್ದನೆಂದರೆ, ಸೃಷ್ಟಿಯಾಗುವದಕ್ಕೆ ಮೊದಲೇ ಪ್ರಪಂಚವಿತ್ತು ಎಂದು ಹೇಳಿದಂತಾಗುತ್ತದ. ಏಕೆಂದರೆ ದೇವರು ನಿಲ್ಲಬಹುದಾದ ಯಾವ ಸ್ಥಳವಾದರೂ ಪ್ರಪಂಚದಲ್ಲಿಯೇ ಎಲ್ಲಿಯೋ ಇರಬೇಕಲ್ಲವೆ ? ಆದ್ದರಿಂದ ಸೃಷ್ಟಿಯಾಗುವದಕ್ಕೆ ಮೊದಲೇ ಪ್ರಪಂಚವಿತ್ತು—ಎಂದು ಒಪ್ಪಿಕೊಂಡಂತಾಗುತ್ತದೆ ಇದು ಅಸಂಬದ್ಧವಲ್ಲವೆ ? ನೀವು, ಈ ಸೃಷ್ಟಿಯು ಯಾವಾಗ ಆರಂಭವಾಯಿತೆಂದು ವಿಚಾರಮಾಡುವದಕ್ಕೆ ತೊಡಗಿದ ಕೂಡಲೇ ಎರಡು ಭಾವನೆಗಳನ್ನು ಪ್ರತ್ಯೇಕಿಸುವದಕ್ಕೆ

ಬಯಸುತ್ತೀರಿ. ಯಾವಾಗ? ಏತಕ್ಕಾಗಿ? ಯಾರಿಂದ? ಹೇಗೆ? ಮೊದಲಾದ ಭಾವನೆಗಳನ್ನು ಒಂದುಕಡೆ, ಈ ಪ್ರಪಂಚ ಎಂಬ ಭಾವನೆಯನ್ನು ಇನ್ನೊಂದುಕಡೆ. ಆದರೆ ಯಾವಾಗ, ಏತಕ್ಕಾಗಿ ಯಾರು ಈ ಮೊದಲಾದ ಶಬ್ದಗಳೂ ಕಾಲ, ದೇಶ, ಕಾರಣ, ಕಾರ್ಯ ಮೊದಲಾದ ಕಲ್ಪನೆಗಳೂ ಪ್ರಪಂಚದೊಳಗೇ ಸೇರಿಲ್ಲವೆ? ಅವು ಪ್ರಾಪಂಚಿಕವಾದವಲ್ಲವೇ? ಅವು ನಿಶ್ಚಿತವಾಗಿಯೂ ಪ್ರಪಂಚದ ಭಾಗಗಳೇ ಸರಿ ನಿಮ್ಮ ಪ್ರಶ್ನೆಯು ಏಕೆ, ಯಾವಾಗ, ಯಾರು, ಏತಕ್ಕಾಗಿ ಎಂಬಿವುಗಳ ಸುತ್ತಲೂ ಕೇಂದ್ರೀಕರಿಸಿದೆ ಎಂಬುದನ್ನು ಲಕ್ಷ್ಯದಲ್ಲಿಡಿ. ಆದರೆ ದೇಶ ಕಾಲಾದಿಗಳು ಪ್ರಪಂಚದ ಹೊರಗಿಲ್ಲ, ಇದರೊಳಗೇ ಸೇರಿವೆ ಎಂಬುದನ್ನೂ ನೆನಪಿಡಿ. ''ಯಾವಾಗ ಈ ಜಗತ್ತು ಆರಂಭವಾಯಿತೋ ಆಗ '' ಎಂದು ನೀವು ಹೇಳುವದಕ್ಕೆ ತೊಡಗಿದ ಕೂಡಲೇ ಈ ಪ್ರಪಂಚದ ಭಾವನೆಯನ್ನು ಒಂದು ಕಡೆಯಾಗಿಯೂ 'ಯಾವಾಗ' ಎನ್ನುವ ಕಾಲದ ಭಾವನೆಯನ್ನು ಇನ್ನೊಂದು ಕಡೆಯಾಗಿಯೂ ಬೇರ್ಪಡಿಸುತ್ತೀರಿ. ಆಗ ನೀವು ಜಗತ್ತಿನ ಎದುರಿಗೆ ಜಗತ್ತನ್ನೇ ಇಟ್ಟಂತಾಯಿತು ಇದು ಅತ್ಯಂತ ಸೂಕ್ಷ್ಮವಾದ ವಿಚಾರ, ತಿಳಿಯುವದಕ್ಕೆ ಬಹಳ ಕಠಿಣವೂ ಆದುದು ನೀವು ದಯವಿಟ್ಟು ಬಹಳ ಎಚ್ಚರದಿಂದಲೂ ಅತ್ಯಂತ ಶ್ರದ್ಧಾದರಗಳಿಂದಲೂ ಲಕ್ಷ್ಯವಿಟ್ಟು ಕೇಳಿದರೆ ಮಾತ್ರ ತಿಳಿಯಬಹುದು

ಪ್ರಪಂಚವು ಆರಂಭವಾದುದು ಯಾವಾಗ ? ಈ ಪ್ರಶ್ನೆಯಲ್ಲಿ ನೀವು ಪ್ರಪಂಚವನ್ನು ಪ್ರಪಂಚದಿಂದಲೇ ಹರಿದು ಬೇರ್ಪಡಿಸುವದಕ್ಕೆ ಬಯಸುತ್ತೀರಿ. ಯಾವಾಗ ? ಎನ್ನುವ ಕಾಲದ ಕಲ್ಪನೆಯನ್ನು ಪ್ರಪಂಚದಿಂದ ಬಿಡಿಸಿ, ಹೊರಗೆಳೆಯುವದಕ್ಕೆ ಪ್ರಯತ್ನಿಸುತ್ತಿಲ್ಲವೆ ? ಯಾವಾಗ, ಏಕೆ ಮೊದಲಾದವುಗಳಿಂದ ಪ್ರಪಂಚವನ್ನು ಅಳೆಯಬೇಕೆನ್ನುತ್ತೀರಿ, ಆದರೆ ಯಾವಾಗ, ಏಕೆ ಮೊದಲಾದ ಕಲ್ಪನೆಗಳೂ ಪ್ರಪಂಚದಲ್ಲಿಯೇ ಸೇರಿವೆ. ಅವೂ ಪ್ರಪಂಚವೇ ಎಂದು ನೀವು ಒಪ್ಪಬೇಕಾಗಿದೆ. ಪ್ರಪಂಚವನ್ನು ಬಿಟ್ಟು, ದೂರ ಆಚೆ ಹಾರಬೇಕೆನ್ನುತ್ತೀರಿ, ಆದರೆ ಹಾರಿ ನಿಲ್ಲುವಲ್ಲಿ ಅಥವಾ ಹಾರಾಡುತ್ತ ಇರಬೇಕೆನ್ನುವಲ್ಲಿ ನೀವು ಪುನ ಪ್ರಪಂಚವನ್ನೇ ಇಡುತ್ತೀರಿ.

ಒಮ್ಮೆ ಒಂದು ಶಾಲೆಗೆ ತನಿಖೆ ಮಾಡುವದಕ್ಕಾಗಿ ಒಬ್ಬ ಅಧಿಕಾರಿಗಳು (ಇನ್ಸ್‌ಪೆಕ್ಟರ್) ಬಂದರು. ಅವರು ವಿದ್ಯಾರ್ಥಿಗಳಿಗೆ ಈ ಪ್ರಶ್ನೆ ಹಾಕಿದರು. ''ಬಹಳ ಎತ್ತರವಾದ ಒಂದು ಸ್ಥಳದಿಂದ–ನೂರಡಿಗಳ ಎತ್ತರದಿಂದ–ಒಂದು ಚೆಂಡನ್ನು ಬೀಳುವದಕ್ಕೆ ಬಿಟ್ಟರೆ, ಅದು ಭೂಮಿಯನ್ನು ಮುಟ್ಟುವದಕ್ಕೆ ಎಷ್ಟು ಕಾಲವನ್ನು ತೆಗೆದುಕೊಳ್ಳುತ್ತದೆ ?'' ಒಬ್ಬ ಬಾಲಕನು ''ಇಷ್ಟು ಸೆಕೆಂಡುಗಳು'' ಎಂದು ಉತ್ತರ

ಸಂಖ್ಯೆಯನ್ನು ಹೇಳಿದನು. ಪುನಃ ಇನ್ಸ್‌ಪೆಕ್ಟರು "ಅದೇ ಎತ್ತರದಿಂದ ಒಂದು ಕಲ್ಲನ್ನು ಬಿಟ್ಟರೆ ? ಅದು ಭೂಮಿಗೆ ಬೀಳಲು ಎಷ್ಟು ಕಾಲ ಬೇಕು ?" ಎಂದು ಕೇಳಿದರು. ಆ ಬಾಲಕನು "ಇಷ್ಟು ಸೆಕೆಂಡುಗಳು" ಎಂದು ಕೆಲವು ಸೆಕೆಂಡ್‌ಗಳನ್ನು ಹೇಳಿದನು. ಆಗ ಅವರು ಸಿಕ್ಕಿಸಿಕೊಳ್ಳುವ ಒಂದು ಜಾಣತನದ ಪ್ರಶ್ನೆ ಮಾಡಿದರು, "ಭೂಮಿಯೇ–ಈ ಭೂಗ್ರಹವೇ–ಬೀಳುವದಕ್ಕೆ ತೊಡಗಿದರೆ ಇದು ಬೀಳುವದಕ್ಕೆ ಎಷ್ಟು ಕಾಲವನ್ನು ತೆಗೆದುಕೊಳ್ಳುತ್ತದೆ ? ಆ ಮಕ್ಕಳಿಗೆ ದಿಗ್ಭ್ರಮೆ ಆಯಿತು ಅವರಲ್ಲಿ ಒಬ್ಬ ಸುಟಿಯಾದ ಹುಡುಗನು "ಭೂಮಿಯು ಎಲ್ಲಿಗೆ ಬೀಳುತ್ತದೆ ?– ಎನ್ನುವದನ್ನು ಮೊದಲು ತಿಳಿಸಬೇಕು" (ಹಾಗಾದರೆ ಅದು ಬೀಳಲು ಎಷ್ಟು ಹೊತ್ತು ಬೇಕು, ಎನ್ನುವದನ್ನು ಹೇಳಬಹುದು) ಎಂದು ಉತ್ತರಿಸಿದನು

ಹೀಗೆಯೇ ಈ ದೀಪ ಹಚ್ಚಿದ್ದು ಯಾವಾಗ, ಈ ಮನೆಯನ್ನು ಕಟ್ಟಿದ್ದು ಯಾವಾಗ, ಈ ನೆಲವನ್ನು ಮಾಡಿದ್ದು ಯಾವಾಗ ಮೊದಲಾದ ಪ್ರಶ್ನೆಗಳನ್ನು ಹಾಕಬಹುದು. ಆದರೆ "ಈ ಭೂಮಿಯು ಸೃಷ್ಟಿಯಾದುದು ಯಾವಾಗ ? ಈ ಜಗತ್ತು ಸೃಷ್ಟಿಯಾದುದು ಯಾವಾಗ ? ಎಂಬೀ ಪ್ರಶ್ನೆಗಳು "ಭೂಮಿ ಬೀಳುವದಕ್ಕೆ ಎಷ್ಟು ಕಾಲ ಬೇಕು ? ಭೂಮಿ ಎಲ್ಲಿಗೆ ಬೀಳುತ್ತದೆ ?" ಎಂಬ ಪ್ರಶ್ನೆಗಳಂತೆಯೇ ಅಸಂಗತವಾಗುತ್ತವೆ. ಯಾವಾಗ ? ಏಕೆ ? ಮೊದಲಾದವುಗಳು ಪ್ರಪಂಚದಲ್ಲಿಯೇ ಸೇರಿ ಅದರ ಭಾಗವೇ ಆಗಿರುವದರಿಂದಲೂ ನಮ್ಮ ತರ್ಕವೂ ವಿಚಾರವೂ ಶೋಧವೂ ಒಂದು ವೃತ್ತದಲ್ಲಿಯೇ ಆಗಿರುವದರಿಂದಲೂ ಎಷ್ಟು ಸುತ್ತಿದರೂ ಹೊರಟಲ್ಲಿಗೇ ತಿರುಗಿ ಬರುತ್ತೇವೆ. ಇದೊಂದು ಭ್ರಮೆ, ತರ್ಕದೋಷ. ನಿಮ್ಮನ್ನು ಬಿಟ್ಟು ನೀವು–ನಿಮ್ಮೊಳಗಿನಿಂದ ನೀವು–ಹೊರಗೆ ಹಾರುವದು ಸಾಧ್ಯವೆ ? (could you jump out of yourself ?) ಇಲ್ಲ ಹಾಗೆಯೇ ಈ ಪ್ರಶ್ನೆಗಳೂ ಈ ಇಡೀ ವಿಶ್ವಕ್ಕೆ ಇವು ವಿವರಣೆ ಕೊಡಲಾರವು ಇದನ್ನೇ ಹೇಳುವುದು ವೇದಾಂತ.

ಇದನ್ನೇ ಇನ್ನೊಂದು ರೀತಿಯಲ್ಲಿ ವಿವರಿಸಬಹುದು.

ಇಲ್ಲೊಬ್ಬ ಮನುಷ್ಯನು ನಿದ್ರಿಸುತ್ತಿದ್ದಾನೆಂದು ಇಟ್ಟುಕೊಳ್ಳೋಣ. ಅವನು ತನ್ನ ಕನಸಿನಲ್ಲಿ ಅನೇಕ ವಸ್ತುಗಳನ್ನು ನೋಡುತ್ತಾನೆ. ಕನಸು ಕಾಣುತ್ತಿರುವ ಭ್ರಮಿಷ್ಠನಾದ ವಿಷಯಿಯೂ ಅವನೇ, ಕನಸಿನಲ್ಲಿ ಗೋಚರಿಸುತ್ತಿರುವ ವಿಷಯವೂ ಅವನೇ ; ಅರಣ್ಯಗಳೂ ನದಿಗಳೂ ಪರ್ವತಗಳೂ ಏನೇನೋ ತಾನೇ ಆಗಿದ್ದಾನೆ.

ಕನಸಿನಲ್ಲಿ ವಿಷಯಿಯೂ (ಕನಸು ಕಾಣುತ್ತಿರುವ ಜೀವನೂ) ವಿಷಯಗಳೂ ಏಕಕಾಲದಲ್ಲಿ ಉದಯವಾಗುತ್ತವೆ. ಕನಸು ಕಾಣುತ್ತಿರುವ ಜೀವನು ತನಗೆ ಕಾಣುತ್ತಿರುವ ನದಿಗಳೂ, ಪರ್ವತಗಳೂ, ಸರೋವರಗಳೂ, ಭೂದೃಶ್ಯಗಳೂ ಯಾವಾಗ ಸೃಷ್ಟಿಯಾದವು, ಎಂಬದನ್ನು ಹೇಳಬಲ್ಲನೆ? ನೀವು ಕನಸು ಕಾಣುತ್ತಿರುವವರೆಗೂ ಕನಸು ಕಾಣುವ ನೀವು ಯಾರಾದರೂ ಇದನ್ನು ಹೇಳಲು ಸಾಧ್ಯವೆ ? ಎಂದಿಗೂ ಇಲ್ಲ. ಅಲ್ಲಿ ಆಗ ನಿಮಗೆ ನದಿಗಳು, ಪರ್ವತಗಳು ಮೊದಲಾದ ದೃಶ್ಯಗಳೆಲ್ಲಾ ಕೋಟಿ ಕೋಟಿ ವರ್ಷಗಳಿಂದ ಶಾಶ್ವತವಾಗಿ ಎಂದೆಂದೂ ಇರುವವೆಂದೇ ಸ್ವಾಭಾವಿಕವಾಗಿಯೇ ತೋರುತ್ತವೆ. ನೀವು ಕನಸಿನಲ್ಲಿರುವವರೆಗೂ, "ನಾನೀಗ ಕನಸು ಕಾಣಲು ತೊಡಗಿದ್ದೇನೆ; ನಾನು ಕನಸನ್ನು ಆರಂಭಿಸಿದಾಗಲೇ ಈ ದೃಶ್ಯಗಳೂ ತೋರಲು ಪ್ರಾರಂಭವಾಗಿವೆ. ನಾನು ನೋಡುತ್ತಿರುವದರಿಂದಲೇ ಇವೂ ತೋರುತ್ತಿವೆ. ಇದು ನನ್ನ ಕೇವಲ ಕನಸು, ಕಲ್ಪನೆ. ಈಗ ತೋರುತ್ತಿರುವ ಯಾವದೂ ನಿಜವಲ್ಲ, ಇವು ನನ್ನ ಕನಸನ್ನು ಬಿಟ್ಟು ಸ್ವತಂತ್ರವಾಗಿ ಹಿಂದೆ ಬಹಳ ಕಾಲದಿಂದಲೂ ಇರಲಿಲ್ಲ; ಎಚ್ಚರವಾದ ಮೇಲೂ ಇರುವದಿಲ್ಲ" ಎಂದು ಎಂದಿಗೂ ತೋರುವದಿಲ್ಲ. ನೀವು ಕನಸು ಕಾಣುತ್ತಿರುವವರೆಗೂ ನೀವು ಕಾಣುತ್ತಿರುವ ಪ್ರಪಂಚವು ಯಾವಾಗ, ಯಾರಿಂದ, ಏತಕ್ಕಾಗಿ, ಹೇಗೆ ಸೃಷ್ಟಿಯಾಯಿತು–ಎಂಬದನ್ನು ನೀವು ಕಂಡು ಹಿಡಿಯುವದೂ ತಿಳಿಯುವದೂ ಸಾಧ್ಯವಲ್ಲ ಆದರೆ ನೀವು ಎಚ್ಚರವಾದರೆ, ಎಲ್ಲವೂ ಒಮ್ಮೆಗೇ ಮಾಯವಾಗುತ್ತವೆ, ಕರಗಿ ಹೋಗುತ್ತವೆ, ಕಾಣದಾಗುತ್ತವೆ. ನಿಜವೇನೆಂಬದು ನಿಮಗೇ ತಿಳಿಯುತ್ತದೆ.

ಹೀಗೆಯೇ ಈ ಪ್ರಪಂಚದಲ್ಲಿ ಬಗೆಬಗೆಯ ವಸ್ತುಗಳನ್ನು ಕಾಣುತ್ತಿದ್ದೇವೆ ಇವೆಲ್ಲಾ ನಿಜವಾಗಿಯೇ ಕಾಣುತ್ತವೆ ಕನಸಿನಲ್ಲಿಯೂ ಯಾವದಕ್ಕೂ ಕೊನೆಯೇ ಕಾಣದಿರುವಂತೆ ಎಚ್ಚರದಲ್ಲಿ ಕಾಣುವ ಈ ಪ್ರಪಂಚಕ್ಕೂ ಕೊನೆಯೇ ಕಾಣುವದಿಲ್ಲ. ಈ ಎಚ್ಚರದ ದೊಡ್ಡ ಕನಸೂ ಯಾವಾಗ ಮೊದಲಾಯಿತೆಂಬದು ತಿಳಿಯುವದಿಲ್ಲ ಕಾಲವು ಯಾವಾಗ ಆರಂಭವಾಯಿತೆನ್ನುವದನ್ನು ಹೇಳಬಲ್ಲಿರಾ ? ಕ್ಯಾಂಟ್ ಮಹಾಶಯನೂ ಈ ಪರಸ್ಪರ ಭಾವವಿರೋಧವನ್ನೂ ಅಸಂಗತಿಯನ್ನೂ ತೋರಿಸಿಕೊಟ್ಟನು. ಕಾಲವು ಮೊದಲಾದುದು ಯಾವಾಗ ? ಎನ್ನುವ ಪ್ರಶ್ನೆಗೆ, ಕಾಲವು ಇಂಥಾ ಕಾಲದಲ್ಲಿ ಆರಂಭವಾಯಿತು, - ಎಂದೇ ಹೇಳಬೇಕು. ಇದು ಅನಿವಾರ್ಯ. ಹೀಗೆ ಹೇಳುವದಾದರೆ, ಕಾಲವನ್ನು ಮೀರಿ, ಕಾಲದ ಆಚೆ ಎಲ್ಲಿಗೋ ಹೋಗಬೇಕೆಂದು ಬಯಸಿ ಸಾಧ್ಯವಿಲ್ಲದೆ, ಪುನಃ ಕಾಲದಲ್ಲಿಯೇ ಸಿಕ್ಕಿಕೊಂಡಂತೆ ಆಗುತ್ತದೆ. ದೇಶವು (Space) ಅಥವಾ ಆಕಾಶವು ಪ್ರಾರಂಭವಾದುದೆಲ್ಲಿ ? ಈ ಪ್ರಶ್ನೆಯೂ

ಇದಕ್ಕೆ ಉತ್ತರವೂ ಸಾಧ್ಯವಲ್ಲ, ಏಕೆಂದರೆ, ದೇಶವು ಇಲ್ಲಿ ಉಪಕ್ರಮವಾಯಿತು, ಎನ್ನುವಾಗ ದೇಶದ ಆಚೆ ಯಾವದೊಂದು ದೇಶದಲ್ಲಿಯೋ–ಸ್ಥಳದಲ್ಲಿಯೋ–ನಾವು ಒಂದು ಬಿಂದುವನ್ನಿಡಬೇಕು. ಇದು ಅಪರಿಹಾರ್ಯ. ದೇಶವನ್ನು ಮೀರಿ ಆಚೆ ಎಲ್ಲಿಗೋ ಹೋಗಬೇಕೆಂದು ಹೊರಟು ಮತ್ತೆ ದೇಶದಲ್ಲಿಯೇ ಸಿಕ್ಕಿಕೊಳ್ಳುತ್ತೇವೆ. ಕಾಲ-ದೇಶಗಳ ಆಚೆ ಯಾವಾಗ—ಎಲ್ಲಿ ಎನ್ನುವ ಪ್ರಶ್ನೆಗಳನ್ನು ಇಡುವುದಕ್ಕೆ ಹೊರಟು, ಈ ಪ್ರಶ್ನೆಗಳ ಆಚೆಯೂ ಕಾಲ–ದೇಶಗಳೇ ಇರುವದನ್ನು ಕಂಡು, ಜಾಣರಾದರೆ ನಗುತ್ತೇವೆ, ಇಲ್ಲವಾದರೆ ದಿಗ್ಭ್ರಾಂತರಾಗುತ್ತೇವೆ ಕಾಲ–ದೇಶಗಳ ಆರಂಭವು ಯಾವಾಗ–ಎಲ್ಲಿ ಎಂಬ ಕಲ್ಪನೆಗಳಿಂದಲೂ ಯಾವಾಗ–ಎಲ್ಲಿ ಎಂಬ ಭಾವನೆಗಳು ಕಾಲ–ದೇಶ ಕಲ್ಪನೆಗಳಿಂದಲೂ ಸುತ್ತುವರಿಯಲ್ಪಟ್ಟಿವೆ. ಆದ್ದರಿಂದ ಈ ಪ್ರಶ್ನೋತ್ತರಗಳು ಅಸಂಭವ. ಹೀಗೆಯೇ ಕಾರಣಕಾರ್ಯ ಪರಂಪರೆಯ ಸರ ಪಳಿಯೂ ಇದೆ ಈ ಸರಪಳಿಯು ಮೊದಲಾದುದು ಎಲ್ಲಿ? ಯಾವಾಗ ? ಏಕೆ ? ಈ ಪ್ರಶ್ನೆಗಳೂ ಅಸಂಭವ; ಇವಕ್ಕೆ ಉತ್ತರವೂ ಅಸಾಧ್ಯ. ಅನಂತವಾದ ಕಾರಣ-ಕಾರ್ಯ ಪರಂಪರೆಯಲ್ಲಿ ಪ್ರತಿಯೊಂದು ಕಾರ್ಯವೂ ಅದರ ಮುಂದಿನ ಕಾರ್ಯಕ್ಕೆ ಕಾರಣವಾಗಿಯೇ ಇರುತ್ತದೆ ಯಾವದೊಂದನ್ನು ಕಾರಣವೆಂದು ತೆಗೆದುಕೊಂಡರೆ ಅದು ತನ್ನ ಹಿಂದಿನ ಕಾರಣದಿಂದ ಕಾರ್ಯವೇ ಆಗಿರುತ್ತದೆ ಈ ವೃತ್ತಾಕಾರದ ಸರಪಳಿಯಲ್ಲಿ ಇದು ಸರ್ವಕ್ಕೂ ಮೂಲ ಕಾರಣ, ಎಂಬ ಆದಿಯೂ ಇಲ್ಲ ಈ ಪರಸ್ಪರ ಪರಿಣಾಮ ಪರಂಪರೆಯು ಇಲ್ಲಿಗೇ ಮುಗಿಯಿತು, ಎಂಬ ಕೊನೆಯೂ ಇಲ್ಲ ಎಲ್ಲಿ? ಯಾವಾಗ? ಏಕೆ? ಎಂಬೀ ಪ್ರಶ್ನ ಕಲ್ಪನೆಗಳೂ ಕಾರ್ಯಕಾರಣ ನಿಯಮದೊಳಗೇ ಸಿಕ್ಕಿಕೊಂಡಿವೆ. ಉತ್ತರಿಸಲಾಗದ ಪ್ರಶ್ನೆ ಇವು. ದೇಶ-ಕಾಲ-ನಿಮಿತ್ತಗಳಿಗೆ (ಕಾರ್ಯ-ಕಾರಣಗಳಿಗೆ) ಈ ಕಡೆಯಾಗಲೀ ಆ ಕಡೆಯಾಗಲೀ ಕೊನೆಯೆಂಬುದೇ ಇಲ್ಲ. ಷೋಪೆನ್ ಹೋವರ್, ಮತ್ತು ಹೆರ್‌ಬೆರ್ಟ್ ಸ್ಪೆನ್ಸರ್ ಮೊದಲಾದವರು ಇದನ್ನು ಯುಕ್ತಿ-ವಿಚಾರಗಳಿಂದ ತೋರಿಸಿಕೊಟ್ಟಿದ್ದಾರೆ ಇವಕ್ಕೆ ಕೊನೆಯೇ ಇಲ್ಲವೆಂದು ಪ್ರತಿಯೊಬ್ಬ ವಿಚಾರಕನೂ ತೋರಿಸಬಹುದು ಕನಸಿನಲ್ಲಿಯೂ ಅಷ್ಟೆ ಕನಸಿನಲ್ಲಿ ನೀವು ಕಾಣುತ್ತಿರುವ ಕನಸಿನ ವಿಶಿಷ್ಟ ಜಾತಿಯ ಕಾಲಕ್ಕೂ ದೇಶಕ್ಕೂ ಕಾರ್ಯ-ಕಾರಣ ಪರಂಪರೆಗೂ ಕೊನೆಯುಂಟೆ ? ಕನಸಿನಲ್ಲಿರುವವರೆಗೂ ಇಲ್ಲವೇ ಇಲ್ಲ, ಕೊನೆಯೇ ಇಲ್ಲ .

ಎಚ್ಚರದ ವಿಚಾರವೂ ಹೀಗೆಯೇ. ಈ ಪ್ರಶ್ನೆಗಳಿಗೆ ಲೌಕಿಕವಾದ ಅನುಭವದ ವ್ಯವಹಾರ ದೃಷ್ಟಿಯಿಂದ ಉತ್ತರ ಹೇಳಲು ಪ್ರಯತ್ನಮಾಡುವವರು ದಾರಿ ತಪ್ಪುತ್ತಾರೆ ಮಂಡಲಾಕಾರದಲ್ಲಿ ತರ್ಕಮಾಡುತ್ತಾ ಸುತ್ತಿ ಸುತ್ತಿ ಹೊರಟಲ್ಲಿಗೇ ಬಂದು ದಿಗ್ಭ್ರಮೆಗೊಳ್ಳುತ್ತಾರೆ. ಈ ಸಮಸ್ಯೆಗಳಿಗೆ ವ್ಯಾವಹಾರಿಕ ದೃಷ್ಟಿಯು

ಯಾವ ಸಮಾಧಾನವೂ ಪ್ರಯೋಜನವಾಗುವದಿಲ್ಲ, ಸಾಧ್ಯವೂ ಇಲ್ಲ ಕನಸು ಕಾಣುತ್ತಿರುವವನು ಎಚ್ಚರಗೊಂಡ ಕೂಡಲೇ ಇಡೀ ಸಮಸ್ಯೆಯೇ ಪರಿಹಾರ ವಾಗುತ್ತದೆ. ಎಚ್ಚರವಾದ ಮೇಲೆ, ಕನಸು ಕಂಡವನು 'ಓ! ಅದೆಲ್ಲಾ ಬರೀ ಕನಸಾಗಿತ್ತು ; ಅದು ಯಾವುದೂ ನಿಜವಾಗಿರಲಿಲ್ಲ'; ಎಂದು ಉದ್ಗಾರಮಾಡುತ್ತಾನೆ.

ಹೀಗೆಯೇ, ವೇದಾಂತವು ಎಲ್ಲರೆದುರಿಗೂ ಎತ್ತಿಹಿಡಿದು ತೋರಿಸುತ್ತಿರುವ ಕೈವಲ್ಯದ (ಮೋಕ್ಷದ) ಆ ಪರಿಪೂರ್ಣ ಸ್ಥಿತಿಯನ್ನು ಪಡೆದು ಸತ್ಯವನ್ನರಿತು ಎಚ್ಚರ ಗೊಂಡರೆ, ಈ ಎಲ್ಲಾ ಪ್ರಪಂಚವೂ ಬರಿ ತಮಾಷೆ, ಆಟದ ವಸ್ತು, ಕೇವಲ ಭ್ರಮೆಯೇ ಹೊರತು ಬೇರೇನೂ ಅಲ್ಲ — ಸತ್ಯವಲ್ಲ ಎನ್ನುವದು ನಿಮಗೇ ಅನುಭವಕ್ಕೆ ಬರುತ್ತದೆ.

ಮಾಯಾ ವಿಷಯವಾದ ಇದೇ ಪ್ರಶ್ನೆಯನ್ನು ಈ ರೀತಿಯಲ್ಲಿಯೂ ಹಾಕು ತ್ತಾರೆ "ಮನುಷ್ಯನು ದೇವರೇ ಆದರೆ ಅವನು ತನ್ನ ನಿಜಸ್ವಭಾವವನ್ನು ಏಕೆ ಮರೆಯಬೇಕು ?" ಎಂದು ವೇದಾಂತದ ಉತ್ತರವೇನೆಂದರೆ, "ನಿಮ್ಮಲ್ಲಿರುವ ನಿಜವಾದ ದೇವರು ತನ್ನ ನಿಜಸ್ವರೂಪವನ್ನು ಎಂದೂ ಮರೆತಿಲ್ಲ. ನಿಮ್ಮಲ್ಲಿರುವ ನಿಜವಾದ ದೇವರು ತನ್ನ ನಿಜವನ್ನು ತಾನು ಮರೆತಿದ್ದರೆ, ಅವನು ಎಲ್ಲಾ ಕಾಲದಲ್ಲಿಯೂ ಈ ವಿಶ್ವವನ್ನು ನಿಯಂತ್ರಿಸುತ್ತಲೂ ಆಡಳಿತ ನಡೆಸುತ್ತಲೂ ಆಳುತ್ತಲೂ ಇರುತ್ತಿರಲಿಲ್ಲ ನಿಜವಾದ ದೇವರು ಎಂದೂ ಮರೆತೇ ಇಲ್ಲ" ಹಾಗಾದರೆ ಮರೆತಿರುವವನು ಯಾರು? ಯಾರೂ ಮರೆತಿಲ್ಲ. ಇದೆಲ್ಲಾ ಒಂದು ಕನಸಿನಂತಿದೆ ಕನಸಿನಲ್ಲಿ ನೀವು ಬೇರೆ ಬೇರೆ ವಸ್ತುಗಳನ್ನು ಕಾಣುವಾಗ, ಅವನ್ನು ನೋಡುತ್ತಿರುವವರು ನಿಜವಾದ ನೀವಲ್ಲ; ಕನಸಿ ನಲ್ಲಿರುವ ವಿಷಯಿಯೇ ಜ್ಞಾತೃವೇ (ತೈಜಸನೇ) ಕನಸಿನ ದೃಶ್ಯ (ವಿಷಯ)ವನ್ನು ನೋಡುತ್ತಿದ್ದಾನೆ ಕನಸಿನಲ್ಲಿ ದ್ರಷ್ಟಾ (ನೋಡುವವ)ನೂ ದೃಶ್ಯವೂ ಜ್ಞಾತೃವೂ ಜ್ಞೇಯವೂ ಒಟ್ಟಿಗೆ ತೋರಿಕೊಳ್ಳುತ್ತವೆ. ಕನಸಿನಲ್ಲಿ ದ್ರಷ್ಟಾನೇ ದೃಶ್ಯವಾದ ನದಿಗಳನ್ನೂ ಪರ್ವತಗಳನ್ನೂ ಅರಣ್ಯಗಳನ್ನೂ ನೋಡುತ್ತಾ ಸಂಚರಿಸುತ್ತಾ ವಾಸ ಮಾಡುತ್ತಾ ಸುಖದುಃಖಗಳನ್ನು ಅನುಭವಿಸುತ್ತಾನೆ ನಿಜವಾದ ಆತ್ಮನು ಸಾಕ್ಷಿಯಾಗಿ ಎಲ್ಲಕ್ಕೂ ನಿರ್ವಿಕಾರವಾದ ಅಧಿಷ್ಠಾನವಾಗಿರುತ್ತಾನೆ ಅವನ ಬೆಳಕಿನಿಂದಲೇ ಕನಸಿನ ದ್ರಷ್ಟಾ-ದೃಶ್ಯಗಳ ಪ್ರಪಂಚವಿಲಾಸವೆಲ್ಲಾ ತೋರುತ್ತದೆ ಅವನೇ ಗಾಢನಿದ್ರೆ ಯಲ್ಲಿಯೂ ಎಚ್ಚರದಲ್ಲಿಯೂ ಸಹ ಸರ್ವದಾ ಸಾಕ್ಷಿಯಾಗಿದ್ದಾನ ಅವನೇ ನಿಜವಾದ ನೀವು ಆ ನಿಜವಾದ ಆತ್ಮನು, ನಿಜವಾದ ದೇವರು ಯಾವದನ್ನೂ ಎಂದೂ

ಮರೆತಿಲ್ಲ 'ನಾನು' ಎನ್ನುವ ಸುಳ್ಳು ಭಾವನೆಯೇ ಮಾಯೆಯ ಸೃಷ್ಟಿ. ಎಚ್ಚರ-ಕನಸುಗಳಲ್ಲಿ ತೋರುವ ಮಿಕ್ಕ ಎಲ್ಲಾ ವಸ್ತುಗಳಂತೆಯೇ 'ನಾನು' ಎನ್ನುವ ಅರಿವೂ (ಅಥವಾ ಕಲ್ಪನೆಯೂ) ಭ್ರಾಂತಿಜನ್ಯವಾದುದು. ನಿಜವಾದ ಆತ್ಮನು ಯಾವದನ್ನೂ ಮರೆತಿಲ್ಲ ನೀವು ಹೀಗೆ ಪ್ರಶ್ನೆ ಮಾಡಬಹುದು · "ದೇವರು ತನ್ನನ್ನು ತಾನು ಮರೆತು ಏಕೆ ಮನುಷ್ಯನಾದ ? ದೇವರು ತನ್ನನ್ನು ತಾನು ಮರೆತು 'ನಾನು, ನಾನು' ಎನ್ನುವ ಅಲ್ಪಜೀವ ಏಕಾದ ? ವೇದಾಂತವು ಹೇಳುವದೇನೆಂದರೆ, "ತಾರ್ಕಿಕರು ಹೇಳುವಂತೆ ಈ ನಿನ್ನ ಪ್ರಶ್ನೆಯಲ್ಲಿ ಹೇತ್ವಾಭಾಸ ಅಥವಾ ತರ್ಕದೋಷವಿದೆ. ಇದೊಂದು ವ್ಯತ್ಯಾಕಾರದಲ್ಲಿ ಸುತ್ತುತ್ತಿರುವ ವಿಚಾರದೋಷ, ತರ್ಕಭ್ರಮೆ. ಈ ಪ್ರಶ್ನೆಯನ್ನು ನೀನು ಯಾರಿಗೆ ಹಾಕುತ್ತಿ ? ಈ ಪ್ರಶ್ನೆಯನ್ನು ಕನಸಿನ ಜೀವನಿಗೆ (ದ್ರಷ್ಟಾನಿಗೆ, ತೈಜಸನಿಗೆ) ಹಾಕುತ್ತಿಯೋ ? ಎಚ್ಚರದ ಜೀವನಿಗೆ (ದ್ರಷ್ಟಾನಿಗೆ, ವಿಶ್ವನಿಗೆ) ಹಾಕುತ್ತಿಯೋ ? ಕನಸಿನ ಜೀವನಿಗೆ ಎಂದರೆ, ಕನಸಿನ ಜೀವನು ಕನಸಿನ ಪ್ರಪಂಚದಲ್ಲಿಯೇ ಇರತಕ್ಕವನು. ಅವನೂ ಅವನ ದೃಶ್ಯವೂ ಒಂದೇ ಜಾತಿಯ ಸೃಷ್ಟಿ. ಅವನನ್ನು ಪ್ರಶ್ನೆಮಾಡತಕ್ಕವನೂ ಕನಸಿನವನೇ ಆಗಿ ಕನಸಿನಲ್ಲಿಯೇ ಇರಬೇಕು ಆದ್ದರಿಂದ ಎಚ್ಚರದಲ್ಲಿರುವ ನೀನು ಕನಸಿನ ಜೀವನಿಗೆ ಪ್ರಶ್ನೆಹಾಕಲಾರೆ ನೀನೂ ಕನಸಿನಲ್ಲಿಯೇ ಪ್ರಶ್ನೆಹಾಕುವದಾಗಿ ಹೇಳಿದರೆ, ನಿನ್ನ ಎಲ್ಲಾ ಪ್ರಶ್ನೆಗಳಿಗೂ ಎಚ್ಚರವಾಗುವದೇ ಉತ್ತರ. ಏಕೆಂದರೆ, ಕನಸು ಕಾಣುತ್ತಿರುವವರೆಗೂ ನಿಜವಾದ ಉತ್ತರವು ಸಾಧ್ಯವಲ್ಲ ಎಚ್ಚರವಾದೊಡನೆ ಕನಸಿನ ಜೀವನೇ ಇಲ್ಲ; ಪ್ರಶ್ನೆ ಕೇಳಿದವನೂ ಇಲ್ಲ; ಉತ್ತರದ ಅಗತ್ಯವೂ ಇಲ್ಲ. ಇನ್ನು ಎಚ್ಚರದ ಜೀವನಿಗೆ ಅದನ್ನು ಕೇಳುವೆನೆಂದರೆ, ಮಾಯಾ ಸೃಷ್ಟಿ ಎಂಬೀ ದೀರ್ಘ ಸ್ವಪ್ನವು ಇರುವವರೆಗೆ ಮಾತ್ರ ಈ ಕೇಳುವ-ಹೇಳುವ ದ್ವೈತವು ಇರಬಲ್ಲದು ; ಮತ್ತು ತಪ್ಪುವದೇ ಇಲ್ಲ. ನೀವು, ಅನಾದಿಯಾದ ಈ ಮಾಯಾ ನಿದ್ರೆಯಲ್ಲಿ "ನಾನು ಅಲ್ಪ ಜೀವ, ಮನುಷ್ಯ, ನಿತ್ಯವೂ ಎಚ್ಚರ, ಕನಸು, ನಿದ್ರೆ ಎಂಬ ಮೂರು ಅವಸ್ಥೆಗಳನ್ನು ನಾನು ಪಡೆಯುತ್ತಿದ್ದೇನೆ" ಎಂದು ಮೊದಲಾಗಿ ಕನಸು ಕಾಣುತ್ತಿರುವ ಎಚ್ಚರದ ಭ್ರಮೆಯಲ್ಲಿರುವ ಜೀವನಿಗೆ, ಈ ಪ್ರಶ್ನೆಯನ್ನು ಹಾಕಬಹುದು. ನೀವೂ ಅದೇ ಭ್ರಮೆಯಲ್ಲಿ ತೊಳಲಾಡುತ್ತಿರುವವರು ; ಅದೇ ಜಾತಿಗೆ ಸೇರಿದವರು. ಆದ್ದರಿಂದ ಸರಿಹೋಗುತ್ತದೆ. ಆದರೆ ನೀವಿಬ್ಬರೂ ಕನಸುಕಾಣುತ್ತಿರುವವರೆಗೂ ನಿಮ್ಮ ಪ್ರಶ್ನೆಗೆ ಸರಿಯಾದ ಉತ್ತರವು ಸಾಧ್ಯವಿಲ್ಲವೆಂಬುದನ್ನೂ ನೀವು ಎಚ್ಚರವೆಂದು ತಿಳಿದಿರುವದೂ ಕನಸೇ ಎಂಬದನ್ನೂ ಮರೆಯಬೇಡಿ ನಿಮ್ಮಿಬ್ಬರಿಗೂ, ಮಾಯಾನಿದ್ರೆಯನ್ನು ಕಳೆದು, ನಿಜವಾದ ಎಚ್ಚರವಾದರೆ, ಕನಸಿನ ಜೀವನನ್ನು ಕಳೆದರೆ ಸುರುಳಿ ಬಿಚ್ಚಿ ತೋರಿದಂತೆ ಕಾಣುವ ಕನಸಿನ ದೃಶ್ಯಜಾಲವೆಲ್ಲಾ ಕರಗಿಹೋಗುತ್ತದೆ. ಪ್ರಶ್ನೆ ಕೇಳುವವನೂ ಇಲ್ಲ,

ಉತ್ತರ ಹೇಳತಕ್ಕವನೂ ಇಲ್ಲ ಯಾರು ಯಾರನ್ನು ಏನೆಂದು ಕೇಳಬೇಕು ? ಎರಡೆಂಬದೇ ಇಲ್ಲ. ವಿಷಯಿ-ವಿಷಯಗಳೆಂಬ ದ್ವೈತದಲ್ಲಿ ಮಾಡುವ ತರ್ಕವೆಲ್ಲಾ ಬಿಡಿಸಲಾಗದ ವೃತ್ತದಲ್ಲಿಯೇ ಸುತ್ತಿ ತಿರುಗುತ್ತಿರುವ ತರ್ಕ. ಬೆಳಕಿನಲ್ಲಿ ಕತ್ತಲೆಯಿಲ್ಲ ದಿರುವಂತೆ ಅರಿವಿನ ಸ್ವರೂಪವೇ ಆದ ದೇವರಲ್ಲಿ ಮರವೆ ಬರುವದು ಹೇಗೆ? ದೇವರು ತನ್ನನ್ನು ತಾನು ಮರೆಯುವದು ಸಾಧ್ಯವೆ ? ತನ್ನನ್ನು ತಾನು ಮರೆತವನು ದೇವರಾಗ ಬಲ್ಲನೆ ? ಹಾಗಾದರೆ ದೇವರು ತನ್ನನ್ನು ತಾನು ಮರೆಯದೆ ಮನುಷ್ಯ ಹೇಗಾದ ? ಮನುಷ್ಯ ದೇವರಲ್ಲವೇ ? ದೇವರೇ ಮನುಷ್ಯನಾಗಿಲ್ಲವೆ ? ಇದೇ ಪರಿಹಾರ ಕಾಣದ ವರ್ತುಲ ತರ್ಕ.

ಇಲ್ಲಿ ಒಂದು ಚಿತ್ರವಿದೆ ಇದರಲ್ಲಿ ಒಂದು ನದಿಯು ಹರಿಯುತ್ತಿದೆ. ಅಂಬಿಗನು ದೋಣಿಯನ್ನು ನಡೆಸುತ್ತಾ, ನದಿಯನ್ನು ದಾಟಿಸುತ್ತಿದ್ದಾನೆ. ಒಂದು ಮಗುವಿಗೆ ಈ ಚಿತ್ರವನ್ನು ತೋರಿಸುವಾಗ "ನೋಡು ಮಗು, ಇಲ್ಲಿ ಒಂದು ದೊಡ್ಡ ನದಿಯು ವೇಗವಾಗಿ ಹರಿಯುತ್ತಿದೆ ಇದು ಬಹಳ ಆಳವಾಗಿಯೂ ಇದೆ. ಅನೇಕ ಜನರು ಈ ನದಿಯ ಈಚೆಯ ದಂಡೆಯಿಂದ ದಾಟಿ ಆಚೆಯ ದಂಡೆಯಲ್ಲಿರುವ ತಮ್ಮ ಊರಿಗೆ ನಿತ್ಯವೂ ಹೋಗಬೇಕಾಗಿರುತ್ತದೆ ನದಿಯಲ್ಲಿ ಇಳಿದರೆ ಮುಳುಗಿ ಹೋಗುತ್ತಾರೆ. ದೋಣಿಯ ಯಜಮಾನನಾದ ಅಂಬಿಗನು ಬಹಳ ಒಳ್ಳೆಯವನು. ಅವನಿಗೆ ನಿತ್ಯವೂ ಪ್ರತಿಯೊಬ್ಬರೂ ಈಚೆಯ ದಂಡೆಯಲ್ಲಿ ತಮ್ಮ ಕೆಲಸವನ್ನು ಮುಗಿಸಿ ಕೊಂಡ ಮೇಲೆ ಕೆಲವು ಪೈಸಾಗಳನ್ನು ಕೊಟ್ಟರೆ ಎಲ್ಲರನ್ನೂ ತನ್ನ ದೋಣಿಯಲ್ಲಿ ಕೂರಿಸಿಕೊಂಡು, ಹುಟ್ಟುಹಾಕಿ ದೋಣಿಯನ್ನು ನಡೆಸಿಕೊಂಡು ಹೋಗಿ ಸುರಕ್ಷಿತವಾಗಿ ಆಚೆಯ ದಂಡೆಗೆ ಬಿಡುತ್ತಾನೆ. ಆದರೆ, ನದಿಯಲ್ಲಿ ಹೋಗುತ್ತಿರುವಾಗ ಎಲ್ಲರ ಪ್ರಾಣವೂ ಆ ಅಂಬಿಗನ ಕೈಯಲ್ಲಿರುತ್ತದೆ. ಅವನು ಬೇಕಾದರೆ ಎಲ್ಲರನ್ನೂ ನದಿಯಲ್ಲಿ ಮುಳುಗಿಸಿ ಸಾಯಿಸಬಹುದು. ಅವನು ದೇವರಂಥ ಮನುಷ್ಯ ; ಬಹಳ ಒಳ್ಳೆಯವನು ಆದ್ದರಿಂದ ಅವನು ಜಾಗರೂಕವಾಗಿ ದೋಣಿಯನ್ನು ನಡೆಸಿಕೊಂಡು ಹೋಗಿ ದಯೆಯಿಂದ ಎಲ್ಲರನ್ನೂ ದಾಟಿಸುತ್ತಾನೆ. " ಎಂದು ಮೊದಲಾಗಿ ಆ ಚಿತ್ರದಲ್ಲಿರುವ ನದಿಯೂ ಜನರೂ ದೋಣಿಯೂ ಎಲ್ಲರ ಪ್ರಾಣವನ್ನೂ ಉಳಿಸುವ ಜಾಣ ಯಜಮಾನನಾದ ಅಂಬಿಗನೂ ಎಲ್ಲವೂ ಸತ್ಯ ಸತ್ಯ ಎನ್ನುವಂತೆ ಮಗುವಿಗೆ ವಿವರಿಸುತ್ತೇವೆ. ಆದರೆ ಅದು ಕೇವಲ ಚಿತ್ರವೆಂದೂ ಅದರಲ್ಲಿರುವ ಯಾವದೂ ನಿಜವಲ್ಲವೆಂದೂ ನಾವು ತಿಳಿದಿರುತ್ತೇವೆ. ಚಿತ್ರದಲ್ಲಿರುವ ದೇವರಂಥ ಅಂಬಿಗನು ಹೆಚ್ಚು ನಿಜವಲ್ಲ. ಅದರಲ್ಲಿರುವ ದೋಣಿಯಷ್ಟೇ ನಿಜ. ಮಿಕ್ಕ ಜನರೂ ನದಿಯೂ ಅವರ ಬದುಕೂ ಸಾವೂ ಎಲ್ಲಾ ಅಷ್ಟೇ ನಿಜ. ಅದೆಲ್ಲಾ ಚಿತ್ರವೆಂದು

ತಿಳಿದಿರುವ ನಮಗೆ ಆ ಎಲ್ಲವೂ ಸುಳ್ಳು. ಆದರೆ ಆ ಮಗುವಿಗೆ ಮಾತ್ರ ಎಲ್ಲವೂ ನಿಜ.

ಹೀಗೆಯೇ ವೇದಾಂತದ ಪ್ರಕಾರ, ಚಿತ್ರದಲ್ಲಿ ದೋಣಿಗೂ ಅಂಬಿಗನಿಗೂ ಇರುವ ಸಂಬಂಧವೇ ಜಗತ್ತಿಗೂ ಸೃಷ್ಟಿಕರ್ತನಾದ ದೇವರಿಗೂ ಇದೆ. ದೋಣಿ ಇರುವವರೆಗೂ ಅಂಬಿಗನೂ ಇರಬೇಕು ಜಗತ್ತು ಇರುವವರೆಗೂ ಜಗದೀಶ್ವರನೂ ಇರಬೇಕು ದೋಣಿಯನ್ನು ನಾವು ಸುಳ್ಳೆಂದು ಅರಿತಾಗ ಅಂಬಿಗನೂ ಕಣ್ಮರೆಯಾಗುತ್ತಾನೆ.

ಇದೇ ರೀತಿಯಲ್ಲಿ ನಿಮಗೆ ಪ್ರಪಂಚವು ಸತ್ಯವಾಗಿರುವವರೆಗೂ ಈ ಪ್ರಪಂಚವನ್ನು ಸೃಷ್ಟಿಮಾಡಿರುವವನೂ ಸಂರಕ್ಷಿಸುತ್ತಿರುವವನೂ ನಿಯಂತ್ರಿಸುವವನೂ ಆಳುತ್ತಿರುವವನೂ ಆದ ಪರಮೇಶ್ವರನೂ ಸತ್ಯವಾಗಿರುತ್ತಾನೆ ನಿಮಗೆ ಪ್ರಪಂಚವು ಸುಳ್ಳೆಂದು ತಿಳಿದಾಗ ಪರಮೇಶ್ವರನೂ ಸುಳ್ಳಾಗುತ್ತಾನೆ ಸೃಷ್ಟಿಯ ಕಲ್ಪನೆಯು ಸೃಷ್ಟಿಕರ್ತನನ್ನೂ ಕಲ್ಪಿಸುತ್ತದೆ ಯಾರು ? ಏಕೆ ? ಯಾವಾಗ ? ಮೊದಲಾದ ಕಲ್ಪನೆಗಳೂ ಜೊತೆಗೂಡುತ್ತವೆ ಪ್ರಪಂಚದ ಸೃಷ್ಟಿಕರ್ತ ಯಾರು? ಸೃಷ್ಟಿಯ ಆರಂಭ ಯಾವಾಗ ? ಏತಕ್ಕಾಗಿ ? ಮೊದಲಾದ ಕಲ್ಪನೆಗಳಿಗೂ ಪ್ರಪಂಚಕ್ಕೂ ಇರುವ ಸಂಬಂಧವು ಚಿತ್ರದಲ್ಲಿರುವ ಅಂಬಿಗನಿಗೂ ದೋಣಿಗೂ ಇರುವ ಸಂಬಂಧದಂತೆಯೇ ಇದೆ ಆ ಎರಡೂ ಒಂದು ಇಡಿಯ ಚಿತ್ರದ ಭಾಗಗಳು ಚಿತ್ರದ ದೋಣಿಗೂ ಅಂಬಿಗನಿಗೂ ಇರುವ ಬೆಸೆಯೇ ಮಾಯಾ ಚಿತ್ರದಲ್ಲಿರುವ ಪ್ರಪಂಚಕ್ಕೂ ಪರಮೇಶ್ವರನಿಗೂ ಇದೆ ಅದೂ ಭ್ರಮೆಯೇ ಇದೂ ಭ್ರಮೆಯೇ. ಏಕೆ ? ಯಾವಾಗ ? ಏತಕ್ಕಾಗಿ ? ಎಂಬ ಪ್ರಶ್ನೆಗಳೂ ಭ್ರಮೆಯೇ ಈ ಪ್ರಶ್ನೆಯಲ್ಲಿ ದೋಣಿಯನ್ನು ನಡೆಸುವ ಅಂಬಿಗನಂತೆ ಪ್ರಪಂಚವನ್ನು ನಡೆಸುವ ಈಶ್ವರ. ನಿಮಗೆ ಎಚ್ಚರವಾಗಿ ಸತ್ಯವನ್ನರಿತರೆ ಇಡಿಯ ಜಗತ್ತು ಪರದೆಯ ಮೇಲೆ ಚಿತ್ರದಲ್ಲಿ ಬರೆದಿರುವ ದೋಣಿಯಂತೆ ಆಗಿ ಚಾಲಕ (ಅಂಬಿಗ) ವಾಗಿದ್ದ ಯಾರು, ಯಾವಾಗ, ಏತಕ್ಕಾಗಿ ಎಂಬ ಪ್ರಶ್ನೆಗಳು ಮಾಯವಾಗುತ್ತವೆ ದೇಶ-ಕಾಲ-ನಿಮಿತ್ತಗಳನ್ನು ಮೀರಿ ಆಚೆ ಇರುವ ಸತ್ಯಸ್ವರೂಪದಲ್ಲಿ ಈ ಪ್ರಶ್ನೆಗಳೇ ಇಲ್ಲ ಜಗತ್ತಿನ ಸೃಷ್ಟಿಗೆ ಸಗುಣೇಶ್ವರನು ಕಾರಣನೆಂದು ಅನೇಕ ಮತಧರ್ಮ ಶಾಸ್ತ್ರಜ್ಞರು ಹೇಳಬಹುದು. ವೇದಾಂತವು 'ನೇತಿ, ನೇತಿ' ಅಲ್ಲ, ಅಲ್ಲ ಎನ್ನುತ್ತದೆ ಸಂಸ್ಕೃತದ ವೇದಾಂತ ಭಾಷೆಯಲ್ಲಿ ನೇತಿ ಎನ್ನುವ ಶಬ್ದವು ಪದೇ ಪದೇ ಅನೇಕಸಲ ಬರುತ್ತದೆ. ಇದು ಅಪಭ್ರಂಶವಾಗಿ ಅಮೇರಿಕಾ ಜನರಲ್ಲಿ 'Nit' (not that) ಅದಲ್ಲ

ಎಂದಾಗಿದೆ. ದೇವರ ವಿಷಯದಲ್ಲಿ ಯಾವ ಪ್ರಶ್ನೆಗಳಿಗೂ ಅವಕಾಶವಿಲ್ಲ ; ಯಾವ ಉತ್ತರವೂ ಸಾಧ್ಯವಿಲ್ಲವೆಂದು ನೇತಿ ನೇತಿ ಸೂಚಿಸುತ್ತದೆ

ಇನ್ನು ಕೆಲವರು ತತ್ತ್ವ ವಿಚಾರಕರು " ದೇವರು ತನ್ನನ್ನು ತಾನು ಪ್ರೇಮಿಸಲು ತೊಡಗಿ ಈ ಪ್ರಪಂಚವನ್ನು ಸೃಷ್ಟಿ ಮಾಡಿದನು ಈ ಪ್ರಪಂಚವನ್ನು ಕನ್ನಡಿಯ ಮನೆಯಂತೆ ಮಾಡಿಕೊಂಡು ಈ ಎಲ್ಲಾ ರೂಪಗಳಲ್ಲಿಯೂ ತನ್ನನ್ನೇ ತಾನು ನೋಡಿ ಕೊಳ್ಳುವದಕ್ಕಾಗಿ ದೇವರು ಈ ಜಗತ್ತನ್ನು ನಿರ್ಮಾಣ ಮಾಡಿದನು " ಎನ್ನುತ್ತಾರೆ.
ಇದಕ್ಕೂ ವೇದಾಂತವು 'ನೇತಿ, ನೇತಿ' ಅಲ್ಲ, ಅಲ್ಲ ಎನ್ನುತ್ತದೆ, ' ಆ ಬಗೆಯ ಕಲ್ಪನೆ ಮಾಡುವದಕ್ಕೆ ನಿಮಗೆ ಅಧಿಕಾರವಿಲ್ಲ,' ಎನ್ನುತ್ತದೆ.

ಇನ್ನೊಬ್ಬ ಮನುಷ್ಯನು ಬಂದು ' ಈ ಪ್ರಪಂಚವು ಇಷ್ಟು ಕೋಟಿ ವರ್ಷಗಳ ಹಿಂದ ಸೃಷ್ಟಿಯಾಯಿತು ' ಎನ್ನಬಹುದು ಇದಕ್ಕೂ ವೇದಾಂತವು 'ನೇತಿ, ನೇತಿ, ಅದಲ್ಲ, ಅದಲ್ಲ–ಎನ್ನುತ್ತದೆ 'ಏಕೆ ?, ಎನ್ನುವವರ ನಿಜವಾದ ಅರ್ಥ ಮಾಯಾ ಮಾಯಾ ಎಂದರೆ, ಮಾ = ಅಲ್ಲ ; ಯಾ = ಯಾವದು , ಯಾವದು ಅಲ್ಲವೋ ಅದು ಮಾಯಾ. ಅಥವಾ ಮಾ ಯಾ ಎಂದರೆ ಅದಲ್ಲ. ಪ್ರಶ್ನೆಯಿರುವದು ರೂಪಿಸುವದಕ್ಕೆ ಸಾಧ್ಯವಿಲ್ಲದಂತೆ. ಯಾವ ಪ್ರಶ್ನೆಯನ್ನು ಹೇಗೆ ರೂಪಿಸಿದರೂ ವೇದಾಂತವು ಅದನ್ನು ಮಾಯಾ (ಅದಲ್ಲ) ನೇತಿ (ಅದಲ್ಲ) ಎನ್ನುತ್ತದೆ " ಪ್ರಪಂಚವು ಸತ್ಯವೆ?" ಎನ್ನುವ ಪ್ರಶ್ನಗೆ ವೇದಾಂತವು ನೇತಿ, ಮಾಯಾ, ಅದಲ್ಲ, ಅದಲ್ಲ ಎನ್ನುತ್ತದೆ. ಪ್ರಪಂಚವನ್ನು ಸತ್ಯವೆನ್ನಲಾಗುವದಿಲ್ಲ ಏಕೆಂದರೆ, ಹಿಂದೂ ಇಂದೂ ಮುಂದೂ ಎಂದೆಂದೂ ಒಂದೇ ಬಗೆಯಾಗಿರುವವೇ ಸತ್ಯವೆನಿಸುತ್ತದ. ಪ್ರಪಂಚವು ಹಾಗಿರುವುದಿಲ್ಲ ; ಪ್ರತಿ ಕ್ಷಣದಲ್ಲಿಯೂ ಬದಲಾಯಿಸುತ್ತಿರುತ್ತದೆ, ಆದ್ದರಿಂದ ಸತ್ಯದ ವಿವರಣೆಗೆ ಅದು ಅನುಗುಣವಾಗಿಲ್ಲವಾದ್ದರಿಂದ ಸತ್ಯವಲ್ಲ. ನಿಮ್ಮ ಗಾಢ ನಿದ್ರೆಯಲ್ಲಿ ಅದು ಇರುವದಿಲ್ಲ ಸತ್ಯಾನುಭವದಲ್ಲಿಯೂ ಪೂರ್ಣತೆಯಲ್ಲಿಯೂ ಮುಕ್ತ ಸ್ಥಿತಿಯಲ್ಲಿಯೂ ಪ್ರಪಂಚವು ಮಾಯವಾಗುತ್ತದೆ ಆದ್ದರಿಂದ ಅದನ್ನು ಸತ್ಯವೆಂದು ಕರೆಯುವದಕ್ಕೆ ನಿಮಗೆ ಅಧಿಕಾರವಿಲ್ಲ. ಹಾಗಾದರೆ, " ಪ್ರಪಂಚವು ನಿಜವಲ್ಲ ಮಿಥ್ಯಾ " ಅಲ್ಲವೆ ?-ಎಂದರೆ, ವೇದಾಂತವು ಇದಕ್ಕೂ ನೇತಿ, ನೇತಿ, ಮಾಯಾ-ಹೀಗೂ ಅಲ್ಲ, ಹೀಗೂ ಅಲ್ಲ, ಹಾಗೂ ಅಲ್ಲ,– ಎನ್ನುತ್ತದೆ ಇದು ಬಹಳ ವಿಲಕ್ಷಣವಾಗಿ ತೋರಬಹುದು. ಏಕೆಂದರೆ ಪ್ರಪಂಚವು ಅಸತ್ಯವೂ ಅಲ್ಲ ಎಂದು ವೇದಾಂತವು ಹೇಳುತ್ತದೆ ಅಸತ್ಯ ವೆಂದರೆ ಎಂದೆಂದಿಗೂ ಇಲ್ಲದಿರುವುದು ; ಮೊಲದ ಕೊಂಬು ಅಥವಾ ಮನುಷ್ಯನ ಕೊಂಬಿನಂತೆ ಎಂದೆಂದಿಗೂ ಇಲ್ಲದಿರುವದೇ ವೇದಾಂತ ಭಾಷೆಯಲ್ಲಿ ಅಸತ್ಯವೆನಿಸುತ್ತದೆ.

ದನಗಳಿಗೆ ಕೊಂಬಿರುವಂತೆ ಮನುಷ್ಯನಿಗೆ ಎಲ್ಲಿಯಾದರೂ ಎಂದಾದರೂ ಕೊಂಬಿರುವ ದುಂಟೆ ? ಎಂದಿಗೂ ಇಲ್ಲ. ಆದ್ದರಿಂದ ಅದು ಅಸತ್ಯ. ಆ ಅರ್ಥದಲ್ಲಿ ಪ್ರಪಂಚವು ಅಸತ್ಯವಲ್ಲ. ಏಕೆಂದರೆ, ಪ್ರಪಂಚವು ಇರುವಂತೆ ಈಗ ನಿಮಗೆ ತೋರುತ್ತಿದೆ ಆದ್ದರಿಂದ ಅದನ್ನು ಅಸತ್ಯವೆಂದು ಕರೆಯುವುದಕ್ಕೆ ನಿಮಗೆ ಅಧಿಕಾರವಿಲ್ಲ ಈಗ "ಪ್ರಪಂಚವು ಸತ್ಯವೆ ?" ಎಂಬ ಪ್ರಶ್ನೆಗೆ ವೇದಾಂತವು ನೇತಿ, ನೇತಿ ಅನ್ನುತ್ತದೆ ಹಾಗಾದರೆ " ಪ್ರಪಂಚವು ಅಸತ್ಯವ ? " ಎನ್ನುವ ಪ್ರಶ್ನೆಗೂ ವೇದಾಂತವು ನೇತಿ, ನೇತಿ ಎನ್ನುತ್ತದೆ. ಹಾಗಾದರೆ " ಪ್ರಪಂಚವು ಭಾಗಶಃ ಸತ್ಯವಾಗಿಯೂ ಭಾಗಶಃ ಅಸತ್ಯವಾಗಿಯೂ ಇರಬಹುದೆ ? " ಎಂದರೆ, ಅದಕ್ಕೂ ವೇದಾಂತವು 'ಮಾಯಾ, ನೇತಿ, ನೇತಿ' ಅದು ಕೂಡ ಅಲ್ಲ-ಎನ್ನುತ್ತದೆ. ಏಕೆಂದರೆ ಅಸತ್ಯವೂ ಸತ್ಯವೂ ಕೂಡಿ ಇರಲಾರವು. ಒಂದೇ ವಸ್ತುವು ಅಸತ್ಯವಾಗಿಯೂ ಸತ್ಯವಾಗಿಯೂ ಕೂಡ ಇರಲಾರದು. ಈ ಪ್ರಶ್ನೆಗಳಿಗೆ ವೇದಾಂತವು ಕೊಡುವ ಈ ಬಗೆಯ ಉತ್ತರ ಗಳಿಗೇ ಮಾಯಾವಾದ ಎನ್ನುವದು. ಇದಕ್ಕೇ ಮಿಥ್ಯಾ ಎನ್ನುವ ಇನ್ನೊಂದು ಹೆಸರೂ ಇದೆ. ಇದು ನಿಮ್ಮ ಮೈಥಾಲೊಜಿ (Mythology)—ಪುರಾಣ—ಎಂಬ ಶಬ್ದಕ್ಕೆ ಸಜಾತೀಯವಾದುದು. ಮಾಯಾ ಅಥವಾ ಮಿಥ್ಯಾ ಎಂದರೆ, ನಿಜವೆಂದೂ ನಿಜವಲ್ಲ ಎಂದೂ (ಸತ್ಯವೆಂದೂ ಅನೃತವೆಂದೂ) ನಿಜವಾಗಿಯೂ ಸುಳ್ಳಾಗಿಯೂ ಕೂಡ ಇದೆ ಯೆಂದೂ ಸತ್ಯವೂ ಅನೃತವೂ ಕೂಡ ಆಗಿದೆಯೆಂದೂ) ಹೇಳುವದಕ್ಕೆ ಬಾರದ ವಸ್ತು. ಹೀಗಿದೆ ನಿಮ್ಮ ಪ್ರಪಂಚ.

ನಾಸ್ತಿಕರು ದೇವರಿಲ್ಲ ಎನ್ನುತ್ತಾರೆ. ವೇದಾಂತವು ನೇತಿ, ನೇತಿ ಮಾಯಾ— ಅದು ನಿಜವಲ್ಲ ; ಅವರು ಹೇಳುವದು ತಪ್ಪು ; ಏಕೆಂದರೆ ಅವರು ಹಾಗೆ ಹೇಳು ವದಕ್ಕೆ ಸರಿಯಾದ ಕಾರಣವೂ ಯುಕ್ತಿಯೂ ಇಲ್ಲ ಎಂದು ಹೇಳುತ್ತದೆ ಕೆಲವರು ಸೃಷ್ಟಿ ಕರ್ತನಾದ ಸುಗುಣೇಶ್ವರನಿದ್ದಾನೆಂದು ಹೇಳುತ್ತಾರೆ. ಅದಕ್ಕೂ ವೇದಾಂತವು ನೇತಿ, ನೇತಿ—ಅದಲ್ಲ ಎನ್ನುತ್ತದೆ. ವೇದಾಂತವು ಹೇಳುವದೇನೆಂದರೆ, ‹‹ ಆ ಬಗೆಯ ಹೇಳಿಕೆಯನ್ನು ಕೊಡುವದಕ್ಕೆ ನಿಮಗೆ ಅಧಿಕಾರವಿಲ್ಲ ನೀವು ಕಾಲಿಡಬಾರದ ರಾಜ್ಯ ವಿದು. ಈ ರಾಜ್ಯದಲ್ಲಿ ನಿಮ್ಮ ಬುದ್ಧಿಯನ್ನು ಉಪಯೋಗಿಸಲಾರಿರಿ. ಈ ಪ್ರಪಂಚ ದಲ್ಲಿ ನಿಮ್ಮ ಬುದ್ಧಿಯು ಮಾಡುವದಕ್ಕೆ ಸಾಕಷ್ಟು ಕೆಲಸವಿದೆ ಅಲ್ಲಿ ಅದು ಕಾರು ಬಾರು ಮಾಡಲಿ. ‹‹ ಸೀಜರನಿಗ ಕೊಡಬೇಕಾದ ವಸ್ತುಗಳನ್ನು ಸೀಜರನಿಗೆ ಕೊಡಿ , ದೇವರಿಗೆ ಸಲ್ಲಿಸಬೇಕಾದುದನ್ನು ದೇವರಿಗೆ ಸಲ್ಲಿಸಿ." ಭೌತಿಕ ಭೂಮಿಕೆಯ ಮೇಲೆ, ವ್ಯವಹಾರ ರಾಜ್ಯಗಳಲ್ಲಿ ನಡೆಸಲು ನಿಮ್ಮ ಬುದ್ಧಿಗೆ ಬೇಕಾದಷ್ಟು ಕೆಲಸವಿದೆ. ಆದರೆ ಭೌತಾತೀತವಾದ ರಾಜ್ಯಗಳಲ್ಲಿ ನೀವು ಒಂದೇ ಒಂದು ಮಾರ್ಗದಿಂದ ಬರಬೇಕು.

ಆ ಒಂದು ಮಾರ್ಗವೇ ಅನುಭಾವ ಮಾರ್ಗ, ಪ್ರೇಮ ಮಾರ್ಗ, ಭಾವನಾಮಾರ್ಗ, ಶ್ರದ್ಧಾ, ಹೆಚ್ಚು ನಿಜವಾಗಿ, ಯುಕ್ತವಾಗಿ, ಖಚಿತವಾಗಿ ಹೇಳಬೇಕೆಂದರೆ ಅದು ಜ್ಞಾನ ಮಾರ್ಗ—ಅದು ವಿಲಕ್ಷಣ ಬಗೆಯ ಜ್ಞಾನ, ವಿಲಕ್ಷಣ ಬಗೆಯ ಪರಮಾತ್ಮ ಪ್ರಜ್ಞೆ. ಸರಿಯಾದ ಹಾದಿಯಿಂದ ಈ ಪ್ರಾಂತ್ಯಕ್ಕೆ ಬಂದೊಡನೆ ಎಲ್ಲಾ ಪ್ರಶ್ನೆಗಳೂ ನಿಲ್ಲುತ್ತವೆ, ಎಲ್ಲಾ ಸಮಸ್ಯೆಗಳೂ ಪರಿಹಾರವಾಗುತ್ತವೆ ಸಾಮ ವೇದದ ಕೇನೋಪ ನಿಷತ್ತಿನಲ್ಲಿ ಹೇಳಿರುವದೇನೆಂದರೆ.

ಯಸ್ಯಾಮತಂ ತಸ್ಯ ಮತಂ ಮತಂ ಯಸ್ಯ ನ ವೇದ ಸಃ ।
ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್ ॥ ೨-೩ ॥

ಯಾವನಿಗೆ (ಬ್ರಹ್ಮವನ್ನು ಅರಿತಿದ್ದೇನೆಂಬ) ತಿಳಿವಳಿಕ ಇಲ್ಲವೋ ಅವನಿಗೆ ತಿಳಿದಿದೆ. ಯಾವನಿಗೆ (ಬ್ರಹ್ಮವನ್ನು ಅರಿತ್ತಿದ್ದೇನೆಂಬ) ತಿಳಿವಳಿಕೆ ಇದೆಯೋ ಅವನಿಗೆ ತಿಳಿದಿಲ್ಲ. ತಿಳಿದವರಿಗೆ ತಿಳಿಯದೆ ಇರುತ್ತದೆ, ತಿಳಿಯದವರಿಗೆ ತಿಳಿದಿರುತ್ತದೆ

ಈಗಿನ ಕಾಲದ ವಿಚಾರಕರಾದರೂ ನಿಕರವಾಗಿ ಹೀಗೆಂದೇ ಹೇಳುವದು ಹೆರ್ಬರ್ಟ್‌ಸ್ಪೆನ್ಸರ್ ಮಹಾಶಯನು ತನ್ನ "First principles" ಎನ್ನುವ ಗ್ರಂಥದ "The Unknowable" "ಅಜ್ಞೇಯ" ಎನ್ನುವ ಪ್ರಥಮ ಭಾಗದಲ್ಲಿ ವೇದಾಂತ ಸಿದ್ಧಾಂತದ ತೀರ್ಮಾನಕ್ಕೆ ಬರುತ್ತಾನೆ. ಅವನು ಏನು ಹೇಳುತ್ತಾನೆಂಬ ದನ್ನು ರಾಮನು ನಿಮಗೆ ಓದಿಹೇಳಬೇಕಾಗಿಲ್ಲ ಆದರೆ ಆ ಕೃತಿಯ ಒಂದು ಸಣ್ಣ ಉದ್ಧೃತ ಭಾಗವನ್ನು ಓದಿ ಹೇಳಬಹುದು "ವಿಜ್ಞಾನ ಶಾಸ್ತ್ರಕ್ಕೆ ಆಧಾರವಾಗಿರುವದರಿಂದ ವಿಜ್ಞಾನ ಶಾಸ್ತ್ರದಿಂದ ಸ್ಥಾಪನೆಮಾಡಲಾಗದ ಯಾವದೋ ಒಂದು ತತ್ತ್ವವಿರಬೇಕು ತರ್ಕಬದ್ಧವಾದ ವಿಚಾರದಿಂದ ಸಾಧಿಸಲ್ಪಟ್ಟ ಎಲ್ಲಾ ಸಿದ್ಧಾಂತಗಳಿಗೂ (ಅವು ಯಾವುವೇ ಇರಲಿ)- ತರ್ಕ ಸೌಕರ್ಯಕ್ಕಾಗಿ ಮೊದಲೇ ಅಂಗೀಕರಿಸಲ್ಪಟ್ಟ-ಒಂದು ಆಧಾರ ಪ್ರತಿಜ್ಞೆಯು (ಒಂದು ಆಧಾರ ಕಲ್ಪನೆಯು) ಇರಲೇಬೇಕು. ಎಲ್ಲಿ ಬುದ್ಧಿಯು ಪ್ರವರ್ತಿಸಲು ಸಾಹಸ ಮಾಡಲಾಗದೋ, ಸಾಹಸ ಮಾಡಲಾರದೋ ಅಂಥಾ ಅಜ್ಞೇಯದ ಪ್ರಾಂತವನ್ನು (Region of the Unknowable) ನಾವು ಸಂಧಿಸುವ ಸ್ಥಳವೊಂದಿರಬೇಕು"

ಎಲ್ಲಾ ತತ್ತ್ವಶಾಸ್ತ್ರಜ್ಞರೂ ಈ ವಿಷಯದ ಮೇಲೆ ಇದೇ ಅಭಿಪ್ರಾಯವನ್ನು ಕೊಡುವ ಏನನ್ನಾದರೂ ಹೇಳಿರುತ್ತಾರೆ ಸ್ವಲ್ಪ ಗಮನವಿಟ್ಟು ವಿಚಾರಮಾಡಿ.

"ದೇವರು ಇದನ್ನು ಮಾಡಿರಬೇಕು, ದೇವರಿಗೆ ಈ ಉದ್ದೇಶಗಳಿರಬೇಕು, ದೇವರಿಗೆ ಕರುಣೆಯಿರಬೇಕು, ಪ್ರೇಮವಿರಬೇಕು, ದೇವರು ಎಲ್ಲರಿಗೂ ಒಳ್ಳೆಯದನ್ನು ಮಾಡಬೇಕು, ಅವನಲ್ಲಿ ಈ ಗುಣಗಳಿರಬೇಕು ಅಥವಾ ಆ ಗುಣಗಳಿರಬೇಕು" ಎಂದು ಜನರು ಹೇಳುವಾಗ ಎಂಥಾ ಹುಚ್ಚು ತಪ್ಪುಗಳನ್ನು ಮಾಡುತ್ತಾರೆ! ಏಕೆಂದರೆ, ಹೀಗಿರಬೇಕು, ಹಾಗಿರಬೇಕು, ಎನ್ನುವ ಎಲ್ಲಾ ವರ್ಣನೆಯೂ ವಿವರಣೆಯೂ ವರ್ಗೀಕರಣವೂ ದೇವರ ಮೇಲೆ ಪರಿಮಿತಿಯನ್ನು ಹೇರುತ್ತವೆ. ದೇವರು ಅಪರಿಮಿತನೆಂದು ಹೇಳಿದ ಉಸಿರಿನಲ್ಲಿಯೇ ಪರಿಮಿತನೆಂದೂ ಹೇಳುತ್ತೀರಿ ಅವನು ಅನಂತನೆಂದೂ ಹೇಳಿ, ಆವನಲ್ಲಿ ಇಂಥಾ ಗುಣಗಳಿವೆ, ಅಂಥಾ ಗುಣಗಳಿವೆ ಎಂದೂ ಹೇಳುತ್ತೀರಿ. ಅವನು ಒಳ್ಳೆಯವನು ಎಂದ ಕೂಡಲೇ ಅವನು ಕೆಟ್ಟವನಲ್ಲ ಎಂದಂತಾಯಿತು. ಹಾಗಾದರೆ ಅವನು ಪರಿಮಿತನಾದ, ಸಾಂತನಾದ, ಸೀಮಿತನಾದ ಕೆಟ್ಟದ್ದು ಇರುವಲ್ಲಿ ಒಳ್ಳೆಯದು ಇರುವದಿಲ್ಲ ಅವನು ಸೃಷ್ಟಿಕರ್ತನೆಂದು ಹೇಳಿದೊಡನೆಯೇ ಅವನು ಸೃಷ್ಟವಾದವನಲ್ಲ ಎಂದು ಅವನನ್ನು ಸೀಮಿತಮಾಡುತ್ತೀರಿ. ಆದರಿಂದ ಅವನಿಲ್ಲದ ಸ್ಥಳವನ್ನು ನೀವು ಬೆಟ್ಟಿಟ್ಟು ತೋರಿಸಿದಂತಾಗುತ್ತದೆ. ಆದರೆ ಸರ್ವವೂ ಅವನೇ ಆಗಿದ್ದಾನೆ ಮತ್ತೇನೆಂದರ, ಇಂಥಾ ಉದ್ದೇಶದಿಂದ ಅಥವಾ ಅಂಥಾ ಉದ್ದೇಶದಿಂದ ದೇವರು ಜಗತ್ತನ್ನು ಸೃಷ್ಟಿಮಾಡಿದನೆಂದು ನೀವು ಹೇಳುವದಾದರೆ, ನ್ಯಾಯಾಧೀಶನ ಎದುರಿಗೆ ಬಂದು ನಿಂತು ತಾನು ಮಾಡಿದ ಕೆಲಸದ ವಿವರಣೆ ನೀಡುವ ಒಬ್ಬ ಮನುಷ್ಯನಂತೆ ದೇವರನ್ನೂ ತಾನು ಮಾಡಿದ ಕೆಲಸದ ವಿವರಣೆ ಕೊಡಬಹುದಾದ ಒಬ್ಬ ಸಾಮಾನ್ಯ ಮನುಷ್ಯನನ್ನಾಗಿ ಮಾಡುತ್ತೀರಿ. ಹೀಗೆಯೇ ದೇವರಿಗೆ ಯಾವದಾದರೂ ಸಂಕಲ್ಪಗಳನ್ನೂ ಉದ್ದೇಶಗಳನ್ನೂ ಇಚ್ಛೆಗಳನ್ನೂ ಯೋಜನೆಗಳನ್ನೂ ಆರೋಪಿಸಿ ಯಾವದಾದರೂ (ಸೃಷ್ಟಿ ಮೊದಲಾದ) ಕಾರ್ಯಗಳಿಗೆ ಹೊಣೆಗಾರನನ್ನಾಗಿ ಹಿಡಿಯುವದಾದರೆ, ವಾಸ್ತವವಾಗಿಯೂ ನಿಮ್ಮನ್ನು ನೀವು ಮ್ಯಾಜಿಸ್ಟ್ರೇಟ್ ಆಗಿಯೂ (ನ್ಯಾಯಾಧಿಪರನ್ನಾಗಿಯೂ) ದೇವರನ್ನು-ನಿಮ್ಮೆದುರಿಗೆ ಬಂದು ತಾನು ಮಾಡಿದ ಕೆಲವು ಕಾರ್ಯಗಳಿಗಾಗಿ ಹೇಳಿಕೆ ಕೊಡಬೇಕಾಗಿರುವ-ಆರೋಪಿಯನ್ನಾಗಿಯೂ ಮಾಡಿಕೊಳ್ಳುತ್ತೀರಿ. ಈ ನಿಮ್ಮ ಹುಚ್ಚು ಕಲ್ಪನೆಯಲ್ಲಿ ದೇವರ ಗತಿ ಏನಾಗುತ್ತದ? ನಿಮ್ಮ ದೇವರಲ್ಲಿ ಏನಾದರೂ ದೇವತ್ವವನ್ನು ಉಳಿಸಿದ್ದೀರಾ ಎಂಬುದನ್ನೂ ವಿಚಾರ ಮಾಡಿ. ಆದ್ದರಿಂದ ವೇದಾಂತವು ಹೇಳುವದೇನೆಂದರೆ, "ದೇವರನ್ನು ನಿಮ್ಮ ನ್ಯಾಯಸ್ಥಾನದೆದುರಿಗೆ ತರಲು ನಿಮಗೆ ಅಧಿಕಾರವಿಲ್ಲ. ಈ ಹುಚ್ಚು ಪ್ರಶ್ನೆಯನ್ನು ಬಿಟ್ಟುಬಿಡಿರಿ. ಇದು ನ್ಯಾಯ ಸಮ್ಮತವಲ್ಲ, ಇದು ನ್ಯಾಯವಿರುದ್ಧ, ಅನುಚಿತ."

ಯಾವನೊಬ್ಬ ವಿಶಿಷ್ಟವ್ಯಕ್ತಿಯ ದಾಸ್ಯಕ್ಕ ಒಳಗಾಗದಿರುವದು ಎನ್ನುವದೇ ವೇದಾಂತದ ಅರ್ಥ ಮಹಮ್ಮದ್ ಎನ್ನುವ ಶಬ್ದವು ಮಹಮ್ಮದ್ ಎಂಬ ವ್ಯಕ್ತಿಯ ಹೆಸರನ್ನು ಅವಲಂಬಿಸಿದೆ ಮಹಮ್ಮದನು ಹೇಗೇ ನಡೆದಿರಲಿ, ಏನನ್ನೇ ನುಡಿದಿರಲಿ ಅದನ್ನು ನಾವು ನಂಬಬೇಕು ಕ್ರಿಶ್ಚಿಯಾನಿಟಿ ಎಂಬ ಶಬ್ದವು ಕ್ರಿಸ್ತನ ಹೆಸರಿಗೆ ಗುಲಾಮರಾಗಿರಬೇಕೆಂಬದನ್ನು ಸೂಚಿಸುತ್ತದೆ ಬುದ್ಧಿಸಂ ಎಂಬ ಶಬ್ದವೂ ಬುದ್ಧನ ಹೆಸರಿಗೆ ದಾಸ್ಯವಾಗಿದೆ ಜೊರೋಷ್ಟ್ರಿಯಾನಿಸಂ ಎಂಬ ಹೆಸರೂ ಜೊರೋಸ್ಟರ್ ಎಂಬ ವ್ಯಕ್ತಿಯ ದಾಸ್ಯವನ್ನು ಹೇಳುತ್ತದೆ. ಆದರ ವೇದಾಂತ ಎನ್ನುವ ಶಬ್ದವು ಯಾವದೊಂದು ವ್ಯಕ್ತಿಯ ಅಥವಾ ಪುರುಷನ ದಾಸ್ಯವನ್ನೂ ಸೂಚಿಸುವದಿಲ್ಲ. ವೇದಾಂತ ಎನ್ನುವ ಶಬ್ದಕ್ಕೆ ಜ್ಞಾನದ ಅಂತ್ಯ, ಜ್ಞಾನದ ಸೀಮಾ, ಜ್ಞಾನದ ಪರಮ ಸೀಮಾ ಎನ್ನುವದೇ ಅರ್ಥ ವೇದಾಂತವೆಂದರೆ ಸತ್ಯ. ಆದ್ದರಿಂದ ವೇದಾಂತದಲ್ಲಿ ಯಾವ ಜಾತಿ-ಮತ-ಪಂಥಗಳ ಅಭಿಮಾನವೂ ಇಲ್ಲ ಅದು ವಿಶ್ವವ್ಯಾಪಿಯೂ ವಿಶ್ವಸಂಬಂಧಿಯೂ ವಿಶ್ವಸಮ್ಮತವೂ ಸಾರ್ವತ್ರಿಕವೂ ಆದುದು ಅದು ನಿಮಗೆ ಅಪರಿಚಿತವಾದ ಹೆಸರಾದ್ದರಿಂದ ಅದರ ವಿಷಯದಲ್ಲಿ ಅವಿಶ್ವಾಸವನ್ನಾಗಲೀ ವಿರೋಧಾಭಿಪ್ರಾಯವನ್ನಾಗಲೀ ಇಟ್ಟುಕೊಳ್ಳಬೇಡಿ. ಹಿಂದೂಗಳು ತಿಳಿದಿರುವ ಮತ್ತು ಉಪದೇಶಿಸುವ ಸತ್ಯವೇ ವೇದಾಂತ ಎಂದು ನೀವು ಅದನ್ನು ಕರೆಯಬಹುದು. ಜರ್ಮನಿಯಲ್ಲಿ ಆಗಲಿ, ಅಮೇರಿಕಾದಲ್ಲಿ ಆಗಲಿ ಸತ್ಯವನ್ನು ಎಲ್ಲಿಯೇ ಶೋಧಿಸಿದರೂ ಒಂದೇ ಸಿದ್ಧಾಂತಕ್ಕೆ ಬರುತ್ತದೆ ಎಂಬದು ನಿಮಗೆ ಗೊತ್ತಿದೆ. ಸೂರ್ಯನನ್ನು ಮನುಷ್ಯನು ಎಲ್ಲಿಯೇ ನೋಡಲಿ, ಅದು ಪ್ರಕಾಶಮಾನವಾಗಿಯೂ ಜಾಜ್ವಲ್ಯವಾಗಿಯೂ ಇದೆಯೆಂದೇ ಕಾಣುತ್ತಾನೆ. ಯಾರೇ ಆಗಲಿ, ತಮ್ಮ ಪೂರ್ವ ಕಲ್ಪಿತ ಅಭಿಪ್ರಾಯಗಳನ್ನು ಗಾಳಿಗೆ ತೂರಿ ಬಿಡುಬಿಚ್ಚಾದ ಮನಸ್ಸಿನಿಂದ ವೇದಾಂತವು ತಿಳಿಸಿದಂತೆ ವಿಚಾರ ಮಾಡಿದ್ದಾದರೆ ಆ ಶಾಸ್ತ್ರದ ಸಿದ್ಧಾಂತಗಳನ್ನು ಒಪ್ಪಿಕೊಂಡೇ ಒಪ್ಪಿಕೊಳ್ಳುತ್ತಾನೆ ನಿಮ್ಮ ಪೂರ್ವಾಗ್ರಹಗಳನ್ನೂ ಪಕ್ಷಪಾತಗಳನ್ನೂ ಪೂರ್ವಕಲ್ಪಿತಭಾವಗಳನ್ನೂ ಉದಾರವಾಗಿ ವರ್ಜಿಸಿ, ಸ್ವತಂತ್ರವಾಗಿಯೂ ಬಿಡುಬಿಚ್ಚಾಗಿಯೂ ಈ ಪ್ರಶ್ನೆಗಳನ್ನು ವಿಚಾರಮಾಡಿದರ, ವೇದಾಂತ ವಿಚಾರ ಸರಣಿಯನ್ನೇ ನಿಮ್ಮ ವಿಚಾರ ಸರಣಿಯನ್ನಾಗಿಯೂ ಅದರ ಯುಕ್ತಿವಾದಗಳನ್ನೇ ನಿಮ್ಮ ಯುಕ್ತಿ-ವಾದಗಳನ್ನಾಗಿಯೂ ವೇದಾಂತ ವಿಜ್ಞಾನವನ್ನೇ ನಿಮ್ಮ ವಿಜ್ಞಾನದ ಸಿದ್ಧಾಂತವನ್ನಾಗಿಯೂ ಕಾಣುತ್ತೀರಿ

ಈಗ ರಾಮನು ನಿಮಗೆ, ಹಿಂದೂಗಳು ತಮ್ಮ ಪ್ರಾಚೀನಶಾಸ್ತ್ರಗಳಲ್ಲಿ ಈ ಮಾಯಾ ಸಮಸ್ಯೆಯನ್ನು ಹೇಗ ನಿರೂಪಿಸಿ ವಿವರಿಸಿದ್ದಾರೆಂಬದನ್ನು ತಿಳಿಸುತ್ತಾನೆ

ಅದನ್ನವರು ವ್ಯವಹಾರ ಸಮ್ಮತವಾಗಿಯೂ ಪ್ರಯೋಗ ಸಾಧ್ಯವಾಗಿಯೂ ವಿವರಿಸಿದ್ದಾರೆ. ಮಾಯೆಯನ್ನು ಅವರು ಅನಿರ್ವಚನೀಯ ಎಂದು ಕರೆದಿದ್ದಾರೆ. ಪರಿಮಿತವಾದ ಅರ್ಥದಲ್ಲಿ ಇದು 'ಭ್ರಾಂತಿ' ಎನಿಸುತ್ತದೆ. ಅನಿರ್ವಚನೀಯ ಎಂದರೆ ವಿವರಣೆಯು ಸಾಧ್ಯವಿಲ್ಲದ್ದು ಎಂದು. ಯಾವದನ್ನು ನಿಜ ಎನ್ನುವದಕ್ಕಾಗಲೀ ಸುಳ್ಳು ಎನ್ನುವದಕ್ಕಾಗಲೀ ನಿಜ-ಸುಳ್ಳುಗಳ ಒಟ್ಟು ಎನ್ನುವದಕ್ಕಾಗಲೀ ಬರುವದಿಲ್ಲವೋ ಅದೇ ಅನಿರ್ವಚನೀಯ ಇಡಿಯ ಜಗತ್ತು ಮಾಯೆ, ಅಥವಾ ಭ್ರಾಂತಿ. ಈ ಭ್ರಾಂತಿಯು ಎರಡು ಬಗೆಯಾಗಿದೆ. ಇದನ್ನು ಬಾಹ್ಯಸ್ಥ (Extrinsic) ಎಂದೂ ಅಂತಸ್ಥ (Intrinsic)-ಸಹಜ-ಎಂದೂ ಎರಡು ಬಗೆ ಎನ್ನಬಹುದು

ಮಬ್ಬುಗತ್ತಲೆಯಲ್ಲಿ ನೀವು ಒಂದು ಹಾವನ್ನು ಕಂಡು ಹೌಹಾರಿ, ಓಡಿ, ಬಿದ್ದು ನೋವು ಮಾಡಿಕೊಳ್ಳುತೀರಿ—ಎಂದಿಟ್ಟುಕೊಳ್ಳೋಣ. ಹಾವನ್ನು ಕಂಡರೆ ಸಾವನ್ನೇ ಕಂಡಂತೆ ಭಯವಾಗುವದು ಸ್ವಾಭಾವಿಕ. ಆದರೆ ಸ್ವಲ್ಪ ಹೊತ್ತಿನ ಮೇಲೆ ಧೈರ್ಯ ತಂದುಕೊಂಡು ದೀಪವನ್ನು ಒಯ್ದು ನೋಡಿದರೆ ಅಲ್ಲಿ ಹಾವಿರದೆ ಹಗ್ಗವಿರುತ್ತದೆ. ಆಗ ನೀವು, ಹಾವನ್ನು ಕಂಡಾಗ ನಡುಗಿ, ಎಡವಿ ಬಿದ್ದದ್ದನ್ನು ನೆನೆಸಿಕೊಂಡು ನಾಚಿಕೆ ಪಡುತ್ತೀರಿ ಅಥವಾ ನಗುತ್ತೀರಿ. ಈಗ ಪ್ರಶ್ನೆಯೇನೆಂದರೆ, ಮೊದಲು ಹೆದರಿದಾಗ ಕಂಡ ಹಾವು ಏನಾಗಿತ್ತು ? ಆ ಹಾವು ನಿಜವಾಗಿತ್ತೆ ? ಆ ಹಾವು ನಿಜವಲ್ಲವೆಂದು ವೇದಾಂತವು ಹೇಳುತ್ತದೆ. ಏಕೆಂದರೆ, ಅನಂತರ ದೀಪವನ್ನು ಒಯ್ದು ನೋಡಿದಾಗ ಅಲ್ಲಿ ಹಾವು ಇರಲಿಲ್ಲ. ಹಾಗಾದರೆ ಆ ಹಾವು ಸುಳ್ಳೆ ? ವೇದಾಂತವು ಅಲ್ಲ, ಅಲ್ಲ ಎನ್ನುತ್ತದೆ. ಏಕೆಂದರೆ, ಹಾವು ಸುಳ್ಳಾಗಿದ್ದರೆ, ನಿಮಗೆ ಅದು ಕಾಣುತ್ತಿರಲಿಲ್ಲ ; ನೀವು ಹೆದರಿ, ಓಡಿ, ಎಡವಿ ಬಿದ್ದು ಗಾಯ ಹೊಂದುತ್ತಿರಲಿಲ್ಲ. ಆದ್ದರಿಂದ ಅದು ಸುಳ್ಳು ಎನ್ನುವದಕ್ಕೂ ನಿಮಗೆ ಅಧಿಕಾರವಿಲ್ಲ. ಆ ಹಾವು ಭ್ರಾಂತಿ ಜನ್ಯವಾದುದು. ಭ್ರಾಂತಿಯು ನಿಜವಲ್ಲ ; ಅಥವಾ ಅದು ಸುಳ್ಳೂ ಅಲ್ಲ ಏಕೆಂದರೆ ಅನೃತವೆಂದರೆ ಎಂದೂ ಇಲ್ಲದಿರುವದು, ಅಥವಾ ಇದ್ದಂತೆ ಎಂದೂ ತೋರದಿರುವದು

ನೀವು ಒಂದು ಕಾಮನ ಬಿಲ್ಲನ್ನು ದೂರದಲ್ಲಿ ನೋಡುತ್ತೀರಿ. ಆ ಕಾಮನ ಬಿಲ್ಲು ನಿಜವೆ ? ಅದು ನಿಜವಲ್ಲ ; ಏಕೆಂದರೆ, ಅದು ಕಾಣಿಸಿದ ಸ್ಥಳಕ್ಕೆ ಹೋದರೆ, ಅಲ್ಲಿ ಅದು ಇರುವದೇ ಇಲ್ಲ ನಾವು ನಮ್ಮ ಸ್ಥಳವನ್ನು ಬದಲಾಯಿಸಿದರೆ ಅದರ ಸ್ಥಾನವೂ ಬದಲಾಯಿಸಿದಂತೆ ತೋರುತ್ತದೆ ಹಾಗಾದರೆ ಅದು ಸುಳ್ಳೆ ? ಅಲ್ಲ, ಅಲ್ಲ ಅದು ಸುಳ್ಳೂ ಅಲ್ಲ. ಏಕೆಂದರೆ ಅದು ದೂರದಲ್ಲಿ ಇದ್ದಂತೆ ತೋರುತ್ತದೆ. ಅದನ್ನು

ಕಂಡಾಗ ನಮ್ಮ ಮೇಲೆ ಪರಿಣಾಮವೂ ಆಗುತ್ತದೆ, ಕಾಮನಬಿಲ್ಲು ಸುಳ್ಳೂ ಅಲ್ಲ, ನಿಜವೂ ಅಲ್ಲ. ಎರಡು ಕೂಡಿದ್ದೂ ಅಲ್ಲ. ಅದು ಭ್ರಾಂತಿ-ಅನಿರ್ವಚನೀಯ.

ಕನ್ನಡಿಯಲ್ಲಿ ನಿಮ್ಮ ಪ್ರತಿಬಿಂಬವನ್ನು ನೋಡುತ್ತೀರಿ. ನಿಮ್ಮ ಪ್ರತಿಬಿಂಬ ಸುಳ್ಳೆ? ವೇದಾಂತವು ' ಅಲ್ಲ, ಅದು ಸುಳ್ಳಲ್ಲ ' ಎನ್ನುತ್ತದೆ ಏಕೆಂದರೆ, ಅದು ನಿಮಗೆ ಕಾಣುತ್ತದೆ. ನಿಮ್ಮ ಮನಸ್ಸಿನ ಮೇಲೆ ಪರಿಣಾಮವನ್ನೂ ಮಾಡುತ್ತದೆ ಹಾಗಾದರೆ ಅದು ನಿಜವೆ? ಅಲ್ಲ. ಅದು ನಿಜವೂ ಅಲ್ಲ ಏಕೆಂದರೆ, ನೀವು ಅತ್ತಲಾಗಿ ಮುಖವನ್ನು ತಿರುಗಿಸಿದರೆ, ಅದು ಕಣ್ಮರೆಯಾಗುತ್ತದೆ. ಇದು ನಿಜವೂ ಅಲ್ಲದ ಸುಳ್ಳೂ ಅಲ್ಲದ ಒಂದು ಭ್ರಮೆ (Illusion) ಇದರಲ್ಲಿ ಹಿಂದೆ ಹೇಳಿರುವಂತೆ ಎರಡು ಬಗೆಯಿದೆ. ಹಗ್ಗದಲ್ಲಿ ಕಾಣುವ ಹಾವು ಒಳಗಿನ ಸಹಜವಾದ ಭ್ರಮೆ (Intrinsic illusion). ಇದರ ವೈಶಿಷ್ಟ್ಯವೇನೆಂದರೆ, ಭ್ರಾಂತಿಜನ್ಯವಾದ ವಸ್ತುವು ಕಾಣುವಾಗ ನಿಜವಾದ ವಸ್ತುವು ಕಾಣುವದಿಲ್ಲ. ನಿಜವಾದ ವಸ್ತುವು ಕಂಡಾಗ ಭ್ರಾಂತಿಯ ವಸ್ತುವು ಕಾಣುವದಿಲ್ಲ. ಹೀಗೆ ಎರಡೂ ಕೂಡಿ ಇರಲಾರವು. ಭ್ರಮೆಯ ಹಾವು ಕಂಡಾಗ ನಿಜವಾದ ಹಗ್ಗವು ಕಾಣುವುದಿಲ್ಲ , ನಿಜವಾದ ಹಗ್ಗವು ಕಂಡಾಗ ಹಾವು ಕಾಣುವದಿಲ್ಲ. ನಿಜವಾದ ಹಗ್ಗವನ್ನೂ ಭ್ರಾಂತಿಯ ಹಾವನ್ನೂ ಒಟ್ಟಿಗೆ ಕಾಣುವುದು ಸಾಧ್ಯವಿಲ್ಲ ಹಗ್ಗವಿದ್ದಾಗ ಹಾವಿಲ್ಲ, ಹಾವಿದ್ದಾಗ ಹಗ್ಗವಿರುವದಿಲ್ಲ ಯಾವದಾದರೂ ಒಂದು ಹೋಗಬೇಕು ಇನ್ನೊಂದಿರಬೇಕು

ಆದರೆ ಹೊರಗಿನ ಭ್ರಮೆಯಲ್ಲಿ (Extrinsic illusion) ಎರಡೂ ಕೂಡಿರುತ್ತವೆ. ಹೊರಗೆ ಬಿಂಬವೂ ಕನ್ನಡಿಯಲ್ಲಿ ಪ್ರತಿಬಿಂಬವೂ ಕೂಡಿ ಇರುವಂತೆ ನಿಜವೂ ಭ್ರಮೆಯೂ (The reality and the illusion) ಏಕಕಾಲದಲ್ಲಿ ಕಾಣಿಸಿಕೊಳ್ಳುತ್ತವೆ. ಮುಖವು ನಿಜವಾದ ವಸ್ತು ; ಕನ್ನಡಿಯಲ್ಲಿರುವ ಪ್ರತಿಬಿಂಬವು ನಿಜವಲ್ಲ, ತೋರಿಕೆ ಮಾತ್ರವಾದ ಭ್ರಮೆ ಆದರೂ ಅವೆರಡೂ ಒಟ್ಟಿಗೆ ಕಾಣಿಸಿಕೊಳ್ಳುತ್ತವೆ ಇದೇ ಅದರ ವೈಶಿಷ್ಟ್ಯ ಇದರಲ್ಲಿ ಇನ್ನೊಂದು ವಿಶೇಷವೇನೆಂದರೆ ಕನ್ನಡಿಯಂಥ ಮಧ್ಯಮ-ಉಪಾಧಿ ಇರುತ್ತದೆ. ಆದ್ದರಿಂದ ಬಾಹ್ಯಸ್ಥ ಭ್ರಮೆಯಲ್ಲಿ, ಒಂದೇ ಸಮಯದಲ್ಲಿ ನಿಜವಸ್ತುವೂ ಮಧ್ಯಮ ಉಪಾಧಿಯೂ (Medium) ಭ್ರಮಾ ವಸ್ತುವೂ ಒಟ್ಟಿಗೆ ಕಾಣಿಸಿಕೊಳ್ಳುತ್ತವೆ. ಸಹಜವಾದ ಅಂತಸ್ಥ ಭ್ರಮೆಯಲ್ಲಿ ಒಂದು ಸಮಯದಲ್ಲಿ ಒಂದೇ ವಸ್ತುವು ಕಾಣಿಸಿಕೊಳ್ಳುತ್ತದೆ.

ವೇದಾಂತಿಗಳು ಪರೀಕ್ಷಾ—ಪ್ರಯೋಗ-ಸಾಧನ—ಅನುಭವ ಪದ್ಧತಿಯಿಂದ

ಇಡೀ ವಿಶ್ವದ ಅಖಂಡತೆಯನ್ನು ಮನಗಂಡಿದ್ದಾರೆ ಅವರು ತಮ್ಮ ವಿಚಾರ–ಶೋಧಗಳಿಂದಲೂ ಧಾರ್ಮಿಕ ಸಾಧನಗಳಿಂದಲೂ ಪ್ರಯೋಗ-ಪ್ರಗತಿಗಳಿಂದಲೂ ಧ್ಯಾನಯೋಗ ಜ್ಞಾನಯೋಗಗಳಿಂದಲೂ ಪಡೆದ ಸತ್ಯಾನುಭವದಿಂದ ಚಿದಾನಂದ ಸ್ವರೂಪ ಆತ್ಮ ಒಂದೇ ಸತ್ಯವೆಂದೂ ಅದ್ವಿತೀಯವೆಂದೂ ಆದರೆ ಅದರಲ್ಲಿ ಭ್ರಮೆಯಿಂದ ಹಗ್ಗದಲ್ಲಿ ತೋರುವ ಹಾವಿನಂತೆ) ಮಾಯೆಯಿಂದ ಪ್ರಪಂಚವು ತೋರುತ್ತಿದೆಯೆಂದೂ ತೋರಿಸಿಕೊಟ್ಟಿದ್ದಾರೆ, ಅಥವಾ ಸಿದ್ಧಾಂತಮಾಡಿದ್ದಾರೆ. ಈ ಪ್ರಪಂಚವು ತೋರುವುದಕ್ಕೆ ಕಾರಣವಾದ ಭ್ರಮೆಯಲ್ಲಿ ಅವರು 'ಎರಡು ಬಗೆಯನ್ನು ತೋರಿಸಬಹುದು' ಎನ್ನುತ್ತಾರ. ಇವೇ ಒಳಗಿನ ಭ್ರಮೆ ಮತ್ತು ಹೊರಗಿನ ಭ್ರಮೆ. ಒಬ್ಬ ಮನುಷ್ಯನು ಧಾರ್ಮಿಕ ಜೀವನವನ್ನು ಪ್ರಾರಂಭಿಸಿ ತನ್ನೊಳಗೇ ದೇವತ್ವವನ್ನು ಕಾಣುವುದಕ್ಕೆ ತೊಡಗಿದಾಗ ಅವನು ಹೊರಗಿನ ಭ್ರಮೆಯನ್ನು ಅಥವಾ ಮಾಯೆಯನ್ನು ಮಾತ್ರ ಮೀರುತ್ತಾನ ಈ ಪ್ರಪಂಚದಲ್ಲಿರುವ ಎಲ್ಲಾ ಧರ್ಮಗಳೂ-ಕ್ರೈಸ್ತ, ಮಹಮ್ಮದೀಯ, ಬೌದ್ಧ, ಜೊರೋಸ್ಟ್ರಿಯ ಮೊದಲಾದ ಎಲ್ಲವೂ - ಹೊರಗಿನ ಮಾಯೆಯನ್ನು ಜಯಿಸುವುದಕ್ಕೆ ಬಹಳವಾಗಿ ಸಹಾಯಮಾಡಿವೆ ಹೊರಗಿನ ಭ್ರಮೆಯನ್ನು ಗೆಲ್ಲುವುದಕ್ಕೆ ಈ ಧರ್ಮಗಳು ಮಾಡುವ ಉಪದೇಶವೆಲ್ಲಾ ಸರಿಯಾಗಿದೆ-ಎಂದು ವೇದಾಂತವು ಒಪ್ಪಿಕೊಳ್ಳುತ್ತದೆ. ಆದರೆ ವೇದಾಂತವು ಒಂದು ಹೆಜ್ಜೆ ಮುಂದೆ ಹೋಗುತ್ತದೆ. ಅದು ಒಳಗಿನ ಭ್ರಮೆಯನ್ನು ಕಳೆಯುತ್ತದೆ. ಆದರೆ ಮಿಕ್ಕ ಧರ್ಮಗಳಲ್ಲಿ ಅದು ಬೇಕಾಗಿದೆ, ಅಥವಾ ಕೊರತೆಯಾಗಿದ. ಮಿಕ್ಕ ಧರ್ಮದವರು ಇದನ್ನು ತಿಳಿಯದೆ ವೇದಾಂತವು ತಮಗೆ ವಿರುದ್ಧವಾಗಿದೆ ಎನ್ನುತ್ತಾರೆ. ಇಲ್ಲ, ಇಲ್ಲ, ಅದು ಯಾವದಕ್ಕೂ ವಿರುದ್ಧವಾಗಿಲ್ಲ,. ಅವುಗಳು ಪ್ರಾರಂಭಿಸಿದ ಕಾರ್ಯವನ್ನು ವೇದಾಂತವು ಪೂರೈಸಿದೆ, ಅಷ್ಟೆ. ಆದ್ದರಿಂದ ಎಲ್ಲಾ ಧರ್ಮಗಳಿಗೂ ವೇದಾಂತವು ಪೂರಕವಾದುದು; ಉಪಕಾರಕವಾದುದು, ಅದು ಯಾವದಕ್ಕೂ ವಿರೋಧವಾಗಿಲ್ಲ. ಆದರೆ ಇದು ನಿಮಗೆ ಅರ್ಥವಾಗದಿರಬಹುದು

ಈಗ ನಿಮಗೆ **ಅತಿ** ಸೂಕ್ಷ್ಮವಾದ ಒಂದು ವಿಚಾರವನ್ನು ಹೇಳುತ್ತೇನೆ. ಆದ್ದರಿಂದ ಅತ್ಯಂತ ಜಾಗರೂಕತೆಯಿಂದ ಕೇಳಿರಿ. ಒಂದು ಹಗ್ಗವನ್ನು ಹಾವೆಂದು ತಪ್ಪಾಗಿ ತಿಳಿಯುತ್ತೀರಿ. ಹಗ್ಗದಲ್ಲಿ ಹಾವು ಕಂಡಿತು ಇದಕ್ಕೆ ಹಿಂದೆಲ್ಲಾ ವಿವರಿಸಿರುವಂತೆ ಒಳಗಿನ ಭ್ರಮೆಯೇ ಕಾರಣವೆಂದು ಹೇಳುತ್ತೇವೆ. ಏಕೆಂದರೆ ಹಾವು ಕಂಡಾಗ ಹಗ್ಗ ಕಾಣುವದಿಲ್ಲ; **ಹಗ್ಗ**ವು ಕಂಡಾಗ ಹಾವು ಕಾಣುವುದಿಲ್ಲ ಒಂದು ಸಮಯದಲ್ಲಿ ಒಂದೇ ವಸ್ತುವು ಕಾಣುತ್ತದೆ. ಮತ್ತು ಹಾವು ಕೇವಲ ನಮ್ಮ ಮನಸ್ಸಿನ

ಕಲ್ಪನೆ. ಹಗ್ಗವೂ ಹಾವೂ ಆಕೃತಿಯಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಇರುವದರಿಂದ. ಮಬ್ಬುಗತ್ತಲೆಯಲ್ಲಿ ಬಿದ್ದಿರುವ ಹಗ್ಗದ ನಿಜವಾದ ರೂಪವು ಕಾಣದೆ, ಕಂಡ ಅದರ ಆಕೃತಿ ಮಾತ್ರವೇ, ಎಲ್ಲಿಯೋ ಎಂದೋ ಕಂಡಿದ್ದ ಹಾವಿನ ನೆನಪನ್ನು ಎಚ್ಚರಗೊಳಿಸಿ, ಎವೆಯಿಕ್ಕುವದರೊಳಗೆ ಮನಸ್ಸು ಹಾವನ್ನು ಕಲ್ಪಿಸಿಕೊಂಡು ಹೊರಚಾಚಿ ಹಗ್ಗದಲ್ಲಿ ಅದನ್ನು ಕಾಣುವಂತೆ ಮಾಡುತ್ತದೆ. ಇದರಲ್ಲಿ ಹೊರಗಿನ ವಸ್ತುವು ನಿಮಿತ್ತ ಮಾತ್ರ , ಮನಸ್ಸಿನ ಕಲ್ಪನೆಯೋ ಹೆಚ್ಚು, ಆದ್ದರಿಂದ ಇದು ಒಳಗಿನ ಭ್ರಮೆ. (ದಟ್ಟವಾದ ಕತ್ತಲೆಯಲ್ಲಿ ಹಾವಿದ್ದರೂ ಕಾಣುವದಿಲ್ಲ ; ಹಗ್ಗವಿದ್ದರೂ ಕಾಣುವದಿಲ್ಲ ಚೆನ್ನಾಗಿರುವ ಬೆಳಕಿನಲ್ಲಿ ಹಾವು ಹಾವಾಗಿಯೇ ಹಗ್ಗವು ಹಗ್ಗವಾಗಿಯೇ ಕಾಣುತ್ತವೆ. ಬೆಳಕು ಬಹಳ ಕಡಿಮೆಯಿರುವಾಗ ಹಗ್ಗವು ಹಾವಾಗಿಯೋ ಹಾವು ಹಗ್ಗವಾಗಿಯೋ–ಒಂದು ಇನ್ನೊಂದಾಗಿ-ಕಾಣುತ್ತದೆ ಇದೇ ಭ್ರಮೆ ) ಹಾವಿನ ತೋರಿಕೆಗೆ ಒಳಗಿನ ಭ್ರಮೆ ಕಾರಣವಾದರೂ ಇದರಲ್ಲಿ ಹೊರಗಿನ ಭ್ರಮೆಯೂ ಸೇರಿದೆಯೆಂದು ತೋರಿಸಬಹುದು

ಒಬ್ಬ ಬಾಲಕನು ಸಂಜೆಯಲ್ಲಿ ಓಡಿ ಬಂದು, ಗಾಬರಿಯಿಂದ "ಅಪ್ಪ, ಅಪ್ಪ, ಆ ಕೋಣೆಯಲ್ಲಿ ದೊಡ್ಡದೊಂದು ನಾಗರ ಹಾವಿದೆ ಅದನ್ನು ನೋಡಿ, ಹೆದರಿ, ಓಡಿ ಬಂದೆ ," ಎನ್ನುತ್ತಾನೆ ಆಗ ನಾವು "ಹಾವು ಎಷ್ಟು ಉದ್ದ ಇತ್ತು ? ಎಷ್ಟು ದಪ್ಪ ಇತ್ತು ? ಹೇಗಿತ್ತು ? ಮಗು, ಅಲ್ಲಿ ಹಾವಿರುವದಕ್ಕೆ ಕಾರಣವಿಲ್ಲವಲ್ಲ" ಎನ್ನುತ್ತೇವೆ. ಅದಕ್ಕೆ ಮಗುವು "ಅಯ್ಯೋ ಅಪ್ಪ, ನಿಜವಾಗಿದೆ, ನೋಡುಬಾ ಒಂದು ಮಾರು ಉದ್ದ ಇದೆ, ಅವತ್ತು ನೀನು ಅಂಗಡಿಯಿಂದ ತಂದಿದ್ದ ಹಗ್ಗದಷ್ಟು ದಪ್ಪವಿದೆ; ಸುರುಳಿ ಸುತ್ತಿಕೊಂಡು ಮಲಗಿದೆ ಸುಳ್ಳಲ್ಲ ಬೇಕಾದರೆ ನೋಡು ಬಾ." ಎಂದು ನಮ್ಮ ಕೈಹಿಡಿದು ಎಳೆಯುತ್ತದೆ. ದೀಪವನ್ನು ಒಯ್ದು ಕೋಣೆಯಲ್ಲಿ ನೋಡಿದರೆ, ಅಲ್ಲಿ ಹಾವು ಇರುವದಿಲ್ಲ, ಆದರೆ ಅವತ್ತು ನಾವು ಅಂಗಡಿಯಿಂದ ತಂದು ಸುತ್ತಿಟ್ಟಿದ್ದ ದಪ್ಪವಾದ ಹಗ್ಗದ ಸುರುಳಿಯೇ ಇರುತ್ತದೆ ಇದನ್ನು ನೋಡಿ ಮಗುವು ನಗಬಹುದು ಇರಲಿ ಇಲ್ಲಿ ನಾವು ಗಮನಿಸಬೇಕಾದುದು ಏನೆಂದರೆ, ಹಗ್ಗದ ಉದ್ದವೂ ದಪ್ಪವೂ ಸುರುಳಿಯ ಆಕೃತಿಯೂ ಭ್ರಾಂತಿಯ ಸರ್ಪದಲ್ಲಿ ಪ್ರತಿಫಲನವಾದಂತೆ ತೋರಿದ್ದು ಹಗ್ಗದ ಆಕೃತಿ-ರೂಪಾದಿಗಳಿಗೆ ಭ್ರಾಂತಿಯ ಸರ್ಪವು ಕನ್ನಡಿಯಂತಾಯಿತು. ಹಾವಿನಲ್ಲಿ ತೋರಿದ ಉದ್ದ, ದಪ್ಪ, ಸುರುಳಿ ಮೊದಲಾದ ಗುಣಗಳೆಲ್ಲಾ ಹಗ್ಗದಲ್ಲಿ ಇರತಕ್ಕವೇ ಹೊರತು ಹಾವಿನಲ್ಲಿ ಇರತಕ್ಕವಲ್ಲ. ಹಾವು ಕನ್ನಡಿಯಂತೆ ಅದಕ್ಕೆ ಆಧಾರವಾದ ಹಗ್ಗವನ್ನು ಪ್ರತಿಬಿಂಬಿಸಿ ತೋರಿಸಿದೆ. ಹಾವು ಕೇವಲ ನಮ್ಮ ಮನಸ್ಸಿನ ಭ್ರಮೆಯಾದ್ದರಿಂದ ಮೊದಲು ಕಂಡ ಹಾವು ಒಳಗಿನ ಭ್ರಮೆ. ಆದರೆ ಆ

ಹಾವಿನಲ್ಲಿ, ಅಲ್ಲಿರುವ ಹಗ್ಗದ ಉದ್ದ, ದಪ್ಪ ಮೊದಲಾದ ಗುಣಗಳೂ ಕಂಡಿದ್ದರಿಂದ ಅದು ಹೊರಗಿನ ಭ್ರಮೆ. ಹೊರಗೆ ಒಂದರ ಗುಣಗಳು ಇನ್ನೊಂದರಲ್ಲಿ ತೋರಿವೆ

ಇದು ಮೂಲ ಭ್ರಮೆಯ ಮುಂದಿನ ಬೆಳವಣಿಗೆ ಈ ಭ್ರಮೆಗಳನ್ನು ಕಳೆಯುವದಕ್ಕೆ ಏನು ಮಾಡಬೇಕೆಂಬದೇ ಈಗಿನ ಪ್ರಶ್ನೆ. ಮೊದಲು ಒಂದನ್ನು ಕಳೆದು ಅನಂತರ ಇನ್ನೊಂದನ್ನು ಕಳೆಯೋಣ. ಮೊದಲು ಹೊರಗಿನ ಭ್ರಮೆಯನ್ನು ಕಳೆದು ಅನಂತರ ಒಳಗಿನ ಭ್ರಮೆಯನ್ನು ಕಳೆಯುತ್ತದೆ

ವೇದಾಂತದ ಪ್ರಕಾರ, ಈ ವಿಶ್ವವೆಲ್ಲಾ ನಿಜವಾಗಿಯೂ ಅಖಂಡವೂ ಅವಿಭಾಜ್ಯವೂ ಅವರ್ಣನೀಯವೂ ಆದ ಒಂದು ಸತ್ಯವಾಗಿದೆ (ಇರುವಿಕೆ) ಯೇ ಹೊರತು ಬೇರೇನೂ ಅಲ್ಲ. ಅದನ್ನು ಬಚ್ಚಬರಿ ಇರುವಿಕೆಯೆಂದೂ ಸದ್ವಸ್ತುವೆಂದೂ ಸಹ ಕರೆಯಲಾರೆವು, ಕರೆಯಲಾಗದು ಏಕೆಂದರೆ, ಅದು ಎಲ್ಲಾ ಭಾಷೆಯನ್ನೂ (ಮಾತನ್ನೂ) ಮೀರಿದೆ. ಅದು ದೇಶ–ಕಾಲ–ನಿಮಿತ್ತಗಳನ್ನೂ ಮೀರಿದೆ, ಏನೇನು ತೋರುತ್ತಿವೆ, ತೋರದಿವೆ, ಆ ಎಲ್ಲವನ್ನೂ ಮೀರಿದೆ. ಎಲ್ಲಕ್ಕೂ ಆಧಾರವಾದ ಈ ಸತ್ಯವನ್ನೇ-ತತ್ತ್ವವನ್ನೇ-ಕೇವಲ ಇರುವಿಕೆಯನ್ನೇ (ಯಾವ ಹೆಸರಿನಿಂದಲೂ ಕರೆಯಲಾಗದ ಇದನ್ನು ಏನಾದರೂ ಕರೆಯಿರಿ) ಹಗ್ಗವೆನ್ನಬಹುದು. ಈ ಹಗ್ಗದಲ್ಲಿ ನಾಮರೂಪಗಳೂ ಭೇದಗಳೂ ಅಥವಾ ಶಕ್ತಿಯೂ ಕ್ರಿಯೆಯೂ ಅಥವಾ ಸ್ಪಂದನಗಳೂ ತೋರಿಕೊಳ್ಳುತ್ತಿವೆ. ಇವುಗಳನ್ನೇ ಹಾವು ಎನ್ನಬಹುದು. ಮೂಲಭೂತವಾದ ಈ ಒಳಗಿನ ಭ್ರಮೆಯು ಪೂರ್ಣವಾದ ಕೂಡಲೇ ಹೊರಗಿನ ಭ್ರಮೆಯು ಬೆಳೆಯುತ್ತದೆ. ಈ ಎರಡನೆಯ ಭ್ರಮೆಯಿಂದ ಈ ನಾಮರೂಪಗಳೂ ಈ ವ್ಯಕ್ತಿಗಳೂ ಈ ವಸ್ತುಗಳೂ ತಮದೇ ಆದ ಸ್ವತಂತ್ರ ಸತ್ತೆಯುಳ್ಳವುಗಳೆಂದೂ ಸ್ವತಂತ್ರವಾಗಿ ತಾವೇ ಇರತಕ್ಕವುಗಳೆಂದೂ ತಿಳಿಯುತ್ತೇವೆ. ಇವುಗಳನ್ನು ಸತ್ಯವೆಂದು ತಿಳಿಯುತ್ತೇವೆ. ಇದೇ ಎರಡನೆಯ ಹೊರಗಿನ ಭ್ರಮೆ. ಈ ಭ್ರಮಾಕ್ರಮವನ್ನು ತಿರುವು ಮುರುವು ಮಾಡಿದರೆ ನಿಮಗೆ ಇನ್ನೂ ಚೆನ್ನಾಗಿ ತಿಳಿಯುತ್ತದೆ

ಮತಧರ್ಮಗಳು ಮಾಡಿರುವ ಉಪಕಾರವೇನು ? ನಮಗೆ ಅತ್ಯಂತ ಪ್ರಿಯವಾದ ಕ್ರೈಸ್ತಮತವೂ ಮಹಮ್ಮದೀಯ ಮತವೂ ಇತರ ಮತಗಳೂ ಹೊರಗಿನ ಭ್ರಮೆಯನ್ನು ಕಳೆಯುವದರಲ್ಲಿ ತುಂಬಾ ಸಹಾಯಮಾಡಿವೆ ಎನ್ನಬಹುದು. ಇದೇ ಇವುಗಳಲ್ಲಿರುವ ಶ್ಲಾಘ್ಯಗುಣ ಎನ್ನಬಹುದು. ನಾವು ಪರಿಶುದ್ಧ ಜೀವನವನ್ನೂ ವಿಶ್ವಪ್ರೇಮದ ಜೀವನವನ್ನೂ ದಿವ್ಯವಾದ ಆನಂದ ಪರವಶತೆಯ ಜೀವನವನ್ನೂ

ಶ್ರದ್ಧಾಪೂರ್ಣವೂ ತ್ಯಾಗಮಯವೂ ಆದ ಜೀವನವನ್ನೂ-ಭರವಸೆಯಿಂದ ನಡೆಸಿದರೆ, ನಮ್ಮ ಹೃದಯದಿಂದ ಎಲ್ಲಾ ದಿಶೆಗಳಲ್ಲಿಯೂ ಹುಚ್ಚು ಹೊಳೆಯಂತೆ ಹೊರಚಿಮ್ಮಿ ಹರಿಯುವ ಅಪಾರವಾದ ದೈವೀ ಪ್ರೇಮವು ಇಡೀ ವಿಶ್ವವನ್ನೇ ದಿವ್ಯತೆಯಿಂದ (ದೈವಭಾವದಿಂದ) ತುಂಬಿದಾಗ ನಮಗೆ ಎಲ್ಲೆಲ್ಲಿಯೂ ದೇವರೇ ಕಾಣುತ್ತಾನೆ —ಎಂದು ಈ ಧರ್ಮಗಳು ಮಾನವ ಕುಲಕ್ಕೇ ತೋರಿಸಿವೆ. ಇದನ್ನು ಸ್ವಲ್ಪ ಗಮನಿಸಿ: ನಿಜವಾದ ಮಹಾತ್ಮನಾದ ಕ್ರೈಸ್ತನು, ಶ್ರದ್ಧಾಪೂರ್ಣನಾದ ಕ್ರೈಸ್ತನು, ನಾಮರೂಪಗಳಲ್ಲಿ ಸಹ ದೇವರನ್ನು ಕಾಣುತ್ತಾನೆ. ಅವನು ಶತ್ರುವನ್ನು ದ್ವೇಷಿಸುವದಿಲ್ಲ; ಪ್ರೀತಿಸುತ್ತಾನೆ. ಮಹಾತ್ಮಾ ಯೇಸು ಕ್ರಿಸ್ತನು Oh! "Love your enemy as yourself" ಆಹಾ! 'ನಿಮ್ಮ ಶತ್ರುವನ್ನು ನಿಮ್ಮಂತೆಯೇ ಪ್ರೇಮಿಸಿರಿ.' ಎಂದು ಹೇಳಿದ್ದಾನೆ ಇದು ಅವನ ದಿವ್ಯಬೋಧ. ನಿಜವಾದ ಕ್ರೈಸ್ತನು ಅಥವಾ ಮಹಮ್ಮದೀಯನು ಹೂವುಗಳಲ್ಲಿಯೂ ಅದೇ ದೇವರನ್ನು ಕಾಣುತ್ತಾನೆ. ಆಹಾ! ಅಂಥಾ ಆಶ್ಚರ್ಯ ಸ್ಥಿತಿಯನ್ನು ನೀವು ಎಂದಾದರೂ ಅನುಭವಿಸಿದ್ದಿರಾ ? ನಿಜವಾದ ಧರ್ಮನಿಷ್ಠರು ಅದನ್ನೂ ಅನುಭವಿಸುತ್ತಾರೆ. ಹೂವುಗಳು ಸಹ ಅಂಥಾ ನಿಮ್ಮೊಡನೆ ಮಾತನಾಡುತ್ತವೆ ; ಕಲ್ಲುಗಳಲ್ಲಿಯೂ ನೀವು ದಿವ್ಯವಾದ ಉಪದೇಶಗಳನ್ನು ಕಾಣುತ್ತೀರಿ. ಹರಿಯುವ ಹಳ್ಳಗಳಲ್ಲಿ ನೀವು ಗ್ರಂಥಗಳನ್ನು ಓದುತ್ತೀರಿ ಗ್ರಹ-ನಕ್ಷತ್ರಗಳು ನಿಮ್ಮೊಡನೆ ಮಾತನಾಡುತ್ತವೆ. ಮನುಷ್ಯನ ಕಣ್ಣುಗಳಿಂದ ದೇವರೇ ನಿಮ್ಮನ್ನು ನೋಡುತ್ತಿರುವದನ್ನು ಕಾಣುತ್ತೀರಿ. ದೇವತ್ವಕ್ಕೆ ಏನಾದರೂ ಬೌದ್ಧಿಕ ಪ್ರಮಾಣ ಬೇಕೆ ? ಬೇಕಿಲ್ಲ. ಅದು ತನಗೆ ತಾನೇ ಪ್ರಮಾಣವಾಗಿದೆ. ಎಲ್ಲಾ ಲೌಕಿಕ ತರ್ಕವನ್ನೂ ಲೌಕಿಕ ತತ್ತ್ವಶಾಸ್ತ್ರವನ್ನೂ ಮೀರಿದ ಪ್ರಮಾಣದ ಮೇಲೆ ಅದು ನಿಂತಿದೆ. ಎಲ್ಲೆಲ್ಲಿಯೂ ದೇವರನ್ನೇ ಕಾಣುತ್ತಾ ದೇವರಲ್ಲಿಯೇ ವ್ಯವಹರಿಸುತ್ತಾ ದೇವರಲ್ಲಿಯೇ ಸರ್ವದಾ ಜೀವಿಸುತ್ತಿರುವ ಮಹಾತ್ಮನೇ ಆ ದೇವತ್ವಕ್ಕೆ ಪ್ರಮಾಣ, ಅವನೇ ಆ ದಿವ್ಯತೆಗೆ ಜೀವಂತಸಾಕ್ಷಿ. ಈ ಬಗೆಯ ಧರ್ಮಜೀವನದಿಂದಲೂ ಯೋಗ-ಪ್ರಯೋಗಗಳಿಂದಲೂ ಅಭ್ಯಾಸ-ಅನುಭವಗಳಿಂದಲೂ ಅವನು ಹೊರಗಿನ ಭ್ರಮೆಯನ್ನು ಮೀರಿ ನಿಲ್ಲುತ್ತಾನೆ. ಅದು ಹೇಗೆ ? ಎಂದರೆ, ಈ ಎಲ್ಲಾ ನಾಮರೂಪಗಳಲ್ಲಿಯೂ ಭಿನ್ನಭೇದಗಳಲ್ಲಿಯೂ ಕ್ರಿಯಾ-ಕಾರಕ-ಫಲಗಳಲ್ಲಿಯೂ ದೇವರಿದ್ದಾನೆಂದು ಹೇಳುತ್ತೀರಿ ಈ ನಾಮರೂಪಾದಿಗಳು ಹಾವಿನಂತಿವೆ ಆದರೂ ಇವುಗಳನ್ನು ತೂರಿ ಇವುಗಳ ಹಿಂದೆ ನೋಡಿದರೆ, ಇವುಗಳ ಆಚೆ, ಹಾವಿನ ಕೆಳಗಿರುವ ಹಗ್ಗವನ್ನು ಕಾಣುತ್ತೀರಿ ಈ ದರ್ಶನ ಕ್ರಮದಿಂದ, ಹುಸಿ ಹಾವಿನಲ್ಲಿ ತೋರುವ ಉದ್ದ, ಅಗಲ, ದಪ್ಪ ವೊದಲಾದ ಗುಣಗಳನ್ನೆಲ್ಲಾ ಆಧಾರವಾದ ಹಗ್ಗದ ಗುಣಗಳೆಂದು ತಿಳಿಯುತ್ತೀರಿ

ಇದರಿಂದ ನಾಮರೂಪಗಳಲ್ಲಿ ತೋರುವ ಅಸ್ತಿ-ಭಾತಿ–ಪ್ರಿಯಗಳನ್ನು ನಾಮರೂಪಾದಿಗಳ ಸ್ವಂತ ಗುಣಗಳಲ್ಲವೆಂದೂ ಅವುಗಳಿಗೆ ಆಧಾರವಾದ (ಸತ್ಯದ- ಆತ್ಮನ) ದೇವರ ಸಚ್ಚಿದಾನಂದ ಗುಣಗಳೆಂದೂ ತಿಳಿಯುತ್ತೀರಿ ಈ ಸಾಧನದಿಂದ ಹೊರಗಿನ ಭ್ರಮೆಯನ್ನು ಮಾತ್ರ ಕಳೆದುಕೊಂಡಂತಾಗುತ್ತದೆ ಆಗ ನೀವು ಎಲ್ಲಾ ನಾಮರೂಪಗಳ ಹಿನ್ನೆಲೆಯಲ್ಲಿಯೂ ದೇವರನ್ನೇ ನೋಡುತ್ತೀರಿ ಧರ್ಮಜೀವನದ ಈ ಸ್ಥಿತಿಯಲ್ಲಿ ನೀವು ನಿಮ್ಮ ಶತ್ರುಗಳಿಗಾಗಲೀ ಮಿತ್ರರಿಗಾಗಲೀ ಯಾವ ಉದ್ದೇಶವನ್ನೂ ಆರೋಪಿಸುವದಿಲ್ಲ. ಅವರಲ್ಲಿಯೂ ಅವರ ವರ್ತನೆಯಲ್ಲಿಯೂ (ಹಿನ್ನೆಲೆಯಲ್ಲಿ) ದೇವರನ್ನೇ ದೇವರ ಇಂಗಿತವನ್ನೇ ಕಾರ್ಯವನ್ನೇ ನೋಡುತ್ತೀರಿ. ಆಗ ನೀವು "ಪ್ರಿಯವೋ ಅಪ್ರಿಯವೋ ಆದ ಈ ಎಲ್ಲವನ್ನೂ ಒಬ್ಬ ದೇವರೇ ಮಾಡುತ್ತಿದ್ದಾನೆ. ಇದಕ್ಕೆ ಬೇರೆ ಯಾರೂ ಕಾರಣರಲ್ಲ; ಸ್ವತಂತ್ರರಲ್ಲ" ಎಂದು ಹೇಳುತ್ತೀರಿ. ಇದರಿಂದ ಹೊರಗಿನ ಭ್ರಮೆಯನ್ನು ಮೀರಿದಂತಾಗುತ್ತದೆ. ನಿಮ್ಮ ಅಧ್ಯಾತ್ಮ ಪ್ರಗತಿಯಲ್ಲಿ ಇದೊಂದು ದೊಡ್ಡ ಸಾಧನೆಯೇ. ಆದರೆ ವೇದಾಂತವು ಅದರಿಂದಾಚೆಗೆ ಹೋಗಿ 'ತಮ್ಮ! ಈ ತೋರುತ್ತಿರುವ ನಾಮರೂಪಗಳಲ್ಲೆಲ್ಲಾ ದೇವರೆ ಇದ್ದಾನೆಂದು ಹೇಳುತ್ತಿದ್ದರೆ ಇದೇ ಪೂರ್ಣಸತ್ಯವಲ್ಲ ಅಥವಾ ಸತ್ಯದ ಪೂರ್ಣತೆಯಲ್ಲ ಈ ದೃಷ್ಟಿಯನ್ನೂ (ದರ್ಶನವನ್ನೂ) ಮೀರಿ ಇನ್ನೂ ಆಚೆಗೆ ಹೋಗು ಈ ಎಲ್ಲಾ ನಾಮರೂಪಗಳಲ್ಲಿಯೂ ಪ್ರತಿಮಾ ಪ್ರತೀಕಗಳಲ್ಲಿಯೂ ಭಿನ್ನಭೇದಗಳಲ್ಲಿಯೂ ಕ್ರಿಯೆಗಳಲ್ಲಿಯೂ ನಿಜವಾಗಿ ದೇವರೇ ತುಂಬಿಕೊಂಡಿದ್ದಾನೆಂದು ಹೇಳುತ್ತಿ, ಆದರೆ ಈ ನಾಮರೂಪಾದಿಗಳೇ ನಿಜವಲ್ಲ ಇವುಗಳ ತೋರಿಕೆಯು ಕೇವಲ ಭ್ರಮೆ ಇವು ಹಗ್ಗದಲ್ಲಿ ತೋರುವ ಹಾವಿನಂತಿವೆ ಅದರಿಂದಾಚೆಗೆ ಹೋಗು, ಎಲ್ಲಾ ಶಬ್ದಗಳನ್ನೂ ಭಾವನೆಗಳನ್ನೂ ಮೀರಿದ ಸ್ಥಿತಿಯನ್ನು ಪಡೆಯುತ್ತೀಯೆ" ಎಂದು ಹೇಳುತ್ತದೆ ಆದ್ದರಿಂದ ವೇದಾಂತವು ಸಕಲಧರ್ಮಗಳಿಗೂ ಪೂರಕವಾಗಿದೆ. ಅದು ಪ್ರಪಂಚದಲ್ಲಿ ಯಾವ ಧರ್ಮವನ್ನೂ ವಿರೋಧಿಸುವದಿಲ್ಲ—ಎನ್ನುವದು ಸಿದ್ಧವಾಗುತ್ತದೆ

ಯಾವನೋ ಒಬ್ಬ ದೇವರು ಈ ಪ್ರಪಂಚವನ್ನು ಸೃಷ್ಟಿಮಾಡಿರಬೇಕೆಂದು ಹೇಳುವದು ಅನಾವಶ್ಯಕ–ಎಂಬುದನ್ನು ಈಗ ತೋರಿಸಬಹುದು




ಈ ಎರಡು ತ್ರಿಕೋಣಗಳಲ್ಲಿಯೂ ಎರಡೆರಡು ಬಾಹುಗಳು ಸಮವಾಗಿವೆ. ಆ ಎರಡು ಸಮಬಾಹುಗಳಲ್ಲಿ 3 ಎನ್ನುವ ಸಂಖ್ಯೆಯನ್ನೂ ಮೂರನೇ ಬಾಹುವಿನಲ್ಲಿ 4 ಎನ್ನುವ ಸಂಖ್ಯೆಯನ್ನೂ ಗುರುತಿಸಿದೆ ದೀರ್ಘ ಚತುರಸ್ರದಲ್ಲಿ (Rectangle) ಕಿರಿದಾದ ಬಾಹುಗಳನ್ನು 3 ಎಂದೂ ಹಿರಿದಾದ ರೇಖೆಗಳನ್ನು 4 ಎಂದೂ ಗುರುತಿಸಿದೆ ಈ ನಕ್ಷೆಗಳನ್ನು ಕಾಗದದಲ್ಲಿಯೋ ದಪ್ಪರೊಟ್ಟಿನಲ್ಲಿಯೋ ಕತ್ತರಿಸಿಕೊಳ್ಳಬಹುದು ಈ ಮೂರು ನಕ್ಷೆಗಳನ್ನೂ ಒಂದು ಆಕೃತಿಯಾಗುವಂತೆ ಕೂಡಿಸಿ ರಚಿಸಬೇಕು. ಹೇಗೆಂದರೆ, ತ್ರಿಕೋಣಗಳ ಹಿರಿದಾದ (4) ಆಧಾರ ರೇಖೆಗಳನ್ನು (Bases of the triangles) ದೀರ್ಘ ಚತುರಸ್ರದ ಉದ್ದವಾದ (4) ರೇಖೆಗಳೊಡನೆ ಸೇರುವಂತೆ ಕೂಡಿಸಬೇಕು ಇದರಿಂದ ಷಡ್ರೇಖಾಕೃತಿಯನ್ನು (Hexagon) ಪಡೆಯುತ್ತೇವೆ ಇದರಲ್ಲಿ ಎಲ್ಲಾ ರೇಖೆಗಳೂ (3) ಸಮವಾಗಿವೆ ಹಿಂದಿನ ತ್ರಿಕೋಣಗಳಲ್ಲಿಯೂ ದೀರ್ಘ ಚತುರಸ್ರದಲ್ಲಿಯೂ ಇದ್ದ 4 ಎಂದು ಗುರುತಿಸಲ್ಪಟ್ಟ ಉದ್ದವಾದ ರೇಖೆಗಳು ಈ ಷಡ್ರೇಖಾಕೃತಿಯಲ್ಲಿ ಒಳಗೆ ಬಂದಿವೆಯೋ ಹೊರತು ಅವರ ಹೊರ ಮೈ ಬಾಹುಗಳಲ್ಲಿ ಬಂದಿಲ್ಲ ಈ ಷಡ್ಭುಜ (Hexagon) ಹೇಗೆ ಉಂಟಾಯಿತು? ಇದು ತ್ರಿಕೋಣಗಳ ಮತ್ತು ದೀರ್ಘ ಚತುರಸ್ರದ ಬೇರೆ ಬೇರೆ ಸಂಯೋಗದಿಂದ ಉಂಟಾಯಿತು ಆ ಮೂರು ನಕ್ಷೆಗಳ ಗುಣಗಳೇನು? ರೂಪಗಳೇನು? ಅವುಗಳ ಸೇರಿಕೆಯಿಂದ ಉಂಟಾದ ಷಡ್ಭುಜಿಯ ಗುಣಗಳೇನು? ರೂಪಗಳೇನು?

ಅಂಗ ಭಾಗಗಳಾದ ಮೂಲ ರೇಖಾಕೃತಿಗಳ ರೂಪಗುಣಗಳಿಂದ, ಅವುಗಳ ಸಂಯೋಗ ದಿಂದ ಲಭ್ಯವಾದ ಹೊಸ ರೇಖಾಕೃತಿಯ ಗುಣರೂಪಗಳು ಪೂರಾ ಬೇರೆಯಾಗಿಯೇ ಇವೆ. ತ್ರಿಕೋಣಗಳಲ್ಲಿ ಲಘುಕೋನಗಳಿವೆ (Acute angles) ; ದೀರ್ಘ ಚತು ರಸ್ರದಲ್ಲಿ ಸಮಕೋನಗಳಿವೆ (Right angles). ಆದರೆ ಆ ಎರಡು ತ್ರಿಕೋಣ ಮತ್ತು ಚತುರಸ್ರದ ಸಂಯೋಗದಿಂದ ಲಭ್ಯವಾದ ಷಡ್ಭುಜಿಯಲ್ಲಿ ಇವು ಯಾವುವೂ ಇಲ್ಲ

ಅಂಗಭೂತವಾದ ಆಕೃತಿಗಳಲ್ಲಿ 4 ಎನ್ನುವ ದೀರ್ಘ ಬಾಹುಗಳಿವೆ. ಆದರೆ ಅವುಗಳ ಸೇರುವಿಕೆಯಿಂದಾದ ಷಡ್ಭುಜಿಯ ಹೊರಮೈಯ ಬಾಹುಗಳಲ್ಲಿ ಅವುಗಳಿಲ್ಲ ಅಂಗಭಾಗಗಳಾದ (Components) ಮೂಲ ಆಕೃತಿಗಳಲ್ಲಿ ಎಲ್ಲಾ ಬಾಹುಗಳೂ ಸಮವಾಗಿ (Equilateral) ಇರಲಿಲ್ಲ ಆದರೆ ಅವುಗಳ ಸಂಯೋಗದಿಂದ ಲಭ್ಯ ವಾದ ಹೊಸ ಆಕೃತಿಯಲ್ಲಿ ಎಲ್ಲಾ ಬಾಹುಗಳೂ ಸಮವಾಗಿಯೂ ಎಲ್ಲಾ ಕೋನಗಳೂ ಸಮವಾಗಿಯೂ ಇವೆ ಈ ಷಡ್ಭುಜಿಯಲ್ಲಿ, ಮೊದಲಿಲ್ಲದೆ ಎಲ್ಲಾ ಹೊಸದಾಗಿಯೇ ಇರುವ ರೂಪಗುಣಗಳ ಹೊಸ ಸೃಷ್ಟಿಯೊಂದನ್ನು ನೋಡುತ್ತೇವೆ ಪೂರಾ ಹೊಸ ದಾಗಿಯೇ ಇರುವ ಈ ಗುಣಗಳು ಎಲ್ಲಿಂದ ಬಂದವು ? ಆದರೆ, ತೀರಾ ಹೊಸ ದಾಗಿಯೇ ಇರುವ ಈ ಗುಣಗಳನ್ನು ಯಾವ ಸೃಷ್ಟಿಕರ್ತನೂ ಸೃಷ್ಟಿಸಲಿಲ್ಲವೆಂಬದನ್ನು ಗಮನಿಸಬೇಕು ಇವು ಅಂಗಭೂತ ಭಾಗಗಳಿಂದಲೂ ಉತ್ಪನ್ನವಾಗಲಿಲ್ಲ. ಇದು ಹೊಸದೊಂದು ರೂಪದ, ಹೊಸದೊಂದು ಸ್ಥಿತಿಯ, ಹೊಸದೊಂದು ಸಂಯೋಗದ ಫಲಿತಾಂಶವಾಗಿದೆ. ಇದನ್ನೇ ವೇದಾಂತವು ಮಾಯಾ ಎನ್ನುತ್ತದೆ ಮಾಯಾ ಎಂದರೆ ನಾಮ-ರೂಪ ನಾಮಗಳ ಮತ್ತು ರೂಪಗಳ ಫಲಿತಾಂಶ.

ಈ ತತ್ತ್ವವನ್ನೇ ಇನ್ನೊಂದು ರೀತಿಯಲ್ಲಿ ಹೇಳಬಹುದು. ಈ ಸಮದ್ವಿಬಾಹು ತ್ರಿಕೋಣಗಳಲ್ಲಿ ಪ್ರತಿಯೊಂದೂ ಜಲಜನಕವನ್ನು (H) ರೂಪಿಸಲಿ ಆ ದೀರ್ಘ ಚತುರಸ್ರವು (Rectangle) ಆಮ್ಲಜನಕವನ್ನು (O) ನಿರೂಪಿಸಲಿ ಇದರಿಂದ $H_2O$ ನೀರು ಆಗುತ್ತದೆ ಈ ಮೂಲಭೂತ ಅನಿಲಗಳಾದ ಜಲಜನಕ, ಆಮ್ಲಜನಕ ಗಳಲ್ಲಿ ಅವುಗಳದೇ ಆದ ಸ್ವಂತ ಗುಣಗಳಿವೆ. ಇವುಗಳ ಸಂಯೋಗದಿಂದ ಉತ್ಪನ್ನ ವಾಗುವ ನೀರಿನಲ್ಲಿ ಪೂರಾ ಹೊಸ ಗುಣಗಳೇ ಇವೆ. ಜಲಜನಕವು ದಾಹ್ಯ-ಬೆಂಕಿಹತ್ತಿ ಉರಿಯುತ್ತದೆ, ನೀರು ಅದಕ್ಕೆ ವಿರುದ್ಧವಾಗಿ ಬೆಂಕಿಯನ್ನು ಆರಿಸುತ್ತದೆ. ಆಮ್ಲ ಜನಕವೂ ದಹನ ಕ್ರಿಯೆಗೆ (Combustion) ಸಹಾಯವಾಗುತ್ತದೆ. ನೀರು ಹಾಗಲ್ಲ. ಅದರ ಗುಣಗಳು ತೀರಾ ನೂತನ. ಜಲಜನಕ ಬಹಳ ಹಗುರ ;

ಆಮ್ಲಜನಕವು ಅಷ್ಟು ಹಗುರವಲ್ಲ. ಜಲಜನಕವು ಬುರುಡೆಯಾದ ಆಕಾಶಬುಟ್ಟಿಯಲ್ಲಿ (Balloons) ತುಂಬಿ ನಮ್ಮನ್ನು ಆಕಾಶದಲ್ಲಿ ಹಾರಿಸಬಲ್ಲುದು. ಆದರೆ ನೀರು ಹಾಗೆ ಮಾಡಲಾರದು. ಹೀಗೆ ಸಂಯುಕ್ತ ವಸ್ತುವಿನ ಗುಣಗಳು ಸಂಯೋಗವಾಗಿರುವ ಘಟಕಗಳಾದ ಮೂಲಭೂತಗಳ ಗುಣಗಳಿಂದ ತೀರ ಬೇರೆಯೇ ಆಗಿರುತ್ತವೆ. ಸಂಯುಕ್ತ (Compound) ವಸ್ತುವಿನಲ್ಲಿ ಆ ಹೊಸ ಗುಣಗಳು ಎಲ್ಲಿಂದ ಬಂದವು ? ಅವು ಸೃಷ್ಟಿಕರ್ತನಿಂದ ಬಂದವೆ ? ಅಥವಾ ಘಟಕಗಳಿಂದ (Components) ಬಂದವೆ ? ಇಲ್ಲ, ಅವು ನೂತನ ರೂಪದಿಂದಲೂ ನೂತನ ಸ್ಥಿತಿಯಿಂದಲೂ ನೂತನ ಸಂಯೋಗ (Configuration) ದಿಂದಲೂ ಬಂದವು. ಇದನ್ನೇ ವೇದಾಂತವು ಹೇಳುತ್ತದೆ. ಈ ಪ್ರಪಂಚದಲ್ಲಿ ಕಾಣುವದೆಲ್ಲಾ ಕೇವಲ ನಾಮರೂಪಗಳ ಫಲವೆಂದು ಹೇಳುತ್ತದೆ. ನಾಮರೂಪಗಳ ಫಲಿತಾಂಶ-ಪರಿಣಾಮಗಳಿಗೆ ಒಬ್ಬ ಸೃಷ್ಟಿಕರ್ತನ ಆವಶ್ಯಕತೆಯಿಲ್ಲ.

ಇಲ್ಲಿ ಇದ್ದಲು ಇದೆ, ಅಲ್ಲಿ ಒಂದು ಉಜ್ಜ್ವಲವಾಗಿ ಕಣ್ಣು ಕೋರೈಸುವಂತೆ ಬೆಳಗುತ್ತಿರುವ ಒಂದು ವಜ್ರವಿದೆ—ಎಂದು ಇಟ್ಟುಕೊಳ್ಳೋಣ. ವಜ್ರವು ಇದ್ದಲಿನಿಂದ ಪೂರಾ ಬೇರೆಯೇ ಆದ ಗುಣ ಲಕ್ಷಣಗಳುಳ್ಳದು. ಕಬ್ಬಿಣವನ್ನು ಸಹ ಕತ್ತರಿಸುವಷ್ಟು ಕಠಿಣವಾದ ಗುಣವುಳ್ಳದು ವಜ್ರ. ಕಾಗದದ ಮೇಲೆ ಗೀಚಿದರೆ ಕಪ್ಪು ಗುರುತು ಮಾಡುವಷ್ಟು ಮೃದುವಾದುದು ಇದ್ದಲು. ವಜ್ರವು ಅನರ್ಘ್ಯವಾದುದು, ಅಮೂಲ್ಯವಾದುದು ; ಅತಿ ಪ್ರಕಾಶಮಾನವಾದುದು ; ಇದ್ದಲು ಬಹಳ ಅಗ್ಗವಾದುದು, ಕಪ್ಪು ಕುರೂಪವೂ ಆದುದು. ಇವೆರಡೂ ಇಷ್ಟು ಅತ್ಯಂತ ವಿರುದ್ಧ ಗುಣಗಳುಳ್ಳವುಗಳಾದರೂ ನಿಜವಾಗಿ ನೋಡಿದರೆ ಅವೆರಡೂ ಒಂದೇ ಎಂದು ವಿಜ್ಞಾನವು ಸಿದ್ಧಮಾಡಿ ತೋರಿಸುತ್ತದೆ "ಓ ! ಈ ವಿಷಯವನ್ನೆಲ್ಲಾ ನಮ್ಮ ಬುದ್ಧಿಯು ಗ್ರಹಿಸಲಾರದು" ಎಂದು ನೀವು ಹೇಳಬಹುದು. ಆದರೆ ನೀವು ಒಪ್ಪಲಿ ಬಿಡಲಿ ಇದಂತು ವಾಸ್ತವವಾದ ವಿಚಾರ ವಜ್ರವು ಒಳ್ಳೆಯದು, ಇದ್ದಲು ಕೆಟ್ಟದು ಎಂದು ನೀವೆನ್ನಬಹುದಾದರೂ ಅವು ಹೇಗೆ ನಿಜವಾಗಿ ಒಂದೇ ವಸ್ತುವೋ ಹಾಗೇ ಒಳ್ಳೆಯವರು, ಕೆಟ್ಟವರು ಎನ್ನಿಸಿಕೊಳ್ಳುವ ಮಿತ್ರ-ಶತ್ರುಗಳಲ್ಲಿಯೂ ಇರುವದು ಒಂದೇ ಚೈತನ್ಯವು. ಇಂಗಾಲವೇ ಇದ್ದಲಾಗಿಯೂ ವಜ್ರವಾಗಿಯೂ ತೋರುವಂತೆ, ಒಂದು ದೇವತ್ವವೇ ಶತ್ರುಗಳಾಗಿಯೂ ಮಿತ್ರರಾಗಿಯೂ ತೋರುತ್ತದೆ. ಭೇದಗಳು ತೋರುವದೆಲ್ಲಾ ಬರೀ ನಾಮರೂಪಗಳಲ್ಲಿಯೇ ಹೊರತು ಬೇರೆಲ್ಲಿಯೂ ಅಲ್ಲ ವಜ್ರದಲ್ಲಿರುವ ಇಂಗಾಲದ ಪರಮಾಣುಗಳು ಇದ್ದಲಿನಲ್ಲಿ ಅವು ಇರುವದಕ್ಕಿಂತಲೂ ಬೇರೆ

ರೀತಿಯಲ್ಲಿ ರಚಿತವಾಗಿವೆಯೆಂದೂ ಅಣುಗಳ ರಚನೆಯಲ್ಲಿ ಬೇರೆ ರೂಪ ಹೊಂದಿವೆ ಯೆಂದೂ ವಿಜ್ಞಾನಿಗಳು ಹೇಳುತ್ತಾರೆ. ಆದ್ದರಿಂದ ಇದ್ದಲಿನಲ್ಲಿಯೂ ವಜ್ರದಲ್ಲಿಯೂ ತೋರುವ ಭೇದಕ್ಕೆ ಕೇವಲ ನಾಮರೂಪಗಳೇ ಅಥವಾ ಮಾಯೆಯೇ ಕಾರಣವೆಂದು ಹಿಂದೂಗಳು (ವೇದಾಂತಿಗಳು) ಹೇಳುತ್ತಾರೆ. ಎಲ್ಲಾ ಬಗೆಯ ಭೇದಗಳ ತೋರಿ ಕೆಗೂ ನಾಮರೂಪವೇ ಕಾರಣ

ಹಾಗೆಯೇ ಒಳ್ಳೆಯದು, ಕೆಟ್ಟದು ಎಂಬ ಭೇದಕ್ಕೆ ಮಾಯೆಯು ಕಾರಣವೇ ಹೊರತು, ನಾಮರೂಪಗಳು ಕಾರಣವೇ ಹೊರತು ಬೇರೇನೂ ಅಲ್ಲ. ನಾಮರೂಪ ಗಳು ಯಾವಾಗಲೂ ಒಂದೇ ರೀತಿಯಲ್ಲಿ ಇರುವುದಿಲ್ಲ; ಆದ್ದರಿಂದ ಅವು ನಿಜವಲ್ಲ. ಅವು ಒಮ್ಮೆ ಕಂಡ ಬಗೆಯಲ್ಲಿ ಇನ್ನೊಮ್ಮೆ ಕಾಣುವದಿಲ್ಲ ; ಆದ್ದರಿಂದ ನಿಜವಲ್ಲ. ಈ ವಿಶ್ವದ ದೃಶ್ಯವಿಲಾಸವು ಕೇವಲ ನಾಮರೂಪಗಳೂ ಭಿನ್ನ ಭೇದಗಳೂ ಸಂಯೋಗ-ವಿಯೋಗಗಳೂ ಹೊರತು ಬೇರಲ್ಲ ಇವುಗಳಿಗೆಲ್ಲಾ ಒಳಗಿನ ಭ್ರಮೆಯೇ (Intrinsic illusion) ಕಾರಣ. ಆದರೆ ಈ ಎಲ್ಲವುಗಳಲ್ಲಿ ವ್ಯಕ್ತವಾಗುವದು ಒಂದು ದೇವತ್ವವೇ. ಮಾಯೆ ಎಂದು ಕರೆಯಲ್ಪಡುವ ಈ ಪ್ರಪಂಚದ ನಾಮ ರೂಪಗಳ ಮೂಲಕ ದೇವರು ತಾನೇ ತೋರಿಕೊಳ್ಳುತ್ತಾನೆ. ಇದು ಅಂತಸ್ಥ ಭ್ರಮೆ, ಒಳಗಿನ ಭ್ರಮೆ, ಇದನ್ನೂ ಮೀರಿ ನೀವು ಮೇಲೇರಿದರೆ ಅಥವಾ ಆಚೆ ಹೋದರೆ, ನೀವೇ ಸಮಸ್ತವೂ ಆಗಿದ್ದೀರಿ. ಅಲ್ಲಿ ಸಕಲ ಎನ್ನುವದು ನಿಜವಲ್ಲ ; ನೀವೊಬ್ಬರೇ ಸತ್ಯ. ಸರ್ವದರಲ್ಲಿ ಒಂದನ್ನು ನೋಡತಕ್ಕವನೇ ನಿಜವಾಗಿ ನೋಡತಕ್ಕವನು ; ಒಬ್ಬ ದೇವರನ್ನೇ ಎಲ್ಲ ವಸ್ತುಗಳಲ್ಲಿಯೂ ನೋಡಬಲ್ಲವನೇ ತೆರೆದ ಕಣ್ಣುಗಳುಳ್ಳವನು.

ಗೀತೆಯಿಂದ ಉದ್ಧರಿಸಿ ಹೇಳಬಹುದಾದ ಈ ಕೆಲವು ಶ್ಲೋಕಗಳು ಇದಕ್ಕೆ ನಿದರ್ಶನವಾಗಿವೆ ;

ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ ।
ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥೧೬॥
ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।
ವೇದ್ಯಂ ಪವಿತ್ರಮೋಂಕಾರ ಋಕ್ಸಾಮ ಯಜುರೇವ ಚ ॥೧೭॥
ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।
ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥೧೮॥
ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।
ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥೧೯॥ ೯ಅ.

ಶೃತಿಯಜ್ಞವು, ಸ್ಮೃತಿಯಜ್ಞವು, ಸ್ವಧೆಯುವೌಷಧವು ನಾನೇ,
ಮಂತ್ರವೂ ಆಜ್ಯವೂ ಅಗ್ನಿಯೂ ಹವನವೂ ನಾನೇ,
ಈ ಜಗದ ಪಿತಾ, ಮಾತಾ, ಪಿತಾಮಹನೂ ರಕ್ಷಕನೂ ನಾನೇ,
ಅನುಭಾವ ವೇದ್ಯನೂ ಪವಿತ್ರನೂ ಓಂಕಾರನೂ ಚತುರ್ವೇದಗಳೂ ನಾನೇ,
ಪರಮಗತಿಯೂ ಪೋಷಕನೂ ಪ್ರಭುವೂ ಸಾಕ್ಷಯೂ ನಾನೇ,
ಸಕಲ ಜಗನ್ನಿವಾಸನೂ ಶರಣರಕ್ಷಕನೂ ಸುಹೃದನೂ ನಾನೇ,
ಸೃಷ್ಟಿ–ಸ್ಥಿತಿ-ಲಯಕರ್ತನೂ ಜ್ಞಾನನಿಧಾನನೂ ಜಗತ್ಕಾರಣನೂ ನಾನೇ,
ನಾಶರಹಿತನೂ ಸೂರ್ಯತಾಪವೂ ಮಳೆಯು ಆಕರ್ಷಕ-ವಿಸರ್ಜಕನೂ ನಾನೇ,
ಅಮೃತಸ್ವರೂಪನೂ ಮೃತ್ಯುಸ್ವರೂಪನೂ ಸತ್ತೂ ಅಸತ್ತೂ ನಾನೇ !



ಗಂಗಾ ಮಂಜುಳ ಘೋಷವು ತೊನೆದಾಡುವ ಪೀತದಾರುವಿನ ಸಂಗೀತವು
ಕದನ ಕುತೂಹಲಿ ಕಡಲಿನ ನಿನದ ಕೋಲಾಹಲವು
ಅಂಬಾ ಎನುವ ಆಕಳ ಕೂಗೂ,
ಮಣಿಯಂತೆ ಮಿನುಗುವಾ ಮಂಜಿನ ನೀರ ಹನಿ,
ಇಳಿಯುತಿರುವಾ ಭಾರವಹ ನೀಲಘನ–ಮುಗಿಲು,
ಪುಟ್ಟ ಪುಟಾಣಿ ಹೆಜ್ಜೆಗಳ ಪಟ ಪಟ ಶಬ್ದ,
ಜನಸಂಕುಲದ ಅಟ್ಟಹಾಸವು,
ಭಾನುವಿನ ಸ್ವರ್ಣಮಯ ಕಿರಣ,
ನೀರವ ತಾರೆಯಾ ಪ್ರಭಾಸ್ಫುರಣ,
ರಜತಮಯ ಚಂದ್ರಮನ ಚಂಚಲ ದ್ಯುತಿಯು
ಹೊಳಪ ಚೆಲ್ಲುತಿರೆ ಹತ್ತಿರದಿ ದೂರದಲಿ,
ಉರಿಯುತಿಹ ಕರವಾಲದಾ ಪ್ರಭಾಸ,
ಉಜ್ಜ್ವಲ ಆಭರಣಗಳ ಮಿರುಮಿರುಗು,
ಕಾಳಕಾವಳ ರಾತ್ರಿಯಲಿ
ಕಡಲ ದೀಪದ ಮನೆಯ ಮಾರ್ಗದರ್ಶಕ ಜ್ಯೋತಿಯಾ ನುಣ್ಬೆಳಕು,
ಸ್ವರ್ಗದಾ ದಿವ್ಯ ಸಂಪತ್ತೆನಿಪ
ಸೇಬು ತುಂಬಿದಾ ಭೂ ವಕ್ಷ

ನೀರವ ಶಬ್ದ, ಉರಿಯಿಲ್ಲದಾ ದೀಪ,
ಕಾವಳಿಲ್ಲದ ಕತ್ತಲೆಯು ರೆಕ್ಕೆಯಿಲ್ಲದಾ ಹಾರಾಟ,
ಮನವಿಲ್ಲದಾ ಭಾವನೆಯು, ಕಣ್ಣಿಲ್ಲದಾ ನೋಟ,
ಬಾಯಿಲ್ಲದಾ ಮಾತು, ಕೈಯಿಲ್ಲದಾ ಕಪಿಮುಷ್ಟಿ,
ನಾನೇ ಇವೆಲ್ಲ ನಾನೆ, ನಾನೇ !

ಓಂ! ಓಂ! ಓಂ!

## When did the World begin?

# ಪ್ರಪಂಚವು ಪ್ರಾರಂಭವಾದುದು ಯಾವಾಗ ?

### ತಾ|| 6-4-1904 ಬುಧವಾರ ಮಾಡಿದ ಉಪನ್ಯಾಸ.

ಸಂಪನ್ನ ಸ್ತ್ರೀ ಪುರುಷರಲ್ಲಿರುವ ಪ್ರೀತಿಯ ದಿವ್ಯತೆಯೆ,

ಪ್ರಪಂಚವು ಆರಂಭವಾದುದು ಯಾವಾಗ ? ಎಂದು ಪ್ರಶ್ನೆಮಾಡುತ್ತಾರೆ ಯಾವಾಗ ? ಎಂದು ಕೇಳುವ ಮಾತಿನ ಅರ್ಥವು "ಯಾವ ಕಾಲದಲ್ಲಿ ? " ಎಂದು. ಆದ್ದರಿಂದ ಈಗ ಪ್ರಶ್ನೆಯೇನೆಂದರೆ, "ಯಾವ ಕಾಲದಲ್ಲಿ ಪ್ರಪಂಚವು ಪ್ರಾರಂಭವಾಯಿತು ?" ಎಂದು. ಆದರೆ ಕಾಲವು ಪ್ರಪಂಚದ ಭಾಗವೇ ಆಗಿ ಪ್ರಪಂಚದೊಳಗೇ ಸೇರಿರುವದರಿಂದ ಆ ಪ್ರಶ್ನೆಯು "ಕಾಲವು ಯಾವ ಕಾಲದಲ್ಲಿ ಪ್ರಾರಂಭವಾಯಿತು ? ಎಂದಾಗಬಹುದು. ಇದು ಹಾಸ್ಯಾಸ್ಪದವಾಗಿಯೇ ಕಾಣುತ್ತದೆ ; ಆದರೂ ಈ ಪ್ರಶ್ನೆಯು ಈ ರೂಪವೇ ಆಗುತ್ತದೆ. ಪ್ರಪಂಚವು ಪ್ರಾರಂಭವಾದುದು ಹೇಗೆ ? ಎಂಬ ಪ್ರಶ್ನೆಯೂ ಇದೆ. ಕೆಲವು ಬೃಹಸ್ಪತಿಗಳು ಈ ಪ್ರಶ್ನೆಗಳಿಗೆ ಉತ್ತರ ಹೇಳಲು ಪ್ರಯತ್ನಪಡಬಹುದು. ಆದರೆ, ರಾಮನು ಆ ಜಾಣರಿಗೇ ಅದನ್ನು ಬಿಡುತ್ತಾನೆ. ರಾಮನು ಶ್ರದ್ಧೆಯಿಂದ ಗಮನ ಕೊಡಬೇಕಾದ ವಿಷಯಗಳನ್ನು ಅದು ಮೀರಿದೆ. ಇಂಥಾ ಪ್ರಶ್ನೆಗಳಿಗೆ ಉತ್ತರವನ್ನು ಕಂಡು ಹಿಡಿಯುವದಕ್ಕಾಗಿ ಪ್ರಯತ್ನ ಮಾಡತಕ್ಕವರಿರಬಹುದು ; ಆದರೇನು ? ಅವರ ಬುದ್ಧಿಯೂ ಕೆಲವು ದೂರ ಹಾಯಬಹುದು ; ಆದರೆ ಅಷ್ಟರಲ್ಲಿಯೇ ಪೂರಾ ಅಭೇದ್ಯವಾದೊಂದು ವಜ್ರದ ಗೋಡೆಗೆ ಬಡಿದು ತಡೆದಂತೆ ಅವರು ಮುಂಗಾಣದೆ ನಿಲ್ಲಬಹುದು

ಈಗ ಇಲ್ಲಿ ಈ ಇಕ್ಕುಳಗಳಿವೆ. ಇಕ್ಕುಳವು ಯಾವ ವಸ್ತುವನ್ನಾದರೂ ಹಿಡಿದುಕೊಳ್ಳಬಹುದು. ಆದರೆ ಅದು ತಾನೇ ತಿರುಗಿ ತನ್ನನ್ನು ಹಿಡಿದು ಉಪಯೋಗಿಸುತ್ತಿರುವ ಕೈಯನ್ನೇ ಹಿಡಿದುಕೊಳ್ಳಲಾರದು ಹೀಗೆ ದೇಶ-ಕಾಲ-ನಿಮಿತ್ತಗಳು ಪ್ರಪಂಚ ವಿಲಾಸವನ್ನು ಗ್ರಹಿಸಬಹುದೇ ಹೊರತು, ಅದರ ಹಿಂದಿರುವ ಆತ್ಮವನ್ನು ಗ್ರಹಿಸಲಾರವು.

ಒಮ್ಮೆ, ಕಣ್ಣಿಗೆ ಪರೆಬಂದಿದ್ದ ನಾಲ್ಕು ಜನ ರೋಗಿಗಳನ್ನು ಶಸ್ತ್ರ ಚಿಕಿತ್ಸೆಗಾಗಿ ವೈದ್ಯಶಾಲೆಗೆ ಕರೆದುಕೊಂಡು ಹೋದರು. ಅವರು ಪೂರ್ತಿ ಕುರುಡರಾಗಿದ್ದುದರಿಂದ ಅವರಿಗೆ ನೇತ್ರೇಂದ್ರಿಯವನ್ನು ಬಿಟ್ಟು ಮಿಕ್ಕ ನಾಲ್ಕೇ ಇಂದ್ರಿಯಗಳಿದ್ದವು. ಅವರು ಆ ರುಗ್ಣಾಲಯದಲ್ಲಿ (ward) ಮಲಗಿದ್ದಾಗ, ಒಂದುದಿನ, ಅವರ ಮಂಚಗಳ ಹತ್ತಿರವಿದ್ದ ಕಿಟಕಿಯ ಗಾಜಿನ ಬಣ್ಣವು ಯಾವದಿರಬಹುದೆಂಬ ಬಗೆಗೆ ಚರ್ಚೆ ಮಾಡುವದಕ್ಕೆ ತೊಡಗಿದರು. ಅವರಲ್ಲಿ ಒಬ್ಬನು "ವಿಶ್ವವಿದ್ಯಾಲಯದಲ್ಲಿ ಓದುತ್ತಿರುವ ನನ್ನ ಮಗನು ಇಲ್ಲಿಗೆ ಬಂದು ನೋಡಿ, ಈ ಕಿಟಕಿಯ ಗಾಜು ಹಳದಿಯಾಗಿದೆ-ಎಂದು ಹೇಳಿದ್ದನು. ಆದ್ದರಿಂದ ಇದು ಹಳದಿಯಾಗಿಯೇ ಇರಬೇಕು" ಎಂದನು. ಅದಕ್ಕೆ ಇನ್ನೊಬ್ಬನು "ಮುನಿಸಿಪಲ್ ಕಮೀಷನರ್ ಆಗಿರುವ ನಮ್ಮ ದೊಡ್ಡಪ್ಪ ಮೂರು ನಾಲ್ಕು ದಿನಗಳ ಹಿಂದೆ ಇಲ್ಲಿಗೆ ಬಂದಿದ್ದರು, ಅವರು ಈ ಕೋಣೆಯಲ್ಲಿರುವ ಈ ಕಿಟಕಿಯ ಗಾಜು ಕೆಂಪಗಿದೆ,—ಎಂದಿದ್ದರು. ಅವರು ಸುಳ್ಳು ಹೇಳುವವರಲ್ಲ, ಆದ್ದರಿಂದ ಇದು ಕೆಂಪಗೇ ಇರಬೇಕು." ಎಂದು ವಾದಿಸಿದನು. ಅದಕ್ಕೆ ಮೂರನೆಯವನು, "ನಮ್ಮ ಅಣ್ಣ ವಿಶ್ವವಿದ್ಯಾನಿಲಯದಲ್ಲಿ ಪ್ರೊಫೆಸರ್ ಆಗಿದ್ದಾರೆ. ಅವರು ಮೊನ್ನೆ ಇಲ್ಲಿಗೆ ಬಂದಿದ್ದರು–ನನ್ನ ಯೋಗಕ್ಷೇಮವನ್ನು ವಿಚಾರಿಸುವುದಕ್ಕಾಗಿ. ಅವರು 'ಆಹಾ! ಈ ಹಸುರು ಗಾಜು ಎಷ್ಟು ಚೆನ್ನಾಗಿದೆ!' ಎಂದರು. ಅವರು ಬಹಳ ಚಾಣಾಕ್ಷರು. ಆದ್ದರಿಂದ ಅವರು ಹೇಳಿದಂತೆ ಇದು ಹಚ್ಚಗೇ ಇರಬೇಕು. ನಿಮ್ಮಿಬ್ಬರ ಅಭಿಪ್ರಾಯಗಳೂ ಸುಳ್ಳಿರಬೇಕು." ಎಂದು ಸಾಧಿಸಿದನು. ಹೀಗೆ ಅವರು ಒಬ್ಬರನ್ನೊಬ್ಬರು ವಿರೋಧಿಸುತ್ತಾ ಆ ಗಾಜಿನ ಬಣ್ಣದ ವಿಷಯದಲ್ಲಿ ಜಗಳವಾಡಿದರು. ಕೊನೆಗೆ ಅದರ ನೈಜವನ್ನು ತಮ್ಮ ತಮ್ಮ ಅನುಭವದಿಂದಲೇ ಕಂಡುಕೊಳ್ಳುವದಕ್ಕಾಗಿ ಪ್ರಯತ್ನಮಾಡಿದರು. ಅವರು ಮೊದಲು ತಮ್ಮ ನಾಲಿಗೆಗಳಿಂದ ಆ ಗಾಜನ್ನು ಬೇರೆ ಬೇರೆಯಾಗಿ ನೆಕ್ಕಿ ನೋಡಿದರು ಅದರಿಂದ ಆ ಗಾಜಿನ ಬಣ್ಣವು ತಿಳಿಯಲಿಲ್ಲ. ಅವರು ತಮ್ಮ ತಮ್ಮ ಬೆರಳ ಗಣ್ಣುಗಳಿಂದ ಆ ಗಾಜನ್ನು ಟಪ, ಟಪ ಬಾರಿಸಿ ಶಬ್ದಕೇಳಿದರು. ಅದರಿಂದ ಅವರಿಗೆ ಗಾಜಿನ ಬಣ್ಣ ತಿಳಿಯಲಿಲ್ಲ. ಅವರು ಅದನ್ನು ಮೂಸಿ ನೋಡಿದರು; ಸ್ಪರ್ಶ ಮಾಡಿದರು, ಆದರೆ ಏನು ಮಾಡಿದರೂ ಅವರಿಗೆ ಅದರ ಬಣ್ಣ ತಿಳಿಯಲಿಲ್ಲ. ಅವರು ಹೊಂದಿದ್ದ ಕಿವಿ, ಮೂಗು, ನಾಲಗೆ, ಚರ್ಮ ಈ ಯಾವ ಇಂದ್ರಿಯಗಳೂ ಅವರಿಗೆ ಬಣ್ಣವನ್ನು ತಿಳಿಸದಾದವು.

ಹೀಗೆಯೇ ನಾವು ಅನಂತವನ್ನು ಇಂದ್ರಿಯಗಳಿಂದ ತಿಳಿಯಲಾರೆವು. ಅದು ಎಷ್ಟು ಅಸಾಧ್ಯವೆಂಬದನ್ನು ಯೋಚಿಸಿರಿ. ಇಂದ್ರಿಯಗಳಿಂದ ಅನಂತವನ್ನು ತಿಳಿಯಬಹುದಾದರೆ, ಇಂದ್ರಿಯಗಳ ಪರಿಮಿತಿಗಿಂತಲೂ ಅದು ಹೆಚ್ಚು ಪರಿಮಿತವಾಗ

ಬೇಕಾಗುತ್ತದೆ. ಇದು ಅಸಂಬದ್ಧ ವಿಶ್ವಪ್ರಜ್ಞೆಯಿಂದ (Cosmic consciousness) ಮಾತ್ರ, ಪರಮಾತ್ಮ ಪ್ರಜ್ಞೆಯಿಂದ (God-consciousness) ಮಾತ್ರ ಅನಂತವನ್ನು ನಾವು ತಿಳಿಯಬಹುದು. ಇಂದ್ರಿಯಗಳು ತಮಗೆ ಮೀರಿದ್ದನ್ನು ಗ್ರಹಿಸಲಾರವು. ಗಾಜಿನ ಬಣ್ಣವನ್ನು ತಾವೇ ಕಂಡುಕೊಳ್ಳಲಾರದ ಆ ಕುರುಡರು ತನ್ನ ಮಗನು ಹೇಳಿದ್ದರಿಂದ ಅದು ಹಳದಿಯಿರಬೇಕೆಂದೂ ಅಣ್ಣನಾದ ಪ್ರೊಫೆಸರ್ ಹೇಳಿದ್ದರಿಂದ ಆ ಗಾಜು ಹಸುರಾಗಿರಬೇಕೆಂದೂ ಮೊದಲಾಗಿ ನಂಬಿಕೊಂಡಂತೆ, ನಮಗೇ ಅನುಭವಕ್ಕೆ ಬಾರದೆ, ಆತ್ಮಸ್ವರೂಪದ ವಿಷಯದಲ್ಲಿ ಹೊರಗಿನವರು ಯಾರೇ ಹೇಳಿದರೂ ಅದನ್ನು ನಂಬಿ ತೃಪ್ತರಾಗಬಾರದು. ಎರಡು ಭಾಗ ಜಲಜನಕ, ಒಂದು ಭಾಗ ಆಮ್ಲಜನಕ ಇವುಗಳ ಸಂಯೋಗದಿಂದ ನೀರು ಉಂಟಾಗುತ್ತದೆಂದು ವಿಜ್ಞಾನವು ಹೇಳುತ್ತದೆ. ಆದರೆ ನನಗೆ ಇದು ತಿಳಿದಿದೆಯೆ ? ಇಲ್ಲ. ಎಲ್ಲಾ ರಸಾಯನ ಶಾಸ್ತ್ರಜ್ಞರೂ ಇದು ಸತ್ಯವೆಂದು ಸಾರಬಹುದು. ಆದರೂ ಇದು ನನಗೆ ತಿಳಿಯದಾಗಬಹುದು. ಆದರೆ ನಾನೇ ಸ್ವತಃ ವಿಜ್ಞಾನ ಪ್ರಯೋಗ ಶಾಲೆಗೆ ಹೋಗಿ ಆ ಪ್ರಯೋಗವನ್ನು ನಡೆಸಿ ಆ ಸತ್ಯವನ್ನು ಮನಗಂಡರೆ ಮಾತ್ರ ಆ ಜ್ಞಾನವು ನನ್ನ ಸ್ವಾನುಭವವಾಗಬಹುದು. ನಾವು ಹೊರಗಿನ ಯಾವ ಪ್ರಮಾಣವನ್ನೂ—ಅದು ಕೃಷ್ಣ ಉವಾಚವೇ ಆಗಿರಲೀ ಕ್ರಿಸ್ತನ ಉಪದೇಶವೇ ಆಗಲೀ ಬುದ್ಧನ ಬೋಧವೇ ಆಗಲೀ ನಂಬಲಾಗದು, ಅವಲಂಬಿಸಲಾಗದು ಯಾವದನ್ನಾದರೂ ತಿಳಿಯಬೇಕಾದರೆ ನಾವೇ ಸ್ವತಃ ತಿಳಿಯಬೇಕೇ ಹೊರತು, ಇನ್ನೊಬ್ಬರ ತಿಳಿವಳಿಕೆಯು ನಮ್ಮದಾಗಲಾರದು. ಗಾಜು ಹಸುರಾಗಿದೆಯೆಂದು ನಂಬಲರ್ಹವಾಗಿರುವ ಶ್ರೇಷ್ಠ ಪ್ರಮಾಣವಾದ (Authority) ಪ್ರೊಫೆಸರೇ ನಮಗೆ ಹೇಳಬಹುದು. ಆದರೆ ಅದನ್ನು ನಾವು ತಿಳಿಯಬೇಕಾದರೆ ನಾವೇ ನೋಡಬೇಕು. ಒಬ್ಬ ತರುಣನು ನನ್ನ ತಂದೆಗೆ ಒಳ್ಳೆಯ ಜೀರ್ಣಶಕ್ತಿ ಇದೆ , ಅವರು ನನಗಾಗಿ ನನ್ನ ಆಹಾರವನ್ನು ಜೀರ್ಣಿಸಿಕೊಡಬಹುದು." ಎಂದು ಹೇಳಬಹುದು. ಆದರೆ ಅದು ಸಾಧ್ಯವೆ? ಎಂದಿಗೂ ಇಲ್ಲ. ಮಗನ ಆಹಾರವನ್ನು ಮಗನೇ ಜೀರ್ಣಿಸಿಕೊಳ್ಳಬೇಕು ನಾನು ಪ್ರಪಂಚದಲ್ಲಿರುವ ಎಲ್ಲಾ ಮಹಾತ್ಮರಿಗೂ ನಮಸ್ಕರಿಸಬಹುದು. ಆದರೆ ಅವರಾರೂ ನನ್ನ ಆಹಾರವನ್ನು ನನಗಾಗಿ ಜೀರ್ಣಿಸಿಕೊಡಲಾರರು. ಅದನ್ನು ನಾನೇ ಜೀರ್ಣಿಸಿಕೊಳ್ಳಬೇಕು. ಅವರೆಲ್ಲರೂ ಕೂಡಿ ನಾನೇ ದೇವರೆಂದು ನನಗೆ ಒಪ್ಪಿಸಲಾರರು. ಅದು ನನ್ನ ಮನಸ್ಸಿಗೇ ಸ್ವಂತ ಸಾಧನಾನುಭವಗಳಿಂದ ಒಪ್ಪಿಗೆಯಾಗಬೇಕು ವಿಶ್ವಪ್ರಜ್ಞೆಯಿಂದಲೇ ನಾವು ಸತ್ಯವನ್ನರಿಯಬಹುದು. ಇದನ್ನು ರಾಮನು ನಿಮಗೆ ಸ್ವಲ್ಪ ಕಾಲದ ಮೇಲೆ ತಿಳಿಸುತ್ತಾನೆ.

(ಇಂದ್ರಿಯಗೋಚರವಾದುದು ಹೊರತು ಹೆಚ್ಚಿನ ತತ್ತ್ವವಿಲ್ಲವೆಂದೂ ಇದ್ದರೂ ತಿಳಿಯಲು ಸಾಧ್ಯವಲ್ಲವೆಂದೂ ಹೇಳುವ) ಅಜ್ಞೇಯತಾವಾದಿಯಾಗಲೀ(Agnostic) ಸ್ವತಂತ್ರ ವಿಚಾರಿಯಾಗಲೀ (Free thinker) 'ನಾನೇ ಸ್ವತಃ ಪರಿಶೋಧಿಸುತ್ತೇನೆ.' ಎನ್ನುತ್ತಾನೆ. ಅವನು ಎಷ್ಟು ದೂರದವರೆಗೆ ಸಾಧಿಸಬಲ್ಲನೆಂಬದನ್ನು ನಾವು ನೋಡತ್ತೇವೆ. ದೀಪದ ಕಡ್ಡಿಯಲ್ಲಿರುವ ದೀಪವನ್ನು ಶೋಧಿಸುವದಕ್ಕಾಗಿ ಅವನು ಆ ಕಡ್ಡಿಯನ್ನು ಕತ್ತರಿಸಿ ಚೂರು ಚೂರು ಮಾಡುತ್ತಾನೆ. ಆದರೆ ಅದರಲ್ಲವನು ದೀಪವನ್ನು ಕಾಣುವದಿಲ್ಲ. ಅನಂತರ ಅವನು ಅದನ್ನು ನುಣ್ಣಗೆ ಪುಡಿ ಪುಡಿ ಮಾಡುತ್ತಾನೆ. ಆದರೂ ಅದರಲ್ಲಿ ದೀಪವು ಕಾಣುವದಿಲ್ಲ. ಹಾಗೆಯೇ ಅವನು ಈ ದೇಹದಲ್ಲಿರುವ ಜೀವವನ್ನು ಕಂಡು ಹಿಡಿಯುವದಕ್ಕಾಗಿ, ಒಂದು ದೇಹವನ್ನು ತೆಗೆದುಕೊಂಡು ಕತ್ತರಿಸಿ ತುಂಡು ತುಂಡು ಮಾಡುತ್ತಾನೆ; ಜೀವವು ಕಾಣುವದಿಲ್ಲ. ಮೂಳೆಗಳನ್ನೆಲ್ಲಾ ಜಗ್ಗಿ ಬಡಿದು ಪುಡಿ ಪುಡಿ ಮಾಡುತ್ತಾನೆ. ಆದರೂ ಅದರಲ್ಲಿ ಜೀವಸತ್ತ್ವವು ದೊರಕುವದಿಲ್ಲ. ಆಗ ಅವನು "ಸತ್ಯವೊಂದು ಇದ್ದರೆ, ಅದೇ ನಾನಾಗಿರಬೇಕು. ಆದರೆ ಅದು ಅರಿವಿಗೆ ನಿಲುಕುವದಿಲ್ಲ. ಅದನ್ನು ಅರಿಯುವದು ಸಾಧ್ಯವಿಲ್ಲ." ಎನ್ನುತ್ತಾನೆ. ಅವನು ಹೋಗಿರುವ ಅಷ್ಟರವರೆಗೇನೋ ಸರಿ; ಆದರೆ ಅವನು ವಿಶ್ವಪ್ರಜ್ಞೆಯನ್ನು ಬೆಳೆಸಿಲ್ಲ; ಅನಂತವನ್ನು ತಿಳಿಯುವದಕ್ಕೆ ಅವನು ಪೂರಾ ವ್ಯಷ್ಟಿಪ್ರಜ್ಞೆಯನ್ನೇ ಉಪಯೋಗಿಸಿದ್ದಾನೆ ಆದರೆ ಅವನದನ್ನು ಈ ರೀತಿಯಿಂದ ನೋಡಲಾಗುವದಿಲ್ಲವೆಂಬದೇನೋ ಸ್ಪಷ್ಟವಾಗಿಯೇ ಇದೆ. ತರ್ಕಬದ್ಧವಾದ ವಿಚಾರದಿಂದ ನಾವು ಅನಂತವನ್ನು ನೇರುವುದು ಸಾಧ್ಯವೆ? ಎನ್ನುವದನ್ನು ನೋಡೋಣ. ಪರಮಾವಧಿಯೆಂದರೆ, ಅನಂತವೆಂಬದೊಂದು ಇದೆ ಎಂದಿಷ್ಟೇ ನಾವು ತಿಳಿಯಬಹುದು. ಆದರೆ ಅದರ ಸ್ವರೂಪವೇನು? ಎಂಬಿದನ್ನು ತಿಳಿಯಲಾರೆವು. ಯಾವನೊಬ್ಬ ಮನುಷ್ಯನು ನಿಮ್ಮ ಹಿಂದಿನಿಂದ ಬಂದು, ನಿಮಗೆ ತಿಳಿಯದಂತೆ ಎರಡು ಕಣ್ಣುಗಳನ್ನೂ ಮುಚ್ಚಿಬಿಡುತ್ತಾನೆ—ಎಂದಿಟ್ಟುಕೊಳ್ಳೋಣ ಯಾರೋ ಕಣ್ಣನ್ನು ಮುಚ್ಚಿದ್ದಾರೆ, ಅವನು ಸ್ನೇಹಿತನೇ ಇರಬೇಕು; ಏಕೆಂದರೆ ಇಷ್ಟು ಸ್ವಾತಂತ್ರ್ಯ ವಹಿಸುವದಕ್ಕೆ ಯಾವ ಅಪರಿಚಿತನಿಗೂ ಸಾಧ್ಯವಿಲ್ಲ;—ಎಂದು ಇಷ್ಟೇ ನಿಮಗೆ ತಿಳಿಯಬಹುದೇ ಹೊರತು, ಆ ವ್ಯಕ್ತಿಯಾರೆಂಬದು ನಿಮಗೆ ಖಚಿತವಾಗಿ ತಿಳಿಯುವದಿಲ್ಲ. ಒಂದು ರಬ್ಬರ್ ಚೆಂಡನ್ನು ಗೋಡೆಗೆ ಎಸೆದರೆ, ಅದು ಗೋಡೆಗೆ ಹೊಡೆದು ತಿರುಗಿ ಹಿಂದಕ್ಕೇ ಬರುತ್ತದೆ. ವಿಚಾರದ ಸ್ವಭಾವವೂ ಹಾಗೆಯೇ. ವಿಚಾರವು ಅನಂತದಲ್ಲಿ ತೂರಲಾರದು. ಅನಂತವನ್ನು ಅರಿಯುವದು ಸಾಧ್ಯವಿದ್ದರೆ ಕೂಡಲೇ ಏಕತ್ವಕ್ಕೆ ಬದಲು ದ್ವೈತವೇ ಸ್ಥಾಪನೆಯಾಗುತ್ತಿತ್ತು. ಈಗ ಜ್ಞಾತೃವಾಗಲೀ

ಜ್ಞೇಯವಾಗಲೀ ಅನಂತವಾಗುತ್ತಿರಲಿಲ್ಲ. ಆದರೆ ವಿಶ್ವಪ್ರಜ್ಞೆಯಿಂದ ವಿಶ್ವ ವ್ಯಾಪಕತ್ವವೂ ಸಾರ್ವತ್ರಿಕತ್ವವೂ ಸ್ಥಾಪನೆಯಾಗುತ್ತದೆ.

ಈಗ ಪರಮಾತ್ಮ ಪ್ರಜ್ಞೆಯನ್ನು ಹೇಗೆ ಬೆಳೆಸಬೇಕೆಂಬ ವಿಷಯಕ್ಕೆ ಮೊದಲು ರಾಮನು ಮಗುವಿನ ವಿಚಾರವಾಗಿ ಸ್ವಲ್ಪ ಹೇಳುತ್ತಾನೆ. ಮಗುವಿಗೆ ವಿಶ್ವಪ್ರಜ್ಞೆಯೂ ಇಲ್ಲ, ವ್ಯಷ್ಟಿಪ್ರಜ್ಞೆಯೂ ಇಲ್ಲ ಚಿಕ್ಕ ಮಗುವಿಗೆ ಯಾವ ತಿಳಿವಳಿಕೆ ಇರುತ್ತದೆ? ನಾವು ಅದರೊಡನೆ ಮಾತನಾಡುವ ಮೊದಲು ಅದು ತನ್ನನ್ನು ತಾನು ತಿಳಿದುಕೊಳ್ಳಲಿ—ಎಂದು ಅಲ್ಲಿಯವರೆಗೆ ಕಾಯುತ್ತೇವೆಯೆ ? ಇಲ್ಲ ಮಗು ಚಿಕ್ಕದಿರುವಾಗ ಅದಕ್ಕೊಂದು ಹೆಸರಿಡುತ್ತೇವೆ. ತಂದೆ ತಾಯಿಗಳು ಆ ಹೆಸರಿನಿಂದಲೇ ಅದನ್ನು ಕರೆಯುತ್ತಾರೆ. ಅವರು ಅದರೊಡನೆ ಮಾತನಾಡುತ್ತಾರೆ, ಅದಕ್ಕೆ ಅನೇಕ ವಿಷಯ ಗಳನ್ನು ತಿಳಿಸುತ್ತಾರೆ. ಅದು ಎಷ್ಟು ಮಧುರವಾಗಿದೆ, ಎಷ್ಟು ಸುಂದರವಾಗಿದೆ, ಎಷ್ಟು ಪ್ರಿಯವಾಗಿದೆ—ಎಂಬದನ್ನೆಲ್ಲಾ ಅದಕ್ಕೆ ಹೇಳುತ್ತಾರೆ ತಂದೆ ತಾಯಿಯ ವಿಷಯವನ್ನು ಅದಕ್ಕೆ ಹೇಳುತ್ತಾರೆ. ಆ ಶಿಶುವು ಬೆಳೆದು ಸ್ವಲ್ಪ ವಯಸ್ಸಾಗಿ ತಾನೇ ಆಡುವದಕ್ಕೆ ತೊಡಗಿದಾಗ ಮಾತನಾಡುವ ಪ್ರಯತ್ನದಲ್ಲಿ ಅರ್ಥವಾಗದಿರುವ ಏನೇನೋ ಶಬ್ದ ಮಾಡುತ್ತದೆ. ಆದರೆ ನಿತ್ಯವೂ ಅನೇಕ ಸಲ 'ಅಮ್ಮಾ ಅಪ್ಪಾ' ಎಂಬ ಶಬ್ದಗಳನ್ನು ಕೇಳಿದ್ದರಿಂದ ಆ ಸಣ್ಣ ಮಗುವು—ಆ ಪುಟ್ಟ ಪುಟಾಣಿ—ಅದೇ ಶಬ್ದಗಳನ್ನು ಅನುಕರಿಸುತ್ತದೆ. ಆಗ ತಾಯಿಯು ತಂದೆಗೆ "ಓ! ನೋಡಿ, ಮಗುವು ನಿಮ್ಮನ್ನು ಕರೆಯುತ್ತಿದೆ. ಪಾ-ಪಾ ಎನ್ನುತ್ತಿದೆ" ಎನ್ನುತ್ತಾಳೆ. ಆಗ ತಂದೆಯು ಮಗುವನ್ನು "ಇಲ್ಲಿ ಬಾ, ಬಾ" ಎಂದು ಕರೆಯುತ್ತಾನೆ. ಆ ಮಗುವಿಗೆ ಈ ಮಾತಿನ ಅರ್ಥವೇನೆಂದು ಗೊತ್ತಿದೆಯೆ? ಇಲ್ಲ. ಆದರೆ ತಂದೆಯ ಚಾಚಿದ ಕೈಗಳಿಂದಲೂ ಪುಸಲಾಯಿಸುವ ಉಪಾಯದಿಂದಲೂ ಅವನ ಮುಖಭಾವ ದಿಂದಲೂ ತಂದೆಯಲ್ಲಿಗೆ ಹೋಗಬೇಕೆಂಬ ಭಾವನೆಯು ಮಗುವಿನ ಮನಸ್ಸಿನಲ್ಲಿ ಮುದ್ರೆಯೊತ್ತುತ್ತದೆ. ಹೀಗೆ ವ್ಯಕ್ತಿಯ ಅರಿವು, ಬೆಳೆದು ಜೀವಂತವಾಗಿರುವವರ ಸಹವಾಸದಿಂದಲೂ ಪ್ರಯತ್ನದಿಂದಲೂ ಅದು ಮಗುವಿನಲ್ಲಿಯೂ ಬೆಳೆಯುತ್ತದೆ. ಹಾಗೆಯೇ ಯಾರು ತಮ್ಮಲ್ಲಿರುವ ದೇವತ್ವವನ್ನರಿತು ವಿಶ್ವಪ್ರಜ್ಞೆಯುಳ್ಳವ ರಾಗಿದ್ದಾರೋ ಅವರ ಸಹವಾಸದಿಂದ ನಮ್ಮಲ್ಲಿಯೂ ಅದು ಬೆಳೆಯುತ್ತದೆ. ತೀವ್ರ ವಾದ ದುಃಖವುಳ್ಳವರ ಸಹವಾಸದಿಂದ ನಾವೂ ದುಃಖಿತರಾಗುವದೂ ಉತ್ಕಟವಾದ ಉತ್ಸಾಹವೂ ಸಂತೋಷವೂ ಉಳ್ಳವರ ಸಹವಾಸದಿಂದ ನಾವೂ ಸಂತೋಷೋತ್ಸಾಹ ವುಳ್ಳವರಾಗುವದೂ ಸ್ವಾಭಾವಿಕವಾಗಿ ಎಲ್ಲರ ಅನುಭವದಲ್ಲಿದೆ. ಆದ್ದರಿಂದ ವಿಶ್ವ ಪ್ರಜ್ಞೆಯುಳ್ಳ ಮಹಾತ್ಮರ ಸಹವಾಸದಿಂದ ಆ ಪ್ರಜ್ಞೆಯು ನಮ್ಮಲ್ಲಿಯೂ

ಪ್ರಜ್ವಲಿತವಾಗುತ್ತದೆ. ಸಹವಾಸವು ಪ್ರಕೃತಿಯೊಡನೆ ಆಗಲೀ ಆತ್ಮಪ್ರಕಾಶ ಉಳ್ಳವರೊಡನೆ ಆಗಲೀ ಅವರ ಲೇಖನಗಳೊಡನೆ ಆಗಲೀ ಅಡ್ಡಿ ಇಲ್ಲ ; ಅಂತು ಸಹವಾಸವು ನಮ್ಮಲ್ಲಿ ನಿಶ್ವಪ್ರಜ್ಞೆಯನ್ನು ಕೆರಳಿಸಿ ಬೆಳಗಿಸುತ್ತದೆ. ತಂದೆ ತಾಯಿಗಳು ಮಗುವನ್ನು ರಾಮ ರಾಮ (ಜಾನಿ) ಎಂದು ಕರೆದು ಕರೆದು, ಅದು ತಾನು ರಾಮನೇ ಹೊರತು ಮತ್ತೊಂದಲ್ಲ—ಎಂದು ನಿಶ್ಚಿತವಾಗಿ ತಿಳಿಯುವಂತೆ ಮಾಡುತ್ತಾರೆ. ಒಂದು ಕೋಣೆಯಲ್ಲಿ ಮೂರು ನಾಲ್ಕು ಹುಡುಗರು ಮಲಗಿ ನಿದ್ರಿಸುತ್ತಿರಬಹುದು ಅವರಲ್ಲಿ ಶ್ಯಾಮ, ಸೋಮ, ಭೀಮರೂ ಇರಬಹುದು ಆದರೆ, ರಾಮನನ್ನು ಕರೆದಾಗ ರಾಮನೇ ಓ, ಎಂದು ಉತ್ತರಿಸಿ ಎದ್ದು ಬರುವನೇ ಹೊರತು, ಅಲ್ಲಿಯೇ ಮಲಗಿರುವ ಮಿಕ್ಕವರಿಗೆ ಆ ಕೂಗು ಅಷ್ಟೇ ಗಟ್ಟಿಯಾಗಿ ಕೇಳಿದ್ದರೂ ಅವರು ಎಚ್ಚರಗೊಳ್ಳುವದಿಲ್ಲ. ಏಕೆಂದರೆ, ಮಿಕ್ಕವರನ್ನು ಉದ್ದೇಶಿಸಿ ಅವರ ಹೆಸರುಗಳನ್ನು ಕರೆದಿರುವದಿಲ್ಲ ತಾನೇ ರಾಮನೆಂಬ ಪ್ರಜ್ಞೆಯು ಆ ಮಗುವಿಗೆ ಮನಸ್ಸಿನ ಒಳಗೆ ಆಳದಲ್ಲಿ ಗಾಢ ನಿದ್ರೆಯ ಕಾರಣ ಶರೀರದಲ್ಲಿ ಸಹ ನಾಟಿರುತ್ತದೆ, ಬೇರು ಇಳಿದಿರುತ್ತದೆ.

ತಾನೇ ದೇವರೆಂಬ ನಿಶ್ಚಯಜ್ಞಾನದಿಂದ ಬೋಧಿಸುತ್ತಿರುವವನಿಗೆ ಅಜ್ಞಜನರು "ನೀನೇ ದೇವರಾದರೆ, ಎಲ್ಲಿ, ಒಂದು ಹುಲ್ಲುಗರಿಕೆಯನ್ನು ಸೃಷ್ಟಿಮಾಡಿ ತೋರಿಸು, ನೋಡೋಣ" ಎಂದು ಕೇಳಬಹುದು. ಅವರು, "ಈಗ ಇಲ್ಲಿ ನೋಡು ನಿನ್ನನ್ನು ನೀನು ದೇವರೆನ್ನುತ್ತೀಯೆ ; ನೀನು ಏನು ಮಾಡಬಲ್ಲೆ ? ದೇವರು ಈ ವಿಶ್ವವನ್ನೇ ಸೃಷ್ಟಿಸಿದನು ; ನೀನಾದರೋ ಒಂದು ಹುಲ್ಲುಕಡ್ಡಿಯನ್ನೂ ಮಾಡಲಾರೆ. ಆದರೂ ನಿನ್ನನ್ನು ದೇವರೆಂದು ಕರೆದುಕೊಳ್ಳುತ್ತೀಯೆ. ಎಲ್ಲಿ ನೀನು ಏನು ಮಾಡಬಲ್ಲೆ, ಎಂಬುದನ್ನು ತೋರಿಸು" ಎಂದು ಆಕ್ಷೇಪಿಸಬಹುದು. ಯೇಸುಕ್ರಿಸ್ತನನ್ನೂ ಹೀಗೆಯೆ ಮರುಳುಮಾಡಿ ಪ್ರತಿಭಟಿಸಲಿಲ್ಲವೆ ? ಪರ್ವತದಿಂದ ದುಮುಕಬೇಕೆಂದು ಅವನನ್ನು ಒತ್ತಾಯಪಡಿಸಿದ ಸೈತಾನನ ಮೂದಲಿಕೆಗಳಿಗೆ ಕ್ರಿಸ್ತನು ಲಕ್ಷ್ಯ ಕೊಡದೆ, "(Get thee behind me)." "ಮರುಳೆ! ತೊಲಗಾಚೆ, ಬೆನ್ನ ಹಿಂದೆ ಸರಿ, ಶನಿ," ಎಂದು ಗುಡುಗಲಿಲ್ಲವೆ ? ಎಲ್ಲಾ ಶಕ್ತಿಯೂ ಅವನದೇ ಆಗಿತ್ತು. ಆದರೆ ಯಾವ ಮಹಿಮೆಯನ್ನಾದರೂ ಅಪನಂಬಿಕೆಯವನಿಗೆ ಏಕೆ ತೋರಿಸಬೇಕು ? ಕೋಟಿ ಕೋಟಿ ಪವಾಡಗಳನ್ನು ಮಾಡಿ ತೋರಿಸಿದರೂ ಸಂಶಯಾತ್ಮರು ನಂಬುವಂತೆ ಮಾಡುವದು ಸಾಧ್ಯವಲ್ಲ. ಅವನೂ ತನ್ನಲ್ಲಿರುವ ಸರ್ವಾತ್ಮಪ್ರಜ್ಞೆಯನ್ನು ಪ್ರಕಾಶಪಡಿಸಿದ ಹೊರತು ತನ್ನೊಳಗಿರುವ ಆತ್ಮನನ್ನು ಅರಿಯುವದಿಲ್ಲ ಈಗ "ನಾನು ದೇವರು", ಎಂದು ರಾಮನು ಹೇಳಿದರೆ, ಅದರ ಅರ್ಥವೇನು ? ಈ ಪುಟ್ಟ ವ್ಯಕ್ತಿಯನ್ನು ದೇವರೆನ್ನುತ್ತಾನೆಯೆ ? ಇಲ್ಲ. ಈ ಮನಸ್ಸನ್ನು ದೇವರು ಎನ್ನುತ್ತಾನೆಯೆ?

ಇಲ್ಲ, ಅದೂ ಅಲ್ಲ. 'ನಾನು ದೇವರು' ಎನ್ನುವದರ ಅರ್ಥ ಹೀಗಿದೆ: ಒಬ್ಬ ಮನುಷ್ಯನು ಎಂ. ಎ; ಪದವೀಧರನಾದರೆ, ಅಥವಾ ಇನ್ನೊಬ್ಬನು ರಾಜನಾದರೆ, ಆ ಪದವಿಗಳೂ ಪ್ರಶಸ್ತಿಗಳೂ ಅಧಿಕಾರಗಳೂ ಅವರವರ ವ್ಯಕ್ತಿತ್ವಕ್ಕೆ ಹೊರಗಿನಿಂದ ಸೇರಿಸಿಕೊಂಡವು; ಒಂದು ರೀತಿಯಿಂದ ಅವರಿಗೆ ಹೊರಗೆ ತಗುಲಿಕೊಂಡವು. ಹಾಗೆಯೇ ಹಾವು ಕಪ್ಪಾಗಿದೆ ಎಂದರೆ, ಕಪ್ಪು ಹಾವಿನ ಹೊರಗಿನ ಒಂದು ಗುಣವೇ ಹೊರತು, ಕಪ್ಪೇ ಹಾವಲ್ಲ ಆದರೆ, ಹಾವು ಹಗ್ಗವಾಗಿದೆ ಎಂದರೆ ಅದು ಪೂರಾ ಬೇರೆ ವಿಚಾರವೇ ಆಗುತ್ತದೆ. ನೀವಾಗ ಅಲ್ಲಿ ಬರೀ ಹಗ್ಗವನ್ನು ನೋಡುತ್ತೀರೇ ಹೊರತು ಹಾವನ್ನಲ್ಲ. ನಮಗೆ ಹಾವೆಂದು ತೋರಿದ್ದು ಕೇವಲ ಭ್ರಾಂತಿ. ನಿಮ್ಮ ಅಜ್ಞಾನದಿಂದ ಹಗ್ಗವನ್ನೇ ಹಾವೆಂದು ತಿಳಿದಿರಿ. ಹಾವು ಎನ್ನುವುದು ನಿಜವಲ್ಲ; ಹಗ್ಗವೇ ನಿಜ. ನಿಮಗೆ ಹಾವೆಂದು ಕಂಡಾಗಲೂ ಅದು ನಿಜವಾಗಿ ಹಗ್ಗವೇ ಆಗಿತ್ತು. "ನಾನು ದೇವರು" ಎನ್ನುವದು ಈ ದೃಷ್ಟಿಯಿಂದ. "ನಾನು ರಾಜ" ಎನ್ನುವಂತಲ್ಲ ಇದು. 'ನಾನು ದೇವರು' ಎನ್ನುವಾಗ ಈ ವ್ಯಕ್ತಿತ್ವದ ಅಲ್ಪವಾದ ಅಹಂಕಾರವನ್ನು ದೇವರು ಎನ್ನುವದಿಲ್ಲ. ಈ ವ್ಯಕ್ತಿತ್ವವು ಹಾವಿನಂತೆ ಕೇವಲ ಭ್ರಾಂತಿ. ಈ ವ್ಯಕ್ತಿತ್ವವಲ್ಲದ ನಾನು ನಿಜವಾಗಿ ದೇವರೇ ಆಗಿದ್ದೇನೆ. ಅನಂತವೂ ಸರ್ವವೂ ಆದ ದೇವರೇ ನಾನು; ನನಗೆ ಎರಡನೆಯದಿಲ್ಲವಾದ್ದರಿಂದ ವಿರೋಧಿಯೇ ಇಲ್ಲ

ಸಮುದ್ರದಲ್ಲಿರುವ ತೆರೆಗಳು ಅನೇಕವಾದರೂ ಆ ಎಲ್ಲವುಗಳಲ್ಲಿರುವ ನೀರು ಒಂದೇ ಆಗಿರುವಂತೆ, ಎಲ್ಲಾ ದೇಹಗಳಲ್ಲಿರುವ ಆತ್ಮ ಒಂದೆ ಆಗಿದೆ. ಆದ್ದರಿಂದ ಎಲ್ಲಾ ದೇಹಗಳೂ ಆತ್ಮನಾದ ನನ್ನ ದೇಹಗಳೇ. ಒಂದು ದೀಪವನ್ನೇ ಅನೇಕ ಭಾಷೆಗಳಲ್ಲಿ ಅನೇಕ ಶಬ್ದಗಳಿಂದ ಕರೆದರೂ ದೀಪ ಒಂದೇ ಆಗಿರುವಂತೆ ಆತ್ಮ ಒಂದೇ. ಆತ್ಮದಲ್ಲಿ ಹೆಸರುಗಳಿಂದ ಏನೂ ಬದಲಾವಣೆಯಾಗುವದಿಲ್ಲ. ಸಮಸ್ತವೂ ಆತ್ಮವೇ ಆಗಿದೆ.

ಈ ದೇಹದಲ್ಲಿ ಪ್ರತಿಯೊಂದು ಅವಯವವೂ ಇಡಿಯ ದೇಹದಿಂದ ಹೇಗೆ ಬೇರ್ಪಡಿಸಲಾಗದ ಒಂದೊಂದು ಭಾಗವಾಗಿದೆಯೋ ಹಾಗೆ ಇಡಿಯ ವಿಶ್ವದಲ್ಲಿ ಪ್ರತಿಯೊಂದು ವ್ಯಕ್ತಿಯೂ ಅಖಂಡ ವಿಶ್ವದಿಂದ ಬೇರ್ಪಟ್ಟು ಸ್ವತಂತ್ರವಾಗಿರಲಾರದ ಭಾಗವಾಗಿದ್ದಾನೆ. ನಮ್ಮ ಕೈಯೇ ಕೆಲಸವನ್ನು ಮಾಡಿ ಕಷ್ಟಪಟ್ಟು ದುಡಿದರೂ, ದುಡಿದುದನ್ನೆಲ್ಲಾ ತಾನೊಂದೇ ತಿನ್ನುವ ಹಾಗಿಲ್ಲ. ಕೈಯೊಂದೇ ಶ್ರಮಪಟ್ಟಿದೆಯೆಂದೂ ಅದರ ಸಂಪಾದನೆಯು ಅದಕ್ಕೇ ಸಲ್ಲಬೇಕೆಂದೂ ವಾದಿಸಿ, ಕೈಗೆ ಇಂಜೆಕ್ಷನ್ ಮೂಲಕ ಆಹಾರವನ್ನು ಕೊಟ್ಟರೆ ಪ್ರಯೋಜನವಾಗಬಹುದೆ? ಕೈಯು ಮೈಯ ಅವಿಭಾಜ್ಯವಾದ ಒಂದು ಅಂಗವಾಗಿರುವದರಿಂದ, ಅದಕ್ಕೆ ಪ್ರತ್ಯೇಕವಾದ ಸ್ವತಂತ್ರ

ಇಲ್ಲ. ದುಡಿಯುವದು ಕೈಯಾದರೂ ಅದು ದುಡಿದು ತಂದ ಆಹಾರವನ್ನು ಬಾಯಿಂದ ತಿಂದು, ಹೊಟ್ಟೆಯು ಜೀರ್ಣಿಸಿಕೊಂಡು, ಇಡಿಯ ದೇಹದ ಎಲ್ಲಾ ಅವಯುವಗಳಿಗೂ ಅವವುಗಳಿಗೆ ಅಗತ್ಯವಾದಷ್ಟು ಆಹಾರ ಸತ್ತ್ವವನ್ನು ಹಂಚಿ, ಕೈಗೆ ಅರ್ಹತೆಯಿರುವಷ್ಟನ್ನು ಕೈಗೆ ಸಲ್ಲಿಸುತ್ತದೆ. ಕೈಯೊಂದೇ ಕೆಲಸ ಮಾಡುವಂತೆ ತೋರಿದರೂ ಜೀವಂತವಾದ ಇಡಿಯ ದೇಹದ ಸಹಾಯವಿಲ್ಲದೆ, ಪ್ರತ್ಯೇಕವಾದ ಕೈ ನಿರ್ಜೀವವಾದುದರಿಂದ ಕೆಲಸ ಮಾಡಲಾರದು. ಆದ್ದರಿಂದ ಒಂದು ಬಿಡಿಭಾಗವೇ ಕೆಲಸ ಮಾಡುವಂತೆ ತೋರಿದರೂ ಅದೊಂದರ ಮೂಲಕ ಇಡಿಯೇ ಕೆಲಸ ಮಾಡು ತ್ತಿರುತ್ತದೆ. ಹಾಗೆಯೇ ಯಾವನಾದರೂ ತಾನು ಸ್ವತಂತ್ರ ವ್ಯಕ್ತಿಯೆಂದೂ ಯಾರ ಹುಗೂ ಸಂಗವೂ ತನಗಿಲ್ಲವೆಂದೂ ಸಂಪೂರ್ಣ ಅಖಂಡವಾದ ಜೀವಂತ ವಿಶ್ವದಿಂದ ಕತ್ತರಿಸಿಕೊಂಡ ಕೂಡಲೇ—ಪುನಃ ತನ್ನ ಸಮಗ್ರತೆಯನ್ನು ಅರಿಯುವವರೆಗೂ— ತಪ್ಪದೇ ಸಂಕಟ ಪಡುತ್ತಾನೆ ; ಅವನು ತನ್ನ ಪರಿಪೂರ್ಣ ಅಖಂಡತೆಯ ಅನುಭವ ಪಡೆಯುವವರೆಗೂ ಅವನ ದುಃಖಾನುಭವದಲ್ಲಿ ಬಿಡುವೇ ಇರುವದಿಲ್ಲ. ಸರ್ವಾತ್ಮ ಭಾವನೆಯು ಅಥವಾ ಸರ್ವಾತ್ಮ ಪ್ರಜ್ಞೆಯು ಬೆಳೆದಾಗ ಎಲ್ಲಾ ದೇಹಗಳೂ ಪರಸ್ಪರ ಅವಲಂಬಿಗಳೆಂದೂ ನಿಕಟ ಸಂಬಂಧವುಳ್ಳವುಗಳೆಂದೂ ಎಲ್ಲಾ ದೇಹಗಳೂ ನನ್ನವೇ (ತನ್ನವೇ) ಎಂದೂ ಬೇರಲ್ಲವೆಂದೂ ಅನುಭವ ಪಡೆಯುತ್ತೇವೆ.

ಒಮ್ಮೆ ಒಬ್ಬ ಸ್ವಾಮಿಯು ಅಕ್ಕಸಾಲಿಯ ಹತ್ತಿರ ಹೋಗಿ "ನಿನ್ನಲ್ಲಿ ಉತ್ತಮ ವಾಗಿರುವ ಒಂದು ಬಂಗಾರದ ಉಂಗುರವನ್ನು ದೇವರ ಕೈಬೆರಳಿಗೆ ಇಡಿಸು" ಎಂದನು. ಅನಂತರ ಅವನು ಮೋಚಿಯ ಹತ್ತಿರ ಹೋಗಿ "ನಿನ್ನ ಜೋಡುಗಳಲ್ಲೆಲ್ಲಾ ಉತ್ತಮ ವಾದ ಜೋಡನ್ನು ತಂದು ದೇವರ ಪಾದಗಳಿಗೆ ತೊಡಿಸು". ಎಂದು ಹೇಳಿದನು. ಆಮೇಲೆ ಅವನು ಚಿಪ್ಪಿಗನಲ್ಲಿ ಹೋಗಿ, "ನಿನ್ನ ಉಡುಪುಗಳಲ್ಲೆಲ್ಲಾ ಅತ್ಯುತ್ತಮ ವಾದ ಉಡುಪನ್ನು ತಂದು ದೇವರಿಗೆ ಧರಿಸು" ಎಂದು ಹೇಳಿದನು. ಆ ಸ್ವಾಮಿಯು ತನ್ನ ದೇಹಕ್ಕೆ ಎನ್ನುವ ಅರ್ಥದಲ್ಲಿ ದೇವರಿಗೆ ಎಂದು ಹೇಳಿದ್ದನು. ಜನರು ಅವನ ಅಭಿಪ್ರಾಯವನ್ನು ತಿಳಿದು, ಅವನು ದೇವದೂಷಕನೆಂದೂ ಪಾಷಂಡಿಯೆಂದೂ ನಿಂದಿಸಿ, ಅವನನ್ನು ಕಾರಾಗೃಹದಲ್ಲಿ ಹಾಕಿ ಶಿಕ್ಷಿಸಬೇಕೆಂದು ಓಡಿದರು. ಆಗ ಅವನು, ತನ್ನನ್ನು ಶಿಕ್ಷಿಸುವದಕ್ಕೆ ಮೊದಲು ಜನರೆಲ್ಲಾ ದಯವಿಟ್ಟು ಸಭೆ ಸೇರಿ ತನ್ನ ನಾಲ್ಕು ಮಾತು ಗಳನ್ನು ಕೇಳಬೇಕೆಂದು ಅರಿಕೆ ಮಾಡಿ ಉಪಾಯದಿಂದ ಜನರನ್ನು ಕೂಡಿಸಿದನು. ಆಗ ಆ ಸ್ವಾಮಿಯು, ಜನರು ಮೆಚ್ಚುವಂತೆ ಕೆಲವು ಹೊತ್ತು ಉಪನ್ಯಾಸ ಮಾಡಿ, "ಸೃಷ್ಟಿ ಕರ್ತನಾದ ಸರ್ವಶಕ್ತ ಪರಮಾತ್ಮನೇ ವಿಶ್ವವನ್ನೆಲ್ಲಾ ನಿರ್ಮಾಣ ಮಾಡಿದ್ದಾನೆ ; ಆದ್ದರಿಂದ ಈ ಪ್ರಪಂಚವು ಯಾರದು ?" ಎಂದು ಜನರನ್ನು ಕೇಳಿದನು. ಅದಕ್ಕೆ

ಜನರೆಲ್ಲಾ "ದೇವರದೇ" ಎಂದು ಹೇಳಿದರು. "ಸೂರ್ಯ, ಚಂದ್ರ, ನಕ್ಷತ್ರಗಳು ಯಾರವು?" ಎಂದು ಕೇಳಿದನು ಅವರು "ದೇವರವು" ಎಂದರು. "ಈ ಹೊಲ ಮನೆಗಳೆಲ್ಲಾ ಯಾರವು?" ಎಂದು ಕೇಳಿದನು. ಅದಕ್ಕೂ ಅವರು "ಎಲ್ಲಾ ದೇವರವೇ" ಎಂದರು. ಸ್ವಾಮಿಯು "ಇದನ್ನು ನೀವು ನಿಜವಾಗಿಯೂ ನಂಬುತ್ತೀರೋ?" ಎಂದು ಕೇಳಿದನು. ಅವರು "ಖಂಡಿತ, ಅತ್ಯಂತ ಶ್ರದ್ಧೆಯಿಂದ ನಂಬುತ್ತೇವೆ, ಇದೇ ಸತ್ಯ". ಎಂದು ಹೇಳಿದರು. ಆಗ ಸ್ವಾಮಿಯು "ನೀವೇ ಒಪ್ಪುವಂತೆ ಎಲ್ಲವೂ ದೇವರದಾದಮೇಲೆ ಈ ದೇಹವು ಯಾರದು?" ಎಂದು ಕೇಳಿದನು. ಅವರು "ದೇವರದು" ಎಂದರು. ಸ್ವಾಮಿಯು "ಯಾರ ಕಾಲು ? ಯಾರ ಕೈ ?" ಎಂದು ಕೇಳಿದನು. ಅವರು "ದೇವರದು, ದೇವರದು" ಎಂದರು. ಹೀಗೆ ಅವರ ವಿಚಾರಸರಣಿಯಿಂದಲೇ ಎಲ್ಲಾ ದೇವರದೆಂದು ಅವರೇ ಒಪ್ಪಿದ್ದರಿಂದ ಜನರು ತಮ್ಮ ತಪ್ಪನ್ನು ತಿಳಿದು ನಾಚಿಕೊಂಡು ಸ್ವಾಮಿಯನ್ನು ಏನೂ ಮಾಡಲಾರದೆ ಬಿಟ್ಟು ಬಿಟ್ಟರು ಅವರು ಅಜ್ಞಾನಿಗಳಾದ್ದರಿಂದ ಸ್ವಾಮಿಗಳಿಗಿದ್ದಷ್ಟು ಆಳವಾದ ತಿಳಿವಳಿಕೆ ಅವರಿಗಿರಲಿಲ್ಲ.

ಇಂಡಿಯಾದಲ್ಲಿ ಒಬ್ಬ ಮನುಷ್ಯನು ಸಾಯುತ್ತಿರುವಾಗ ಅವನು ದೇಹವನ್ನು ಬಿಡುತ್ತಾನೆ, ಎನ್ನುತ್ತಾರೆ. ಆದರೆ ಇಲ್ಲಿ ಪಾಶ್ಚಾತ್ತ್ಯ ದೇಶಗಳಲ್ಲಿ ಅವನು ಆತ್ಮವನ್ನು (ಅಥವಾ ಪರಮಾತ್ಮನನ್ನು) ಬಿಡುತ್ತಾನೆ—ಎನ್ನುತ್ತಾರೆ. ಇಲ್ಲಿ ಹೇಳುವದಕ್ಕಿಂತಲೂ ಅಲ್ಲಿ ಹೇಳುವದು ಹೆಚ್ಚು ಸರಿ. ಅವರ ಮಾತಿನಲ್ಲಿ ಆತ್ಮವು ದೇಹಕ್ಕಿಂತ ಬೇರೆ ಎಂಬ ಸೂಚನೆಯಿದೆ. ಇಂಡಿಯಾ ಜನರು "ಪ್ರಾಣವು ಹೋಯಿತು" ಎಂದೂ ಹೇಳುತ್ತಾರೆ.

ಮದ್ಯಪಾಯಿಗಳಾದ ಇಬ್ಬರು ಅಮಲೇರಿದ ಸಮಯದಲ್ಲಿ ಏನೇನೋ ವಿಚಿತ್ರವಾದ ಅನುಭವಗಳನ್ನು ಕಾಣುತ್ತಾ ಅದರಲ್ಲಿ ಒಬ್ಬನು "ಅಯ್ಯೋ ಅಣ್ಣಾ, ನನ್ನ ದೇಹದಿಂದ ಪ್ರಾಣವು ಹೊರಟು ಹೋಗುತ್ತಾ ಇದೆ". ಎಂದು ಹೇಳಿದ. ಇನ್ನೊಬ್ಬನು, ಅವನ ಪ್ರಾಣವು ಪಾಪ ! ಹೊರಗೆ ಹೋಗಿಬಿಡಬಾರದೆಂದು, ಒಳಗೇ ಇರಬೇಕೆಂದು, ಅವನ ಮೂಗನ್ನೂ ಬಾಯಿಯನ್ನೂ ಕಿವಿಗಳನ್ನೂ ಬಿಗಿಯಾಗಿ ಒತ್ತಿ ಹಿಡಿದನು. ಆದರೆ ಉಸಿರು ಒಳಗೇ ಕಟ್ಟಿ, ಜೀವವು ಮಾತ್ರ ಹೋಗುವದೆಂಬದು ಆ ಕುಡುಕರಿಗೆ ತಿಳಿಯಲಿಲ್ಲ.

ಶ್ರೀಕೃಷ್ಣನು ಒಂದು ದಿನ ಒಂದು ದೊಡ್ಡ ಔತನ ಮಾಡಬೇಕಾಗಿತ್ತು. ಅವನು

ಮುಖ್ಯರಾದ ಮಂತ್ರಿಗಳು ಮೊದಲಾದವರಿಗೆಲ್ಲಾ ಆಹ್ವಾನವನ್ನು ಕಳಿಸಿದ್ದನು. ಆದರೆ ಕೃಷ್ಣನಿಗೆ ಅತ್ಯಂತ ಪ್ರಿಯಳಾದ ರಾಧೆಗೇ ಕಳಿಸಿರಲಿಲ್ಲ. ಪ್ರಧಾನ ಮಂತ್ರಿಯು ಇದನ್ನು ತಿಳಿದು, ರಾಧೆಗೆ ಆಹ್ವಾನ ಪತ್ರಿಕೆಯನ್ನು ಕಳಿಸಬೇಕೆಂದು ಕೃಷ್ಣನಿಗೆ ಒತ್ತಾಯ ಪಡಿಸಿದನು. ಕೃಷ್ಣನು 'ಬೇಡ' ಎಂದನು. ಆದರೆ ಪ್ರಧಾನಿಗೆ ಸಮಾಧಾನವಾಗದೆ, ರಾಧೆಯ ಹತ್ತಿರ ತಾನೇ ಹೋಗಿ ಔತನದ ವಿಷಯವನ್ನು ತಿಳಿಸಿ ಆಕೆಯನ್ನು ಕೃಷ್ಣನ ಪರವಾಗಿ ಆಹ್ವಾನಿಸಿದನು. ಆಗ ರಾಧೆಯು "ನೀವು ಔತನ ಮಾಡುವಾಗ ನಿಮ್ಮ ಸ್ನೇಹಿತರಿಗೆಲ್ಲಾ ಕರೆಯೋಲೆಗಳನ್ನು ಕಳಿಸುತ್ತೀರಿ. ಆದರೆ ನಿಮಗೆ ನೀವೇ ಅದನ್ನು ಕಳಿಸುವದಿಲ್ಲ. ಅಲ್ಲವೆ ? ನಾನು ಕೃಷ್ಣನಿಂದ ಬೇರೆ ಇಲ್ಲ. ನಾನೂ ಕೃಷ್ಣನೂ ಒಂದೇ. ಕೃಷ್ಣನ ಕಾರ್ಯಗಳೆಲ್ಲಾ ನನಗೆ ಗೊತ್ತಿವೆ." ಎಂದಳು.

ಒಂದು ದಿನ ಮಜ್ನುವಿನ ಪ್ರಿಯಳಾದ ಲೈಲಿಗೆ (ಲೈಲಾಳಿಗೆ) ಅಸ್ವಸ್ಥತೆಯುಂಟಾಯಿತು. ಏನು ಮಾಡಿದರೂ ಗುಣವಾಗಲಿಲ್ಲ. ವೈದ್ಯರನ್ನು ಕರೆಸಿದರು. ವೈದ್ಯರು ಬಂದು ಆಕೆಯ ಮೈಯಿಂದ ಸ್ವಲ್ಪ ರಕ್ತವನ್ನು ಹೊರ ತೆಗೆದರೆ ಆಕೆಯ ಬಾಧೆ ಪರಿಹಾರವಾಗಬಹುದೆಂದು ಆಕೆಯ ಕೈಯಲ್ಲಿ ಶಸ್ತ್ರದಿಂದ ಒಂದು ಸೀಳು ಗಾಯವನ್ನು ಮಾಡಿದರು. ಆದರೆ ಆ ಕೈಯಿಂದ ರಕ್ತವೇ ಬರಲಿಲ್ಲ. ಆಗ ಮಜ್ನುವಿನ ಕೈಯಿಂದ ರಕ್ತವು ಹರಿಯುವದಕ್ಕೆ ತೊಡಗಿತು. ಆ ಪ್ರೇಮಿಗಳ ಐಕ್ಯಭಾವವು ಅಷ್ಟು ತೀವ್ರವಾಗಿತ್ತು.

## ಪ್ರಪಂಚ

ಈ ಬಾಲಬೋಧೆಯು ಎನ್ನ ಮಹಿಮೆಯನೆ ಚೆನ್ನಾಗಿ ವರ್ಣಿಸಿದೆ-
ಇದ ನೋಡಿ ನಾನಧ್ಯಯನ ಮಾಡಿ, ಕಲಿತೆನಿದನು.
ಎನ್ನ ಅನಂತ ಶಕ್ತಿಯನೆ ಬಗೆ ಬಗೆಯಿಂದ ವಿವರಿಸುವ-
ಇದರ ಅಕ್ಷರಗಳು ಮಾತುಗಳು ಆಗಿದ್ದವೆನಗೆ ವಿನೋದ ವಸ್ತುಗಳು.
ಹಿಂದೊಂದು ಕಾಲದಲಿ ಎಷ್ಟೊಂದು ಕೌತುಕವೆನಿಸಿದ್ದ ಇದರ ವರ್ಣ ಮಾಲೆಯನು
ಈಗ ನಾನೆಸೆಯುವೆನು ಪಾಳು ಕಸಕಾಗದದ ಬುಟ್ಟಿಯಲಿ.

ಈ ಕಿರು ಹೊತ್ತಗೆಯ ಹಾಳೆಹಾಳೆಯನೀಗ ಹರಿದೊಟ್ಟಿ ದಹಿಸುವೆನು,
ಎನ್ನ ಸುಂದರ ಚುಂಗಾಣಿ ಹೊಗೆ ಕೊಳವೆಯಲಿ ಬೆಂಕಿ ಹೊತ್ತಿಸಲು ;

ಅದರಿಂದೆ ಹೊಗೆಬತ್ತಿಯನು ಸೇದಿ ಬಾಯಿಂದ ಊದೂದಿ ಬಿಡುವೆ,
ನಿಡು ಸುರುಳಿ ಹೊಗೆ ಆಗಸದಿ ಮೇಲೇರಿ ತೇಲುವದ ಮೋಜಿನಲಿ
ನೋಡುತಿರುವೆ !

ಓಂ ! ಓಂ ! ಓಂ !

# Man, The Master of His own Destiny

# ಮನುಷ್ಯನು ತನ್ನ ಅದೃಷ್ಟಕ್ಕೆ ತಾನೇ ಅಧಿಪತಿ

## ಸ್ಯಾನಫ್ರ್ಯಾನ್‌ಸಿಸ್ಕೋ ನಗರದ ' ಗೋಲ್ಡನ್ ಗೇಟ್ ಹಾಲ್ 'ನಲ್ಲಿ ತಾ|| **24-1-1903**ರಲ್ಲಿ ಮಾಡಿದ ಉಪನ್ಯಾಸ

ಈ ಸಂಪನ್ನ ಸ್ತ್ರೀಪುರುಷ ರೂಪದಲ್ಲಿರುವ ಸಮಗ್ರ ವಿಶ್ವದ ಪ್ರಭುವೆ, " ಮಾನವನು ತನ್ನ ಅದೃಷ್ಟಕ್ಕೆ ತಾನೇ ಒಡೆಯ" ಎಂಬಿದೇ ಈ ರಾತ್ರಿಯ ವಿಷಯವು. ನಾವು ಯಾವಾಗಲೂ ನಮ್ಮ ವಿಚಾರಗಳಲ್ಲಿ ಮನುಷ್ಯನ ನಿಜವಾದ ಮೂಲ ಸ್ವಭಾವ ವನ್ನೇ ವಿವೇಚಿಸುತ್ತಿದ್ದೇವೆ, — ಎಂಬಿದನ್ನು ಮರೆಯಬಾರದು. ನಿಜವಾದ ಮನುಷ್ಯನು ದೇವರೇ ಹೊರತು ಬೇರಲ್ಲ, ನಿಜವಾದ ಮನುಷ್ಯನು ಒಂದು ದೇಹದ-ವ್ಯಕ್ತಿಯ-ಅದೃಷ್ಟದ ಸ್ವಾಮಿಯಲ್ಲ ; ಆದರೆ ಇಡೀ ವಿಶ್ವದ ಪ್ರಭುವು, ವಿಶಾಲ ಜಗತ್ತಿನ ಅದೃಷ್ಟವನ್ನು ರೂಪಿಸುವ ಪ್ರಭುವು

ಇವತ್ತು ಮನುಷ್ಯನನ್ನು ವೇದಾಂತಿಗಳ ಸೂಕ್ಷ್ಮ ಶರೀರವೆಂಬ ಅರ್ಥದಲ್ಲಿ ತೆಗೆದುಕೊಳ್ಳೋಣ. ಆದ್ದರಿಂದ ಮನುಷ್ಯನೆಂದರೆ ಬಯಸುವ, ಇಚ್ಛಿಸುವ, ಹಂಬಲಿಸುವ ಮನುಷ್ಯ. ವಿಚಾರ ಮಾಡಿದರೆ, ಇಷ್ಟು ಪರಿಮಿತ, ಸಂಕುಚಿತವಾದ ದೃಷ್ಟಿಯಲ್ಲಿಯೂ ಮನುಷ್ಯನು ತನ್ನ ದೈವಕ್ಕೆ ತಾನೇ ಧಣಿ, ದೊರೆ. ಈ ಪ್ರಶ್ನೆಗೆ ಅನೇಕ ಮುಖಗಳಿವೆ. ಆ ಎಲ್ಲವನ್ನೂ ಒಂದೇ ದಿನ ತೆಗೆದುಕೊಳ್ಳಲಾಗುವದಿಲ್ಲ ಇವತ್ತು ಈ ವಿಷಯವನ್ನು ಕೇವಲ ಪಿಂಡಾಂಡದ ದೃಷ್ಟಿಯಿಂದ ವಿಚಾರ ಮಾಡೋಣ.

ಮನುಷ್ಯನು ಹುಟ್ಟಿದಾಗ, ತನ್ನ ಸನ್ನಿವೇಶಗಳನ್ನು ದೊಡ್ಡ ಪ್ರಮಾಣದಿಂದ ಬದಲಾಯಿಸಿಕೊಳ್ಳಬಹುದೆಂದು ನಂಬುವದು ಪ್ರಾಯಶಃ ಹೆಚ್ಚು ಸುಲಭವಾದೀತು. ಮನುಷ್ಯನು ಕೆಲವು ವಿಶಿಷ್ಟ ಸನ್ನಿವೇಶಗಳಲ್ಲಿ ಸಿಕ್ಕಿದ್ದಾನೆಂದು ಒಪ್ಪಿಕೊಂಡರೂ ಅವನು ತನ್ನ ಸನ್ನಿವೇಶಗಳನ್ನು ಸ್ವಲ್ಪ ಹೆಚ್ಚು ಕಡಿಮೆ ತನ್ನ ಹತೋಟಿಯಲ್ಲಿ

ಇಟ್ಟುಕೊಳ್ಳಬಹುದೆಂದೂ ಅವನು ತನ್ನ ಸನ್ನಿವೇಶಗಳಿಗೆ ಸ್ವಾಮಿಯಾಗಬಹುದೆಂದೂ ಅವನು ಅವುಗಳನ್ನು ಮೀರಿ, ಏರಿ, ಸುಶಿಕ್ಷಿತನಾಗಬಹುದೆಂದೂ ಹೇಳಬಹುದು. ಕೆಲವರ ದೃಷ್ಟಾಂತವಿರುವಂತೆ, ಮನುಷ್ಯನು ತನ್ನ ಅತ್ಯಂತ ದರಿದ್ರ ಸ್ಥಿತಿಯ ಬಾಲ್ಯದಿಂದ, ದೇಶದಲ್ಲಿಯೇ ಅತ್ಯಂತ ಶ್ರೀಮಂತ ಗೃಹಸ್ಥನಾಗಬಹುದು. ನಿರ್ಗತಿಕ ಭಿಕಾರಿಗಳು ಈ ಜಗತ್ತಿನಲ್ಲಿ ಅತ್ಯಂತ ಕೀರ್ತಿ ಗೌರವಗಳ ಸ್ಥಾನಕ್ಕೆ ಏರುವದರಲ್ಲಿ ಯಶಸ್ವಿಗಳಾಗಿದ್ದಾರೆ. ಅತ್ಯಂತ ಕಳಂಕಿತವೂ ಕೀಳೂ ಆದ ಸನ್ನಿವೇಶಗಳಲ್ಲಿ ಹುಟ್ಟಿದ ಜನರು ಅತ್ಯಂತ ಮಾನ್ಯವೂ ಉನ್ನತವೂ ಆದ ಸ್ಥಾನಕ್ಕೆ ಏರುವದರಲ್ಲಿ ಜಯಶೀಲರಾಗಿದ್ದಾರೆ. ನೆಪೋಲಿಯನ್, ಷೇಕ್ಸ್‌ಪಿಯರ್; ಲಂಡನ್ನಿನ ಲಾರ್ಡ್ ಮೇಯರ್‌ಗಳಲ್ಲಿ ಒಬ್ಬನಾದ ವ್ಹಿಟ್ಟಿಂಗ್‌ಟನ್; ಮೊದಲು ಬಡ ರೈತನಾಗಿದ್ದು ಅನಂತರ ಚೈನಾದ ಪ್ರಧಾನ ಮಂತ್ರಿಗಳಲ್ಲಿ ಒಬ್ಬನಾದವನು, ಈ ಮೊದಲಾದವರ ಉದಾಹರಣೆಗಳನ್ನು ತೆಗೆದುಕೊಳ್ಳಿ ನಮ್ಮ ಜೀವಮಾನದಲ್ಲಿ ನಮ್ಮ ಸನ್ನಿವೇಶಗಳನ್ನು ನಮ್ಮ ಇಷ್ಟ ಪ್ರಕಾರವಾಗಿ—ಸ್ವಲ್ಪ ಹೆಚ್ಚು ಕಡಿಮೆ— ಬದಲಾಯಿಸಿಕೊಳ್ಳಬಹುದೆಂಬದನ್ನು ಸುಲಭವಾಗಿ ತೋರಿಸಬಹುದು. ಆದರೆ ಇದರಲ್ಲಿ ಹೆಚ್ಚು ಕಠಿಣವಾದ ಪ್ರಶ್ನೆಯೇನೆಂದರೆ, 'ನಿಮ್ಮ ಜನ್ಮವನ್ನೂ ನಿಮ್ಮ ತಂದೆ ತಾಯಿಗಳನ್ನೂ ನೀವೇ ಮಾಡಿಕೊಳ್ಳತಕ್ಕವರು' ಎಂದು ವೇದಾಂತವು ಕಂಠೋಕ್ತವಾಗಿ ಹೇಳುವದನ್ನು ನಿಜವೆಂದು ತೋರಿಸಿಕೊಡುವದು. ಮಗುವು ಮನುಷ್ಯನ ತಂದೆ ಎನ್ನುವ ಮಾತು ಪ್ರಸಿದ್ಧವಾಗಿದೆ. ಆದರೆ ಅಷ್ಟೇ ಅಲ್ಲ. ವೇದಾಂತದ ಪ್ರಕಾರ ಮಗುವು ತನ್ನ ತಂದೆಗೇ ತಂದೆಯಾಗಿದೆ. ಇದನ್ನು ಸಿದ್ಧಮಾಡಿ ತೋರಿಸುವದು ಕಠಿಣವೇನೋ ನಿಜ. ವೇದಾಂತವು ಹೇಳುವದೇನೆಂದರೆ, "ಈ ಪ್ರಶ್ನೆಯನ್ನು ಯಾವ ದೃಷ್ಟಿಯಿಂದಲಾದರೂ ವಿಚಾರಿಸಿ, ನಿಮ್ಮ ಅದೃಷ್ಟಕ್ಕೆ ನೀವೇ ಒಡೆಯರು. ನೀವು ಕುರುಡರಾಗಿ ಹುಟ್ಟಿರಬಹುದು; ಅದಕ್ಕೆ ನೀವೇ ಹೊಣೆ, ನೀವೇ ಕಾರಣ. ನೀವೇ ಹಾಗೆ ಮಾಡಿಕೊಂಡಿದ್ದೀರಿ ನಿಮ್ಮ ಅದೃಷ್ಟಕ್ಕೂ ದುರದೃಷ್ಟಕ್ಕೂ ನೀವೇ ಒಡೆಯರು. ಬಡವರಾದ ತಂದೆ ತಾಯಿಗಳಲ್ಲಿ ನೀವು ಹುಟ್ಟಿದ್ದರೆ, ಅದಕ್ಕೆ ನೀವೇ ಕಾರಣ, ನೀವೇ ಹಾಗೆ ಮಾಡಿಕೊಂಡಿದ್ದೀರಿ, ನಿಮ್ಮ ಅದೃಷ್ಟಕ್ಕೆ ನೀವೇ ಸ್ವಾಮಿ. ನೀವು ಅತ್ಯಂತ ಅಪ್ರಿಯವಾದ ಸನ್ನಿವೇಶದಲ್ಲಿ ಹುಟ್ಟಿದ್ದರೆ, ಅದಕ್ಕೂ ನೀವೇ ಕಾರಣ ಜನ್ಮದ ಅದೃಷ್ಟಕ್ಕೂ ನೀವೇ ಒಡೆಯರು".

ಈಗ ಇದನ್ನೇ ವಿಚಾರಮಾಡೋಣ ತನಗೆ ಇಂಥಾ ತಂದೆ ತಾಯಿಗಳೇ ಬೇಕೆಂದು ಮನುಷ್ಯನು ಆರಿಸುವದು ಹೇಗೆ ಸಾಧ್ಯ ? ಜೀವನು ಜನ್ಮಾಂತರ ಪಡೆಯುವ ಕರ್ಮದ ನಿಯಮವೇನಿದೆಯೆಂಬುದನ್ನು ಕೆಲವು ಮಟ್ಟಿಗೆ ನೋಡೋಣ

ಮನುಷ್ಯನು ಸತ್ತರೆ, ಅವನು ಪೂರಾ ನಿಶ್ಶೇಷವಾಗಿ ಸತ್ತೇ ಹೋಗುತ್ತಾನೆಂದೂ ಅವನದೇನೂ ಉಳಿಯುವುದಿಲ್ಲವೆಂದೂ ಕೆಲವರು ತಿಳಿಯುತ್ತಾರೆ. ನಾವು ನಮ್ಮ ಬಂಧು-ಮಿತ್ರರೂ ಸಾಯಬಾರದೆಂದೂ ನಾವು ಎಂದೆಂದೂ ಅಮರರಾಗಿ ಇರಬೇಕೆಂದೂ ನಮ್ಮೆಲ್ಲರಲ್ಲಿಯೂ ಸ್ವಾಭಾವಿಕವಾಗಿರುವ ಬಯಕೆಯ ತೃಪ್ತಿಗಾಗಿ ಕೆಲವು ಮತಧರ್ಮಗಳೂ ಕೆಲವು ಜನರೂ ಸ್ವರ್ಗಾದಿ ಲೋಕಗಳನ್ನು ಕಲ್ಪಿಸಿರುತ್ತಾರೆ. ಆದರೆ ಅಂಥಾ ಲೋಕಗಳು ಇವೆಯೆಂಬುದಕ್ಕೆ ಈ ಲೋಕದಲ್ಲಿ ನಾವು ಯಾವ ವಾಸ್ತವವಾದ ರುಜುವಾತನ್ನೂ ಕೊಡಲಾರೆವು. ಈ ಜನರ ವಾದದಲ್ಲಿಯೂ ಕೆಲವು ಮಟ್ಟಿಗೆ ಸತ್ಯತೆ ಇರಬಹುದೆಂದು, ಹಿಂದೊಂದು ದಿನ ಇಲ್ಲಿಯೇ ನಾವು ವಿಚಾರ ಮಾಡಿದ್ದೇವೆ. ಆದರೆ ಇದು ಪೂರ್ಣವಾಗಿ ಸತ್ಯವಲ್ಲ. ಸತ್ತ ಮೇಲೆ ಜೀವನು ನರಕಕ್ಕೋ ಸ್ವರ್ಗಕ್ಕೋ ಹೋಗುತ್ತಾನೆಂಬದು ಸಂಪೂರ್ಣ ಸತ್ಯವಲ್ಲ. ನಾವು ಯಾವ ವಿಷಯವನ್ನಾದರೂ ನಮ್ಮ ಜೀವನದ ಭೌತಿಕ ಭೂಮಿಕೆಯಲ್ಲಿ ವಿವರಿಸಬೇಕು. ಆಧ್ಯಾತ್ಮಿಕ ಲೋಕದ ನಿಯಮಗಳು ಭೌತಿಕ ಪ್ರಪಂಚದ ನಿಯಮಗಳನ್ನು ಅತಿಕ್ರಮಿಸುವದಕ್ಕಾಗಲೀ ಮುರಿಯುವದಕ್ಕಾಗಲೀ ಅಧಿಕಾರವಿಲ್ಲ. ಒಬ್ಬ ಮನುಷ್ಯನು ಸತ್ತಮೇಲೆ ಅವನ ದೇಹವನ್ನು ಭೂಮಿಯಲ್ಲಿ ಹುಗಿಯುತ್ತಾರೆ. "ಓಡಿಮಣ್ಣಾದ ನೀನು ಮಣ್ಣಿಗೇ ಓಂತಿರುಗುತ್ತಿ" ಎಂಬ ಮಾತು ಅವನ ಗೋರಿಯಲ್ಲಿಯ ಮಾತು. ಅವನ ಸ್ಥೂಲ ದೇಹವು ಮಣ್ಣಾಗಬಹುದು ; ಆದರೆ ಅದು ನಾಶವಾಗಿಲ್ಲ ; ಅದು ಬರೀ ಬದಲಾವಣೆಯನ್ನು ಹೊಂದಿದೆ, ಅಷ್ಟೆ. ದೇಹದ ಭೌತಿಕ ಮೂಲಧಾತುಗಳು ಅಥವಾ ಮೂಲ ತತ್ತ್ವಗಳು ನಾಶವಾಗದೆ ರೂಪಾಂತರವನ್ನು ಹೊಂದಿವೆ. ನಿಮ್ಮ ಸತ್ತಿರುವ ಮಿತ್ರನ ದೇಹವು ಅದರ ಗೋರಿಯ ಮೇಲೆ ಬೆಳೆಯುವ ಒಂದು ಗುಲಾಬಿಯಾಗಿಯೋ ಮುಂದೆಂದೋ ಹೂವು ಹಣ್ಣುಗಳಾಗಿಯೋ ಪುನಃ ತೋರಿಕೊಳ್ಳಬಹುದು. ಆದ್ದರಿಂದ ಅದು ನಾಶವಾಗಿಲ್ಲ.

ಹಾಗಾದರೆ, ಈಗ ನಮಗೆ ಸಂಶಯವಿರುವದು ಯಾವದರಲ್ಲಿ ? ನಮ್ಮ ಮಿತ್ರನಲ್ಲಿದ್ದ ಸತ್ಯವು, ಚೈತನ್ಯವು ಸತ್ತಿದೆಯೆ ? ಅಂದರೆ, ಅವನಲ್ಲಿದ್ದ ದೇವರು ಸತ್ತಿದ್ದಾನೆಯೆ ? ಸತ್ಯವು ಎಂದೂ ನಾಶವಾಗಲಾರದು ; ದೇವರು ಎಂದೂ ಸಾಯಲಾರನು. ನಿಜವಾದ ವ್ಯಕ್ತಿಯು, ನಿಜವಾದ ಮನುಷ್ಯನು ಎಂದೂ ನಾಶವಾಗಲಾರನು. ಹಾಗಾದರೆ ಯಾವದರ ವಿಷಯದಲ್ಲಿ ನಮಗೆ ಸಂಶಯ ? ಸೂಕ್ಷ್ಮ ಶರೀರದ ವಿಷಯದಲ್ಲಿ, ಮಾನಸಿಕವಾದ ಆಶೆಗಳು, ಆಕಾಂಕ್ಷೆಗಳು, ರಾಗಭಾವಗಳು, ಹೃದಯದ ಹಂಬಲಗಳು, ಆತ್ಮದ ಇಚ್ಛೆಗಳು, ತೃಷ್ಣೆಗಳು, ಗೀಳುಗಳು, ಚಾಳಿಗಳು, ಹಾತೊರೆಕೆಗಳು.- ಇವೇ ಮೊದಲಾದವುಗಳಿಂದಾದ ಸೂಕ್ಷ್ಮ ದೇಹದ ಗತಿಯೇನು ?—ಎಂದು ನಮಗೆ ಸಂಶಯವಿರಬೇಕು. ಮನುಷ್ಯನ ಸ್ಥೂಲ ದೇಹವನ್ನು ಹುಗಿದರೆ, ಈ ಸೂಕ್ಷ್ಮ

ದೇಹವನ್ನೂ ಹುಗಿದಂತಾಗುತ್ತದೆಯೆ ? ಅತಿಸೂಕ್ಷ್ಮವಾದ ಭಾವನೆಗಳಿಂದ ಕೂಡಿದ ಆ ಮನಶ್ಶಕ್ತಿಯನ್ನು ಮಣ್ಣುಗೂಡಿಸುವದು ಸಾಧ್ಯವೆ ? ಸತ್ತ ಮೇಲೆ ಅದು ಅದೃಶ್ಯವಾದ ಆಧ್ಯಾತ್ಮಿಕ ಲೋಕಕ್ಕೆ ಹೋಗುತ್ತದೆಯೆಂದು ಏನಾದರೂ ಹೇಳಬಹುದು. ಆದರೆ ಬದುಕಿರುವಾಗ, ಒಂದೊಂದು ಪ್ರಚಂಡ ವ್ಯಕ್ತಿಯಲ್ಲಿ ಲೋಕವನ್ನೇ ಅಲ್ಲಾಡಿಸುತ್ತಿರುವ, ಅವನ ಮನಶ್ಶಕ್ತಿಯು ಅವನ ಸ್ಥೂಲ ದೇಹದ ಮರಣಾನಂತರ, ಏನಾಗುವದೆಂಬದನ್ನು ಭೌತಿಕ ಭೂಮಿಕೆಯಲ್ಲಿ ತೋರಿಸಬೇಕೆಂದು ವಿಜ್ಞಾನವು ಒತ್ತಾಯಪಡಿಸುತ್ತದೆ. ಈ ಪ್ರಪಂಚದಲ್ಲಿರುವ ವಸ್ತುವನ್ನಾಗಲೀ ಶಕ್ತಿಯನ್ನಾಗಲೀ ನಾಶಮಾಡುವದು ಸಾಧ್ಯವಿಲ್ಲವೆಂಬ ಅಪರಿಹಾರ್ಯವಾದ ಸರ್ವವ್ಯಾಪಕ ನಿಯಮವನ್ನು ವಿಜ್ಞಾನವು ಸಾಧಿಸಿ, ಎಲ್ಲಾ ಸಂಶಯಗಳನ್ನೂ ಮೀರಿದ ಸ್ಥಾನದಲ್ಲಿ ಸ್ಥಾಪಿಸಿ ತೋರಿಸಿದೆ. ವಸ್ತುವೂ ಶಕ್ತಿಯೂ ಅವಿನಾಶಿ-ಎನ್ನುವದೇ ಆ ನಿಯಮವು , ಒಂದು ವಸ್ತುವ್ಯೂಹದಲ್ಲಿ (ಒಟ್ಟು ವಿಶ್ವದಲ್ಲಿಯೂ) ಅಡಕವಾಗಿರುವ ಒಟ್ಟು ಶಕ್ತಿಯ ಮೊತ್ತವು (ಆ ಶಕ್ತಿ ಎಷ್ಟು ಬಗೆಗಳಲ್ಲಿ ರೂಪಾಂತರ ಹೊಂದಿದರೂ) ಎಂದಿಗೂ ಹೆಚ್ಚು ಕಡಿಮೆಯಾಗದೆ ಒಂದೇ ಸಮವಾಗಿರುವದು . ಶಕ್ತಿಸ್ಥಾಯಿತ್ವ (Conservation of Energy) ಎಂಬಿದೇ ಆ ತತ್ತ್ವ , ಆ ನಿಯಮ ಇದನ್ನು The law of the persistence of force, ಶಕ್ತಿಯ ನಿತ್ಯತೆ, ಶಕ್ತಿಯ ಶಾಶ್ವತತೆ ಎಂದೂ The Law of the Indestructibility of Matter ವಸ್ತುವಿನ ಅವಿನಾಶಕತೆ ಎಂದೂ ವಿಜ್ಞಾನಿಗಳು ಹೇಳುತ್ತಾರೆ ಈ ಪ್ರಸಿದ್ಧ, ಅಬಾಧಿತ, ಕಠೋರ ನಿಯಮದ ಪ್ರಕಾರ ಸ್ಥೂಲದೇಹವು ಭೌತಿಕ ವಸ್ತುವಾದುದರಿಂದ ರೂಪಾಂತರವನ್ನೂ ಅವಸ್ಥಾಂತರವನ್ನೂ ಹೊಂದಬಹುದೇ ಹೊರತು ನಾಶವಾಗಲಾರದು. ವಸ್ತುವು ಒಂದು ರೂಪವನ್ನು ಬಿಟ್ಟು ಇನ್ನೊಂದು ರೂಪವನ್ನು ತಾಳಿದಾಗ, ಜನರು ಆ ವಸ್ತುವಿನ ಮೊದಲ ರೂಪವು ನಾಶವಾಯಿತೆನ್ನಬಹುದು ಅಥವಾ ಆ ಮೊದಲ ರೂಪದ ವಸ್ತುವು ನಾಶವಾಯಿತೆನ್ನಬಹುದು. ಇನ್ನು ಒಳಗಿರುವ ಮೂಲ ಸರ್ವಾಧಾರವಾದ ಆತ್ಮ ಚೈತನ್ಯವು (ಅಥವಾ ದೇವರು) ಅಮೃತವೂ ನಿತ್ಯವೂ ಶಾಶ್ವತವೂ ನಿರ್ವಿಕಾರವೂ ಇರುವದರಿಂದ ಎಂದೂ ಸಾಯುವ ಹಾಗಿಲ್ಲ. ಹಾಗಾದರೆ ತೀವ್ರ ಶಕ್ತಿಯಾದ ಮನಸ್ಸಿನ ಆಶೆಗಳು ನಾಶವಾಗುವದು ಸಾಧ್ಯವ ? ಅವು ಹೇಗೆ ನಾಶವಾಗಬೇಕು ? ಏಕೆ ನಾಶವಾಗಬೇಕು ? ಅಬಾಧಿತವೂ ಅಭಂಗವೂ ಆದ ' ಶಕ್ತಿಸ್ಥಾಯಿತ್ವ ' ಎಂಬ (ವೈಜ್ಞಾನಿಕ) ಪ್ರಕೃತಿ ನಿಯಮದ ಪ್ರಕಾರ (ವಾಸನಾ—ಇಚ್ಛಾ ಮೊದಲಾದ) ಭಾವನಾರೂಪ ಮನಶ್ಶಕ್ತಿಯು ಎಂದಿಗೂ ನಾಶವಾಗುವದಿಲ್ಲವೆಂದು ಸಿದ್ಧವಾಗುತ್ತದೆ. ಅದು ನಾಶವಾಗುವದೆಂದು ಹೇಳುವದಕ್ಕೆ ಯಾರಿಗೂ ಅಧಿಕಾರವಿಲ್ಲ. ಅದು ಜೀವಂತ ಉಳಿಯಲೇ ಬೇಕು ; ಉಳಿದೇ

ಉಳಿದಿರುತ್ತದೆ. ಮನಸ್ಸಿನ ಆಶಾ ಮೊದಲಾದವುಗಳು ಸ್ಥೂಲದೇಹದ ಮರಣಾನಂತರ ಸ್ಥಳಾಂತರವನ್ನೂ ಅವಸ್ಥಾಂತರವನ್ನೂ ಹೊಂದಬಹುದು. ಆದರೆ ಅವು ಜೀವಂತವಾಗಿರುತ್ತವೆಯೇ ಹೊರತು ನಾಶವಾಗುವದಿಲ್ಲ.

ಮೋಂಬತ್ತಿಯನ್ನು ದೀಪ ಹಚ್ಚಿ ಉರಿಸಿದಾಗ, ಅದರಲ್ಲಿರುವ ಮೇಣದ ರಾಳವೂ ಬತ್ತಿಯೂ ಎಲ್ಲವೂ ಉರಿದು ಹೋಗುತ್ತವೆ ಆದರೆ ವಿಜ್ಞಾನದ ರಸಾಯನ ಶಾಸ್ತ್ರವು (Chemistry) ಮೇಣದ ಬತ್ತಿಯೆಲ್ಲಾ ಉರಿದು ಹೋದರೂ ಯಾವದೂ ನಷ್ಟವಾಗಿಲ್ಲವೆಂದೂ ನಾಶವಾಗಿಲ್ಲವೆಂದೂ ಪ್ರಯೋಗದಿಂದ ತೋರಿಸಿ ಕೊಡುತ್ತದೆ. ಕಾಸ್ಟಿಕ್ ಸೋಡಾ (Caustic Soda) ಮತ್ತು ಇನ್ನೊಂದು ರಾಸಾಯನಿಕ ದ್ರವ್ಯ ಇರುವ ಬಾಗಿದ ಪರೀಕ್ಷಾ ಪ್ರನಾಳದಲ್ಲಿ (Test-tube) ಮೇಣದ ಬತ್ತಿ ಉರಿದಾಗ ನಷ್ಟವಾದಂತೆ ತೋರಿದ್ದೆಲ್ಲವೂ ಬೇರೆ ರೂಪದಲ್ಲಿವೆಯೆಂದು ಪ್ರಯೋಗಶಾಲೆಯಲ್ಲಿ ವಿಜ್ಞಾನಿಗಳು ತೋರಿಸಿ ಕೊಡುತ್ತಾರೆ. ನೀರನ್ನು ಹೆಚ್ಚಾಗಿ ಕಾಯಿಸಿ ಪೂರಾ ಬತ್ತಿಸಿದಾಗ ನೀರೆಲ್ಲಾ ಹೋಯಿತೆಂದು ಸಾಮಾನ್ಯವಾಗಿ ತೋರುತ್ತದೆ. ಆದರೆ ಅದು ಸ್ವಲ್ಪವೂ ನಷ್ಟವಾಗದೆ ಆವಿಯ ರೂಪದಲ್ಲಿದೆಯೆಂದು ವಿಜ್ಞಾನವು ತೋರಿಸುತ್ತದೆ. ನೀರನ್ನು ನಾಶಮಾಡುವದು ಸಾಧ್ಯವಿಲ್ಲ.

ಹಾಗೆಯೇ ಒಬ್ಬ ಮನುಷ್ಯನು ಸತ್ತಾಗ (ಅವನ ಮನಶ್ಶಕ್ತಿಯು) ಅವನ ಬಯಕೆಗಳೂ ಭಾವನೆಗಳೂ ಭಾವಾವೇಗಗಳೂ ನಷ್ಟವಾದಂತೆ ತೋರುತ್ತವೆ ; ಅವೂ ಮೃತವಾದಂತೆಯೇ ತೋರುತ್ತವೆ. ಆದರೆ ವೇದಾಂತವು ರಸಾಯನ ಶಾಸ್ತ್ರದಂತಿರುವ ತನ್ನ ಆತ್ಮ ವಿಜ್ಞಾನದಿಂದ ಅವನ ಮನಶ್ಶಕ್ತಿಯು ನಾಶವಾಗಿಲ್ಲವೆಂದೂ ನಾಶವಾಗುವದು ಸಾಧ್ಯವಿಲ್ಲವೆಂದೂ ಪ್ರಯೋಗದ ಮೂಲಕ ತೋರಿಸುತ್ತದೆ. ಹಾಗಾದರೆ ಅದು ನಾಶವಾಗದಿದ್ದರೆ, ಏನಾಗುತ್ತದೆ ? ನಾವು ಗಣಿತದ ಪ್ರಶ್ನೆಗಳಿಗೆ ಉತ್ತರ ಕಂಡುಹಿಡಿದಂತೆಯೇ ಈ ಪ್ರಶ್ನೆಗೂ ಉತ್ತರ ಕಂಡುಹಿಡಿಯಬೇಕು. ನಾವು ಅದರಲ್ಲಿ ಒಂದು ಸಮಸ್ಯೆಯನ್ನು ತೆಗೆದುಕೊಂಡು ಅದರ ದತ್ತಾಂಶವನ್ನೂ ಫಲಿತಾಂಶವನ್ನೂ ಚಿಂತಿಸುತ್ತೇವೆ. ಕೆಲವು ಸಮಯ ದತ್ತಾಂಶವನ್ನು (Data) ಚಿಂತಿಸುವದರಿಂದಲೇ ಇಡೀ ಪ್ರಶ್ನೆಗೆ ಉತ್ತರವನ್ನು ಕಂಡು ಹಿಡಿಯುತ್ತೇವೆ. ಇನ್ನು ಕೆಲವು ಸಮಯ ಫಲಿತಾಂಶವನ್ನು (conclusion) ತೆಗೆದುಕೊಂಡು ಬಹಳವಾಗಿ ಚಿಂತಿಸಿ, ಆಧಾರ ಕಲ್ಪನೆಯನ್ನೂ (Data, Hypothesis) ಮುಖ್ಯಾಯವನ್ನೂ ಅಥವಾ ಫಲಿತಾಂಶವನ್ನೂ (Conclusion or quisita)ಸಂಬಂಧಪಡಿಸಿ ವಿಚಾರಮಾಡಬೇಕಾಗುತ್ತದೆ. ಒಳ್ಳೆಯದು ಈಗ ನಮ್ಮ ಈ ಆತಿವಾಹಿಕ (ಸೂಕ್ಷ್ಮ ಶರೀರ) ಸಮಸ್ಯೆಯ ದತ್ತಾಂಶ

ಯಾವದು ? ಫಲಿತಾಂಶ ಯಾವದು ? ಜೀವ–ಸಾವುಗಳೇ ಈ ಎರಡು. ಜನನವೆಂಬ ಪ್ರಕೃತಿ ವಿಲಾಸವೇ ದತ್ತಾಂಶ (Data)–ಆಧಾರ ಕಲ್ಪನೆ (Hypothesis)-ಎನ್ನಬಹುದು ; ಸಾವಿನ ಪ್ರಕೃತಿವಿಲಾಸವೇ ಫಲಿತಾಂಶದಂತಿದೆ, ಮುಕ್ತಾಯದಂತಿದೆ (Quisita) ಎನ್ನಬಹುದು. ಅಥವಾ ಈ ಕ್ರಮವನ್ನು ತಿರುವು ಮುರುವಾಗಿಯೂ ಭಾವಿಸಬಹುದು. ಎರಡೂ ಒಂದೇ ಆಗುತ್ತದೆ.

ಈ ಜಗತ್ತಿನಲ್ಲಿ ಎಷ್ಟೋ ಜನರು ಹುಟ್ಟುತ್ತಾರೆ ; ಎಷ್ಟೋ ಜನರು ಸಾಯುತ್ತಾರೆ. ಅವರ ಆಶೆಗಳು ಮೊದಲಾದ ಮನಶ್ಶಕ್ತಿಯು ಅವರ ದೇಹದ ಜೊತೆಗೇ ನಾಶವಾಗುವದೆಂದರೆ ವಿಜ್ಞಾನವು ನಿಸ್ಸಂದೇಹವಾಗಿ ಸ್ಥಾಪನೆ ಮಾಡಿರುವ ನಿಯಮಗಳ ಸಿದ್ಧಾಂತಕ್ಕೆ ವಿರುದ್ಧವಾಗಿ ಕೇವಲ ಅಸಂಗತವನ್ನು ಕಲ್ಪಿಸಿದಂತಾಗುತ್ತದೆ ನಮ್ಮ ಮನಶ್ಶಕ್ತಿಗಳು ಇಲ್ಲವಾಗುವವೆಂದು ಹೇಳಿದರೆ, ಇರುವ ಯಾವದೊಂದು (ಭಾವ) ವಸ್ತು ಇಲ್ಲವಾಗುವುದು (ಅಭಾವ) ಎಂದು (ಅಸಂಭವವನ್ನು ಸಂಭವವೆಂದು) ಹೇಳಿದ ತಪ್ಪಿಗೊಳಗಾಗುತ್ತೇವೆ. ಇದು ಅಸಾಧ್ಯವೆಂದು ಎಲ್ಲರಿಗೂ ಗೊತ್ತಿದೆ. Something can never pass into nothing" ಇರುವ ಎನೋ ಒಂದು ವಸ್ತು ಇಲ್ಲದಂತೆ ಎಂದೂ ಆಗುವದಿಲ್ಲ ಇಲ್ಲದಂತೆ ಆಗಬಹುದೆಂಬದು ಅಸಂಬದ್ಧಪ್ರಲಾಪ. ಆ ಹುಚ್ಚು ತಪ್ಪನ್ನು ಮಾಡದಿರುವದಕ್ಕೆ ಸತ್ತ ಮೇಲೂ ಮಾನಸಿಕ ಆಶೆಗಳೂ ಶಕ್ತಿಗಳೂ ಕ್ರಿಯೆಗಳೂ ಯಾವದೊಂದು ರೂಪದಲ್ಲಿ ಉಳಿದಿರುತ್ತವೆ , ನಾಶವಾಗುವದಿಲ್ಲ —ಎನ್ನುವದನ್ನು ಮೊದಲು ಮುಖ್ಯವಾಗಿ ಒಪ್ಪಿಕೊಳ್ಳಬೇಕು. ಹಾಗಾದರೆ ಸತ್ತ ಮೇಲೂ ನಾಶವಾಗದಿರುವ ಮನಶ್ಶಕ್ತಿ ಏನಾಗುತ್ತದೆ ?—ಎನ್ನುವುದು ಅನಂತರದ ಪ್ರಶ್ನೆ.

ಮರಣಾನಂತರ ಮನಶ್ಶಕ್ತಿ ಏನಾಗುತ್ತದೆ, ಎಂಬದನ್ನು ಜನನದ ಪ್ರಕೃತಿ ವಿಲಾಸವನ್ನು ತೆಗೆದುಕೊಂಡು ವಿಚಾರ ಮಾಡೋಣ. ಹುಟ್ಟುವಾಗಲೇ ಬೇರೆ ಬೇರೆ ಜನರಿಗೆ ಬೇರೆ ಬೇರೆ ಒಲವುಗಳೂ ಪ್ರವೃತ್ತಿಗಳೂ ದೇಹಶಕ್ತಿ, ಬುದ್ಧಿಶಕ್ತಿಗಳೂ, ಮುಖ ಲಕ್ಷಣಗಳೂ ಮಿದುಳಿನ-ತಲೆಬುರುಡೆಯ–ವ್ಯಕ್ತಿಯ ಆಕೃತಿಲಕ್ಷಣಗಳೂ ಇರುತ್ತವೆ. ಕೆಲವರ ತಲೆ ದುಂಡಾಗಿಯೂ ಕೆಲವರ ತಲೆ ಉದ್ದುದ್ದವಾಗಿಯೂ ಕೆಲವರ ಮಿದುಳು ಭಾರವಾಗಿಯೂ ಕೆಲವರ ಮಿದುಳು ಹಗುರವಾಗಿಯೂ ಇರುತ್ತವೆ. ಹುಟ್ಟುವಾಗಲೇ ಬೇರೆ ಬೇರೆ ಜನರ ಶಕ್ತಿ ಸಾಮರ್ಥ್ಯಗಳು ಬೇರೆ ಬೇರೆಯೇ ಇರುತ್ತವೆ. ಒಂದೇ ಕುಟುಂಬದ ತಂದೆತಾಯಿಯ ಮಕ್ಕಳು ಪೂರ್ಣ ವಿರುದ್ಧ ಸ್ವಭಾವದವರಾಗಿರುತ್ತಾರೆ ಒಂದೇ ವಿದ್ಯಾರ್ಥಿನಿಲಯದಲ್ಲಿ ಊಟ ವಸತಿಗಳನ್ನು ಮಾಡುತ್ತಾ ಒಂದೇ ತರಗತಿಯಲ್ಲಿ

ಸಮಾನ ಪ್ರಾಧ್ಯಾಪಕರಲ್ಲಿ ಓದುತ್ತಿರುವ ವಿದ್ಯಾರ್ಥಿಗಳಲ್ಲಿ ಬೇರೆ ಬೇರೆ ಒಲವುಗಳೂ ಅಭಿರುಚಿಗಳೂ ಇರುತ್ತವೆ. ಒಬ್ಬನಿಗೆ ಗಣಿತಶಾಸ್ತ್ರವೂ ಇನ್ನೊಬ್ಬನಿಗೆ ಚರಿತ್ರೆಯೂ ಮತ್ತೊಬ್ಬನಿಗೆ ಸಾಹಿತ್ಯವೂ ಪ್ರಿಯವಾಗಿರುತ್ತವೆ. ಒಬ್ಬ ಬಹಳ ಜಾಣನಾದರೆ ಇನ್ನೊಬ್ಬ ದಡ್ಡನಾಗಿರುತ್ತಾನೆ. ಹೀಗೆ ಜನರ ಒಲವುಗಳಲ್ಲಿಯೂ ಪ್ರವೃತ್ತಿಗಳಲ್ಲಿಯೂ ಭೇದವಿದೆಯೋ ಇಲ್ಲವೋ ? ಇದ್ದೇ ಇದೆ ; ಇಲ್ಲವೆನ್ನುವದಕ್ಕೆ ಸಾಧ್ಯವೇ ಇಲ್ಲ. ಕೆಲವರು ಬಾಲ್ಯದಲ್ಲಿಯೇ ಸುಟಿಯಾಗಿಯೂ ಕೆಲವರು ಸೋಮಾರಿಗಳಾಗಿಯೂ ಇರುತ್ತಾರೆ. ಈ ಎಲ್ಲಾ ವ್ಯತ್ಯಾಸಗಳಿಗೆ ಏನು ಕಾರಣ ? ಪ್ರತಿಯೊಬ್ಬರಲ್ಲಿಯೂ ಹುಟ್ಟುವಾಗಲೇ ಹುದುಗಿರುವ ಈ ಭಾವಭೇದ, ಪ್ರವೃತ್ತಿಭೇದ, ಶಕ್ತಿಭೇದ, ಅಭಿರುಚಿ ಭೇದ ಮೊದಲಾದವುಗಳಿಗೆ ಏನು ಕಾರಣ ? ಇದನ್ನು ಹೇಗೆ ವಿವರಿಸುತ್ತೀರಿ ? ಇದಕ್ಕೆ ಸಮಾಧಾನವೇನು ? ಇವೆಲ್ಲಾ ದೇವರ ಇಚ್ಛೆ ; ದೇವರ ಕಾರ್ಯ ಎಂದರೆ ಅದು ಉತ್ತರವೇ ಅಲ್ಲ ; ಅದು ಸುಮ್ಮನೆ ಪ್ರಶ್ನೆಯನ್ನು ತಪ್ಪಿಸಿಕೊಳ್ಳುವ ಉಪಾಯ, ಅದು ತತ್ತ್ವಶಾಸ್ತ್ರಕ್ಕೆ ವಿರುದ್ಧ ; ಅದರಿಂದ ನಿಮ್ಮ ಅಜ್ಞಾನವನ್ನು ಸ್ಪಷ್ಟಪಡಿಸಿಕೊಂಡಂತೆ ಆಗುತ್ತದೆ. ಒಬ್ಬನನ್ನು ಜಾಣನನ್ನಾಗಿಯೂ ಒಬ್ಬನನ್ನು ದಡ್ಡನನ್ನಾಗಿಯೂ ಒಬ್ಬನನ್ನು ಒಳ್ಳೆಯವನನ್ನಾಗಿಯೂ ಇನ್ನೊಬ್ಬನನ್ನು ಕೆಟ್ಟವನನ್ನಾಗಿಯೂ ದೇವರು ಮಾಡುತ್ತಾನೆಂದರೆ, ದೇವರಲ್ಲಿ ಕಾರಣವಿಲ್ಲದೆ ರಾಗದ್ವೇಷಗಳ ವೈಷಮ್ಯವನ್ನು ಹೇಳಿದಂತಾಗುತ್ತದೆ. ಸರ್ವಸಮತ್ವವೇ ಮುಖ್ಯ ಗುಣವಾಗಿ ಉಳ್ಳ ದೇವರಲ್ಲಿ ಅವನ ದೇವತ್ವವನ್ನೇ ಕಳೆದಂತಾಗುತ್ತದೆ. ಯಾವದನ್ನಾದರೂ ಸ್ಥಿರವಾಗಿ ಸ್ಥಾಪಿತವಾದ ವೈಜ್ಞಾನಿಕ ನಿಯಮಗಳಿಗೆ ಅನುಸಾರವಾಗಿ ವಿವರಿಸಬೇಕು. ನಿರ್ಗುಣ ನಿರಾಕಾರವಾದ ದೇವರಿಂದ ಇದೆಲ್ಲಾ ಆಯಿತೆಂದರೆ, ಏನೂ ಇಲ್ಲದ್ದರಿಂದ ಏನೋ ಹುಟ್ಟಿ ಬಂದಿತು — ಎಂದು ವಾಸ್ತವವಾಗಿ ಒತ್ತಿ ಹೇಳಿದಂತಾಗುತ್ತದೆ. ಇದು ಪೂರಾ ಅಸಂಬದ್ಧ. ಈ ಎಲ್ಲಾ ಅಸಂಗತಗಳಿಂದಲೂ ಕಷ್ಟಗಳಿಂದಲೂ ತಪ್ಪಿಸಿಕೊಳ್ಳುವದಕ್ಕಾಗಿ, ಮಕ್ಕಳು ತಮ್ಮ ಭಿನ್ನ ಭಿನ್ನ ಒಲವುಗಳನ್ನೂ ಪ್ರವೃತ್ತಿಗಳನ್ನೂ ತಮ್ಮ ಜೊತೆಗೇ ಬೇರ ಲೋಕದಿಂದ ಎಂಬಂತೆ—ತರುತ್ತವೆ, ಎನ್ನಬೇಕು. ಮಕ್ಕಳಾದರೂ ಏನೂ ಇಲ್ಲದ ಶೂನ್ಯದಿಂದ ಈ ಬಗೆ ಬಗೆಯ ಬಯಕೆಗಳನ್ನೂ ಒಲವುಗಳನ್ನೂ ಅಭಿರುಚಿಗಳನ್ನೂ ತರುವದು ಸಾಧ್ಯವಿಲ್ಲ. ಅವು ಹುಟ್ಟುವದಕ್ಕೆ ಮೊದಲು ಇದ್ದವನ್ನೇ ಹುಟ್ಟುವಾಗ ತಂದಿರಬೇಕು. ಮಕ್ಕಳ ಬೇರೆ ಬೇರೆ ಸಂಸ್ಕಾರಗಳೂ ವಾಸನೆಗಳೂ ಆಶೆಗಳೂ ಅಭಿರುಚಿಗಳೂ ಮಕ್ಕಳು ಹುಟ್ಟುವದಕ್ಕೂ ಮುಂಚೆ ಜೀವಂತವಾಗಿದ್ದವು. ಇದರಲ್ಲಿ ನಾವು ಜನನದ ಮುಕ್ತಾಯವನ್ನೂ (Quisita of Birth) ಮತ್ತು ಸಾವಿನ ದತ್ತಾಂಶವನ್ನೂ (Data of death) ವಿಚಾರ ಮಾಡುತ್ತಿದ್ದೇವೆ. ವೇದಾಂತವು ಇವೆರಡನ್ನೂ

ಸಂಬಂಧಿಸಿ ಹೇಳುವದೇನೆಂದರೆ, ಮನುಷ್ಯನು ಸಾಯುವಾಗ ಅವನ ತೃಪ್ತಿಯಾಗದಿರುವ ಬಯಕೆಗಳು ನಾಶವಾಗುವಂತಿರಲಿಲ್ಲ ಆದ್ದರಿಂದ ಅವನು ಸತ್ತಾಗ ಅವನ ಜೊತೆಗೇ ಹುಗಿಯಲ್ಪಟ್ಟಿದ್ದ ಅವನ ಆಶೆಗಳು ಒಂದು ಮನೆಯಲ್ಲಿ ಹುಟ್ಟಿದ ಹೊಸ ಮನುಷ್ಯನೊಬ್ಬನಲ್ಲಿ ಪುನಃ ಕಾಣಿಸಿಕೊಳ್ಳುವದು ಸಾಧ್ಯವಿಲ್ಲವೆ? ಸ್ವಾಭಾವಿಕವಾದ ಇದನ್ನು ನೀವು ಒಪ್ಪಿಕೊಳ್ಳುವದಾದರೆ, "ಇರುವದೊಂದು (ವಸ್ತು-ಶಕ್ತಿ) ಇಲ್ಲವಾಯಿತು, ಇಲ್ಲದ್ದೊಂದು ಹೊರ ಬಂದಿತು." ಎಂಬ ಹಿಂದಿನ ಭಯಂಕರ ಭ್ರಮೆಯಿಂದ ತಪ್ಪಿಸಿಕೊಳ್ಳಬಹುದು. ಹಿಂದುಗಳು ಹೇಳುವ ಆ ಕರ್ಮ-ಫಲ-ಭೋಗ ನಿಯಮವನ್ನು ಒಪ್ಪಿಕೊಳ್ಳುವದರಿಂದ ಆ ಭಯಂಕರ ಕಷ್ಟವನ್ನು ತಪ್ಪಿಸಿಕೊಳ್ಳಬಹುದು. ಆಗ ಹುಟ್ಟು ಸಾವುಗಳ ಪ್ರಕೃತಿ ವಿಲಾಸವು ಅತ್ಯಂತ ಸ್ವಾಭಾವಿಕವೂ ಪ್ರಕೃತಿ ನಿಯಮಗಳಿಗೆ ಅನುಗುಣವೂ ಆಗುತ್ತದೆ. ವಿಶ್ವದಲ್ಲಿ ಸ್ಥಿರವಾಗಿ ಸ್ಥಾಪಿತವಾಗಿರುವ ಸಮಶ್ರುತಿ-ಸುಸ್ವರಮೇಳದ ನಿಯಮಕ್ಕೆ (Law of harmony) ಕರ್ಮ-ಫಲ-ಭೋಗ ನಿಯಮವೂ ಅದರ ಅಭಿವ್ಯಕ್ತತೆಯಾದ ಜನನ-ಮರಣ ನಿಯಮವೂ ಅನುಗುಣವಾಗುತ್ತವೆ

ವಿಷಯ ಸಮರ್ಥನೆಗೆ ಅವಶ್ಯವಾದುದಕ್ಕಿಂತ ಹೆಚ್ಚಾಗಿ ಕಾರಣಗಳನ್ನಾಗಲೀ ಬಲಗಳನ್ನಾಗಲೀ ಊಹಿಸಿಕೊಳ್ಳಬಾರದು,- ಎಂಬ ತರ್ಕಶಾಸ್ತ್ರದ ನ್ಯಾಯವೊಂದಿದೆ. ಇದಕ್ಕೆ ಮಿತ(ಕಾರಣ)ನ್ಯಾಯ (Law of Parsimony) ಎನ್ನುತ್ತಾರೆ ಇದರ ಪ್ರಕಾರವೂ ಜನನ ಮರಣಗಳಿಗೆ ಕರ್ಮ ನಿಯಮವನ್ನೇ (Law of Karma) ಒಪ್ಪಿಕೊಳ್ಳಬೇಕಾಗುತ್ತದೆ. ಸ್ವಾಭಾವಿಕವೂ ಸಾಮಾನ್ಯ ರೂಢಿಯದೂ ಆದ ನಿಯಮದಂತೆ ಒಂದು ವಿಷಯವನ್ನು ನಾವು ವಿವರಿಸುವದಕ್ಕೆ ಸಾಧ್ಯವಿರುವಾಗ ಅಸ್ವಾಭಾವಿಕವೂ ಕಾಲ್ಪನಿಕವೂ ದೂರಾನ್ವಯವುಳ್ಳದೂ ಆದ ಕಾರಣಗಳನ್ನು ಊಹಿಸಬಾರದು. ಕರ್ಮನಿಯಮವು ಅತ್ಯಂತ ಸ್ವಾಭಾವಿಕವೂ ಸ್ಪಷ್ಟವೂ ಅತ್ಯಂತ ವೈಜ್ಞಾನಿಕವೂ ಆದ ವಿವರಣೆಯನ್ನು ಕೊಡುತ್ತದೆ. ಇದಕ್ಕಿಂತಲೂ ಹೆಚ್ಚಿನದೆಂದು ಯಾವದಾದರೂ ಅಧಿಕಪ್ರಸಂಗದ ಅಥವಾ ಪ್ರಪಂಚಾತೀತವಾದ ವಿವರಣೆಯನ್ನು ನೀಡಬಾರದು.

ಇಲ್ಲೊಂದು ಪ್ರಶ್ನೆಯೇಳಬಹುದು ವಿಜ್ಞಾನಿಗಳು ಹೀಗೆ ಹೇಳಬಹುದು, "ಓ, ಇಲ್ಲ; ಆ ಕರ್ಮನಿಯಮವನ್ನು ನಾವು ಒಪ್ಪುವದಿಲ್ಲ ಹೊಸದಾಗಿ ಹುಟ್ಟಿದ ಮಕ್ಕಳ ಬೇರೆ ಬೇರೆ ಒಲವುಗಳನ್ನು ಕರ್ಮನಿಯಮದ ಪ್ರಕಾರ ನಾವು ವಿವರಿಸುವದಿಲ್ಲ. ಆನುವಂಶಿಕ ನಿಯಮದ (Law of heredity) ಪ್ರಕಾರ ಅದನ್ನೆಲ್ಲಾ ನಾವು ಸುಲಭವಾಗಿ ವಿವರಿಸಬಹುದು." ಆದರೆ ವೇದಾಂತವು ಹೇಳುವ ಕರ್ಮ

ನಿಯಮವು ಆನುವಂಶಿಕ ನಿಯಮಕ್ಕೆ ವಿರೋಧವೇನಲ್ಲ. ಆನುವಂಶಿಕ ನಿಯಮವನ್ನು ಕರ್ಮನಿಯಮವು ಒಳಗೊಂಡಿದೆ, ಅದನ್ನು ಹೆಚ್ಚು ಚೆನ್ನಾಗಿ ವಿವರಿಸುತ್ತದೆ. ಅದೂ ಅಲ್ಲದೆ ಸಾಯುವ ಕಾಲದಲ್ಲಿ ಕಾಣುವ ಮನಶ್ಶಕ್ತಿಯ ನಾಶವನ್ನೂ ಅದು ವಿವರಿಸುತ್ತದೆ. ಆದರೆ ಆನುವಂಶಿಕ ಶಕ್ತಿಯ ನಿಯಮವು ಅದನ್ನು ವಿವರಿಸುವದಿಲ್ಲ. ಆದ್ದರಿಂದ ಎಲ್ಲಾ ಭೌತವಿಜ್ಞಾನಿಗಳ ಮತ್ತು ತತ್ತ್ವಜ್ಞಾನಿಗಳ ಗಮನವನ್ನು ಸೆಳೆಯುವದರಲ್ಲಿ ಆನುವಂಶಿಕ ನಿಯಮಕ್ಕಿಂತಲೂ ಕರ್ಮ-ಫಲ-ಭೋಗ ನಿಯಮವು ಹೆಚ್ಚು ಅರ್ಹತೆಯುಳ್ಳದೂ ಅಧಿಕಾರವುಳ್ಳದೂ ಆಗಿದೆ. ಆನುವಂಶಿಕ ನಿಯಮವನ್ನೂ ಕರ್ಮನಿಯಮವು ಹೇಗೆ ವಿವರಿಸುವದೆಂದರೆ, ಮೇಣದ ಬತ್ತಿ ಉರಿದಾಗ ತೋರಿಕೆಗೆ ನಷ್ಟವಾದ ಮೇಣ ಮತ್ತು ಬತ್ತಿಗಳ ಇಂಗಾಲವು ಆಮ್ಲಜನಕದೊಡನೆಯೂ ಜಲಜನಕವು ಆಮ್ಲಜನಕದೊಡನೆಯೂ ರಾಸಾಯನಿಕ ಆಕರ್ಷಣೆಯ ನಿಯಮದ (Law of chemical affinity) ಪ್ರಕಾರ ಆಕರ್ಷಿತವಾಗಿ ಸಂಯೋಗವಾಗುವಂತೆ, ಜೀವನ ಆಶೆಗಳಿಂದ ಕೂಡಿದ ಮನಶ್ಶಕ್ತಿಯು ಅಥವಾ ಅವನ ಸೂಕ್ಷ್ಮ ಶರೀರವು, ಮರಣಾನಂತರದಲ್ಲಿ ಆಧ್ಯಾತ್ಮಿಕ ಹಾಗೂ ಆಧಿಭೌತಿಕವಾದ ಒಂದು ಬಗೆಯ ಆಕರ್ಷಣ ಶಕ್ತಿಯ ಮೂಲಕವಾಗಿ ಅದು ಬೆಳೆಯುವದಕ್ಕೂ ಸಫಲವಾಗುವದಕ್ಕೂ ಅನುಕೂಲವಿರುವ ಸನ್ನಿವೇಶವುಳ್ಳ ಕ್ಷೇತ್ರಕ್ಕೆ ಸ್ವಾಭಾವಿಕವಾಗಿಯೂ ಪ್ರಬಲವಾಗಿಯೂ ಸೆಳೆಯಲ್ಪಡುತ್ತದೆ.

ಆ ಕ್ಷೇತ್ರ-ಬೀಜಗಳೇ ತಾಯಿ ತಂದೆಗಳು. ಹಿಂದಿನ ಜನ್ಮದಲ್ಲಿ ಉಪಯೋಗವಾಗದಿರುವ ನಮ್ಮ ಶಕ್ತಿಗಳು ಹೆಚ್ಚು ಉಪಯೋಗವಾಗುವದಕ್ಕೂ ತೃಪ್ತಿಯಾಗದಿರುವ ಆಶೆಗಳು ಸಫಲವಾಗುವದಕ್ಕೂ, ಯಾವ ತಂದೆ ತಾಯಿಗಳ ಸಂಸ್ಕಾರಗಳೂ ಗುಣಸ್ವಭಾವಗಳೂ ಸನ್ನಿವೇಶಗಳೂ ಸಾಮರ್ಥ್ಯಗಳೂ ಅನುಕೂಲವಾಗಿವೆಯೋ ಅವರಲ್ಲಿಗೆ, ನಾವು ಸಾಯುವಾಗ ನಮ್ಮ ಆಶೆಗಳ ಒಟ್ಟಿನ ಫಲವಾದ ಮನಶ್ಶಕ್ತಿಯು (ಸೂಕ್ಷ್ಮ ಶರೀರವು) ಆಕರ್ಷಿಸಲ್ಪಡುತ್ತದೆ. ಹೀಗೆ ಪ್ರತಿಯೊಬ್ಬನೂ ತನ್ನ ತಂದೆ ತಾಯಿಗಳನ್ನು ತಾನೇ ಆರಿಸಿಕೊಳ್ಳುತ್ತಾನೆ. ಅವರಲ್ಲಿ ಹುಟ್ಟಿ ಬರುತ್ತಾನೆ. ಹಿಂದಿನ ಜನ್ಮದಲ್ಲಿ ಸಫಲವಾಗದಿದ್ದ ಅವನ ಎಷ್ಟೋ ಆಶೆಗಳು ಈ ಜನ್ಮದಲ್ಲಿ ಸಫಲವಾಗಬಹುದು. ಆದರೆ ಎಷ್ಟೋ ಉಳಿಯಬಹುದು, ಬೇರೆ ಆಶೆಗಳೂ ಬೆಳೆಯಬಹುದು. ಇವು ವ್ಯರ್ಥವಾಗುವದಿಲ್ಲ. ತೋಟದಲ್ಲಿ ಕಾಣಿಸಿಕೊಂಡ ಮೊಗ್ಗು ಅರಳಿ ಹೂವಾಗಲೇಬೇಕು; ಹೂವು ಹೀಚಾಗಿ ಕಾಯಾಗಿ ಹಣ್ಣಾಗಬೇಕು. ಜೀವನದಲ್ಲಿ ತೋರಿಕೊಂಡ ಆಶೆಗಳ ವಿಚಾರವೂ ಹೀಗೆಯೇ. ಕ್ರಿಮಿ-ಕೀಟ-ಪಶು-ಪಕ್ಷಿಗಳ ಇಚ್ಛೆಗಳೆಲ್ಲಾ ಫಲಿಸುತ್ತಿರುವಾಗ ಮನುಷ್ಯನ ಇಚ್ಛೆಯು ಪೂರ್ಣವಾಗುವದಿಲ್ಲವೆ? ಮನುಷ್ಯನ ಆಶೆಯನ್ನು

ಮಾತ್ರ ಪ್ರಕೃತಿಯು (ಅಥವಾ ದೈವಶಕ್ತಿಯು) ಭಂಗಮಾಡಿ ಅಣಕವಾಡುತ್ತದೆಯೆ ? ಮನುಷ್ಯನ ಆಶೆಯೂ ಸಫಲವಾಗಬೇಕು. ನಮ್ಮ ಜೀವನದಲ್ಲಿ ನಮ್ಮ ಎಷ್ಟೋ ಆಶೆಗಳು ಪೂರ್ಣಗೊಳ್ಳುವದನ್ನು ಕಾಣುತ್ತೇವೆ. ಆಶೆಗಳು ಉಳಿದರೆ ಪುನಃ ಜನ್ಮವು ಇದ್ದೇ ಇದೆ ನಮ್ಮ ಆಶೆಗಳೇ ನಮ್ಮ ಪ್ರವೃತ್ತಿಗಳಿಗೂ ಕಾರ್ಯಗಳಿಗೂ ಕಾರಣ. ಅವುಗಳೇ ನಮ್ಮ ಪ್ರೇರಕಶಕ್ತಿ ನಮ್ಮ ಜೀವನದಲ್ಲಿ ಸಫಲವಾಗದಿರುವ ಆಶೆಗಳು ಏನಾಗುತ್ತವೆ ? ಎಂಬಿದಕ್ಕೆ ವೇದಾಂತವು " ಓ ಮಾನವ, ದೇವರು ನಿನ್ನನ್ನು ಅಣಕಿಸುವದಿಲ್ಲ. ನಿನ್ನ ಅತೃಪ್ತವಾದ ಕಾಮಗಳೂ ಅಪೂರ್ಣವಾದ ಶಕ್ತಿಗಳೂ ಈ ಲೋಕದಲ್ಲಿ ಫಲವನ್ನು ಕಾಣದಿದ್ದರೆ ಪರಲೋಕದಲ್ಲಿಯಾದರೂ—ಇನ್ನೊಂದು ಜನ್ಮದಲ್ಲಿಯಾದರೂ—ಫಲವನ್ನು ಕೊಟ್ಟೇ ಕೊಡುತ್ತವೆ " ಎಂದು ಹೇಳುತ್ತದೆ.

ಈಗ ಇಲ್ಲಿ ಒಂದು ಪ್ರಶ್ನೆ ಏಳಬಹುದು ; ನಾವು ಹಿಂದೊಂದು ಜನ್ಮದಲ್ಲಿ ಜೀವಿಸಿದ್ದು, ಅಲ್ಲಿ ಸತ್ತಮೇಲೆ ಪುನಃ ಈ ಜನ್ಮದಲ್ಲಿ ಬಂದಿದ್ದರೆ ನಮ್ಮ ಹಿಂದಿನ ಜನ್ಮಗಳ ಅನುಭವದ ನೆನವು ಏಕಿಲ್ಲ ? ವೇದಾಂತವು, ' ನೆನವು ಎಂದರೇನು ?' ಎಂದು ಕೇಳುತ್ತದೆ. ಇಲ್ಲಿ ರಾಮನು ನಿಮ್ಮೊಂದಿಗೆ ಪರದೇಶದ ಭಾಷೆಯಲ್ಲಿ ಮಾತನಾಡುತ್ತಿದ್ದಾನೆ. ರಾಮನು ಇಂಡಿಯಾದಲ್ಲಿರುವಾಗ ಇಂಗ್ಲಿಷ್ ಭಾಷೆಯಲ್ಲಿ ಎಂದೂ ಉಪನ್ಯಾಸ ಮಾಡಲಿಲ್ಲ. ಇಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಮಾತನಾಡುತ್ತಿರುವಾಗ ರಾಮನ ಮಾತೃಭಾಷೆಯ ಶಬ್ದವೊಂದೂ ಅವನ ಮನಸ್ಸಿನಲ್ಲಿ ಬರುವದಿಲ್ಲ ಆದರೆ ಆ ಇಂಡಿಯಾ ಭಾಷೆಯು ಪೂರ್ಣ ನಷ್ಟವಾಗಿದೆಯೆ ? ಇಲ್ಲ. ಅದು ಅವನ ಮನಸ್ಸಿನಲ್ಲಿ ಇದ್ದೇ ಇದೆ. ಆದರೆ ಆ ಇಂಡಿಯಾ ಭಾಷೆಗಳಲ್ಲಿ ಹಿಂದೀ, ಸಂಸ್ಕೃತ, ಪಂಜಾಬೀ ಮೊದಲಾದ ಯಾವದು ಬೇಕೆಂದರೂ ಒಂದು ಕ್ಷಣ ಯೋಚಿಸಿದರೆ ಅದು ಅವನ ನೆನಪಿನಲ್ಲಿ ಬಂದೇ ಬರುತ್ತದೆ. ಹಾಗಾದರೆ, ನೆನವೆಂದರೇನು ? ನಮ್ಮಲ್ಲಿ ಮನಸ್ಸೆಂಬ ಸರೋವರವಿದೆ. ರಾಮನ ಮಾನಸ ಸರೋವರದಲ್ಲಿ ಹಿಂದೀ, ಉರ್ದು ಮತ್ತು ಸಂಸ್ಕೃತ ಮೊದಲಾದ ಇಂಡಿಯಾ ಭಾಷೆಗಳೆಲ್ಲಾ ತಳದಲ್ಲಿ ನೆಲಸಿವೆ ನಮಗೆ ಬೇಕಾದರೆ ಒಂದು ಕ್ಷಣದಲ್ಲಿ ಈ ಸರೋವರವನ್ನು ಕಲಕಿ, ಇವೆಲ್ಲಾ ತೇಲಿ, ಮೇಲೆ ಬರುವಂತೆ ಮಾಡಬಹುದು ಒಂದು ವಿಷಯವನ್ನು ನೆನಪು ಮಾಡಿಕೊಳ್ಳುವದೆಂದರೆ ಹೀಗೆಯೇ. ನಿಮಗೆ ಅನೇಕ ವಿಷಯಗಳು ತಿಳಿದಿರಬಹುದು ; ಆದರೆ ಎಲ್ಲವೂ ಈಗ ನಿಮ್ಮ ಅರಿವಿನ ಬೆಳಕಿನಲ್ಲಿ ಕಾಣುತ್ತಿಲ್ಲ. ಆದರೆ ಈ ಕ್ಷಣವೇ ಆ ಕಡೆ ಗಮನವಿಟ್ಟು ಮಾನಸ ಸರೋವರವನ್ನು ಕೆದಕುವದರಿಂದ ನಿಮಗೆ ಬೇಕಾದ ವಿಷಯವು ತಳದಿಂದೆದ್ದು ತೇಲಿ ನಿಮ್ಮ ಮನಸ್ಸಿನ ಮೇಲ್ಮೈಗೆ ಅಥವಾ ಮಿದುಳಿಗೆ ಬರುವಂತೆ ನೀವು ಮಾಡಿಕೊಳ್ಳಬಹುದು.

ಹಾಗೆಯೇ ವೇದಾಂತ ಹೇಳುವದೇನೆಂದರೆ, ನಿಮ್ಮ ಹಿಂದಿನ ಅನೇಕ ಜನ್ಮಗಳೂ ಆ ಜೀವನಾನುಭವಗಳೂ ನಿಮ್ಮೊಳಗಿನ ಅರಿವಿನ ಸರೋವರದಲ್ಲಿ ಅಥವಾ ಜ್ಞಾನ ತಟಾಕದಲ್ಲಿ ಸೂಕ್ಷ್ಮ ಸಂಸ್ಕಾರ ರೂಪದಲ್ಲಿ ಇದ್ದೇ ಇವೆ. ಆದರೆ ಅವಿದ್ದರೂ ಈಗ ತಳದಲ್ಲಿ ನೆಲೆಸಿವೆ ; ಅವು ಮನಸ್ಸಿನ ಮೇಲ್ಮೈಯಲ್ಲಿಲ್ಲ. ನಿಮ್ಮ ಹಿಂದಿನ ಜನ್ಮಗಳ ನೆನವು ನಿಮಗೆ ಬೇಕಾದರೆ, ಅದೇನೂ ಕಷ್ಟ ಕಾರ್ಯವಲ್ಲ. ನೀವು ನಿಮ್ಮ ಅರಿವಿನ ಸರೋವರದ ತಳವನ್ನೆಲ್ಲಾ ಕಲಕಾಡಿಬಿಡಬಹುದು, ಅದರಿಂದ ನಿಮಗೆ ಬೇಕಾದ ಯಾವ ಜನ್ಮದ ಅನುಭವವಾದರೂ ನೆನಪಿನ ಮೇಲ್ಮೈಗೆ ಬರುವಂತೆ ಮಾಡಬಹುದು. ಆದರೆ ಆ ಪ್ರಯೋಗವನ್ನು ನಡೆಸಿ ಆ ಶಕ್ತಿಯನ್ನು ಪರೀಕ್ಷಿಸುವದೇನೂ ಪ್ರಯೋಜನ ವಿಲ್ಲ. ಏಕೆಂದರೆ, ಇನ್ನೊಂದು ಮಹತ್ವದ ಪ್ರಕೃತಿ ನಿಯಮದಂತೆ–ಜೀವಶಕ್ತಿ ವಿಕಾಸದ, ಸಂಸ್ಕೃತಿ ವಿಕಾಸದ-ಆತ್ಮಜ್ಞಾನ ವಿಕಾಸದ ನಿಯಮದಂತೆ-ನೀವು ಮುಂದೆ ಮುಂದೆ ನಡೆಯಬೇಕೇ ಹೊರತು, ಹಿಂದಿರುಗಿ ನೋಡಬಾರದು, (Let the dead bury the dead) ಸತ್ತವರು ತಮ್ಮ ಸತ್ತ ಅನುಭವಗಳನ್ನೆಲ್ಲಾ ತಮ್ಮೊಡನೆ ಗೋರಿಯಲ್ಲಿ ಹೂಳಿಡಲಿ," (Let the past bury its past,) "ಕಳೆದ ಕಾಲವು ಕಳೆದು ಹೋದ ಅನುಭವಗಳನ್ನೆಲ್ಲಾ ಹೂಳಿಡಲಿ" ನಿಮಗೇನೂ ಅದರ ಸಂಬಂಧವಿಲ್ಲ, ಪ್ರಯೋಜನವಿಲ್ಲ. ಅದರ ಗೊಡವೆ ನಿಮಗೆ ಬೇಡ. ನೀವು ಹಿಂದಿರುಗಿ ಒಮ್ಮೆಯೂ ನೋಡದೆ ಮುಂದೆ ಮುಂದೆ ನಡೆಯಬೇಕು.

ಈ ಪ್ರಪಂಚದಲ್ಲಿ ಕಾಣುತ್ತಿರುವ ಎಷ್ಟೋವಸ್ತುಗಳಲ್ಲಿ ನಿಮಗೆ ಪ್ರೀತಿಯಿದೆ, ಆಸಕ್ತಿಯಿದೆ ; ಅವುಗಳಿಂದ ನೀವು ಆಕರ್ಷಿತರಾಗುತ್ತೀರಿ. ಇದಕ್ಕೇನು ಕಾರಣ ವೆಂದರೆ, ಕರ್ಮನಿಯಮದ ಪ್ರಕಾರ, ಒಂದಾನೊಂದು ಕಾಲದಲ್ಲಿ ಆ ವಸ್ತುಗಳೆಲ್ಲಾ ನೀವೇ ಆಗಿದ್ದಿರಿ ; ಆದ್ದರಿಂದ ಅವುಗಳು ನಿಮಗೆ ಇಷ್ಟವಾಗಿವೆ, ಬೇಕೆನಿಸಿವೆ. ಅವುಗಳಲ್ಲಿ ನಿಮಗೆ ವಿಶೇಷ ಪ್ರೀತಿಯೂ ಆಸಕ್ತಿಯೂ ಇವೆ ; ಅವುಗಳು ನಿಮ್ಮನ್ನು ಸೆಳೆಯು ತ್ತಿವೆ;—ಎಂದು ವೇದಾಂತವು ಹೇಳುತ್ತದೆ ಆದ್ದರಿಂದಲೇ ಅವುಗಳನ್ನು ಗುರುತಿಸಿ, ಅವುಗಳ ಮೇಲೆ ಪ್ರೇಮ ಸ್ವರೂಪ (ನಿಮ್ಮ) ಆತ್ಮನ ಪ್ರೀತಿಯ ಬೆಳಕನ್ನು ಚೆಲ್ಲುವದ ರಿಂದ (ಹಿಂದೆ ನೀವೇ ಆ ವಸ್ತುಗಳಾಗಿದ್ದುದರಿಂದ) ಅವು ನಿಮಗೆ ಪ್ರಿಯವಾಗಿ ತೋರುತ್ತವೆ ನೀವು ಕಲ್ಲು ಬಂಡೆಗಳಾಗಿದ್ದಿರಿ. ನೀವು ಕಲ್ಲು ಬಂಡೆಗಳಲ್ಲಿ ನಿದ್ರಿಸು ತ್ತಿದ್ದೀರಿ. ನೀವು ಹಳ್ಳ, ಹೊಳೆ, ಹೊನಲುಗಳೊಡನೆ ಸರಿದು ಹರಿದಿದ್ದೀರಿ. ನೀವು ಗಿಡ ಮರ ಬಳ್ಳಿಗಳೊಡನೆ ಬೆಳೆದಿದ್ದೀರಿ. ನೀವು ಪ್ರಾಣಿಗಳೊಡನೆ ಓಡಿದ್ದೀರಿ. ಆದ್ದರಿಂದ ಅವುಗಳನ್ನೆಲ್ಲಾ ಗುರುತಿಸಿ ನೋಡುತ್ತೀರಿ. ಇದನ್ನೇ ಈಗ ಇನ್ನೊಂದು ಯುಕ್ತಿಯಿಂದ ತೋರಿಸಬಹುದು.

ಇದು ಸಾಕ್ರೆಟೀಸನ ಅಥವಾ ಹೆಚ್ಚು ನಿಜವಾಗಿ ಪ್ಲೇಟೋವಿನ ವಾದದ ಅನುವಾದ. Platonic doctrine of Reminiscence : ಆತ್ಮಕ್ಕೆ ಪೂರ್ವ ಜನ್ಮಗಳಲ್ಲಿ ತಿಳದಿದ್ದ ಸತ್ಯಾಂಶಗಳ ಪುನಃ ಸ್ಮರಣೆಯೇ ಜ್ಞಾನ--ಎಂಬ ಪ್ಲೇಟೋವಿನ ಸ್ಮರಣವಾದ ; ಸ್ಮರಣಸಿದ್ಧಾಂತ. Reminiscence ಸ್ಮರಣ ; ಜ್ಞಾಪಿಸಿಕೊಂಡ ಸಂಗತಿ, ಘಟನೆ, ಎಂದರೇನು ? ನಮಗೆ ಮೊದಲೇ ಯಾವದೊಂದು ವಸ್ತುವಿನ ಜ್ಞಾನವಿದ್ದರೆ ಅವನ್ನು ನಾವೀಗ ನೆನಪು ಮಾಡಿಕೊಳ್ಳಬಹುದು,—ಎಂಬ ಅರ್ಥ ಇದರಲ್ಲಿ ಅಡಗಿದೆ. ಉದಾಹರಣೆಗಾಗಿ, ಇಷ್ಟು ದಿವಸ ಇಲ್ಲಿ ನಡೆದ ಉಪನ್ಯಾಸಗಳಿಗಾಗಿ, ಇಬ್ಬರು ಸ್ನೇಹಿತರು, ಒಬ್ಬರನ್ನೊಬ್ಬರು ಒಮ್ಮೆಯೂ ಬಿಡದೆ ಬರುತ್ತಿದ್ದರು, ಎಂದಿಟ್ಟುಕೊಳ್ಳೋಣ. ಇಲ್ಲಿ ನಡೆದ ಏಳು ಉಪನ್ಯಾಸಗಳಿಗೆ ಅವರಿಬ್ಬರೂ ಬಂದು ಎಂಟನೇ ಉಪನ್ಯಾಸಕ್ಕೆ ಒಬ್ಬನೇ ಬರುತ್ತಾನೆ ; ಇನ್ನೊಬ್ಬನು ಬರುವದಿಲ್ಲ ಆಗ ಇವರ ಬೇರೆ ಮಿತ್ರರು ಇವನಿಗೆ " ಇದೇನು ನೀನೊಬ್ಬನೇ ಬಂದೆ ? ನಿನ್ನ ಪ್ರಿಯ ಗೆಳೆಯನೆಲ್ಲಿ ? ಅವನೇಕೆ ಬರಲಿಲ್ಲ? " ಎಂದು ಸ್ವಾಭಾವಿಕವಾಗಿ ಕೇಳುತ್ತಾರೆ. ಅವರು ಈ ಪ್ರಶ್ನೆಯನ್ನೇಕೆ ಕೇಳುತ್ತಾರೆ ? ಈ ಪ್ರಶ್ನೆಗೆ ಪ್ರಕೃತಿಸಿದ್ಧವಾದ ಸ್ಮರಣ ನಿಯಮವೇ (Law of Reminiscence) ಕಾರಣ ಇದೇ ಸಂಬಂಧ ನಿಯಮವೂ ಸಾಹಚರ್ಯ ನಿಯಮವೂ ಸಹವಾಸ ನಿಯಮವೂ (Law of Association) ಆಗುತ್ತದೆ. ನಾವು ಯಾವಾಗಲೂ ಇಬ್ಬರನ್ನೂ ಒಟ್ಟಿಗೆ ನೋಡುತ್ತಿದ್ದೆವು ; ಆದ್ದರಿಂದ ಇಬ್ಬರೂ ನಮಗೆ ಪರಿಚಿತರೂ ಬಳಕೆಯವರೂ ಆದರು ನಮ್ಮ ಮನಸ್ಸಿನಲ್ಲಿ ಇಬ್ಬರೂ ಕೂಡಿ ಒಬ್ಬರಂತಾದರು. ಆದರೆ, ಅನಂತರ ಅವರಲ್ಲಿ ಒಬ್ಬನನ್ನೇ ಕಂಡಾಗ, ಈ ಒಬ್ಬನು ಕೂಡಲೇ ಆ ಇನ್ನೊಬ್ಬನನ್ನು ನಮ್ಮ ನೆನಪಿಗೆ ತರುತ್ತಾನೆ. ಈ ಬಗೆಯಿಂದ ನಮ್ಮ ಮಿದುಳಿನಲ್ಲಿ ಸಂಬಂಧ ನಿಯಮವು, ಸಾಹಚರ್ಯ ನಿಯಮವು ಸ್ಥಾಪನೆಯಾಯಿತು ; ಸ್ಮರಣ ನಿಯಮವೂ ಈ ಅನುಭವದಿಂದಲೇ ಬೆಳಕಿಗೆ ಬಂದಿತು. ಸ್ಮರಣೆಯು, ನಮ್ಮ ನೆನಪಿಗೆ ಬಂದ ವಿಷಯದ ಪೂರ್ವ ಜ್ಞಾನವನ್ನು ಸೂಚಿಸುತ್ತದೆ.

ಇಲ್ಲಿ ಒಂದು ನ್ಯಾಯವಿದೆ (Syllogism) : ಮಾನವರೆಲ್ಲಾ ಮರ್ತ್ಯರು (ಮೃತ್ಯುವಶರು) ; ರಾಮನು ಒಬ್ಬ ಮಾನವ ; ಆದ್ದರಿಂದ ರಾಮನು ಮರ್ತ್ಯ. ಇದೇ (ಅನುಗಮನ ತರ್ಕಕ್ಕೆ ವ್ಯತಿರಿಕ್ತವಾದ) ನಿಗಮನ ತರ್ಕ (syllogism). (ನಿಗಮನ ತರ್ಕವೆಂದರೆ, (The conclusion in a Syllogism, a deduction) ನಿಮ್ಮ ಎಲ್ಲಾ ತರ್ಕವೂ ನಿಮ್ಮ ಎಲ್ಲಾ ವಾದವೂ ಎಲ್ಲಾ ವಿಚಾರ ಸರಣಿಯೂ ಈ ಪೂರ್ವಪಕ್ಷಗಳನ್ನು (premises)—ಮಾನವರೆಲ್ಲಾ ಮರ್ತ್ಯರು ; ರಾಮನು ಒಬ್ಬ ಮಾನವ –ಎಂಬಿವನ್ನು ಅವಲಂಬಿಸಿವೆ ನಾವು ಇವೆರಡು ಪೂರ್ವ

ಪಕ್ಷಗಳನ್ನು (ಪ್ರತಿಜ್ಞೆಗಳನ್ನು) ಮಾತ್ರ ಹೇಳಿ, ಇವುಗಳ ಫಲಿತಾಂಶವನ್ನು— ಮುಕ್ತಾಯವನ್ನು—ಹೇಳದೆ ತಡೆಹಿಡಿದರೆ, ತತ್‌ಕ್ಷಣವೇ ನಮ್ಮ ಮನಸ್ಸಿನಲ್ಲಿ 'ರಾಮನು ಮರ್ತ್ಯ' ಎಂಬ ಮುಕ್ತಾಯವು ಸ್ಮರಣರೂಪದಿಂದ (Reminisence) ಮೇಲೇರಿ ಬರುತ್ತದೆ. ಈ ಮುಕ್ತಾಯವು (ಫಲಿತಾಂಶವು) ನಮ್ಮ ಮನಸ್ಸಿನಲ್ಲಿ ಹೇಗೆ ಬಂದಿತು ? ಇದು ಪ್ಲೇಟೋ ಮಹಾಶಯನು ವಿವರಿಸಿದ 'ಸ್ಮರಣ ನಿಯಮ'ದ ಪ್ರಕಾರವೇ ಅಲ್ಲವೆ ಬಂದಿತು ? ಹೌದು, ನಿಜ. ಮೊದಲೇ ವಿವರಿಸಿರುವ ಮೂರು ಪ್ರಮೇಯ (ಪ್ರತಿಜ್ಞೆ)ಗಳಲ್ಲಿ, ಮೊದಲಿನ ಎರಡನ್ನು ನಿಮ್ಮ ಮುಂದಿಟ್ಟರೆ, ಆ ಕೂಡಲೇ–ತತ್ತ್ವಜ್ಞರು ಹೇಳುವಂತೆ ಭಾವಸಂಬಂಧ ನಿಯಮದ (Law of thought, the law of association of thought) ಪ್ರಕಾರ–ಮೂರನೇ ಪ್ರಮೇಯವು (Proposition) ನಿಮ್ಮ ಮನಸ್ಸಿಗೆ ಬರುತ್ತದೆ ಇದು ಪ್ರತಿಯೊಬ್ಬರ ಮನಸ್ಸಿನಲ್ಲಿಯೂ ಬಂದೇ ಬರುತ್ತದೆ ಇದು ಹೇಗೆ ? ಏಕೆ ? ಒಬ್ಬರನ್ನೊಬ್ಬರು ಎಂದಿಗೂ ಬಿಡದಿರುವ ಇಬ್ಬರು ಮಿತ್ರರಲ್ಲಿ ಒಬ್ಬನನ್ನೇ ಕಂಡಾಗ ಯಾರಿಗಾದರೂ ಇನ್ನೊಬ್ಬನ ನೆನಪು ಹೇಗೆ ತಪ್ಪದೇ ಬರುವದೋ ಹಾಗೆಯೇ ಆ ಮೂರನೇ ಪ್ರಮೇಯವೂ ಮನಸ್ಸಿಗೆ ಬರುತ್ತದೆ. ಒಳ್ಳೆಯದು, ಈ ಸ್ಮರಣೆಯು ಹೇಗೆ ಬರಲು ಸಾಧ್ಯ ? ಪ್ರತಿಯೊಬ್ಬರ ಮನಸ್ಸಿನಲ್ಲಿಯೂ–ಮಿದುಳಿನಲ್ಲಿಯೂ–ಈ ಭಾವ ನಿಯಮವು (Law of thought) ಸ್ವಭಾವ ಸಿದ್ಧವಾಗಿ ಇರಲು ಕಾರಣವೇನು ? ಇದು ಹೇಗಿತ್ತು ? ಅಥವಾ ಈ ಬಗೆಯ ಸ್ಮರಣವನ್ನು ತಂದ ಭಾವನಿಯಮವು ಎಲ್ಲರ ಮನಸ್ಸಿನಲ್ಲಿಯೂ ಹೇಗಿತ್ತು ? ಇರಲು ಕಾರಣವೇನು ? ಇದು ಒಂದು ಬಗೆಯ ಸ್ಮರಣೆಯಿಂದಲೇ ಇತ್ತು, ಎನ್ನಬಹುದು ಈಗ, ಸ್ಮರಣೆ ಎನ್ನುವದರಲ್ಲಿ ಒಂದು ವಿಷಯದ ಪೂರ್ವಜ್ಞಾನ ಎನ್ನುವ ಅರ್ಥ ಅಡಗಿದೆ ಮಿದುಳಿರುವ ಪ್ರತಿಯೊಂದು ಮಗುವಿನಲ್ಲಿಯೂ ವಿಚಾರ ಮಾಡುವ ಶಕ್ತಿಯಿದೆ ಆದ್ದರಿಂದ ಪ್ರತಿಯೊಂದು ಮಗುವಿನೊಡನೆ ನಾವು ಯುಕ್ತಿಯಿಂದ ವಿಚಾರಮಾಡಬಹುದು ಮಗುವು ತನ್ನಲ್ಲಿಯೇ ಸ್ವಲ್ಪ ಆಲೋಚನೆ ಮಾಡುವದಕ್ಕೆ ತೊಡಗಿದರೆ, ಆಗ ನಾವು ಅದಕ್ಕೆ ಮೇಲಿನ ಮೂರು ಪ್ರಮೇಯಗಳ (ನಿಗಮನ) ತರ್ಕವನ್ನು (Syllogism) ತಿಳಿಸಿದರೆ, ಅದು ಸುಲಭವಾಗಿ ಒಪ್ಪಿಕೊಳ್ಳುತ್ತದೆ.

ಈಗ ನಾವು ಯೂಕ್ಲಿಡ್‌ನ (Euclid) ಒಂದು ಪ್ರಮೇಯವನ್ನು ಪ್ರಮಾಣೀಕರಿಸುತ್ತೇವೆ, ಸರಿಯೆಂದು ಸಾಧಿಸಿ ತೋರಿಸುತ್ತಿದ್ದೇವೆ. ಇದರಲ್ಲಿ ಫಲಿತಾಂಶಕ್ಕೆ ತತ್‌ಕ್ಷಣವೇ ಬಂದುಬಿಡುತ್ತೇವೆ ಇದು ಹೀಗೆ ಬರುವದು ಸ್ಮರಣೆಯಿಂದಲೇ. ಸ್ಮರಣೆಯಿಂದ ನಿಮ್ಮ ಮಿದುಳುಗಳಲ್ಲಿ ಎಚ್ಚೆತ್ತುಕೊಳ್ಳುವ ವಸ್ತುಗಳ ಪರಿಚಯವೂ

ಬಳಕೆಯೂ ನಿಮಗೆ ಮೊದಲೇ ಇತ್ತೆಂಬ ಸತ್ಯತೆಯನ್ನು, ಎಲ್ಲರ ಮಿದುಳುಗಳಲ್ಲಿಯೂ ಸ್ವಭಾವಸಿದ್ಧವಾಗಿರುವ ಸ್ಮರಣಶಕ್ತಿಯು ನಿಶ್ಚಿತವಾಗಿ ತೋರಿಸುತ್ತದೆ. ಹೀಗೆ ನೆನಪಿನಿಂದ ನಿಮ್ಮ ಮಿದುಳುಗಳಲ್ಲಿ ಪುನಃ ಜೀವಂತ ಸ್ಥಿತಿಗೆ ಬರುವ ವಸ್ತುಗಳ ಅರಿವೂ ಬಳಕೆಯೂ ನಿಮಗಿರಬೇಕಾದರೆ, ನೀವು ಹಿಂದೆ ಎಂದೋ ಅವುಗಳನ್ನು ಕಲಿತಿರಬೇಕು ಅಥವಾ ಗಳಿಸಿರಬೇಕು. ಆದರೆ ನೀವು ಅವುಗಳನ್ನು ಈ ಜನ್ಮದಲ್ಲಿ ಎಂದೂ ಕಲಿತಿಲ್ಲ ವೆಂದೂ ಗಳಿಸಿಲ್ಲವೆಂದೂ ನಿಮಗೆ ನಿಶ್ಚಯವಾಗಿ ಗೊತ್ತಿದೆ. ಹಾಗಾದರೆ ಈ ಜ್ಞಾನ ವನ್ನು ನೀವು ಎಲ್ಲಿ ಸಂಪಾದಿಸಿದಿರಿ ? ನೀವಿದನ್ನು ನಿಮ್ಮ ಹಿಂದಿನ ಜನ್ಮದಲ್ಲಿ ಸಂಪಾದಿ ಸಿದಿರಿ, ಎಂದು ವೇದಾಂತವು ಹೇಳುತ್ತದೆ.

ಇಲ್ಲಿ ಇನ್ನೊಂದು ಪ್ರಶ್ನೆ ಇದೆ. ಒಳ್ಳೆಯದು, ನಮ್ಮ ಅದೃಷ್ಟಕ್ಕೆ ನಾವೇ ಒಡೆಯರಾದರೆ, ನಾವು ಬಡವರಾಗಿ ಏಕೆ ಹುಟ್ಟಿದೆವು ? ನಮ್ಮಲ್ಲಿ ಯಾರೂ ಬಡವ ರಾಗಿರುವದಕ್ಕೆ ಇಷ್ಟಪಡುವದಿಲ್ಲ ಅಲ್ಲವೆ ? ನಾವೆಲ್ಲರೂ ಶ್ರೀಮಂತರಾಗಿ ಹುಟ್ಟ ಬೇಕೆಂದೇ ಇಷ್ಟಪಡುತ್ತೇವೆ. ಆದರೂ ನಾವು ಇಷ್ಟಪಡದಿದ್ದರೂ ನಮ್ಮಲ್ಲಿ ಅನೇಕರು ಏಕೆ ಬಡವರಲ್ಲಿ ಹುಟ್ಟಿದ್ದೇವೆ ? ಇದಕ್ಕೆ ವೇದಾಂತವು ಹೇಳುವದೇನೆಂದರೆ, “ ನೀವು ವಿಷಯಗಳನ್ನು ಸರಿಯಾದ ಬೆಳಕಿನಲ್ಲಿ ನೋಡಬೇಕು , ಅವುಗಳನ್ನು ಆದ್ಯಂತವಾಗಿ ಪರಿಶೀಲಿಸಬೇಕು ; ಅರ್ಧಮರ್ಧವಾಗಿ ವಿಚಾರಿಸಬಾರದು. ಒಂದು ವಿಷಯವನ್ನು ಎಲ್ಲಾ ಕಡೆಗಳಿಂದಲೂ ನೋಡಬೇಕು. ಅಮೆರಿಕಾದ ಪ್ರೆಸಿಡೆಂಟ್ ಆಗಬೇಕೆಂದೋ ಲಂಡನ್ನಿನ ಲಾರ್ಡ್‌ಮೇಯರ್ ಆಗಬೇಕೆಂದೋ ಪ್ರತಿಯೊಬ್ಬನೂ ಬಯಸುತ್ತಾ ನೆಂಬುದು ನಿಜವಲ್ಲ ಪ್ರತಿಯೊಬ್ಬನೂ ಲಕ್ಷಾಧಿಪತಿ ಆಗಬೇಕೆಂದೋ ಕೋಟೀಶ್ವರ ಆಗಬೇಕೆಂದೋ ಅಪೇಕ್ಷಿಸುತ್ತಾನೆಂಬದೂ ನಿಜವಲ್ಲ. ಇಲ್ಲಿ ಒಬ್ಬ ಮನುಷ್ಯನಿಗೆ ಒಂದು ವಾರಕ್ಕೆ ನಾಲ್ಕು ಡಾಲರ್ ಬರುತ್ತಿದ್ದರೆ, ವಾರಕ್ಕೆ ಏಳು ಡಾಲರ್ ಬರುವ ಸ್ಥಾನಕ್ಕೆ ತಾನು ಏರಬೇಕೆಂಬುದೇ ಅವನ ಮಹತ್ವಾಕಾಂಕ್ಷೆ. ಅಮೆರಿಕಾದ ಪ್ರೆಸಿಡೆಂಟೋ ಲಂಡನ್ನಿನ ಲಾರ್ಡ್ ಮೇಯರೋ ಆಗಬೇಕೆಂಬ ಭಾವನೆಯು ಅವನ ಮನಸ್ಸಿನಲ್ಲಿ ಎಂದೂ ಬರುವದಿಲ್ಲ. ಹಾಗೆ ಬರುವದೆಂಬುದು ನಿಜವಲ್ಲ ಅಲ್ಲದೆ, ಆಶೆ ಮಾಡುವದಕ್ಕೆ ಇರುವ ಸ್ವಾತಂತ್ರ್ಯವನ್ನೇ ಆ ಆಶೆಯು ಫಲಿಸುವದಕ್ಕೆ ಅವಶ್ಯವಾದ ಯೋಗ್ಯತೆಯನ್ನು ಸಂಪಾದಿಸುವದಕ್ಕೂ ಆ ಕಾರ್ಯಸಾಧನೆಗೂ ಉಪಯೋಗಿಸಬೇಕು.

ಆ ವಿಷಯವನ್ನೇ ಇನ್ನೊಂದು ದೃಷ್ಟಿಯಿಂದ ನೋಡಿ. ಆಶೆ ಮಾಡುವದ ರಲ್ಲಿಯೂ ಜನರು ಪೂರ್ವಾಪರ ವಿರುದ್ಧವಾಗಿಯೂ ಅಸಂಬದ್ಧವಾಗಿಯೂ

ವಿವೇಕಶೂನ್ಯರಾಗಿಯೂ ಇರುತ್ತಾರೆ. ಅವರು ತಮ್ಮ ಆಶೆಗಳನ್ನು ತಮ್ಮ ಸಂದರ್ಭಗಳಿಗೂ ಕಾಲ-ದೇಶ-ವರ್ತಮಾನಗಳಿಗೂ ಹೊಂದಿಸಿಕೊಳ್ಳುವದಿಲ್ಲ. ಅವರು ತಮ್ಮ ಆಶೆಗಳಿಗೆ ದಾಸರಾಗುವರೇ ಹೊರತು ಪ್ರಭುಗಳಾಗುವದಿಲ್ಲ. ಆದ್ದರಿಂದ ಅವರಿಗೆ ಇಷ್ಟವಿಲ್ಲದಿದ್ದರೂ ಅವರ ಆಶೆಗಳಿಂದಲೇ ಜನರು ಅವರಿಗೇ ತಿಳಿಯದಂತೆ ಇಕ್ಕಟ್ಟಿನಲ್ಲಿಯೂ ಬಿಕ್ಕಟ್ಟಿನಲ್ಲಿಯೂ ಸಂಕಟಗಳಲ್ಲಿಯೂ ಕಷ್ಟಗಳಲ್ಲಿಯೂ ಚಿಂತಾತಂಕಗಳಲ್ಲಿಯೂ ಸಿಕ್ಕಿಕೊಳ್ಳುತ್ತಾರೆ.

ಈಗ ಇವತ್ತಿನ ಭಾಷಣದಲ್ಲಿ ಎಲ್ಲರಿಗೂ ಕುತೂಹಲವನ್ನೂ ಆಸಕ್ತಿಯನ್ನೂ ಹುಟ್ಟಿಸುವಂಥಾ ಭಾಗವು ಬರುತ್ತದೆ. ನೀತಿ, ಧರ್ಮ, ಅಧ್ಯಾತ್ಮ, ಜ್ಞಾನ, ಕೀರ್ತಿ ಮೊದಲಾದವುಗಳಲ್ಲಿ ಯಾವದೂ ತನಗೆ ಬೇಕಿಲ್ಲದ ಒಬ್ಬ ಮನುಷ್ಯನಿದ್ದಾನೆ,—ಎಂದಿಟ್ಟುಕೊಳ್ಳೋಣ. ಅವನು ತನ್ನ ಕೇವಲ ಇಂದ್ರಿಯ ಸುಖವನ್ನೂ ಪಶುಕಾಮಪನ್ನೂ ತೃಪ್ತಿ ಮಾಡಿಕೊಳ್ಳಬೇಕೆಂದು ಹಾತೊರೆಯುತ್ತಿರುತ್ತಾನೆ. ಇಂಥಾ ಒಬ್ಬ ಪಶುಮನುಷ್ಯನು ಸತ್ತರೆ, ಅವನು ತನಗೆ ಎಂಥಾ ತಂದೆ ತಾಯಿಗಳನ್ನು ಮಾಡಿಕೊಳ್ಳುತ್ತಾನೆ ? ಅವನಲ್ಲಿರುವ ಅದಮ್ಯವಾದ ಪಾಶವೀ ಕಾಮದ ತೃಪ್ತಿಗೆ ಅವನಿಗೆ ವಿದ್ವಾಂಸರಾದ ತಂದೆ ತಾಯಿಗಳಾಗಲೀ ಸುಸಂಸ್ಕೃತರಾದವರಾಗಲೀ ಶ್ರೀಮಂತರಾಗಲೀ ಅವಶ್ಯವಿಲ್ಲ. ಅವನಲ್ಲಿರುವ ಮನಶ್ಶಕ್ತಿಯ ಬೆಳವಣಿಗೆಗೆ ಅಂಥಾ ಕ್ಷೇತ್ರಗಳು ಹಿತವಾದವುಗಳಲ್ಲ. ಆದ್ದರಿಂದ ಇಂಥಾ ಮನುಷ್ಯನು ಪೂರಾ ಪಶುಕಾಮಗಳಿಂದಲೇ ತುಂಬಿದವನಾದರೆ, ಅವನಿಗೆ ಅತ್ಯಂತ ಯುಕ್ತವಾಗಿರುವ ಹಂದಿಯ ಅಥವಾ ನಾಯಿಯ ಶರೀರವೇ ಬರುತ್ತದೆಯೆಂದು ವೇದಾಂತವು ಹೇಳುತ್ತದೆ. ಏಕೆಂದರೆ ಎಷ್ಟು ತಿಂದರೂ ಸಾಕಾಗದಿರುವ ಪಶುಕಾಮವನ್ನು ಎಷ್ಟು ಭೋಗಿಸಿದರೂ ಬಳಲದಿರುವ ಬಲಿಷ್ಠವಾದ ದೇಹವನ್ನು ಅವನು ಪಿತ್ರಾರ್ಜಿತವಾಗಿ ಪಡೆಯುತ್ತಾನೆ. ಏಕೆಂದರೆ, ಆ ಪಶುದೇಹದಲ್ಲಿ ಅವನು ಎಷ್ಟಾದರೂ ಹೊಟ್ಟೆಬಾಕನಾಗಿಯೂ ನಾಚಿಕೆಗೇಡಿಯಾಗಿಯೂ ಅನಾಗರಿಕನಾಗಿಯೂ ಅಸಹ್ಯವಾಗಿಯೂ ಬದುಕಿ, ಎಲ್ಲಾ ಪಾಶವೀ ಕಾಮಗಳನ್ನೂ ಅನುಭವಿಸುತ್ತಾ ತನ್ನನ್ನು ತಾನು ಎಷ್ಟಾದರೂ ಮುಟಾಳನನ್ನಾಗಿ ಮಾಡಿಕೊಳ್ಳಬಹುದು. ಅದಕ್ಕೆ ಸರಿಯಾದುದು ಹಂದಿ-ನಾಯಿಗಳ ಶರೀರವೇ ಆದ್ದರಿಂದ ಆ ಹಂದಿಯ ಅಥವಾ ನಾಯಿಯ ಶರೀರದಲ್ಲಿಯೂ ಅವನು ತನ್ನ ಅದೃಷ್ಟಕ್ಕೆ ತಾನೇ ಸ್ವಾಮಿ

ಜನರು ಏನನ್ನಾದರೂ ಬಯಸಿ, ಹಂಬಲಿಸುವಾಗ, ಅದು ತಮ್ಮನ್ನು ಎಂಥಾ ಸ್ಥಿತಿಗೆ ಒಯ್ಯಬಹುದು, ತಮ್ಮ ಗತಿ ಏನಾಗಬಹುದು, ಪರಿಣಾಮವೇನು,

ಎನ್ನುವದನ್ನು ಯೋಚಿಸುವದಿಲ್ಲ. ಆದರೆ, ಅನಂತರ ತಮ್ಮ ಬಯಕೆಯ ಫಲವನ್ನು ಅನುಭವಿಸುವಾಗ ತಮ್ಮ ಕೆಟ್ಟ ಅದೃಷ್ಟಕ್ಕಾಗಿ ಅತ್ತು ಗೋಳಾಡುತ್ತಾರೆ, ಹಾಳು ಗ್ರಹ ಚಾರಕ್ಕಾಗಿ ಪೇಚಾಡುತ್ತಾರೆ ; ತಮ್ಮ ದುರ್ದೈವಕ್ಕಾಗಿ ತುಟಿಗಳನ್ನು ಕಚ್ಚಿ, ಹಲ್ಲು ಹಲ್ಲು ಕಡಿದು ಶಪಿಸುತ್ತಾರೆ. ಆದ್ದರಿಂದ ಏನನ್ನಾದರೂ ಬಯಸುವಾಗಲೂ ಅದರ ಪರಿಣಾಮವೇನೆಂಬದನ್ನು ಯೋಚಿಸಬೇಕು. ನಿಮ್ಮ ಮೇಲೆ ದುಃಖ ದುರವಸ್ಥೆಗಳು ಬರುವದಾದರೂ ನಿಮ್ಮಿಂದಲೇ ಹೊರತು ಬೇರೆಯವರಿಂದ ಅಲ್ಲ.

ಈಗ ರಾಮನು ಇಂಡಿಯ ದೇಶದ ಒಬ್ಬ ಕವಿಯ ಕಥೆಯನ್ನು ಹೇಳುತ್ತಾನೆ. ಅವನು ಮಹಮ್ಮದೀಯ ಕವಿಯಾಗಿದ್ದನು. ಅವನು ಜಾಣನಾದ ಒಳ್ಳೆಯ ಮನುಷ್ಯನಾಗಿದ್ದನು. ಅವನು ಚತುರನೂ ಬಹಳ ತಮಾಷೆಯ ಮನುಷ್ಯನೂ ಆಗಿದ್ದನು ಅವನಲ್ಲಿ ಅತಿಶಯ ಆದರವುಳ್ಳ ಒಬ್ಬ ದೇಶೀಯ ರಾಜನ ಆಸ್ಥಾನದಲ್ಲಿ ಆತನಿದ್ದನು. ಒಂದು ರಾತ್ರಿ ರಾಜನು ಅವನನ್ನು ತನ್ನ ಸಹವಾಸದಲ್ಲಿ ಬಹಳ ಹೊತ್ತು ಇಟ್ಟುಕೊಂಡಿದ್ದನು ಈ ಕವಿಯು ರಾಜನನ್ನು ಅನೇಕ ವಿಧವಾದ ಶ್ಲೋಕಗಳಿಂದಲೂ, ಜಾಣತನದ ಕತೆಗಳಿಂದಲೂ ಸ್ವಾರಸ್ಯವಾದ ಉಪಕತೆಗಳಿಂದಲೂ ವಿನೋದಪಡಿಸುತ್ತಿದ್ದನು. ಆ ರಾತ್ರಿ ರಾಜನು ಮಲಗುವದಕ್ಕೆ ಬಹಳ ಹೊತ್ತಿನ ಮೇಲೇ ಹೋದನು ಮತ್ತು ಆ ಕವಿಯ ಚತುರೋಕ್ತಿಗಳನ್ನು ನೆನೆಸಿಕೊಳ್ಳುತ್ತಾ ನಿದ್ರೆಯನ್ನೇ ಮರೆತನು. ಅವನು ಅಪೂರ್ವವಾಗಿ ಆ ರಾತ್ರಿ ಅಷ್ಟು ತಡವಾಗಿ ಶಯ್ಯಾಗೃಹಕ್ಕೆ ಬರುವದಕ್ಕೆ ಕಾರಣವೇನೆಂದು ರಾಣಿಯು ಕೇಳಿದಳು. ರಾಜನು "ಓ, ಇಷ್ಟು ಹೊತ್ತೂ ನಮ್ಮೊಡನೆ ಬಹಳ ಆಶ್ಚರ್ಯದ ಮನುಷ್ಯನೊಬ್ಬನಿದ್ದನು. ಅವನು ಬಹಳ ಒಳ್ಳೆಯವನು, ಬಹಳ ಜಾಣ, ಸೊಗಸಾದ ತಮಾಷೆಯ ಮನುಷ್ಯ." ಎಂದನು. ಆಗ ರಾಣಿಯು ಕುತೂಹಲದಿಂದ ಅವನ ವಿಷಯವನ್ನು ಹೆಚ್ಚಾಗಿ ತಿಳಿದು ಕೊಳ್ಳುವದಕ್ಕಾಗಿ ವಿವರವಾಗಿ ಪ್ರಸ್ತಾಪ ಮಾಡಿದಳು. ಆಕೆಯ ವಿಶೇಷ ಆಸಕ್ತಿ ಯಿಂದ ರಾಜನು ಪ್ರೋತ್ಸಾಹಗೊಂಡು ಆ ಕವಿಯ ವಿದ್ವತ್ತು, ಸರಸೋಕ್ತಿಗಳು, ಶಕ್ತಿ-ಸಾಮರ್ಥ್ಯಗಳು ಮೊದಲಾದುವುಗಳನ್ನು ಬೆಳೆಸಿ ಬೆಳಗಿನವರೆಗೂ ದೀರ್ಘವಾದ ಉಪನ್ಯಾಸವನ್ನೇ ಮಾಡಿದನು. ಅವರು ಮಲಗುವಾಗ ಮುಂಜಾನೆಯಾಗಿತ್ತು. ರಾಜನ ವರ್ಣನೆಯಿಂದ ರಾಣಿಯ ಕುತೂಹಲವು ಅತ್ಯಂತ ತೀವ್ರವಾಗಿ ಕೆರಳಿದ್ದರಿಂದ, ಅಂಥಾ ಚತುರ ಕವಿಯನ್ನು ಎಂದಾದರೊಂದು ದಿನ ತನ್ನಲ್ಲಿಗೆ ಕರೆತರಬೇಕೆಂದು ರಾಣಿಯು ಮರುದಿನ ಪ್ರಾರ್ಥಿಸಿದಳು. ಆ ದಿನವೇ ರಾಜನು ಆ ಕುಶಲ ಕವಿಯನ್ನು ತನ್ನ ರಾಣೀವಾಸಕ್ಕೆ ಕರೆತಂದನು ಇಂಡಿಯಾ ದೇಶದಲ್ಲಿರುವ ಪದ್ಧತಿಗಳು ಈ ಪಾಶ್ಚಾತ್ತ್ಯ ದೇಶದ ಪದ್ಧತಿಗಳಿಗಿಂತ ತೀರ ಬೇರೆಯಾಗಿವೆ. ಅಲ್ಲಿ ಹೆಂಗಸರು

ಮನೆಗಳಲ್ಲಿ, ಪ್ರತ್ಯೇಕ ಕೋಣೆಗಳಲ್ಲಿ ವಾಸಮಾಡುತ್ತಾರೆ; ಅವರು ಗಂಡಸರ ಜೊತೆಗೆ ಅದೂ ಹೊರಗಿನ ದೊಡ್ಡ ಮನುಷ್ಯರ ಜೊತೆಗೆ ಹೆಚ್ಚು ಸೇರುವದಿಲ್ಲ ಅವರು ಬೇರೆಯೇ ವಾಸ ಮಾಡುತ್ತಿರುತ್ತಾರೆ. ವಿಶೇಷವಾಗಿ ಮುಸಲ್ಮಾನ ಮಹಿಳೆಯರು–ಹಿಂದೂ ಸ್ತ್ರೀಯರಲ್ಲ–ದಟ್ಟವಾದ ಮುಸುಕುಗಳನ್ನು ಹಾಕಿಕೊಂಡಿರುತ್ತಾರೆ. ತಮ್ಮ ಗಂಡಂದಿರು ಅಥವಾ ಬಹಳ ಪರಿಶುದ್ಧರೂ ಉತ್ತಮ ಶೀಲವಂತರೂ ಧರ್ಮಾತ್ಮರೂ ಆದ ಸಜ್ಜನರ ಹೊರತು ಬೇರೆ ಯಾವ ಪುರುಷರೂ ತಮ್ಮನ್ನು ನೋಡುವದಕ್ಕೆ ಅವರು ಬಿಡುವದಿಲ್ಲ. ಒಳ್ಳೆಯದು, ರಾಜನು ಆ ಕವಿಯನ್ನು ತನ್ನ ಅಂತಃಪುರಕ್ಕೆ ಕರೆದುಕೊಂಡು ಬಂದನು ಆಗ ಆ ಕವಿಯು ತನ್ನ ರಸವತ್ತಾದ ಪದ್ಯಗಳನ್ನು ಹಾಡಿ, ಚಮತ್ಕಾರದ ಕಥೆಗಳನ್ನು ಹೇಳಿ, ಸರಸವಾಗಿ ಮಾತನಾಡಿದನು. ಇದರಿಂದ ರಾಣಿಯೂ ಅಂತಃಪುರದ ಸ್ತ್ರೀಯರೂ ಬಹಳವಾಗಿ ಮೆಚ್ಚಿಕೊಂಡು ಸಂತೋಷಪಟ್ಟರು. ಅವರೆಲ್ಲಾ ಕವಿಯ ರಸಿಕತೆಯನ್ನೂ ವಿನೋದವನ್ನೂ ಬಹಳವಾಗಿ ಶ್ಲಾಘಿಸಿದರು. ಆದರೆ, ಈ ಕವಿಯು ತನಗೆ ಕಣ್ಣಿದ್ದರೂ ಯಾವದೋ ರೋಗದಿಂದ ತನಗೇನೂ ಕಾಣುವದಿಲ್ಲವೆಂದು ಮೊದಲಿನಿಂದಲೂ ನಟಿಸುತ್ತಿದ್ದನು. ರಾಜನ ಜನಾನಾದಲ್ಲಿ ಅಲ್ಲಿಯ ಅಂತಃಪುರ ಸ್ತ್ರೀಯರನ್ನೂ ರಾಣಿಯನ್ನೂ ತನ್ನ ತಮಾಷೆಗಳಿಂದ ವಿನೋದಗೊಳಿಸುತ್ತಾ ನಗಿಸುತ್ತಾ ಇರುವದಕ್ಕೆ ತನಗೆ ಅವಕಾಶವಾಗಬೇಕೆಂದೂ ತಾನು ಕುರುಡನೆಂದು ವೇಷ ಹಾಕಿದರೆ ಯಾರೂ ತನ್ನಲ್ಲಿ ಅವಿಶ್ವಾಸ ಮಾಡದೆ, ನಂಬುವರೆಂದೂ ಅಲ್ಲಿಯ ಸುಂದರಿಯರು ತನ್ನೆದುರಿಗೆ ಓಡಾಡುವಾಗಲೂ ಮಾತನಾಡುವಾಗಲೂ ಬುರಕೆಯಿಲ್ಲದೆ ಸ್ವಚ್ಛಂದವಾಗಿರುವರೆಂದೂ ಯೋಚಿಸಿ ಆ ಕವಿಯು ದುರುದ್ದೇಶದಿಂದ ಹಾಗೆ ನಟಿಸುತ್ತಿದ್ದನು. ರಾಜನೂ ಹೆಚ್ಚು ಪರೀಕ್ಷಿಸದೆ ಅವನನ್ನು ನಂಬಿ ಅಂತಃಪುರದಲ್ಲಿ ಬೇಕಾದಾಗ ಅನಿರ್ಬಂಧಿತವಾಗಿ ಹೋಗಿ ಬರಲು ಅವಕಾಶ ಮಾಡಿಕೊಟ್ಟನು ಆದರೆ ಸತ್ಯವನ್ನು ಹೆಚ್ಚು ಕಾಲ ಮುಚ್ಚಿಡಲು ಸಾಧ್ಯವಿಲ್ಲ.

Truth crushed to earth shall rise again,
The eternal years of God are hers
ಸತ್ಯವನು ಸದೆಬಡಿದು ತುಳಿದಿಡಲು ಭೂಮಿಯಲಿ,
ಮತ್ತೆ ಪುಟಿದೇಳುವದದುವೆ ಬಿಡದೆ, ಶತಬಲದಲಿ.

ಸತ್ಯವನ್ನು ಎಷ್ಟೇ ರಹಸ್ಯವಾಗಿಡಲಿ, ಅದು ಎಂದಾದರೊಂದು ದಿನ ಹೊರಬಿದ್ದೇ ಬೀಳುವದು. ಅದರಂತೆ, ಒಂದು ದಿನ ಆ ಕವಿಯು ಅಂತಃಪುರದಲ್ಲಿದ್ದ ಒಬ್ಬ

ಪರಿಚಾರಿಕೆಯನ್ನು ಕರೆದು ದೂರದಲ್ಲಿದ್ದ ಒಂದು ವಸ್ತುವನ್ನು ತಂದುಕೊಡಲು ಹೇಳಿದನು. ಇಂಡಿಯಾ ದೇಶದಲ್ಲಿ ಜನರು ಸ್ವಲ್ಪ ಶ್ರೀಮಂತರಾದ ಕೂಡಲೇ ಸೋಮಾರಿಗಳಾಗುತ್ತಾರೆ. ಸೋಮಾರಿತನವೇ ಶ್ರೀಮಂತಿಕೆಯ ಲಕ್ಷಣವೆಂದು ತಿಳಿಯುತ್ತಾರೆ. ನೀವೇ ಸ್ವತಂತ್ರವಾಗಿ ಯಾವ ಕೆಲಸವನ್ನೂ ಮಾಡದೆ, ನಿಮ್ಮ ಊಟ, ಉಡಿಗೆಗಳಲ್ಲಿಯೂ ನಡೆದಾಟದಲ್ಲಿಯೂ ಪ್ರವಾಸದಲ್ಲಿಯೂ ಯಾರಾದರೂ ಇನ್ನೊಬ್ಬರು ನಿಮಗೆ ಸಹಾಯವನ್ನೂ ಸೇವೆಯನ್ನೂ ಮಾಡುತ್ತಲೇ ಇದ್ದರೆ, ನಿಮ್ಮನ್ನು ಬಹಳ ದೊಡ್ಡ ಮನುಷ್ಯರೆಂದೂ ಗೌರವಸ್ಥರೆಂದೂ ನೀವೇ ಭಾವಿಸಿಕೊಳ್ಳುತ್ತೀರಿ. ಹೀಗೆ ನಿರಂತರ ಪರಾಧೀನತೆಯೇ ಗೌರವದ ಮುಖ್ಯ ಲಕ್ಷಣವೆಂದು ಭ್ರಮೆಗೊಳ್ಳುತ್ತೀರಿ. ಸ್ವಾತಂತ್ರ್ಯವನ್ನೂ ಸ್ವಯಂ ಪ್ರಭುತ್ವವನ್ನೂ ಪರಾವಲಂಬನೆಯೆಂದೂ ದಾಸ್ಯವೆಂದೂ ವಿಪರ್ಯಸ್ತ (ತಿರುವು ಮುರು)ವಾಗಿ ತಿಳಿಯುತ್ತೀರಿ. ಆದ್ದರಿಂದ ರಾಜನ ಅರಮನೆಯಲ್ಲಿ ಒಂದು ಗೌರವದ ಸ್ಥಾನವನ್ನು ಪಡೆದಿದ್ದ ಆ ಕವಿಯೂ ತನಗೆ ಬೇಕಾಗಿದ್ದ ಒಂದು ಸಾಮಾನನ್ನು ತಂದುಕೊಳ್ಳುವದಕ್ಕೆ ತನ್ನ ಸ್ಥಾನವನ್ನು ಬಿಟ್ಟೇಳುವದೇ ಅಗೌರವವೆಂದು ಭಾವಿಸಿದನು. ಆದ್ದರಿಂದ ಅವನು ತನ್ನ ಕೆಲಸವನ್ನು ಮಾಡಲು ಒಬ್ಬ ಪರಿಚಾರಿಕೆಗೆ ಆಜ್ಞೆ ಮಾಡಿದನು ಆದರೆ ಅವಳು ತನಗೆ ಬಿಡುವಿಲ್ಲವೆಂದು ಒರಟಾಗಿಯೂ ನಿರ್ದಾಕ್ಷಿಣ್ಯವಾಗಿಯೂ ಉತ್ತರ ಕೊಟ್ಟಳು. ಅನಂತರ ಅಲ್ಲಿಗೆ ಬಂದ ಇನ್ನೊಬ್ಬ ಸೇವಕಿಯನ್ನೂ ಕರೆದು, ಅವನು ದೂರದಲ್ಲಿದ್ದ ಒಂದು ಕುರ್ಚಿಯನ್ನು ತನ್ನಲ್ಲಿಗೆ ತರಲು ಹೇಳಿದನು. ಅಲ್ಲಿ ಕುರ್ಚಿಯಿಲ್ಲವೆಂದು ಆಕೆ ಹೇಳಿದಳು. " ಆ ನೀರಿನ ಪಾತ್ರೆಯನ್ನು ತೆಗೆದುಕೊಂಡು ಬಾ " ಎಂದು ಹೇಳಿದನು. ಆಕೆ ಅದೂ ಇಲ್ಲವೆಂದು ಹೇಳಿ ಹೋಗುತ್ತಿದ್ದಳು. ಅಷ್ಟರಲ್ಲಿ ಆ ಕವಿಯು ರೇಗಿ, " ಕುರುಡಿ, ಅಲ್ಲಿರುವದು ಕಾಣುವದಿಲ್ಲವೆ ? " ಎಂದು ಕೂಗಾಡಿದನು. ಅವನು ಕೋಪದಿಂದಲೂ ದರ್ಪದಿಂದಲೂ ಗರ್ವದಿಂದಲೂ ತನ್ನನ್ನು ತಾನು ಮರೆತಿದ್ದನು. ಅದು ಹೀಗಾಗುವದು ಸ್ವಭಾವ. ಸತ್ಯವು ಸುಳ್ಳರನ್ನು ಗೇಲಿ ಮಾಡುವದೇ ಅವಹಾಸ್ಯ ಮಾಡುವದೇ ಹೀಗೆ. ಲೇಡಿ ಮ್ಯಾಕ್‌ಬೆತ್ತಳೂ ತಾನು ಮಾಡಿದ ಅಪರಾಧವನ್ನು ಮುಚ್ಚಿಡಲು ಸಾಧ್ಯವಾಗಲಿಲ್ಲ—ಎನ್ನುವದು ನಿಮಗೆ ತಿಳಿದೇ ಇದೆ. ಸತ್ಯವು ಆಕೆಗೆ ಹುಚ್ಚು ಹಿಡಿಸಿತು ; ಆಕೆ ತಾನಾಗಿಯೇ ವೈದ್ಯರಲ್ಲಿ ಅದನ್ನು ಒಪ್ಪಿಕೊಂಡಳು. ಇದೇ ಪ್ರಕೃತಿನಿಯಮ. ಹಾಗೆ ಆ ಕವಿಯು " ಕುರುಡಿ, ಇಲ್ಲಿರುವದು ಕಾಣುವದಿಲ್ಲವೆ? " ಎಂದು ಕೂಗಿದೊಡನೆ, ಆ ಸೇವಕಿಯು ಆ ಕಾರ್ಯವನ್ನು ಮಾಡುವದಕ್ಕೆ ಬದಲು, ರಾಣಿಯಲ್ಲಿಗೆ ಓಡಿಹೋಗಿ ಆ ರಹಸ್ಯವನ್ನು ಸ್ಫೋಟಮಾಡಿ, " ಓಹೋ ! ಮಹಾರಾಣಿ, ಆ ಕವಿಯು ಕುರುಡನಲ್ಲ , ಅವನು ಮೋಸಗಾರ, ದುಷ್ಟ,

ಸುಮ್ಮನೆ ನಾಟಕವಾಡುತ್ತಾನೆ. ಅವನನ್ನು ಮೊದಲು ಈ ರಾಣೀವಾಸದಿಂದ ತೊಲಗಿಸಬೇಕು." ಎಂದು ಉದ್ವೇಗದಿಂದ ಬಿನ್ನವಿಸಿಕೊಂಡಳು. ಆಗ ರಾಣಿಯು ನೈಜವಾದ ವಿಷಯವನ್ನು ವಿಚಾರಮಾಡಿ, ಆ ಕವಿಯನ್ನು ಕೂಡಲೇ ಅಲ್ಲಿಂದ ಹೊರಗಟ್ಟಿ ಓಡಿಸಿದಳು. ಆದರೆ ಆ ಕವಿಯು ಮೂರು ದಿನಗಳೊಳಗೇ ನಿಜವಾಗಿಯೂ ಕುರುಡಾದನು. ಅದು ಹೇಗೆ ? ಏಕೆಂದರೆ, ಅವನ ಇಚ್ಛೆಯಿಂದಲೇ ಅವನು ಕುರುಡಾದನೆಂದು ಕರ್ಮ-ಫಲ-ಭೋಗ ನಿಯಮವು ಹೇಳುತ್ತದೆ. ಅವನ ಅದೃಷ್ಟಕ್ಕೆ ಅವನೇ ಒಡೆಯ. ಯಾರೂ ಇನ್ನೊಬ್ಬನನ್ನು ಕುರುಡನನ್ನಾಗಿ ಮಾಡುವದಿಲ್ಲ; ಅವನವನ ಇಚ್ಛೆಯೇ ಅವನನ್ನು ಕುರುಡನನ್ನಾಗಿ ಮಾಡುತ್ತದೆ. ತನ್ನ ಇಚ್ಛೆ ಯಿಂದಲೇ ತಾನು ಕುರುಡಾದರೂ ಅನಂತರ ಅತ್ತು ಗೋಳಾಡುತ್ತಾನೆ; ಹಲ್ಲು ಕಡಿದು ಎದೆ ಬಡಿದುಕೊಳ್ಳುತ್ತಾನೆ

ಒಬ್ಬ ಮುದುಕನು ಭಾರವಾದ ಹೊರೆಯನ್ನು ಹೊತ್ತುಕೊಂಡು ಹೋಗು ತ್ತಿದ್ದನು. ಅವನು ಉಷ್ಣದೇಶವಾದ ಇಂಡಿಯಾದಲ್ಲಿ ವಾಸ ಮಾಡುತ್ತಿದ್ದನು ಆ ದಿನ ಅವನು ಜ್ವರದಿಂದ ನರಳುತ್ತಾ ಬಹಳ ದುರ್ಬಲನಾಗಿದ್ದನು. ಅವನು ಬಿಸಿಲಿ ನಲ್ಲಿ ನಡೆಯಲಾರದೆ, ತಲೆಯ ಮೇಲಿದ್ದ ಹೊರೆಯನ್ನೆಸೆದು ಒಂದು ಮರದ ನೆರಳಿನಲ್ಲಿ ಕಾಲು ಚಾಚಿಕೊಂಡು ಮಲಗಿದನು. ಅವನು ತನ್ನ ಸಂಕಷ್ಟದ ಸಂಸಾರವನ್ನೂ ನೆನೆಸಿಕೊಂಡು, ಆಗಿನ ದುರವಸ್ಥೆಗೂ ಎದೆಗುಂದಿ ‘‘ ಓ ಮೃತ್ಯುವೇ, ಮೃತ್ಯುವೇ, ನೀನಾದರೂ ದಯಮಾಡಿ ಬಂದು ನನ್ನ ದುಃಖವನ್ನು ತಪ್ಪಿಸಲಾರೆಯ ? ಈ ಬವಣೆ ಯಿಂದ ಬಿಡುಗಡೆಮಾಡಲಾರೆಯ ?" ಎಂದು ಗೋಳಾಡಿ ಗೋಗರೆದನು ಮನ ಕೊರೆಯುವ ಅವನ ಮೊರೆಯು ಮೃತ್ಯುವಿನ ಮನಸ್ಸಿಗೆ ಮುಟ್ಟಿತೋ ಎನ್ನುವಂತೆ, ಮೃತ್ಯುವು ಬಂದೇ ಬಿಟ್ಟನು. ಅವನ ಘೋರ ರೂಪವನ್ನು ನೋಡಿ, ಜ್ವರದ ತಾಪ ದಿಂದ ಸನ್ನಿಹಿಡಿದಂತಿದ್ದ ಮುದುಕನು ಭಯದಿಂದ ಕಿಟ್ಟನೆ ಕಿರಿಚಿ, ಗಡಗಡನೆ ನಡುಗುವದಕ್ಕೆ ತೊಡಗಿದನು. ಅತಿವಿಕಾರವಾದ ಆ ಭಯಂಕರಾಕೃತಿಯನ್ನು ನೋಡಿ ಆ ಮುದುಕನು ಅವಶನಾಗಿ ‘‘ ನೀನು ಯಾರು ? ” ಎಂದು ಕೂಗಿದನು. ‘‘ ನೀನು ಸ್ವಲ್ಪ ಮುಂಚೆ ಯಾರನ್ನು ಕರೆದೆಯೋ ಅವನೇ ನಾನು. ನಿನ್ನ ಇಚ್ಛೆಯಂತೆ ಬಂದಿದ್ದೇನೆ ; ನಿನ್ನ ಮೊರೆಗೆ, ಕರೆಗೆ ಓಗೊಟ್ಟು, ನಿನ್ನ ಬಯಕೆಯನ್ನು ಪೂರೈಸಲು ” ಎಂದು ಮೃತ್ಯು ದೇವನು ಗಂಭೀರವಾಗಿ ಗುಡುಗಿದನು. ಈ ಮಾತು ಮುದುಕನ ಮನಸ್ಸಿಗೆ ಅಪ್ಪಳಿಸಿದಂತಾಗಿ ಎದೆ ನಡುಗಿತು ಸಿಡಿಲೇ ಎರಗಿದಂತಾಯಿತು. ಕ್ಷಣ ಕಾಲ ಮೂರ್ಛೆ ಹೋದಂತಾಗಿ, ಎಚ್ಚೆತ್ತು, ಸ್ವಲ್ಪ ಧೈರ್ಯ ತಂದುಕೊಂಡು ,‘ ಅಯ್ಯೋ ! ಮಹಾದೇವ, ಕ್ಷಮಿಸು ; ಸಹಿಸಲಾರದ ಹಾಗೂ ಸಾಯಲಾರದ

ಸಂಕಟದಲ್ಲಿ ನಾನು ಯಾರನ್ನು ಕರೆದೆನೋ ತಿಳಿಯದು. ಕೆಳಗೆ ಬಿದ್ದಿರುವ ಈ ಹೊರೆಯನ್ನೆತ್ತಿ ನನ್ನ ತಲೆಯ ಮೇಲೆ ಹೊರಿಸುವದಕ್ಕೆ ಯಾರ ಸಹಾಯವಾದರೂ ಬೇಕಾಗಿತ್ತು ; ನನ್ನ ಜ್ವರದ ಹುಚ್ಚಿನಲ್ಲಿ ಯಾರನ್ನು ಕರೆದೆನೋ ತಿಳಿಯದು " ಎಂದನು.

ಜನರ ಸ್ವಭಾವವೇ ಹೀಗೆ. ನಿಮ್ಮ ಎಲ್ಲಾ ಕಷ್ಟಗಳೂ ದುಃಖಗಳೂ ನಿಮ್ಮಿಂದಲೇ ನಿಮಗೆ ಬರುತ್ತವೆ. ನಿಮ್ಮ ಅದೃಷ್ಟಕ್ಕೆ ನೀವೇ ಒಡೆಯರು. ನೀವು ಬಯಸಿದ್ದೇ ನಿಮಗೆ ಬಂದಾಗ ಬೇಡವೆಂದು ಅಳುತ್ತೀರಿ ಸಾವನ್ನು ಕರೆಯುತ್ತೀರಿ ; ಸಾವು ಬಂದಾಗ ಗೋಳಾಡುತ್ತೀರಿ. ತಪ್ಪಿಸಿಕೊಳ್ಳುವದಕ್ಕೆ ಉಪಾಯವನ್ನು ಹುಡುಕುತ್ತೀರಿ. ಆದರೆ ಅದು ಸಾಧ್ಯವಾಗುವದಿಲ್ಲ. ಹರಾಜಿನಲ್ಲಿ ಸವಾಲು ಮಾಡಿ, ಎಲ್ಲರಿಗಿಂತಲೂ ಹೆಚ್ಚಿನ ಬೆಲೆಯನ್ನು ಕೂಗಿದ ಮೇಲೆ ಆ ಪದಾರ್ಥವನ್ನು ತೆಗೆದು ಕೊಳ್ಳಲೇ ಬೇಕಾಗುತ್ತದೆ. ಕುದುರೆಯನ್ನು ಓಡಿಸಿದಮೇಲೆ ಅದರ ಹಿಂದಿರುವ ಗಾಡಿ ಬೆನ್ನ ಹತ್ತಿಯೇ ಓಡುತ್ತದೆ ಆದ್ದರಿಂದ ನೀವು ಬಯಸಿದಮೇಲೆ ಅದರ ಪರಿಣಾಮ ವನ್ನು ಅನುಭವಿಸಲೇ ಬೇಕಾಗುತ್ತದೆ. ಬಹು ಜನರು ಸಾಮಾನ್ಯವಾಗಿ ಮುಪ್ಪಿ ನಲ್ಲಿಯೇ ಸಾಯುತ್ತಾರೆ ಏಕೆ ? ಯೌವನದಲ್ಲಿ ಸಾಯತಕ್ಕವರು ಕಡಿಮೆ ಏಕೆ ? ದೇಹವು ವಯಸ್ಸಾದ ಮೇಲೆ ದುರ್ಬಲವಾಗಿ ರೋಗಗ್ರಸ್ತವಾಗುತ್ತದೆ ; ದುಃಖ ದಾಯಕವಾಗುತ್ತದೆ ಆದ್ದರಿಂದ ಕಷ್ಟವನ್ನು ಸಹಿಸಲಾರದೆ ಜನರು ಬಿಡುಗಡೆಯನ್ನು ಬಯಸುತ್ತಾರೆ ; ಸಾವನ್ನು ಕರೆಯುತ್ತಾರೆ. ಸಾವು ಬರುತ್ತದೆ ಹೀಗೆ ಸಾವು ಬರುವದೂ ನಿಮಗೆ ಬೇಕಾಗಿಯೇ, ನಿಮ್ಮಿಂದಲೇ. ವೇದಾಂತದ ಪ್ರಕಾರ ಪ್ರತಿ ಯೊಬ್ಬನೂ ಆತ್ಮ (ಪ್ರಾಣ) ಹತ್ಯಕಾರ , ಆತ್ಮಘಾತಕ. ತನ್ನ ಪ್ರಾಣವನ್ನು ತಾನೇ ಸ್ವೇಚ್ಛೆಯಿಂದ ಕಳೆದುಕೊಳ್ಳತಕ್ಕವನು. ನೀವು ಕರೆದ ಕೂಡಲೇ ಮೃತ್ಯುವು ಬರು ತ್ತದೆ. ಹಾಗಾದರೆ ಕೆಲವರು ಭರತಾರುಣ್ಯದಲ್ಲಿಯೇ ಏಕೆ ಸಾಯುತ್ತಾರೆ ? ರಾಮನು ಹೇಳುವದು ಈಗ ನಿಮಗೆ ನಂಬಿಕೆಯಾಗದಿರಬಹುದು. ಆದರೆ ಆ ಸಂಬಂಧವಾದ ಕೆಲವು ಸಂದರ್ಭಗಳನ್ನು ಒಳಹೊಕ್ಕು ಚೆನ್ನಾಗಿ ಪರೀಕ್ಷಿಸಿದರೆ, ರಾಮನು ಹೇಳುವದನ್ನು ನೀವು ಒಪ್ಪುತ್ತೀರಿ. ತುಂಬಿದ ಯೌವನದಲ್ಲಿ ಸತ್ತಿರುವ ಅನೇಕರನ್ನು ರಾಮನು ನೋಡಿದ್ದಾನೆ ಅವರ ವೈಯಕ್ತಿಕ ಜೀವನದಲ್ಲಿ ಪ್ರವೇಶ ಮಾಡಿ, ರಾಮನು ಅವರ ಚಾರಿತ್ರ್ಯವನ್ನೆಲ್ಲಾ ಕೂಲಂಕಷವಾಗಿ ವಿಚಾರ ಮಾಡಿದ್ದಾನೆ. ಹಾಗೆ ಅಕಾಲದಲ್ಲಿ ಸತ್ತಿರುವ ಆ ಯುವಕರು, ದುಃಖಕರವಾದ ತಮ್ಮ ಅನಿಷ್ಟ ಸನ್ನಿವೇಶಗಳನ್ನು ಸಹಿಸ ಲಾರದೆ, ಹಾಗೂ ಈ ಜನ್ಮದಲ್ಲಿ ಬದಲಾಯಿಸಿಕೊಳ್ಳಲಾರದೆ, ಅವುಗಳಿಂದ ಬಿಡುಗಡೆ ಯನ್ನು ಪಡೆಯುವದಕ್ಕೋಸ್ಕರ ಅವರ ಹೃದಯಾಂತರಾಳದಲ್ಲಿ ಮರಣವನ್ನೇ

ಅತ್ಯುತ್ಕಟವಾಗಿ ಬಯಸುತ್ತಿದ್ದರು ಎಂದು ನಿಶ್ಚಿತವಾಗಿ ತಿಳಿದುಬಂದಿದೆ. ಆ ವಿಷಯ ಯಾವಾಗಲೂ ಹಾಗೆಯೇ ಸರಿ. ಇದನ್ನು ಸತ್ಯವೆಂದು ತೋರಿಸುವದಕ್ಕಾಗಿ ವಾಸ್ತವಿಕವಾದ ಯಾವ ಉದಾಹರಣೆಯನ್ನೂ ಈಗ ಕೊಡುವದಕ್ಕೆ ಸಮಯವಿಲ್ಲ. ಆದರೂ ಇದು ಸತ್ಯವಾದುದು, ಎಂದಿಷ್ಟೇ ಹೇಳಬಹುದು.

ಇಂಡಿಯಾ ದೇಶದಲ್ಲಿ. ಸಂಕುಚಿತ ಮತಾಭಿಮಾನವುಳ್ಳ ಒಂದು ಕಾಲೇಜಿನಲ್ಲಿ, ಪ್ರತಿಭಾವಂತ ತರುಣರೊಬ್ಬರು ಪ್ರೊಫೆಸರ್ ಆಗಿ ಕೆಲಸ ಮಾಡುತ್ತಿದ್ದರು. ಒಮ್ಮೆ ಅವರು ಸಾರ್ವಜನಿಕ ಸಭೆಯೊಂದರಲ್ಲಿ ಆ ಕಾಲೇಜಿನ ಧ್ಯೇಯ ಸಾಧನೆಗಾಗಿ ತಮ್ಮ ಜೀವನವನ್ನೇ—ಮುಡುಪಾಗಿಟ್ಟು-ಧಾರೆಯೆರೆದಿರುವದಾಗಿ ಭಾವಾವೇಶದಿಂದ ಸಾರಿಬಿಟ್ಟರು. ಅವರಾ ಪ್ರತಿಜ್ಞೆಗನುಸಾರವಾಗಿಯೇ ಕೆಲವು ಕಾಲ ಅತ್ಯಂತ ಉತ್ಸಾಹದಿಂದ ಕೆಲಸ ಮಾಡಿದರು ಅನಂತರ ಅವರ ಮನಸ್ಸು ವಿಶಾಲವಾಗಿ, ಭಾವನೆಯು ವಿಕಾಸವಾಗಿ, ದೃಷ್ಟಿ ಉದಾರವಾಗಿ, ಅಭಿಪ್ರಾಯವು ಬದಲಾವಣೆ ಹೊಂದಿತು. ಅದರಿಂದ ಸಂಕುಚಿತ ಮತಾಭಿಮಾನವುಳ್ಳವರ ಜೊತೆಗೆ-ಆ ಸಂಸ್ಥೆಯಲ್ಲಿ-ಮೊದಲಿನಂತೆ ಕೆಲಸ ಮಾಡುವುದು ಅವರಿಗೆ ಸಾಧ್ಯವಿಲ್ಲವಾಯಿತು. ಆ ಮತಾಭಿಮಾನಿಗಳಿಗೂ ಹೃದಯಾಂತರಾಳದಲ್ಲಿ ಈ ಪ್ರೊಫೆಸರ ನೂತನ ಭಾವನೆಗಳ ವಿಷಯಕ್ಕೆ ಸಹಾನುಭೂತಿಯಿಲ್ಲವಾಯಿತು, ಆದರೆ ಅವರು ಆ ಸಂಸ್ಥೆಯ ಸೇವೆಗೆ ಮೊದಲೇ ವಚನಬದ್ಧರಾಗಿದ್ದುದರಿಂದ ಸಂಕುಚಿತಭಾವದ ಮಿಕ್ಕ ಸಹೋದ್ಯೋಗಿಗಳ ಜೊತೆಗೆ ಬಹಳ ಕಷ್ಟದಿಂದ ಅನಿವಾರ್ಯವಾಗಿ ಹೊಂದಿಕೊಂಡು ಹೋಗಬೇಕಾಗಿ ಬಂದಿತು. ತಾವೇ ಹಾಕಿಕೊಂಡಿದ್ದ ಮಾತಿನ ಕಟ್ಟಿನಿಂದ ಅವರಿಗೆ ಬಿಡುಗಡೆಗೇ ಅವಕಾಶವಿಲ್ಲವಾಯಿತು. ಅವರ ದೇಹವು ಒಂದು ಕಡೆಯಲ್ಲಿ, ಮನಸೇ ಇನ್ನೊಂದು ಕಡೆಯಲ್ಲಿ ಆಯಿತು. ಅವರ ದೇಹವೂ ಮನಸ್ಸೂ ಬೇರೆಯಾದವು ಹೀಗೆ ಬಹಳ ದಿನಗಳನ್ನು ಕಳೆಯುವದು ಸಾಧ್ಯವಿರಲಿಲ್ಲ. ಆದ್ದರಿಂದ ಅವರು ಸತ್ತುಹೋದರು. ಸಾವಿನಿಂದ ಹೊರತು ಬೇರೆ ಯಾವ ಬಗೆಯಿಂದಲೂ ಅವರು ತಮ್ಮ ಪರಿಸ್ಥಿತಿಗಳನ್ನು ಬದಲಾಯಿಸುವದು ಸಾಧ್ಯವಿರಲಿಲ್ಲ ಆದರೆ ಅವರ ಸಾವಿನಿಂದ ಅವು ಬದಲಾಯಿಸಿದವು. ಹೀಗೆ ಸಾವು ಕೂಡ ಎಲ್ಲರಿಗೂ ತೋರುವಂತೆ-ಭಯಪ್ರದವಾದುದಲ್ಲ.

ನಿಮ್ಮ ಪರಿಸ್ಥಿತಿಗಳಿಗೂ ಸಂದರ್ಭಗಳಿಗೂ ಅದೃಷ್ಟಗಳಿಗೂ ನೀವೇ ಕಾರಣರು. ನೀವೇ ಪ್ರಭುಗಳು. ಹಾಗಾದರೆ ಜನರಿಗೆ ದುಃಖ ದುರವಸ್ಥೆಗಳು ಏಕೆ ಉಂಟಾಗುತ್ತವೆ ? ಕಷ್ಟಗಳು ಏಕೆ ಬರುತ್ತವೆ ? ಬಯಕೆಗಳ ತಿಕ್ಕಾಟದಿಂದ ನಿಮ್ಮಲ್ಲಿರುವ ಒಂದು ಬಗೆಯ ಬಯಕೆಗಳು ಒಂದು ರೀತಿಯ ಕರ್ಮವನ್ನು ಮಾಡುವದಕ್ಕೆ

ಪ್ರೇರಿಸುತ್ತವೆ. ನಿಮ್ಮಲ್ಲಿರುವ ಬೇರೆ ಬಗೆಯ ಬಯಕೆಗಳು ಬೇರೆ ರೀತಿಯ ಕರ್ಮವನ್ನು ನಡೆಸುವದಕ್ಕೆ ಪ್ರಚೋದಿಸುತ್ತವೆ. ಎರಡೂ ಬಗೆಯ, ಹಲವು ಬಗೆಯ ಬಯಕೆಗಳು ನಿಮ್ಮಲ್ಲಿಯೇ ಇವೆ. ನೀವು ಲೇಖಕರೂ ಭಾಷಣಕಾರರೂ ಪ್ರೊಫೆಸರರೂ ಬೋಧಕರೂ ಅಥವಾ ಉಪದೇಶಕರೂ ಆಗಬೇಕೆಂದು ಒಂದು ಬಯಕೆ ಪ್ರೋತ್ಸಾಹಿಸುತ್ತದೆ. ಇದಕ್ಕೆ ನಿರಂತರ ಶ್ರಮ, ಸಂಯಮ, ನಿಯಮಶೀಲತೆ, ಅಧ್ಯಯನ, ಅಭ್ಯಾಸ ಇವೆಲ್ಲಾ ಬೇಕು ಆದರೆ, ಭೋಗವಿಲಾಸಗಳಿಂದ ಕೂಡಿದ, ಸ್ವಲ್ಪವೂ ಶ್ರಮವಿಲ್ಲದ ಸ್ವಚ್ಛಂದವಾದ ಸುಖಜೀವನವನ್ನು ನಡೆಸಬೇಕು ಎಂಬ ಹಂಬಲವೂ ನಿಮ್ಮಲ್ಲಿರ ಬಹುದು. ಇದೇ ಪರಸ್ಪರ ವಿರುದ್ಧವಾದ ಅಸಂಗತ ಬಯಕೆಗಳ ಸಂಘರ್ಷ. ಇವೆರಡೂ ಒಂದೇ ವ್ಯಕ್ತಿಯಲ್ಲಿ ಏಕಕಾಲದಲ್ಲಿ ತಲೆಯೆತ್ತಿ ಕುಣಿಯುತ್ತಿದ್ದರೆ ಏನಾಗು ತ್ತದೆ? ಅವನ ಹೃದಯವು ರಣರಂಗವಾಗುತ್ತದೆ. ಒಂದೇ ಕಾಲದಲ್ಲಿ ಒಬ್ಬನಲ್ಲಿ ಕೂಡಿರಲಾರದ ಈ ಎರಡೂ ವಾಸನೆಗಳು ತೃಪ್ತಿಯನ್ನು ಬಯಸುತ್ತವೆ. ಆಗ ಅವೆರಡರಲ್ಲಿ ಹೆಚ್ಚು ಪ್ರಬಲವಾದುದು ಮೇಲೆದ್ದು, ಮುಂದಾಗಿ ಕಾರ್ಯ ಸಾಧನೆ ಮಾಡಿ ತೃಪ್ತಿಯನ್ನು ಪಡೆಯುತ್ತದೆ ಆದರಿಂದ, ದುರ್ಬಲವಾದ ಆಶೆಯು ಭಂಗ ಹೊಂದುವದರಿಂದ ನಿಮಗೆ ದುಃಖವಾಗುತ್ತದೆ ಜನರು ತಮ್ಮ ಮೇಲೆ ತಾವು ಸಂಕಟವನ್ನು ತಂದುಕೊಳ್ಳುವದಕ್ಕೆ ಇದೇ ಕಾರಣ. ಇದೂ ಕೂಡ ನಿಮ್ಮ ಅದೃಷ್ಟಕ್ಕೆ ನೀವೇ ಒಡೆಯರು, ಎನ್ನುವದನ್ನು ತೋರಿಸುತ್ತದೆ ಇದನ್ನು ಸ್ಪಷ್ಟಪಡಿಸುವದಕ್ಕೆ ಈಗ ರಾಮನು ಒಂದು ಸೊಗಸಾದ ಕಥೆಯನ್ನು ಹೇಳುತ್ತಾನೆ.

ಇಂಡಿಯಾದಲ್ಲಿ ಒಬ್ಬ ಮನುಷ್ಯನಿಗೆ ಇಬ್ಬರು ಹೆಂಡಿರಿದ್ದರು. ಹಿಂದೂಗಳು ಬಹುಪತ್ನೀ ಪದ್ಧತಿಯಲ್ಲಿ ನಂಬಿಕೆಯುಳ್ಳವರಲ್ಲ ಮಹಮ್ಮದೀಯರಲ್ಲಿ ಆ ಪದ್ಧತಿ ಯಿದೆ. ಆ ಇಬ್ಬರು ಹೆಂಡಿರಿದ್ದವನು ಮಹಮ್ಮದೀಯ ಒಬ್ಬಳು ಹೆಂಡತಿಯು ಉಪ್ಪರಿಗೆಯ ಮೇಲೆ ವಾಸ ಮಾಡುತ್ತಿದ್ದಳು ಇನ್ನೊಬ್ಬಳು ಕೆಳಗಿರುತ್ತಿದ್ದಳು. ಒಂದು ದಿನ ಒಬ್ಬ ಕಳ್ಳನು ಆ ಮನೆಯಲ್ಲಿದ್ದ ಎಲ್ಲಾ ವಸ್ತುಗಳನ್ನೂ ಕದ್ದೊಯ್ಯು ವದಕ್ಕಾಗಿ ರಾತ್ರಿಯಲ್ಲಿ ಕನ್ನಹಾಕಿ ಒಳಗೆ ನುಗ್ಗಿದನು. ಆದರೆ ಆ ಮನೆಯವರೆಲ್ಲರೂ ರಾತ್ರಿಯೆಲ್ಲಾ ಎಚ್ಚರವಾಗಿದ್ದುದರಿಂದ ಕಳವು ಮಾಡುವದಕ್ಕೆ ಆ ಕಳ್ಳನಿಗೆ ಅವಕಾಶವೇ ಸಿಕ್ಕಲಿಲ್ಲ ಮುಂಜಾನೆಯ ಹೊತ್ತಿಗೆ ಮನೆಯ ಜನರು ಕಳ್ಳನನ್ನು ನೋಡಿ, ಹಿಡಿದು ಪೋಲೀಸ್ ಮ್ಯಾಜಿಸ್ಟ್ರೇಟ್‌ರ ಹತ್ತಿರ ಕರೆದುಕೊಂಡು ಹೋದರು. ಕಳ್ಳನು ಏನನ್ನೂ ಕದ್ದಿರದಿದ್ದರೂ ಮನೆಗೆ ಕನ್ನಹಾಕಿ ನುಗ್ಗಿದ್ದುದೇ ಅಪರಾಧ ವಾಗಿತ್ತು. ಮ್ಯಾಜಿಸ್ಟ್ರೇಟರು ಅವನಿಗೆ ಕೆಲವು ಪಾಟೀಸವಾಲಿನ ಅಡ್ಡ ಪ್ರಶ್ನೆಗಳನ್ನು ಹಾಕಿದರು. ಕಳ್ಳನು ತನ್ನ ಉದ್ದೇಶವನ್ನೂ ಅಪರಾಧವನ್ನೂ ಒಪ್ಪಿಕೊಂಡನು.

ಮ್ಯಾಜಿಸ್ಟ್ರೇಟರು ಅವನಿಗೆ ಏನೋ ಶಿಕ್ಷೆಯನ್ನು ಕೊಡುವವರಿದ್ದರು. ಅಷ್ಟರಲ್ಲಿ ಆ ಕಳ್ಳನು ಮ್ಯಾಜಿಸ್ಟ್ರೇಟರನ್ನು ಕುರಿತು, "ಮಹಾಸ್ವಾಮಿ, ತಾವು ನನಗೆ ಯಾವ ಶಿಕ್ಷೆಯನ್ನು ಬೇಕಾದರೂ ಕೊಡಬಹುದು : ನನ್ನನ್ನು ಕತ್ತಲು ಕಾರಾಗಾರದಲ್ಲಿ ಎಸೆಯ ಬಹುದು ; ಬೇಟೆ ನಾಯಿಗಳ ಮುಂದೆ ಒಗೆಯಬಹುದು ; ನನ್ನ ದೇಹವನ್ನು ತಾವು ಸುಡಿಸಲೂಬಹುದು. ಆದರೆ ದಯವಿಟ್ಟು ಒಂದು ಶಿಕ್ಷೆಯನ್ನು ಮಾತ್ರ ಕೊಡ ಬಾರದು" ಎಂದು ಬೇಡಿದನು. ಮ್ಯಾಜಿಸ್ಟ್ರೇಟರಿಗೆ ಆಶ್ಚರ್ಯವಾಯಿತು ; "ಏನಪ್ಪ ಅದು ?" ಎಂದು ಕೇಳಿದರು ಕಳ್ಳನು "ಅಯ್ಯೋ ಸ್ವಾಮಿ ! ನನಗೆ ಇಬ್ಬರು ಹೆಂಡಿರನ್ನು ಮಾತ್ರ ಲಗ್ನಮಾಡಬೇಡಿರಿ ; ದಯವಿಟ್ಟು ತಾವು ಇದೊಂದು ಶಿಕ್ಷೆಯನ್ನು ಮಾತ್ರ ನನಗೆ ವಿಧಿಸಬಾರದು" ಎಂದು ಮತ್ತೊಮ್ಮೆ ಬೇಡಿ ನಮಸ್ಕರಿ ಸಿದನು ಮ್ಯಾಜಿಸ್ಟ್ರೇಟರು ಬಹಳ ಕುತೂಹಲದಿಂದ "ಅದೇಕೆ ?" ಎಂದು ಕೇಳಿದರು ನ್ಯಾಯಾಲಯದಲ್ಲಿದ್ದ ಎಲ್ಲರಿಗೂ ಆಶ್ಚರ್ಯವಾಯಿತು. ಕಳ್ಳನು, "ಮಹಾಸ್ವಾಮಿ! ನಾನು ಎಷ್ಟು ಕಷ್ಟಪಟ್ಟು, ಭದ್ರವಾದ ಗೋಡೆಯಲ್ಲಿ ಕಂಡಿ ಕೊರೆದು, ಒಳ ನುಗ್ಗಿ, ಬೆಳಗಿನವರೆಗೆ ನಿದ್ರೆಗೆಟ್ಟು ಸಂಚು ನೋಡುತ್ತಿದ್ದರೂ ಯಾವ ವಸ್ತುವನ್ನೂ ಕದಿಯ ಲಾಗಲಿಲ್ಲ. ಇದಕ್ಕೆ ಕಾರಣವೇನೆಂದರೆ, ಮನೆಯ ಯಜಮಾನನು ರಾತ್ರಿಯೆಲ್ಲಾ ಮಹಡಿಯ ಕೆಳಗೆ ಏಣಿಯ ಮೆಟ್ಟಲ ಮೇಲೇ ನಿಂತಿರಬೇಕಾಯಿತು. ಒಬ್ಬ ಹೆಂಡತಿಯು ಅವನ ತಲೆಯ ಕೂದಲನ್ನೂ ಗಡ್ಡವನ್ನೂ ಹಿಡಿದು ಉಪ್ಪರಿಗೆಯ ಮೇಲಕ್ಕೆ ಎಳೆಯುತ್ತಿದ್ದಳು ; ಕೆಳಗೆ ವಾಸ ಮಾಡುತ್ತಿದ್ದ ಹೆಂಡತಿಯು, ಅವನು ತನ್ನಲ್ಲಿಗೆ ಬರಬೇಕೆಂದು ಅವನ ಇಜಾರದ ತುದಿಯನ್ನೂ ಕಾಲು ಚೀಲಗಳನ್ನೂ ಹಿಡಿದು ಒಂದೇ ಸಮನೆ ಜಗ್ಗುತ್ತಿದ್ದಳು. ಇದರಿಂದ ಆ ಬಡಪಾಯಿಯ ತಲೆ ಗೂದಲೂ ಗಡ್ಡವೂ ಕಿತ್ತುಹೋದವು ; ಇಜಾರವೂ ಕಾಲು ಚೀಲಗಳೂ ಹರಿದು ಹೋಗಿ ಅವನು ಬರಿಮೈಯಲ್ಲಿ ರಾತ್ರಿಯೆಲ್ಲಾ ಚಳಿಯಿಂದ ನಡಗುತ್ತಿದ್ದನು ಹೀಗಾಗಿ ಈ ಭಂಡಾಟದಲ್ಲಿ ನಾನೂ ತಪ್ಪಿಸಿಕೊಳ್ಳಲಾರದೆ ಸಿಕ್ಕುಬಿದ್ದೆ" ಎಂದನು

ಹೀಗೆ ನಿಮ್ಮ ಎಲ್ಲಾ ಸಂಕಟಗಳಿಗೂ ಪರಸ್ಪರ ವಿರುದ್ಧವಾದ ಬಯಕೆಗಳ ತಿಕ್ಕಾಟವೇ ಕಾರಣ. ಗೃಹಸೌಖ್ಯ ನಾಶವಾಗುವದಕ್ಕೆ ಗೃಹ ಕಲಹವೇ ಹೇಗೆ ಕಾರಣವೋ ಹಾಗೆ ನಮ್ಮ ಹೃದಯದ ಶಾಂತಿ ನಾಶವಾಗುವದಕ್ಕೂ ಬಯಕೆಗಳಲ್ಲಿ ಸಾಮಂಜಸ್ಯವೂ ಸಾಮರಸ್ಯವೂ ಇಲ್ಲದೆ ಅವುಗಳ ಹೋರಾಟ ನಡೆಯುತ್ತಿರುವದೇ ಕಾರಣ. ಆದ್ದರಿಂದ ನಿಮ್ಮ ಹೃದಯಗಳನ್ನೂ ಮನಸ್ಸುಗಳನ್ನೂ ನೀವೇ ಪರೀಕ್ಷೆ ಮಾಡಿ, ಶಾಂತಿಯಿದೆಯೆ ನೋಡಿಕೊಳ್ಳಿ. ನಿಮ್ಮ ಗುರಿಯಲ್ಲಿ ಏಕತೆಯೂ ಉದ್ದೇಶ ದಲ್ಲಿ ಐಕ್ಯವೂ ಇದ್ದರೆ ನಿಮಗೆ ಯಾವ ತೊಂದರೆಯೂ ಕಷ್ಟವೂ ಬರುವುದಿಲ್ಲ. ಆದರೆ

ಅವುಗಳಲ್ಲಿ ವಿರೋಧವೂ ವೈಷಮ್ಯವೂ ಇದ್ಧರೆ ಮನೆಯೂ ಮನಸ್ಸೂ ಮುರಿದು ಬೀಳುವದರಿಂದ ಸಂಕಟಕ್ಕೆ ಒಳಗಾಗುತ್ತೀರಿ

ಹೀಗೆ ನಿಮ್ಮ ದುಃಖಕ್ಕೆ ಇದೇ ಕಾರಣ ; ಅದನ್ನು ನೀವೇ ತಂದುಕೊಳ್ಳುತ್ತೀರಿ. ಆದ್ದರಿಂದ ನಿಮ್ಮ ಅದೃಷ್ಟಕ್ಕೆ ನೀವೇ ಒಡೆಯರು. ನಮ್ಮಲ್ಲಿ ಕೀಳಾದ ಬಯಕೆಗಳೂ ಇವೆ ; ಮೇಲಾದ ಬಯಕೆಗಳೂ ಇವೆ. ಇವೆರಡರ ನಡುವೆ ಹೋರಾಟ ನಡೆಯುತ್ತಿರುತ್ತದೆ. ಆದರೆ ವಿಶ್ವವ್ಯಾಪಕವಾದ ವಿಕಾಸ ನಿಯಮದಂತೆ ಈ ಹೋರಾಟದಲ್ಲಿ ಹೆಚ್ಚು ಬಲಿಷ್ಠವಾದುದು ಬದುಕುತ್ತದೆ, ಬೆಳೆಯುತ್ತದೆ. ಇದೇ ಪ್ರಕೃತಿಯ ಯೋಜನೆ. ಸಾರ್ವತ್ರಿಕವಾದ (Survival of the fittest) ಈ ನಿಯಮಕ್ಕೆ ಅನುಸಾರವಾಗಿ ಬಲಿಷ್ಠವಾದ ಬಯಕೆಗಳೇ ಜಯಶಾಲಿಗಳಾಗುತ್ತವೆ. ಆದರೆ, ಬಯಕೆಗಳಿಗೆ ಈ ಬಲವು ಏತರಿಂದ ಬರುತ್ತದೆ ? ಈ ಶಕ್ತಿಯು ಬರುವದು ಸತ್ಯದಿಂದಲೇ.

Those desires alone which have more of the truth in them, more of righteousness, justice, godliess or purity, will carry the day You will have to improve and progress at the bayonet's point You cannot stagnate in sensuality all the time

"ಯಾವ ಕಾಮನೆಗಳಲ್ಲಿ ಹೆಚ್ಚು ಸತ್ಯವೂ ಹೆಚ್ಚು ಧರ್ಮವೂ ಹೆಚ್ಚು ನ್ಯಾಯವೂ ದೇವತ್ವವೂ ಅಥವಾ ಪರಿಶುದ್ಧಿಯೂ ಇವೆಯೋ ಅವುಗಳೇ ಜಯಶಾಲಿಯಾಗುತ್ತವೆ (ಎದೆಗಾನಿಸಿ ತಿವಿಯಲು ಹಿಡಿದಿರುವ ಬಂದೂಕಿನ) ಸನೀನಿನ ತುದಿಯಲ್ಲಿ ನೀವು ಉತ್ತಮಗೊಳ್ಳಬೇಕು, ಮತ್ತು ಅಭಿವೃದ್ಧಿ ಪಡೆಯಬೇಕು. ಎಲ್ಲಾ ಕಾಲದಲ್ಲಿಯೂ ನೀವು ವಿಷಯಾಸಕ್ತಿಯಲ್ಲಿಯೇ ಜಡವಾಗಿ ನಿಂತು ನಾರುತ್ತಿರುವದಕ್ಕಾಗುವದಿಲ್ಲ."

ಸ್ವಾರ್ಥಮಯವಾದ ಆಶೆಯಲ್ಲಿಯೂ ದುರಾಶೆಯಲ್ಲಿಯೂ ಮಲೆತು ನಿಂತು ಕೊಳೆಯಲಾರಿರಿ ನೀವು ಆ ಕೆಸರಿನಿಂದ ಮೆಲ್ಲಮೆಲ್ಲನೆ ಆದರೆ ಅತ್ಯಂತ ನಿಶ್ಚಿತವಾಗಿ ಮೇಲೇರಬೇಕಾಗುತ್ತದೆ. ಈ ಜಗತ್ತಿನಲ್ಲಿ ಸುಖವೂ ಇದೆ ; ಇದನ್ನು ಎಲ್ಲರಿಗೂ ಹಿಡಿದು ನಿಂತಿರುವ ಕರ್ಮ-ಫಲ-ಭೋಗ ನಿಯಮವೂ ಇದೆ.

ಆಶೆಗಳೆಲ್ಲಾ ಈಡೇರಲೇ ಬೇಕೆಂಬದೇನು? ನಿಮ್ಮ ನಿಜಸ್ವಭಾವವು ನಿಮ್ಮ ನಿಜವಾದ ಆತ್ಮನು ಅಮೃತ, ಅಮರವಾದುದು; ರಾಮನೂ ಅಮೃತನಾದ ದೇವರು. ನಿಮ್ಮ ಆಶೆಗಳೂ ಮನಸ್ಸೂ ದೇಹವೂ ಸತ್ಯವೆಂಬ ಸಾಗರದಲ್ಲಿ ಅಲೆಗಳೂ ಸುಳಿಗಳೂ ಮಾತ್ರ ಆಗಿವೆ. ಆ ಸಾಗರದ ಅನಂತತೆಯ ನೀರಿನಲ್ಲಿ ದೇಹೇಂದ್ರಿಯಗಳೂ ಮನಸ್ಸೂ ಅದರ ಕಾಮನೆಗಳೂ ಬರಿ ತೆರೆಗಳೂ ನೊರೆಗಳೂ ಆಗಿರುವದರಿಂದ ಆ ನೀರಿನ ಸ್ವಭಾವವೇ ತೆರೆನೊರೆಗಳ ಸ್ವಭಾವವೂ ಆಗಿದೆ. ಈ ಪ್ರಪಂಚವು ನಿಜವಾದ ದೇವರ, ದೇವತ್ವದ, ಆತ್ಮದ ಉಸಿರೇ ಆಗಿದೆ. ಜಗತ್ತು ನನ್ನ ಉಸಿರು. ಕಣ್ಣು ಮಿಟುಕಿಸುವದರಲ್ಲಿ ನಾನು ಪ್ರಪಂಚವನ್ನು ಸೃಷ್ಟಿ ಮಾಡುತ್ತೇನೆ. ನೀವು ಕಣ್ಣು ಮಿಟುಕಿಸುವಷ್ಟರಲ್ಲಿ—ಒಂದು ಕ್ಷಣದಲ್ಲಿ—ಪ್ರಪಂಚವು ಸೃಷ್ಟಿಯಾಗುತ್ತದೆ. ನಾನೇ ನೀವು; ನೀವೇ ನಾನು.

**ಮಹತ್ತಾದ ಮೂಲ ದೇವತ್ವದ ಹಾಗೂ ಅಲ್ಪವಾದ ಜೀವತ್ವದ ಎರಡು ಸ್ವಭಾವಗಳೂ ನಿಮ್ಮ ಎಲ್ಲಾ ಆಶೆಗಳಲ್ಲಿಯೂ ಇವೆ. ಈಗ, ಒಳಗಿರುವ ದೇವತ್ವವನ್ನು ಅಥವಾ ಅಮೃತತ್ತ್ವವನ್ನು ಅವಲಂಬಿಸಿರುವ ಆಶೆಯ ಭಾಗವು (ಸ್ವಭಾವವು), ಎಲ್ಲಾ ಆಶೆಗಳೂ ಸಫಲವಾಗಬೇಕೆಂಬ ವಿಧಿಗೆ ಬದ್ಧವಾಯಿತು ಇನ್ನು ಮಾಯೆಯನ್ನು ಆಧರಿಸಿರುವ ಆಶೆಯ ಯಾವ ಮೂಲಾಂಶಗಳು ಇವೆಯೋ ಅವು ಆಶೆಗಳು ಕೈಗೂಡುವದರಲ್ಲಿ ತಡೆಯನ್ನುಂಟು ಮಾಡುತ್ತವೆ. ನಿಮ್ಮ ಆಶೆಗಳು ನೆರವೇರುವದರಲ್ಲಿ ತಡವಾಗುವದಕ್ಕೆ ಅವುಗಳಲ್ಲಿರುವ ಮಾಯೆಯ ಘಟಕಾಂಶಗಳೇ ಕಾರಣ; ಮತ್ತು ನಿಮ್ಮ ಆಶೆಗಳು ಪರಿಪೂರ್ತಿಯಾಗುವ ನಿಶ್ಚಿತ ನಿಯತಿಗೆ ಅವುಗಳಲ್ಲಿ ಸಹಜ ಸಿದ್ಧವಾಗಿರುವ ದೈವೀಸ್ವಭಾವವೇ ಕಾರಣ. ಒಳ್ಳೆಯದು, ಕಾಮನೆಗಳಲ್ಲಿ ದೈವೀ ಸ್ವಭಾವವು ಹೇಗಿದೆ?—ಎಂದು ನೀವು ಕೇಳಬಹುದು ಎಲ್ಲಾ ಕಾಮುಗಳೂ ಪ್ರೇಮದ ಹೊರತು ಬೇರಲ್ಲ; ಪ್ರೇಮವು ಭೂಮಾದ ಹೊರತು—ಬ್ರಹ್ಮದ ಹೊರತು—ದೇವರ ಹೊರತು ಬೇರೆ ಇಲ್ಲ. ಪ್ರೇಮವು ದೇವರಲ್ಲವೆ? ಎಲ್ಲಾ ಆಶೆಗಳೂ ಗುರುತ್ವಾಕರ್ಷಣದ (Gravitation) ಸ್ವಭಾವಕ್ಕೆ ಸೇರಿವೆ. ಗುರುತ್ವಾಕರ್ಷಣದ ಸ್ವಭಾವವೇ ಆಶೆಗಳ ಸ್ವಭಾವವಾಗಿದೆ ಗುರುತ್ವಾಕರ್ಷಣವೆಂದರೇನು? ಭೂಮಿಯು ಚಂದ್ರನನ್ನು ಆಕರ್ಷಿಸುತ್ತಿದೆ. ಸೂರ್ಯನು ಭೂಮಿಯನ್ನು ಆಕರ್ಷಿಸುತ್ತಿದ್ದಾನೆ. ಗ್ರಹಗಳೆಲ್ಲಾ ಒಂದನ್ನೊಂದು ಆಕರ್ಷಿಸುತ್ತಿವೆ,—ಇದೇ ಸರ್ವವ್ಯಾಪಿಯಾದ ಪ್ರೇಮ; ಪ್ರೇಮದ ಸರ್ವವ್ಯಾಪಿತ್ವ ಪ್ರತಿಯೊಂದು ಪರಮಾಣವೂ ಇದೊಂದು ಪರಮಾಣವನ್ನು**

**ಆಕರ್ಷಿಸುತ್ತದೆ ಇದೇ ಆಕರ್ಷಣ ನಿಯಮ The law of affinity). ಅಣುಗಳಲ್ಲಿ (Molecules) ಪರಮಾಣುಗಳನ್ನು (Atoms) ಒಟ್ಟು ಕೂಡಿ ಸಿಟ್ಟಿರುವ ಸಂಸಕ್ತಶಕ್ತಿ (Force of Cohesion) ಯಾವದು? ಪ್ರತಿ ಯೊಂದು ವಸ್ತುವಿನಲ್ಲಿರುವ ಅಣುಗಳನ್ನು ಓಟ್ಟು ಸೇರಿಸಿಟ್ಟಿರುವ ಶಕ್ತಿ ಯಾವದು? ಇವೆಲ್ಲಾ ಆಕರ್ಷಣ ಶಕ್ತಿಯೇ. ಆಕರ್ಷಣಶಕ್ತಿಯೆ. ಪ್ರೇಮಶಕ್ತಿ. ಭೌತಿಕ ಭೂಮಿಕೆಯಲ್ಲಿ ಆಕರ್ಷಣೆಯಾಗಿ ತೋರುವ ಶಕ್ತಿಯೇ ಮಾನಸ ಭೂಮಿಕೆಯಲ್ಲಿ ಪ್ರೇಮವೂ ಕಾಮವೂ ಆಗಿದೆ. ಅಥವಾ, ಅಂತರಂಗದಲ್ಲಿ ಪ್ರೇಮವೂ ಕಾಮವೂ ಆದ ಶಕ್ತಿಯೇ ಬಹಿರಂಗ ದಲ್ಲಿ ಆಕರ್ಷಣರೂಪವಾಗುತ್ತದೆ. ನಿಮ್ಮ ದೃಷ್ಟಿಯಿಂದ ಆಕರ್ಷಿಸುವ ದೆಂದರೆ ಆಶಿಸುವದು ಏಕೆ? ಈ ಆಕರ್ಷಣೆ, ಈ ಶಕ್ತಿ (force) ಈ ಸಂಸಕ್ತಿ (Cohesion) ಅಥವಾ ರಾಸಾಯನಿಕ ಅನುಸಕ್ತಿ (Chemica) adhesion), ಗುರುತ್ವಾಕರ್ಷಣ (Gravitation) ಇವೆಲ್ಲಾ ವಿಶ್ವ ಭೂಮಿಕೆಯಲ್ಲಿ ತೋರುವ ವಿಶ್ವಾತ್ಮನ ಆಶೆಗಳೇ. ನಿಮ್ಮ ಎಲ್ಲಾ ಆಶೆಗಳೂ ದೈವೀ ಸ್ವಭಾವದವೇ. ಹೀಗೆ ನಿಮ್ಮ ಆಶೆಗಳ ದೈವೀಸ್ವಭಾವವು ಅವುಗಳ ಸಾಫಲ್ಯವನ್ನು ಒತ್ತಾಯಪಡಿಸುತ್ತದೆ. ಆದರೆ ಆಶೆಗಳನ್ನು ನೀವು ಸ್ವಾರ್ಥ ಮಯವಾಗಿ ಅಥವಾ ವ್ಯಕ್ತಿಹಿತಾಸಕ್ತವಾಗಿ ಮಾಡಿಕೊಂಡಾಗ, ಅವುಗಳ ಸ್ವಾರ್ಥ ಗುಣವು ಮಾಯಾಸ್ವಭಾವವಾದುದರಿಂದ, ಅವುಗಳ ಈಡೇರಿಕೆ ಯಲ್ಲಿ ತಡವಾಗುತ್ತದೆ.**

ನಿಮ್ಮ ಆಶೆಗಳು ನಿರಾತಂಕವಾಗಿಯೂ ಸುಲಭವಾಗಿಯೂ ನಿಮಗೆ ಪೂರಾ ಸಮಾಧಾನಕರವಾಗಿಯೂ ಸಫಲವಾಗಬೇಕಾದರೆ ಅವುಗಳಲ್ಲಿರುವ ಮಾಯಾ (ಸ್ವಾರ್ಥ) ಸ್ವಭಾವವನ್ನು ಕಡಿಮೆಮಾಡಿ, (ತಗ್ಗಿಸಿ), ಅವುಗಳ ದೈವೀ ಅಥವಾ ನಿಸ್ಸ್ವಾರ್ಥ ಸ್ವಭಾವವನ್ನು ಹೆಚ್ಚು ಪ್ರಬಲಗೊಳಿಸಬೇಕು. ಹೀಗಾದರೆ ನಿಮ್ಮ ಆಶೆಗಳು ಬೇಗ ಕೈಗೂಡುತ್ತವೆ.

ಒಳ್ಳೆಯದು, ಪ್ರಾರ್ಥನೆಯ ತತ್ತ್ವವೇನು? ಪ್ರಾರ್ಥನೆಯು ದೇವರಿಗೆ ಮುಟ್ಟಿ ಫಲಪಾಗುವುದು ಹೇಗೆ? ಈ ವಿಚಾರವನ್ನು ಇನ್ನೊಂದು ದಿನ ತೆಗೆದು ಕೊಳ್ಳೋಣ.

ಒಂದು ಪದ್ಯವನ್ನು ಓದಿ ನಿಲ್ಲಿಸೋಣ.

ನಿಮ್ಮ ಅದೃಷ್ಟಕ್ಕೆ (ದೈವಕ್ಕೆ, ಹಣೆಯ ಬರಹಕ್ಕೆ, ವಿಧಿಗೆ) ನೀವೇ ಪ್ರಭುಗಳೆಂದು–ಪರಮ ಪ್ರಭುಗಳೆಂದು–ನಿಸ್ಸಂದೇಹವಾಗಿ ಅರಿತುಕೊಂಡರೆ, ನಿಮಗೆ ಅಹಾ! ಎಂಥಾ ಆನಂದವಾಗುತ್ತದೆ! ನೀವು ಓಂಕಾರವನ್ನು ಉಚ್ಚರಿಸುತ್ತಿರುವಾಗ, ನಿಮ್ಮ ಅದೃಷ್ಟಕ್ಕೆ ನೀವೇ ಒಡೆಯರೆಂದು ಭಾವಿಸುತ್ತಿರುವಾಗ ನೀವು ಅಳುವದಕ್ಕೂ ಗೋಳಾಡುವದಕ್ಕೂ ದುಃಖಿಸುವದಕ್ಕೂ ಕಾರಣವೇ ಇರುವುದಿಲ್ಲ ನಿಮ್ಮ ಪರಿಸ್ಥಿತಿಗಳನ್ನೂ ನೀವು ಬದಲಾಯಿಸಿಕೊಂಡಿದ್ದೀರಿ ನಿಮ್ಮ ಸನ್ನಿವೇಶಗಳಿಗೂ ಸಂದರ್ಭಗಳಿಗೂ ನೀವು ದಾಸರೆಂದು ತಿಳಿಯಬೇಡಿ; ಪ್ರಭುಗಳೆಂದು ಅರಿಯಿರಿ ಈ ಸತ್ಯವನ್ನು ನೀವು ಚೆನ್ನಾಗಿ ಮನಗಾಣಿರಿ; ನಿಮ್ಮ ಸುತ್ತಲಿನ ಪರಿಸರಗಳೂ ಸಂದರ್ಭಗಳೂ ಆವರಣಗಳೂ ಏನೇ ಇರಲಿ, ನಿಮ್ಮ ದೇಹವನ್ನು ಕಾರಾಗೃಹದಲ್ಲಿ ಹಾಕಿರಲಿ, ಅಥವಾ ಅದನ್ನು ಒಂದು ನದೀ ಪ್ರವಾಹವು ಕೊಚ್ಚಿಕೊಂಡು ಹೋಗುತ್ತಿರಲಿ ಅಥವಾ ಯಾರ ಕಾಲ ಕೆಳಗಾದರೂ ತುಳಿಯಲ್ಪಡುತ್ತಿರಲಿ, "ನಾನು ದೇಹವಲ್ಲ, ಸಂದರ್ಭ–ಸನ್ನಿವೇಶಗಳ ಪ್ರಭುವೇ ನಾನು, ಎಲ್ಲಾ ಬಗೆಯ ಅದೃಷ್ಟಗಳ ಪ್ರಭುವೇ ನಾನು". ಎಂಬ ಸತ್ಯವು ನಿಮಗೆ ನೆನಪಿರಲಿ; ಇವನ್ನೇ ತೀವ್ರವಾಗಿ ಭಾವಿಸುತ್ತೀರಿ ನಿಮ್ಮ ಸ್ನೇಹಿತರನ್ನು ನೀವೇ ಮಾಡಿಕೊಳ್ಳುತ್ತೀರಿ. ನಿಮ್ಮ ಸ್ನೇಹಿತರೆಂದು ನೀವು ತಿಳಿದಿರುವವರು ನಿಮ್ಮ ಸುತ್ತಲಿರುವದಕ್ಕೆ ನಿಮ್ಮ ಆಶೆಗಳೇ ಕಾರಣ. ನಿಮ್ಮ ಶತ್ರುಗಳೆಂದು ತಿಳಿದಿರುವವರನ್ನು, ನಿಮ್ಮ ಇಚ್ಛೆಗಳೇ ನಿಮ್ಮ ಸುತ್ತಲಿರಿಸಿವೆ. ಓ ಶತ್ರುಗಳೆ! ನಿಮ್ಮನ್ನು ಮಾಡಿದವನು ನಾನೇ. ಓ ಮಿತ್ರರೆ, ನೀವೂ ನನ್ನ ಸೃಷ್ಟಿ. ಈ ಸತ್ಯವನ್ನರಿತು ಭಾವಿಸುತ್ತಿದ್ದರೆ, ನೀವೆಷ್ಟು ಸುಖಿಗಳಾಗುತ್ತೀರಿ

ಎನ್ನೆಲ್ಲ ಬಯಕೆಗಳು ಪೂರ್ಣ ಫಲಿಸಿಹವು, ಪುದಿದು,
ಓ, ಎನ್ನ ಹರ್ಷದಾ ಬಟ್ಟಲದು ತುಂಬಿಯೂ ತುಳುಕುತ್ತಿಹುದು;
ಸೊಗಸಿನ ಮುಂಜಾನೆಯ ಮೆಲುಗಾಳಿಯುದೆನ್ನಿಂ ತೀಡುವದು;
ಎನ್ನುಲ್ಲಾಸದೊಳಾನೇ ಮೆಚ್ಚುತಿಹೆನದರಾ ಮುತ್ತುಗಳ,
ಧರಿಸಿಹೆ ನಾ ಕಾಮನಬಿಲ್ಲಿನ ಬಣ್ಣದ ಬಟ್ಟೆಗಳ
ಎನ್ನೋಲೆಕಾರರು ಮಿಂಚಿನ ಬೆಂಕಿಯ ಪರಿ ಓಡುವರು,
ಸುಂದರ ಗುಲಾಬಿಯ ನಸು ನಗೆಗಳು, ಮಂಜಿನ ಮುತ್ತುಮರು,
ಸವಿಸೊಬಗಿನ ಸುವಾಸಿತವಾ ಸೂರ್ಯನ ಮಿರುಗುವ ಕಿರಣಗಳು,
ಎನಿತು ಕಳೆ, ಎನಿತು ಪೊಸ, ವಾ ಬಂಗಾರದ ರಶ್ಮಿದಾರಗಳು
ಬೆಳ್ಳಿಯ ಚಂದ್ರಮ ಆಹ್ಲಾದಕರ ಓರಣವು,
ಚೆಲ್ಲಾಟದ ಕಿರುದೆರೆಗಳು, ಒಲೆದಾಡುವ ಮರಗಳ ಎಲೆಹೂವು,

ಸುತ್ತಿ ಬಳಸಿಹ ಬಳ್ಳಿಗಳು, ಝೇಂಕರಿಸುತಿಹ ದುಂಬಿಗಳು
ಇವುಗಳೆ ಎನ್ನಯ ಪ್ರಕಾಶನ, ಸುವಾಸಿತ ಉಸಿರುಗಳು,
ಎನ್ನುಸಿರಾಟವೆ ಜೀವನ-ಹರೆ-ಜರೆ-ಮರಣ.
ಏನಮಾಡಲಿ ನಾನೆಲ್ಲಿಗೆ ಹೋಗಲಿ ? ಮಾರಮಣ.
ಸಕಲ ದೇಶದಲಿ ನಾ ತುಂಬಿಹೆನದರಿಂ ಮಿಸುಕಲು ಸ್ಥಳವಿಲ್ಲ,
ನಾ ಶಂಕಿಸಲೊ ಇಲ್ಲದಿರೆ ಇಚ್ಛಿಸಲೊ ?
ನಾನೇ ಎಲ್ಲಾ ಕಾಲವು, ಎಲ್ಲಾ ಶಕ್ತಿಯು ಎನ್ನಯ ಜ್ವಲನ,
ನಾ ಸಂದೇಹಿಸಬಹುದೆ ಅಥವಾ ಶೋಕಹತನಾಗಬಹುದೆ ?
ಇಲ್ಲ, ನಾನೇ ನಿಜದೊಳು ಎಲ್ಲಾ ಕಾರಣ-ಕಾರ್ಯಗಳಾಗಿಹೆನು,
ಎಲ್ಲಾ ಕಾಲವು ಈಗ, ಎಲ್ಲಾ ದೇಶವು ಇಲ್ಲಿ,
ಸಮಸ್ಯೆಗಳೆಲ್ಲಾ ಪರಿಹಾರವಾಗಿವೆ, ಉತ್ತರವೂ ಸ್ಪಷ್ಟ.
ಎಲ್ಲಾ ಕೇಡೂ ಒಳಿತೂ ಎಲ್ಲಾ ಕಹಿಸಿಹಿ ದ್ವಂದ್ವಗಳೂ
ಅವುಗಳಲೆನ್ನಯ ಹೃದಯ ಸ್ಪಂದನ ಮಿಡಿಯುತಿದೆ,
ಪ್ರೇಮಿಗಳೆಲ್ಲರು ನಾನೇ ಪ್ರೇಯಸಿಗಳೆಲ್ಲರು ನಾನೇ,
ಬಯಕೆಗಳೂ ನಾನೇ ರಾಗ ಭಾವಗಳೂ ನಾನೇ,
ಇಲ್ಲೆನಗೆ ಸ್ವಾರ್ಥದಾ ಗುರಿ, ಗಂಟಿಲ್ಲ, ಬಂಧವಿಲ್ಲ,
ಎನಗೆಲ್ಲರಾ ಪ್ರತಿಕ್ರಿಯೆಯು ಪ್ರಿಯವು ಮೋಕ್ಷಹಿತವಾಗಿಹುದು,
ಅಮೂರ್ತ ಪ್ರಭುವೆ ಶತ್ರುಮಿತ್ರರಲಿಹನು,
ಪ್ರತಿ ವಸ್ತುವೂ ಎನಗೆ ಬಿಡದೆ ಮಣಿಯುವದು.

ಓಂ ! ಓಂ ! ಓಂ !

# After Death: All Religions Reconciled

# ಮರಣಾನಂತರ:

## ತಾ॥ 15-1-1903, ಸ್ಯಾನ್‌ಫ್ರಾನ್ಸಿಸ್ಕೋ ನಗರದ " ಗೋಲ್ಡನ್ ಗೇಟ್ ಹಾಲ್ " ನಲ್ಲಿ ಮಾಡಿದ ಉಪನ್ಯಾಸ.

ಸಂಪನ್ನ ಸ್ತ್ರೀಪುರುಷರೂಪದಲ್ಲಿರುವ ಸರ್ವಧರ್ಮಗಳ ಧ್ಯೇಯ-ಸಾಧನ ವಸ್ತುವಾದ ಅಮೃತಾತ್ಮವೇ,

ಇದುವರೆಗೆ ಈ ಸಭಾಭವನದಲ್ಲಿ ಮಾಡಿದ ಉಪನ್ಯಾಸಗಳು (ತಿಳಿಯಲು) ಬಹಳ ಕಷ್ಟವಾಗಿಯೂ ವಿಷಯಗಳು ಬಹಳ ಬಿಗಿಯಾಗಿಯೂ ಕಠಿಣವಾಗಿಯೂ ಗಹನವಾಗಿಯೂ ಇದ್ದವು ಆದರೆ ಈ ರಾತ್ರಿಯ ಪ್ರವಚನವು ಅವುಗಳೊಡನೆ ಹೋಲಿಸಿದರೆ ಸ್ವಲ್ಪ ಸುಲಭವಾಗಿ ಕಾಣಬಹುದು.

ಕೆಲವು ವರ್ಷಗಳ ಹಿಂದೆ ರಾಮನು ಭರತವರ್ಷದಲ್ಲಿ ಅಥವಾ ಭಾರತದಲ್ಲಿ (ಇಂಡಿಯಾದಲ್ಲಿ) ಇದ್ದಾಗ, ಅವನ ಕೈಗೆ ಒಂದು ಪುಸ್ತಕವು ಸಿಕ್ಕಿತು. ಅದನ್ನು ಅಮೇರಿಕಾದ ವಿದ್ವಾಂಸರೊಬ್ಬರು ಬರೆದಿದ್ದರು ಅವರು ಗೌರವದ ಡಾಕ್ಟರ್ (Reverend Doctor) ಪದವಿಯನ್ನು ಪಡೆದವರಾಗಿದ್ದು ಭರತಖಂಡದ ಒಂದು ವಿಶ್ವವಿದ್ಯಾನಿಲಯದಲ್ಲಿ ಪ್ರೊಫೆಸರ್ ಆಗಿದ್ದರು. ಈ ಪುಸ್ತಕದ ವಿಷಯವು 'ಮರಣಾನಂತರ' 'After Death' ಎಂದಿತ್ತು. ಈ ಪ್ರಪಂಚವು ಒಂದು ಸ್ಟೇಷನ್ ಇದ್ದ ಹಾಗೆ ಇದೆಯೆಂದೂ ಪರಲೋಕವು ಸಮುದ್ರದಾಚೆ ಇರುವ ಅಥವಾ ಸಮುದ್ರದ ದೊಡ್ಡಕೊಲ್ಲಿಯಾಚೆ ಇರುವ ಇನ್ನೊಂದು ಸ್ಟೇಷನ್ನಿನಂತೆ ಇದೆಯೆಂದೂ ಒಂದು ಬಹಳ ಸುಂದರವಾದ ರೂಪಕದಿಂದ ಆ ಪುಸ್ತಕದಲ್ಲಿ ವಿವರಿಸಿತ್ತು. ಈ ಸಮುದ್ರದಾಚೆ ಹೋಗಬೇಕಾದವರು ಟಿಕೆಟ್ಟುಗಳನ್ನು ಕೊಳ್ಳಬೇಕಾಗಿದೆ. ಸರಿಯಾದ ಟಿಕೆಟ್ ಇಲ್ಲದ ಪ್ರಯಾಣಿಕರನ್ನು ಹಡಗಿನ ಮೇಲಿಂದ ಎತ್ತಿ ಸಮುದ್ರದ ಅಗಾಧವಾದ ಕೂಪದಲ್ಲಿ ಎಸೆದುಬಿಡುತ್ತಾರೆ. ವಿಹಿತವಾದ ಟಿಕೆಟ್ ಇದ್ದವರನ್ನು ಅವರ ನಿರ್ದಿಷ್ಟ ಸ್ಥಾನಕ್ಕೆ ಹೋಗಿ ಸೇರುವದಕ್ಕೆ ಅವಕಾಶ ಕೊಡುತ್ತಾರೆ. ಟಿಕೆಟ್‌ಗಳಲ್ಲಿ ಅನೇಕ

ಬಗೆಯಿದೆ: ಫಸ್ಟ್‌ಕ್ಲ್ಯಾಸ್ ಟಿಕೆಟ್; ಸೆಕೆಂಡ್‌ಕ್ಲ್ಯಾಸ್ ಟಿಕೆಟ್, ಥರ್ಡ್‌ಕ್ಲ್ಯಾಸ್ ಟಿಕೆಟ್ ಇತ್ಯಾದಿಗಳೂ ಇವೆ, ಖೋಟಾ ಟಿಕೆಟ್‌ಗಳೂ ಇವೆ ಟಿಕೆಟ್‌ಗಳಲ್ಲಿ ಬಿಳಿ, ಕಪ್ಪು, ಹಳದಿ, ಹಸುರು ಮೊದಲಾದ ಬಣ್ಣಗಳ ಟಿಕೆಟ್‌ಗಳೂ ಇವೆ. ಆದರೆ ನಿಮ್ಮ ಉದ್ದಿಷ್ಟ ಸ್ಥಾನಕ್ಕೆ ಕರೆದೊಯ್ಯುವ (ಸತ್ಯವೂ ನಿಷ್ಕಪಟವೂ ಆದ) ನಿಜವಾದ ಟಿಕೆಟ್ಟು ಯೇಸುಕ್ರಿಸ್ತನ ರಕ್ತದಿಂದ ಲೇಪಿತವಾಗಿ ಕೆಂಪಗಿರುತ್ತದೆ ಅಂಥಾ ಟಿಕೆಟ್ ಉಳ್ಳ ಪ್ರಯಾಣಿಕರನ್ನು ಮಾತ್ರ ಅವರ ಕೊನೆಯ ಗಮ್ಯಸ್ಥಾನಕ್ಕೆ ಯಶಸ್ವಿಯಾಗಿ ಸೇರಲು ಅವಕಾಶ ಕೊಡುತ್ತಾರೆ. ಬೇರೆಯವರಿಗೆ ಎಂದೆಂದಿಗೂ ಅವಕಾಶ ಕೊಡುವದಿಲ್ಲ. ಕ್ರಿಸ್ತನ ರಕ್ತಲಾಂಛನವುಳ್ಳ ಕೆಂಪು ಟಿಕೆಟ್ಟುಗಳು ಮಾತ್ರ ಕ್ರೈಸ್ತ ಟಿಕೆಟ್ಟುಗಳು. ಮಿಕ್ಕ ಬಿಳಿ, ಕಪ್ಪು, ಹಳದಿ ಇತಾದಿ ಬೇರೆ ಬಣ್ಣಗಳ ಟಿಕೆಟ್ಟುಗಳು ಬೇರೆಯ ಮತಧರ್ಮಗಳಿಗೆ ಸೇರಿದವು ಇದೇ ಆ ಪುಸ್ತಕದ ವಿಷಯವಾಗಿತ್ತು; ಮತ್ತು ಅದನ್ನು ಬಹಳ ಚೆನ್ನಾಗಿ ವರ್ಣಿಸಿತ್ತು. ಅದರ ಲೇಖಕರಾದ ರೆವೆರೆಂಡ್ ಡಾಕ್ಟರು ಲೇಖನದಲ್ಲಿ ತಮ್ಮ ಕಲ್ಪನಾ ಚಾತುರ್ಯವನ್ನೆಲ್ಲಾ ಸೂರೆಮಾಡಿದ್ದರು; ಮತ್ತು ತಮ್ಮ ಆಂಗ್ಲಸಾಹಿತ್ಯ ಜ್ಞಾನವನ್ನೆಲ್ಲಾ ಉಪಯೋಗಿಸಿದ್ದರು.

ಸ್ವಲ್ಪ ಹೆಚ್ಚು ಕಡಿಮೆ ಈ ಬಗೆಯ ನಂಬಿಕೆಯು ಕ್ರೈಸ್ತರಲ್ಲಿ ಮಾತ್ರವಲ್ಲ, ಮಿಕ್ಕ ಎಲ್ಲಾ ಮತಧರ್ಮಗಳ ಜನರಲ್ಲಿಯೂ ಇದೆ, ಮಹಮ್ಮದೀಯರೂ ಹೇಳುವ ದೇನೆಂದರೆ, ಸತ್ತಮೇಲೆ ಎಲ್ಲರ ಧರ್ಮಾ-ಧರ್ಮಗಳ ಲೆಕ್ಕವನ್ನು ಪರೀಕ್ಷೆಮಾಡುವ ಅತ್ಯುನ್ನತ ಅಧಿಕಾರವುಳ್ಳ ಸ್ಟೇಷನ್ ಮಾಸ್ಟರ್, ಟಿಕೆಟ್ ಕಲೆಕ್ಟರ್ ಮಹಮ್ಮದನೇ ಸರಿ; ಆದ್ದರಿಂದ ಮಹಮ್ಮದನ ಗುರುತುಳ್ಳ ಟಿಕೆಟ್ ಇಲ್ಲದವರನ್ನು ನರಕದಲ್ಲಿ ಎಸೆಯುತ್ತಾರೆ.—ಹೀಗೆ ಮಹಮ್ಮದೀಯರು ಹೇಳುತ್ತಾರೆ. ಬೇರೆ ಮತಧರ್ಮಗಳೂ ಇದೇ ಬಗೆಯ ಭಾವನೆಯನ್ನು ಹೊಂದಿದ್ದಾರೆ. ಅಮೆರಿಕಾ, ಯೂರೋಪ್, ಆಫ್ರಿಕಾ, ಆಸ್ಟ್ರೇಲಿಯ, ಏಷ್ಯ ಮೊದಲಾದ ಯಾವ ದೇಶದಲ್ಲಿ ಜನರು ಸತ್ತರೂ ಅವರೆಲ್ಲರನ್ನೂ ಕ್ರಿಸ್ತನೋ, ಮಹಮ್ಮದನೋ, ಬುದ್ಧನೋ, ಜೊರೊಸ್ಟರನೋ, ಕೃಷ್ಣನೋ–ಇವರಲ್ಲಿ ಯಾವನಾದರೂ-ಒಬ್ಬನೇ ಪ್ರಭುವು ವಿಚಾರಣೆ ನಡೆಸತಕ್ಕವನು,–ಎಂದು ಹೇಳುತ್ತಾರೆ. ಮತಧರ್ಮಗಳಲ್ಲಿರುವ ಪರಸ್ಪರ ಎಲ್ಲಾ ವಿರೋಧಕ್ಕೂ, ವೈರಕ್ಕೂ, ಕಲಹಕ್ಕೂ ಯುದ್ಧಕ್ಕೂ ಈ ಭಾವನೆಯೇ ಕಾರಣವಾಗಿದೆ ಪ್ರಪಂಚದಲ್ಲಿ ಇದುವರೆಗೆ ಧರ್ಮದ ಹೆಸರಿನಲ್ಲಿ ಹರಿಸಿರುವ ರಕ್ತ ಪ್ರವಾಹಗಳಿಗೆ ಈ ಮೂಢ ನಂಬಿಕೆಯೂ ಮತಾಂಧತೆಯೂ ಕಾರಣವಾಗಿವೆ.

ಈ ವಿಚಾರದಲ್ಲಿ ವೇದಾಂತಶಾಸ್ತ್ರದ ದೃಷ್ಟಿಯೇನೆನ್ನುವದನ್ನು ನಿಮಗೆ

ತಿಳಿಸಬೇಕಾಗಿದೆ. ವೇದಾಂತವು ಈ ಎಲ್ಲಾ ಮತಧರ್ಮಗಳ ವೈಷಮ್ಯವನ್ನೂ ಕಳೆದು ಸ್ನೇಹವನ್ನೂ, ಸಾಮರಸ್ಯವನ್ನೂ, ಸಮನ್ವಯವನ್ನೂ ಸಾಧಿಸುತ್ತದೆ. ಬೇರೆಯವರ ಭಾವನೆಯನ್ನೂ, ಹಕ್ಕನ್ನೂ, ಹೇಳಿಕೆಯನ್ನೂ, ವಿರೋಧಿಸದಿದ್ದರೆ (ತಪ್ಪೆನ್ನದಿದ್ದರೆ) ಪ್ರತಿಯೊಂದು ಧರ್ಮದವರು ಹೇಳುವದೂ ಸರಿಯೇ ಇರಬಹುದು-ಎಂದು ವೇದಾಂತವು ಹೇಳುತ್ತದೆ. ನಿಮ್ಮ ವಿಚಾರವು-ಅಭಿಪ್ರಾಯವು- ಸರಿಯೆಂದು ತೋರಿಸುವುದಕ್ಕೆ ನಿಮ್ಮ ಸಹೋದರ ಧರ್ಮದವರ ಅಭಿಪ್ರಾಯವು ತಪ್ಪೆಂದು ತೋರಿಸುವ ಅಗತ್ಯವಿಲ್ಲ. ಇದೊಂದು ವಿಸ್ತಾರವಾದ ವಿಚಾರವಾದ್ದರಿಂದ ಈಗ ನಮಗಿರುವ ಒಂದು ಗಂಟೆಯ ಅಲ್ಪಕಾಲದಲ್ಲಿ ಈ ವಿಷಯದ ಮುಖ್ಯ ವಿಚಾರಗಳನ್ನು ಮಾತ್ರ ವೇದಾಂತಶಾಸ್ತ್ರ ದೃಷ್ಟಿಯಿಂದ ಪರಿಶೀಲಿಸಬಹುದು

ಈ ಪ್ರಪಂಚದಲ್ಲಿ ಎಲ್ಲಾ ಪ್ರಗತಿಯೂ ಒಂದು ಸುಂದರ ರೇಖೆಯಲ್ಲಿ, ಪಥದಲ್ಲಿ ನಡೆಯುತ್ತದೆ ; ವಿಶ್ವದಲ್ಲಿ ಎಲ್ಲಾ ವಿಕಾಸವೂ, ಅಭಿವೃದ್ಧಿಯೂ, ಛಂದೋಗತಿಯಲ್ಲಿ, ತರಂಗಧಾಟಿಯಲ್ಲಿ ನಡೆಯುತ್ತದೆ. ಈ ಪ್ರಪಂಚದಲ್ಲಿ ಎಲ್ಲಾ ಸ್ಪಂದನವೂ ಕಂಪನವೂ ಪರಸ್ಪರ ಸಮಂಜಸವಾದ ಸಂಗಾನವಾಗಿದೆ (Harmonic), ಚಲನೆಯಲ್ಲಿ ಏಳು-ಬೀಳುಗಳೂ ಏರಿಳುವುಗಳೂ ಕ್ರಮಬದ್ಧವಾಗಿರುತ್ತವೆ. ಗಣಿತಶಾಸ್ತ್ರದ ಪ್ರಕಾರ ಅತ್ಯಂತ ಅಧಿಕ (Maximum) ಸಂಖ್ಯೆಗೆ ಅತ್ಯಂತ ಕನಿಷ್ಠ (ಅಲ್ಪ) (Minimum) ಸಂಖ್ಯೆ ಇರಲೇಬೇಕು, ಪರಮೋನ್ನತ ಬಿಂದುವೂ ಪರಮನೀಚ ಬಿಂದುವೂ ಒಂದಾದೊಡನೆ ಒಂದು ಬರುತ್ತಿರುತ್ತದೆ. ಹಗಲು–ರಾತ್ರಿಗಳಂತೆ ಲಯಬದ್ಧ (ತಾಳ ಬದ್ಧ)ವಾದ (Rhythmic motion) ಚಲನಗತಿ ಇರುತ್ತದೆ. ನೀವು ನಡೆಯುವಾಗಲೂ ಒಂದು ಹೆಜ್ಜೆಯನ್ನು ಇಟ್ಟ ಅನಂತರ ಇನ್ನೊಂದು ಹೆಜ್ಜೆಯನ್ನು ಇಡುತ್ತೀರಿ. ವರ್ಷದಲ್ಲಿ ಋತುಧರ್ಮಗಳು ನಿಯಮಬದ್ಧವಾದ ಅನುಕ್ರಮದಲ್ಲಿ, ವ್ಯವಸ್ಥಿತವಾದ ಪರಂಪರೆಯಲ್ಲಿ ಒಂದರ ಹಿಂದೊಂದು ಬರುತ್ತವೆ. ನಿಯಮಿತ ಅವಧಿಯಲ್ಲಿ ಅವೇ ಋತುಮಾನಗಳೇ ಪುನಃ ಪುನಃ ಬರುತ್ತಿರುತ್ತವೆ ಈ ಜಗತ್ತಿನಲ್ಲಿ ಚಲನೆಯು ನಿರ್ದಿಷ್ಟ ಸಮಾಂತರಗಳಲ್ಲಿ ಪುನಃ ಪುನಃ ಆವರ್ತನ ಹೊಂದುತ್ತದೆ ; ಅಥವಾ ಚಲನೆಯು ನಿಯತಕಾಲಿಕವಾಗಿದೆ (Periodic Motion). ನಿತ್ಯವೂ ನೀವು ಎಚ್ಚರವಾಗುತ್ತೀರಿ, ನಿದ್ರಿಸುತ್ತೀರಿ, ಪುನಃ ಎಚ್ಚರಗೊಳ್ಳುತ್ತೀರಿ ; ಏಳುತ್ತೀರಿ, ಮಲಗುತ್ತೀರಿ, ಮತ್ತೆ ಏಳುತ್ತೀರಿ. ಹೇಗೆ ನಿದ್ರೆಯೂ ಎಚ್ಚರವೂ ನಿಯಮಬದ್ಧವಾದ ಅನುಕ್ರಮದಲ್ಲಿ ಒಂದನ್ನೊಂದು ಹಿಂಬಾಲಿಸುತ್ತಿವೆಯೋ ಹಾಗೆಯೇ ವೇದಾಂತದ ಪ್ರಕಾರ ಜನನ–ಜೀವನ–ಮರಣ, ಮರಣ–ಜೀವನಗಳು ವಿಧಿಬದ್ಧವಾದ ಕ್ರಮದಲ್ಲಿ ಹಿಂಬಾಲಿಸುತ್ತವೆ. ಈ ಇಡೀ ವಿಶ್ವದಲ್ಲಿ ಥಟಕ್ಕನೆ

ಹರಾತ್ಯಾಗಿ (ಏಕಾಏಕಿ) ನಿಲ್ಲುವದೆಂಬುದು ಎಲ್ಲಿಯೂ ಎಂದೆಂದಿಗೂ ಇಲ್ಲ. ಕಾಲವು ಎಂದಾದರೂ ನಿಲ್ಲುವದೆ ? ಇಲ್ಲ. ಕಾಲವು ಯಾವಾಗ ಆರಂಭ ವಾಯಿತು, ಗೊತ್ತಿದೆಯೆ ? ದೇಶವು (ಆಕಾಶವು) ಎಂದಾದರೂ ಎಲ್ಲಿಯಾದರೂ ನಿಂತಿದೆಯೆ ? ಇಲ್ಲ ಅದಕ್ಕೆ ಕೊನೆಯೇ ಇಲ್ಲ ನದಿಗಳು ಹರಿಯುವದು ಎಂದಾದರೂ ನಿಲ್ಲುತ್ತದೆಯೆ ? ನಿಲ್ಲಬಹುದೆಂದು ನೀವು ಹೇಳಬಹುದು. ಇಲ್ಲ, ನಿಲ್ಲುವದಿಲ್ಲ. ಸಮುದ್ರವನ್ನು ಸೇರಿದ ನದಿಗಳು ಆವಿಯಾಗಿ ಮೇಲೇರಿ ಮೋಡವಾಗಿ ಪರ್ವತಗಳಲ್ಲಿ ಮಳೆಗರೆಯುತ್ತವೆ. ಮಳೆಯ ನೀರಿನಿಂದ ಪೋಷಿತವಾದ ನದಿಗಳು ಹರಿದು ಪುನಃ ಸಮುದ್ರವನ್ನು ಸೇರಿ, ಸಮುದ್ರದಿಂದ ಮತ್ತೆ ಪರ್ವತಗಳಿಗೇ ಹಿಂದಿರುಗಿ ಹೋಗುತ್ತವೆ. ಇಲ್ಲಿರುವ ಒಂದು ಮೇಣದ ಬತ್ತಿ ಒಂದು ಗಂಟೆಯಲ್ಲಿ ಪೂರಾ ಉರಿದು ಹೋಗಬಹುದು. ಅದರಿಂದ ಅದೆಲ್ಲಾ ನಾಶವಾಯಿತೆಂದು ತೋರಬಹುದು. ಇಲ್ಲಿ, ನಾಶವಾಗುವದಿಲ್ಲ. ರಸಾಯನ ವಿಜ್ಞಾನವು ಅದು ನಾಶವಾಗಿಲ್ಲವೆಂದು ತೋರಿಸುತ್ತದೆ, ಅದು ಸುಮ್ಮನೆ ಬದಲಾವಣೆ ಹೊಂದಿತು ಅದು ಉರಿಯುವಾಗ ಉತ್ಪನ್ನವಾದ ಇಂಗಾಲಾಮ್ಲವೂ ನೀರೂ ಪುನಃ ಸಸ್ಯಗಳಲ್ಲಿ ತೋರಿಕೊಳ್ಳುತ್ತವೆ. ಯಾವದೂ ಸಾಯುವದಿಲ್ಲ. ಈ ಪ್ರಪಂಚದಲ್ಲಿ ಎಲ್ಲಾ ಮುನ್ನಡೆಯೂ (Progress) ಪ್ರಗತಿಯೂ ವೃತ್ತಾಕಾರದಲ್ಲಿದೆ ; ಅಥವಾ ಗೋಳಾಕಾರದಲ್ಲಿದೆ (Spherical).

ಇಲ್ಲಿ ನೋಡಿ ; ನೀವು ಬದುಕಿದ್ದೀರಿ, ನೀವು ಸಾಯುತ್ತೀರಿ. ಸಾವಿನ ಅನಂತರದ ಆ ನಿಮ್ಮ ಸ್ಥಿತಿಯು ಎಂದೆಂದಿಗೂ ಹಾಗೆಯೇ ಇರುತ್ತದೆಯೆ ? ಹಾಗೆಯೇ ಇರುತ್ತದೆಯೆಂದು ಹೇಳುವದಕ್ಕೆ ನಿಮಗೆ ಅಧಿಕಾರವಿಲ್ಲ ಅದು ಪ್ರಕೃತಿ ನಿಯಮಕ್ಕೆ ವಿರುದ್ಧವಾಗಿದೆ. ಸತ್ತಮೇಲೆ ನಿತ್ಯ-ಶಾಶ್ವತವಾದ ನರಕದಲ್ಲಿ ಬಿದ್ದಿರಬೇಕೆಂದೂ (Eternal Damnation) ಅನಂತರ ಜನ್ಮವೇ-ಜೀವನವೇ-ಇಲ್ಲವೆಂದೂ ನೀವು ಹೇಳುವದಾದರೆ, ಈ ಜಗತ್ತನ್ನು ಪರಮಾಧಿಕಾರದಿಂದ ಆಳುತ್ತಿರುವ ಅತ್ಯಂತ ಕಠೋರವಾದ ನಿಯಮವನ್ನು ಪ್ರತಿಭಟಿಸಿದಂತೆ-ನಿರಾಕರಿಸಿದಂತೆ ಆಗುತ್ತದೆ. ಆದ್ದರಿಂದ ಹಾಗೆ ಹೇಳಲು ನಿಮಗೆ ಅಧಿಕಾರವೇ ಇಲ್ಲ; ಅದರಲ್ಲಿ ನ್ಯಾಯವೇ ಇಲ್ಲ. ಒಬ್ಬ ಮನುಷ್ಯ ಸತ್ತ ಮೇಲೆ ಅವನನ್ನು ದೇವರು ನಿತ್ಯನಿರಂತರವಾದ ನರಕದಲ್ಲಿ ಒಗೆಯುತ್ತಾನೆಂದರೆ, ಅವನೆಂಥಾ ದ್ವೇಷ ಸಾಧಿಸುವ ಸೇಡಿನ ದೇವರಿರಬೇಕು ? ಒಬ್ಬ ಮನುಷ್ಯನು ಮೂರಿಪ್ಪತ್ತು ಮೇಲೆ ಹತ್ತು-ಎಪ್ಪತ್ತು (Three score and ten) ವರ್ಷಗಳು ಕರ್ಮಮಾಡಿ (ಬದುಕಿ) ಸಾಯುತ್ತಾನೆ ಪಾಪ, ಅವನು ಬಡಪಾಯಿ, ಅವನ ತಂದೆ ತಾಯಿಗಳು ಬಡವರು; ಆದ್ದರಿಂದ ಸರಿಯಾದ ವಿದ್ಯಾಭ್ಯಾಸವನ್ನು ಪಡೆಯಲೂ ಉನ್ನತ ಸ್ಥಾನಕ್ಕೇರಲೂ ಅವನಿಗೆ ಅವಕಾಶಗಳು ಸಿಕ್ಕಲಿಲ್ಲ.

ಅವನು ಚರ್ಚ್‌ಗೂ ಹೋಗಲಿಲ್ಲ. ಅವನು ಸತ್ತುಹೋದನು. ಕ್ರಿಸ್ತನ ರಕ್ತವನ್ನು ಹಚ್ಚಿದ ಟಿಕೆಟ್ಟು ಅವನಲ್ಲಿರಲಿಲ್ಲ. ಹಾಗಾದರೆ ಆಗ ಆ ಮನುಷ್ಯನನ್ನು ಎಂದೆಂದಿಗೂ ನರಕದಲ್ಲಿ ಎಸೆಯಬೇಕು. ಓ, ಒಂದು ವೇಳೆ ದೇವರು ಹಾಗೆ ಮಾಡುವದಾದರೆ ಅವನು ಅತ್ಯಂತ ಪ್ರತಿಹಿಂಸಾಶೀಲನಾದ ಸೇಡಿನ ದೇವರಲ್ಲವೆ? ನ್ಯಾಯವನ್ನು ತಿಳಿದವರು ಯಾರೂ ಹಾಗೆ ಹೇಳಲಾರರು. ನ್ಯಾಯದ ಹೆಸರಿನಲ್ಲಿ, ಹಾಗೆ ಹೇಳುವ ಅಧಿಕಾರವು ನಿಮಗಿಲ್ಲ. ವೇದಾಂತದ ದೃಷ್ಟಿಯಿಂದ ಒಬ್ಬ ಮನುಷ್ಯ ಸತ್ತರೆ, ಅವನು ಯಾವಾಗಲೂ ಸತ್ತೇ ಇರುವದಿಲ್ಲ ಪ್ರತಿಯೊಂದು ಸಾವಿನ ಅನಂತರವೂ ಜೀವವಿದೆ, ಜೀವನ ಕೊನೆಯಲ್ಲಿ ಸಾವು ಇದೆ. ನಿಜವಾಗಿ ನೋಡಿದರೆ ಸಾವು ಎನ್ನುವದು ಬರೀ ಹೆಸರು; ಸಾವೆಂದರೆ ಒಂದು ಸ್ಥಿತಿಯ ಬದಲಾವಣೆ; ಅಷ್ಟೇ ಹೊರತು ಬೇರೆ ಅಲ್ಲ ಸಾವಿನಲ್ಲಿ ಅಂಥಾ ಅಸಹ್ಯವಾದುದೂ ಹೇಯವಾದದು ಏನೂ ಇಲ್ಲ. ಕರಾಳವಾದುದೂ ಭೀಕರವಾದುದೂ ಏನೂಇಲ್ಲ. ನಾವು ಸಾವನ್ನು ಘೋರ ರೂಪದಿಂದ ಕಲ್ಪಿಸುವದರಲ್ಲಿ ದೊಡ್ಡ ತಪ್ಪು ಮಾಡುತ್ತೇವೆ. ಅಂಥಾ ಭಯಂಕರವಾದುದು ಏನೂ ಆದರಲ್ಲಿಲ್ಲ; ಅದು ಸುಮ್ಮನೆ ಒಂದು ಸ್ಥಿತಿಯ, ಒಂದು ಅವಸ್ಥೆಯ ಬದಲಾವಣೆ.

ನೀವಿಲ್ಲಿ ಬದುಕಿರುವವರೆಗೂ–ಎಪ್ಪತ್ತು ಎಂಬತ್ತು ವರ್ಷಗಳು ಎಂದಿಟ್ಟುಕೊಳ್ಳೋಣ–ದೀರ್ಘ ಸಂತತವಾದ ಎಚ್ಚರದ ಸ್ಥಿತಿಯಲ್ಲಿ, ಅವಸ್ಥೆಯಲ್ಲಿ, ಇರುತ್ತೀರಿ. ಈ ಜೀವನದ ಕೊನೆಯ ಸಾವು ಎನಿಸಿದ್ದರಲ್ಲಿ-ವೇದಾಂತ ದೃಷ್ಟಿಯಿಂದ–ಜೀವನ ಕಾಲಕ್ಕೆ ಸಮ ಪ್ರಮಾಣದಲ್ಲಿ–ಸುಮ್ಮನೆ ದೀರ್ಘನಿದ್ರೆ ಇರುತ್ತದೆ. ಸಾವು ಎಂದರೆ ದೀರ್ಘನಿದ್ರೆ. ಪ್ರತಿ ಇಪ್ಪತ್ತುನಾಲ್ಕು ಗಂಟೆಗಳಲ್ಲಿಯೂ ಆರೇಳು ಗಂಟೆಗಳ ಕಾಲ ನಿದ್ರೆಮಾಡಿದ ಮೇಲೆ ನೀವು ಪುನಃ ಹೇಗೆ ಏಳುತ್ತೀರೋ ಹಾಗೆ ಸಾವಿನ ವಿಶ್ರಾಂತಿಯನ್ನು ಅನುಭವಿಸಿದ ಮೇಲೆ, ಪುನಃ ಈ ಪ್ರಪಂಚದಲ್ಲಿ ಹುಟ್ಟಬೇಕಾಗುತ್ತದೆ. ಪುನರ್ಜನ್ಮ ಅಥವಾ ಪುನರವತಾರ ಎನ್ನುವದು ನಸುನಿದ್ದೆಯಾದ ಮೇಲೆ ಪುನಃ ಎಚ್ಚರಗೊಂಡಂತೆ.

ವೇದಾಂತದ ರೀತ್ಯಾ ಮನುಷ್ಯ ಸತ್ತ ಮೇಲೆ ಕೂಡಲೇ ಅಲ್ಲಿಯೇ ಹುಟ್ಟುವದಿಲ್ಲ. ಮರದಿಂದ ಬೀಜವು ಬಿದ ಮೇಲೆ, ಅದು ಕೂಡಲೇ ಮೊಳಕೆಯಾಗಿ ಮರವಾಗಿ ಬೆಳೆಯುವದಿಲ್ಲ. ಮನುಷ್ಯನು ಒಂದು ಮನೆಯನ್ನು ಬಿಟ್ಟಮೇಲೆ ತತ್‌ಕ್ಷಣವೇ ಇನ್ನೊಂದು ಮನೆಯಲ್ಲಿ ಪ್ರವೇಶಿಸುವದಿಲ್ಲ, ಸ್ವಲ್ಪಕಾಲ ಬೇಕಾಗುತ್ತದೆ. ಹಾಗೆಯೇ ಮನುಷ್ಯನು ಸತ್ತಮೇಲೆ ಕೂಡಲೇ ಅವನು ಪುನಃ ಹುಟ್ಟುವದಿಲ್ಲ. ನಾವು

ಮರಣಾವಸ್ಥೆಯೆಂದು, ಅಥವಾ ದೀರ್ಘ ನಿದ್ರಾವಸ್ಥೆಯೆಂದು ಕರೆಯುವ ಒಂದು ಮಧ್ಯಕಾಲದ ಸ್ಥಿತಿಯಲ್ಲಿ ಅವನು ಹಾಯ್ದುಹೋಗಬೇಕು. ಈಗ ಈ ಸ್ಥಿತಿಯ ವಿಚಾರವೇನು ? ಇದು ಎಂಥಾ ಸ್ಥಿತಿ ? ಸಾವಿಗೂ ಪುನರ್ಜನ್ಮಕ್ಕೂ ನಡುವಿನ ಈ ಸ್ಥಿತಿ ಹೇಗಿದೆ ? ಅದೊಂದು ನಿದ್ರಾಸ್ಥಿತಿ , ಆದರಲ್ಲಿ ನಿದ್ರೆಯ ಎಲ್ಲಾ ಗುಣಗಳೂ ಲಕ್ಷಣಗಳೂ ಇವೆ. ಮನುಷ್ಯನು ನಿದ್ರೆ ಮಾಡುವಾಗ, ಅವನ ಕನಸಿನಲ್ಲಿ, ಎಚ್ಚರದಲ್ಲಿ ಅವನು ಕಂಡಿದ್ದ ಬಗೆಯ ವಸ್ತುಗಳನ್ನೇ ವ್ಯವಹಾರವನ್ನೇ ಕಾಣುತ್ತಾನೆ ಎಂಬುದು ನಿಮಗೆ ಗೊತ್ತಿದೆ ಅದು ಸಾಮಾನ್ಯ ನಿಯಮ ಕೆಲವು ಸಮಯ ಅದಕ್ಕೆ ಅಪವಾದವಾಗಿ ಹೊಸಬಗೆಯ ವಸ್ತುಗಳನ್ನೂ ಕನಸಿನಲ್ಲಿ ಕಾಣಬಹುದು. ಆದರೆ ಸಾಮಾನ್ಯವಾಗಿ ಮನುಷ್ಯನು ತನ್ನ ಎಚ್ಚರದಲ್ಲಿ ಕಂಡಿದ್ದ ವಸ್ತುಗಳ ಬಗೆಯ ವಸ್ತುಗಳನ್ನೇ ಕನಸಿನಲ್ಲಿಯೂ ಕಾಣುತ್ತಾನೆ ವಿಶ್ವವಿದ್ಯಾನಿಲಯದಲ್ಲಿ ಓದುತ್ತಿರುವ ವಿದ್ಯಾರ್ಥಿಗಳು, ಪರೀಕ್ಷೆಯು ಸಮೀಪವಿರುವಾಗ ಅತ್ಯಂತ ಶ್ರಮದಿಂದ ರಾತ್ರಿ ಹಗಲೂ ಅಭ್ಯಾಸ ಮಾಡುತ್ತಿರುತ್ತಾರೆ ಆಗ ಕಾಣುವ ಅವರ ಕನಸುಗಳಲ್ಲಿಯೂ ಅದೇ ವಿಚಾರವನ್ನೇ ಅವರು ಕಾಣುತ್ತಿರುತ್ತಾರೆ. ಪರೀಕ್ಷೆಯು ಮುಗಿದಮೇಲೆ, ಅವರು ಅದರ ಫಲಿತಾಂಶವನ್ನು (Results) ನಿರೀಕ್ಷಿಸುತ್ತಿರುವ ಕಾಲದಲ್ಲಿ, ತಮಗೆ ತೇರ್ಗಡೆಯಾಗಬಹುದೆಂದೂ ತೇರ್ಗಡೆ ಹೊಂದುವ ಪದವೀಧರರ ಪಟ್ಟಿಯಲ್ಲಿ ತಾವೇ ಮೊದಲು ಬರಬಹುದೆಂದೂ ತೀವ್ರವಾಗಿ ಭಾವಿಸುತ್ತಿರುವ ಕಾತರ-ಕಳವಳದ ಸಂದಿಗ್ಧಸ್ಥಿತಿಯಲ್ಲಿ ನಿದ್ರೆ ಮಾಡುವಾಗಲೂ ಅವರು ಅದೇ ಕನಸುಗಳನ್ನೇ ಕಾಣುತ್ತಾರೆ. ರಾಮನ ಈ ಮಾತನ್ನು ವಿದ್ಯಾರ್ಥಿಗಳೆಲ್ಲಾ ಒಪ್ಪಬಹುದು. ಯಾವದೊಂದು ವಿಷಯವನ್ನಾಗಲೀ ವಸ್ತುವನ್ನಾಗಲೀ ಪ್ರೀತಿಸುತ್ತಿರುವವರು ರಾತ್ರಿಯಲ್ಲಿಯೂ ಅದೇ ಕನಸನ್ನು ಕಾಣದೇ ಇರಲಾರರು

ರಾಮನು ವಿದ್ಯಾರ್ಥಿಯಾಗಿ ಬಿ ಎ ಪರೀಕ್ಷೆಗೆ ಅಭ್ಯಾಸ ಮಾಡುತ್ತಿದ್ದಾಗ, ಒಬ್ಬ ಸಹಪಾಠಿಯೂ ಅವನ ಜೊತೆಯಲ್ಲಿ ವಾಸ ಮಾಡುತ್ತಿದ್ದನು. ಆ ಸಹಾಧ್ಯಾಯಿಯು ಬಹಳ ವಿನೋದ ಸ್ವಭಾವದ ವಿದಾರ್ಥಿಯಾಗಿದ್ದನು ಅವನು ತನ್ನ ಕಾಲವನ್ನೆಲ್ಲಾ ಹಾಡುವದರಲ್ಲಿಯೂ ಕುಣಿಯುವದರಲ್ಲಿಯೂ ಆಡುವದರಲ್ಲಿಯೂ ಕಳೆಯುತ್ತಿದ್ದನು ಒಂದು ದಿನ, ಅವನು ನಿತ್ಯವೂ ಎಷ್ಟು ಗಂಟೆಗಳ ಕಾಲ ಪಾಠಗಳ ವ್ಯಾಸಂಗಕ್ಕಾಗಿ ವಿನಿಯೋಗಿಸುತ್ತಾನೆಂದು ಹಿರಿಯರೊಬ್ಬರು ಆ ನನ್ನ ಮಿತ್ರನನ್ನು ಕೇಳಿದರು. ಅವನು ಕೂಡಲೇ ನಗು ನಗುತ್ತಾ " ಪೂರಾ 18 ಗಂಟೆಗಳ ಕಾಲ " ಎಂದು ಹೇಳಿಬಿಟ್ಟನು. ಅದಕ್ಕೆ ಅವರು " ಏನಯ್ಯಾ ಹಾಗೆ ಹೇಳುತ್ತೀಯೆ? ನನ್ನ ಕಣ್ ದುರಿಗೇ ನಾಲ್ಕೈದು ಗಂಟೆಗಳ ಕಾಲ ವ್ಯರ್ಥವಾಗಿ ಕಳೆಯುತ್ತೀಯೆ.

24 ಗಂಟೆಗಳಲ್ಲಿ 8-9 ಗಂಟೆಗಳು ನಿದ್ರೆ ಮಾಡುತ್ತಿ ಎನ್ನುವದು ಗೊತ್ತಿದೆ ಇನ್ನು 10 ಅಥವಾ 12 ಗಂಟೆಗಳು ನಿನಗೆ ಉಳಿಯುತ್ತವೆ. ಆದರೂ ಪೂರಾ 18 ಗಂಟೆಗಳ ಕಾಲ ಓದುತ್ತಿರುವದಾಗಿ ಹೇಳುತ್ತಿ. ಅದು ಹೇಗೆ ಸಾಧ್ಯ ?" ಎಂದು ಕೇಳಿದರು. ಆ ವಿದ್ಯಾರ್ಥಿ ಹೇಳಿದ: "ನೀವು ಗಣಿತಶಾಸ್ತ್ರವನ್ನು ಓದಿಲ್ಲವೆಂದು ತೋರುತ್ತದೆ. ನಾನು ಪೂರಾ 18 ಗಂಟೆಗಳು ಓದುತ್ತಿರುವೆನೆಂಬದನ್ನು ತೋರಿಸಬಲ್ಲೆ. ನೋಡಿ, ನಾನೂ ಈ ರಾಮನೂ ಒಂದೇ ಕೋಣೆಯಲ್ಲಿ ವಾಸಮಾಡುತ್ತೇವೆ. ವಾಸ್ತವವಾಗಿ ನಾನು 12 ಗಂಟೆಗಳ ಹೊತ್ತು ಓದುತ್ತೇನೆ. ಅವನು 24 ಗಂಟೆಗಳ ಕಾಲ ಓದುತ್ತಾನೆ. ಇಬ್ಬರ ಅಭ್ಯಾಸ ಕಾಲವೂ ಒಟ್ಟು ಸೇರಿ 36 ಗಂಟೆಗಳಾಯಿತು. ಇದನ್ನು ಇಬ್ಬರಿಗೆ ಸರಿಯಾಗಿ ಹಂಚಿದರೆ 18 ಗಂಟೆಗಳು ನನ್ನ ಭಾಗಕ್ಕೂ 18 ಗಂಟೆಗಳು ಅವನಿಗೂ ಬರುತ್ತವೆ". ಆ ಯಜಮಾನರು ಹೇಳಿದರು: "ಒಳ್ಳೆಯದು, ನೀನು 12 ಗಂಟೆಗಳು ಓದುತ್ತೀಯೆಂದು ಒಪ್ಪಿಕೊಂಡರೂ ರಾಮನು ನಿತ್ಯವೂ ಪೂರಾ 24 ಗಂಟೆಗಳು ಓದುತ್ತಾನೆಂಬದನ್ನು ಯಾರೂ ಒಪ್ಪಲು ಸಾಧ್ಯವಿಲ್ಲ. ಅದು ಹೇಗೆ ಸಾಧ್ಯವಾಗಬೇಕು ? ರಾಮನು ಬಹಳ ಕಷ್ಟಪಟ್ಟು ಓದತಕ್ಕ ವಿದ್ಯಾರ್ಥಿ ; ಅವನು ವಿಶ್ವವಿದ್ಯಾಲಯದ ಪಾಠಗಳನ್ನು ಮಾತ್ರ ಓದುವದಿಲ್ಲ, ಅದರ ನಾಲ್ಕರಷ್ಟು ಹೆಚ್ಚಿನ ವ್ಯಾಸಂಗ ಮಾಡುತ್ತಾನೆ. ಅವನು ಬೇರೆ ಅನೇಕ ವಿಷಯಗಳನ್ನು–ಸಂಗತಿಗಳನ್ನು– ಅಭ್ಯಾಸ ಮಾಡುತ್ತಾನೆ ; ಅಲ್ಲದೆ ಅವನು ಹಲವು ಕೆಲಸಗಳನ್ನೂ ಮಾಡುತ್ತಾನೆ,– ಎಂಬುದು ನನಗೆ ಗೊತ್ತಿದೆ. ಆದರೂ ಅವನು 24 ಗಂಟೆಗಳೂ ಕೆಲಸಮಾಡುವುದಕ್ಕೆ ಪ್ರಕೃತಿ ನಿಯಮಗಳು ಅವನಿಗೆ ಅವಕಾಶ ಕೊಡುವುದಿಲ್ಲ". ಇದಕ್ಕೆಲ್ಲಾ ರಾಮನ ಸ್ನೇಹಿತನು ಅವರನ್ನು ಕುರಿತು "ನೋಡಿ, ನಿತ್ಯವೂ ರಾಮನೂ ಮಾಡಲೇ ಬೇಕಾಗಿರುವ ಸ್ನಾನ, ಶೌಚ, ಭೋಜನಾದಿಗಳಿಗೇ 2–3 ಗಂಟೆಗಳ ಕಾಲವು ಕಳೆಯುತ್ತಿರುವಾಗ ನಿದ್ರೆಗೆ 5–6 ಗಂಟೆಗಳ ಕಾಲವಾದರೂ ಬೇಕಾಗಿರುವಾಗ ಪರಮಾವಧಿಯಾಗಿ 15–16 ಗಂಟೆಗಳ ಕಾಲಕ್ಕೆ ಹೆಚ್ಚಾಗಿ ಯಾರಿಗೂ ಉಳಿಯಲಾರದು ; ಆದ್ದರಿಂದ ರಾಮನು 24 ಗಂಟೆಗಳು ಅಭ್ಯಾಸಮಾಡುವದು ಸಾಧ್ಯವಿಲ್ಲ ಸುಳ್ಳು,— ಎಂದು ನೀವು ಹೇಳಬಹುದು. ಆದರೆ ರಾಮನ ವಿಷಯವೇ ಆಶ್ಚರ್ಯ, ಅಸಾಧಾರಣ. ಅವನು ಊಟಮಾಡುತ್ತಿರುವಾಗಲೂ ಒಂದು ಸೆಕೆಂಡ್ ಆದರೂ ಮನಸ್ಸು ಸುಮ್ಮನಿರುವದಕ್ಕೆ ಬಿಡುವದಿಲ್ಲ. ಅವನು ಆಲೋಚಿಸುತ್ತಿರುವದಕ್ಕೆ ಸಹಾಯಕವಾಗಿ ಯಾವಾಗಲೂ ಒಂದು ಕಾಗದವನ್ನು ಕೈಯಲ್ಲಿ ಇಟ್ಟುಕೊಂಡೇ ಇರುತ್ತಾನೆ ಅದರ ಮೇಲೆ ಯಾವಾಗಲೂ ಒಂದು ವಿಜ್ಞಾನದ ಸಮಸ್ಯೆಯೋ ಯಾವದಾದರೊಂದು ಗಣಿತದ ಪ್ರಶ್ನೆಯೋ ಅಥವಾ ತಾತ್ತ್ವಿಕ ವಿಷಯವೋ ಚಿಂತನಕ್ಕಾಗಿ ಇದ್ದೇ

ಇರುತ್ತದೆ. ಯಾವದಾದರೂ ಪದ್ಯವನ್ನಾದರೂ ನೆನಪಿನಲ್ಲಿ ಉಳಿಯುವಂತೆ ಕಲಿಯುತ್ತಿರುತಾನೆ. ಹೀಗೆ ಊಟ ಮಾಡುವಾಗಲೂ ಅವನು ಒಂದು ನಿಮಿಷವನ್ನಾದರೂ ವ್ಯರ್ಥವಾಗಿ ಕಳೆಯುವದಿಲ್ಲ. ಎಲ್ಲಿಗಾದರೂ ನಡೆದುಹೋಗುವಾಗಲೂ ಯಾವದಾದರೂ ಪುಸ್ತಕವನ್ನು ಓದುತ್ತಲೇ ಇರುತ್ತಾನೆ. ಅವನು ಉಡುಪುಹಾಕಿಕೊಳ್ಳುವ ಅಲಂಕಾರದ ಕೋಣೆಯಲ್ಲಿದ್ದರೂ ಸೀಮೆಯ ಸುಣ್ಣದಿಂದ ಗೋಡೆಯ ಮೇಲೆ ಯಾವದಾದರೂ ಲೆಕ್ಕವನ್ನೋ ರೇಖಾಕೃತಿಗಳನ್ನೋ ಬರೆಯುತ್ತಿರುತ್ತಾನೆ. ಸ್ನಾನಮಾಡುವಾಗಲೂ ಅವನು ಏನನ್ನಾದರೂ ಕಂಠಪಾಠಮಾಡುತ್ತಿರುತ್ತಾನೆ, ಯಾವದಾದರೂ ಗಣಿತಸಮಸ್ಯೆಯನ್ನು ತಲೆಯಲ್ಲಿ ತುಂಬಿಕೊಂಡೇ ಮಲಗುವದಕ್ಕೆ ಹೋಗುತ್ತಾನೆ. ಆದ್ದರಿಂದ ನಿದ್ರಿಸುವಾಗಲೂ, ಹಗಲೆಲ್ಲಾ ಮನಸ್ಸಿನಲ್ಲಿ ಆಸಕ್ತಿಯಿಂದ ತುಂಬಿಕೊಂಡಿದ್ದನ್ನೇ ಅವನು ಕನಸಿನಲ್ಲಿಯೂ ಕಾಣುತ್ತಾನೆ. ಗಾಢನಿದ್ರೆ ಎನ್ನುವದು ಅವನಿಗೆ ಕೆಲವು ನಿಮಿಷಗಳಾದರೂ ಬರುವದೋ ಇಲ್ಲವೋ. ಏಕೆಂದರೆ ಎಷ್ಟೋಸಲ ತನ್ನ ಅಭ್ಯಾಸದ ವಿಷಯಗಳನ್ನೇ ನನಗೂ ನಿದ್ರೆಗೆಡಿಸುವಂತೆ ಕನವರಿಸುತ್ತಿರುತ್ತಾನೆ. ಹೀಗೆ ರಾಮನ ಅಭ್ಯಾಸವು 24 ಗಂಟೆಗಳೂ ಬಿಡುವಿಲ್ಲದೆ ನಡೆದಿರುತ್ತದೆಯೆಂದರೆ ಆಶ್ಚರ್ಯವಲ್ಲ". ಎಂದು ಅವರು ಚಕಿತರಾಗುವಂತೆ ವಿವರಿಸಿದನು.

ಒಳ್ಳೆಯದು ; ಅವನ ವರ್ಣನೆಯಲ್ಲಿ ಸ್ವಲ್ಪ ಸತ್ಯವಿತ್ತು. ಏಕೆಂದರೆ, ಪೂರಾ 18 ಗಂಟೆಗಳ ಕಾಲ ಯಾರು ಅಭ್ಯಾಸದಲ್ಲಿ ಕಳೆಯುತ್ತಾರೋ ಅವರ ಕನಸಿನಲ್ಲಿಯೂ ಅವರು ಅದನ್ನೇ ಮಾಡದೇ ಬೇರೆ ಹವ್ಯಾಸವಿರುವದಿಲ್ಲ. ಇದು ಸ್ವಾಭಾವಿಕ ಕೆಲವು ಸಮಯ ಜನರು, ಎಂದೂ ಕಾಣದಿದ್ದ ವಸ್ತುಗಳನ್ನು ಕನಸಿನಲ್ಲಿ ಕಂಡುದಾಗಿ ಹೇಳುತ್ತಾರೆ. ವೇದಾಂತವು ಇದನ್ನು ಒಪ್ಪುವದಿಲ್ಲ. ಇನ್ನೊಬ್ಬ ಮನುಷ್ಯನು, ತನ್ನ ಕನಸಿನಲ್ಲಿ ಅಸಮಂಜಸ ಭಾಗಗಳಿಂದ ಕೂಡಿದ ವಿಲಕ್ಷಣವಾದ ಅದ್ಭುತ ರಾಕ್ಷಸನನ್ನು ಕಂಡಿರುವದಾಗಿ ಹೇಳಬಹುದು. ಅವನಿಗೆ ಸಿಂಹದ ತಲೆಯೂ ಒಂಟೆಯ ಬೆನ್ನೂ ಸರ್ಪದ ಬಾಲವೂ ಕಪ್ಪೆಯ ಕಾಲುಗಳೂ ಇದ್ದವೆಂದು ಹೇಳಬಹುದು. ಅವನು ಹಿಂದೆಂದೂ ಅಂಥಾ ಪ್ರಾಣಿಯನ್ನು ತಾನು ಕಂಡಿರಲಿಲ್ಲವೆಂದೂ ಹೇಳಬಹುದು. ವೇದಾಂತ ಹೇಳುವದೇನೆಂದರೆ, " ತಮ್ಮಾ , ನೀನು ಮನುಷ್ಯನನ್ನು ನೋಡಿದ್ದಿ; ಸರ್ಪವನ್ನೂ ಒಂಟೆಯನ್ನೂ ಕಪ್ಪೆಯನ್ನೂ ಎಚ್ಚರದ ಪ್ರಪಂಚದಲ್ಲಿ ನೋಡಿದ್ದಿ . ಸಿಂಹದ ತಲೆಯನ್ನೂ ಒಂಟೆಯ ಬೆನ್ನನ್ನೂ ಕಪ್ಪೆಯ ಕಾಲುಗಳನ್ನೂ ಸರ್ಪದ ಬಾಲವನ್ನೂ ನಿನ್ನ ಕನಸಿನಲ್ಲಿ ಕೂಡಿಸಿ ಬೃಹದಾಕಾರದ ಮನುಷ್ಯನಿಗೆ ಇವುಗಳನ್ನೆಲ್ಲಾ ಹಚ್ಚಿ ಹೊಸದೊಂದು ಅದ್ಭುತ ವಿಲಕ್ಷಣ ವಸ್ತುವನ್ನು ಮಾಡಿ ನೋಡಿ ಹೆದರಿದ್ದಿ. ಆದ್ದರಿಂದ

ಕನಸಿನಲ್ಲಿ ನೀನು ಯಾವ ಅಪೂರ್ವವಾದ ಹೊಸ ವಸ್ತುವನ್ನು ಕಂಡರೂ ಅದು ಎಚ್ಚರದಲ್ಲಿ ಕಂಡ ವಸ್ತುಗಳ ವಿಪರ್ಯಾಸವೇ ಆಗಿರುತ್ತದೆ."

ರಷ್ಯಾ ದೇಶಕ್ಕೆ ಎಂದೆಂದೂ ಹೋಗದೆ, ಅದರ ವಿಷಯವನ್ನಾದರೂ ಕೇಳದೇ, ಇದ್ದ ಮನುಷ್ಯನು ಕನಸಿನಲ್ಲಿ, ಸೆಯಿಂಟ್ ಪೀಟರ್ಸ್ ಬರ್ಗ್‌ನಲ್ಲಿ ಇದ್ದಂತೆ ಎಂದೂ ಕಾಣುವದಿಲ್ಲ. ಅದು ಎಂದೆಂದಿಗೂ ಸಾಧ್ಯವಲ್ಲ. ಒಬ್ಬ ತತ್ವಜ್ಞಾನಿಯು ತನ್ನ ಕನಸಿನಲ್ಲಿ ಎಂದಾದರೂ ಜೋಡು ಹೊಲಿಯುವದುಂಟೆ ? ಅವನು ಮೋಚಿಯ ಮನೆಯ ಹತ್ತಿರವೇ ವಾಸಮಾಡುತ್ತಿದ್ದರೂ ಕನಸಿನಲ್ಲಿ ಆಗಾಗ ಆ ಮೋಚಿಯನ್ನು ಕಾಣುತ್ತಿದ್ದರೂ ಅವನು ತಾನೇ ಜೋಡುಗಳನ್ನು ಹೊಲಿಯುತ್ತಿರುವಂತೆ ಎಂದೂ ಕಾಣುವದಿಲ್ಲ.

ಹೀಗಿರುವಾಗ ನಿಮ್ಮ ಸಾವಿನ ದೀರ್ಘನಿದ್ರೆಯಲ್ಲಿ ಏನನ್ನು ನಿರೀಕ್ಷಿಸಬಹುದು ? ಮರಣಕ್ಕೂ ಪುನಃ ಒದಗುವ ಜನನಕ್ಕೂ ನಡುವಿನ ದೀರ್ಘ ನಿದ್ರೆಯು ಹೇಗೆ ಕಳೆಯುತ್ತದೆ ? ನಿಮ್ಮ ಸ್ವರ್ಗಗಳಲ್ಲಿಯೋ ನರಕಗಳಲ್ಲಿಯೋ ನಂದನವನಗಳಲ್ಲಿಯೋ (Paradises) ಪಾಪಗಳಿಗೆ ಪ್ರಾಯಶ್ಚಿತ್ತವುಂಟುಮಾಡುವ ದಂಡನೆಗಳುಳ್ಳ ಶುದ್ಧೀಕಾರಕವಾದ ಲೋಕಗಳಲ್ಲಿಯೋ (Purgatories) ಮರಣಾಂತರದ ನಿದ್ರಾ ಕಾಲವು ಕಳೆಯುತ್ತದೆಯೆಂದು ವೇದಾಂತವು ಹೇಳುತ್ತದೆ ಈ ಸ್ವರ್ಗ, ನಂದನವನ (ಈಡನ್ನಿನ ತೋಟ) ನರಕ, ಪಾಪಮಾರ್ಜಕ ಸ್ಥಾನಗಳೆಲ್ಲಾ ಏನು ? ಇವೆಲ್ಲಾ ಸಾವಿಗೂ ಹುಟ್ಟಿಗೂ ನಡುವೆ, ಜೀವನಿಗೆ ಅನುಭವಕ್ಕೆ ಬರುವ ಸ್ವಪ್ನಲೋಕಗಳು.

ಇಲ್ಲಿ ಒಬ್ಬ ನಿಜವಾದ ಕ್ರೈಸ್ತ ಮತಸ್ಥನಿದ್ದಾನೆ. ಇವನು ಅತ್ಯಂತ ಪುಣ್ಯ ಶೀಲವಾದ ಧರ್ಮಶ್ರದ್ಧೆಯುಳ್ಳ ನಿಷ್ಠಾವಂತ ಜೀವನವನ್ನು ನಡೆಸುತ್ತಿದ್ದಾನೆ. ಇವನು ಪ್ರತಿ ಸಂಜೆಯೂ ಪ್ರಾರ್ಥನೆಯನ್ನು ಸಲ್ಲಿಸುತ್ತಿದ್ದಾನೆ. ಪ್ರತಿ ಆದಿತ್ಯವಾರವೂ ಚರ್ಚ್‌ಗೆ ಹೋಗಿಬರುತ್ತಿದ್ದಾನೆ. ಪ್ರತಿಯೊಂದು ಭೋಜನ ಕಾಲದಲ್ಲಿಯೂ ದೇವರ ದಯೆಯನ್ನು ಬೇಡುತ್ತಿದ್ದಾನೆ ಇವನು ಜೀವಮಾನವೆಲ್ಲಾ ಕ್ರಿಸ್ತನ ಶಿಲುಬೆಯನ್ನು (Cross of Christ) ತನ್ನ ಎದೆಯ ಮೇಲೆ ಇಟ್ಟು ಕೊಂಡಿದ್ದಾನೆ. ಇವನು ಹುಟ್ಟಿದಂದಿನಿಂದ ಸಾಯುವವರೆಗೂ ಎಚ್ಚರವಾಗಿರುವಾಗಲೆಲ್ಲಾ ಯೇಸು ಕ್ರಿಸ್ತನ ಧ್ಯಾನವನ್ನೇ ಮಾಡುತ್ತಿದ್ದಾನೆ ಇವನು ಯೇಸುಕ್ರಿಸ್ತನ ಪವಿತ್ರ ಸನ್ನಿಧಿ ಯಲ್ಲಿಯೇ ತಾನಿರುವೆನೆಂದು ನಡೆಯುವಾಗ, ನುಡಿಯುವಾಗ, ಎಲ್ಲಾ ವ್ಯವಹಾರ ಗಳಲ್ಲಿಯೂ ಜೀವಮಾನವೆಲ್ಲಾ ಶ್ರದ್ಧೆಯಿಂದ ಭಾವಿಸುತ್ತಿದ್ದಾನೆ. ಈ ಮನುಷ್ಯ

ಬದುಕಿದ 80-90 ವರ್ಷಗಳ ಎಚ್ಚರ ಕಾಲವನ್ನೆಲ್ಲಾ ಕ್ರಿಸ್ತನ ಪ್ರೇಮಕ್ಕಾಗಿ ವಿನಿಯೋಗಿಸಿದ್ದಾನೆ. ಇವನು ತನ್ನೆಲ್ಲಾ ಭಾವನೆಯನ್ನೂ ಕ್ರಿಸ್ತನಲ್ಲಿಟ್ಟಿದ್ದಾನೆ; ಸತ್ತಮೇಲೆ ಕ್ರಿಸ್ತನ ಬಲಗಡೆಯಲ್ಲಿ ತನಗೆ ಪೀಠವು ದೊರಕುವುದೆಂದು ಚಿಂತಿಸುತ್ತಿದ್ದಾನೆ. ಇವನು ಜೀವಮಾನವೆಲ್ಲಾ ದೇವದೂತರೂ (Angels), ದೇವತೆಗಳೂ (Seraphims) ಮತ್ತು ದೇವಪುರುಷರೂ (Cherubims) ತನ್ನನ್ನು ಮರಣಾನಂತರ ಸ್ವರ್ಗದಲ್ಲಿ ಸ್ವಾಗತಿಸುವರೆಂದು ನೆನೆಯುತ್ತಾ ಕನಸು ಕಾಣುತ್ತಾ ಇದ್ದಾನೆ. ವೇದಾಂತವು ಹೇಳುವದೇನೆಂದರೆ, ಈ ಬಗೆಯ ನಿಷ್ಠಾವಂತ ಕ್ರೈಸ್ತನೊಬ್ಬನು ಸತ್ತ ಮೇಲೆ ಯೇಸುಕ್ರಿಸ್ತನ ಬಲಪೀಠದಲ್ಲಿಯೇ ತಾನು ಕುಳಿತಿರುವಂತೆ ಕಾಣುತ್ತಾನೆ. ಖಂಡಿತವಾಗಿಯೂ ಖಂಡಿತವಾಗಿಯೂ, ಸತ್ತಮೇಲೆ ಪುನಃ ಹುಟ್ಟುವದಕ್ಕೆ ಮುಂಚೆ ಆ ದೀರ್ಘ ನಿದ್ರೆಯಲ್ಲಿ ಯಾವಾಗಲೂ ದೇವಸ್ತುತಿ-ಸಂಕೀರ್ತನೆ ಮಾಡುತ್ತಿರುವಂಥಾ ದೇವದೂತರಿಂದಲೂ ದೇವತೆಗಳಿಂದಲೂ ದೇವಪುರುಷರಿಂದಲೂ ತಾನು ಸುತ್ತುವರಿಯಲ್ಪಟ್ಟಿರುವಂತೆ ಅವನು ಕಾಣುತ್ತಾನೆ ಜೀವಮಾನವೆಲ್ಲಾ ಅವನು ಹಾಗೆ ಭಾವಿಸಿರುವದರಿಂದ ಸತ್ತಮೇಲೂ ಅವನು ಆ ಕನಸನ್ನೇ ಕಾಣುವದು ಕೇವಲ ಸ್ವಾಭಾವಿಕ ಅವನು ಹಾಗೆ ಕಾಣದೇ ಇರುವದಕ್ಕೆ ಕಾರಣವೇ ಇಲ್ಲ. ವೇದಾಂತವು ಹೇಳುವದೇನೆಂದರೆ, "ಓ ಕ್ರೈಸ್ತರೆ, ನೀವು ನಿಷ್ಠಾವಂತರಾದರೆ, ನೀವು ನಿಜವಾಗಿಯೂ ಶ್ರದ್ಧಾದರವುಳ್ಳವರಾದರೆ, ನಿಮ್ಮ ಶಾಸ್ತ್ರಗಳಲ್ಲಿ ನಿಮಗೆ ಕೊಟ್ಟಿರುವ (ಸ್ವರ್ಗಲೋಕದ) ಆಶೆಗಳೂ ಭರವಸೆಗಳೂ ವಾಗ್ದಾನಗಳೂ ಎಲ್ಲವೂ ಸಫಲವಾಗುತ್ತವೆ, ಈಡೇರುತ್ತವೆ ಆದರೆ ಮುಹಮ್ಮದೀಯರಲ್ಲಿಯೂ ಹಿಂದೂಗಳಲ್ಲಿಯೂ ತಪ್ಪು ಕಂಡುಹಿಡಿಯಬೇಡಿ.

ಮುಹಮ್ಮದೀಯನೊಬ್ಬನು ನಿಜವಾದ ಮುಹಮ್ಮದೀಯನಾದರೆ, ಅವನು ಬದುಕಿರುವ 70-80 ವರ್ಷಗಳ ಎಚ್ಚರದ ಜೀವಮಾನದಲ್ಲೆಲ್ಲಾ ಮುಹಮ್ಮದನ ಉಪದೇಶದಂತೆಯೇ ನಡೆಯುತ್ತಿದ್ದರೆ, ಅವನ ಚಿಂತನೆಯನ್ನೇ ಮಾಡುತ್ತಿದ್ದರೆ, ನಿತ್ಯವೂ ಐದು ಹೊತ್ತು ಮುಹಮ್ಮದನ ಹೆಸರಿನಲ್ಲಿ ಪ್ರಾರ್ಥನೆ ಮಾಡುತ್ತಿದ್ದರೆ, ಮತ್ತು ಮುಹಮ್ಮದನಿಗಾಗಿ ಯಾವಾಗಲೂ ತನ್ನ ಜೀವವನ್ನು ಬಲಿಗೊಡಲು ಸಿದ್ಧವಾಗಿದ್ದರೆ, ಇವನ ಗತಿ ಏನಾಗುತ್ತದೆ? ಅವನಿಗೆ ಪ್ರಕೃತಿ ನಿಯಮಗಳಿಗೆ ವಿರುದ್ಧವಾಗಿ ಏನೂ ಆಗುವದಿಲ್ಲ. ನಾವು ಎಚ್ಚರದಲ್ಲಿ ಮಾಡುವ ಕಾರ್ಯವನ್ನೇ ನಿದ್ರೆ ಮಾಡುವಾಗ ಕನಸಿನಲ್ಲಿಯೂ ಕಾಣಬೇಕೆಂಬುದು ಪ್ರಕೃತಿ ನಿಯಮ ಮುಹಮ್ಮದೀಯರು ಬಹಳ ಶ್ರದ್ಧಾವಂತರು, ಅತ್ಯಂತ ಅಭಿಮಾನಿಗಳು, ಉತ್ಸಾಹಿಗಳು, ಛಲವಾದಿಗಳು ಕೆಲವು ಸಮಯ (ಅಥವಾ ಬಹಳ ಮಟ್ಟಿಗೆ ಅವರು ಅಂಧಾಭಿಮಾನಿಗಳು. ದುರಭಿಮಾನಿಗಳು ಅಥವಾ ಉನ್ಮತ್ತಾಭಿಮಾನಿಗಳು ಮತ್ತು ಧರ್ಮಭ್ರಾಂತರು

(Bigoted Fanatics) ಎಂದು ಸಹ ಹೇಳಬಹುದು. ಅವರು 24 ಗಂಟೆಗಳಲ್ಲಿ ನಾಲ್ಕೈದು ಸಲ ಪ್ರಾರ್ಥನೆ ಮಾಡುತ್ತಾರೆ ; ಬಹಳ ನಿಯಮಶೀಲರು, ಬಹಳ ಭಕ್ತಿವಂತರು. ಇಂಥಾ ಒಬ್ಬ ಮಹಮ್ಮದೀಯನು ಮಹಮ್ಮದನ ವಿಷಯವಾಗಿಯೂ ಸತ್ತ ಮೇಲೆ ಅನುಗ್ರಹಿಸುವದಾಗಿ ಅವನು ವಾಗ್ದಾನ ಮಾಡಿರುವ ಸ್ವರ್ಗದ ವಿಷಯವಾಗಿಯೂ ಅಲ್ಲಿಯ ಸುಂದರ ಉದ್ಯಾನವನಗಳು, ಅಲ್ಲಿಯ ಅಪ್ಸರಸ್ತ್ರೀಯರು, ದ್ರಾಕ್ಷಾರಸದ ನದಿಗಳು, ಭವ್ಯವಾದ ಅರಮನೆಗಳು, ಬಗೆಬಗೆಯ ಭೋಗವಸ್ತುಗಳು ಇವುಗಳ ವಿಷಯವಾಗಿಯೂ ಜೀವಮಾನವೆಲ್ಲಾ ಹಂಬಲಿಸುತ್ತಾ ಕಾತರಿಸುತ್ತಾ ಕನಸುಕಾಣುತ್ತಿರುತ್ತಾನೆ. ವೇದಾಂತವು ಹೇಳುವದೇನೆಂದರೆ, ಇಂಥಾ ಒಬ್ಬ ಶ್ರದ್ಧಾವಂತ ಮಹಮ್ಮದೀಯನು ಸತ್ತಮೇಲೆ, ಅವನ ಜೀವಂತ ಕಲ್ಪನೆಯಲ್ಲಿದ್ದಂಥಾ ಸ್ವರ್ಗಸುಖಗಳನ್ನೇ ಅವನು ತನ್ನ ದೀರ್ಘ ನಿದ್ರೆಯ ಸ್ವಪ್ನ ಸ್ವರ್ಗದಲ್ಲಿಯೂ ತಪ್ಪದೇ ಅನುಭವಿಸುತ್ತಾನೆ. ಇದನ್ನು ತಪ್ಪಿಸುವುದಕ್ಕೆ ಪ್ರಕೃತಿಯಲ್ಲಿ ಯಾವ ಶಕ್ತಿಯೂ ಇಲ್ಲ, ಯಾವ ನಿಯಮವೂ ಇಲ್ಲ. ಮಹಮ್ಮದನು ವಾಗ್ದಾನಮಾಡಿರುವ ಸ್ವರ್ಗದಂಥಾ ಸ್ವರ್ಗವನ್ನೇ ಅವನು ಸತ್ತಮೇಲೆ ಕಾಣಬೇಕು—ಎಂದು ವೇದಾಂತವು ಹೇಳುತ್ತದೆ.

ಆದರೆ ವೇದಾಂತವು ಹೇಳುವದೇನೆಂದರೆ, "ಓ ಮಹಮ್ಮದೀಯರೆ, ಈ ಪ್ರಪಂಚದ ಎಲ್ಲಾ ಜನರನ್ನೂ, ಸತ್ತಮೇಲೆ, ನಿಮ್ಮ ಸ್ವಂತ ಪ್ರವಾದಿಯಾದ ಮಹಮ್ಮದ್ ಪೈಗಂಬರನೊಬ್ಬನ ಕರುಣೆಗೂ ಪರೀಕ್ಷೆಗೂ ಗುರಿಪಡಿಸುವುದಕ್ಕೆ ನಿಮಗೆ ಅಧಿಕಾರವಿಲ್ಲ. ಕ್ರೈಸ್ತರ ಭಾವನೆಯಂತೆ ಅವರಿಗೆ ಫಲವಾಗುವುದಕ್ಕೆ ಅವರು ಸ್ವತಂತ್ರರಿದ್ದಾರೆ. ಅವರಿಗೆ ಸ್ವರ್ಗಸುಖವನ್ನು ಅನುಗ್ರಹಿಸುವುದಕ್ಕೆ ಅವರ ಯೇಸುಕ್ರಿಸ್ತನಿದ್ದಾನೆ. ಕ್ರೈಸ್ತರು ಸತ್ತಮೇಲೆ ಅವರನ್ನು ವಿಚಾರಣೆಗೆ ಗುರಿಪಡಿಸುವುದಕ್ಕೆ ನಿಮ್ಮ ಮಹಮ್ಮದನಿಗೇನು ಅಧಿಕಾರವಿದೆ ? ಹಾಗೆ ಹೇಳುವುದಕ್ಕೆ ನಿಮಗೇನು ಅಧಿಕಾರವಿದೆ ? ಯೂರೋಪ್, ಅಮೇರಿಕಾ, ಜಪಾನ್, ಇಂಡಿಯಾ ಅಥವಾ ಚೈನಾ ಈ ಮೊದಲಾದ ದೇಶಗಳಲ್ಲಿ ಯಾರು ಎಲ್ಲಿ ಸತ್ತರೂ ನಿಮ್ಮ ಮಹಮ್ಮದನ ವಿಚಾರಣೆಗೇ ದಯೆಗೇ ಏಕೆ ಗುರಿಯಾಗಬೇಕು ? ಅದರಲ್ಲಿ ಯಾವ ನ್ಯಾಯವಿದೆ ? " ಮಹಮ್ಮದನನ್ನು ನಂಬಿದರೆ ಸರಿ ; ಇಲ್ಲವಾದರೆ ಅವರು ಹಾಳಾಗಿ ಹೋಗುತ್ತಾರೆ, ನಾಶವಾಗುತ್ತಾರೆ, ನರಕಕ್ಕೆ ಹೋಗುತ್ತಾರೆ " ಎಂದು ಇಷ್ಟು ಕ್ರೂರವಾಗಿ, ಹೀಗೆ ಹೇಳುವುದಕ್ಕೆ ನಿಮಗೆ ಅಧಿಕಾರವಿಲ್ಲ. ನಿಮಗೆ ಇಷ್ಟವಾದ ನಿಮ್ಮ ಕಲ್ಪನೆಯ ಸ್ವರ್ಗವು ನಿಮಗೆ ಸಿಕ್ಕುವಂತೆಯೇ ಬೇರೆ ಧರ್ಮದವರಿಗೂ ಅವರವರಿಗೆ ಇಷ್ಟವಾದ ಅವರವರ ಕಲ್ಪನೆಯ ಸ್ವರ್ಗವು ಅವರವರಿಗೆ ಲಭಿಸುವುದು ನ್ಯಾಯವಾಗಿದೆ, ಸ್ವಭಾವವಾಗಿದೆ. ನಿಜವಾಗಿ ವಿಚಾರಮಾಡಿದರೆ, ಸತ್ತಮೇಲಿನ ಸ್ವರ್ಗವೋ ನಿಮ್ಮ ನರಕವೋ

ನಿಮ್ಮ ಭಾವನೆಯನ್ನೇ ಅವಲಂಬಿಸಿವೆ. ಅವುಗಳನ್ನು ನೀವೇ ಸೃಷ್ಟಿಸಿಕೊಳ್ಳುತ್ತೀರಿ. ಅವುಗಳು ಬರೀ ನಿಮ್ಮ ಕನಸುಗಳೇ ಹೊರತು ಹೆಚ್ಚಿನದೇನೂ ಅಲ್ಲ. ಆದರೆ ಕನಸು ಕಾಣುವಾಗ ಆ ಕನಸಿನ ಸ್ವರ್ಗವಾಗಲೀ ನರಕವಾಗಲೀ ನಿಮಗೆ ಸತ್ಯವಾಗಿಯೇ ತೋರುತ್ತವೆ. ಬದುಕಿರುವಾಗ ಕಾಣುವ ಕನಸೂ ಸತ್ತಮೇಲೆ ಕಾಣುವ ಸ್ವರ್ಗ-ನರಕಗಳ ಕನಸೂ ಎರಡೂ ಒಂದೇ. ಕನಸನ್ನು ಕಾಣುತ್ತಿರುವಾಗ ಆ ಅನುಭವವು ನಿಜವಾಗಿ ತೋರುವಂತೆ ಸತ್ತಮೇಲಿನ ಸ್ವರ್ಗನರಕಗಳೂ ನಿಜವಾಗಿಯೇ ತೋರುತ್ತವೆ. ಆದರೆ ವಾಸ್ತವವಾಗಿಯೂ ಅವುಗಳಲ್ಲಿ ಕನಸಿಗಿಂತಲೂ ಹೆಚ್ಚಿನ ಸತ್ಯತೆಯಿಲ್ಲ.

ಇನ್ನೊಂದು ವಿಷಯವನ್ನು ವಿಚಾರ ಮಾಡಬಹುದು. "ನಮ್ಮ ಶ್ರುತಿ ಶಾಸ್ತ್ರಗಳು ನಮಗೆ ಮಾಡಿರುವ ವಾಗ್ದಾನವು ನಿಜವಾದರೆ ಸತ್ತಮೇಲೆ ನಮಗೆ ಶಾಶ್ವತವಾದ ಅಥವಾ ಅನಂತಕಾಲದ ಸ್ವರ್ಗಸುಖವು ಲಭಿಸಬೇಕು" ಎಂದು ಜನರು ಹೇಳಬಹುದು ಶಾಸ್ತ್ರಗಳು ಅನಂತಕಾಲದ ಸುಖವನ್ನೋ (Eternal happiness), ಅನಂತಕಾಲದ ನರಕ ಶಿಕ್ಷೆಯನ್ನೋ (Eternal damnation) ಹೇಳುತ್ತವೆ— ಇದರ ವಿಚಾರವೇನು ? ಎಂದು ಕೇಳಬಹುದು. ವೇದಾಂತ ಹೇಳುವ ದೇನೆಂದರೆ, " 'ಅನಂತತೆ ಎನ್ನುವದೇನು ?, ಅನಂತತೆಯು ಕಾಲಕ್ಕೆ ಸಂಬಂಧಪಟ್ಟಿದ್ದು, ಅದು ಬಹಳ ದೀರ್ಘವಾದ ಕಾಲ, ಅನಂತಕಾಲ. ಜಾಗ್ರುದವಸ್ಥೆಯ ಕಾಲವೇ ಬೇರೆ, ಸ್ವಪ್ನಾವಸ್ಥೆಯ ಕಾಲವೇ ಬೇರೆ. ಅವುಗಳ ಬಗೆಗಳೇ ಬೇರೆ. ಕನಸಿನಲ್ಲಿ ನೀವು ಒಂದು ಪರ್ವತವನ್ನು ನೋಡಬಹುದು; ಐದು ಸಾವಿರ ವರ್ಷಗಳಿಂದ ಈ ಪರ್ವತವಿದೆ ಯೆಂದೂ ನಿಮಗೆ ಆಗ ತೋರಬಹುದು. ಆದರೆ ಎಚ್ಚರದ ದೃಷ್ಟಿಯಿಂದ ಅದು, ನಿಮ್ಮ ಕನಸಿನಲ್ಲಿ ಆಗಿಂದಾಗಲೇ ಸೃಷ್ಟಿಯಾಗಿರುವದು. ಹೀಗೇಯೇ ಮರಣಾ ನಂತರದ ಕನಸಿನಲ್ಲಿಯೂ ಅನಂತಕಾಲ ಸ್ವರ್ಗ ಸುಖವನ್ನು ಅನುಭವಿಸುತ್ತಿರುವಂತೆ ನಿಮಗೆ ಕಾಣಬಹುದು. ಇದು ಕನಸಿನ ಜೀವನ ದೃಷ್ಟಿಯಿಂದಲೇ ಹೊರತು, ಎಚ್ಚರದ ಜೀವನ ದೃಷ್ಟಿಯಿಂದಲ್ಲ.

ನಿಮಗೆ ಬೈಬಲ್ ಕೊಟ್ಟಿರುವ ಭರವಸೆಯು ಸರಿಯೆಂದು ನಿಮಗೆ ತೋರುವದು ನಿಜ. ಏಕೆಂದರೆ ಮರಣಾನಂತರದ ಸ್ವಪ್ನಸ್ವರ್ಗದಲ್ಲಿ ನೀವಿರುವಾಗ, ಆ ಸುಖವು ಎಂದೆಂದಿಗೂ ಶಾಶ್ವತವಾಗಿ ಇರುವಂತೆ ನಿಮಗೆ ತೋರುತ್ತದೆ. ಅದು ನಿಮಗೆ ಅನಂತ ಕಾಲವಿರುತ್ತದೆ. ಆದರೆ ಸ್ವಪ್ನ ಜೀವನ ದೃಷ್ಟಿಯಿಂದ ಅನಂತವಾಗಿ ತೋರುವದು ಎಚ್ಚರದ ಜೀವನ ದೃಷ್ಟಿಯಿಂದ ಕೆಲವು ದಿನಗಳೋ ಗಂಟೆಗಳೋ ನಿಮಿಷಗಳೋ ಆಗಬಹುದು."

ಮರಣಾನಂತರದ ಸ್ಥಿತಿಯನ್ನು ಬಗೆಬಗೆಯಾಗಿ ತಿಳಿಸುತ್ತಿರುವ ಬೇರೆ ಬೇರೆ ಧರ್ಮಗಳ ಬೇರೆ ಬೇರೆ ವಾದಗಳನ್ನು ವೇದಾಂತವು ಹೇಗೆ ವಿರೋಧವಿಲ್ಲದಂತೆ ಸಮಂಜಸವಾಗಿ ಸಮನ್ವಯ ಮಾಡಿ ತೋರಿಸುತ್ತದೆ ಎಂಬುದು ಇದುವರೆಗಿನ ವಿಚಾರದಿಂದ ಸ್ವಲ್ಪಮಟ್ಟಿಗೆ ಭಾವನೆ ಬರಬಹುದು.

ಆದರೆ, ಜನ್ಮಾಂತರದ ವಿಚಾರವೇನು ? ಮುಕ್ತ ಪುರುಷರ ವಿಚಾರವೇನು ? ವೇದಾಂತವು ಹೇಳುವದೇನೆಂದರೆ, ಸತ್ತ ಮೇಲೆ ಪ್ರತಿಯೊಬ್ಬರೂ ಸ್ವರ್ಗ-ನರಕಗಳ ಕನಸನ್ನು ಕಾಣಬೇಕಾಗಿಲ್ಲ ಮತ್ತು ಪುನಃ ಹುಟ್ಟಲೇಬೇಕೆಂಬದಿಲ್ಲ. ಮುಕ್ತಜೀವರು ಸ್ವರ್ಗ-ನರಕಗಳಲ್ಲಿಯೂ ಸೆರೆಯಾಗಬೇಕಾಗಿಲ್ಲ ; ಮತ್ತೆ ಹುಟ್ಟಲೂ ಬೇಕಿಲ್ಲ ಎಲ್ಲಾ ಸ್ವರ್ಗ ನರಕಗಳೂ ಎಲ್ಲಾ ಲೋಕಗಳೂ ಅವರಲ್ಲಿಯೇ ಇವೆ. ಅವರ ವಿಚಾರವಾಗಿ ಸ್ವಲ್ಪ ಹೇಳಬಹುದು.

ನಿಮ್ಮ ಕನಸುಗಳಲ್ಲಿ ನೀವು, ವಿಷಯಿ ಮತ್ತು ವಿಷಯ ಎನ್ನುವ ಎರಡು ಬಗೆಯ ಪ್ರಕೃತಿವಿಲಾಸವನ್ನು ಕಾಣುತ್ತೀರಿ. ನೀವು ಕನಸಿನಲ್ಲಿ ಕಾಣುವ, ನಿಮ್ಮ ಸುತ್ತಲಿರುವ ನದಿಗಳೂ ಪರ್ವತಗಳೂ ಅರಣ್ಯಗಳೂ ಇವೇ ಮೊದಲಾದವು ವಿಷಯ. ಕನಸನ್ನು ನೋಡುತ್ತಿರುವ ಕನಸಿನಲ್ಲಿರುವ ಪ್ರವಾಸಿಯೂ ಯಾತ್ರಿಕನೂ ಆದ ಜೀವನೇ ವಿಷಯಿ. ನಿಮ್ಮ ಕನಸಿನಲ್ಲಿರುವ ಅನೇಕ ವಸ್ತುಗಳಲ್ಲಿ ನಾನು ಎನ್ನುವದೂ ಇದೆ ; ನನ್ನಿಂದ ಬೇರೆಯಾದ ವಸ್ತುಗಳೂ ಇವೆ. ನಾನು ಎನ್ನುವದೇ ವಿಷಯಿ, ಜ್ಞಾತೃ. ನಾನಲ್ಲದ ಬೇರೆ ಎಲ್ಲಾ ವಸ್ತುಗಳೂ ವಿಷಯ (ಜ್ಞೇಯ) ಎನ್ನಿಸಿಕೊಳ್ಳುತ್ತವೆ. ನಿಮ್ಮ ಕನಸುಗಳಲ್ಲಿ ಸಾಮಾನ್ಯವಾಗಿ ಈ ವಿಭಾಗವಿರುತ್ತದೆ. ವೇದಾಂತವು ಹೇಳುವ ದೇನೆಂದರೆ, ವಿಷಯಿ ಮತ್ತು ವಿಷಯ ಈ ಎರಡೂ ನಿಮ್ಮ ಸೃಷ್ಟಿ, ನಿಜವಾದ ಆತ್ಮನ ಸೃಷ್ಟಿ ; ಎಚ್ಚರದ ಜೀವನ ಸೃಷ್ಟಿ. ನಿಘಂಟುಕಾರನಾದ ಡಾಕ್ಟರ್ ಜಾನ್ ಸನ್ನನು ಭಾಷಣಕಾರರಲ್ಲಿ ರಾಜನೆನ್ನಿಸಿಕೊಂಡಿದ್ದನು. ಅವನು ವಾಗ್ವಾದದಲ್ಲಿ ಎಂದೂ ಸೋಲನ್ನು ಸಹಿಸುತ್ತಿರಲಿಲ್ಲ. ಎದುರಾಳಿಯು ಉತ್ತರ ಕೊಡಲಾಗದ ಕೊನೆಯ ಮಾತು ಯಾವಾಗಲೂ ಅವನದೇ ಆಗಿರುತ್ತಿತ್ತು. ಅವನು ಉಡಾಯಿಸಿದ ಪಿಸ್ತೂಲಿನ ಗುರಿಯು ಒಂದುವೇಳೆ ತಪ್ಪಿದರೆ, ಎದುರಾಳಿಯನ್ನು ಅದರ ಬುಡದಿಂದಲಾದರೂ ಹೊಡೆದು ಕೆಡವುತ್ತಾನೆ-ಎಂದು ಜನ ಹೇಳುತ್ತಿದ್ದರು. ಮಾತಿನಲ್ಲಿ ಯಾವಾಗಲೂ ತಾನೇ ಜಯಿಸಬೇಕೆಂಬುದು ಅವನ ಹಟ. ವಾದದಲ್ಲಿ ಯಾವನಾದರೂ ಅವನಿಗಿಂತಲೂ ಎಂದಾದರೂ ಪ್ರಬಲನಾದರೆ, ಅವನು ಭೂಮ್ಯಾಕಾಶಗಳನ್ನು ಒಂದು ಮಾಡಿಯಾದರೂ ತನ್ನ ಎದುರಾಳಿಯ ಸೇಡು ತೀರಿಸಿಕೊಳ್ಳುತ್ತಿದ್ದನು. ಒಮ್ಮೆ

ಜಾನ್‌ಸನ್‌ಗೆ ಒಂದು ಕನಸಾಯಿತು. ಅದರಲ್ಲಿ ಮಹಾವಾಗ್ಮಿಯಾದ ಎಡ್‌ಮಂಡ್‌ಬರ್ಕ್‌ನು (Edmund Burke) ಒಂದು ವಾದದಲ್ಲಿ ಅವನನ್ನು ಸೋಲಿಸಿಬಿಟ್ಟನು ಜಾನ್‌ಸನ್ (Johnson) ಸ್ವಭಾವದ ಒಬ್ಬ ವ್ಯಕ್ತಿಗೆ ಆ ಸ್ವಪ್ನವು ಭಯಂಕರ ಸ್ವಪ್ನವೇ ಆಗಿತ್ತು ಆವನು ಕನಸಿನಲ್ಲಿ ಆ ಸೋಲಿನಿಂದ ಬೆಚ್ಚಿಬಿದ್ದನು. ಇದರಿಂದ ಅವನಿಗೆ ಎಚ್ಚರವಾಯಿತು. ಆದರೂ ಅವನು ಕಳವಳಗೊಂಡ ಸ್ಥಿತಿಯಲ್ಲಿದ್ದನು ಏನು ಮಾಡಿದರೂ ಪುನಃ ಅವನಿಗೆ ನಿದ್ರೆ ಬರಲಿಲ್ಲ, ಕನಸಿನಲ್ಲಿ ಪಡೆದ ಸೋಲಿನಿಂದಾದ ಅಪಮಾನದ ತಳಮಳವು ಅಡಗಲಿಲ್ಲ. ಆದರೆ ಯಾವಾಗಲೂ ವಿಶ್ರಾಂತಿಯನ್ನೂ ಶಾಂತಿಯನ್ನೂ ಹುಡುಕುವದೇ ಮನಸ್ಸಿನ ಸ್ವಭಾವವಾಗಿದೆ. ಅದು ಯಾವ ಕಾರಣದಿಂದಾದರೂ ಸ್ವಸ್ಥತೆಯನ್ನು ಕಳೆದುಕೊಂಡ ಕೂಡಲೇ ಪುನಃ ಸ್ವಸ್ಥತೆಯನ್ನು ಪಡೆಯುವದಕ್ಕಾಗಿಯೇ ಅದು ಹಂಬಲಿಸುತ್ತದೆ. ಇದಕ್ಕೆ ಕಾರಣವೇನೆಂದರೆ ನಿಜವಾದ ಶಾಂತಿಯೇ ಅದರ ತೌರು, ಅದರ ಮೂಲ ಸ್ವಭಾವ. ಅದು ತನ್ನ ಮೂಲ ಸ್ವಭಾವವನ್ನು ಪಡೆಯಲೇಬೇಕು. ಜಾನ್‌ಸನ್ನನ ಮನಸ್ಸೂ ಶಾಂತಿ ಪಡೆಯುವದಕ್ಕಾಗಿ ಚಡಪಡಿಸುತ್ತಿತ್ತು. ಹೇಗಾದರೂ ಶಾಂತವಾಗಬೇಕೆಂದು ಅದು ಹಂಬಲಿಸುತ್ತಾ ಹುಡುಕುತ್ತಾ ಇತ್ತು. ಅವನು ಹೀಗೆ ಸಮಾಧಾನ ಮಾಡಿಕೊಳ್ಳುತ್ತಿದ್ದನು · "ನಾನು ಎಡ್‌ಮಂಡ್‌ಬರ್ಕ್‌ನ ಹತ್ತಿರ ಹೋಗಿ, ಪುನಃ ವಾದ ಮಾಡುತ್ತೇನೆ. 'ಬರ್ಕ್, ಬರ್ಕ್, ಎಲ್ಲಿ, ಎಲ್ಲಿ, ನನ್ನನ್ನು ಸೋಲಿಸಿದ ನಿನ್ನ ವಾದವೇನು ? ಇನ್ನೊಮ್ಮೆ ಹೇಳು , ಈಗ ಸರಿಯಾಗಿ ಉತ್ತರ ಕೊಡುತ್ತೇನೆ. ನನ್ನ ಆಕ್ಷೇಪಕ್ಕೆ ನೀನು ಉತ್ತರ ಕೊಡು, ನೋಡೋಣ' ಎನ್ನುತ್ತೇನೆ. ಎಲ ಎಲಾ ! ಹೌದು, ನನ್ನ ಕನಸಿನಲ್ಲಿ ಕಂಡ ಬರ್ಕ್, ಎಚ್ಚರದ ಬರ್ಕ್ ಹೇಗಾಗಬಲ್ಲ ? ಎಚ್ಚರದ ಬರ್ಕ್‌ನಿಗೆ ಕನಸಿನ ಬರ್ಕ್‌ನ ವಿಚಾರವು, ವಾದವು ಹೇಗೆ ಗೊತ್ತಾಗಬೇಕು ? ನನ್ನ ನಿದ್ರೆಯಲ್ಲಿ ಅವನು ಪ್ರಯೋಗಿಸಿದ ಪ್ರಬಲತರ ಯುಕ್ತಿಗಳೇನು ಎನ್ನುವದೂ ನನ್ನ ಸೋಲಿಗೆ ಕಾರಣವಾದ ನನ್ನ ದುರ್ಬಲ ಯುಕ್ತಿಗಳೇನು ಎನ್ನುವದೂ ಎರಡೂ ನನಗೆ ಗೊತ್ತಿದೆ. ಜಯ ಪಡೆದ ಪಕ್ಷದ ವಾದವೂ ನನಗೆ ಗೊತ್ತಿದೆ ; ಅಪಜಯ ಹೊಂದಿದ ಪಕ್ಷದ ವಾದವೂ ನನಗೇ ತಿಳಿದಿದೆ. ಪಾಪ, ಆ ನಿಜವಾದ ಬರ್ಕ್‌ನಿಗೆ ಇದು ಯಾವದೂ ತಿಳಿಯದು. ಹೀಗೆ ಎರಡು ಪಕ್ಷಗಳ ವಾದಗಳನ್ನೂ ನನ್ನ ಮಿದುಳೇ ಒದಗಿಸಿದೆ, ಕಲ್ಪಿಸಿದೆ. ಒಂದು ಕಡೆ ಜಯಶಾಲಿಯಾದ ಎಡ್‌ಮಂಡ್ ಬರ್ಕ್‌ನಾಗಿಯೂ ಇನ್ನೊಂದು ಕಡೆ ಪರಾಜಿತನಾದ ಜಾನ್‌ಸನ್ ಆಗಿಯೂ ನನಗೆ ನಾನೇ ಈ ಎರಡು ರೂಪಗಳಿಂದಲೂ ತೋರಿದೆ. ಆದ್ದರಿಂದ ನಾನು ಬೇರೆಯವರಿಂದ ಸೋಲಲಿಲ್ಲ "

ಹೀಗೆ ನಿಜವಾದ ವಿಚಾರವು ಹೊಳೆದ ಕೂಡಲೇ ಜಾನ್‌ಸನ್ನನಿಗೆ ತನ್ನ ಭ್ರಾಂತಿಗಾಗಿ ನಗು ಬಂದು, ಮನಸ್ಸು ನಾಚಿ, ಶಾಂತವಾಯಿತು. ವೇದಾಂತವು ಹೇಳುವದೇನೆಂದರೆ, ನಿಮ್ಮ ಕನಸುಗಳಲ್ಲಿ ಒಂದು ಕಡೆ ವಿಷಯವಾಗಿಯೂ ಇನ್ನೊಂದು ಕಡೆ ವಿಷಯಿಯಾಗಿಯೂ ನೀವೇ ತೋರುತ್ತೀರಿ ನೀವೇ, ನಿಮ್ಮೊಳಗಿರುವ ನಿಜವಾದ ಆತ್ಮನೇ ಒಂದು ಕಡೆ ಪರ್ವತಗಳಾಗಿಯೂ ನದಿಗಳಾಗಿಯೂ ಅರಣ್ಯಗಳಾಗಿಯೂ ಪಶುಗಳಾಗಿಯೂ ಪಕ್ಷಿಗಳಾಗಿಯೂ ಪ್ರಾಣಿಗಳಾಗಿಯೂ ಇನ್ನೊಂದು ಕಡೆ ದಿಗ್ಭ್ರಾಂತನಾದ ಯಾತ್ರಿಕನಾಗಿಯೂ ತೋರುತ್ತಿರುವದು. ನೀವೇ ವಿಷಯ, ನೀವೇ ವಿಷಯಿ (Subject).

ಹೀಗೆ ವೇದಾಂತದ ಪ್ರಕಾರ, ಸಾವಿನ ದೀರ್ಘನಿದ್ರೆಯಲ್ಲಿ ಸ್ವರ್ಗನರಕಗಳೂ ನೀವೇ, ಸ್ವರ್ಗಸುಖವನ್ನು ಭೋಗಿಸುತ್ತಿರುವ ಮನುಷ್ಯನೂ ನರಕದಲ್ಲಿ ಸಂಕಟಪಡುತ್ತಿರುವ ಮನುಷ್ಯನೂ ನೀವೇ. ಇದನ್ನು ನೀವು ಅರಿತರೆ ನೀವು ಮುಕ್ತರಾಗುತ್ತೀರಿ.

ಈ ವೇದಾಂತಜ್ಞಾನವನ್ನು ಪಡೆದಿದ್ದ ಒಬ್ಬಳು ಬ್ರಹ್ಮಜ್ಞಾನಿ ಇದ್ದಳು. ಆಕೆಯು ತನ್ನ ಒಂದು ಕೈಯಲ್ಲಿ ಬೆಂಕಿಯನ್ನೂ ಇನ್ನೊಂದು ಕೈಯಲ್ಲಿ ತಣ್ಣೀರನ್ನೂ ತೆಗೆದುಕೊಂಡು ಬೀದಿಯಲ್ಲಿ ಹೋಗುತ್ತಿದ್ದಳು. "ಇದೇನು ?" ಎಂದು ಜನರು ಕುತೂಹಲದಿಂದ ಆಕೆಯನ್ನು ಪ್ರಶ್ನೆಮಾಡುತ್ತಿದ್ದರು. ಒಂದು ದಿನ, ಕ್ರೈಸ್ತಧರ್ಮ ಪ್ರಚಾರಕನಾದ ಒಬ್ಬ ಪ್ರಸಿದ್ಧ ಪಾದ್ರಿಯೇ ಆಕೆಯನ್ನು ಪ್ರಶ್ನೆಮಾಡಿದನು ಆಕೆಯು "ಈ ಬಲಗೈ ಬೆಂಕಿಯಿಂದ ನಿಮ್ಮ ಸ್ವರ್ಗವನ್ನೂ ನಂದನವನವನ್ನೂ ಉರಿಹಚ್ಚಿ ಸುಡುತ್ತೇನೆ ; ಈ ಎಡಗೈ ತಣ್ಣೀರಿನಿಂದ ನಿಮ್ಮ ನರಕದ ಬೆಂಕಿಯನ್ನು ಆರಿಸುತ್ತೇನೆ. ಸ್ವರ್ಗನರಕಗಳೆಲ್ಲಾ ತಾನೆ ಎನ್ನುವ ತತ್ತ್ವಜ್ಞಾನವುಳ್ಳವನಿಗೆ, ನಿಮ್ಮ ಸ್ವರ್ಗದ ಆಕರ್ಷಣೆಯೂ ನಿಮ್ಮ ನರಕದ ಭಯವೂ ಕೂಡ ನಷ್ಟವಾಗುತ್ತವೆ ಅವನು ಅವುಗಳನ್ನೆಲ್ಲಾ ಮೀರಿ ನಿಂತಿರುತ್ತಾನೆ.

ಹಾಗಾದರೆ, ನಿಮ್ಮ ಈ ಎಚ್ಚರದ ಪ್ರಪಂಚದ ವಿಚಾರವೇನು ? ನೀವಿದನ್ನು ಎಷ್ಟು ಸತ್ಯವೆಂದು ತಿಳಿದಿದ್ದೀರಿ ! ಇಷ್ಟು ಘನವಾಗಿಯೂ ಸ್ಥೂಲವಾಗಿಯೂ ದೃಢವಾಗಿಯೂ ಕಠೋರಸತ್ಯವಾಗಿಯೂ ಕಾಣುತ್ತಿರುವ ಈ ನಿಮ್ಮ ಎಚ್ಚರದ ಪ್ರಪಂಚವೂ ಸಹ ನಿಮ್ಮ ಕನಸಿಗಿಂತ ಬೇರೆ ಜಾತಿಯದಲ್ಲವೆಂದೂ ಇದು ನಿಜವಲ್ಲವೆಂದೂ ವೇದಾಂತವು ತೋರಿಸಿಕೊಡುತ್ತದೆ. ಎರಡಕ್ಕೂ ಪರಿಮಾಣ—ಅಂತಸ್ತುಗಳಲ್ಲಿ ತಾರತಮ್ಯವಿರಬಹುದೇ ಹೊರತು ಗುಣಲಕ್ಷಣಗಳಲ್ಲಿ ಅಲ್ಲ ಎಂದು ವೇದಾಂತವು

ಹೇಳುತ್ತದೆ. ನಿಮ್ಮ ಎಚ್ಚರದ ಜಗತ್ತೂ ಒಂದು ಕನಸೇ. ಅದು ಘನೀಭೂತವಾದ ಕನಸು. ಘನವಾಗಿ ತೋರುವ ಈ ನಿಮ್ಮ ಎಚ್ಚರದ ಜಗತ್ತಿನಲ್ಲಿ ಸಹ, ವಿಷಯಿ ಮತ್ತು ವಿಷಯ ಕೂಡ ನಿಜವಾದ ಆತ್ಮನ ಸೃಷ್ಟಿಯೇ ಹೊರತು ಬೇರೆ ಅಲ್ಲ; ಹೆಚ್ಚೇನೂ ಅಲ್ಲ. ಒಂದು ಕಡೆ ಈ ನಗರಗಳೂ ಪಟ್ಟಣಗಳೂ ನದಿಗಳೂ ಪರ್ವತಗಳೂ ಆಗಿ, ಇನ್ನೊಂದು ಕಡೆ ಈ ಪ್ರಪಂಚದಲ್ಲಿ ದಿಕ್ಕಿಲ್ಲದೆ ನಿರ್ಗತಿಕನಾಗಿ ಪರಿಭ್ರಮಿಸುತ್ತಿರುವ ಪ್ರವಾಸಿಯಾಗಿ, ಯಾತ್ರಿಕನಾಗಿ ತೋರುತ್ತಿರುವವನು ನಿಮ್ಮ ನಿಜವಾದ ಆತ್ಮನೇ. ನಿಮ್ಮ ಎಚ್ಚರದಲ್ಲಿ ಸಹ ವಿಷಯಿಯಾಗಿ ತೋರುವದೂ ವಿಷಯವೇ, ವಿಷಯವಾಗಿ ತೋರುವದೂ ವಿಷಯಿಯೇ ಆಗಿವೆ.

Death means only the subsiding of the subject and not of the object.

**ಸಾವು ಎಂದರೆ, ವಿಷಯಿಯ ಅಡಗುವಿಕೆ ಮಾತ್ರ; ವಿಷಯದ ಅಡಗುವಿಕೆ ಅಲ್ಲ.**

ಈಗ ನೀವು ಕನಸು ಕಾಣುತ್ತಿದ್ದೀರಿ—ಎಂದು ಇಟ್ಟುಕೊಳ್ಳೋಣ. ನಿಮ್ಮ ಕನಸಿನಲ್ಲಿ ನೀವು [1]ಮದ್ರಾಸಿನಲ್ಲಿರುವಂತೆ ನಿಮಗೆ ಕಾಣುತ್ತದೆ, ಆದರೆ ನಿಜವಾಗಿಯೂ ನೀವು ಮಲಗಿ ನಿದ್ರಿಸುತ್ತಿರುವದು ಬೆಂಗಳೂರಿನಲ್ಲಿ. ನಿಮ್ಮಾ ಕನಸಿನಲ್ಲಿ ಕಾಣುತ್ತಿದ್ದ ಮದ್ರಾಸು ಅಲ್ಲಿಯ ಸಮುದ್ರ ಮೊದಲಾದ ದೃಶ್ಯಗಳೆಲ್ಲಾ ಏನಾಗಿದ್ದವು? ಅವುಗಳೆಲ್ಲಾ ವಿಷಯವಾಗಿದ್ದವು, ಮದ್ರಾಸಿನಲ್ಲಿದ್ದ ನೀವು ವಿಷಯಿ (Subject) ಆಗಿದ್ದಿರಿ. ಕೆಲವು ಸಮಯ, ನಮ್ಮ ನಿದ್ರೆ ಜೋಡಿ ನಿದ್ರೆಯಾಗುತ್ತದೆ, ಅಂದರೆ ನಾವು ನಿದ್ರೆಯಲ್ಲಿ ನಿದ್ರೆ ಮಾಡುತ್ತೇವೆ, ಇದು ಚಕ್ರಬಡ್ಡಿಯಿದ್ದಂತೆ; ಹಾಗೆ ನಮ್ಮ ಮೊದಲಿನ ಕನಸಿನಲ್ಲಿಯೇ ಮತ್ತೊಂದು ಕನಸನ್ನು ಕಾಣಬಹುದು, ಇದೇ ಜೋಡಿ ಕನಸು. ಅದು ಹೀಗೆ: ಬೆಂಗಳೂರಿನಲ್ಲಿ ಮಲಗಿ ನಿದ್ರಿಸುತ್ತಿದ್ದ ನೀವು, ಮದ್ರಾಸಿನಲ್ಲಿರುವಂತೆ ಕನಸು ಕಾಣುತ್ತಿರುವಾಗ ಮದ್ರಾಸಿನಲ್ಲಿಯೇ ನೀವು ಪುನಃ ಮಲಗಿ ನಿದ್ರಿಸುತ್ತಾ ಮತ್ತೊಂದು ಕನಸನ್ನು ಕಾಣುತ್ತಿರುವಂತೆ ಅನುಭವವಾಗಬಹುದು.

---

1. ರಾಮತೀರ್ಥರು ತಮ್ಮ ಉಪನ್ಯಾಸದಲ್ಲಿ ಅಲ್ಲಿಯ ನಗರಗಳನ್ನೇ ಹೇಳಿದ್ದಾರೆ: ಸ್ಯಾನ್‌ಫ್ರಾನ್ಸಿಸ್ಕೋ (ಬೆಂಗಳೂರು), ಬರ್ಕಲಿ (ಮದ್ರಾಸು), ಲಾಸ್‌ಏಂಜೆಲೆಸ್ (ಡೆಲ್ಲಿ), ಲಿಕ್‌ಅಬ್ಸರ್ವೇಟರಿ, ಸಮ್ಮರ್‌ರಿಸಾರ್ಟ್ (ಗ್ರೀಷ್ಮಕಾಲದ ವಿರಾಮಧಾಮ).

ಇದೇ ನಿದ್ರೆಯಲ್ಲಿ ನಿದ್ರೆ—ಜೋಡಿ ನಿದ್ರೆ, ಹಾಗೂ ಕನಸಿನಲ್ಲಿ ಕನಸು-ಜೋಡಿ ಕನಸು, ಆಗ ಮದ್ರಾಸಿನಲ್ಲಿ ಪುನಃ ನಿದ್ರಿಸಿ ಕನಸುಕಂಡಂತೆ ತೋರುವಾಗ, ಕನಸು ಕಾಣುತ್ತಿರುವ ವಿಷಯಿಯುಮಾತ್ರ ನಿದ್ರೆಯಲ್ಲಿ ಅಡಗುತ್ತಾನೆ ; ಆದರೆ ಅಲ್ಲಿ ವಿಷಯ ವಾಗಿದ್ದ ಮದ್ರಾಸು ಅಡಗುವದಿಲ್ಲ, ಹಾಗೆಯೇ ಉಳಿದಿರುತ್ತದೆ. ಮದ್ರಾಸಿನಲ್ಲಿ ಕಂಡ ಎರಡನೆಯ ಕನಸಿನಲ್ಲಿ ನೀವು ಡೆಲ್ಲಿಯಲ್ಲಿ ಇರುವಂತೆ ಕಾಣಬಹುದು. ನಿಮ್ಮ ಬೆಂಗಳೂರಿನ ನಿದ್ರೆಯು ಹಾಗೇ ಮುಂದುವರಿಯುತ್ತಿದೆ-ಎಂಬದನ್ನು ಮರೆಯ ಬಾರದು ಡೆಲ್ಲಿಯಲ್ಲಿ ನೋಡಬೇಕಾದುದನ್ನೆಲ್ಲಾ ನೋಡಿ, ಸುತ್ತಿ ಸುತ್ತಿ ಸುಸ್ತಾಗಿ ನಿಮ್ಮ ಒಬ್ಬ ಸ್ನೇಹಿತನ ಮನೆಯಲ್ಲಿ ಪುನಃ ಮಲಗಿ ನಿದ್ರಿಸುತ್ತೀರಿ. ಅಲ್ಲಿ ಡೆಲ್ಲಿಯ ದೃಶ್ಯಗಳೆಲ್ಲಾ ನಿಮ್ಮ ವಿಷಯವಾಗಿದ್ದವು, ವಿಷಯಿಯಾದ ನೀವು ಪುನಃ ಅಲ್ಲಿ ನಿದ್ರೆಯಲ್ಲಿ ಅಡಗುತ್ತೀರಿ. ಡೆಲ್ಲಿಯಲ್ಲಿ ಮಧ್ಯಾಹ್ನದ ಬಿಸಿಲಿಗೆ ಸ್ವಲ್ಪಹೊತ್ತು ನಿದ್ರೆ ಮಾಡಿದ ಅನಂತರ ಎಚ್ಚರವಾಗಿ ಹೃಷೀಕೇಶಕ್ಕೆ ಹೋದಂತೆ ತೋರುತ್ತದೆ. ಅಲ್ಲಿ ಪುನಃ ಸ್ವಲ್ಪಹೊತ್ತು ನಿದ್ರೆಹೋಗುತ್ತೀರಿ ವಿಷಯಿಯಾದ ನೀವು ಪುನಃ ನಿದ್ರೆ ಯಲ್ಲಿ ಅಡಗುತ್ತೀರಿ. ನಿಮ್ಮ ವಿಷಯವಾದ ಹೃಷೀಕೇಶವು ಹಾಗೆಯೇ ಇರುತ್ತದೆ. ಆದ್ದರಿಂದ ಆ ನಿದ್ರೆಯಿಂದ ನಿಮಗೆ ಕೆಲವು ನಿಮಿಷಗಳಲ್ಲಿಯೇ ಎಚ್ಚರವಾದಂತೆ ತೋರಿ ಹೃಷೀಕೇಶದಿಂದ ಯಾವದೊಂದು ಗ್ರೀಷ್ಮಕಾಲದ ವಿರಾಮಧಾಮಕ್ಕೆ ಹೋಗುತ್ತೀರಿ. ಇಷ್ಟೆಲ್ಲಾ ತೋರುತ್ತಿರುವದು ಬೆಂಗಳೂರಿನಲ್ಲಿ ಮಲಗಿರುವ ನಿಮ್ಮ ಮೂಲನಿದ್ರೆಯಲ್ಲಿಯೇ ಎಂಬದನ್ನು ಮರೆಯಬಾರದು ಆ ಮೊದಲ ನಿದ್ರೆಯು ಹಾಗೆಯೇ—ಮೂಲ ಕನಸಿನಲ್ಲಿ ಅನಂತರದ ಕನಸುಗಳನ್ನು ಕಾಣುತ್ತಾ, ಅವುಗಳಲ್ಲಿ ಆಗಾಗ ಎಚ್ಚರವಾದಂತೆ ಕನಸು ಕಂಡರೂ—(ಆ ಮೂಲ ಬೆಂಗಳೂರ ನಿದ್ರೆಯು) ಮುಂದುವರಿದು ಕೊಂಡೇ ಬಂದಿದೆ ಆ ಕೊನೆಯ ಧಾಮದಲ್ಲಿ ಆನಂದ ಪಡುತ್ತಿರುವ ವಿಷಯಿಯೂ ವಿಷಯವಾದ ಆಧಾಮವೂ ಎರಡೂ ನೀವೇ ಆಗಿದ್ದೀರಿ. ಇವೆರಡೂ ನಿಮ್ಮೊಳಗೇ ತೋರುತ್ತಿವೆ. ಅಲ್ಲಿ ನಿಮ್ಮ ಅರಿವು ಹೊರತು ಬೇರೆ ಯಾವದೂ ಇಲ್ಲ. ಇಷ್ಟೆಲ್ಲಾ ನಿದ್ರೆಗಳೂ ಕನಸುಗಳೂ ಎಚ್ಚರಗಳೂ ಆ ಎಚ್ಚರ ಕನಸುಗಳ ಪ್ರಪಂಚಗಳೂ ನಿಮ್ಮ ಅರಿವಿನಲ್ಲಿ ತೋರುವ ಕೇವಲ ತರಂಗಗಳು. ಅ ಕೊನೆಯ ವಿಶ್ರಾಮಧಾಮದಲ್ಲಿ ಆರಾಮವಾಗಿರುವಾಗ ನಿಮ್ಮ ಬೆಂಗಳೂರಿನ ನೆಂಟರು ಯಾರೋ ಬಂದು, ಬೆಂಗಳೂರಲ್ಲಿ ನಿದ್ರಿಸುತ್ತಿರುವ ನಿಮ್ಮನ್ನು ಎಚ್ಚರಮಾಡುತ್ತಾರೆ. ಆಗ ಕನಸಿನಲ್ಲಿದ್ದ ವಿಷಯಿಯೂ ಅವನ ವಿಷಯವಾಗಿದ್ದ ಕನಸೂ ಎರಡೂ ಹಾರಿಹೋಗುತ್ತವೆ ; ತೋರದಾಗುತ್ತವೆ ಆದರೆ, ಕನಸುಗಳ ಪರಂಪರೆಯನ್ನು ಕಾಣುತ್ತಿದ್ದಾಗ ವಿಷಯಿಯು ಮಾತ್ರ ಅಡಗಿ ವಿಷಯವು ಉಳಿಯುತ್ತಿತ್ತು; ನಿಮಗೆ ನಿಜವಾಗಿ ಎಚ್ಚರವಾಗಿರಲಿಲ್ಲ.

ಈಗ ಈ ದೃಷ್ಟಾಂತವನ್ನು ವಾಸ್ತವ ಜೀವನಕ್ಕೆ ಅನ್ವಯಿಸಿ ನೋಡೋಣ. ವೇದಾಂತದ ಪ್ರಕಾರ, ಈ ವಿಶಾಲವಾದ ಪ್ರಪಂಚವೂ ಒಂದು ಕನಸು. ಈ ಕನಸಿನಲ್ಲಿ ಎಲ್ಲಾ ಕಾಲವೂ ದೇಶವೂ ಕಾರಣ-ಕಾರ್ಯಭಾವವೂ ಹೊರಗೆ ಕಾಣುವ ಎಲ್ಲವೂ ವಿಷಯ ; ನನ್ನ ಶರೀರ, ನನ್ನ ಆತ್ಮ ಎನ್ನುವದೇ ವಿಷಯಿ (ಜ್ಞಾತೃ, ಜೀವ). ಒಬ್ಬ ಸಾಮಾನ್ಯ ಮನುಷ್ಯನು ಸತ್ತಾಗ ಏನಾಗುತ್ತದೆ ? ಮಾಯೆಯು ದೀರ್ಘ ಸ್ವಪ್ನವು ಅಥವಾ ಅಜ್ಞಾನವು ನಾಶವಾಗುವದಿಲ್ಲ ; ಆದರೆ ಹಾಗೆಯೇ ಉಳಿಯುತ್ತದೆ. ಸಾವು ಎಂದರೆ ಕೇವಲ ವಿಷಯಿಯ ಅಡಗುವಿಕೆ ; ಅವನ ವಿಷಯವು ಬದಲಾವಣೆ ಹೊಂದದೆ ಹಾಗೆಯೇ ಇರುತ್ತದೆ. ಆದ್ದರಿಂದ ಒಬ್ಬ ಮನುಷ್ಯನು ಇಲ್ಲಿ ಸತ್ತ ಮೇಲೆ ಪುನಃ ಮತ್ತೊಂದು ಹುಟ್ಟಿನಲ್ಲಿ ಎಚ್ಚರಗೊಳ್ಳುತ್ತಾನೆ. ಅವನು ಸಾಯುವದಕ್ಕೆ ಮುಂಚೆ ಪ್ರೀತಿಸಿದ್ದ ಜಗತ್ತನ್ನೇ ತನ್ನ ಸುತ್ತಲೂ ಕಾಣುತ್ತಾನೆ. ಈ ಎರಡನೆಯ ಜನ್ಮದಲ್ಲಿ ಅವನು 80–90 ವರ್ಷಗಳು ಬದುಕುತ್ತಾನೆಂದು ಇಟ್ಟುಕೊಳ್ಳೋಣ. ಮೊದಲನೆಯ ಜನ್ಮದಲ್ಲಿ ಸತು ಎರಡನೆಯ ಜನ್ಮವನ್ನು ಪಡೆಯುವದಕ್ಕೆ ಮಧ್ಯಕಾಲದಲ್ಲಿ ಅನುಭವಿಸಬಹುದಾದ ಸ್ವರ್ಗನರಕಗಳೂ ಕನಸಿನೊಳಗಿನ ಕನಸುಗಳು ಇದ್ದಂತೆಯೇ. ಎರಡನೆಯ ಜನ್ಮವು ದೃಷ್ಟಾಂತದಲ್ಲಿಯ ಮದ್ರಾಸ್ ಅಥವಾ ಡೆಲ್ಲಿ ಇದ್ದಂತೆ, ವಿಷಯವು ಹಾಗೆಯೇ ಉಳಿದು, ವಿಷಯಿಯು ಮಾತ್ರ ಕೆಲವು ಕಾಲ ಅಡಗಿರುತ್ತಾನೆ, ಪುನಃ ಮೂರನೆಯ ಜನ್ಮದಲ್ಲಿ ಅವನು 70–80 ವರ್ಷಗಳು ಬದುಕಿ ಮತ್ತೆ ಸಾಯುತ್ತಾನೆ ಉದಾಹರಣೆಯಲ್ಲಿಯ ಹೃಷೀಕೇಶದಂತೆ ವಿಷಯವು ಹಾಗೆಯೇ ಉಳಿಯುತ್ತದೆ, ವಿಷಯಿಯು ಮಾತ್ರ ಕೆಲವು ಕಾಲ ಅಡಗಿದ್ದು ಪುನಃ ಮತ್ತೊಂದು ಜನ್ಮದಲ್ಲಿ ತೋರಿಕೊಳ್ಳುತ್ತಾನೆ. ಇದೇ ರೀತಿಯಲ್ಲಿ ವಿಷಯಿ ಮತ್ತು ವಿಷಯ ಎರಡೂ ಒಟ್ಟಿಗೇ ಅಡಗುವವರೆಗೂ ಜನನ ಮರಣಗಳು ಒಂದರ ಮೇಲೊಂದು ತಪ್ಪದೇ ಬರುತ್ತಲೇ ಇರುತ್ತವೆ. ಎಲ್ಲಿಯ ವರೆಗೆ ಪ್ರಪಂಚವು ನಿಮ್ಮಿಂದ ಬೇರೆಯಾಗಿ ನಿಮಗೆ ತೋರುತ್ತಿದೆಯೋ ಅಲ್ಲಿಯುವರೆಗೆ ಈ ಪ್ರಪಂಚದಲ್ಲಿ ನೀವು ಸೆರೆಯಾಳೇ ಸರಿ. ನಿಲುಗಡೆಯಿಲ್ಲದೆ ತಿರುಗುತ್ತಿರುವ ಜನನ-ಮರಣಗಳೆಂಬ ಈ ಭವ ಚಕ್ರಕ್ಕೆ ನೀವು ಯಾವಾಗಲೂ ಕಟ್ಟುಬಿದ್ದೇ ಇರುತ್ತೀರಿ. ಒಮ್ಮೆ ನಿಮ್ಮನ್ನು ಕೆಳಗೆ ತುಳಿದು ನುಗ್ಗುಬಡಿದು, ಇನ್ನೊಮ್ಮೆ ಮೇಲಕ್ಕೆತ್ತಿ ಹಿರಿಹಿಗ್ಗುವಂತೆ ಮಾಡಿ ಮತ್ತೊಮ್ಮೆ ಕೆಳಗೆಸೆದು ಸದೆ ಬಡಿದು ನಿಮ್ಮನ್ನು ಗೋಳುಗುಟ್ಟಿಸುತ್ತಾ ಸಂಸಾರ ಚಕ್ರವು ಎಡೆ ಬಿಡದೆ ನಿಮ್ಮನ್ನು ಸುತ್ತಿಸುತ್ತಲೇ ಇರುತ್ತದೆ. ನಿಮಗೆಂದಿಗೂ–ಈ ಭ್ರಮಣೆಯಲ್ಲಿ–ವಿಶ್ರಾಂತಿಯಾಗಲೀ ಶಾಂತಿಯಾಗಲೀ ದೊರಕುವುದಿಲ್ಲ

ಈಗ ವೇದಾಂತವು ಹೇಳುವದೇನೆಂದರೆ, ಈ ಭವಚಕ್ರದಿಂದ ಬಿಡುಗಡೆ

ಹೊಂದಿರುವ ಮುಕ್ತಾತ್ಮನು ವಿಷಯಿಯನ್ನೂ ವಿಷಯವನ್ನೂ ತನ್ನಲ್ಲಿಯೇ ಕಾಣು ತ್ತಾನೆ. ಡಾಕ್ಟರ್ ಜಾನ್‌ಸನ್ನಿನಂತೆ ಎಚ್ಚರಗೊಂಡು, ಈ ಮಾಯಾ ಸ್ವಪ್ನದ ವಿಷಯಿಯೂ ಮತ್ತು ವಿಷಯವೂ ಎರಡೂ ನಾವೇ ಎಂದು ಅರಿತಾಗ ನಾವು ಮುಕ್ತರಾಗುತ್ತೇವೆ. ಈ ಪ್ರಪಂಚವು **ನನ್ನ** ಶರೀರ. ಯಾರು, ಇಡೀ ವಿಶ್ವವೇ **ನನ್ನ** ಶರೀರ, ಎನ್ನ ಬಲ್ಲನೋ ಅವನೇ ಜನನ-ಮರಣಗಳಿಂದ ಬಿಡುಗಡೆ ಹೊಂದುತ್ತಾನೆ. ಅವನು ಎಲ್ಲಿಗೆ ಹೋಗಬೇಕು ? ಎಲ್ಲಿಗೆ ಬರಬೇಕು ? ಆಗಲೇ-ಮೊದಲೇ-ಅವನು ತುಂಬದಿರುವ ಸ್ಥಳವೇ-ದೇಶವೇ-ಇಲ್ಲ. ಅವನು ಅನಂತವಾದ ಕಾಲ-ದೇಶಗಳನ್ನು ಮೀರಿದ ಅನಂತ. ಅವನು ಬರುವದೆಲ್ಲಿ ? ಹೋಗುವದೆಲ್ಲಿ ? ಇಡೀ ವಿಶ್ವವೇ ಅವನೊಳಗಿದೆ. ಅವನು ಜನನ ಮರಣಗಳಿಂದ ಬಿಡುಗಡೆಹೊಂದಿದ ಮಹಾ ಪ್ರಭುಗಳ ಪ್ರಭು, ಪರಮೇಶ್ವರ, ಇಂಥಾ ಪರಮಾನುಭವವನ್ನು ಪಡೆದು ಇನ್ನೆಂದೂ ಪುನರ್ಜನ್ಮಕ್ಕೆ ವಶವಾಗದೆ, ಪರಮಾತ್ಮಜ್ಞಾನದಲ್ಲಿ ಪೂರ್ಣಸುಖವನ್ನೂ ಪೂರ್ಣಾನಂದವನ್ನೂ ಸವಿದು ಮುಕ್ತನಾಗಬೇಕೆಂಬ ಒಂದೇ ಬಯಕೆಯ ಅಮೃತವನ್ನು ಭಾರತದ ಪ್ರತಿಯೊಂದು ಶಿಶುವೂ ತನ್ನ ತಾಯಿಯ ಮೊಲೆಯ ಹಾಲಿನ ಜೊತೆಗೇ ಸೇವಿಸುತ್ತದೆ.

ಮಿಲ್ಟನ್ ಕವಿಯ ಜೀವನದಲ್ಲಿ ಬಹಳ ಸ್ವಾರಸ್ಯವಾದೊಂದು ಕಥೆಯಿದೆ. ಅದು ಅವನ ಹೆಂಡತಿಗೆ ಸಂಬಂಧಪಟ್ಟದ್ದು, ಅವಳು ಒಮ್ಮೆ ತನ್ನ ಕನಸಿನಲ್ಲಿ ತನ್ನ ಗಂಡನನ್ನು ಕಂಡಳು. ಅವನ ಮೇಲಿನ ಅತಿಪ್ರೇಮದಿಂದ ತನ್ನ ಹೃದಯವು ಅವನೆಡೆಗೆ ತನ್ನೆದೆಯಲ್ಲಿ ಹಾರುತ್ತಿರುವಂತೆ ಆಕೆಗೆ ಅನುಭವವಾಯಿತು ಆ ಕನಸಿನಲ್ಲಿಯೇ ಆಕೆಯು ತನ್ನ ಗಂಡನನ್ನು ಭಾವಾವೇಶದಿಂದ ಬಿಗಿಯಾಗಿ ಅಪ್ಪಿಕೊಂಡು " ಪ್ರಭುವೇ ನಾನು ಪೂರಾ ನಿನ್ನವಳು". ಎಂದು ಉತ್ಕಟವಾದ ಅನುರಾಗದಿಂದ ಕಂಠ ಗದ್ಗದವಾಗಿ ನಿವೇದಿಸುತ್ತಿದಂತೆಯೇ ಆಕೆಗೆ ಬೆಚ್ಚಿಬಿದ್ದಂತಾಗಿ ಎಚ್ಚರವಾಯಿತು ಟಣ್ಣನೆ ನೆಗೆಯಿತು ಆಕೆಯ ನಾಯಿಯು-ಆಕೆಯ ಹೊದಿಕೆಯಿಂದ ಹೊರಗೆ. ಆಕೆಯು ಸಾಕಿದ ಮುದ್ದು ನಾಯಿಯು ಆಕೆಯ ಹಾಸಿಗೆಯ ಮೇಲೆ ನಿತ್ಯವೂ ಮಲಗುತ್ತಿತ್ತು. ಆ ರಾತ್ರಿ, ಅದು ಆಕೆಯ ಹೊದಿಕೆಯೊಳಗೆ ನುಸುಳಿ ಆಕೆಗೆ ತಿಳಿಯದಂತೆ ಆಕೆಯ ಎದೆಗೆ ಒತ್ತೊತ್ತಿ ಮಲಗಿತ್ತು. ಆ ನಾಯಿಯ ಒತ್ತುವಿಕೆಯಿಂದಲೇ ಆಕೆಗೆ ಕನಸಿನಲ್ಲಿ ತನ್ನ ಗಂಡನೇ ಬಂದಿರುವಂತೆಯೂ ಆತನನ್ನು ರಾಗಾವೇಶದಿಂದ ತಾನೇ ಬಿಗಿದಪ್ಪಿ ಕೊಂಡಂತೆಯೂ ಭಾಸವಾಗಿ, ಪಕ್ಕದಲ್ಲಿ ಮಲಗಿದ್ದ ತನ್ನ ನಾಯಿಯನ್ನು ನಿಜವಾಗಿಯೂ ಅಪ್ಪಿಕೊಂಡಳು ಆಕೆಯ ಗಾಢಾಲಿಂಗವನ್ನು ಸಹಿಸಲಾರದೆ ಆ ನಾಯಿಯು ಗಾಬರಿ ಯಾಗಿ ಆಕೆಯ ತೋಳುಗಳ ಬಿಗಿತದಿಂದ ತಪ್ಪಿಸಿಕೊಂಡು ಟಣ್ಣನೆ ಹಾಸಿಗೆಯಿಂದ

ನೆಗೆಯುತ್ತಿದ್ದಾಗ ಆಕೆಗೆ ಎಚ್ಚರವಾಗಿತ್ತು. ಎಚ್ಚರವಾದ ಮೇಲೆ ಆಕೆಯು ಸ್ವಲ್ಪಹೊತ್ತು, ತನ್ನ ಸುಖಸ್ವಪ್ನವನ್ನೂ ಅದಕ್ಕೆ ಕಾರಣವಾಗಿರಬಹುದಾದ ತನ್ನ ನಾಯಿಯ ಕೃತಿಯನ್ನೂ ಅದರಿಂದ ಪ್ರೇರಿತವಾದ ತನ್ನ ತನುಮನಗಳ ಪ್ರತಿಕ್ರಿಯೆಗಳನ್ನೂ ನೆನೆನೆನೆದು ಬಿದ್ದುಬಿದ್ದು ನಕ್ಕಿರಬೇಕು. ಆದರೆ ಆ ನಾಯಿಯು ತನ್ನ ಮೈಯಿಂದ ಆಕೆಯ ಎದೆಯನ್ನು ಇನ್ನೂ ಹೆಚ್ಚಾಗಿ ಒತ್ತಿದ್ದರೆ, ಆಕೆಗೆ ಎದೆಯ ಮೇಲೆ ಮಹತ್ತಾದ ಹಿಮಾಲಯದ ಭಾರವೇ ಬಿದ್ದಿರುವಂತೆ ಭೀಕರ ಸ್ವಪ್ನ ಬೀಳಬಹುದಾಗಿತ್ತು. ಹಾಗಲ್ಲದೆ ನಾಯಿಯು ತಿಳಿಯದೆ ಹಿತಮಿತವಾಗಿ ಒತ್ತಿದ್ದರಿಂದ ಆಕೆಗೆ ಹಿತವಾದ ಸ್ವಪ್ನವೇ ಕಂಡಿರಬೇಕು.

ವೇದಾಂತವು ಹೇಳುವದೇನೆಂದರೆ, ಎಲ್ಲಿಯ ವರೆಗೆ ಅಜ್ಞಾನವೆಂಬ ನಾಯಿಯು ಅಥವಾ ಮಾಯೆಯೆಂಬ ನಾಯಿಯು ನಿಮ್ಮನ್ನು ಕೆಳಗೆ ಒತ್ತುತ್ತಿದೆಯೋ ಅಲ್ಲಿಯ ವರೆಗೆ ನಿಮ್ಮ ಕನಸುಗಳು ಒಳ್ಳೆಯದರಿಂದ ಕೆಟ್ಟದ್ದಕ್ಕೂ ಕೆಟ್ಟದ್ದರಿಂದ ಒಳ್ಳೆಯದಕ್ಕೂ ಬಿಡುವಿಲ್ಲದೆ ಬದಲಾಯಿಸುತ್ತಲೇ ಇರುತ್ತವೆ; ಕೆಲವು ಸಮಯ ಪ್ರಿಯನಾದ ಗಂಡನು (ಅಥವಾ ಹೆಂಡತಿ) ಹಿತವಾಗಿಯೂ, ಕೆಲವು ಸಮಯ ಭಯಂಕರವಾದ ಹಿಮಾಲಯವು ಪ್ರಾಣ ಹಿಂಡುವಂತೆಯೂ ನಿಮ್ಮನ್ನು ಒತ್ತುತ್ತಲೇ ಇರುತ್ತವೆ. ನೀವು ಯಾವಾಗಲೂ ಗಡಿಯಾರದ ಲೋಲಕದಂತೆ (Pendulum) ನಗುವಿನಿಂದ ಅಳುವಿಗೂ ಅಳುವಿನಿಂದ ನಗುವಿಗೂ ಡೋಲಾಯಮಾನವಾಗಿ ತೂಗಾಡುತ್ತಲೇ ಇರುತ್ತೀರಿ. ಪ್ರಪಂಚವು ನಿಮ್ಮ ಹೃದಯದ ಮೇಲೆ ಭಾರವಾಗಿ ತೂಗುತ್ತಿರುವದರಿಂದ ನಿಮಗೆ ವಿಶ್ರಾಂತಿಯೇ ಇರುವದಿಲ್ಲ. ವೇದಾಂತ ಹೇಳುವದೇನೆಂದರೆ "ಅಜ್ಞಾನವೆಂಬ ಈ ನಾಯಿಯನ್ನು ಹೊರಗೋಡಿಸಿ; ಸರ್ವಸಮರ್ಥನಾದ ಭಗವಂತನೇ ನೀವೆಂಬದನ್ನು ಅರಿತರೆ ನೀವು ಮುಕ್ತರಾಗುತ್ತೀರಿ "

ಓಂ! ಓಂ! ಓಂ!

## Vedanta and Hypnotism

## ವೇದಾಂತ ಮತ್ತು ವಶ್ಯಸುಪ್ತಿ

"Call one a thief and he will steal" "ಒಬ್ಬನನ್ನು ಕಳ್ಳನೆಂದು ಕರೆದರೆ. ಅವನು ಕದಿಯುತ್ತಾನೆ" ಎಂದು ಎಮರ್‌ಸನ್ ಹೇಳಿದ್ದಾನೆ. ಇದರ ಅರ್ಥವೇನೆಂದರೆ, ಏನಾದರೊಂದು ಸೂಚನೆಯನ್ನು ಮಾಡಿದರೆ, ಅದಕ್ಕೆ ಅನುಗುಣವಾದ ಪರಿಣಾಮವನ್ನು ಕೃತಿಯಲ್ಲಿ ಕಾಣಬಹುದು,—ಎಂದು ಈ ಮಾತು ಕೆಲವು ಸಂದರ್ಭದಲ್ಲಿ ಮಾತ್ರ ನಿಜ, ಎಲ್ಲಾ ಸಂದರ್ಭಗಳಲ್ಲಿಯೂ ಅಲ್ಲ. ಒಂದು ಸೂಚನೆಯು ಕೆಲವು ಸಂದರ್ಭಗಳಲ್ಲಿ ನೇರವಾದ ಪರಿಣಾಮವನ್ನು ಉಂಟು ಮಾಡಬಹುದು ; ಬೇರೆ ಸಂದರ್ಭಗಳಲ್ಲಿ ಅದು ತೀರ ವಿರೋಧವಾದ ಪರಿಣಾಮವನ್ನೇ ಮಾಡಬಹುದು. ಹೀಗೆ ಯಾರು, ಸೂಚನೆಯ ನೇರವಾದ ಅನ್ವಯಸಾಧ್ಯತೆಯ ಮೇಲೆ ಮಿತಿ ಮೀರಿದ ಒತ್ತಾಯವನ್ನು ಇರಿಸುತ್ತಾರೋ ಅವರು ಅರ್ಧಸತ್ಯವನ್ನು ಮಾತ್ರ ಅರಿತವರು. ವೇದಾಂತದ ಪ್ರಕಾರ, ವಿದ್ಯುಚ್ಛಕ್ತಿಯು ಸಂಪರ್ಕವಿಲ್ಲದೆಯೂ (By Induction), ಸಂಪರ್ಕದ ಮೂಲಕವೂ (By Conduction) ಸಾಗಿಸಲ್ಪಡುವಂತೆ, ಸೂಚನೆಗಳೂ ತಮ್ಮ ಪರಿಣಾಮವನ್ನು ಉಂಟುಮಾಡುತ್ತವೆ. ಯಾವ ಸಂದರ್ಭಗಳಲ್ಲಿ ನಮ್ಮ ಸೂಚನೆಯು ಉದ್ದಿಷ್ಟವ್ಯಕ್ತಿಯನ್ನು ನೇರವಾಗಿ ಮುಟ್ಟಬಲ್ಲದೋ ಅಲ್ಲಿ ಪರಿಣಾಮವೂ ಸೂಚನೆಯಂತೆಯೇ ನೇರವಾಗಿಯೂ ಒಂದೇಬಗೆಯಾಗಿಯೂ ಸಮವಾಗಿಯೂ ಇರುತ್ತದೆ. ಇಷ್ಟವ್ಯಕ್ತಿಯ ಭಾವನೆಯೂ ವಿಚಾರವೂ ಸೂಚನೆಕೊಡುವ ಮನುಷ್ಯನಿಗೆ ವಿರೋಧವಾಗಿರುವ ಸಂದರ್ಭಗಳಲ್ಲಿ ಸೂಚನೆಯು ಆ ವ್ಯಕ್ತಿಯ ಕಾರಣ ಶರೀರವನ್ನು ನೇರವಾಗಿ ಮುಟ್ಟುವದಿಲ್ಲವಾದ್ದರಿಂದ ಉದ್ದಿಷ್ಟವಾದ ಪರಿಣಾಮಕ್ಕೆ ಪೂರಾ ವಿರುದ್ಧವಾದ ಪರಿಣಾಮವೇ ಉಂಟಾಗುತ್ತದೆ. ವ್ಯಕ್ತಿಯ ವಿರೋಧಭಾವನೆಗಳೇ ಸೂಚನೆಯ ಸಹಜ ಪ್ರವೃತ್ತಿಗೆ ಅಡ್ಡಿಯಾಗುತ್ತವೆ. This is hypnotism by Induction ಇದನ್ನು ವಿರೋಧ ಪ್ರೇರಕ ವಶ್ಯಸುಪ್ತಿ ಎನ್ನಬಹುದು. The former is hypnotism by conduction ಮೊದಲನೆಯದು ಅನುಕೂಲ ಪ್ರೇರಕ ವಶ್ಯಸುಪ್ತಿ ಎನ್ನಬಹುದು.

ಕಾರಣ ಶರೀರವು, ಮನುಷ್ಯನ ಎಲ್ಲಾ ಸಂಸ್ಕಾರಗಳ ಮತ್ತು ಅಂತರ್ಗತವಾದ ಸುಪ್ತಶಕ್ತಿಗಳ ಗುಪ್ತಪ್ರಜ್ಞೆಯ ಭಂಡಾರವಾಗಿದೆ. (Subconscious store house). ಮನುಷ್ಯನ ಎಲ್ಲಾ ಕಾರ್ಯಗಳೂ ಚಲನವಲನಗಳೂ ವರ್ತನೆಗಳೂ ಸಂದರ್ಭಗಳೂ ಮತ್ತು ಸನ್ನಿವೇಶಗಳೂ ಅವನ ಕಾರಣ ಶರೀರದಲ್ಲಿರುವ ಗುಪ್ತ ಸಾಮಗ್ರಿಗಳ ಕೇವಲ ಕರ್ತೃತ್ವವೇ ಆಗಿರುತ್ತದೆಯಾದ್ದರಿಂದ, ಅದಕ್ಕೆ ಅನುಗುಣ ವಾದ ಪರಿಣಾಮವೇ ನಿಶ್ಚಿತವಾಗಿಯೂ ಉಂಟಾಗುತ್ತದೆ. ಕಾರಣಶರೀರವೇ ಮನುಷ್ಯನ ಮುಖ್ಯವಾದ ತಿರುಳು, ಗರ್ಭ, ಕೇವಲಕೇಂದ್ರ, ರಾಜ, ಅಥವಾ ಅದು ಮನುಷ್ಯನ ಜ್ಞಾತೃನಿಷ್ಠವಾದ ಮನಸ್ಸು (Subjective mind).




C—Causal body
ಕಾರಣಶರೀರ

B - Subtle Body or Mentality and Reason
ಸೂಕ್ಷ್ಮ ಶರೀರ ಅಥವಾ ಮನಸ್ಸು ಮತ್ತು ಬುದ್ಧಿ

A—Physical Body
ಸ್ಥೂಲ ಶರೀರ

ಸ್ಥೂಲಶರೀರವು ಯಾವ ಕಾರ್ಯವನ್ನು ಮಾಡಿದರೂ ಕೂಡಲೇ ಅದು ಮನಶ್ಶಕ್ತಿಯಾಗಿ ಅಥವಾ ಭಾವನೆಯಾಗಿ ಪರಿವರ್ತನೆಹೊಂದುತ್ತದೆ. ಮತ್ತು ಅದು ಮನೋಭೂಮಿಕೆಯಲ್ಲಿ (B) ಕೆಲವು ಕಾಲವಿದ್ದು ಕಾರಣಶರೀರಕ್ಕೆ (C) ಹೋಗುತ್ತದೆ. ಯಾವ ಯಾವ ಭಾವನೆಗಳು ಸ್ಥೂಲದೇಹದ ಕಾರ್ಯವಾಗಿ, ಸ್ಥೂಲ ಪ್ರಪಂಚದಿಂದ ಬಾರದೆ, ತಮ್ಮಷ್ಟಕ್ಕೆ ತಾವೇ ಸ್ವಾಭಾವಿಕವಾಗಿ ಮನೋಭೂಮಿಕೆಯಲ್ಲಿ ತೋರಿಕೊಳ್ಳುತ್ತವೆಯೋ ಆ ಎಲ್ಲವೂ ಸುಮ್ಮನೆ ಕಾರಣ ಶರೀರದಲ್ಲಿರುವ ಹಳೆಯ ಸಂಚಿತಶಕ್ತಿಯೇ ಕೆಳಗಿನ ಮನೋಭೂಮಿಕೆಯಲ್ಲಿ (B) ತೋರಿಕೊಳ್ಳುವ ರೂಪವಾಗಿವೆ. ಸ್ಥೂಲ, ಸೂಕ್ಷ್ಮ, ಕಾರಣವೆಂಬ ಈ ಮೂರು ಶರೀರಗಳ ಸಂಬಂಧವು ಗಾಳಿಗೂ ನೀರಿಗೂ ಆವಿಗೂ ಇರುವ ಸಂಬಂಧದಂತೆ ಇದೆ; ಅಥವಾ ಹಿಮಾಲಯ ಪರ್ವತದ ಮಂಜು, ಪರ್ವತ ಪ್ರವಾಹ, ಮತ್ತು ಮೈದಾನದಲ್ಲಿ ಹರಿಯುವ ಅದೇ ಪ್ರವಾಹ ಇವುಗಳ ಸಂಬಂಧದಂತೆ ಇದೆ.

ರಸ್ತೆಯ ಮೇಲೆ ಒಬ್ಬ ರೋಗಿಯು ಮಲಗಿರುತ್ತಾನೆಂದು ಇಟ್ಟುಕೊಳ್ಳೋಣ. ಸಹಜ ಪ್ರೇಮದಿಂದ ನೀವು ಅವನಿಗೆ ಸಹಾಯಮಾಡುವದಕ್ಕಾಗಿ ಹೋಗಿ, ಅವನ ಆವಶ್ಯಕತೆಗಳನ್ನೆಲ್ಲಾ ಪೂರಯಿಸಿ, ಸಾಧ್ಯವಾದಷ್ಟು ಚಿಕಿತ್ಸೆ-ಉಪಚಾರ ಮೊದಲಾದ ವುಗಳಿಂದ ಅವನ ನೋವನ್ನೂ ಸಂಕಟವನ್ನೂ ಕಡಿಮೆಮಾಡುತ್ತೀರಿ. ಅವನ ಶುಶ್ರೂಷೆ ಮಾಡುವದರಲ್ಲಿ ನಿಮ್ಮ ಎಲ್ಲಾ ಇಂದ್ರಿಯಗಳೂ ಅವಯವಗಳೂ ಆಸಕ್ತವಾಗಿರುವದರಿಂದ ಆ ಸಮಯದಲ್ಲಿ ನೀವು ಮಾಡಿದ ಆ ಸತ್ಕೃತಿಯ ವಿಚಾರ ವಾಗಿ ಆಲೋಚಿಸುವದಕ್ಕೆ ಅವಕಾಶವಿರುವದಿಲ್ಲ. ಆದರೆ ಆ ಕಾರ್ಯವು ಮುಗಿದು ನಿಮ್ಮ ಶರೀರೇಂದ್ರಿಯಗಳಿಗೆ ವಿರಾಮವು ಸಿಕ್ಕಾಗ, ಮೊದಲು ಇಂದ್ರಿಯ ಭೂಮಿಕೆ ಯಲ್ಲಿ ವ್ಯಾಪಾರ ಮಾಡುತ್ತಿದ್ದ ನಿಮ್ಮ ಶಕ್ತಿಯೂ ಕಾರ್ಯ ತತ್ಪರತೆಯೂ ಹೊರಗಿನ ಭೌತಿಕ (A) ಭೂಮಿಕೆಯಿಂದ ಮನೋ (B) ಭೂಮಿಕೆಯೊಳಗೆ ಸಾಗುವದನ್ನು ಸಹಜವಾಗಿ ಕಾಣುತ್ತೀರಿ. ನೀವು ಮಾಡಿದ ಸೇವಾಕಾರ್ಯದ ಧಾರ್ಮಿಕತೆಯನ್ನೂ ಪುಣ್ಯವನ್ನೂ ಆ ರೋಗಿಗೆ ಉಂಟಾದ ಕಷ್ಟ ಪರಿಹಾರವನ್ನೂ ಕೃತಜ್ಞತೆಯನ್ನೂ ವಿವೇಚನೆ ಮಾಡಿ ಸಂತೋಷ ಪಡುತ್ತೀರಿ; ಮುಂದೆಯೂ ಇಂಥಾ ಪುಣ್ಯಕಾರ್ಯ ಗಳನ್ನೇ ಮಾಡಬೇಕೆಂದು ಸಂಕಲ್ಪಮಾಡುತ್ತೀರಿ. ಕೆಲವು ಕಾಲದ ಮೇಲೆ, ಮಾನಸ ಭೂಮಿಕೆಯಲ್ಲಿ ವ್ಯಾಪಾರಮಾಡುತ್ತಿದ್ದ ಈ ಶಕ್ತಿಯೂ ಶಮನವಾದಂತೆ ಕಾಣುತ್ತದೆ. ಅದು ಎಲ್ಲಿಗೆ ಹೋಗಿರಬಹುದು? ಅದು ಮಾಯವಾಯಿತೆ? ಹಾಗಿರಲಾರದು, ಏಕೆಂದರೆ, ಪ್ರಕೃತಿಯಲ್ಲಿ ಯಾವದೂ ನಾಶವಾಗುವದಿಲ್ಲ. ವೇದಾಂತ ರೀತ್ಯಾ ಈ ಮಾನಸ ಶಕ್ತಿಯು ಅದೃಶ್ಯವಾಗಿ, ಗುಪ್ತಪ್ರಜ್ಞೆಯ ಕಾರಣ ಶರೀರದಲ್ಲಿ (C) ಹೋಗಿ ಸೇರುತ್ತದೆ. ಇದೇ ನಮ್ಮ ಕನಸುಗಳಲ್ಲಿಯೂ ಅಂತರಂಗದ ಭಾವನೆಗಳಲ್ಲಿಯೂ ಒಳಗಿನ ಒಲವುಗಳಲ್ಲಿಯೂ ವಾಸನೆಗಳಲ್ಲಿಯೂ ಪ್ರವೃತ್ತಿಗಳಲ್ಲಿಯೂ ಮಾನಸ ಭೂಮಿಕೆಯ ಮೇಲೆ ತೋರಿಕೊಳ್ಳುತ್ತದೆ. ನಮ್ಮ ವಾಸನೆಗಳಿಗೂ ಸಹಜವಾದ ಒಲವುಗಳಿಗೂ ಕಾರಣವೇನೆಂಬುದನ್ನು ಈ ವಿವರಣೆಯು ವೇದಾಂತ ದೃಷ್ಟಿಯಿಂದ ಯುಕ್ತಿ ಪೂರ್ವಕವಾಗಿ ತಿಳಿಸುತ್ತದೆ.

ಪ್ರಯೋಗ ಪೂರ್ವಕ ಪರೀಕ್ಷೆ, ಸಾಕ್ಷಿ (ರುಜುವಾತು).

ಒಬ್ಬ ಮನುಷ್ಯನ ಕಾರಣಶರೀರವನ್ನು ಎಚ್ಚರದಲ್ಲಿ ಆಗಲೀ ವಶ್ಯಸುಪ್ತಿಯಲ್ಲಿ ಆಗಲೀ ಒಂದು ಸೂಚನೆಯು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಮುಟ್ಟಿದರೆ, ಅದರಿಂದ ಪ್ರೇರಿತವಾದ ಪ್ರವೃತ್ತಿಯು ನಿಯಮಿತವಾದ ಕಾಲದಲ್ಲಿ ನಿಸ್ಸಂದೇಹವಾಗಿ

ಪ್ರಕಟವಾಗುತ್ತದೆ. ಬಾಹ್ಯ ಪ್ರಚೋದನೆಗೆ ಮಾತ್ರ ಗಮನಕೊಡುವ ಗಾಢನಿದ್ರೆಯಂಥ ಸ್ಥಿತಿಯನ್ನು ಒಬ್ಬ ಮನುಷ್ಯನಿಗೆ (ವಶ್ಯಸುಪ್ತಿಯನ್ನು) ಕೃತಕವಾಗಿ ಬರಿಸಿದಾಗ (When a person is hypnotized) " ನೀನು ಎಚ್ಚರವಾದ ಮೇಲೆ ಇಷ್ಟು ಗಂಟೆಗೆ ಸರಿಯಾಗಿ ಇಂಥಾ ಕೆಲಸವನ್ನು ಮಾಡಬೇಕು " ಎಂಬ ಸೂಚನೆಯನ್ನು (Post hypnotic suggestion) ಕೊಟ್ಟರೆ, ಅವನು ಆ ಸ್ಥಿತಿಯಿಂದ ಎಚ್ಚರಗೊಂಡಮೇಲೆ, ಸೂಚಿತವಾದ ಹೊತ್ತಿಗೆ ಸರಿಯಾಗಿ, ಆ ಕಾರ್ಯವನ್ನು ಮಾಡಬೇಕೆಂಬ ಪ್ರಬಲವಾದ ಪ್ರವೃತ್ತಿಯು ಅವನಲ್ಲಿ ತಪ್ಪದೆ ಉಂಟಾಗುತ್ತದೆ. ಆ ಕಾರ್ಯವನ್ನು ಮಾಡುವದಕ್ಕೆ ಕಾರಣಶರೀರವನ್ನು ಪ್ರವೇಶಿಸಿದ ಒಂದು ಸೂಚನೆಯು ಹೇಗೆ ಕಾರಣವಾಯಿತೋ ಹಾಗೆ ಒಬ್ಬ ಮನುಷ್ಯನು ಮಾಡುವ ಎಲ್ಲಾ ಕಾರ್ಯಗಳಿಗೂ ಅವನ ಕಾರಣ ಶರೀರವನ್ನು ಮೊದಲೇ ಪ್ರವೇಶಿಸಿರುವ ಸೂಚನೆಗಳೇ ಕಾರಣವಾಗಿವೆಯೆಂದು ವೇದಾಂತವು ತೋರಿಸಿಕೊಡುತ್ತದೆ. ಆ ಸೂಚನೆಗಳಿಗೆ ಇಂದ್ರಿಯಗಳ ವ್ಯಾಮೋಹ (ಹಿಪ್ನಾಟಿಸಂ) ಕಾರಣವಾಗಿರಬಹುದು ಅಥವಾ ಅಂತರಂಗದ ಸಂಸ್ಕಾರಗಳ ಮೋಹಿತ ಪ್ರೇರಣೆ (ಹಿಪ್ನಾಟಿಸಂ) ಕಾರಣವಿರಬಹುದು, ಅಥವಾ ವೇದಾಂತ ದೃಷ್ಟಿಯಿಂದ ಇಡಿಯ ಜಗತ್ತು ವಶವಾಗಿರುವ ಅಜ್ಞಾನ ಸುಪ್ತಿಯಲ್ಲಿ ಮೋಹದಿಂದ (ಸತ್ಯವೆಂದೂ ಸುಖವೆಂದೂ ಹಿತವೆಂದೂ) ಪಡೆಯಬಹುದಾದ ಯಾವ ಸ್ವಯಂಪ್ರಚೋದನೆ (ಹಿಪ್ನಾಟಿಸಂ) ಆದರೂ ಕಾರಣವಾಗಿರಬಹುದು. "ನೀನು ಪೂರ್ಣಾರೋಗ್ಯದಲ್ಲಿದ್ದಿ" ಎಂದು ಆರೋಗ್ಯದ ಸೂಚನೆಗಳನ್ನು ಕಾರಣ ಶರೀರದಲ್ಲಿ ತುಂಬಿದರೆ ಸ್ಥೂಲ ಶರೀರವು ತಪ್ಪದೇ ಖಂಡಿತ ಆರೋಗ್ಯವಾಗಿರುತ್ತದೆ. " ನೀನೇ ದೇವರು, ನೀನೇ ದೇವರು " ಎಂದು ಕಾರಣ ಶರೀರದಲ್ಲಿ ಪ್ರಬಲವಾದ ಸೂಚನೆಗಳನ್ನು ತುಂಬುತ್ತಿದ್ದರೆ, ಆ ಮನುಷ್ಯನು ದೈವಪ್ರೇರಿತ ಧರ್ಮೋಪದೇಶಕ ಅಥವಾ ಪ್ರವಾದಿ (Prophet) ಆಗುತ್ತಾನೆ. ಇದಕ್ಕೆ ವಿರುದ್ಧವಾಗಿ ದಾಸ್ಯ ಮತ್ತು ದೌರ್ಬಲ್ಯಗಳ ಸೂಚನೆಗಳನ್ನು ಕಾರಣ ಶರೀರದಲ್ಲಿ ತುಂಬುತ್ತಿದ್ದರೆ, ಸ್ಥೂಲ ಭೌತಿಕ ಶರೀರವು ದುರ್ಬಲವೂ ಗುಲಾಮವೂ ಆಗುತ್ತದೆ. ಒಬ್ಬ ಮನುಷ್ಯನ ಸನ್ನಿವೇಶ-ಸಂದರ್ಭಗಳಿಗೂ ಸಹವಾಸ-ಸ್ನೇಹ-ಸಂಬಂಧಗಳಿಗೂ ಅವನ ಕಾರಣ ಶರೀರದಲ್ಲಿ ಅಡಗಿರುವ ಸಂಸ್ಕಾರಗಳೂ ವಾಸನೆಗಳೂ ಕಾರಣವಾದ್ದರಿಂದ ಪ್ರತಿಯೊಬ್ಬನೂ ತನ್ನ ತನ್ನ ವ್ಯಕ್ತಿತ್ವಕ್ಕೂ ಅದೃಷ್ಟಕ್ಕೂ (ಭಾಗ್ಯ-ದೌರ್ಭಾಗ್ಯಗಳಿಗೂ) ತಾನೇ ಶಿಲ್ಪಿಯು, ವಿಧಾತನು.

ನಿದ್ರೆಯಲ್ಲಿ ನಡೆದಾಡುವ ಅಥವಾ ಇತರ ಕೆಲಸಮಾಡುವ (Somnam-

bulistic) ಸ್ಥಿತಿಯಲ್ಲಿರುವ ಅಥವಾ ವಶ್ಯಸುಪ್ತಿಯಮೋಹಿತ ಸ್ಥಿತಿಯಲ್ಲಿರುವ (Hypnotic state) ಒಬ್ಬ ಮನುಷ್ಯನು, ಇತರರಿಗೆ ಸರೋವರವಿಲ್ಲದ ಸ್ಥಳದಲ್ಲಿ ಸರೋವರವನ್ನು ಕಾಣುತ್ತಾನೆ; ಬೇರೆಯವರಿಗೆ ಎಂದೂ ಇಲ್ಲದ ವಸ್ತುಗಳನ್ನು ಅವನು ವಾಸ್ತವವಾಗಿ ಕಾಣುತ್ತಾನೆ. ಈ ಎಲ್ಲಾ ದೃಶ್ಯವಿಲಾಸಗಳಿಗೆ ಅವನ ಸ್ವಂತ ಭ್ರಮೆಯೇ ಕಾರಣ, ಅವನ ಆತ್ಮವೇ ಆಧಾರ. ಹೀಗೆ ವೇದಾಂತ ದೃಷ್ಟಿಯಿಂದ ಒಬ್ಬ ಮನುಷ್ಯನು ಕಾಣುವ ಎಲ್ಲಾ ಪ್ರಪಂಚಕ್ಕೂ ಅವನ ಅನುಭವವೇ ಆಧಾರ, ಅವನ ಆತ್ಮವೇ ಆಧಾರ. ನಿದ್ರಾಸಂಚಾರಿಯ ಅಥವಾ ವಶ್ಯಸುಪ್ತಿಯ ಭ್ರಮಾಜನ್ಯ ದೃಶ್ಯವಿಲಾಸವು (ಭ್ರಮೆಯಿಂದುಂಟಾದ ತೋರಿಕೆಯು) ಕೆಲವು ಕಾಲ ಮಾತ್ರ ಇರುತ್ತದೆ. ಸಾರ್ವತ್ರಿಕವಾದ ಪ್ರಪಂಚ (ದೃಶ್ಯ) ವಿಲಾಸವು ಹೆಚ್ಚು ಕಾಲವಿರುತ್ತದೆ. ಇವೆರಡಕ್ಕೂ ಇಷ್ಟೇ ವ್ಯತ್ಯಾಸ. ಒಬ್ಬ ಮನುಷ್ಯನಲ್ಲಿ ಸುಪ್ತಿಯನ್ನು ಆವಾಹಿಸಿ ಅನೇಕ ಬಗೆಯ ಸೂಚನೆಗಳನ್ನು ಕೊಟ್ಟು, ವ್ಯಾಮೋಹಿತನನ್ನಾಗಿ (Hypnotize) ಮಾಡಿ, ಆವಾಹಿತವಾದ ಭ್ರಮೆಗಳನ್ನು ವಿಸರ್ಜನೆ ಮಾಡುವದಕ್ಕೆ (Dehypnotize) ಮರೆತು ಬಿಟ್ಟರೆ, ಅವನು ಯಾವ ಸ್ಥಿತಿಯಲ್ಲಿರುತ್ತಾನೋ ಅದೇ ಭ್ರಮಾಸ್ಥಿತಿಯಲ್ಲಿ ಇಡೀ ಜಗತ್ತಿನ ಎಲ್ಲಾ ಜನರೂ ಇದ್ದಾರೆ. ಪ್ರಪಂಚದ ಜನರೆಲ್ಲರೂ ಪ್ರಪಂಚವು ಸತ್ಯವೆಂಬ ವಿಲಕ್ಷಣವಾದ ಅಧ್ಯಾರೋಪಿತ ಅಜ್ಞಾನ ನಿದ್ರೆಯ ಮೋಹದಲ್ಲಿ (ಹಿಪ್ನಾಟಿಸಂ) ಒಗೆಯಲ್ಪಟ್ಟಿದ್ದಾರೆ. ಪರಮಾತ್ಮ ಜ್ಞಾನವುಳ್ಳ ಮುಕ್ತ ಮನುಷ್ಯನೊಬ್ಬನು ಬಂದು ಒಬ್ಬೊಬ್ಬರಲ್ಲಿಯೂ ಇರುವ ಆ ಮೋಹವನ್ನು ವಿಸರ್ಜನೆ (ಡಿಹಿಪ್ನೋಟೈಸ್) ಮಾಡಬೇಕು. ಆ ಮಹಾತ್ಮನ ಬ್ರಹ್ಮಜ್ಞಾನದ ಉಪದೇಶದಿಂದ ಜನರು ಎಚ್ಚರಗೊಳ್ಳಬೇಕು. ಮುಕ್ತಾತ್ಮನ ಸಮಾಗಮವಾಗುವದಕ್ಕೇ ಒಬ್ಬೊಬ್ಬನಿಗೂ ಬಹಳ, ಬಹಳ ಕಾಲ ಬೇಕಾಗುತ್ತದೆ. ಯಾವದು ಅತ್ಯಂತ ವಾಸ್ತವವೋ ಮತ್ತು ಯಾವದು ಎಲ್ಲಾ ದೃಶ್ಯವಿಲಾಸಕ್ಕೂ ಆಧಾರವಾಗಿದೆಯೋ ಅದೇ ಸತ್ಯವಾಗಿರಬೇಕು; ಮತ್ತು ಅದರ ಮೇಲೆ ಆರೋಪಿತವಾದುದೆಲ್ಲವೂ (ಕಲ್ಪಿತವಾದುದೆಲ್ಲವೂ) ಸುಪ್ತಿಮೋಹದ ವಿಲಾಸ (Hypnotic Phenomena) ಇರಬೇಕು. ಜಾಗ್ರತ್ತು, ಸ್ವಪ್ನ, ಸುಪ್ತಿ ಮತ್ತು ಆವಾಹಿತ ಸುಪ್ತಿ (Hypnotic state) ಮೊದಲಾದ ಎಲ್ಲಾ ಅವಸ್ಥೆಗಳಲ್ಲಿಯೂ ಕಾರಣ ಶರೀರಕ್ಕೆ ಯಾವದು ಆಧಾರವಾಗಿದೆಯೋ ಅದೇ ನಿಜವಾದ ಆತ್ಮವಾಗಿದೆ. ಅಥವಾ ಒಂದೇ ಆದ ಸತ್ಯವಾಗಿದೆ. ತೋರಿಕೆಯ ಮಿಕ್ಕ ಎಲ್ಲವೂ ಅದರ ಮೇಲೆ ಆರೋಪಿತವಾದುದು; ಇವೆಲ್ಲಾ ಆವಾಹಿತ ಸುಪ್ತಿಯ ಮೋಹವಿಲಾಸವು (Hypnotic Phenomenon) ಈ ಮೋಹದ ಅಸಹಾಯಕ ಸ್ಥಿತಿಯನ್ನು ಕಳೆದುಕೊಳ್ಳುವದೇ ಆತ್ಮಾನುಭವ ಆಧಾರವಾದ ಅಂತಿಮಸತ್ಯದಲ್ಲಿ ಈ ಮೋಹ

ವಿಲಾಸವನ್ನು ಮುಳುಗಿಸಬೇಕು. ಪ್ರಪಂಚದ ಮೋಹಸುಪ್ತಿಯು ಅಥವಾ ಸುಪ್ತಿ ಮೋಹವು, ಶೈಶವದಲ್ಲಿ ತಂದೆ ತಾಯಿಗಳ ಸೂಚನೆಗಳಿಂದಲೂ ಅದಕ್ಕೆ ಪೋಷಕವಾಗಿ ಬೆಳೆದ ಇಂದ್ರಿಯಗಳ ಸೂಚನೆಗಳಿಂದಲೂ ನಮ್ಮನ್ನು ಆವರಿಸಿದೆ ; ಆ ಭ್ರಾಂತಿಯ ಸೂಚನೆಗಳಿಗೆ ವಿರುದ್ಧವಾದ ಸರಿಯಾದ ಸೂಚನೆಗಳಿಂದ ಆ ಮೋಹವು ನಾಶ ವಾಗುತ್ತದೆ.

ಆದರೆ ನಿಜವಾದ ಆತ್ಮನು ಈ ತಪ್ಪುದಾರಿಯನ್ನು ಏಕೆ ಹಿಡಿದನು ?

ಈ ಏಕೆ, ಏತಕ್ಕಾಗಿ ಮೊದಲಾದ ಎಲ್ಲಾ ಕುತೂಹಲಗಳೂ ಚಿಂತಾತಂಕಗಳೂ ಸಂದೇಹಗಳೂ ಸಮಸ್ಯೆಗಳೂ ಎಲ್ಲಾ ಆ ಮೋಹದ–ಹಿಪ್ನಾಟಿಸಂನ–ಫಲವೇ ಆಗಿವೆ ; ಅವೆಲ್ಲಾ ನಿಜವಾದ ಕಾರಣವಾದ ಅಜ್ಞಾನ–ಮೋಹಗಳ ಮರಿಗಳೇ ಆಗಿವೆ. ಈ ಪ್ರಶ್ನೆಯನ್ನು ಹಾಕುವುದೆಂದರೆ, ಕಾರ್ಯದ ಮೂಲಕ ಕಾರಣವನ್ನು ಸ್ವಾಧೀನಪಡಿಸಿ ಕೊಳ್ಳುವ ಹಾರೈಕೆಯೂ ಭರವಸೆಯೂ ಆಗುತ್ತದೆ. ಇದು ಹೇಗಾಗುವದೆಂದರೆ, ತಂದೆ–ತಾಯಿಗಳ ಲಗ್ನದಲ್ಲಿ ಅವರ ಮಗುವು ಅವರಿಗೆ ಆರತಿಯೆತ್ತಬೇಕೆಂದು ಹಾರೈಸಿದಂತೆ ಆಗುವದು ; ಅಥವಾ ತಂದೆಯು ಹುಟ್ಟಿದಾಗ ಅವನ ಮಗಳೇ ಅವನಿಗೆ ಸ್ತನ್ಯಪಾನ ಮಾಡಿಸಬೇಕೆಂದು ಹಂಬಲಿಸಿದಂತೆ ಆಗುತ್ತದೆ. ಇದು ಏಕೆ ? ಇದು ಏಕೆ ? ಎಂದು ಕೇಳುತ್ತಿರುವ ಗೀಳೂ ಈ ಎಲ್ಲಾ ಪ್ರಶ್ನೆಮಾಡುವ ಪೃಚ್ಛಕ ಪ್ರವೃತ್ತಿಯೂ ಚಾಳಿಯೂ ವಿರೋಧ ಸೂಚಕ ಮೋಹದ ಅಥವಾ ವಿರೋಧ ಪ್ರೇರಕ ಮೋಹದ (Inductive hypnotic state) ಅಭಿವ್ಯಕ್ತಿಯೇ ಆಗಿದೆ. ನಿರ್ಮೋಹ ವಾದ ಸ್ಥಿತಿಯಲ್ಲಿ (Dehypnotised state) ಈ ಪ್ರಶ್ನೆಗಳೊಂದೂ ಇರುವದಿಲ್ಲ. ನಿಜವಾದ ಮೂಲಸ್ಥಿತಿಯಲ್ಲಿ ಇದು ಯಾವದೂ ಇಲ್ಲ ; ಯಾವ ಪ್ರಶ್ನೆಯೂ ಏಳುವದೇ ಇಲ್ಲ ; ಏಳಲು ಸಾಧ್ಯವೂ ಇಲ್ಲ. ಈ ಎಲ್ಲಾ ಕಾರಣ–ಕಾರ್ಯ ಪರಂಪರೆಯ ಸರಪಳಿಯೂ ಒಂದು ಹರಕು ಕಾಗದದ ಮೇಲೆ ಎಳೆದಿರುವ ತುದಿ ಮೊದಲಿಲ್ಲದ ಸುತ್ತಿನ ಸುರುಳಿ ಈ ಸರಪಳಿಗೆ ಎಂದಿಗೂ ನಿಲುಗಡೆಯಿಲ್ಲ. ಇದು ವೃತ್ತ ವೃತ್ತವಾಗಿ ಸುತ್ತುತ್ತಲೇ ಇರುತ್ತದೆ. ಆದರೆ ಸರ್ವಾಧಾರವಾದ ಆ ಒಂದು ಸತ್ಯವು ಈ ಎಲ್ಲಾ ಸುರುಳಿ ಸುತ್ತಿನ ಪರಿಭ್ರಮಣಕ್ಕೂ ಆ ಕಾಗದದ ಚೂರಿನಂತೆ ಆಧಾರವಾಗಿದೆ. ಆ ಸತ್ಯವು ಈ ಸರಪಳಿಯನ್ನು ಮೀರಿ ದೂರವಾಗಿದೆ. ಆದ್ದರಿಂದ ಏಕೆ, ಏತಕ್ಕಾಗಿ ಮೊದಲಾದ ಪ್ರಶ್ನೆಗಳನ್ನು ಹಾಕುವದೆಂದರೆ, ಆ ಕಾಗದವು, ಆ ಸುರುಳಿಯ ಹೊರಸುತ್ತು, ಒಳಸುತ್ತುಗಳ ಪರಿಭ್ರಮಣಗಳಲ್ಲಿ (Inallthe Convolutions, involutions and revolutions of the spiral)

ಎಲ್ಲೆಡೆಯಲ್ಲಿಯೂ ಇರಲಿಲ್ಲವೆಂಬಂತೆ, ಅದನ್ನು ಆ ಸುರಳಿಯ ಈ ತುದಿಯಲ್ಲಿಯೋ ಆ ತುದಿಯಲ್ಲಿಯೋ ಮಾತ್ರ ಇಡಬೇಕೆಂಬ ಹುಚ್ಚು ಸಾಹಸದಂತೆ ಆಗುತ್ತದೆ.

So Rama's command to the whole world is not to think yourself to be involved in the chain or in the spiral or in the coils of the snake. Feel, feel and realize yourself to be the controller, governor and master of the coils of the snake, and you are sure to be above causation. Verily-verily

" ಆದ್ದರಿಂದ ಇಡೀ ಜಗತ್ತಿಗೆ ರಾಮನ ಆಜ್ಞೆ ಏನೆಂದರೆ, ನೀವು ಕಾರ್ಯ-ಕಾರಣಗಳ ಸರಪಳಿಯಲ್ಲಿ ಅಥವಾ ಅದರ ಸುರಳಿಯಲ್ಲಿ ಅಥವಾ ಆ ಸರ್ಪನ ನಿಡು ಸಿಂಬಿಗಳಲ್ಲಿ ಸಿಕ್ಕಿಕೊಂಡಿರುವದಾಗಿ ಭಾವಿಸಬೇಡಿ. ಆ ಸರ್ಪನ ಸುರಳಿಗಳ ನಿಯಂತ್ರಗಳೂ ಶಾಸಕರೂ ನಿಯಾಮಕರೂ ಪ್ರಭುಗಳೂ ನೀವೇ ಎಂದು ಭಾವಿಸಿರಿ, ಭಾವಿಸಿರಿ, ಅರಿಯಿರಿ, ಅನುಭವ ಪಡೆಯಿರಿ ಹೀಗಾದರೆ, ನೀವು ಕೊನೆ ಮೊದಲಿಲ್ಲದ ಕಾರಣ-ಕಾರ್ಯಗಳ ಚಕ್ರ ಪರಿಭ್ರಮಣೆಯನ್ನು ನಿಶ್ಚಿತವಾಗಿಯೂ ಮೀರುತ್ತೀರಿ. ನಿಜವಾಗಿಯೂ, ಖಂಡಿತವಾಗಿಯೂ.

ಓಂ ! ಓಂ ! ಓಂ !

## Vedanta and Socialism

# ವೇದಾಂತ ಮತ್ತು ಸಮಾಜಸ್ವಾಮ್ಯವಾದ

ಮೊಟ್ಟಮೊದಲು, 'ಸೋಷಿಯಾಲಿಸಂ' ಎಂಬ ಹೆಸರಿನ ವಿಷಯದಲ್ಲಿ, ರಾಮನು ಅದನ್ನು "Individualism" – ಇಂಡಿವಿಡ್ಯುಆಲಿಸಂ - ವ್ಯಕ್ತಿ (ಸ್ವಾತಂತ್ರ್ಯ) ವಾದವೆಂದು ಕರೆಯಲು ಹೆಚ್ಚು ಇಷ್ಟಪಡುತ್ತಾನೆ ಸೋಷಿಯಾಲಿಸಂ ಎಂಬ ಶಬ್ದವು ಸಮಾಜದ ಆಳಿಕೆಯ-ಪ್ರಭುತ್ವದ-ಭಾವನೆಗೆ ಪ್ರಾಧಾನ್ಯ ಕೊಡುತ್ತದೆ. ಅದು, ವ್ಯಕ್ತಿಸ್ವಾತಂತ್ರ್ಯವು ಸಮಾಜದ ಹಿತಕ್ಕೆ ಸಂಪೂರ್ಣವಾಗಿ ಅಧೀನವಾಗಿರಬೇಕೆಂಬ ವಾದ; ಮತ್ತು ಆ ವಾದದಿಂದ ಬಂದ ಸಿದ್ಧಾಂತಗಳು; ಉತ್ಪತ್ತಿಸಾಧನಗಳು, ಬಂಡವಾಳ, ಭೂಮಿ, ಆಸ್ತಿ ಮೊದಲಾದವನ್ನು ಒಟ್ಟು ಸಮಾಜವಾಗಲೀ ಅದರ ಪರವಾಗಿ ಸರಕಾರವಾಗಲಿ ವಹಿಸಿಕೊಂಡು, ಅದು ಅವನ್ನು ಸಮಾಜದ ಎಲ್ಲರ ಹಿತಾರ್ಥವಾಗಿ ಹಂಚಿ ನಿರ್ವಹಿಸಬೇಕು ಎಂಬ ವಾದ. ಇದು ಸಮಾಜಸ್ವಾಮ್ಯವಾದ ಅಥವಾ ಸಮಷ್ಟಿ (ಸ್ವಾಮ್ಯ) ವಾದ. ಕಾರ್ಖಾನೆ, ವ್ಯಾಪಾರ, ಮೊದಲಾದವುಗಳಲ್ಲಿ ಸ್ಪರ್ಧೆಗೆ ಬದಲು ಸಹಕಾರಪದ್ಧತಿ, ಭೂಮಿ ಬಂಡವಾಳಗಳಲ್ಲಿ ರಾಷ್ಟ್ರಸ್ವಾಮ್ಯ, ಉತ್ಪನ್ನಗಳನ್ನು ರಾಷ್ಟ್ರವೇ ಹಂಚುವದು, ಮಕ್ಕಳಿಗೆ ಉಚಿತ ವಿದ್ಯಾಭ್ಯಾಸ ಮತ್ತು ಉಚಿತ ಭೋಜನ, ಪಿತ್ರಾರ್ಜಿತವಾದ ಹಕ್ಕನ್ನು ರದ್ದುಗೊಳಿಸುವದು, ಇವೇ ಮೊದಲಾದವು ಸಮಾಜವಾದದ ಕಾರ್ಯನೀತಿಗಳು. ಆದರೆ ರಾಮನು ಹೇಳುವದೇನೆಂದರೆ, ಇಡೀ ಜಗತ್ತಿನ, ಸಮಸ್ತ ವಿಶ್ವದ ಎದುರಾಗಿ ವ್ಯಕ್ತಿಯ ಪರಮಾಧಿಕಾರವನ್ನು—ಪಾರಮ್ಯವನ್ನು ಸಾಧಿಸುವದೇ, ಒತ್ತಾಯಪಡಿಸುವದೇ, ಸತ್ಯದ ಸರಿಯಾದ ಮನೋಭಾವ, ನಿಜವಾದ ಚೈತನ್ಯ, ಚೇತನ ಶಕ್ತಿ ಸರಿಯಾದ ಸತ್ತ್ವ. ಇದರಿಂದ ಏನೂ ಕ್ಲೇಶವಿಲ್ಲ, ತೊಂದರೆಯಿಲ್ಲ, ಚಿಂತೆಯಿಲ್ಲ. ಇದನ್ನೇ ರಾಮನು ವ್ಯಕ್ತಿ (ಸ್ವಾತಂತ್ರ್ಯ) ವಾದ ಎನ್ನುವದು. ಜನರಿಗೆ ಬೇಕಾದರೆ ಇದನ್ನೇ ಸೋಷಿಯಾಲಿಸಂ-ಸಮಾಜವಾದ ಎಂದು ಕರೆದುಕೊಳ್ಳಲಿ ವ್ಯಕ್ತಿಯ ನಿಲುಮೆಯಿಂದ ಇದನ್ನೇ ವೇದಾಂತವು ಉಪದೇಶಿಸುತ್ತದೆ.

ಸಮಾಜವಾದವೆನ್ನುವದರ ಗುರಿಯು ಬಂಡವಾಳವಾದವನ್ನು ಸುಮ್ಮನೆ ಕೆಳಗೆ

ತರುವದೇ ಆಗಿದೆ. ಅಷ್ಟರವರೆಗೆ ಅದು ವೇದಾಂತದ ಗುರಿಯೇ ಆಗಿದೆ ಅದು ಸುಮ್ಮನೆ. ನಿಮ್ಮ ಎಲ್ಲಾ ಸ್ವಾಮಿತ್ವದ ಭಾವನೆಯನ್ನೂ ನಿಮ್ಮಿಂದ ಕಳಚುವದೇ ಸುಲಿಯುವದೇ ಆಗಿದೆ; ಅದು ನಿಮ್ಮ ಎಲ್ಲಾ ಆಸ್ತಿಪಾಸ್ತಿಗಳ, ಸಂಗ್ರಹಗಳ, ಸ್ವಾರ್ಥಪರವಾದ ಸಂಪತ್ತಿನ ಭಾವನೆಯನ್ನೂ ಗಾಳಿಗೆ ತೂರಿ ನಿಮ್ಮನ್ನು (ಬರಿ ಬೆತ್ತಲೆ) ನಿಸ್ವಾರ್ಥಿಗಳನ್ನಾಗಿ ಮಾಡುವದಾಗಿದೆ. ಇದೇ ವೇದಾಂತ, ಇದೇ ಸಮಾಜವಾದ. ಎರಡರ ಗುರಿಗಳೂ ಒಂದೇ.

ವೇದಾಂತವು ಸಮತೆಯನ್ನೂ ಸಮಾನತೆಯನ್ನೂ ಉಪದೇಶಿಸುತ್ತವೆ. ನಿಜವಾದ ಸಮಾಜವಾದದ ಗುರಿಯೂ ಇದೇ ಇರಬೇಕು. ಅದರಲ್ಲಿ ಹೊರಗಿನ ಯಾವ ಆಸ್ತಿಗೂ ಸ್ವತ್ತಿಗೂ ಸ್ವಾಮ್ಯಕ್ಕೂ ಆದರವಾಗಲೀ ಗೌರವವಾಗಲೀ ಗಣನೆಯಾಗಲೀ ಇರಬಾರದು. ಇದು ನಿಜವಾಗಿಯೂ ಭಯಂಕರವಾಗಿಯೂ ಬಹಳ ಉಗ್ರವಾಗಿಯೂ ತೋರುತ್ತದೆ. ಆದರೆ, ಒಬ್ಬ ಮನುಷ್ಯನು ಸ್ವತ್ತು, ಸಂಪತ್ತು. ಸ್ವಾಮಿತ್ವ, ಒಡೆತನ, ಆಸ್ತಿ, ಸ್ವಾರ್ಥಸಂಗ್ರಹಣೆ ಮೊದಲಾದ ಎಲ್ಲಾ ಭಾವನೆಗಳನ್ನೂ (All sense of property and possessions) ಅವುಗಳಲ್ಲಿ ಅಂಟಿಕೊಂಡಿರುವದನ್ನೂ ಆಸಕ್ತಿಯನ್ನೂ ಬಿಟ್ಟಹೊರತು ಅವನು ಭೂಮಿಯ ಮೇಲೆ ಎಂದೂ ಸುಖವನ್ನು ಕಾಣುವದು ಸಾಧ್ಯವಲ್ಲ. ಮನುಷ್ಯನು ಇದನ್ನೆಲ್ಲಾ ಸುಮ್ಮನೆ ಬಿಟ್ಟುಬಿಡಬೇಕೆಂದು ಸಮಾಜವಾದವು ಹೇಳುತ್ತದೆ. ಆದರೆ ಹೀಗೆ ಮಾಡುವದಕ್ಕೆ ಕಾರಣವೇನು ? ಅಗತ್ಯವೇನು ? ಪ್ರಯೋಜನವೇನು ? ಎನ್ನುವದನ್ನು ವೇದಾಂತವು ಮಹತ್ತಾದ ವಿಚಾರಪೂರ್ವಕವಾಗಿ ಬೋಧಿಸುತ್ತದೆ. ಸಮಾಜವಾದವೆನ್ನುವದು ಪ್ರಪಂಚ ವಸ್ತು–ವಿದ್ಯಮಾನ–ವ್ಯವಹಾರಗಳ ಕೇವಲ ಮೇಲ್ಮೈಯ ವ್ಯಾಸಂಗವಾಗಿದೆ. ಇದರಿಂದ, ಮಾನವ ಜನಾಂಗವು ಪರಸ್ಪರ ಸಮಾನ ಭಾವ (Terms of Equality) ಸಹೋದರಭಾವ (Fraternity) ಮತ್ತು ಪ್ರೇಮಭಾವ (Love) ಇವುಗಳಿಂದ ಜೀವಿಸಬೇಕು—ಎಂಬ ಸಿದ್ಧಾಂತಕ್ಕೆ ಬರುತ್ತದೆ. ವೇದಾಂತವು ಪ್ರಪಂಚ ವಿಲಾಸವನ್ನು ಸ್ವಾಭಾವಿಕವೂ ಸ್ಥಳೀಯವೂ ಆದ ದೃಷ್ಟಿಯಿಂದ ಪರಿಶೀಲಿಸುತ್ತದೆ. ವೇದಾಂತದ ಪ್ರಕಾರ ಯಾವ ವೈಯಕ್ತಿಕ ಆಸ್ತಿಯ ಒಡೆತನವಾದರೂ ಅಂತರಾತ್ಮನ ವಿರುದ್ಧವಾಗಿ ನಡೆಸಬಹುದಾದಂಥ ಅತ್ಯಂತ ದೈವದ್ರೋಹಕರವಾದ ಭ್ರಷ್ಟಾಚಾರವೇ ಆಗಿದೆ. ವೇದಾಂತದ ದೃಷ್ಟಿಯಿಂದ, ಮನುಷ್ಯನಿಗಿರುವ ಒಂದೇ ಅಧಿಕಾರವೆಂದರೆ ಕೊಡುವದು, ಕೊಡುತ್ತಿರುವದು. ಕ್ರೀಳಂವ ಅಧಿಕಾರ ಅವನಿಗಿಲ್ಲ. ಕೊಡುವದಕ್ಕೆ ನಿಮ್ಮಲ್ಲಿ ಏನೂ ಇಲ್ಲವಾದರೆ, ಕಿಮಿಕೀಟಗಳು ತಿನ್ನುವದಕ್ಕೆ ನಿಮ್ಮ ದೇಹವನ್ನಾದರೂ ಕೊಡಿ. ನೀವು ಕೊಡುವ

ವಸ್ತುವಿಗೆ ಬೆಲೆಯಿಲ್ಲ. ನೀವು ಇಟ್ಟುಕೊಂಡಿರುವ ವಸ್ತುಗಳಿಗಾಗಿ ಯಾರೂ ನಿಮ್ಮನ್ನು ಐಶ್ವರ್ಯವಂತರೆನ್ನುವದಿಲ್ಲ. ನೀವು ಎಷ್ಟು ಕೊಡುತ್ತೀರೋ ಅಷ್ಟು ಐಶ್ವರ್ಯವಂತರಾಗುತ್ತೀರಿ ಪ್ರತಿಯೊಬ್ಬನೂ ಕೆಲಸಮಾಡಬೇಕಾದುದು ದುಡಿದುದನ್ನೆಲ್ಲಾ ಕೊಡುವದಕ್ಕೇ ಹೊರತು, ಇಡುವದಕ್ಕಲ್ಲ, ಒಡೆತನಕ್ಕಲ್ಲ. ಪ್ರಪಂಚದ ಜನರು ಮಾಡುವ ಅತ್ಯಂತ ದೊಡ್ಡ ತಪ್ಪೆಂದರೆ, ಇನ್ನೊಬ್ಬರಿಂದ ಪಡೆಯುವದರಲ್ಲಿ, ತೆಗೆದುಕೊಳ್ಳುವದರಲ್ಲಿ ಸುಖ-ಸಂತೋಷವಿದೆಯೆಂದು ಭಾವಿಸುತ್ತಾರೆ. **ಎಲ್ಲಾ ಸುಖ ಸಂತೋಷಗಳೂ ಕೊಡುವದರಲ್ಲಿ ಇದೆಯೇ ಹೊರತು ಕೇಳುವದರಲ್ಲಿಯಾಗಲೀ ಬೇಡುವದರಲ್ಲಿಯಾಗಲಿ ಇಲ್ಲವೆಂಬ ಸತ್ಯವನ್ನು ನೀವು ಅರಿಯಬೇಕೆಂಬುದೇ ವೇದಾಂತದ ಬೋಧೆ.** ಕೇಳುವ ಅಥವಾ ಬೇಡುವ ಮನೋಭಾವವನ್ನು ನಿಮ್ಮೊಳಗೆ ಪ್ರವೇಶಮಾಡುವದಕ್ಕೆ ಅವಕಾಶಕೊಟ್ಟ ಕ್ಷಣದಲ್ಲಿಯೇ ನಿಮ್ಮನ್ನು ನೀವು ಸಂಕುಚಿತವಾಗಿಯೂ ಅಲ್ಪರನ್ನಾಗಿಯೂ ಮಾಡಿಕೊಳ್ಳುತ್ತೀರಿ; ಮತ್ತು ನಿಮ್ಮಲ್ಲಿರಬಹುದಾದ ಸಂತೋಷವನ್ನು ಹಿಂಡಿ ಹೊರಗೆ ಹಾಕುತ್ತೀರಿ. ನಿಮ್ಮಕಾರ್ಯವು ಅತ್ಯಂತ ಅಲ್ಪವಾಗಿಯೂ ನಿಮ್ಮ ವೈಯಕ್ತಿಕವಾಗದೆ ಸಾರ್ವತ್ರಿಕ ಕಾರ್ಯವಾಗಬೇಕಾದರೆ, ನೀವು ಯಾವ ಪರಿಸ್ಥಿತಿಯಲ್ಲೇ ಇದ್ದರೂ ನೀಡುವ ಸ್ಥಾನದಿಂದ ಕೆಲಸಮಾಡಬೇಕೇ ಹೋರತು, ಎಂದೆಂದಿಗೂ ಬೇಡುವ ಭಾವದಿಂದ-ಸ್ಥಾನದಿಂದ-ಕೆಲಸಮಾಡಬಾರದು.

ಇವತ್ತು ಹಿಮಾಲಯದ ಪರ್ವತಗಳಲ್ಲಿರುವ ಭಾರತದ ದೇದಾಂತಿಗಳಾದ ಸಂನ್ಯಾಸಿಗಳು ಈ ಬಗೆಯ ಸಮಾಜವಾದದ ಜೀವನವನ್ನು ನಡೆಸುತ್ತಿದ್ದಾರೆ , ಈ ಬಗೆಯ ಪದ್ಧತಿಯಲ್ಲಿ ಅವರು ಇತಿಹಾಸಪೂರ್ವಕಾಲದಿಂದಲೂ ಜೀವಿಸುತ್ತಿದ್ದಾರೆ. ಅವರು ಅತ್ಯಂತ ಶ್ರಮಪಟ್ಟು ಕೆಲಸಮಾಡುತ್ತಾರೆ ; ಅವರು ಸೋಮಾರಿಗಳೂ ಮೈಗಳ್ಳರೂ ಅಲ್ಲ ; ಅವರು ಆರಾಮವಾದ ಸುಲಭಜೀವನದ ಸುಖವನ್ನೂ ಭೋಗವನ್ನೂ ಬಯಸತಕ್ಕವರಲ್ಲ. ಇಂಡಿಯಾದೇಶದ ಮಹತ್ವಾದ ಎಲ್ಲಾ ಸಾಹಿತ್ಯವೂ ಅವರ ಶ್ರಮದಿಂದಲೇ ಹೊರಬಂದಿವೆ. ಅತ್ಯಂತ ಶ್ರೇಷ್ಠಕವಿಗಳೂ ನಾಟಕಕಾರರೂ ವಿಜ್ಞಾನಿಗಳೂ ತತ್ವಜ್ಞಾನಿಗಳೂ ವೈಯಾಕರಣಿಗಳೂ ಸಾಹಿತ್ಯ ವಿದ್ವಾಂಸರೂ ಗಣಿತಶಾಸ್ತ್ರಜ್ಞರೂ ಖಗೋಳಶಾಸ್ತ್ರಜ್ಞರೂ ರಸಾಯನಶಾಸ್ತ್ರಜ್ಞರೂ ವೈದ್ಯವಿಶಾರದರೂ ಆದವರು ಈ ಜನರೇ. ಆದರೂ ಈ ಜನರೇ ಎಂದೆಂದೂ ಹಣವನ್ನು ಮುಟ್ಟಲಿಲ್ಲ. ಸಾಧ್ಯವಾದಷ್ಟೂ ಅತ್ಯಂತ ಕಠಿಣಜೀವನವನ್ನು ಇವರೇ ನಡೆಸಿದವರು. ಸಮಾಜವಾದವು ಜನರನ್ನು ಹೇಡಿಗಳನ್ನಾಗಿಯೂ ಸೋಮಾರಿಗಳನ್ನಾಗಿಯೂ ಪರಾವಲಂಬಿಗಳನ್ನಾಗಿಯೂ ಮಾಡುವದೆಂದು ಸಮಾಜವಾದದ

ಬಾಗಿಲಲ್ಲಿ ಹಾಕಿರುವ ದೂಷಣೆಯನ್ನು ಇದು ತೊಡೆದುಹಾಕುತ್ತದೆ. ಯಾವನು ತನ್ನನ್ನು ತಾನು ಮುಕ್ತನೆಂದು ಭಾವಿಸುತ್ತಾನೋ ಅವನೊಬ್ಬನೇ ಚೆನ್ನಾಗಿ ಕೆಲಸ ಮಾಡಬಲ್ಲನು.

**ವೇದಾಂತದ ದೃಷ್ಟಿಯಿಂದಲೂ ಸಮಾಜವಾದದ ರೀತಿಯಿಂದಲೂ ನಿಮ್ಮ ಮಕ್ಕಳನ್ನೂ ಹೆಂಡತಿಯನ್ನೂ ಮನೆಯನ್ನೂ ಅಥವಾ ಯಾವದನ್ನಾದರೂ ನಿಮ್ಮ ಸ್ವತ್ತನ್ನೂ ಸಂಪತ್ತನ್ನೂ ಆಸ್ತಿಯನ್ನೂ ಮಾಡಿಕೊಂಡು ಒಡೆಯರಾಗುವದಕ್ಕೆ ನಿಮಗೆ ಅಧಿಕಾರವಿಲ್ಲ.**

ಹೆಂಗಸನ್ನು ವ್ಯಾಪಾರವಸ್ತುವನ್ನಾಗಿ ಮಾಡಿಕೊಂಡಿರುವುದೂ ಮತ್ತು ಮರ ಮನೆ, ಹಣ ಮೊದಲಾದ ನಿರ್ಜೀವವಸ್ತುಗಳಂತೆ ಆಕೆಯನ್ನೂ ಗಂಡಸು ತನ್ನ ಆಸ್ತಿಯನ್ನಾಗಿ ಮಾಡಿಕೊಂಡಿರುವದೂ ಆಕೆಯು ಆದೇ ಅರ್ಥದಲ್ಲಿ ಅವನಿಗೆ ಸೇರಿದಂತಿರುವದೂ ನಾಗರಿಕವೆಂದು ಹೇಳಿಕೊಳ್ಳುವ ಸಮಾಜದ ಮುಖದ ಮೇಲಿರುವ ಮಹತ್ತಾದ ಕಳಂಕವೇ ಸರಿ. ಹೀಗೆ ನಾಗರಿಕ ಸಮಾಜದಲ್ಲಿ ಹೆಂಗಸಿಗೆ ಒಂದು ನಿರ್ಜೀವವಸ್ತುವಿನ ಸ್ಥಾನಮಾನಗಳು ಕೊಡಲ್ಪಟ್ಟಿವೆ, ಪುರುಷನು ತನ್ನ ಎಲ್ಲಾ ವರ್ತನೆಗಳಲ್ಲಿ ಬಿಡು ಬೀಸಾಗಿರುವಾಗ ಸ್ತ್ರೀಯು ಕೈಕಾಲುಗಳು ಕಟ್ಟಲ್ಪಟ್ಟು ಪೂರಾ ಅಸ್ವತಂತ್ರಳಾಗಿದ್ದಾಳೆ. ಆಕೆಯು ಮೊದಲು ಒಬ್ಬನ ಆಸ್ತಿಯಾಗಿ ಅನಂತರ ಇನ್ನೊಬ್ಬನ ಆಸ್ತಿಯಾಗುತ್ತಾಳೆ. ಸಮಾಜವಾದದ ದೃಷ್ಟಿಯಿಂದಲೂ ವೇದಾಂತ ದೃಷ್ಟಿಯಿಂದಲೂ ಇದು ಬಹಳ ದಿಗ್ಭ್ರಮೆಗೊಳಿಸುವಂಥಾ ವಿಚಾರ. ಪುರುಷನು ತನ್ನ ಸ್ವಾತಂತ್ರ್ಯವನ್ನು ಅರಿತಂತೆ ಸ್ತ್ರೀಯೂ ಅರಿಯಬೇಕು. ಪುರುಷನಿಗಿರುವಷ್ಟೇ ಆಕೆಗೂ ಸ್ವಾತಂತ್ರ್ಯದ ಅಧಿಕಾರವಿದೆ. ಯಾವವಸ್ತುವನ್ನೂ ತನ್ನ ಆಸ್ತಿಯನ್ನಾಗಿ ಮಾಡಿಕೊಳ್ಳುವ ಅಧಿಕಾರವು ಪುರುಷನಿಗಿಲ್ಲದಿರುವಂತೆ ಸ್ತ್ರೀಗೂ ಇಲ್ಲ. ಆಕೆಗೂ ಸುಖವು ಬೇಕಾದರೆ ತನ್ನ ಗಂಡನನ್ನು ತನ್ನ ಸ್ವತ್ತಾಗಿ ಮಾಡಿಕೊಳ್ಳಬಾರದು. ಇಲ್ಲಿ ಸಮಾಜವಾದಕ್ಕೆ ವಿರುದ್ಧವಾಗಿ ವಿಚಾರಯೋಗ್ಯವೂ ಮಹತ್ವಪೂರ್ಣವೂ ಆದ ಆಕ್ಷೇಪವು ಏಳುತ್ತದೆ. ಸಮಾಜವಾದವು ಸ್ತ್ರೀಪುರುಷರಿಗೆ ಸಂಪೂರ್ಣ ಸ್ವಾತಂತ್ರ್ಯಕ್ಕೆ ಅವಕಾಶಕೊಟ್ಟರೆ, ಅದು ಸಮಾಜವನ್ನು ಕೇವಲ ಪಶುತ್ವದ ಸ್ಥಿತಿಗೆ ಇಳಿಸುತ್ತದೆ; ಮತ್ತು ವಿಷಯಲಂಪಟರಾದ ಸ್ವೇಚ್ಛಾಚಾರಿಗಳ ಪ್ರಪಂಚವನ್ನು ಮಾಡುತ್ತದೆ. **ರಾಮನು ಹೇಳುವದೇನೆಂದರೆ, ಲೈಂಗಿಕ ಜೀವನದ ದೃಷ್ಟಿಯಿಂದ ಅದಕ್ಕಿಂತಲೂ (ಪಶುಸ್ವಭಾವಕ್ಕಿಂತಲೂ) ಉತ್ತಮವಾದುದನ್ನು ಬಯಸಲಾರೆವು. ಏಕೆಂದರೆ, ಹಸುಗಳು ಎಮ್ಮೆಗಳಂಥ ಪ್ರಾಣಿಗಳು ತಮ್ಮ ಸಂಭೋಗ**

**ಕಾರ್ಯದಲ್ಲಿ ಬಹಳ ವಿವೇಕಯುತವಾಗಿಯೂ ಮಿತವಾಗಿಯೂ ವರ್ತನೆಯಲ್ಲಿ ವಿಚಾರಸಮ್ಮತವಾಗಿಯೂ ಕಾಲೋಚಿತವಾಗಿಯೂ ಇವೆ.** ಆದ್ದರಿಂದ ಮನುಷ್ಯರು ಅದೇರೀತಿಯಿಂದ ವರ್ತಿಸಿದರೆ, ನಾಗರಿಕ ಸಮಾಜದ ಎಲ್ಲಾ ಕಾಮಾಸಕ್ತಿಯೂ ಕಾಮೋದ್ರೇಕವೂ ಸಂಭೋಗಾಂಕ್ಷೆಯೂ ಕೊನೆಗಾಣಬಹುದು.

**ಆಶ್ಚರ್ಯವೋ ಆಶ್ಚರ್ಯ! ಮನುಷ್ಯನಿಗಿಂತಲೂ ಪಶುಗಳು ನಿಶ್ಚಿತವಾಗಿಯೂ ಕಡಮೆ ಕಾಮುಕವಾಗಿದ್ದರೂ ಸಹ ಕಾಮುಕನಾದ ಮನುಷ್ಯನನ್ನು ವಿಚಾರಶೀಲ ಮನುಷ್ಯನು ಪಶುವೆಂದು ಕರೆಯುವದು ಎಂಥ ಭಯಂಕರ ಪ್ರಮಾದ, ಅವಿವೇಕ** ಯಾವ ಅವಿವೇಕವೆನಿಸುವ ಕಾಮೋದ್ರೇಕದ ಸುಳಿವೂ ಅವುಗಳಲ್ಲಿಲ್ಲ. ಕರು-ಮರಿಗಳನ್ನು ಪಡೆಯಬೇಕಾಗಿರುವಾಗ ಮಾತ್ರ (ಬೆದೆ ಬಂದಾಗ ಮಾತ್ರ) ಅವು ಜೋಡಿಯಾಗುತ್ತವೆ. ಮನುಷ್ಯನ ಸ್ವಭಾವಹಾಗಿಲ್ಲ. ಸ್ತಿಮಿತ ಬುದ್ಧಿಯವನೂ ಶಾಂತಚಿತ್ತನೂ ಹಿತಮಿತ ಸ್ವಭಾವದವನೂ ಆದ ಮನುಷ್ಯನು, ಕಾಮುಕನಾದ ವಿಷಯಲಂಪಟನಿಗಿಂತಲೂ ಹೆಚ್ಚಾಗಿ ಪಶುಪ್ರಾಣಿಗಳ ಸ್ವಾಭಾವಿಕ ಜೀವನವನ್ನು ನಡೆಸುತ್ತಾನೆ. ಕಾಮುಕನಾದ ಸ್ವೇಚ್ಛಾಚಾರಿಯನ್ನು ಪಶುವೆಂದು ಕರೆಯಬಾರದು; ಏಕೆಂದರೆ, ಪಾಪ, ಅವನು ನಾಗರಿಕ ಮನುಷ್ಯ. ಇದು ನಾಗರಿಕತೆಗೆ ವಿಶಿಷ್ಟವೂ ವಿಲಕ್ಷಣವೂ ಆದ ಸ್ವಭಾವ; ಇದು ಸಮಾಜದ ಅನಾಗರಿಕ ಸ್ಥಿತಿಯಲ್ಲಿಲ್ಲ ಹೀಗೆ ಕಾಡುಜನರಲ್ಲಿಲ್ಲ. ಅವರು ವಿವೇಕಿಗಳೂ ಸ್ವಾಭಾವಿಕಜೀವನ ನಡೆಸತಕ್ಕವರೂ ಆಗಿದ್ದಾರೆ. ಅವರು ಎಲ್ಲವನ್ನೂ ಕಾಲೋಚಿತವಾಗಿಯೂ ಋತುಧರ್ಮಗಳಿಗೆ ಅನುಗುಣವಾಗಿಯೂ ಮಾಡುತ್ತಾರೆ. ವೇದಾಂತದ ರೀತಿಯಿಂದಲೂ ಸಮಾಜವಾದ ನೀತಿಯಿಂದಲೂ ಜೀವನವನ್ನು ನಡೆಸಿದರೆ, ಹೆಚ್ಚು ಮಿತವೂ ಸ್ತಿಮಿತವೂ ನಿರುದ್ವಿಗ್ನವೂ ಅಕ್ಷುಬ್ಧವೂ ಶಾಂತವೂ ಆದ ಸ್ವಭಾವ ಸ್ಥಿತಿಯನ್ನು ಸಂಪಾದಿಸಬಹುದು; ಈ ಶೀಟೆಯ ಕಾಮಾತುರತೆಯು ಬಹಳ ಮಟ್ಟಿಗೆ ಕಡಿಮೆಯಾಗುತ್ತದೆ. ಆದರೆ, ನನ್ನ ಗಂಡ ಅಥವಾ ನನ್ನ ಹೆಂಡತಿ. ನನ್ನ ತಂದೆ ಅಥವಾ ನನ್ನ ಮಗ ಎಂದು ಅಧಿಕಾರಯುತವಾಗಿ ಒಬ್ಬರನ್ನೊಬ್ಬರು ವಶಪಡಿಸಿಕೊಂಡು ತಮ್ಮ ತಮ್ಮ ಸ್ವತ್ತನ್ನಾಗಿ ಮಾಡಿಕೊಳ್ಳುವ ವೃತ್ತಿಯೂ ಪ್ರವೃತ್ತಿಯೂ ಹೋಗುತ್ತದೆ.

ಈ ತಂದೆಯನ್ನೂ ಈ ತಾಯಿಯನ್ನೂ ಈ ಹೆಂಡತಿಯನ್ನೂ ಈ ಮಕ್ಕಳನ್ನೂ ಈ ಸಹೋದರಿಯರನ್ನೂ ನಾವು ಸಂರಕ್ಷಿಸಬೇಕೆಂಬ ಚಿಂತೆಯು ಹೃದಯದ ಮೇಲೆ ನಿರಂತರ ಹೊರೆಯಾಗಿರುವದರಿಂದಲೇ ವಿದ್ಯಾಭ್ಯಾಸ ಮಾಡುವದಕ್ಕಾಗಲೀ ಬ್ರಹ್ಮ

ಭ್ಯಾಸ ಮಾಡುವದಕ್ಕಾಗಲೀ ನಮಗೆ ಅವಕಾಶವನ್ನು ಕೊಡುತ್ತಿಲ್ಲ. ಸಮಾಜವಾದ ವಾಗಲೀ ವೇದಾಂತವಾಗಲೀ ನಿಮ್ಮ ಹೃದಯದಿಂದ ಈ ಹೊರೆಯನ್ನು ಕಳೆದು ನಿಮ್ಮನ್ನು ಬಿಡುಗಡೆ ಮಾಡಬೇಕೆಂದು ಬಯಸುತ್ತದೆ. ಹೀಗಾದರೆ, ಯಾವ ಬಗೆಯ ಸಂಬಂಧಗಳ ಬಂಧವಾಗಲೀ ನಿರ್ಬಂಧವಾಗಲೀ ಪ್ರತಿಬಂಧವಾಗಲೀ ಅಲ್ಲದೆ, ಯಾವ ವಿಧವಾದ ಚಿಂತಾಕುಲಗಳೂ ಇಲ್ಲದೆ, ಬೇಡಿಗಳಿಲ್ಲದೆ ಬಿಡುಬೀಸಾಗಿ ಸಾಧಿಸ ಬಲ್ಲರಾದರೆ, ನೀವು ಅನ್ವೇಷಣೆಯ ಸಾಗರದಲ್ಲಿ ಮುನ್ನುಗ್ಗಿದರೂ ಯಶಸ್ವಿಗಳಾ ಗುತ್ತೀರಿ ; ಸಂಶೋಧನೆಯ ಅಖಾಡಾದಲ್ಲಿ ಹೊಕ್ಕರೂ ಜಯಭೇರಿ ಹೊಡೆಯುತ್ತೀರಿ. ವಿಶಾಲ ಜಗತ್ತೇ ನಿಮ್ಮ ಮನೆಯಾಗಿದೆಯೆಂಬ ಭರವಸೆಯು ನಿಮಗಿರುವದರಿಂದ ಎಲ್ಲಾಕಾಲದಲ್ಲಿಯೂ ನೀವು ಸ್ವತಂತ್ರರೆಂದೂ ವಿಮುಕ್ತರೆಂದೂ ಭಾವಿಸುತ್ತೀರಿ.

**ಜನರ ಎಲ್ಲಾ ವ್ಯಾಧಿವಿಕಾರಗಳಿಗೂ ಉಪದ್ರವಗಳಿಗೂ ಮನೋರೋಗ ಗಳಿಗೂ ಚಿಂತಾವ್ಯಾಕುಲಗಳಿಗೂ ಒಂದೇ ಒಂದು ಚಿಕಿತ್ಸೆಯೂ ಪರಿ ಹಾರವೂ ಸ್ವಂತ ಆಸ್ತಿಯನ್ನು ಮಾಡಿಕೊಳ್ಳಬೇಕೆಂಬ ಭ್ರಾಂತಿಯನ್ನು ನಿರಾಕರಿಸುವದರಲ್ಲಿಯೇ ಇದೆ–ಎಂಬ ಸತ್ಯವನ್ನು ಅವರು ಅರಿಯುವಂತೆ ಮಾಡಬೇಕಾದುದೇ ನಮ್ಮ ಸರ್ವಸಾಹಸವಾಗಿದೆ.** ಬಹು ಸಂಖ್ಯಾತ ಜನರು ಇದೊಂದು ವಿಚಾರವನ್ನು ಒಮ್ಮೆ ಚೆನ್ನಾಗಿ ಮನಗಂಡರಾದರೆ, ಸಮಾಜವಾದವು ಪ್ರಪಂಚದ ಮೇಲೆಲ್ಲಾ ಕಾಡ್ಗಿಚ್ಚಿನಂತೆ ಹಬ್ಬುತ್ತದೆ. ಅವರ ಎಲ್ಲಾ ಕೇಡುಗಳಿಗೂ ಕ್ಲೇಶಗಳಿಗೂ ಅಸ್ಥಿರತೆಗಳಿಗೂ ಅಶಾಂತಿಗಳಿಗೂ **ವೇದಾಂತ–ಸಮಾಜವಾದ** ಒಂದೇ ಪರಿಹಾರ. ಈ ವೇದಾಂತ-ಸಮಾಜವಾದವನ್ನು ಜನರು ಅರ್ಥಮಾಡಿಕೊಂಡು ಒಮ್ಮೆ ಒಪ್ಪಿದರೆಂದರೆ, ಈ ಪ್ರಪಂಚದಲ್ಲಿ ಸಹಸ್ರಾವಧಿವರ್ಷಗಳ ಧರ್ಮಯುಗವೇ ಪ್ರಾರಂಭವಾಗುತ್ತದೆ ; ರಾಮರಾಜ್ಯವೇ ಸ್ಥಾಪನೆಯಾಗುತ್ತದೆ ; ಇದರಲ್ಲಿ ಸಂಶಯವಿಲ್ಲ. ವಕ್ರದೃಷ್ಟಿಯಿಂದಲೂ ತಮ್ಮ ಸುತ್ತಲಿರುವ ಪರಿಸ್ಥಿತಿಗಳ ಅಪೂರ್ಣ ವಾದ ಪರಿಶೀಲನೆಯಿಂದಲೂ ಉದಿಸುವ ಆಕ್ಷೇಪಣೆಗಳೆಲ್ಲಾ ಮಾಯವಾಗುತ್ತವೆ. ಈ ಸಮಾಜವಾದದಲ್ಲಿ ರಾಜರು, (ಪ್ರೆಸಿಡೆಂಟರು) ಅಧ್ಯಕ್ಷರು, ಪುರೋಹಿತರೂ ಯಾರೂ ಬೇಕಾಗಿಲ್ಲ ; ಸೈನ್ಯಗಳ ಆವಶ್ಯಕತೆಯೂ ಇಲ್ಲ. ಪ್ರತಿಯೊಬ್ಬನೂ ತನಗೆ ತಾನೇ ವಿಶ್ವವಿದ್ಯಾನಿಲಯವಾಗುವದರಿಂದ ಎಂದೂ ವಿಶ್ವವಿದ್ಯಾನಿಲಯಗಳ ಆವಶ್ಯಕತೆಯೂ ಇರುವದಿಲ್ಲ. ಯಾರು ಬೇಕಾದರೂ ಬಂದು ಓದಬಹುದಾದಂಥ ಪುಸ್ತಕ ಭಂಡಾರಗಳು (Libraries) ಇರುತ್ತವೆ. ಚಿಕ್ಕಮಕ್ಕಳಿಗೆ ಬೋಧಕರು ಬೇಕೇ ಹೊರತು ಪ್ರೊಫೆಸರುಗಳೂ ಬೇಕಾಗಿಲ್ಲ. ವೇದಾಂತದ ಉಪದೇಶದಂತೆ ಪ್ರಕೃತಿಸಹಜವಾದ ಜೀವನವನ್ನು ನಡೆಸುವುದರಿಂದ ನೀವೆಂದೂ ಕಾಯಿಲೆ

ಬೀಳುವುದಿಲ್ಲ, ಆದ್ದರಿಂದ ಡಾಕ್ಟರುಗಳೂ ವೈದ್ಯರೂ ಬೇಕಾಗಿಲ್ಲ. ಜನರು ತಮಗೆ ಬೇಕಾದುದನ್ನು ಮಾಡಬಹುದು, ಪ್ರಪಂಚದಲ್ಲಿ ಈಗಿನಂತೆ ತಮ್ಮ ಸಹೋದರರ ಭಯವಿಲ್ಲದೆ ಯಾವ ದೇಶಕ್ಕೆ ಬೇಕಾದರೂ ಹೋಗಿ ಬರಬಹುದು. ಆದರೆ ಎಲ್ಲರೂ ಒಳ್ಳೆಯವರಾಗಿ ಎಲ್ಲರಿಗೂ ಒಳ್ಳೆಯದನ್ನೇ ಮಾಡುತ್ತಾ, ಉಪಯುಕ್ತವಾದ ವ್ಯಾಸಂಗಗಳಿಗೂ ತತ್ತ್ವಶಾಸ್ತ್ರ ವಿಚಾರಗಳಿಗೂ ಭೌತಾತೀತ ವಿದ್ಯೆಯ (ಆಧ್ಯಾತ್ಮಿಕ) ಸಂಶೋಧನೆಗಳಿಗೂ ತಮ್ಮ ಕಾಲವನ್ನು ವಿನಿಯೋಗ ಮಾಡುತ್ತಾ, ಅವರು ತಮ್ಮ ದೇವತ್ವವನ್ನು ಅತ್ಯಂತ ಪರಿಪೂರ್ಣತೆಯಲ್ಲಿ ಅರಿಯುತ್ತಾ ಇರಬೇಕು.

ಓಂ ! ಓಂ ! ಓಂ !

# Class Lectures on Vedanta--1

# ವೇದಾಂತ ಪಾಠಕ್ರಮದ ಉಪನ್ಯಾಸಗಳು—೧

## ಅಮೆರಿಕಾದಲ್ಲಿ 'ಅಕ್ಯಾಡೆಮಿ ಆಫ್ ಸೈಎನ್ಸೆಸ್' ನಲ್ಲಿ— ತಾ-23-12-1902ರಲ್ಲಿ ಮಾಡಿದ ಭಾಷಣ

ಸಂಪನ್ನಸ್ತ್ರೀ ಪುರುಷರೂಪದಲ್ಲಿರುವ ನನ್ನ ಆತ್ಮವೆ.

ಈ ರಾತ್ರಿ, ಯಾವದೊಂದು ವಿಶಿಷ್ಟ ವಿಷಯದ ಮೇಲೆ ಕ್ರಮವಾದ ಉಪನ್ಯಾಸವಿಲ್ಲ. ಅನೇಕ ಜನರು ರಾಮನಲ್ಲಿಗೆ ಹಲವುಬಗೆಯ ಪ್ರಶ್ನೆಗಳನ್ನು ತೆಗೆದು ಕೊಂಡು ಬರುತ್ತಿದ್ದಾರೆ. ಕೆಲವು ಸಮಯ ಪ್ರಶ್ನೆಗಳು ವಿಲಕ್ಷಣವಾಗಿರುತ್ತವೆ. ಇವುಗಳಲ್ಲಿ ಕೆಲವು ಪ್ರಶ್ನೆಗಳನ್ನು ತೆಗೆದುಕೊಂಡು, ಸಂಕ್ಷಿಪ್ತವಾದ ಉತ್ತರವು ಕೊಡಲ್ಪಡುತ್ತದೆ. ಈ ವಿಷಯದ ಮೇಲೆ, ನಿಮ್ಮಲ್ಲಿ ಯಾರಾಗಲೀ ಅಮೆರಿಕಾದ ಯಾವ ಭಾಗದಲ್ಲಿ (ಯಾರೇ ಆಗಲೀ ಯಾವಪ್ರಶ್ನೆಯನ್ನಾದರೂ ಕೇಳುವದಿದ್ದರೆ ಒಂದು ಚೂರು ಕಾಗದದ ಮೇಲೆ ಬರೆದು ರಾಮನಿಗೆ ಕಳಿಸಬಹುದು. ಆ ಪ್ರಶ್ನೆಗಳನ್ನು ರಾಮನು ಈ ಮಂದಿರಕ್ಕಾಗಲೀ ಅಥವಾ ಮಾತನಾಡುವದಕ್ಕೆ ಅವಕಾಶವಾಗುವ ಬೇರೆಲ್ಲಿಗಾಗಲೀ ತೆಗೆದುಕೊಂಡು ಬಂದು ವಿಶದವಾಗಿ ಅವಕ್ಕೆ ಉತ್ತರ ಹೇಳುತ್ತಾನೆ.

ಈ ಪ್ರಶ್ನೆಗಳನ್ನು ತೆಗೆದುಕೊಳ್ಳುವದಕ್ಕೆ ಮುಂಚೆ, ಜನರು ತಮ್ಮ ಮನಸ್ಸಿನಲ್ಲಿ ಇಟ್ಟುಕೊಂಡಿರಬಹುದಾದ ಎಲ್ಲಾ ಬಗೆಯ ಪ್ರಶ್ನೆಗಳಿಗೂ ಸಂಬಂಧಪಟ್ಟ ಒಂದು ಸಾರ್ವತ್ರಿಕವಾದ ಪ್ರಕಟನೆಯನ್ನು ತಿಳಿಸುವದು ಅವಶ್ಯವಾಗಿದೆ. ಇಂಡಿಯಾದ ತತ್ತ್ವಜ್ಞಾನಿಗಳ ರೀತಿಯು ಯುರೋಪ್-ಅಮೇರಿಕಾ ತತ್ತ್ವಜ್ಞಾನಿಗಳ ರೀತಿಗಿಂತ ತೀರ ಬೇರೆಯೇ ಇದೆ, ಎಂಬದು ನಿಮಗೆಲ್ಲಾ ತಿಳಿದಿರಬೇಕು. ಭಾರತದ ತತ್ತ್ವಜ್ಞಾನಿಗಳು ಒಂದು ವಿಷಯವನ್ನು ತೆಗೆದುಕೊಂಡಾಗ, ಮೊದಲು ಅದರ ವಿವರಣೆಯನ್ನು ಕೊಡುತ್ತಾರೆ, ಅನಂತರ, ಯಾರಾದರೂ ಊಹಿಸಬಹುದಾದ ಅಥವಾ ಕೇಳಬಹುದಾದ ಎಲ್ಲಾ ಬಗೆಯ ಪ್ರಶ್ನೆಗಳನ್ನೂ ತೆಗೆದುಕೊಳ್ಳುತ್ತಾರೆ. ರಾಮನೇ ಸ್ವತಃ

ಈ ಎಲ್ಲಾ ಘಟ್ಟಗಳಲ್ಲಿಯೂ ಹಾದು ಬರಬೇಕಾಯಿತು. ಯಾರಿಗಾದರೂ ಯಾವ ಯಾವ ಪ್ರಶ್ನೆಗಳು ಹೊಳೆಯಬಹುದೋ ಆ ಎಲ್ಲಾ ಪ್ರಶ್ನೆಗಳೂ ರಾಮನೆದುರಿಗೆ ಬಂದಿದ್ದವು ಅಂಥಾ ಪ್ರಶ್ನೆಗಳ ಮತ್ತು ದ್ವಂದ್ವಾರ್ಥವನ್ನೂ ಸಂದಿಗ್ಧಾರ್ಥವನ್ನೂ ಕೊಡುವ ಮಾತುಗಳ, ವಕ್ರೋಕ್ತಿಗಳ, ಒಂದು ಸಾಗರವೇ ಇದೆ. ಅವುಗಳಲ್ಲಿ ಕೆಲವು ರಾಮನನ್ನು ಅವನ ಐದನೆಯ ವಯಸ್ಸಿನಲ್ಲಿ ಕಾಡುತ್ತಿದ್ದ ಪ್ರಶ್ನೆಗಳು ನೀವು ತರುತ್ತಿರುವ ಕೆಲವು ಪ್ರಶ್ನೆಗಳು ಅವನ ಹದಿನೈದನೆಯ ವಯಸ್ಸಿನಲ್ಲಿ ಅವನನ್ನು ಕಕ್ಕಾಬಿಕ್ಕಿ ಮಾಡುತ್ತಿದ್ದವು. ನಿಮ್ಮ ಇತರ ಪ್ರಶ್ನೆಗಳು ರಾಮನ ಗಮನವನ್ನು ಅವನ ಇಪ್ಪತ್ತೈದನೆಯ ವಯಸ್ಸಿನಲ್ಲಿ ಸೆಳೆದು ತೊಡಕಿಕೊಂಡಿದ್ದವು.

ಈ ಪ್ರಶ್ನೆಗಳ ವಿಷಯದಲ್ಲಿ ಇನ್ನೊಂದು ವಿಚಾರವನ್ನು ಹೇಳಬೇಕಾಗಿದೆ. ಅವುಗಳಲ್ಲಿ ಕೆಲವು, ತಾತ್ತ್ವಿಕ ಮನೋಭಾವದ ಬೆಳವಣಿಗೆಯಲ್ಲಿ ಅತ್ಯಂತ ಪ್ರಾಥಮಿಕ ಹಂತಗಳಿಗೆ ಸಂಬಂಧಪಟ್ಟಿರುತ್ತವೆ, ಇನ್ನು ಕೆಲವು ಧಾರ್ಮಿಕ ಬೆಳವಣಿಗೆಯ ಎರಡನೆಯ ಸ್ತರಕ್ಕೆ ಸೇರಿರುತ್ತವೆ; ಬೇರೆಯವುಗಳು ಬೇರೆ ಘಟ್ಟಗಳಿಗೆ ಸೇರಿರುತ್ತವೆ. ಯೂಕ್ಲಿಡ್‌ನ ಪ್ರಥಮ ಪುಸ್ತಕದ 47ನೇ ಪ್ರತಿಜ್ಞೆಯನ್ನು (Proposition) ವಿವರಿಸಬೇಕೆಂದು, ಒಬ್ಬನು ಬಂದು ನಿಮ್ಮನ್ನು ಕೇಳುತ್ತಾನೆ. ಕೂಡಲೇ ನೀವದನ್ನು ತೆಗೆದುಕೊಂಡು, ವಿವರಿಸುವದಕ್ಕೆ ತೊಡಗುತ್ತೀರಿ. ಆದರೆ ಅವನಿಗೆ 46ನೆಯದೂ 45ನೆಯದೂ ಅಥವಾ ಮೊಟ್ಟ ಮೊದಲನೆಯ ಪ್ರತಿಜ್ಞೆಯು ಸಹ ಗೊತ್ತಿಲ್ಲದಿದ್ದರೆ, ಮತ್ತು ಅವನಿಗೆ ಯೂಕ್ಲಿಡ್‌ನ ಆಧಾರ ಸೂತ್ರಗಳ (Axioms) ಅಥವಾ ಆಧಾರ ಪ್ರತಿಜ್ಞೆಗಳ(postulates)ಪರಿಚಯವೇ ಇಲ್ಲವಾದರೆ ನೀವು 47ನೇ ಪ್ರತಿಜ್ಞೆಯನ್ನು ಅವನಿಗೆ ಸಮಾಧಾನವಾಗುವಂತೆ ವಿವರಿಸುವುದು ಹೇಗೆ ಸಾಧ್ಯವಾಗುತ್ತದೆ ? ಸಾಧ್ಯವಾಗುವದಿಲ್ಲ ; ಏಕೆಂದರೆ, 47 ನೆಯದನ್ನು ವಿವರಿಸಬೇಕಾದರೆ 46ನೆಯದನ್ನುಅನ್ವಯಿಸಬೇಕು, ಅದಕ್ಕೆ ಒಂದು ಚತುರಸ್ರವನ್ನು (Square) ರೇಖಿಸಬೇಕು ; ಆದರೆ ಆ ಗೆಳೆಯನಿಗೆ ಅದು ತಿಳಿಯದು ; ಅನಂತರ 32ನೆಯ ಪ್ರತಿಜ್ಞೆಯನ್ನು ಉಪಯೋಗಿಸಬೇಕು , ಆ ಆಸಾಮಿಗೆ ಅದು ಸಹ ಗೊತ್ತಿಲ್ಲ ; ಆದ್ದರಿಂದ ಅವನಿಗೆ ನೀವು 46ನೆಯ ಮತ್ತು 32ನೆಯ ಪ್ರತಿಜ್ಞೆಗಳನ್ನು ವಿವರಿಸಲು ತೊಡಗುತ್ತೀರಿ. ಅವುಗಳನ್ನು ಸರಿಯೆಂದು ತೋರಿಸುವದಕ್ಕೆ ನೀವು 16ನೆ, 22ನೆ ಮೊದಲಾದ ಪ್ರತಿಜ್ಞೆಗಳ ಮೇಲೆ ಹಿಂದುಹಿಂದಕ್ಕೆ ಬೀಳಬೇಕಾಗುತ್ತದೆ ಈ ಕ್ರಮದಲ್ಲಿ ಪ್ರಥಮ ಪ್ರತಿಜ್ಞೆಗೂ ಕೊನೆಗೆ ಆಧಾರ ಸೂತ್ರಗಳಿಗೂ (Axioms) ಆಧಾರ ಕಲ್ಪನೆಗಳಿಗೂ (Postulates) ನೀವು ತೀರಾ ತಳಕ್ಕೆ ಶಾಸ್ತ್ರಾರಂಭಕ್ಕೆ ಸರಿಯಬೇಕಾಗುತ್ತದೆ ಎಲ್ಲಾ

ಗೊಂದಲವೋ ಗೊಂದಲವಾಗುತ್ತದೆ. ನೀವು ಯಾವದನ್ನೂ ಸರಿತೋರಿಸುವದಕ್ಕೆ ಆಗುವದಿಲ್ಲ.

ಒಂದು ವಿಜ್ಞಾನವನ್ನು ಅಥವಾ ಶಾಸ್ತ್ರವನ್ನು ಮನಸ್ಸಿನ ಗೊಂದಲದ ಸ್ಥಿತಿಯಲ್ಲಿ ತಾಗಬಾರದು. ಸರಿಯಾದ ಪದ್ಧತಿಯಿಂದ, ಸರಿಯಾದ ಕ್ರಮದಿಂದ, ವ್ಯವಸ್ಥಿತ ರೀತಿಯಲ್ಲಿ, ಅದರಲ್ಲಿ ತೊಡಗಬೇಕು. ಈ ವೇದಾಂತ ಶಾಸ್ತ್ರವು ಧರ್ಮವೂ ಆಗಿದೆ, ವಿಜ್ಞಾನವೂ ಆಗಿದೆ. ಯುರೋಪಿನಲ್ಲಿ, ನಿಮ್ಮಲ್ಲಿ. ವಿಜ್ಞಾನಕ್ಕೂ ಧರ್ಮಕ್ಕೂ ವಿರೋಧವಿದೆ, ಘರ್ಷಣೆಯಿದೆ. ಆದರೆ, ನಿಮಗೆ ರಾಮನು ತಂದಿರುವ ಬೋಧೆಯು ಅವುಗಳ ವೈಷಮ್ಯವನ್ನು ಕಳೆದು ಸಮನ್ವಯಮಾಡುತ್ತದೆ ; ವಾಸ್ತವವಾಗಿ, ಅದು ತತ್ತ್ವಶಾಸ್ತ್ರಕ್ಕೂ (Philosophy) ವಿಜ್ಞಾನಕ್ಕೂ (Science) ಮತ್ತು ಧರ್ಮಕ್ಕೂ (Religion) ಸಾಮಂಜಸ್ಯವನ್ನೂ ಸಮನ್ವಯವನ್ನೂ ಸಾಧಿಸುತ್ತದೆ.

ಇದು ವಿಜ್ಞಾನಗಳಿಗೆಲ್ಲಾ ವಿಜ್ಞಾನವಾದ್ದರಿಂದ (Science of Sciences) ಇದನ್ನು ವ್ಯವಸ್ಥಿತವಾಗಿಯೂ ಪದ್ಧತಿಪ್ರಕಾರವಾಗಿಯೂ ಕ್ರಮಬದ್ಧವಾಗಿಯೂ ವಿಚಾರಮಾಡಬೇಕು. ನೀವು ಕೇಳಿರುವ ಕೆಲವು ಭಾಷಣಗಳು ಈ ತತ್ತ್ವಶಾಸ್ತ್ರದಲ್ಲಿ ಹೆಚ್ಚು ಪ್ರವೇಶಮಾಡಲಿಲ್ಲ. ವೇದಾಂತ ತತ್ತ್ವಶಾಸ್ತ್ರವೆಂದೇ ಇದುವರೆಗೆ ಒಂದು ಉಪನ್ಯಾಸವನ್ನೂ ಮಾಡಿಲ್ಲ. ಇದುವರೆಗೆ ಪ್ರಾಸಂಗಿಕ ವಿಷಯಗಳನ್ನೂ ಗೌಣವಿಚಾರಗಳನ್ನೂ ವಿವೇಚನೆಮಾಡಿದೆ ; ಇವುಗಳೆಲ್ಲಾ ಪೀಠಿಕಾರೂಪವಾಗಿಯೂ ಪರಿಚಯ ಪ್ರವೇಶಿಕಾರೂಪವಾಗಿಯೂ ಇವೆ. ಈ ಆಶ್ಚರ್ಯಕರವಾದ ವಿಜ್ಞಾನ ಮತ್ತು ಧರ್ಮದ ಸ್ಪಷ್ಟವಾದ ವಿವರಣೆಯನ್ನು ಕೊಡುವದಕ್ಕೆ ರಾಮನಿಗೆ ಕಾಲಾವಕಾಶವು ಸಿಕ್ಕರೆ, ನಿಮ್ಮ ಎಲ್ಲಾ ಸಂಶಯಗಳೂ ಸಂದೇಹಗಳೂ ಪ್ರಶ್ನೆಗಳೂ ತಮ್ಮಷ್ಟಕ್ಕೆ ತಾವೇ ಅಡಗಿಹೋಗುತ್ತವೆ.

ಕೆಲವು ಜನರು ಬಹಳ ಆತುರರಾಗಿದ್ದಾರೆ ; ಅವರು ತಮ್ಮ ಪ್ರಶ್ನೆಗಳಿಗೆ ಕೂಡಲೇ ಉತ್ತರ ದೊರಕಬೇಕೆಂದು ಕಾತುರಪಡುತ್ತಾರೆ. ಒಳ್ಳೆಯದು ; ನಾವು ಅವುಗಳಲ್ಲಿ ಕೆಲವನ್ನು ತೆಗೆದುಕೊಳ್ಳೋಣ. ಅವು ವಿಚಿತ್ರಪ್ರಶ್ನೆಗಳು.

ನಿನ್ನೆಯ ರಾತ್ರಿ ಅಥವಾ ಮೊನ್ನೆಯ ರಾತ್ರಿ ಒಬ್ಬ ಮನುಷ್ಯನು ಬಂದು ಈ ಪ್ರಶ್ನೆ ಮಾಡಿದ " ಸ್ವಾಮಿ, ನೀವೇನನ್ನು ಬೋಧಿಸುತ್ತೀರಿ ? ನಿಮಗೊಂದು

ಆತ್ಮವಿದೆಯೆ ? ಆತ್ಮನಿದ್ದಾನೆಂದು ನೀವು ಬೋಧಿಸುತ್ತೀರಾ ? ನೀವು ಆತ್ಮನನ್ನು ನಂಬುತ್ತೀರಾ ?"

ರಾಮನು ಹೇಳಿದ್ದೇನೆಂದರೆ, "ಇಲ್ಲ ; ನನಗೆ ಆತ್ಮನಿಲ್ಲ". ಇದನ್ನು ಕೇಳಿ ಅವನಿಗೆ ಆಶ್ಚರ್ಯವಾಯಿತು.

"ಓ ! ಇದೊಂದು ಪೈಶಾಚಿಕ ಧರ್ಮ, ಇವರಿಗೆ ಆತ್ಮನಿಲ್ಲವಂತೆ," ಎಂದು ಪಾಪ, ಆ ಮನುಷ್ಯನು ತನ್ನೊಳಗೇ ಗೊಣಗಿಕೊಂಡಿರಬಹುದು. "ನನಗೆ ಆತ್ಮನಿಲ್ಲ" ಎನ್ನುವ ರಾಮನ ಉತ್ತರದ ಅರ್ಥವೇನು ? ಅಮೇರಿಕಾ ಯುರೋಪುಗಳಲ್ಲಿ ಯಾವುದು ಧರ್ಮ ? ಅದು, ನಿಮ್ಮ ಮನೆಗಳಲ್ಲಿ ದಿವಾನ್‌ಖಾನೆಗಳನ್ನು ಸಜ್ಜು ಗೊಳಿಸಿ ಅಲಂಕರಿಸುವ ಒಂದು ವಸ್ತುವಿದ್ದಂತೆ. ಇಲ್ಲಿ ನನ್ನ ಹೆಂಡತಿಯಿದ್ದಾಳೆ ನನ್ನ ಮಕ್ಕಳಿದ್ದಾರೆ, ಭರ್ಜರಿಯೂ ಭವ್ಯವೂ ಆದೊಂದು ಭವನವಿದೆ ; ನನಗೆ ಬೇಕಾದಷ್ಟು ಆಸ್ತಿಯಿದೆ ; ಬ್ಯಾಂಕಿನಲ್ಲಿ ಲಕ್ಷೋಪಲಕ್ಷ ಡಾಲರುಗಳಿವೆ. ಇವೆಲ್ಲಾ ನನಗಿವೆ : ಆದರೆ ನನಗೆ ಇನ್ನೂ ಸ್ವಲ್ಪ ಹೆಚ್ಚಾಗಿ ಬೇಕು. ಈ ಗ್ರಹಿಸುವ, ಸಂಗ್ರ ಹಿಸುವ, ಶೇಖರಿಸುವ, ರಾಶಿರಾಶಿಯಾಗಿ ಕೂಡಿಹಾಕುವ ಮನೋಭಾವದಿಂದ ಪ್ರೇರಿತನಾಗಿ ಇನ್ನೂ ಒಂದು ವಸ್ತುವನ್ನು ನಾನು ಸಂಗ್ರಹಿಸಬೇಕು, ಎನಿಸಿದೆ. ದಿವಾನಖಾನೆಯನ್ನು ಎಷ್ಟು ಸಜ್ಜುಗೊಳಿಸಿದ್ದರೂ ಬಂಧುಗಳ ಭಾವಚಿತ್ರಗಳಿಂದ ಗೋಡೆಗಳನ್ನು ಅಲಂಕರಿಸದಿದ್ದರೆ ಹೇಗೆ ಪೂರ್ಣವೆನಿಸದೋ ಹಾಗೆ ನಾನೆಷ್ಟು ಭಾಗ್ಯವಂತನಾದರೂ ಸ್ವಲ್ಪವಾದರೂ ಧರ್ಮವನ್ನು ಇಟ್ಟುಕೊಳ್ಳದಿದ್ದರೆ ನನಗೆ ಸಮಾಧಾನವಾಗುವದಿಲ್ಲ. ಆದ್ದರಿಂದ ಮಿಕ್ಕ ಭೋಗೈಶ್ವರ್ಯ, ವಸ್ತುವಾಹನಾದಿ ಗಳ ಜೊತೆಗೆ ಒಂದು ಚೂರು ಧರ್ಮವನ್ನೂ ಇಟ್ಟುಕೊಳ್ಳೋಣ-ಎಂದು ನನ್ನ ಇಚ್ಛೆ; ಆದರೆ ಮೊದಲು ಬೇಕಾಗಿರುವದು ನನಗೆ ಭೋಗ ವಸ್ತುಗಳು ; ಎಲ್ಲಕ್ಕೂ ಕೊನೆಯಲ್ಲಿ (ಬಾಲಂಗಚ್ಚಿಯಂತೆ) ಧರ್ಮವೂ ಸ್ವಲ್ಪ ಇದ್ದುಕೊಳ್ಳಲಿ ; ಇದ್ದರೆ ಇರಲಿ.

ಕೆಲವರಿಗೆ ಪ್ರಿಯವೆನಿಸದಿರುವ ಮಾತುಗಳು ರಾಮನ ಬಾಯಿಂದ ಬಂದರೆ, ನೀವು ದಯವಿಟ್ಟು ಅವನನ್ನು ಕ್ಷಮಿಸಬೇಕು. ರಾಮನು ವ್ಯಕ್ತಿಗಳನ್ನು ಗೌರವಿಸುವದ ಕ್ಕಿಂತಲೂ ಹೆಚ್ಚಾಗಿ ಸತ್ಯವನ್ನು ಗೌರವಿಸುತ್ತಾನೆ ಸತ್ಯವನ್ನು ಗೌರವಿಸುವದರಲ್ಲಿ ಅವನು ನಿಮಗೆ ನಿಜವಾದ ಗೌರವವನ್ನು ಕೊಡುತ್ತಾನೆ. ಏಕೆಂದರೆ ಅವನ ಪ್ರಕಾರ ನೀವೇ ಸತ್ಯಸ್ವರೂಪರು ; ಈ ದೇಹವು ನೀವಲ್ಲ, ಈ ವ್ಯಕ್ತಿಯೂ ಅಹಂಕಾರವೂ ನೀವಲ್ಲ. ಇಂಥಾಮಾತುಗಳನ್ನು ಆಡುವದಕ್ಕೆ ಸತ್ಯವು ಒತ್ತಾಯಪಡಿಸುತ್ತದೆ. ಈ

ದೇಶದಲ್ಲಿ ದೇವರಿಗೆ ಸಲ್ಲಿಸುವ ಸಾಮಾನ್ಯ ಪ್ರಾರ್ಥನೆಗಳಲ್ಲಿ, ದೇವರನ್ನು ಹೇಗೆ ಉಪಯೋಗಿಸುತ್ತಿದ್ದೀರಿ ? ಜನರು ದೇವರಲ್ಲಿಗೆ ಹೋಗುವದು ಹೇಗೆ ? ಮಗುವು ಕಾಯಿಲೆಬಿದ್ದಾಗ, ಆಸ್ತಿಗೆ ಏನಾದರೂ ಹಾನಿ ಬಂದಾಗ, ದೇಹಕ್ಕೆ ಏನಾದರೂ ಬಾಧೆ ಯಾದಾಗ ನೀವು ದೇವರಲ್ಲಿಗೆ ಬಂದು, ಕಣ್ಣುಗಳನ್ನು ಗಿರ್ರನೆ ತಿರುಗಿಸಿ, ಕೈಗಳನ್ನೆತ್ತಿ- "ಓ ದೇವ, ಸ್ವರ್ಗದಲ್ಲಿರುವ ಓ ದೇವ, ಅಂತರಿಕ್ಷದ ಮೇಲಿರುವ ದೇವ," ಎಂದು ಕೂಗಿ ಕರೆದು ಮೊರೆಯಿಡುತ್ತೀರಿ. ಪಾಪ, ದೇವರು ಯಾವಾಗಲೂ ಅಂತರಿಕ್ಷದ ಮೋಡಗಳಲ್ಲಿ ಅಡಗಿಕೊಂಡಿದ್ದರೆ ಅವನು ಚಳಿಯಿಂದ ನಡಗಬಹುದೆಂಬ ಕನಿಕರವೂ ನಿಮಗಿರುವಂತೆ ಕಾಣುವದಿಲ್ಲ. "ಸ್ವರ್ಗದಲ್ಲಿರುವ ಓ ದೇವ, ನನ್ನ ಮೇಲೆ ಕರುಣೆ ಯಿಂದ ನನ್ನ ಆಸ್ತಿಯನ್ನು ರಕ್ಷಿಸು ; ನನ್ನ ರೋಗವನ್ನು ಪರಿಹರಿಸು ; ನನ್ನ ಮಗುವನ್ನು ಕಾಪಾಡು". ಎಂದು ಪ್ರಾರ್ಥಿಸುತ್ತೀರಿ. ಆಹಾ ! ಇದು ಧರ್ಮವೆ ? ಮನೆಯಲ್ಲಿ ಏನಾದರೂ ಕಷ್ಟವಾದರೆ ಮನೆಯು ಹೊಲಸಾದಾಗ, ಮನೆಯು ಮುರಿದು ಬಿದ್ದಾಗ ಆ ದುರ್ದೈವಿ ದೇವರನ್ನು ಮನೆಯ ರಿಪೇರಿಗಾಗಿಯೂ ಮನೆಯನ್ನು ಗುಡಿಸುವದ ಕ್ಕಾಗಿಯೂ ಕೆಳಗೆ ಕರೆಯುತ್ತೀರಿ. ನೀವು ದೇವರನ್ನು ಬಳಸುವ ರೀತಿ ಇದೇ ಅಲ್ಲವೆ ? ಇಲ್ಲಿ ಧರ್ಮವನ್ನು ಹೀಗೆ ಕೀಳು ಉದ್ದೇಶಗಳಿಗಾಗಿ ಮಾತ್ರ ಇಟ್ಟುಕೊಂಡಿರುವದಲ್ಲವೆ ? ಧರ್ಮವೆಂದರೆ ಇದೆ ? ಇಲ್ಲಿ ಮುಖ್ಯವಾದ ವಸ್ತುವು ದೇಹ, ಈ ಅಲ್ಪ ವ್ಯಕ್ತಿ, ಹೆಂಡತಿ, ಮತ್ತು ಮಕ್ಕಳು ; ನಿಮ್ಮ ಮನೆಗಳನ್ನು ತಿಕ್ಕಿ, ಉಜ್ಜಿ, ತೊಳೆಯುವದಕ್ಕಾಗಿ ಕೆಳಗೆ ತರುತ್ತೀರಿ. ಇದು ನಿಜವಾಗಿ ಹೀಗೇ ಅಲ್ಲವೆ ?

ಇದುವರೆಗೆ ಮಾಡಿರುವ ವೇದಾಂತ ಬೋಧೆಗಳ ದೃಷ್ಟಿಯಿಂದ ರಾಮನು ಹೇಳುವದೇನೆಂದರೆ, ಇಡೀ ಇಂಡಿಯಾದಲ್ಲಿ ಅಲ್ಲವಾದರೂ ನಿಜವಾಗಿಯೂ ಧರ್ಮ ನಿಷ್ಠರಾದ ಜನರಲ್ಲಿಯಾದರೂ ದೇವರ ವಿಷಯವು ಬೇರೆಯಾಗಿದೆ.

"Seek ye the kingdom of Heaven and everything else will be added unto you,"

"ನೀವು (ಮೊದಲು) ಸ್ವರ್ಗ ಸಾಮ್ರಾಜ್ಯವನ್ನು (ಭಗವಂತನ ಸಾಮ್ರಾಜ್ಯ ವನ್ನು) ಪಡೆಯಲು ಪ್ರಯತ್ನಮಾಡಿ. ಮಿಕ್ಕ ಎಲ್ಲವೂ (ತಾವಾಗಿಯೇ) ನಿಮ್ಮನ್ನು (ಹುಡುಕಿಕೊಂಡು) ಬಂದು ಸೇರುತ್ತವೆ." ಎಂಬೀ ಕ್ರಿಸ್ತನ ಉಪದೇಶಕ್ಕೆ ಜನರು ಹೆಚ್ಚು ಗಮನ ಕೊಡುವದಿಲ್ಲ. ಇದು ಅವರ ಕಿವಿಗೇ ಬೀಳುವದಿಲ್ಲ. ಆದರೆ ಇಂಡಿಯಾದಲ್ಲಿ ಇದನ್ನೇ ಸಂದೇಹಕ್ಕೆ ಅವಕಾಶವಿಲ್ಲದಷ್ಟು ಮಹತ್ವಕೊಟ್ಟು,

ಪದೇ ಪದೇ ಒತ್ತಿ ಒತ್ತಿ ಅತ್ಯಂತ ಶಕ್ತಿಯುತವಾಗಿ ಬೋಧಿಸುತ್ತದೆ. ಇದರ ಅರ್ಥ ವೇನೆಂದರೆ; ಅತ್ಯಂತ ಪ್ರಿಯನಾದ ಭಗವಂತನ ಪಾದಾರವಿಂದಗಳಲ್ಲಿ ದೇಹವನ್ನೂ ಮನಸ್ಸನ್ನೂ ಎಲ್ಲಾ ಸಂಬಂಧಗಳನ್ನೂ ಆಸ್ತಿಯನ್ನೂ ಇಡೀ ಪ್ರಪಂಚವನ್ನೇ ಭಕ್ತಿಯಿಂದ "ಇವೆಲ್ಲವೂ ನಿನ್ನವು ; ನೀನೊಬ್ಬನೇ ನನಗೆ ಬೇಕು" ಎಂದು ಸಮರ್ಪಣಮಾಡಬೇಕು. ಆಗ ವಿಶಾಲ ಜಗತ್ತೇ ನಮ್ಮ ಮನೆಯಾಗುತ್ತದೆ ; ಯಾವಾಗಲೂ ಎಲ್ಲರಿಗೂ ಒಳ್ಳೆಯ ದನ್ನು ಮಾಡುವದೇ ನಮ್ಮ ಧರ್ಮವಾಗುತ್ತದೆ. ಈ ದೃಷ್ಟಿಯಲ್ಲಿ, ಯಾವದು ಅತ್ಯಂತ ಅವಶ್ಯವೋ, ಯಾವದನ್ನು ಬಿಟ್ಟು ನಾವು ಬದುಕಿರಲಾರೆವೋ, ಬದುಕಿರ ಲಾಗದೋ ಆ ಭಗವಂತನೇ ನಮ್ಮ ಸರ್ವಸ್ವವಾಗುತ್ತಾನೆ ; ಮಿಕ್ಕ ಎಲ್ಲವೂ ಗೌಣ ವಾಗುತ್ತವೆ, ಉಪಕರಣಗಳಾಗುತ್ತವೆ, ವಿದೇಶದ ವಸ್ತುಗಳಂತೆಯೋ ಬೇರೆ ಲೋಕದ ವಸ್ತುಗಳಂತೆಯೋ ಅಮುಖ್ಯವಾಗುತ್ತವೆ ನಮ್ಮ ಹೃದಯ ಮಂದಿರದಲ್ಲಿಯೇ ದೇವ ರನ್ನು ಕಾಣುವದರಿಂದ ಹೊರಗಿನ ಮನೆಗಳೂ ಮಂದಿರಗಳೂ ಮಹಲುಗಳೂ ಮೂರು ದಿನಗಳ ಮಾತ್ರ ಉಳಿಯಬಹುದಾದ ಕೇವಲ ಪ್ರವಾಸಿ ಮಂದಿರಗಳಂತೆಯೋ ಹೋಟಲುಗಳಂತೆಯೋ ಆಗುತ್ತವೆ. ಜನರು ತಮ್ಮ ಹೆಂಡತಿ, ಮಕ್ಕಳು ವೊದಲಾದ ವರ ಯೋಗಕ್ಷೇಮಗಳನ್ನೂ ಆವಶ್ಯಕತೆಗಳನ್ನೂ ನಿರ್ವಹಿಸಬೇಕೆಂಬದು ನಿಜವಾದರೂ ಅವರನ್ನೇ ತಮ್ಮ ಸರ್ವಸ್ವವನ್ನಾಗಿ ಮಾಡಿಕೊಳ್ಳುತ್ತಾರೆ. ಇದರಿಂದ ದೇವರಿಗೂ ಧರ್ಮಕ್ಕೂ ಮನೆಯ ಕಸದ ಮೂಲೆಯಲ್ಲಿ ಸಹ ಸ್ಥಳವನ್ನು ಕೊಟ್ಟಂತೆ ಆಗುವುದಿಲ್ಲ. ಮನೆಯ ಕಸವನ್ನೆತ್ತಿ ಹೊರಗೆ ಹಾಕಿದಂತೆ ಮನೆಯಿಂದಲೂ ಮನಸ್ಸಿನಿಂದಲೂ ದೇವ ರನ್ನೂ ಧರ್ಮವನ್ನೂ ಹೊರಗೆ ಹಾಕುತ್ತೇವೆ. ಏಕೆಂದರೆ, ನಮ್ಮ ಮಿತ್ರರೊಬ್ಬರು ಕೇಳಿದ ಈ ಪ್ರಶ್ನೆಯನ್ನು ನೋಡಿ "Have you got a Soul ?" "ನಿಮ ಗೊಂದು ಆತ್ಮವಿದೆಯೆ ?" ಇದು, "Have you got a pencil ?" "ನಿಮ್ಮಲ್ಲಿ ಒಂದು ಪೆನ್ಸಿಲ್ ಇದೆಯೆ ?" ಎಂದಂತೆ. ಇದೊಂದು ಅಸಂಬದ್ಧ ಪ್ರಶ್ನೆ. ಏಕೆಂದರೆ, ನಾನೇ ಆತ್ಮ, ಆತ್ಮನೇ ನಾನು ಆದ್ದರಿಂದ ನನಗೆ ದೇಹವಿದೆಯೇ ಹೊರತು ಆತ್ಮನಿಲ್ಲ. ದೇಹವು ನನ್ನಿಂದ ಬೇರೆಯಾಗಿದೆ. ಆತ್ಮನೇ ನಾನಾದ್ದರಿಂದ ಆತ್ಮನು ಬೇರೆ ಇಲ್ಲ. "ನಿಮಗೊಂದು ಆತ್ಮವಿದೆಯೆ ?" ಎನ್ನುವ ಪ್ರಶ್ನೆ ಅರ್ಥವಿಲ್ಲದ ಹುಚ್ಚು ಪ್ರಶ್ನೆ ; ತೀರ ಅವಿವೇಕದ ಪ್ರಶ್ನೆ ಈ ಪ್ರಶ್ನೆಯು, ನಾನು ದೇಹವೆಂದೂ ಆತ್ಮವು ನನ್ನ ಒಂದು ವಸ್ತುವೆಂದೂ ಆಸ್ತಿಯೆಂದೂ ಸೂಚಿಸುತ್ತದೆ. ಆದರೆ ನಾನೇ ನಿಜವಾಗಿ ಆತ್ಮ ; ನನಗೆ ದೇಹವೂ ಇದೆ, ಇಡೀ ಜಗತ್ತೇ ಇದೆ.

ಇನ್ನೊಬ್ಬ ಮನುಷ್ಯನು ರಾಮನನ್ನು ಕುರಿತು "ನೀವು ದೇವರನ್ನು ನಂಬುತ್ತೀರಾ ?" ಎಂದು ಕೇಳಿದನು. ರಾಮ ಹೇಳುವದೇನೆಂದರೆ, "ನಾನು

ದೇವರನ್ನು ಬಲ್ಲೆ, ಅರಿತಿದ್ದೇನೆ." ಎಂದು ನಮಗೆ ಗೊತ್ತಿಲ್ಲದ ಒಂದು ವಸ್ತುವನ್ನು ನಾವು ನಂಬುತ್ತೇವೆ. ನಮ್ಮ ಮೇಲೆ ಒತ್ತಾಯ ಮಾಡಲ್ಪಟ್ಟ ಒಂದು ವಸ್ತುವನ್ನೂ ನಾವು ನಂಬುವುದು. ಆದರೆ ದೇವರನ್ನು ನಂಬುವದೆಂದರೆ ಏನು? ಅವನ ವಿಷಯ ವಾಗಿ ನಿಮಗೇನು ಗೊತ್ತು? "ನಾನು ದೇವರನ್ನು—ಎಲ್ಲಕ್ಕಿಂತಲೂ ಹೆಚ್ಚಾಗಿ ಚೆನ್ನಾಗಿ ಬಲ್ಲೆ, ಪೂರ್ಣವಾಗಿಬಲ್ಲೆ. ನಾನೇ ಅವನು; ನಾನೇ ಅವನು." ಇನ್ನೊಂದು ಮಾತನ್ನು ಹೇಳುತ್ತಾರೆ "ದೇವರು ನಿನ್ನೊಳಗೇ ಇದ್ದಾನೆ" ಎಂದು. ರಾಮನು ಹೇಳುವದೇನೆಂದರೆ, ದೇಹವೂ ಜಗತ್ತೂ ದೇವರ ಒಳಗಿವೆ, ಎಂದು ನಾನೇ ದೇವರು ಆದ್ದರಿಂದ ಜಗತ್ತೆಲ್ಲಾ ನನ್ನೊಳಗೇ ಇದೆ. ಆದ್ದರಿಂದ ಆ ಮಾತಿಗೂ ಈ ಮಾತಿಗೂ ಇಷ್ಟು ವ್ಯತ್ಯಾಸವಿದೆ. ಒಬ್ಬ ಮನುಷ್ಯನು ಸತ್ತಾಗ, ಈ ದೇಶದಲ್ಲಿ ಜನರು "He gave up the ghost" "ಆತ್ಮವನ್ನು ಬಿಟ್ಟನು" ಎನ್ನುತ್ತಾರೆ; ಆದರೆ ಇಂಡಿಯಾ ಜನರು, "ಅವನು ದೇಹವನ್ನು ಬಿಟ್ಟ" ಎನ್ನುತ್ತಾರೆ. ಈ ಎರಡು ದೃಷ್ಟಿಗಳಲ್ಲಿರುವ ವ್ಯತ್ಯಾಸವನ್ನು ಈ ಪ್ರಸಂಗವು ತೋರಿಸುತ್ತದೆ. ಅವನು ಆತ್ಮವನ್ನು ಬಿಟ್ಟ, ಎನ್ನುವದರಲ್ಲಿ, ದೇಹವೇ ಅವನ ನಿಜಜವಾದ ಆತ್ಮವೆಂದೂ 'ghost or spirit' ಚೈತನ್ಯವು ಅದಕ್ಕೆ ಗಂಟುಬಿದ್ದಿದ್ದ ಹೊರಗಿನ ಒಂದು ವಸ್ತುವೆಂದೂ ಅರ್ಥವಾಗುತ್ತದೆ. ಇಂಡಿಯಾ ಜನರು, "ನಾನೇ ಆತ್ಮ, ನಾನು ದೇಹವನ್ನು ಬಿಡುತ್ತೇನೆ. ಬಟ್ಟೆಗಳನ್ನು ಕಳಚಿ ಬದಲಾಯಿಸುವಂತೆಯೇ ನಾನು ದೇಹವನ್ನು ತ್ಯಜಿಸುತ್ತೇನೆ." ಎಂದು ಹೇಳುತ್ತಾರೆ.

ಇಲ್ಲಿ ಇನ್ನೊಂದು ಪ್ರಶ್ನೆಯಿದೆ, ದೇವರು ಸರ್ವ ಸ್ವತಂತ್ರನಾದರೆ, ಅವನೇ ಎಲ್ಲವೂ ಆದರೆ, ಈ ಪ್ರಪಂಚದಲ್ಲಿ ಇಷ್ಟು ದುಃಖ ದುರವಸ್ಥೆಗಳು ಏಕಿವೆ? " ವೇದಾಂತವು, ದೇವರು ಸರ್ವವೂ ಆಗಿದ್ದಾನೆ, ದೇವರು ಸರ್ವತಂತ್ರ ಸ್ವತಂತ್ರನು, ಎಂದು ಹೇಳುತ್ತದೆ. ಆದ್ದರಿುದ ಜನರು "ನೀವು ದೇವರೆ? ನಾನೂ ದೇವರೆ?" ಎಂದು ಕೇಳುತ್ತಾರೆ. ಇಲ್ಲ, ಇಲ್ಲ. ದೇವರನ್ನು ಹರಿಯುವದಕ್ಕಾಗಲೀ ಕತ್ತರಿಸುವ ದಕ್ಕಾಗಲೀ ಆಗುವದಿಲ್ಲ. ನೀವು ದೇವರ ಅಂಶವಲ್ಲ, ಭಾಗವಲ್ಲ. ದೇವರು ಅನಂತನೂ ಅಖಂಡನೂ ಇರುವದರಿಂದ ನೀವು ಇಡೀ ದೇವರು, ಪೂರ್ಣವಾಗಿ ಪರ ಮಾತ್ಮನೇ

ಈಗ ಪ್ರಶ್ನೆಯೇನೆಂದರೆ, ದೇವರು ಎಲ್ಲವೂ ಆದರೆ, ಒಂದು ದೇಹನಲ್ಲಿ ಅವನು ಕಷ್ಟಕಾರ್ಪಣ್ಯಗಳಿಂದ ನರಳುತ್ತಿರುವದಕ್ಕೂ ಇನ್ನೊಂದು ದೇಹದಲ್ಲಿ ಅಷ್ಟೈಶ್ವರ್ಯ ಸುಖ ಸಂಪತ್ತುಗಳಿಂದ ನಲಿಯುವದಕ್ಕೂ ಕಾರಣವೇನು? ಅವನು ಇಂಡಿಯಾ

ದೇಶಕ್ಕೆ ಬಡತನವನ್ನೂ ಬವಣೆಯನ್ನೂ ಪ್ಲೇಗ್‌ರೋಗವನ್ನೂ ಏಕೆ ಕೊಡಬೇಕು ? ಅಮೆರಿಕಾ ದೇಶಕ್ಕೆ ಸರ್ವಸಮೃದ್ಧಿಯನ್ನೂ ಸುಖವನ್ನೂ ರಾಜಕೀಯ ಸ್ವಾತಂತ್ರ್ಯವನ್ನೂ ಏಕೆ ಕೊಡಬೇಕು ? ಒಬ್ಬನು ಕೋಟಿ ಕೋಟಿ ರೂಪಾಯಿಗಳನ್ನು ಗಳಿಸುವಂತೆಯೂ ಇನ್ನೊಬ್ಬನು ಅತಿ ದರಿದ್ರನಾಗಿ ಹೊಟ್ಟೆಗಿಲ್ಲದೆ ಹಸಿವಿನಿಂದ ಸಾಯುವಂತೆಯೂ ದೇವರು ಏಕೆ ಮಾಡಬೇಕು ? ಪ್ರಪಂಚದಲ್ಲಿರುವ ಈ ವಿಷಮ ಸ್ಥಿತಿಯನ್ನು ನೋಡಿದರೆ, ದೇವರಲ್ಲಿ ಎಷ್ಟು ಅವಿವೇಕವೂ ಪಕ್ಷಪಾತವೂ ಇದೆ, ಎನ್ನಿಸುತ್ತದೆ. ಅಂಥವನನ್ನು ದೇವರು ಎನ್ನಬಹುದೆ ? ಇದೇ ಪ್ರಶ್ನೆ. ಈ ಬಗೆಯ ಪ್ರಶ್ನೆ ಮಾಡತಕ್ಕವರನ್ನು ಸಮಾಧಾನಪಡಿಸುವದಕ್ಕಾಗಿ ಈ ದೇಶದಲ್ಲಿಯೂ ಇಂಡಿಯಾ ದಲ್ಲಿಯೂ ಪ್ರಯತ್ನಮಾಡಿದ್ದಾರೆ. ಅವರಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯ ಜನರು, ಕಾರಣ-ಕಾರ್ಯಗಳ ಕರ್ಮವಾದವನ್ನು ಆಶ್ರಯಿಸುತ್ತಾರೆ. ಪ್ರತಿಯೊಬ್ಬನೂ ತನ್ನ ಅದೃಷ್ಟಕ್ಕೆ ತಾನೇ ಒಡೆಯ ; ತನ್ನ ಸುತ್ತಲ ಸನ್ನಿವೇಶ-ಸಂದರ್ಭಗಳನ್ನು ಪ್ರತಿಯೊಬ್ಬನೂ ತಾನೇ ಸೃಷ್ಟಿಸಿಕೊಳ್ಳುತ್ತಾನೆ. ಅವರವರ ಸೌಭಾಗ್ಯ ದೌರ್ಭಾಗ್ಯಗಳಿಗೆ ಅವರವರ ಕರ್ಮವೇ ಕಾರಣ, ಎನ್ನುವದೇ ಕರ್ಮ ಸಿದ್ಧಾಂತ. ಇದರಿಂದ ದೇವರು ನ್ಯಾಯವಾಗಿದ್ದಾನೆ ; ಸರ್ವಸಮನಾಗಿದ್ದಾನೆ. ಅವನಿಗೆ ಯಾರ ಮೇಲೆಯೂ ದ್ವೇಷವಿಲ್ಲ. ಪಕ್ಷಪಾತವಿಲ್ಲ. ಎಂದು ಮೊದಲಾಗಿ ವಾದಿಸುತ್ತಾರೆ. ರಾಮನು ಈ ಕರ್ಮವಾದವನ್ನು ವಿವರಿಸಬೇಕಾಗಿಲ್ಲ ಕಾರ್ಯ ಕಾರಣಗಳ ಈ ವಾದವು ಇಂಡಿಯಾ ದೇಶದಿಂದ ಬಂದಿದೆ ವೇದಾಂತವೂ ಇದನ್ನು ಅನುಮೋದಿಸಿದೆ, ಒಪ್ಪಿದೆ ಆದರೆ ಅದು ಕೇವಲ ವ್ಯಾವಹಾರಿಕ ವಿಶ್ವಕ್ಕೇ ಸಂಬಂಧಪಟ್ಟಿದೆ. ದೃಶ್ಯ ವಿಲಾಸಕ್ಕೆ ಸಂಬಂಧಪಟ್ಟಿದೆ. ಆ ವಾದವು ಪ್ರಶ್ನೆಯ ಬೇರಿಗೆ, ಮೂಲಕ್ಕೆ ಹೋಗುವದಿಲ್ಲ. ಜನ್ಮಾಂತರ ಮೊದಲಾದವುಗಳನ್ನೆಲ್ಲಾ ಸಮಾಧಾನಕರವಾಗಿ ವಿವರಿಸುವ ಕರ್ಮವಾದವು ನಿಮ್ಮ ಈಗಿನ ಸ್ಥಿತಿಯ ಸಂದರ್ಭಗಳೂ ಪರಿಸ್ಥಿತಿಗಳೂ ನಿಮ್ಮ ಹಿಂದಿನ ಕಾಮನೆಗಳ ಮತ್ತು ಕರ್ಮಗಳ ಫಲವಾಗಿವೆಯೆಂದು ಹೇಳುತ್ತದೆ. ಹೀಗೆ, ನಿಮ್ಮ ಸುತ್ತಲಿರುವ ಈಗಿನ ಸಂದರ್ಭಗಳು, ಸನ್ನಿವೇಶಗಳು ಏನೇ ಇರಲಿ, ನಿಮ್ಮ ಅದೃಷ್ಟವು ಅಥವಾ ದೈವವು ಹೇಗೇ ಇರಲಿ, ಇವೆಲ್ಲವನ್ನೂ ಹೀಗೆ ಮಾಡಿರುವದಕ್ಕೆ ನಿಮ್ಮ ಹಿಂದಿನ ಬಯಕೆಗಳೂ ಇಚ್ಛೆಗಳೂ ಕರ್ಮಗಳೂ—ಇವೇ ಕಾರಣವಾಗಿವೆ ನೀವು ಚೆನ್ನಾಗಿ ಪರೀಕ್ಷಿಸಿದರೆ, ಈ ವಾದವು ವಿವರಿಸುವದಕ್ಕೆ ಹೊರಟು ತನ್ನ ಕಷ್ಟದಿಂದ ನುಣುಚಿಕೊಂಡು ಸುಮ್ಮನೆ ಅದನ್ನು ಮತ್ತೊಂದರ ತಲೆಗೆ ಕಟ್ಟುವಂತೆ ಕಾಣುತ್ತದೆ. ಆ ಪ್ರಶ್ನೆಗೆ ಅದು ಪೂರ್ಣ ಉತ್ತರವನ್ನು ಕೊಡುವದಿಲ್ಲ ಅದರ ಉತ್ತರವು ಆಮೂಲಾಗ್ರ ಪರಿಶೀಲನೆಯ ಫಲವಲ್ಲ. ರಾಮನು ಈ ವಾದವನ್ನೇನೂ ನಿರಾಕರಿಸುವದಿಲ್ಲ ; ಭಂಗಪಡಿಸುವದಿಲ್ಲ. ರಾಮನು ಅದನ್ನು ಒಪ್ಪಿಕೊಳ್ಳುತ್ತಾನೆ , ಸಮರ್ಥನೆ

ಮಾಡಿ, ಎತ್ತಿ ಹಿಡಿಯುತ್ತಾನೆ. ಆವರೆ ಅವನು ಆ ಪ್ರಶ್ನೆಯ ಇನ್ನೊಂದು ಮುಖವನ್ನು ಬೆಳಕಿಗೆ ತರಬೇಕೆನ್ನುತ್ತಾನೆ. ಆ ಮುಖವನ್ನು ಅಮೆರಿಕಾದವರು ಪೂರಾ ಕಡೆಗಣಿಸಿದ್ದಾರೆ, ಅಲಕ್ಷ್ಯಮಾಡಿದ್ದಾರೆ ಇಂಡಿಯಾದವರು ಅದನ್ನು ಅಷ್ಟು ಕಡೆಗಾಣದಿದ್ದರೂ ಓನ್ನೆಲೆಗೆ ತಳ್ಳಿದ್ದಾರೆ.

ಈ ಕರ್ಮವಾದದಂತೆ, ಈಗಿನ ಸಂದರ್ಭಗಳಲ್ಲಿಯ ಭೇದಗಳನ್ನು ಹಿಂದಿನ ಕರ್ಮಗಳು ಉಂಟು ಮಾಡಿವೆ. ಇದೇ ವಾದದಂತೆ ನಿಮ್ಮ ಹಿಂದಿನ ಜನ್ಮಗಳಲ್ಲಿ ಸಹ ನಿಮ್ಮ ಕಾಮುಗಳಲ್ಲಿಯೂ ಕರ್ಮಗಳಲ್ಲಿಯೂ ಒಲವುಗಳಲ್ಲಿಯೂ ಭೇದವಿತ್ತೆಂದು ಸಿದ್ಧವಾಗುತ್ತದೆ. ಆಗಲೂ ಕೆಲವರು ರೋಗಿಗಳಾಗಿಯೂ ಕೆಲವರು ಬಡವರಾಗಿಯೂ ಇನ್ನು ಕೆಲವರು ಧನಿಕರಾಗಿಯೂ ಇದ್ದರು. ಆ ನಿಮ್ಮ ಹಿಂದಿನ ಜನ್ಮಗಳ ಭೇದಗಳಿಗೆ ಯಾವದು ಕಾರಣ ? ನಿಮ್ಮ ಹಿಂದಿನ ಜನ್ಮದ ಪರಿಸ್ಥಿತಿಗಳಲ್ಲಿದ್ದ ಭೇದಗಳಿಗೆ ಅದರ ಹಿಂದಿನ ಜನ್ಮಗಳಲ್ಲಿದ್ದ ಅದೇ ರೀತಿಯ ಭೇದಗಳೇ ಕಾರಣ. ಎನ್ನುವದೇ ಉತ್ತರ. ಆ ಹಿಂದಿನ ಜನ್ಮಗಳಲ್ಲಿದ್ದ ಭೇದಗಳಿಗೆ ಏನು ಕಾರಣ ? ಎನ್ನುವ ಈ ಪ್ರಶ್ನೆಗೆ ಕೊನೆಯೇ ಇಲ್ಲವಾಗುತ್ತದೆ. ಆ ಒಂದೇ ರೀತಿಯ ಉತ್ತರಕ್ಕು ನಿಲುಗಡೆಯೇ ಇಲ್ಲದಂತಾಗುತ್ತದೆ ಈ ವಾದವು ಆ ಕಷ್ಟವನ್ನು ಲಕ್ಷ ಲಕ್ಷ ಪಟ್ಟು ಹೆಚ್ಚು ಜಟಿಲವಾಗಿಯೂ ತೊಡಕಾಗಿಯೂ ಮಾಡುತ್ತದೆ. ಏಕೆಂದರೆ ಈ ವಾದದ ಪ್ರಕಾರ, ಹಿಂದೆ ಅನಂತಕಾಲದವರೆಗೆ ಬೆಳೆಸಬಹುದಾದ ನಿಮ್ಮ ಹಿಂದಿನ ಎಲ್ಲಾ ಜನ್ಮಗಳಲ್ಲಿಯೂ, ಪ್ರಾರಂಭದವರೆಗೂ—ನಿಜವಾಗಿಯೂ ಪ್ರಾರಂಭವಿರುವದಾದರೆ—ಭೇದಗಳು ಇದ್ದೇ ಇರುತ್ತವೆ. ಉದ್ದಕ್ಕೂ ಎಲ್ಲಾ ಜನ್ಮಗಳಲ್ಲಿಯೂ ಭೇದವೂ ವಿರೋಧವೂ ಘರ್ಷಣೆಯೂ ತಪ್ಪದೆ ಇವೆ. ಆದ್ದರಿಂದ ಈ ಪ್ರಶ್ನೆಗೆ ಉತ್ತರವನ್ನು ಹೇಳಿದಂತಾಗಲಿಲ್ಲ ; ಸುಮ್ಮನೆ ಅದನ್ನು ಹೆಚ್ಚು ತೊಡಕಾಗಿ ಮಾಡಿತು. ಈಗ ಆ ಪ್ರಶ್ನೆಯು ಸಹಸ್ರಪಟ್ಟು ಹೆಚ್ಚು ಶಕ್ತಿಯುತವಾಯಿತು. ಈಗ ಆ ಪ್ರಶ್ನೆಯು ಹೀಗೆ ನಿಲ್ಲುತ್ತದೆ. " ದೇವರು ಅನಂತ ಕಾಲದಿಂದಲೂ ಈ ಭೇದಗಳನ್ನು ಏಕೆ ಭದ್ರವಾಗಿಟ್ಟಿದ್ದಾನೆ ? ದೇವರು ಅನಂತ ಕಾಲದಿಂದಲೂ, ಒಂದು ಸ್ಥಳದಲ್ಲಿ ಒಬ್ಬನನ್ನು ಐಶ್ವರ್ಯವಂತನನ್ನಾಗಿಯೂ ಆರೋಗ್ಯವಂತನನ್ನಾಗಿಯೂ ಇನ್ನೊಬ್ಬನನ್ನು ಇನ್ನೊಂದು ಸ್ಥಳದಲ್ಲಿ ಬಡವನನ್ನಾಗಿಯೂ ರೋಗಿಯನ್ನಾಗಿಯೂ ಅಥವಾ ಇದರ ವಿರುದ್ಧವಾಗಿಯೂ ಏಕೆ ಮಾಡಿದ್ದಾನೆ ? ಇದೆಷ್ಟು ಅವಿಚಾರ, ಅವಿವೇಕ ! ಇದು ಹೇಗೆ ನ್ಯಾಯ ? ವೇದಾಂತ ಹೇಳುವದೇನೆಂದರೆ, ಈ ಪ್ರಶ್ನೆಯನ್ನು ನಾನು ನಿಮಗೆ ಹಾಕಬೇಕಾಗಿತ್ತು ; ನೀವು ನನಗೆ ಹಾಕುವದಕ್ಕೆ ಅಧಿಕಾರವಿಲ್ಲ, ಈ ಪ್ರಶ್ನೆಗೆ ನೀವೇ ಉತ್ತರ ಹೇಳಬೇಕು. ಉತ್ತರ ಹೇಳುವ ಹೊಣೆ ವೇದಾಂತಕ್ಕೆ ಇಲ್ಲ. ಉತ್ತರ ಹೇಳಬೇಕಾದ ಕರ್ತವ್ಯದ

ಹೊರೆ ನನ್ನ ಮೇಲಿಲ್ಲ. ನಾನು ಹೇಳುವುದು, ಉಪದೇಶಿಸುವುದು ಐಕ್ಯವನ್ನು, ಏಕತೆಯನ್ನು, ಅಖಂಡತೆಯನ್ನು. ಆ ದೃಷ್ಟಿಯಿಂದಲೇ ನಿಲುಮೆಯಿಂದಲೇ ತೋರಿಕೆಯ ಭೇದಗಳಿಗೆ ಸಮಾಧಾನ ಕೊಡುತ್ತೇನೆ".

ಉದಾಹರಣೆಗಾಗಿ, ಕ್ರೂರಿಯೂ ಪ್ರಜಾಪೀಡಿತನೂ ಆದ ಒಬ್ಬ ನಿರಂಕುಶ ರಾಜ ನಿದ್ದಾನೆಂದು ಇಟ್ಟುಕೊಳ್ಳೋಣ. ಅವನು ದೇವರ ಸ್ಥಾನದಲ್ಲಿದ್ದಾನೆಂದೂ ಭಾವಿಸೋಣ. ಅವನು ತನ್ನಿಂದ ಬೇರೆಯಾದ ಐದು ಜನರನ್ನು ಸೃಷ್ಟಿಮಾಡಿ, ಅವರನ್ನು ತನಗಿಂತಲೂ ದುರ್ಬಲರನ್ನಾಗಿಯೂ ತನ್ನ ದಾಸರನ್ನಾಗಿಯೂ ಮಾಡಿಕೊಂಡು, ಅವರಲ್ಲಿ ಒಬ್ಬನನ್ನು ಕಾರಾಗೃಹದಲ್ಲಿಯೂ ಎರಡನೆಯವನನ್ನು ಸುಂದರವಾದ ನಂದನವನದಲ್ಲಿಯೂ ಮೂರನೆಯವನನ್ನು ಒಂದು ಭವ್ಯವಾದ ಅರಮನೆಯಲ್ಲಿಯೂ ನಾಲ್ಕನೆಯವನನ್ನು ವಸ್ತ್ರಾಲಂಕಾರಗಳ ಕೋಣೆಯಲ್ಲಿಯೂ ಐದನೆಯವನ ಎದೆಯ ಮೇಲೆ ಹಿಮಾಲಯಭಾರವನ್ನೂ ಇಟ್ಟರೆ, ಅಂಥಾಪ್ರಭುವು ಎಂಥವನು ಎನ್ನುತ್ತೀರಿ ? ಅವನು ನಿಶ್ಚಯವಾಗಿ ಕ್ರೂರಿಯೂ ಕಠೋರಸ್ವಭಾವದವನೂ ಆದ ಪ್ರಭುವು ಪರಮ ಅನ್ಯಾಯ-ದೌರ್ಜನ್ಯಗಳ ದೈತ್ಯನೇ ಸರಿ. ಸೃಷ್ಟಿಕರ್ತನೆನಿಸಿಕೊಂಡಿರುವ ದೇವರು ಅವನು ಸೃಷ್ಟಿಮಾಡಿರುವ ಪ್ರಾಣಿಗಳಿಗಿಂತಲೂ ಪ್ರಪಂಚಕ್ಕಿಂತಲೂ ಬೇರೆಯಿದ್ದು, ಒಂದು ದೇಶವನ್ನು ಬಹಳ ಸುಖಿಯಾಗಿಯೂ ಇನ್ನೊಂದನ್ನು ಬಹಳ ದುಃಖಿಯಾಗಿಯೂ ದೀನಹೀನವಾಗಿಯೂ ಒಬ್ಬ ಮಷ್ಯನನ್ನು ಧನಿಕನನ್ನಾಗಿಯೂ ಇನ್ನೊಬ್ಬನನ್ನು ದರಿದ್ರನನ್ನಾಗಿಯೂ ಮಾಡಿದ್ದರೆ ಬಹಳ ಕ್ರೂರಿಯೆಂದೂ ಅನ್ಯಾಯದವನೆಂದೂ ಹೇಳಬಹುದಾಗಿತ್ತು. ದೇವರು ಮನುಷ್ಯನಿಂದ ಬೇರೆಯವನೆಂದೂ ತಿಳಿದಿರುವ ಜನರು ಈ ಪ್ರಶ್ನೆಗೆ ಉತ್ತರ ಕೊಡಬೇಕು.

ದೇವರು ಎಲ್ಲಿಯೋ ಬೇರೆ, ದೂರವಿದ್ದಾನೆಂದು ವೇದಾಂತವು ಹೇಳುವುದಿಲ್ಲ " ನಿಮ್ಮ ಕಣ್ಣುಗಳನ್ನು ಮುಚ್ಚಿಕೊಂಡು ನಿಮ್ಮೊಳಗೇ ಅವನನ್ನು ನೋಡಿ " ಎಂದು ವೇದಾಂತವು ಹೇಳುತ್ತದೆ

ಈಗ ನೋಡಿ , ಹೀಗೆ ಯೋಚನೆಮಾಡಿ. ಇಲ್ಲಿ ಒಬ್ಬ ರಾಜನಿದ್ದಾನೆ ಅವನು ತನ್ನ ತೋಟದೊಳಗೆ ಒಮ್ಮೆ ಹೋಗುತ್ತಾನೆ, ಇನ್ನೊಂದು ಸಮಯದಲ್ಲಿ ತನ್ನ ಅರಮನೆಯೊಳಗೆ ಹೋಗುತ್ತಾನೆ, ಮತ್ತೊಂದು ಕಾಲದಲ್ಲಿ ಅವನ ಮನೆಯ ಕತ್ತಲು ಗವಿಯಲ್ಲಿ ಹೋಗುತ್ತಾನೆ, ಒಮ್ಮೆ ತಾನೇ ಭಾರವಾದ ಹೊರೆಯನ್ನು ಹೊತ್ತುಕೊಳ್ಳುತ್ತಾನೆ ; ವೇಷಭೂಷಣಗಳ ಕೋಣೆಯೊಳಗೂ ಹೋಗುತ್ತಾನೆ. ಇಂಥವನ ವರ್ತನೆಯು ಅನ್ಯಾಯವಾಗಬಹುದೆ ? ಎಂದಿಗೂ ಇಲ್ಲ. ಆ ಬೇರೆ ಬೇರೆ ಸ್ಥಳಗಳಲ್ಲಿ

ದ್ದವರು ಅವನಿಂದ ಬೇರೆಯಾಗಿದ್ದರೆ ಅವನು ಅವರನ್ನು ಹಾಗೆ ಇಟ್ಟಿದ್ದರೆ, ಅವನದು ಅನ್ಯಾಯವಾಗುತ್ತಿತ್ತು. ಅವನು ತಾನೇ ಸ್ವೇಚ್ಛೆಯಾಗಿ ಆ ಬೇರೆ ಬೇರೆ ಸ್ಥಳಗಳಲ್ಲಿರುವದರಿಂದ ಅದರಲ್ಲಿ ಅನ್ಯಾಯವೇನೂ ಇಲ್ಲ. ಎಲ್ಲಾ ಆಕ್ಷೇಪಣೆಯೂ ದೂಷಣೆಯೂ ಪರಿಹಾರವಾಗುತ್ತವೆ.

ದುಃಖಿತರೂ ದರಿದ್ರರೂ ಧನಿಕರೂ ಆದ ಜನರಿಂದ ದೇವರು ಬೇರೆಯಾಗಿದ್ದರೆ ಈ ತೋರಿಕೆಯ ಭೇದವೂ ವಿರೋಧವೂ ದೇವರ ಮುಖದ ಮೇಲೆ ದೋಷವೂ ದೂಷಣೆಯೂ ಕಳಂಕವೂ ಆಗಬಹುದಾಗಿತ್ತು; ಆದರೆ ಆ ಎಲ್ಲರೂ ದೇವರೇ ಆಗಿದ್ದಾನೆ, ಆದ್ದರಿಂದ ಯಾವ ದೋಷವೂ ಇಲ್ಲ, ಎಂದು ವೇದಾಂತವು ಹೇಳುತ್ತದೆ. ಎಲ್ಲವೂ ರಾಮನೇ ಆಗಿದ್ದಾನೆ. ಒಂದು ಸ್ಥಳದಲ್ಲಿ ನಾನೇ ಐಶ್ವರ್ಯವಂತನಾಗಿದ್ದೇನೆ; ನಾನೇ ಕಾರಾಗೃಹದಲ್ಲಿಯೂ ಇದ್ದೇನೆ. ಸುರೂಪಿಯೂ ನಾನೇ, ಕುರೂಪಿಯೂ ನಾನೇ, ಉದ್ಯಾನವನದಲ್ಲಿಯೂ ನಾನೇ ಶ್ಮಶಾನದಲ್ಲಿಯೂ ನಾನೇ. ಯಾರನ್ನು ಬೈಯುತ್ತೀರಿ? ಹಾಗೂ ಬೈದರೆ, ಆ ಬೈಯುವವನೂ ನಾನೇ. ಇದರ ವಿಷಯ ದಲ್ಲಿ ಇನ್ನೊಂದು ವಿಚಾರವನ್ನು ಹೇಳಬೇಕಾಗಿದೆ.

ಈ ದೇಶದಲ್ಲಿ ವೇದಾಂತವನ್ನು ಬೋಧಿಸುವುದು ಬಹಳ ಕಠಿಣ. ಏಕೆಂದರೆ, ಇಲ್ಲಿ "ನಾನು" ಎಂದೊಡನೆ ದೇಹ ಅಥವಾ ಮನಸ್ಸು ಎಂದೇ ಅರ್ಥಮಾಡುತ್ತಾರೆ. ಈ ದೇಶದ ಜನರಿಗೆ "ನನಗೆ ಒಂದು ಆತ್ಮವಿದೆ." ಎಂದು ಹೇಳಿ ಅಭ್ಯಾಸವಾಗಿದೆ, ರೂಢಿಯಾಗದೆ. 'ನಾನು' ಎನ್ನುವದು ದೇಹ, ಮನಸ್ಸು, ಬುದ್ಧಿ, ಜನ್ಮಾಂತರ ಗಳನ್ನು ಪಡೆಯುತ್ತಿರುವ ಜೀವ ಎಂದು ತಿಳಿಯುತ್ತಾರೆ. ವೇದಾಂತ ವಿಜ್ಞಾನ ವನ್ನು ಅನುಭವಕ್ಕೆ ತಂದುಕೊಂಡವನು ಈ ದೇಹವನ್ನೂ ಮನಸ್ಸನ್ನೂ ಬುದ್ಧಿ ಯನ್ನೂ ಜನ್ಮಾಂತರ ಪಡೆಯುವ ಜೀವನನ್ನೂ 'ನಾನು' ಎಂದು ಎಂದೆಂದೂ ತಿಳಿಯುವದಿಲ್ಲ. ಇದು ನಾನಲ್ಲ. ಏನಾದರೂ ನಾನಾಗಿದ್ದರೆ, ದೇವರೇ ನಾನು.

ನಾನು ರಾಜನು ಎಂಬ ಮಾತೂ, ನಾನು ಒಂದು ಕುದುರೆಯ ಯಜಮಾನ, ನಾನೊಬ್ಬ ಸ್ವಾಮಿ, ನಾನೊಬ್ಬ ಅಮೆರಿಕನ್, ನಾನೊಬ್ಬ ಹಿಂದೂ ಎಂಬ ಮಾತು ಗಳೂ ಇವೆ. ಈ ಬಗೆಯ ರೂಢಿಯ ಹೇಳಿಕೆಗಳು 'ನಾನು ದೇವರು' ಎಂಬ ಹೇಳಿಕೆಯಿಂದ ಬೇರೆಯಾಗಿವೆ. ಈ ವ್ಯತ್ಯಾಸವನ್ನು ಗಮನಿಸಿ. 'ನಾನೊಬ್ಬ ರಾಜ' ಎನ್ನುವದರಲ್ಲಿ ರಾಜ ಎನ್ನುವದು ಒಂದು ಪದವಿ. ನಾನೊಂದು ಕುದುರೆಯ ಯಜಮಾನ ಎನ್ನುವ ಬಿರುದನ್ನು ಮೈಮೇಲೆ ಹಾಕಿಕೊಳ್ಳುವ ವಸ್ತ್ರದಂತೆ ಧರಿಸು

ತ್ತೀವೆ. ನಾನು ಬಡವ ಎನ್ನುವಾಗ ನಾನು ಬೇರೆ, ಬಡತನ ಬೇರೆ. ಬಡತನವೂ ಮೈಮೇಲೆ ಧರಿಸಿರುವ ಬಟ್ಟೆಯಂತೆ ಇದೆ. ಒಳ್ಳೆಯದು, ಈಗ, ಹಿಂದೂಗಳು 'ನಾನು ದೇವರು' ಎಂದು ಹೇಳಿದರೆ ದೇವರು ಎನ್ನುವದನ್ನು ಪದವಿಯೆಂದೂ ಬಿರುದೆಂದೂ ಧರಿಸುವ ವಸ್ತ್ರದಂತೆಂದೂ ಅಥವಾ ಅದೊಂದು ಗುಣವೆಂದೂ ಅರ್ಥ ಮಾಡಬಾರದು; ಇದರಲ್ಲಿ ಬಹಳ ಎಚ್ಚರಿಕೆ ವಹಿಸಬೇಕು. ಅಲ್ಪವಾದ ಅಹಂಕಾರ ವನ್ನೇ ಉಳಿಸಿಕೊಂಡು. ದೇವತ್ವವೆಂಬ ಗುಣವನ್ನು ಪೀತಾಂಬರದಂತೆ ಆ ಕಳ್ಳ ಜೀವದ ಮೇಲೆ ಧರಿಸುವದಲ್ಲ. ದೇವತ್ವ ಒಂದು ಗುಣವಲ್ಲ. ವೇದಾಂತಿಯ ಅರ್ಥ ಅದಲ್ಲ. ಅವನ ಹೇಳಿಕೆ ಹೇಗಿದೆಯೆಂದರೆ, 'ಈ ಹಾವು ಹಗ್ಗವಾಗಿದೆ' ಎಂದ ಮಾತಿನಂತೆ ಇದೆ. ಒಬ್ಬ ಮನುಷ್ಯ ಮಬ್ಬುಗತ್ತಲೆಯಲ್ಲಿ ಹಗ್ಗವನ್ನು ಹಾವೆಂದು ತಪ್ಪಾಗಿ ತಿಳಿದ. ನೆಲದ ಮೇಲೆ ಒಂದು ಹಗ್ಗದ ಸಿಂಬೆಯು ಬಿದ್ದಿತ್ತು. ಸಂಜೆಯ ಮಂಜುಗತ್ತಲೆಯಲ್ಲಿ ಆ ಹಗ್ಗದ ಸುರುಳಿಯನ್ನು ಸರಿಯಾಗಿ ನೋಡದೆ, ಹಾವೆಂದು ಭ್ರಮಿಸಿ, ಭಯಪಟ್ಟು, ಓಡಿ ಎಡವಿ ಬಿದ್ದನು. ಆಗ ಅವನ ಹಿರಿಯರೊಬ್ಬರು ದೀಪವನ್ನು ತಂದು ನೋಡಿ, 'ಬಾ ಬಾ, ಹೆದರಬೇಡ. ನಿನ್ನ ಹಾವು ಹಗ್ಗವಾಗಿದೆ; ಹಗ್ಗವನ್ನೇ ನೀನು ಸರಿಯಾಗಿ ನೋಡದೆ, ಹಾವೆಂದು ಹೆದರಿದೆ ನೀನು ತಪ್ಪಾಗಿ ತಿಳಿದ ಹಾವು ಹಾವಲ್ಲ; ಅದೊಂದು ಹಗ್ಗ". ಎಂದು ಹೇಳುತ್ತಾರೆ. ಈ ಹೇಳಿಕೆಯ 'ನಾನು ರಾಜ' ಎಂಬ ಹೇಳಿಕೆಯಂತಲ್ಲ. ಇಲ್ಲಿ ಹಾವು ಎನ್ನುವದು ಗುಣವೂ ಅಲ್ಲ; ಹಗ್ಗ ಎನ್ನುವದೂ ಒಂದು ಗುಣವಲ್ಲ. 'ಈ ಹಾವು ಕಪ್ಪಾಗಿದೆ' ಎಂದು ಹೇಳಿದ್ದರೆ ಕಪ್ಪು ಎನ್ನುವದು ಹಾವಿನ ಗುಣವಾಗುತ್ತಿತ್ತು. ಆದರೆ, ಆ ಹಾವು ಹಗ್ಗವಾಗಿದೆ ಎಂಬ ಮಾತಿನಲ್ಲಿ ಹಗ್ಗ ಎನ್ನುವದು ಗುಣವಲ್ಲ. ಇದನ್ನು ಚೆನ್ನಾಗಿ ಗಮನಿಸಬೇಕು. ಇದನ್ನು ಗ್ರಹಿಸುವದು ಸ್ವಲ್ಪ ಕಠಿಣವಾಗಬಹುದು; ಆದರೆ ದಯವಿಟ್ಟು ಇದನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಿ, ಈಗಲೇ ಸರಿಯಾಗಿ ಅರ್ಥ ಮಾಡಿಕೊಳ್ಳಿ; ಕೊನೆಗೆ ಏನಾದರೂ ಆಕ್ಷೇಪಣೆ ತರುವದಕ್ಕೆ ನಿಮಗೆ ಅಧಿಕಾರವಿಲ್ಲ. "ಹಾವು ಕಪ್ಪಗಿದೆ" ಎನ್ನುವದು ಒಂದು ಬಗೆಯ ಹೇಳಿಕೆ; ಆದರೆ "ಹಾವು ಒಂದು ಹಗ್ಗವಾಗಿದೆ" ಎನ್ನುವದು ಆ ಬಗೆಯ ಹೇಳಿಕೆಯಲ್ಲ, ಇದು ತೀರಾ ಬೇರೆ ಬಗೆಯ ಹೇಳಿಕೆ; ಇದನ್ನು ಚೆನ್ನಾಗಿ ಗಮನಿಸಬೇಕು.

ಇದೇ ರೀತಿಯಲ್ಲಿ, 'I am godly' 'ನಾನು ಧರ್ಮಶ್ರದ್ಧೆಯುಳ್ಳವನು; ನಾನು ದೈವಭಕ್ತಿಯುಳ್ಳವನು" "I am an Angel" ನಾನು ದೇವತಾ ಪುರುಷ" ಇವೇ ಮೊದಲಾದವು ಒಂದು ಬಗೆಯ ಹೇಳಿಕೆಗಳು, ಆದರೆ ಹಿಂದುವು "I am God" "ನಾನು ದೇವರಾಗಿದ್ದೇನೆ" ಎಂದು ಹೇಳಿದರೆ, ಇದೇ ಪೂರಾ

ಬೇರೆ ಬಗೆಯ ಹೇಳಿಕೆ. "ನಾನು ದೇವರು" ಎಂದರೆ 'ನಾನು ದೇಹವಲ್ಲ' ಎಂದು ಅರ್ಥ, ನೀವು ನನ್ನನ್ನು ಏನೆಂದು ತಿಳಿದಿದ್ದಿರೋ ಅದು ನಾನಲ್ಲ. ನನ್ನನ್ನು ಈ ಮಾಂಸ, ಮೂಳೆ, ಮಾಂಸಖಂಡ, ರಕ್ತ ಮೊದಲಾದವುಗಳೆಂದು ತಿಳಿದಿದ್ದೀರಿ. ಆದರೆ ನಾನು ಇದಲ್ಲ ನಾನು ಈ ಮೂರೂವರೆ ಮೊಳದ ದೇಹವಲ್ಲ ; ನಾನು ಮನಸ್ಸೂ ಅಲ್ಲ, ಬುದ್ಧಿಯೂ ಅಲ್ಲ. ಸಮಸ್ತವಿಶ್ವಕ್ಕೂ ನಾನೇ ಮೂಲ ಉಗಮ ಸ್ಥಾನ ; ನಾನು ನಿಜವಾದ ಶಕ್ತಿ ; ನಿಜವಾದ ವಸ್ತುತತ್ವ. ನಾನೇ ನಿಜವಾದ ದೇವರು ಅದೇ ನಾನು ; ನಾನು ಬೇರೆ ಏನೂ ಅಲ್ಲ."

ತಮ್ಮಂತೆಯೇ ದೇವರು ಸಾಮಾನ್ಯಮನುಷ್ಯನೆಂಬಂತೆ, ದೇವರು ಅದನ್ನು ಮಾಡಿದನು ಇದನ್ನು ಮಾಡಿದನು ಎಂದು ಜನರು ಅವನ ಮೇಲೆ ಅನೇಕ ಕರ್ಮಗಳನ್ನೂ ಕರ್ತೃತ್ವವನ್ನೂ ಆರೋಪಿಸಿ, ತಮ್ಮ ವಿಚಾರಣೆಯ ನ್ಯಾಯಸ್ಥಾನದೆದುರಿಗೆ ಆ ದೇವರನ್ನು ಹಿಡಿದು ತಂದು ನಿಲ್ಲಿಸಿ, ಸಾಮಾನ್ಯ ಅಪರಾಧಿಯಂತೆ, ಚೆನ್ನಾಗಿ ತರಾಟಿಗೆ ತೆಗೆದುಕೊಳ್ಳಬೇಕೆಂದು ಬಯಸುತ್ತಾರೆ.

ಈ ಎಲ್ಲಾ ಬಗೆಯ ಸಂದೇಹಗಳ ಮತ್ತು ಆಕ್ಷೇಪಗಳ ಕಾರಣವನ್ನು ಒಂದು ಕಥೆಯ ಮೂಲಕ ವಿಶದಗೊಳಿಸಬಹುದು.

ಇಂಡಿಯಾದಲ್ಲಿ ಎಣ್ಣೆಯನ್ನು ಮಾರುವ ಒಬ್ಬ ವರ್ತಕನಿದ್ದನು. ಅವನು ತನ್ನ ಮನೆಯಲ್ಲಿ ಬಹಳ ಸುಂದರವಾದೊಂದು ಗಿಳಿಯನ್ನು ಸಾಕಿದ್ದನು. ಒಂದು ದಿನ ಆ ವರ್ತಕನು ತನ್ನ ಅಂಗಡಿಯನ್ನು ಬಿಟ್ಟು ಎಲ್ಲಿಗೋ ಹೊರಗೆ ಹೋದನು. ಅವನ ಸೇವಕನೂ ಬೇರೆ ಕಾರ್ಯದ ಮೇಲೆ ಹೊರಗೆ ಹೋದನು. ಅಂಗಡಿಯಲ್ಲಿ ಗಿಳಿಯು ಒಂದೇ ಇತ್ತು. ಅಂಗಡಿಯಲ್ಲಿ ಯಾರೂ ಇರಲಿಲ್ಲವಾದ್ದರಿಂದ ದೊಡ್ಡದೊಂದು ಬೆಕ್ಕು ಅಂಗಡಿಯೊಳಕ್ಕೆ ಬಂದಿತು. ಆ ಬೆಕ್ಕನ್ನು ಕಂಡಕೂಡಲೇ ಗಿಳಿಯು ಗಾಬರಿಗೊಂಡು ಅದು ಇದ್ದ ಪಂಜರದಲ್ಲಿಯೇ ಕುಣಿಯುವದಕ್ಕೆ ತೊಡಗಿತು. ಗಿಳಿಯು ರೆಕ್ಕೆಗಳನ್ನು ಬಡಿದುಕೊಳ್ಳುತ್ತಾ ಗೋಡೆಯಮೇಲೆ ತೂಗುಹಾಕಿದ್ದ ಪಂಜರದಲ್ಲಿ ಇತ್ತಲಾಗಿ ಅತ್ತಲಾಗಿ ಕುಣಿದಾಡಿ ಹಾರಾಡಿದ ಕೂಡಲೇ ಆ ಪಂಜರವು ಹೇಗೋ ಜಾರಿ ಕೆಳಗಿದ್ದ, ಬಹಳ ಬೆಲೆಯುಳ್ಳ ಎಣ್ಣೆಯನ್ನು ತುಂಬಿದ್ದ ಜಾಡಿಯ ಮೇಲೆ ಬಿದ್ದಿತು ಆ ಜಾಡಿಯು ಒಡೆದು ಎಣ್ಣೆಯೆಲ್ಲಾ ಚೆಲ್ಲಿ ಹೋಯಿತು. ಸ್ವಲ್ಪ ಹೊತ್ತಿನಮೇಲೆ ಆ ವರ್ತಕನು ಅಂಗಡಿಗೆ ಬಂದು ಅಮೂಲ್ಯವಾದ ಎಣ್ಣೆಯು ಚೆಲ್ಲಿದ್ದನ್ನು ನೋಡಿ ಗಿಳಿಯು ಮಾಡಿರುವ ಅನಾಹುತಕ್ಕಾಗಿ ಬಹಳ ಕೋಪಗೊಂಡು ರೇಗಾಡಿ ವಿವೇಕವನ್ನೇ

ಕಳೆದು ಕೊಂಡನು. ಗಿಳಿಯ ಹುಚ್ಚು ಚೇಷ್ಟೆಯಿಂದ ತನಗೆ 50 ರುಪಾಯಿಗಳ ವರೆಗೆ ನಷ್ಟವಾಗಿರುವದನ್ನು ನೋಡಿ, ಗಿಳಿಯ ಮೇಲೆ ರೊಚ್ಚಿಗೆದ್ದು, ಪಂಜರದ ಬಾಗಿಲನ್ನು ತೆಗೆದು, ಗಿಳಿಯನ್ನು ಸಿಟ್ಟಿನಿಂದ ಒರಟಾಗಿ ಹಿಡಿದು ಹೊರಗೆಳೆದು, ಅದರ ತಲೆಯ ಮೇಲೆ ಸುಂದರ ತುರಾಯಿಯಂತೆ ಅಲಂಕಾರವಾಗಿದ್ದ ಬಣ್ಣ ಬಣ್ಣದ ನುಣ್ಣನೆಯ ಕಿರುಗರಿಯನ್ನೆಲ್ಲಾ ತರಿದು ತರಿದು ಕಿತ್ತು ಹಾಕಿದನು. ಗಿಳಿಯು ಮೃತ್ಯುವಿನ ಕೈಗೆ ಸಿಕ್ಕಂತೆ ಭಯದಿಂದಲೂ ನೋವಿನಿಂದಲೂ ಕಿರಿಚುತ್ತಾ ಒಂದೇ ಸಮನೆ ಲಿವಿ ಲಿವಿ ಒದ್ದಾಡುತ್ತಿತ್ತು. ಅದರ ತಲೆಯಿಂದ ರಕ್ತ ಸುರಿಯುತ್ತಿತ್ತು. ಆ ಗಿಳಿಯ ತಲೆಯ ಮೇಲೆ ಶೋಭಿಸುತ್ತಾ ನೋಡಿದವರನ್ನೆಲ್ಲಾ ಆಕರ್ಷಿಸಿ ಜನರ ಮೆಚ್ಚುಗೆಯನ್ನೂ ಪ್ರೀತಿಯನ್ನೂ ಬೆಳೆಸುತ್ತಿದ್ದ ಅದರ ಮನೋಹರವಾದ ಕಿರೀಟವಂಥವು ಆ ಪಾಪಿಷ್ಠನ ಸಿಟ್ಟಿನಿಂದ ನಾಶವಾಯಿತು. ಮುದ್ದಾದ ಗಿಳಿಯ ತಲೆಯು ಬೋಳಾಯಿತು. ಆ ಚಂಡಾಲನು ಅದರ ಜೀವವನ್ನು ಮಾತ್ರ ಉಳಿಸಿ ಆ ಪಂಜರವನ್ನು ಮೇಲಕ್ಕೇರಿಸಿ ಕಟ್ಟಿಹಾಕಿದನು ಆ ಗಿಳಿಯು ಎರಡು ವಾರಗಳ ವರೆಗೆ, ಅದು ಕಲಿತಿದ್ದ ಯಾವ ಮಾತನ್ನೂ ಆಡಲಿಲ್ಲ ; ಆ ಯಜಮಾನನನ್ನೂ ಯಾರನ್ನೂ ವಿನೋದಗೊಳಿಸಲಿಲ್ಲ. ದುರ್ದೈವಿಯಾದ ಆ ಗಿಳಿಯ ಹೀನದೀನ ಸ್ಥಿತಿಯನ್ನು ನೋಡಿ, ಸಿಟ್ಟಿನ ಭರದಲ್ಲಿ ತಾನು ಮಾಡಿದ ಅಕ್ಷಮ್ಯವಾದ ಅನ್ಯಾಯಕ್ಕಾಗಿ ಆ ಯಜಮಾನನು ಬಹಳ ಪಶ್ಚಾತ್ತಾಪಪಟ್ಟನು. ಅವನು ತನ್ನ ಮೂರ್ಖತನಕ್ಕಾಗಿ ಎಷ್ಟು ದೂಷಿಸಿಕೊಂಡು ದುಃಖಪಟ್ಟರೂ ಸಾಲದಾಯಿತು. ಎರಡು ವಾರಗಳ ಮೇಲೆ ಅವನಲ್ಲಿ ಎಣ್ಣೆಯನ್ನು ಕೊಳ್ಳುವದಕ್ಕಾಗಿ ಒಬ್ಬ ಗಿರಾಕಿ ಬಂದನು. ಬಟ್ಟೆಯಿಲ್ಲದೆ ಬರಿದಾಗಿದ್ದ ಅವನ ತಲೆಯು ಬೋಳಾಗಿಯೂ ಇದ್ದಿತು. ತನ್ನಂತೆಯೇ ಬೋಳಾಗಿದ್ದ ಆ ಹೊಸ ಮನುಷ್ಯನನ್ನು ನೋಡಿ, ತನಗೊಬ್ಬ ಗೆಳೆಯನು ಸಿಕ್ಕನೆಂದು ಆ ಗಿಳಿಯು ಬಹಳ ಸಂತೋಷಪಟ್ಟು, ತನ್ನಾದುರಂತದ ಬಹಳ ದಿನಗಳ ಮೇಲೆ ಮೊದಲನೆಯ ಸಲ ಉತ್ಸಾಹದಿಂದ ಗಟ್ಟಿಯಾಗಿ ನಕ್ಕಿತು ಅಲ್ಲಿಯೇ ಇದ್ದ ಯಜಮಾನನು, ವ್ಯಥೆಯಿಂದ ಕುಸಿದು ಹೋದಂತಿದ್ದ ಗಿಳಿಯು ಒಮ್ಮೆಗೇ ಖುಷಿಯಾದುದನ್ನು ಕಂಡು, ಅದರ ಉಲ್ಲಾಸ ಹರ್ಷೋದ್ಗಾರಗಳಿಗೆ ಏನು ಕಾರಣವೆಂದು ಗಿಳಿಯನ್ನು ಕೇಳಿದನು ಅದಕ್ಕೆ ಆ ಗಿಳಿಯು "ಓ ಸ್ವಾಮಿ, ದೇವರ ದಯ ಎಷ್ಟು ದೊಡ್ಡದು ! ಈ ಪ್ರಪಂಚದಲ್ಲಿ ಎಣ್ಣೆಯ ಸಾಹುಕಾರನ ದುರ್ದೈವಿ ಸೇವಕ ನಾನೊಬ್ಬನೇ ಅಲ್ಲ ; ಈ ಹತಭಾಗ್ಯನೂ ಅಂಥಾ ದಯಾಳುವಾದ ಎಣ್ಣೆ ಸಾಹುಕಾರನ ಸೇವಕನೇ ಇದ್ದಿರಬೇಕು ; ಇಲ್ಲವಾದರೆ ಇವನು ತನ್ನ ತಲೆಯಮೇಲಿನ ಚೆಲುವಾದ ಕೂದಲನ್ನೆಲ್ಲಾ ಕಳೆದುಕೊಂಡು ಹೀಗೆ ಬಕ್ಕಬೋಳನಾಗುವದಕ್ಕೆ ಹೇಗೆ ಸಾಧ್ಯ ? ನನ್ನಂತೆ ಇರುವ ಈ ಗೆಳೆಯನನ್ನು ನೋಡಿ ನನಗೆ ಎಷ್ಟೋ ಸಂತೋಷವಾಯಿತು." ಎಂದಿತು.

ಇದೇ ಬಗೆಯ ತರ್ಕವನ್ನು ಕೆಲವು ಜನರು ಹೂಡುತ್ತಾರೆ. ತಾವು ಯಾವಾಗಲೂ ಏನಾದರೂ ಕೆಲಸಗಳನ್ನು ಮಾಡುತ್ತಲೇ ಇರುವಂತೆ, ದೇವರೂ ಸೃಷ್ಟಿ, ಸ್ಥಿತಿಕಾರ್ಯಗಳನ್ನು ಮಾಡುತ್ತಿರಬೇಕು ; ಮತ್ತು ತಾವು ಯಾವ ಕೆಲಸ ಮಾಡಿದರೂ ಅದಕ್ಕೆ ಒಂದು ಉದ್ದೇಶವಿರುವಂತೆ,—ಸ್ವಾರ್ಥಮಯವಾದ ಉದ್ದೇಶ ವಿರುವಂತೆ, ದೇವರಿಗೂ ಅವನ ಕಾರ್ಯದಲ್ಲಿ ಉದ್ದೇಶವಿರಬೇಕು. ಕಾರ್ಯಮಾಡು ವದಕ್ಕೆ ಮೊದಲು ತಾವು ಯೋಚಿಸುವಂತೆ, ದೇವರೂ ತನ್ನ ಸೃಷ್ಟಿ ಕಾರ್ಯಕ್ಕೆ ಮೊದಲು ಯೋಚಿಸಿರಬೇಕು, ಎಂದು ಮೊದಲಾಗಿ ಅವರು ತರ್ಕಮಾಡುತ್ತಾರೆ. ಇದೆಲ್ಲಾ ತಲೆಯನ್ನು ಕೆಡಿಸಿಕೊಂಡ ಆ ಗಿಳಿಯ ತರ್ಕದಂತೆಯೇ ಇದೆ ಇದು ದೋಷಯುಕ್ತವಾದ ತರ್ಕ. ಇದು ತಪ್ಪಾದ ಊಹೆ. ದೇವರು ಹೀಗೆ ಹೀಗೆಯೇ ಮಾಡಿರಬೇಕು. ಎನ್ನುವದರಿಂದ, ದೇವರನ್ನು ಪರಿಮಿತನನ್ನಾಗಿ ಮಾಡುತ್ತೇವೆ. ನೀವು ಅವನನ್ನು ಅನಂತನೆಂದು ಒಪ್ಪುತ್ತೀರಿ, ದೇವರು ಅನಂತನೆಂದು ಹೇಳುತ್ತೀರಿ; ಆದರೂ ಅವನನ್ನು ಸಾಮಾನ್ಯ ಮಾನವನ ಮಟ್ಟಕ್ಕೆ ಎಳೆಯಲು ಬಯಸುತ್ತೀರಿ. ಇದು ತಪ್ಪಲ್ಲವೆ ?

ಈ ಭಿನ್ನ ಭೇದಗಳನ್ನೆಲ್ಲಾ ದೇವರು ಏಕೆ ಮಾಡಿದ ?—ಎನ್ನುವ ಪ್ರಶ್ನೆಯನ್ನು ಬೇರೊಬ್ಬರು ರಾಮನನ್ನು ಬೇರೊಂದು ಬಗೆಯಲ್ಲಿ ಕೇಳಿದರು ಆ ಪ್ರಶ್ನೆಯು ಹೀಗಿತ್ತು ; "ನಾನೇ ಎಲ್ಲವದೂ ಆದರೆ, ನಾನೇಕೆ ಕಷ್ಟಪಡಬೇಕು ?" ರಾಮನು ಹೇಳಿದ್ದೇನೆಂದರೆ, "ನಿಮ್ಮ ಕನಸುಗಳಲ್ಲಿ ನಿಮ್ಮ ಸುತ್ತಲೂ ತೋರುವ ಎಲ್ಲವೂ ನೀವೇ ಆಗಿರುವದಿಲ್ಲವೆ ? ನೀವು ಹಾಸಿಗೆಯ ಮೇಲೆ ಕಣ್ಣು ಮುಚ್ಚಿಕೊಂಡು ಮಲಗಿ ಬಗೆ ಬಗೆಯ ಕನಸುಗಳನ್ನು ಕಾಣುತ್ತಿರುವಾಗ ನಿಮ್ಮೊಳಗೆ ಹೊರಗಿನ ಯಾವ ವಸ್ತು ಅಥವಾ ಯಾವ ವ್ಯಕ್ತಿ ಬಂದಿರುತ್ತದೆ ? ನಿಮ್ಮೊಳಗೆ ಇರುವವರು ನೀವೊಬ್ಬರೇ ಅಲ್ಲವೆ ? ನಿಮ್ಮ ಮನಸ್ಸು ಒಂದೇ ಅಲ್ಲವೇ ? ಆದರೂ ಕನಸಿನಲ್ಲಿ ಎಲ್ಲಾ ಪ್ರಪಂಚ ವನ್ನೂ ನೀವು ನೋಡುವದರಿಂದ ನೀವೇ ಆ ಎಲ್ಲವೂ ಅಗಿ ತೋರುತ್ತೀರೆಂದು ಸಿದ್ಧವಾಗುತ್ತದೆ. ನಿಮ್ಮ ಕನಸಿನಲ್ಲಿ ಕಾಣುವ ಪರ್ವತಗಳನ್ನೂ ನದಿಗಳನ್ನೂ ಅರಣ್ಯಗಳನ್ನೂ ಮರುಭೂಮಿಗಳನ್ನೂ ನೀವೇ ಸೃಷ್ಟಿಸಿಕೊಳ್ಳುತ್ತೀರಿ ; ಕಲ್ಪಿಸಿ ಕೊಳ್ಳುತ್ತೀರಿ, ನೀವೇ ಭಾವನೆ ಮಾಡಿಕೊಳ್ಳುತ್ತೀರಿ, ಆ ಎಲ್ಲವೂ ನಿಮ್ಮ ಕಾರ್ಯವೇ ಆದರೂ ನಿಮ್ಮ ಕನಸಿನಲ್ಲಿ ಒಂದು ಸಿಂಹವು ಬಂದು ನಿಮ್ಮನ್ನು ನುಂಗುತ್ತಿರಬಹುದು ! ಒಂದು ಹಾವು ನಿಮ್ಮ ಮೈ ಮೇಲೆ ಬಿದ್ದು ಕಚ್ಚಬಹುದು ; ಮತ್ತೇನೋ ಭಯಂಕರ ಪ್ರಾಣಿಯೊಂದು ತೋರಿಕೊಂಡು ಗಾಬರಿಗೊಳಿಸಬಹುದು. ಆದರೂ ಆ ಸಿಂಹವೂ ಹುಲಿಯೂ ಹಾವೂ ಎಲ್ಲಾ ನೀವೇ ಆಗಿರುತ್ತೀರಿ."

ಇನ್ನೊಬ್ಬರು ಬಂದು ಇನ್ನೊಂದು ಪ್ರಶ್ನೆಹಾಕಿದರು ; "ನಾನು ದೇವರಾದರೆ, ಎಲ್ಲವನ್ನೂ ನಾನು ಏಕೆ ತಿಳಿದಿಲ್ಲ ?"

'ನೀವೇ ದೇವರು' ಎಂದು ರಾಮನು ಉಪದೇಶಿಸುತ್ತಾನೆಂಬದು ನಿಮಗೆ ಗೊತ್ತಿದೆ. ರಾಮನು ಕೇಳುತ್ತಾನೆ. "ತಮ್ಮ, ನೀನು ದೇವರಲ್ಲವಾದರೆ, ನೀನು ಯಾರು ? ತಿಳಿಯೋಣ, ಹೇಳು" ಅವನು ಹೇಳಿದ, "ನಾನು ಈ ದೇಹ." "ಒಳ್ಳೆಯದು ಈ ದೇಹವೇ ನೀನಾದರೆ, ಈ ಸುಳ್ಳು ವ್ಯಕ್ತಿ ನೀನಾದರೆ, ನಿನ್ನ ತಲೆಯ ಮೇಲೆ ಕೂದಲು ಎಷ್ಟಿವೆ, ? ಹೇಳು ತಲೆಯು ನಿನ್ನದಲ್ಲವೆ ? ತಲೆಯು ನಿನ್ನದಾದರೆ, ದಯವಿಟ್ಟು, ನಿನ್ನ ತಲೆಯ ಮೇಲೆ ಕೂದಲುಗಳು ಎಷ್ಟಿವೆ ? ಹೇಳು. ನಿನ್ನ ಮೈಯಲ್ಲಿ ಮೂಳೆಗಳು ಎಷ್ಟಿವೆ, (ಅವನಿಗೆ ಅಂಗರಚನಾಶಾಸ್ತ್ರ ಏನೂ ತಿಳಿದಿರಲಿಲ್ಲ) ಮಾಂಸಖಂಡಗಳು ಎಷ್ಟಿವೆ? ಇವತ್ತು ಬೆಳಿಗ್ಗೆ ನೀನು ತೆಗೆದುಕೊಂಡ ಆಹಾರವು ಈಗ ಎಲ್ಲಿದೆ ? ಏನಾಗಿದೆ ? ಅದು ಕರುಳಿನಲ್ಲಿದೆಯೋ, ಮೂತ್ರಜನಕಾಂಗದಲ್ಲಿದೆಯೋ ಜಠರದಲ್ಲಿದೆಯೋ ಶ್ವಾಸಕೋಶಗಳಲ್ಲಿದೆಯೋ, ಎಲ್ಲಿದೆ ?" ಎಂದು ಕೇಳಿದೆ. ಅವನು ಏನೂ ಉತ್ತರ ಕೊಡಲಾರದಾದ. ಆಗ ರಾಮ ಹೇಳಿದ, "ತಮ್ಮ, ನಿನ್ನ ತಲೆಯ ಮೇಲೆ ಎಷ್ಟು ಕೂದಲುಗಳಿವೆ ಎನ್ನುವದನ್ನು ನೀನು ಹೇಳಲಾರೆಯಾದರೂ ಕೂದಲುಗಳು ನಿನ್ನವೇ ಆಗಿವೆ. ನಿನ್ನ ಮೈಯಲ್ಲಿ ಮೂಳೆಗಳೂ ಮಾಂಸಖಂಡಗಳೂ ಎಷ್ಟಿವೆ ಎನ್ನುವದನ್ನು ಹೇಳಲು ನಿನಗೆ ತಿಳಿಯದಿದ್ದರೂ ಅವು ನಿನ್ನವೇ ಆಗಿವೆ. ನೀನು ಬೆಳಿಗ್ಗೆ ತೆಗೆದುಕೊಂಡ ಆಹಾರವು ನಿನ್ನ ಶರೀರದಲ್ಲಿ ಈಗ ಎಲ್ಲಿದೆಯೆನ್ನುವದನ್ನು ಹೇಳಲು ನಿನಗೆ ಸಾಧ್ಯವಿಲ್ಲವಾದರೂ ಈ ಶರೀರವು ನಿನ್ನದೇ ಆಗಿದೆ. ಹೀಗೆಯೇ ಅಂತರಿಕ್ಷದಲ್ಲಿ ನಕ್ಷತ್ರಗಳೆಷ್ಟಿವೆ ಎನ್ನುವದನ್ನು ನೀನು ಹೇಳಲಾರೆಯಾದರೂ ನಿನ್ನ ಬುದ್ಧಿಗೆ ಅಷ್ಟು ಶಕ್ತಿಯಿಲ್ಲವಾದರೂ ಆ ಎಲ್ಲಾ ನಕ್ಷತ್ರಗಳೂ ಈ ಬುದ್ಧಿಯೂ ನಿನ್ನವೇ. ಈಗ ಇಂಗ್ಲೆಂಡಿನಲ್ಲಿ, ಈ ನಿಮಿಷದಲ್ಲಿ, ಏನು ನಡೆಯುತ್ತಿದೆಯೆಂಬದನ್ನು ನೀನು ಹೇಳಲಾರೆಯಾವರೂ ಇಂಗ್ಲೆಂಡ್ ನಿನ್ನದಾಗಿದೆ ಬುಧ ಗ್ರಹದಲ್ಲಿ ಏನು ನಡೆಯುತ್ತಿದೆಯೆಂಬುದನ್ನು ನೀನು ತಿಳಿಯದಿದ್ದರೂ ಬುಧ ಮೊದಲಾದ ಎಲ್ಲಾ ಗ್ರಹಗಳೂ ನಿನ್ನವೇ ಆಗಿವೆ. ಇವುಗಳನ್ನೆಲ್ಲಾ ನೀನು ಹೇಳಲಾರೆಯಾದರೆ, ಅವುಗಳು ನಿನ್ನವಲ್ಲವೆಂದೇನೂ ಸಿದ್ಧವಾಗುವದಿಲ್ಲ.

ಇವುಗಳನ್ನೆಲ್ಲಾ ತಿಳಿಯುವದೂ ಹೇಳುವದೂ ಯಾವದು ಪರಿಮಿತವೋ ಅದರ ಕೆಲಸ. ಆ ಗೋಡೆಯ ಮೇಲಿರುವ ಚಿತ್ರವು ಯಾವುದು,—ಎನ್ನುವದನ್ನು ನೀನು ಹೇಳಬಲ್ಲೆ ; ಏಕೆಂದರೆ, ಆ ಚಿತ್ರವು ಇಲ್ಲಿದೆಯೆಂಬ ಅರಿವು ನಿನಗಿದೆ. ಆ

ಚಿತ್ರವು ನೀನಾಗಿಲ್ಲ ; ವಿಷಯಿಯೂ (Subject) ವಿಷಯವೂ (Object) ಇಲ್ಲಿ ಬೇರೆ ಬೇರೆ. ಆ ಚಿತ್ರವೇನೆಂಬದನ್ನು ನೀನು ಹೇಳ ಬಲ್ಲೆ, ಏಕೆಂದರೆ, ಅದು ನಿನ್ನಿಂದ ಬೇರೆಯಾಗಿದೆ. ಇಲ್ಲಿ 'ನೀನು' ಎನ್ನುವದನ್ನು ಅದರ ಸುಳ್ಳು ತೋರಿಕೆಯ ಅರ್ಥದಲ್ಲಿ ತೆಗೆದುಕೊಳ್ಳಬೇಕು. ನೀನು ಎಂದರೆ ಈ ನಿನ್ನ ದೇಹ, ವ್ಯಕ್ತಿ. ಆದರೆ ನೀನು ದೇವರಾದರೆ, ನೀನು ಎಲ್ಲವೂ ಆದರೆ, ನಿನ್ನಿಂದ ಬೇರೆಯಾದ ಯಾವದೂ ಇಲ್ಲವಾದರೆ, ನೀನು ಅನಂತವಾದರೆ, ನಿನ್ನನ್ನು ಪರಿಮಿತಗೊಳಿಸುವದಕ್ಕೆ ಯಾವದೂ ಇಲ್ಲವಾದರೆ, ನಿನ್ನ ವಿಚಾರವನ್ನು ಯಾರು ಹೇಳಬೇಕು ? ಯಾರ ವಿಚಾರವನ್ನು ನೀನು ಹೇಳಬೇಕು ? ಹೇಳುವದು ಸಾಧ್ಯ ? ಅಲ್ಲಿ ನೋಡುವದೂ ಹೇಳುವದೂ ಕೇಳುವದೂ ಎಲ್ಲಾ ನಿಂತುಹೋಗುತ್ತವೆ. ಅದನ್ನು ಅಥವಾ ಅಲ್ಲಿ ಯಾವದೂ ಸೋಂಕಲಾರದು, ಸೇರಲಾರದು. ಮಾತೂ ಅಲ್ಲಿ ಮುಟ್ಟಲಾರದು.

ಇನ್ನೊಬ್ಬ ಮನುಷ್ಯ ಬಂದು "ನೀವು ಯಾವ ಜಾತಿಗೆ–ಪಂಗಡಕ್ಕೆ ಸೇರಿದವರು ನೀವು ಹಿಂದೂಗಳೇ ? ಬ್ರಾಹ್ಮಣರೇ ?" ಎಂದು ಕೇಳಿದನು. ರಾಮನು "ಅಲ್ಲ" ಎಂದನು. ಪುನಃ ಅವನು, "ಹಾಗಾದರೆ ನೀವು ಕ್ರೈಸ್ತರೆ, ಯಹೂದಿಗಳೇ, ಯಾರು? ನೀವು ಯಾವ ವರ್ಗಕ್ಕೆ, ಯಾವ ಧರ್ಮಕ್ಕೆ, ಯಾವ ಮತಕ್ಕೆ ಸೇರಿದವರು ?" ಎಂದು ಕೇಳಿದನು. ಒಂದು ವಸ್ತುವು ಯಾರಿಗಾದರೂ ಸೇರಿದರೆ, ಅದು ಅವನ ಆಸ್ತಿ ಯಾಗುತ್ತದೆ , ಒಂದು ನಿರ್ಜೀವವಸ್ತುವೋ ಒಂದು ಪ್ರಾಣಿಯೋ ಯಾರಿಗಾದರೂ ಸೇರುತ್ತದೆ. ಮತ್ತು ಈ ವಸ್ತುಗಳು ಅವನ ಆಸ್ತಿಯಾಗುತ್ತವೆ. ಓ, ರಾಮನು ಏನೋ ಒಂದು ನಿರ್ಜೀವ ವಸ್ತುವಲ್ಲ ; ಅವನು ಯಾರಿಗಾದರೂ ಸೇರುವದಕ್ಕೆ ಅವನು ಆಸ್ತಿಯಂತಲ್ಲ ಅವನು ಪಶುಪ್ರಾಣಿಯೂ ಅಲ್ಲ. ಅವನು ಯಾರಿಗಾದರೂ ಏಕೆ ಸೇರಬೇಕು ? ಅವನಿಗೆ ವಿಶಾಲ ವಿಶ್ವವೇ ಸೇರಿದೆ, ರಾಮನಿಗೆ ಅಮೆರಿಕಾ ಸೇರಿದೆ, ರಾಮನು ನಿಮ್ಮ ಆತ್ಮನೇ, ನೀವೆಲ್ಲಾ **ನನಗೆ** ಸೇರಿದ್ದೀರಿ ; ಇಂಡಿಯಾ ಕೂಡ **ನನಗೆ** ಸೇರಿದೆ. ಕ್ರೈಸ್ತಮತವೂ ಮಹಮ್ಮದೀಯ ಮತವೂ ಯಹೂದಿ ಮತವೂ ಹಿಂದೂ ಮತವೂ ವೇದಾಂತವೂ ಎಲ್ಲಾ **ನನಗೆ** ಸೇರಿವೆ.

ಅಲ್ಪಾತ್ಮರು ತಮ್ಮ ಸ್ವಾತಂತ್ರ್ಯವನ್ನು ಮಾರಿಕೊಳ್ಳಬಹುದು ; ಆದರೆ ನೀವೆಂದಿಗೂ ಹಾಗೆ ವಿಕ್ರಯಿಸಿಕೊಳ್ಳಬಾರದು !

ಈ ದೇಶದಲ್ಲಿ ತಾವು ಸ್ವತಂತ್ರರಾಗಿದ್ದೇವೆಂದು ಜನರು ಹೇಳಿಕೊಳ್ಳುತ್ತಾರೆ. ರಾಜಕೀಯ ಸ್ವಾತಂತ್ರ್ಯವು ಅವರಿಗಿರಬಹುದು. ಆದರೆ ಆಹಾ ! ಅಮೆರಿಕಾದ ಧಾರ್ಮಿಕ ದಾಸ್ಯ ! ಸಾಮಾಜಿಕದಾಸ್ಯ ! ರಾಮನಾದರೋ ನಿಮಗೆ ವಿಚಾರ

ಸ್ವಾತಂತ್ರ್ಯವನ್ನೂ ಕ್ರಿಯಾಸ್ವಾತಂತ್ರ್ಯವನ್ನೂ ನಿಜವಾದ ಸ್ವಾತಂತ್ರ್ಯವನ್ನೂ ವಿಮೋಚನೆಯನ್ನೂ ತಂದಿದ್ದಾನೆ. ರಾಮನು ತಂದಿರುವ ಧರ್ಮಕ್ಕೆ ಕೆಲವರು ವೇದಾಂತವೆಂಬ ಅಡ್ಡಹೆಸರನ್ನು-ಉಪನಾಮವನ್ನು–ಕೊಡುತ್ತಾರೆ. ಆದರೆ ಅದಕ್ಕೆ ಯಾವ ನಾಮವನ್ನೂ ಉಪನಾಮವನ್ನೂ ಹಚ್ಚಬೇಕಾಗಿಲ್ಲ.

ನಿಜವಾದ ವೇದಾಂತವು ವೇದಗಳಿಗೆ ಮಾತ್ರ ಸೀಮಿತವಾದುದಲ್ಲ. ಅದು ನಿಮ್ಮ ಹೃದಯಗಳಲ್ಲಿದೆ. ಕಡೆಯದಾಗಿ ನಿಮಗೆ ರಾಮನು ತಿಳಿಸಲು ಬಯಸುವದೇನೆಂದರೆ, ರಾಮನು ಇಂಡಿಯಾದವನು ಮಾತ್ರವಲ್ಲ ; ರಾಮನು ಅಮೆರಿಕಾದವನೂ ನಿಜ ; ರಾಮನು ಹಿಂದೂ ಮಾತ್ರವೆಂದು ತಿಳಿಯಬೇಡಿ. ರಾಮನು ಕ್ರೈಸ್ತನೂ ಆಗಿದ್ದಾನೆ. ರಾಮನು ಈ ಒಂದು ಮತಕ್ಕೋ ಆ ಒಂದು ಸಿದ್ಧಾಂತಕ್ಕೋ ದಾಸನೆಂದು ತಿಳಿಯಬೇಡಿ. ರಾಮನು ನಿಮ್ಮ ಆತ್ಮನೇ ; ಸ್ವಾತಂತ್ರ್ಯವೇ ರಾಮನಾಗಿದ್ದಾನೆ.

ಮತ್ತೊಬ್ಬ ಮನುಷ್ಯನು ಬಂದು, “ ಒಳ್ಳೆಯದು, ನೀವು ದೇವರಾದರೆ, ಕ್ರಿಸ್ತನಂತೆ ನೀವಾದರೆ, ಕ್ರಿಸ್ತನಂತೆ ನೀವೂ ಎಷ್ಟೆಷ್ಟೋ ಪವಾಡಗಳನ್ನು-ಅಮಾನುಷ ಅದ್ಭುತಕಾರ್ಯಗಳನ್ನು-ಮಾಡಿ ತೋರಿಸಬೇಕು. ಅಂಥಾಕಾರ್ಯಗಳನ್ನು, ಎಲ್ಲಿ, ಮಾಡಿತೋರಿಸಿ ; ನೋಡೋಣ ; ಹಾಗಾದರೆ, ನಿಮ್ಮನ್ನು ನಂಬುತ್ತೇವೆ ”. ಎಂದು ಹೇಳಿದನು. ರಾಮನು ಹೇಳಿದ್ದೇನೆಂದರೆ, “ ತಮ್ಮ, ತಮ್ಮಾ, ಕ್ರಿಸ್ತನು ಮಹಿಮೆಗಳನ್ನು ಮೆರೆದರೂ ಅವನನ್ನು ಜನರು ನಂಬಲಿಲ್ಲ. ಅವನನ್ನು ಬಿಡದೆ ಬೆನ್ನುಹತ್ತಿ ಕ್ರೂರವಾಗಿ ಹಿಂಸಿಸಿದರು; ಶಿಲುಬೆಯ ಮೇಲೆ ಮಲಗಿಸಿ ಮೈಗೆಲ್ಲಾ ಮೊಳೆಹೊಡೆದರು. ಪವಾಡಗಳು ನಿಮ್ಮನ್ನು ನಂಬುವಂತೆ ಮಾಡುತ್ತವೆಯೆ ? ಇಲ್ಲವೇ ಇಲ್ಲ ; ಸುಳ್ಳೇ. ಸುಳ್ಳು ”

ಮತ್ತೇನೆಂದರೆ, ಪವಾಡಗಳನ್ನು ಮಾಡುವದೆಂದರೆ ಏನು ? ಅದೆಲ್ಲಾ ಏನು ? ಈ ದೇಹದಿಂದ ಈ ಜಗತ್ತಿನಲ್ಲಿರುವ ಎಲ್ಲಾ ಪವಾಡಗಳನ್ನು ಮಾಡಿದರೂ ಅದು ನನ್ನ ನಿಜವಾದ ದೇವತ್ವಕ್ಕೆ ಒಂದು ಪರಮಾಣುವಿನಷ್ಟು ಮಹತ್ವವನ್ನು ಕೂಡ ಹೆಚ್ಚಿಸಲಾರದು. ಈ ದೇಹವು ನಾನಲ್ಲ ; ನಾನು ನಿಮ್ಮ ಆತ್ಮನೇ. ಈ ಒಂದು ಶರೀರವು ಒಂದು ವೇಳೆ ಪವಾಡಗಳನ್ನು ಮಾಡಿದರೂ ಏನಾಯಿತು ? ಆ ಶರೀರವು ಪವಾಡಗಳನ್ನು ಮಾಡುತ್ತಿಲ್ಲ. ಆದರೆ ಅದೂ ನಾನೇ ಆಗಿದ್ದೇನೆ. ಈ ಶರೀರವು ಪವಾಡಗಳನ್ನು ಮಾಡಿದರೆ, ನೀವು ಈ ಶರೀರವನ್ನೇ ದೇವರನ್ನಾಗಿ ಮಾಡುತ್ತೀರಿ ; ದೇವರೆಂದು ತಿಳಿಯುತ್ತೀರಿ. ಅದಕ್ಕಿಂತಲೂ ಕೇಡಾದುದು ಯಾವದೂ ಇಲ್ಲ ; ಅದು

ಅತ್ಯಂತ ನೀಚವಾದುದು. ಹೀಗೆಮಾತ್ರ ಮಾಡಬಾರದು. ರಾಮನಿಗೆ ಬೇಕಾದುದು, ನಿಮ್ಮನ್ನು ನೀವು ದೇವರನ್ನು ಮಾಡಿಕೊಳ್ಳಬೇಕು-ಎಂಬುದು ; ನಿಮ್ಮನ್ನು ನೀವು ದೇವರೆಂದು ತಿಳಿದುಕೊಳ್ಳಬೇಕೆಂಬದು. ಈ ದೇಹವನ್ನು ದೇವರೆಂದು ತಿಳಿಯಬೇಡಿ ಮಾಡಬೇಡಿ. ಪವಾಡಗಳನ್ನು ಮಾಡಿ, ಈ ಒಂದು ವಿಶಿಷ್ಟವ್ಯಕ್ತಿಯು ಮಹಾ ಮಹಿಮನೆಂಬ ಭಾವನೆಯನ್ನು ನಿಮ್ಮ ಮನಸ್ಸಿನಮೇಲೆ ಹೇರಿ ನಿಮ್ಮ ಸ್ವಾತಂತ್ರ್ಯವನ್ನು ಅಪಹರಿಸಬೇಕೆಂದು ರಾಮನು ಬಯಸುವದಿಲ್ಲ. ಹಿಂದಿನ ಧರ್ಮೋಪದೇಶಕರೂ ಪ್ರವಾದಿಗಳೂ ಮಾಡಿದಂತೆ ರಾಮನು ನಿಮ್ಮನ್ನು ಗುಲಾಮರನ್ನಾಗಿ ಮಾಡಿಕೊಂಡು ನಿಮ್ಮ ಸ್ವಾತುತ್ರ್ಯವನ್ನು ಹರಣಮಾಡಬಾರದು.

ಈ ದೇಹವು ಪವಾಡಗಳನ್ನು ಮಾಡಬೇಕೆಂದು ನೀವು ಬಯಸುತ್ತೀರಿ ; ಆದರೆ ಈ ದೇಹವು ನಾನಲ್ಲ ಈ ಪ್ರಪಂಚವೆಂಬ ಅತ್ಯಂತ ಅದ್ಭುತವಾದ ಪವಾಡವನ್ನು ಆಗಲೇ ಹೊರತಂದಿರುವಂಥ ಆ ದೇವರೇ ನಾನಾಗಿದ್ದೇನೆ. ಅದೇ ನಾನು ; ಆ ದೇವರೇ ನಾನು. ಈ ವಿಶಾಲ ಪ್ರಪಂಚವೇ ನನ್ನ ಪವಾಡವು ; ಈ ಅಖಂಡ ವಿಶ್ವವೇ ಯಾರ ಕಾರ್ಯಕೌಶಲವೋ, ನಿರ್ಮಾಣವೋ ಅವನೇ ನಾನು.

ಇಂಡಿಯಾದಲ್ಲಿ ಈ ದೇಹವು ವಾಸವಾಗಿದ್ದ ಮನೆಯಲ್ಲಿ ಒಬ್ಬ ಹುಡುಗನು ಸೇವೆಮಾಡಿಕೊಂಡಿದ್ದನು. ಅವನು ಯಾವಾಗಲೂ ರಾಮನ ಸಂಪರ್ಕದಲ್ಲಿಯೇ ಇದ್ದು ದರಿಂದ ದೈವಾವೇಶವನ್ನು ಪಡೆದು, ಒಂದು ದಿನ ಆ ಎತ್ತರವಾದ ಶ್ರೀಮಂತಭವನದ ಮಹಡಿಯ ಮೇಲ್ಭಾಗದ ಮೇಲೆ ಹತ್ತಿ ನಡೆದಾಡುತ್ತಾಗಟ್ಟಿಯಾಗಿ "ನಾನೇ ದೇವರು ನಾನೇ ದೇವರು, ನಾನೇ ದೇವರು." ಎಂದಂ ಉದ್ಘೋಷಿಸುತ್ತಿದ್ದನು. ಅಕ್ಕಪಕ್ಕದ ಕೆಳಗಿನ ಮನೆಗಳಲ್ಲಿ ವಾಸಮಾಡುತ್ತಿದ್ದ ಕೆಲವು ಜನರು, ಇವನ ಕೂಗನ್ನು ಕೇಳಿ ಸ್ವಲ್ಪ ಸಿಟ್ಟಿಗೆದ್ದು, ಹೊರಗೆ ಬಂದು ಅವನನ್ನು ಕುರಿತು, ''ಏನಯ್ಯಾ ಅದು ? ಸನ್ನಿ ಹಿಡಿದವನಂತೆ ಹುಚ್ಚು ಹುಚ್ಚಾಗಿ ಅಬ್ಬರಿಸುತ್ತಿದ್ದಿ ? ಏನು ಹೇಳುತ್ತಿ ? ನೀನೇ ದೇವರು ಎನ್ನುತೀಯ ? ನೀನು ದೇವರಾದರೆ ಆ ಮಹಡಿಯಿಂದ ಕೆಳಗೆ ಹಾರು ನೋಡೋಣ ; ನಿನಗೆ ಕಾಲು ಮುರಿಯುವದೋ ಇಲ್ಲವೋ ತಲೆ ಒಡೆಯುವದೋ ಇಲ್ಲವೋ ನೋಡೋಣ; ನಿನಗೆ ಏನೂ ಗಾಯವಾಗದಿದ್ದರೆ, ನೋವಾಗದಿದ್ದರೆ, ನಿನ್ನನ್ನು ದೇವರೆಂದು ನಂಬುತ್ತೇವೆ. ನಿನಗೆ ಸ್ವಲ್ಪ ಗಾಯವಾದರೂ ಸಾಕು, ನಿನ್ನನ್ನು ಕೊಂದು ಬಿಡುತ್ತೇವೆ ; ಅಷ್ಟೇ ಅಲ್ಲ. ನಿನ್ನನ್ನು ಚಿತ್ರಹಿಂಸೆ ಮಾಡಿ ಕೊಲ್ಲುತ್ತೇವೆ. ಹಾಗೇಕೆ ಬೊಬ್ಬೆ ಹೊಡೆಯುತ್ತಿ ? 'ನಾನೇ ದೇವರು' ಎಂಬ ಅಪವಿತ್ರವಾದ

ಮಾತನ್ನು ನಮ್ಮ ಕಿವಿಗಳಿಗೆಲ್ಲಾ ಬಡಿಯುವಂತೆ–ಬಡಿದುಕೊಳ್ಳುವದಕ್ಕೆ ನಿನಗೆ ಅಧಿಕಾರವಿಲ್ಲ". ಎಂದು ರೇಗಿ ರೇಗಿ ಕೂಗಿ ಹೇಳದರು.

ತಾನೇ ದೇವರೆಂಬ ಆನಂದ ಪರವಶತೆಯ ಹುಚ್ಚಿನಿಂದ ತುಂಬಿ ತುಳುಕುತ್ತಿದ್ದ ಆ ಬಾಲಕನು, ದಿವ್ಯವಾದ ಭಾವಾವೇಶ ಭರದಿಂದ "ಓ ನನ್ನ ಆತ್ಮವೇ ! ನಾನು ಕೆಳಗೆ ಹಾರುವದಕ್ಕೆ ಸಿದ್ಧವಾಗಿದ್ದೇನೆ; ನೀವು ಯಾವ ಅಗಾಧ ಕೂಪವನ್ನು ತೋರಿಸಿದರೂ ಅಧಃ ಪಾತಾಳವನ್ನು ತೋರಿಸಿದರೂ ತಲೆಕೆಳಗಾಗಿ ಧುಮುಕಲು ಸಿದ್ಧವಿದ್ದೇನೆ ; ಯಾವಸಾಗರದ ತಳಕ್ಕೆ ಹಾರಿ ಮುಳುಗಲಿ ಹೇಳಿ; ಆದರೆ ನಾನು ಮೊದಲೇ-ಆಗಲೇ-ಇಲ್ಲದಿರುವ ಸ್ಥಳವನ್ನು ದಯವಿಟ್ಟು ತಿಳಿಸಿ ; ಏಕೆಂದರೆ, ಕೆಳಗೆ ನೆಗೆಯುವದಕ್ಕೆ ನಾನು ಮೊದಲೇ–ಈಗಾಗಲೇ–ಇಲ್ಲದಿರುವ ಸ್ಥಳವು ಬೇಕು. ನಾನಿಲ್ಲದೆ ಬರಿದಾಗಿರುವ ಸ್ಥಳವನ್ನು ದಯವಿಟ್ಟು ತಿಳಿಸಿ. ನಾನೇ ದೇವಾಧಿದೇವ, ಸರ್ವವ್ಯಾಪಿ, ಸರ್ವಾಂತರ್ಯಾಮಿಯು ; ಯಾವನು ಖಂಡನಾಗಿದ್ದಾನೋ ಪರಿಮಿತನಾಗಿದ್ದಾನೋ ಯಾವನು ಇಲ್ಲಿ ಮಾತ್ರ ಇದ್ದು ಅಲ್ಲಿಲ್ಲವೋ ಅಂಥವನು ಮಾತ್ರ ತಾನಿದ್ದಲ್ಲಿಂದ ಇಲ್ಲದ ಸ್ಥಳಕ್ಕೆ ಹಾರುವದು ಸಾಧ್ಯ. ಎಲ್ಲೆಲ್ಲಿಯೂ ತಾನೇ ತುಂಬಿರುವವನು ಎಲ್ಲಿಗೆ ಹಾರಬೇಕು ? ಹೇಗೆ ಹಾರಬೇಕು ? ಎಂದು ಕೇಳಿದನು."

ಆಗ ಹಾರಬೇಕೆಂದು ಅವನನ್ನು ಕೇಳಿದ್ದ ಜನರು. "ಓ, ನೀನೇ ಆ ದೇವರೋ ನೀನೇ ಆ ದೇವರೋ ? ಎಂದಿಗೂ ಅಲ್ಲ. ನೀನು ಆ ದೇಹ. " ಎಂದು ಕೂಗಿದರು. ಆ ಬಾಲಕನು ಹೇಳಿದನು, " ನಿಮ್ಮ ಭಾವನೆಯಿಂದ ಈ ದೇಹವನ್ನು ಕಲ್ಪಿಸಿಕೊಂಡಿದ್ದೀರಿ. ಇದು ನಾನಲ್ಲ. ನಿಮ್ಮ ಪ್ರಶ್ನೆಗಳೂ ಆಕ್ಷೇಪಗಳೂ ನನ್ನನ್ನು ಮುಟ್ಟಲಾರವು. ಅವು ನಿಮ್ಮ ಕಲ್ಪನೆಯನ್ನು ಮಾತ್ರ ತಾಕುತ್ತವೆ "

ಹೀಗೆ, ಯಾರು ಮೊದಲೇ ಸರ್ವವ್ಯಾಪಿಯೋ ಅವರು ಹಾರುವದು ಹೇಗೆ ಅಥವಾ ಅಂಥಾಕಾರ್ಯಗಳನ್ನು ಮಾಡುವದು ಹೇಗೆ ? ಅವನು ಮೊದಲೇ ಇಲ್ಲದಿರುವ ಒಂದು ಸ್ಥಳವೂ ಇಲ್ಲ. ಅವನೇ ನಾನು ; ಅವನೇ ನಾನು. ನಾನು ಈ ಶರೀರದಲ್ಲಿ ಮಾತ್ರ ಇದ್ದು ಆ ಶರೀರದಲ್ಲಿ ಅಥವಾ ಮಿಕ್ಕಶರೀರಗಳಲ್ಲಿ ಇಲ್ಲವಾದರೆ, ನಾನು ದೇವರೆಂದು ಸಿದ್ಧಪಡಿಸುವದಕ್ಕಾಗಿ ಈ ಶರೀರದ ಮೂಲಕವಾಗಿ ಪ್ರಾಪಂಚಿಕ ಪವಾಡಗಳನ್ನು ಮಾಡಿ ತೋರಿಸಬೇಕು. ಎಲ್ಲಾ ದೇಹಗಳೂ ನನ್ನವೇ ; ಆಗಲೇ ಸಿದ್ಧವಾಗಿರುವ ಎಲ್ಲವೂ ನನ್ನವೇ. ಅವನ್ನು ನಾನು ಸುಮ್ಮನೇ ಸ್ವಾಧೀನ ಪಡಿಸಿ

ಕೊಳ್ಳಬೇಕು , ಅಷ್ಟೆ. ಇನ್ನೇನೂ ಮಾಡಬೇಕಾಗಿಲ್ಲ ; ಎಲ್ಲವನ್ನೂ ನಾನೇ ನಿರ್ಮಾಣ ಮಾಡಿದ್ದೇನೆ.

ಇನ್ನೊಬ್ಬ ಮನುಷ್ಯನು ಬಂದು ಹೀಗೆ ಕೇಳಿದನು , '' ವೇದಗಳ ವಿಷಯದಲ್ಲಿ ನಿಮ್ಮ ಮನೋಭಾವವೇನು ? ನಿಮ್ಮ ಅಭಿಪ್ರಾಯವೇನು ? ರಾಮನ ಉತ್ತರ ವೇನೆಂದರೆ," ರಸಾಯನ (ವಿಜ್ಞಾನ) ಶಾಸ್ತ್ರವನ್ನು (Chemistry) ನಾವು ಯಾವ ದೃಷ್ಟಿಯಿಂದ ಸಮೀಪಿಸುತ್ತೇವೆಯೋ ಪ್ರಸ್ತಾಪಿಸುತ್ತೇವೆಯೋ ಹಾಗೆಯೇ ನಾವು ವೇದಗಳ ವಿಚಾರದಲ್ಲಿಯೂ ವರ್ತಿಸಬೇಕು." ಅನಂತರ ಆ ಮಿತ್ರನು " ನೀವು ವೇದ ಗಳನ್ನು ನಂಬುತ್ತೀರೋ ? " ಎಂದು ಕೇಳಿದನು. ರಾಮನು ಹೇಳಿದ್ದೇನೆಂದರೆ, "ನಾನು ವೇದಗಳನ್ನು ತಿಳಿದಿದ್ದೇನೆ. ನೀವೂ ಅದನ್ನು ಅಧ್ಯಯನ ಮಾಡಬೇಕೆಂದು ಸಲಹೆಮಾಡುತ್ತೇನೆ, ಶಿಫಾರಸ್ಸು ಮಾಡುತ್ತೇನೆ " ಪುನಃ ಆ ಮಿತ್ರನು ಮಾಡಿದ ಪ್ರಶ್ನೆ. ''ನಾವು ಬೈಬಲ್ಲನ್ನು ಆದರಿಸುವಂತೆಯೇ ವೇದಗಳನ್ನೂ ಆದರಿಸಬಹುದೋ?" ರಾಮನು ಹೇಳುವದೇನೆಂದರೆ, " ನೀವು ಬೈಬಲ್ಲನ್ನು ಹಾಳು ಮಾಡುತ್ತಿದ್ದೀರಿ. ವೇದಗಳನ್ನೂ ಹಾಗೇ ಮಾಡಬೇಡಿ. ನೀವು ಖಗೋಳ ಶಾಸ್ತ್ರವನ್ನೋ ಅಥವಾ ರಸಾಯನ ಶಾಸ್ತ್ರವನ್ನೋ ವಿಚಾರ ಮಾಡುವಂತೆ ವೇದಗಳನ್ನೂ ವಿಚಾರಮಾಡ ಬೇಕು. ಕೆಲವು ಹಿಂದೂಗಳಂತೆ ಅಂಧವಿಶ್ವಾಸದಿಂದ ಎಲ್ಲವನ್ನೂ ಸಂದೇಹಪಡದಂತೆ ನಂಬಬೇಡಿ. ನೀವು ರಸಾಯನ ಶಾಸ್ತ್ರದ ಒಂದು ಪುಸ್ತಕವನ್ನು ತೆಗೆದುಕೊಂಡರೆ, ಲ್ಯಾವಾಯ್‌ಸಿಯಾರ್ (Lavoisior) ಅಥವಾ ಲೀಬ್‌ನಿಟ್ಸ್ (Liebnitz) ಎಂಬ ಪ್ರಸಿದ್ಧ ವಿಜ್ಞಾನಿಗಳೇ ಹೇಳಿದ್ದರೂ ಅವರ ಅಧಿಕಾರದ ಮೇಲೆ ಯಾವ ಫಲಿತಾಂಶವನ್ನೂ ನೀವು ನಂಬುವದಿಲ್ಲ. ನೀವೇ ಸ್ವತಃ ಆ ಶಾಸ್ತ್ರೋಕ್ತವಾದ ವಿಧಾನದಿಂದ ಪ್ರಯೋಗಮಾಡಿ ಪಡೆದ ಫಲಿತಾಂಶವನ್ನು ಪರೀಕ್ಷಿಸಿ, ಸತ್ಯವೇನೆಂ ಬದನ್ನು ನೀವೇ ಕಂಡುಕೊಳ್ಳುತ್ತೀರಿ. ಆ ವಿಜ್ಞಾನಿಗಳು ಹೇಳಿರುವ ಫಲಿತಾಂಶವು ನಿಮ್ಮ ಅನುಭವಕ್ಕೆ ಬಾರದಿದ್ದರೆ ನೀವದನ್ನು ಒಪ್ಪುವದಿಲ್ಲ ; ಒಪ್ಪಬೇಕಾಗಿಲ್ಲ. ಆದ್ದರಿಂದ ಯಾವದನ್ನೂ ಕೇವಲ ಅಧಿಕಾರದ (Authority) ಮೇಲೆ ಪ್ರಭುಶಕ್ತಿ ಯ ಮೇಲೇ ತೆಗೆದುಕೊಳ್ಳಬಾರದು.

A faith that is founded on authority is no faith.

**" ಅಧಿಕಾರ ಶಕ್ತಿಯ ಮೇಲೆ ಆಧರಿಸಿರುವ ಮತಶ್ರದ್ಧೆಯು, ಧರ್ಮ ಶ್ರದ್ಧೆಯು ಶ್ರದ್ಧೆಯೇ ಅಲ್ಲ".**

ನೀವೇ ಪ್ರಯೋಗಗಳನ್ನು ನಡೆಸಬೇಕು ; ಪರೀಕ್ಷಿಸಬೇಕು ; ಅವುಗಳನ್ನು ನಿಜವಾದ ವೈಜ್ಞಾನಿಕ ಮನೋಭಾವದಿಂದ, ರೀತಿಯಿಂದ, ಪರಿಶೀಲಿಸಬೇಕು ; ನಿಮ್ಮ ಸ್ವಾತಂತ್ರ್ಯವನ್ನು ವಿಕ್ರಯಿಸಿಕೊಳ್ಳದೆ, ಭದ್ರವಾಗಿ ಉಳಿಸಿಕೊಂಡು ವೇದಗಳ ಅರ್ಥವೇನು, ತತ್ತ್ವಾರ್ಥವೇನು, ಎನ್ನುವದನ್ನು ವಿಚಾರ ಮಾಡಬೇಕು. ಅವನ್ನು ಈ ರೀತಿಯಲ್ಲಿ ವ್ಯಾಸಂಗಮಾಡಿದರೆ ಮಾತ್ರ, ವೇದಗಳ ತತ್ತ್ವದಲ್ಲಿಯೂ ಸತ್ತ್ವದಲ್ಲಿಯೂ ಚೈತನ್ಯಶಕ್ತಿಯಲ್ಲಿಯೂ ಪ್ರವೇಶ ಮಾಡುವ ಯೋಗ್ಯತೆ ಉಂಟಾಗುತ್ತದೆ; ಇಲ್ಲವಾದರೆ, ನೀವು ಯಾವಾಗಲೂ ಗುರಿಯನ್ನು ತಪ್ಪುತ್ತೀರಿ. ವೇದಗಳಲ್ಲಿರುವ ಉಪದೇಶಕ್ಕೆ ಯಾವ ಆಕ್ಷೇಪದ ಭಯವೂ ಇಲ್ಲ ; ಪ್ರಶ್ನೆಗಳ ಭಯವೂ ಇಲ್ಲ ; ಸಂಶಯಗಳ ಭಯವೂ ಇಲ್ಲ. ನಿಮ್ಮ ಎಲ್ಲಾ ಪಾಶ್ಚಾತ್ತ್ಯ ವಿಜ್ಞಾನವೂ ವೇದಗಳನ್ನು ಪರೀಕ್ಷಿಸಲಿ ; ನಿಮ್ಮ ಪಾಶ್ಚಾತ್ತ್ಯ ಬೆಳಕಿನ* ಚಕಿತಗೊಳಿಸುವ ಕಿರಣಧಾರೆಗಳು ಹರಿದು ಬರಲಿ ; ಆ ಪ್ರಕಾಶದ ಒಂದು ಪ್ರವಾಹವೇ **ಶ್ರುತಿ** ಮಾತೆಯ ಮನೋಹರ ಮುಖವನ್ನು ಪ್ರಕ್ಷಾಲನಮಾಡಿ ನೋಡಲಿ; **ಶ್ರುತಿಮಹಾದೇವಿಯ** ಸುಂದರ ಮುಖದ ಮೇಲೆ ಒಂದಾದರೂ ಕಪ್ಪು ಚುಕ್ಕೆಯಿಲ್ಲ, ಒಂದಾದರೂ ಕಪ್ಪು ಕಲೆಯಿಲ್ಲ, ಕಪ್ಪು ಮಚ್ಚೆಯಿಲ್ಲ ಕಳಂಕವಿಲ್ಲ, ಎಂಬದು ಬೆಳಕಿಗೆ ಬರುತ್ತದೆ. ವೇದಗಳು ವಿಜ್ಞಾನಕ್ಕೆ ವಿರೋಧವಿಲ್ಲ ; ನಿಮ್ಮ ಆಧುನಿಕಕಾಲದ ವೈಜ್ಞಾನಿಕ ಆವಿಷ್ಕಾರಗಳೂ (Discoveries) ನಿರ್ಮಾಣಗಳೂ ಯಂತ್ರಸಾಧನಗಳೂ (Inventions) ಶ್ರುತಿ ಸಾಮ್ರಾಜ್ಞಿಯ ಕೇವಲ ಪಾದಪ್ರಕ್ಷಾಲನೆಯಾಗಿವೆ. ಅವು ವೇದಾಂತದ ಕಾರ್ಯವನ್ನೂ ಉದ್ದೇಶವನ್ನೂ ಹೆಚ್ಚು ಹೆಚ್ಚಾಗಿ ಸೇವಿಸುತ್ತಿವೆ.

ಯಾವ ಬಗೆಯ ಮುನ್ನೊಲವೂ ಪೂರ್ವಾಗ್ರಹಗಳೂ ಮೊದಲೇ ಬೆಳೆಸಿಕೊಂಡಿರುವ ದುರಭಿಪ್ರಾಯಗಳೂ ಇಲ್ಲದೆ ನಿಷ್ಪಕ್ಷಪಾತವಾಗಿ ವೇದಗಳನ್ನು ಅಭ್ಯಾಸ ಮಾಡಿರುವ ಎಲ್ಲಾ ಜನರೂ ತಮ್ಮ ಗೌರವಗಳನ್ನೂ ಶ್ಲಾಘನೆಗಳನ್ನೂ ಸಲ್ಲಿಸಿದ್ದಾರೆ. ಬೇರೆ ಯಾವ ತತ್ತ್ವಶಾಸ್ತ್ರವನ್ನೂ ಎಂದೆಂದಿಗೂ ಶ್ಲಾಘನೆಮಾಡುವ ಪ್ರವೃತ್ತಿಯೇ ಇಲ್ಲದಿದ್ದವನೂ ತನ್ನ ತತ್ತ್ವಶಾಸ್ತ್ರದ ಹೊರತು ಬೇರೆ ಎಲ್ಲ ತತ್ವಶಾಸ್ತ್ರಗಳ ಮೇಲೂ ಎಲ್ಲಾ ಬಗೆಯ ನಿಂದೆಯನುಡಿಗಳನ್ನೂ ಸುರಿಸಿದವನೂ ಆಗಿದ್ದ ತತ್ತ್ವಜ್ಞಾನಿಯಾಗಿದ್ದ ಷೋಪನ್‌ಹಾವರ್ (Schopen-hauer) ಮಹಾಶಯನು ವೇದಗಳ ವಿಷಯದಲ್ಲಿ ಹೇಳಿರುವದೇನೆಂದರೆ,

---

*ಪ್ರಕಾಶವು ಯಾವಾಗಲೂ ಪೂರ್ವದಿಂದಲೇ ಹರಿದು ಬರುವದು , ನೆನಪಿರಲಿ. ಒಂದು ಪಕ್ಷ, ಇದು ಪಾಶ್ಚಾತ್ತ್ಯ ಬೆಳಕೆಂದು ಎಣಿಸೋಣ.

"In the whole world there is no study so beneficial and so elevating as that of the Upanishads (Vedas). It has been the solace of my life, it will be the solace of my death."

"ಇಡೀ ಜಗತ್ತಿನಲ್ಲಿ ಉಪನಿಷತ್ತುಗಳಷ್ಟು (ವೇದಗಳಷ್ಟು) ಹಿತಕರವೂ ಕಲ್ಯಾಣಕರವೂ ಉನ್ನತಿಪ್ರದವೂ ಆದ ವ್ಯಾಸಂಗವು ಇನ್ನೊಂದಿಲ್ಲ. ನನ್ನ ಜೀವನದಲ್ಲಿ ಶಾಂತಿ-ಸಮಾಧಾನಗಳನ್ನು ನೀಡುತ್ತಿರುವುದು ಅದೇ ಆಗಿದೆ; ನನ್ನ ಸಾವಿನಲ್ಲಿ ಸಂತೈಸಿ, ಸಮಾಧಾನವನ್ನು ನೀಡುವದೂ ಅದೇ ಆಗುವದು."

ಷೋಪನ್‌ಹಾವರ್ ಮಹಾಶಯನ ಈ ಕಂಠೋಕ್ತವಾದ ಪ್ರತಿಪಾದನೆಯ ಮೇಲೆ, ಪ್ರಸಿದ್ಧ ತತ್ತ್ವಜ್ಞಾನಿಯಾದ ಮಾಕ್ಸ್‌ಮುಲ್ಲರನು ವ್ಯಾಖ್ಯಾನಮಾಡುತ್ತಾ ಹೇಳಿರುವದೇನೆಂದರೆ,

"If the words of such an independent philosopher require any endorsement, with my life-long study of all the religions in this world and all the systems of philosophy of Europe, I am ready to humbly endorse this experience of Schopenhauer's."

"ಅಂಥಾ ಸ್ವತಂತ್ರ ವಿಚಾರಶೀಲನಾದ ಆ ತತ್ತ್ವಜ್ಞಾನಿಯ (ಷೋಪನ್‌ಹಾವರ್‌ನ) ಆ ವಚನಗಳಿಗೆ ಅನುಮೋದನೆಯೇನಾದರೂ ಅವಶ್ಯವಾದರೆ, ಈ ಪ್ರಪಂಚದಲ್ಲಿರುವ ಎಲ್ಲಾ ಮತಧರ್ಮಗಳನ್ನೂ ಮತ್ತು ಯೂರೋಪಿನ ಎಲ್ಲಾ ಪದ್ಧತಿಗಳ ತತ್ತ್ವಶಾಸ್ತ್ರವನ್ನೂ ನನ್ನ ಜೀವಮಾನವೆಲ್ಲಾ ಅಭ್ಯಾಸಮಾಡಿದ ಫಲವಾಗಿ, ನಾನು ವಿನಯಪೂರ್ವಕವಾಗಿ ಷೋಪನ್‌ಹಾವರ್ ಮಹಾಶಯನ ಈ ಅನುಭವವನ್ನು ಅನುಮೋದಿಸಲು–ದೃಢೀಕರಿಸಲು-ಸಿದ್ಧನಿದ್ದೇನೆ."

ಮತ್ತು ಮ್ಯಾಕ್ಸ್ ಮುಲ್ಲರ್ ಮುಂದುವರಿದು ಹೇಳಿರುವದೇನೆಂದರೆ,

"If philosophy is meant to be preparation for a

happy death, I know of no better preparation for it than the Vedanta philosophy (*Viz*, the philosophy of the Vedas).''

''ಸುಖವಾದ ಸಾವಿಗೆ ಸಿದ್ಧತೆಗೊಳಿಸುವದೇ ತತ್ತ್ವಶಾಸ್ತ್ರದ ಉದ್ದೇಶ ವಾಗಿದ್ದರೆ, ವೇದಾಂತಶಾಸ್ತ್ರಕ್ಕಿಂತಲೂ ಹೆಚ್ಚು ಉತ್ತಮವಾದ ಸಿದ್ಧತೆಯನ್ನು ನಾನು ತಿಳಿದಿಲ್ಲ". (ವೇದಗಳ ತತ್ತ್ವಜ್ಞಾನ ಎಂಬ ಅವರ ಗ್ರಂಥ).

ಇನ್ನೊಬ್ಬ ಮಿತ್ರನು ಆಕ್ಷೇಪಿಸಿದ್ದೇನೆಂದರೆ, '' ನೋಡಿ ; ನಿಮ್ಮ ವೇದಾಂತವು ಇಂಡಿಯಾ ದೇಶದ ಸಂಕುಚಿತ ಮೇರೆಯೊಳಗೇ ಸೀಮಿತವಾಗಿದೆ." ಈಗ ನಾವು ವಿಚಾರಮಾಡಬೇಕಾಗಿರುವ ಈ ಪ್ರಶ್ನೆಗಳು ಬಹಳ ಮುಖ್ಯವಾಗಿವೆ. ಮತ್ತು ಸ್ವಾರಸ್ಯಕರವಾಗಿವೆ. ಅವನ ಅಭಿಪ್ರಾಯವೇನೆಂದರೆ. "ಕ್ರೈಸ್ತಮತವು ಇಡೀ ಪ್ರಪಂಚದ ಮೇಲೆಲ್ಲಾ ಹರಡಿದೆ ; ಎಲ್ಲೆಡೆಯಲ್ಲಿಯೂ ಜಗತ್ತಿನಲ್ಲಿ ಅದೇ ಮೇಲುಗೈಯಾಗಿದೆ ; ಹೆಚ್ಚು ಬಳಕೆಯಲ್ಲಿದೆ ಹೆಚ್ಚು ಪ್ರಾಧಾನ್ಯವಾಗಿದೆ. ನಿಮ್ಮ ವೇದಾಂತವು ಇಂಡಿಯಾದ ಇಕ್ಕಟ್ಟಾದ ಮೇರೆಗಳೊಳಗೇ ನೆರೆಯಾಗಿದೆ, ಅದೂ ಸುಶಿಕ್ಷಿತ ವರ್ಗಗಳ ಧರ್ಮವಾಗಿದೆ. ಜನಜಂಗುಳಿಯ-ಜನಸಾಮಾನ್ಯರ ಧರ್ಮ ವಾಗಿಲ್ಲ." ರಾಮನು ಹೇಳುವದೇನೆಂದರೆ, "ಕ್ರೈಸ್ತಧರ್ಮವು ಎಲ್ಲಾ ರಾಷ್ಟ್ರಗಳನ್ನೂ ನಿಜವಾಗಿಯೂ ಆಳುತ್ತಿದ್ದರೆ ಅದು ಬಹಳ ಉತ್ತಮವಾಗುತ್ತಿತ್ತು ; ಯೂರೋಪಿನಲ್ಲಿಯಾದರೂ ಅದು ನಿಜವಾಗಿ ಪ್ರಭುತ್ವ ನಡೆಸುತ್ತಿದ್ದರೆ, ಅದು ರಾಮನ ಮಹಾ ಸಂತೋಷಕ್ಕೆ ಕಾರಣವಾಗುತ್ತಿತ್ತು. ಆದರೆ ಯೂರೋಪಿನಲ್ಲಿ ಆಗಲಿ, ಅಮೇರಿಕಾ ದಲ್ಲಿ ಆಗಲಿ ಹರಡಿ ಮೇಲುಗೈ ಆಗಿರುವದು 'ಕ್ರಿಶ್ಚಿಯಾನಿಟಿ' ಅಲ್ಲ, 'ಚರ್ಚಿಯಾನಿಟಿ', ಅದು ಕ್ರೈಸ್ತಮತವಲ್ಲ, ಚರ್ಚ್‌ಮತ, ಅದು 'ಚರ್ಚಿಯಾನಿಟಿ'ಯೇ ಹೊರತು 'ಕ್ರಿಶ್ಚಿಯಾನಿಟಿ' ಅಲ್ಲ.

ಮತ್ತೇನೆಂದರೆ, ನಿಜವಾದ ಕ್ರೈಸ್ತ ಧರ್ಮವು ಜನಸಾಮಾನ್ಯರಲ್ಲಿ ಹರಡಿರು ವದು ನಿಜವಾದರೆ, ಅದು ಆ ಧರ್ಮದ ಮಹತ್ವವನ್ನು ತೋರಿಸುವ ಪ್ರಬಲವಾದ ವಾದವೇ ಸರಿ ; ಅದು ಶ್ಲಾಘ್ಯವೂ ನಿಜ. ಆದರೆ ಸಹೋದರರೆ, ತಪ್ಪು ಅಭಿಪ್ರಾಯದಿಂದ ಪ್ರಯೋಜನವಿಲ್ಲ. ಸರಿಯಾಗಿ ವಿಚಾರಮಾಡಿ. ಕ್ರೈಸ್ತ ಧರ್ಮಕ್ಕಿಂತಲೂ ಸೈತಾನನ ಧರ್ಮಕ್ಕೇ ಹೆಚ್ಚು ಅನುಯಾಯಿಗಳು ಇದ್ದಾರೆ. ಪಾಪ, ದುರಾಚಾರ, ಕೇಡು, ಬಯಕೆಗಳು, ಆಶಾ, ಶತ್ರುತ್ವ, ದ್ವೇಷ, ಕಾಮೋದ್ರೇಕ,

ವಿಷಯಲಂಪಟತನ–ಇವುಗಳೇ ಸೈತಾನನ-ಆಸುರೀ-ಧರ್ಮ. ಕ್ರೈಸ್ತ ಧರ್ಮಕ್ಕಿಂತಲೂ ಈ ದೈತ್ಯಧರ್ಮವೇ ಪ್ರಪಂಚದಲ್ಲೆಲ್ಲಾ ಹೆಚ್ಚು ಪ್ರಧಾನವಾಗಿ ಪ್ರಚಾರದಲ್ಲಿದೆ.

ಲಂಡನ್ನಿನಲ್ಲಿ, ಪಾರ್ಲಿಮೆಂಟ್ ಭವನದಲ್ಲಿ ಒಮ್ಮೆ ಮಹಾ ವಾಗ್ಮಿಯಾಗಿದ್ದ ಪ್ರತಿನಿಧಿಯೊಬ್ಬನನ್ನು ಅವನ ಪ್ರತಿಪಕ್ಷದವರು ಅಪಹಾಸ್ಯ–ತಿರಸ್ಕಾರಗಳ ಹುಯ್ಲೆಬ್ಬಿಸಿ ಕೂರಿಸಿದಾಗ ಅವನೇನು ಹೇಳಿದ ಗೊತ್ತಿದೆಯೆ? ಪ್ರತಿ ಪಕ್ಷದವರನ್ನು ಕುರಿತು ಯೋಗ್ಯನಾದ ಆ ಬುದ್ಧಿಶಾಲಿಯು ಹೇಳಿದ್ದೇನೆಂದರೆ, "ನಿಮ್ಮ ಕಡೆ ಹೆಚ್ಚು ಸಂಖ್ಯೆಯ ಜನರಿದ್ದರೆ ಏನಾಯಿತು ? ಅಭಿಪ್ರಾಯಗಳನ್ನು ತೂಕ ಮಾಡಬೇಕು, ಅವುಗಳನ್ನು (ಖಾಲಿ ತಲೆಗಳನ್ನೂ ಸೇರಿಸಿ) ಎಣಿಸಬಾರದು."

"Opinions ought to be weighed, they ought not to be counted."

ಖಗೋಳ ಶಾಸ್ತ್ರಜ್ಞನಾದ (ಇಟಲೀ ದೇಶಸ್ಥ) ಗೆಲಿಲಿಯೋ ಮಹಾಶಯನು (Gelileo) ಕೋಪರ್ನಿಕಸ್ಸನ (Copernicus)ಸಿದ್ಧಾಂತವನ್ನು ಲೋಕಕ್ಕೇ ಎತ್ತಿ ಹಿಡಿದಿದ್ದ ಕಾಲವೊಂದಿತ್ತು. ಈ ಭೂಮಿಯು ತಿರುಗುತ್ತಿದೆಯೇ ಹೊರತು ಸೂರ್ಯನು ತಿರುಗುವದಿಲ್ಲ–ಎಂದು ಅವನು ಹೇಳಿದನು. ಅವನ ಅಭಿಪ್ರಾಯವು ಭಯಂಕರ ಅಲ್ಪಸಂಖ್ಯೆಯದಾಗಿತ್ತು ; ಆ ಅಭಿಪ್ರಾಯವು ಆಗ ಅವನ ಒಬ್ಬನದೇ ಆಗಿತ್ತು. ಇಡಿಯ ವಿಶಾಲ ಜಗತ್ತೇ ಅವನ ವಿರುದ್ಧವಾಗಿತ್ತು ; ಸಮಸ್ತ ಬಹುಸಂಖ್ಯಾತರೂ ಅವನ ವಿರುದ್ಧವಾಗಿದ್ದರು. ಆದರೆ ಸತ್ಯವು ಯಾವದು ಈಗ ? ಸತ್ಯವು ಅಲ್ಪಸಂಖ್ಯಾತರ ಕಡೆಗೆ ಇದೆಯೋ ? ಬಹುಸಂಖ್ಯಾತರ ಕಡೆಗೆ ಇದೆಯೋ ? ಬಹುಸಂಖ್ಯೆ, ಅಲ್ಪಸಂಖ್ಯೆ ಎನ್ನುವುದರಲ್ಲಿ ಏನಿಲ್ಲ. ಕ್ರೈಸ್ತಮತದ ರೋಮನ್ ಕ್ಯಾಥೋಲಿಕ್ ಸಂಪ್ರದಾಯದಲ್ಲಿ ಅನುಯಾಯಿಗಳು ಬಹುಸಂಖ್ಯೆಯಲ್ಲಿ ಇದ್ದ ಕಾಲವೊಂದಿತ್ತು; ಆದರೆ ಬಹುಸಂಖ್ಯಾತ ಜನರು ಅದರ ಇನ್ನೊಂದು ಸಂಪ್ರದಾಯಕ್ಕೆ ಸೇರಿದ ಕಾಲವು ಬಂದಿತು. ಕ್ರೈಸ್ತಮತದಲ್ಲಿ ಹನ್ನೊಂದೇ ಜನ ಶಿಷ್ಯರಿದ್ದ ಕಾಲವೊಂದಿತ್ತು. ಆದರೆ ಈ ಕ್ರಿಶ್ಚಿಯಾನಿಟಿಯಲ್ಲಿ ಅಥವಾ ಚರ್ಚಿಯಾನಿಟಿಯಲ್ಲಿ ತೋರಿಕೆಯ ಬಹುಸಂಖ್ಯಾತರು ಇರುವ ಕಾಲ ಬಂದಿತು. ಬಹುಸಂಖ್ಯೆ ಮತ್ತು ಅಲ್ಪಸಂಖ್ಯೆ ಎನ್ನುವದು ಅಷ್ಟು ಮುಖ್ಯವಲ್ಲ, ಪ್ರಯೋಜನವಿಲ್ಲ. ನಾವು ಭದ್ರವಾದ ಕಲ್ಲುಬಂಡೆಯ ಮೇಲೆ ನಿಂತಿದ್ದೇವೆ ; ಸತ್ಯದ ಮೇಲೆ ನಿಂತಿದ್ದೇವೆ ; ಸತ್ಯವು ಪ್ರಕಾಶಕ್ಕೆ ಬರುತ್ತದೆ.

ಇನ್ನೊಬ್ಬ ಮಿತ್ರನು ಹೇಳಿದ್ದೇನೆಂದರೆ, "ಇಲ್ಲಿ ನೋಡಿ, ಪ್ರಪಂಚದಲ್ಲಿ ಕ್ರೈಸ್ತ ಜನರ ರಾಷ್ಟ್ರಗಳೇ ಎಲ್ಲಾ ಅಭಿವೃದ್ಧಿಯನ್ನೂ ಸಾಧಿಸುತ್ತಿವೆ; ಏಕೆ? ಎಲ್ಲಾ ಪ್ರಗತಿಯೂ ನಾಗರಿಕತೆಯೂ ಇರುವದು ಕ್ರೈಸ್ತ ಜನಾಂಗದ ರಾಷ್ಟ್ರಗಳಲ್ಲಿ ಮಾತ್ರ." ರಾಮನು ಹೇಳುವದೇನೆಂದರೆ, "ಸಹೋದರ, ರಾಜಕೀಯ ಮತ್ತು ಸಾಮಾಜಿಕ ವ್ಯವಹಾರಗಳಲ್ಲಿ ಇಂಡಿಯಾ, ಚೈನಾ, ಜಪಾನ್‌ಗಳಿಗಿಂತಲೂ ಯೂರೋಪ್ ಅಮೇರಿಕಾಗಳು ಮುಂದುವರಿದಿದ್ದರೆ, ಅದಕ್ಕೆ ಕ್ರೈಸ್ತಧರ್ಮವು ಕಾರಣವಲ್ಲ. ಸುಳ್ಳು ತರ್ಕವನ್ನು ಮಾಡಬೇಡಿ. ಎಲ್ಲಾ ನಾಗರಿಕತೆಗೂ ಎಲ್ಲಾ ವೈಜ್ಞಾನಿಕ ಅಭಿವೃದ್ಧಿಗೂ ಕ್ರೈಸ್ತ ಧರ್ಮವೇ ಕಾರಣವಾದರೆ, ಗೆಲಿಲಿಯೋ ಆ ಅಲ್ಪ ಶೋಧನೆಯನ್ನು ಮಾಡಿದಾಗ ಕ್ರೈಸ್ತ ಮತೀಯರು ಅವನೊಡನೆ ಹೇಗೆ ನಡೆದುಕೊಂಡರು—ಎನ್ನುವದನ್ನು ಸ್ವಲ್ಪ ತಿಳಿಸಿ. ಅವನಿಗೆ ಕ್ರೈಸ್ತರು ಕೊಟ್ಟ ಪುರಸ್ಕಾರವೇನು? ಅಥವಾ ತಿರಸ್ಕಾರವೇನು? ಅವನಿಗೆ ಅವರು ಮಾಡಿದ ಅಪಚಾರವೇನು? ಹೇಳಿ. ಬ್ರೂನೋ (Bruno) ಮಹಾಶಯನನ್ನು ಸುಟ್ಟುಹಾಕಿದರು. ಅವನನ್ನು ಜೀವಸಹಿತ ಸುಟ್ಟವರು ಯಾರು? ಕ್ರೈಸ್ತರೇ, ಕ್ರೈಸ್ತರೇ. ಹಕ್ಸ್‌ಲೀ, ಸ್ಪೆನ್ಸರ್, ಮತ್ತು ಡಾರ್ವಿನ್ ಇವರು ಕ್ರೈಸ್ತಜನಾಂಗದ ಹಲ್ಲುಗಳ ನಡುವೆಯೇ ಇದ್ದರು. ಅವರ ಆವಿಷ್ಕಾರಗಳೂ (Discoveries) ಮತ್ತು ಅಭಿವೃದ್ಧಿಗಳೂ ಮತ್ತು ಸ್ವತಂತ್ರಭಾವದ ಕೆಚ್ಚೂ ಕ್ರೈಸ್ತಧರ್ಮದಿಂದ ಉಂಟಾದವಲ್ಲ. ಆ ಧರ್ಮವು ಅವಕ್ಕೆ ಪ್ರೋತ್ಸಾಹವನ್ನೂ ಕೊಡಲಿಲ್ಲ ಕ್ರೈಸ್ತಧರ್ಮದಿಂದ ಉಂಟಾದವಲ್ಲ. ಆ ಧರ್ಮವು ಅವಕ್ಕೆ ಪ್ರೋತ್ಸಾಹವನ್ನೂ ಕೊಡಲಿಲ್ಲ. ಕ್ರೈಸ್ತಧರ್ಮದ ತಲೆಯೆತ್ತದಂತೆ ತುಳಿದಿಡುವ ಎಲ್ಲಾ ಪ್ರಭಾವಗಳನ್ನೂ ಎದುರಿಸಿ ಆ ಸಾಹಸಗಳು ಇನ್ನೂ ಬದುಕಿವೆ. ಷೋಪನ್‌ಹಾವರ್‌ನ ಗತಿ ಏನಾಯಿತು? ಅವನು ಹೇಗೆ ಜೀವಿಸಿರಬೇಕಾಯಿತು? ಗೊತ್ತಿದೆಯೆ? ಷೋಪನ್‌ಹಾವರ್‌ನು ಕ್ರಿಸ್ತನಷ್ಟೇ ಮಹತ್ತಾದ ಬಲಿದಾನ ಮಾಡಬೇಕಾಯಿತು. ಕ್ರಿಸ್ತನು ತನ್ನ ನಿಶ್ಚಿತ ನಂಬಿಕೆಗಳಿಗಾಗಿ ನತ್ತನು; ಷೋಪನ್‌ಹಾವರನು ತನ್ನ ನಿಶ್ಚಿತಾಭಿಪ್ರಾಯಗಳಿಗಾಗಿ ಬದುಕಿದ್ದನು. ನಿಮ್ಮ ನಿಶ್ಚಿತಾಭಿಪ್ರಾಯಗಳಿಗಾಗಿ ಬದುಕಿರುವದಕ್ಕಿಂತಲೂ ಸಾಯುವದು ಹೆಚ್ಚು ಸುಲಭವೆನ್ನುವದು ನಿಮಗೆ ತಿಳಿದಿರಬೇಕು. ಷೋಪನ್‌ಹಾವರನ ಸ್ವತಂತ್ರ ವಿಚಾರಧಾರೆಯ ಕೆಚ್ಚನ್ನು ತಡೆಗಟ್ಟಿದ್ದು ಯಾವದು, ನಿಮಗೆ ಗೊತ್ತೇ? ಅದೇ ನಿಮ್ಮ ಕ್ರೈಸ್ತ ಧರ್ಮ, ಅವನ ಮೊದಲು ಮೊದಲಿನ ಲೇಖನಗಳಲ್ಲಿ ತನ್ನ ಮುಖ್ಯ ಗುಣವೆಂದು ತೋರಿಸಿಕೊಂಡಿದ್ದ ಪ್ರಭಾವವನ್ನೂ ರಭಸವನ್ನೂ ಸತ್ತ್ವವನ್ನೂ ವೀರ್ಯವನ್ನೂ ಓಜಸ್ಸನ್ನೂ ಅವನು ತನ್ನ ಅನಂತರದ ಗ್ರಂಥಗಳಲ್ಲಿ ಕಳೆದುಕೊಂಡನು. ಹೆಗೆಲ್ ಮತ್ತು ಕ್ಯಾಂಟ್ ಮಹಾಶಯರ ತತ್ತ್ವಶಾಸ್ತ್ರಗಳಲ್ಲಿರುವ ಸತ್ತ್ವಹೀನತೆಗೂ

ದೌರ್ಬಲ್ಯಕ್ಕೂ ಕ್ರೈಸ್ತಧರ್ಮದ ಪ್ರಭಾವವೇ ಕಾರಣವಾಯಿತು ಫಿಕ್ಟೇ ಮಹಾಶಯನು ತನ್ನ ಪ್ರೊಫೆಸರ್ ಉದ್ಯೋಗವನ್ನು ಏಕೆ ಬಿಡಬೇಕಾಯಿತು? ಅವನು ದೇಶದಿಂದ ಏಕೆ ಓಡಿಸಲ್ಪಟ್ಟ? ಎನ್ನುವದು ಗೊತ್ತಿದೆಯೆ? ಅದಕ್ಕೆಲ್ಲಾ ಕ್ರೈಸ್ತ ಧರ್ಮವೇ ಕಾರಣವಾಯಿತು ಪ್ರಾರಂಭದಿಂದಲೂ ಕ್ರೈಸ್ತಧರ್ಮದ ವಿರೋಧವಾದ ಪ್ರಭಾವವನ್ನು ಎದುರಿಸಿಯೇ ಎಲ್ಲಾ ಪ್ರಗತಿಯನ್ನೂ ಸಾಧಿಸಿದೆಯೇ ಹೊರತು ಕ್ರೈಸ್ತಧರ್ಮವು ಯಾವ ಪ್ರಗತಿಯನ್ನೂ ಸಾಧಿಸಿಲ್ಲ. ದಯವಿಟ್ಟು ಸರಿಯಾಗಿ ವಿವೇಚನೆ ಮಾಡದೆ ತಪ್ಪಾದ ತೀರ್ಮಾನಕ್ಕೆ ಬರಬೇಡಿ.

ಇಂಡಿಯಾ ದೇಶದಲ್ಲಿ ಕೆಲವು ಕಾಲ ವಾಸಮಾಡಿದ್ದ ಒಬ್ಬ ಆಂಗ್ಲೋ ಇಂಡಿಯನ್ ಗೃಹಸ್ಥನು ಇಂಗ್ಲೆಂಡಿಗೆ ಹಿಂದಿರುಗಿದ ಮೇಲೆ, ತನ್ನ ಧೈರ್ಯ-ಶೌರ್ಯ-ಶಕ್ತಿಗಳ ವಿಷಯದಲ್ಲಿ ತನ್ನ ಹೆಂಡತಿಯೊಡನೆ ಅತಿಶಯವಾಗಿ ಜಂಬ ಕೊಚ್ಚಿಕೊಳ್ಳುತ್ತಿದ್ದನು. ಅವರು ತಮ್ಮ ಹಳ್ಳಿಗಾಡಿನ ಮನೆಯಲ್ಲಿ ವಾಸಮಾಡುತ್ತಿದ್ದರು. ಒಂದು ದಿನ ಸಂಜೆ ಅವರಿಬ್ಬರೂ ಮಾತನಾಡುತ್ತಾ ವಿನೋದದಿಂದ ಕುಳಿತಿದ್ದಾಗ ಹಠಾತ್ತನೆ ಅವರ ಹತ್ತಿರಕ್ಕೆ ಒಂದು ದೊಡ್ಡ ಕರಡಿಯು ಬಂದುಬಿಟ್ಟಿತು. ಇಬ್ಬರೂ ಗಾಬರಿಯಾಗಿ ಎದ್ದು ಓಡಿದರು. ಆ ಶೂರನು ಹತ್ತಿರವಿದ್ದ ಒಂದು ಮರದಮೇಲೆ ಸರಸರನೆ ಹತ್ತಿ, ಎತ್ತರವಾಗಿ ಏರಿ ಕುಳಿತನು. ಆದರೆ ಅವನ ಹೆಂಡತಿಯು ಮನೆಯೊಳಗೆ ಓಡಿಹೋಗಿ, ದೊಡ್ಡ ಬಂದೂಕನ್ನು ತಂದು ಗುಂಡು ಉಡಾಯಿಸಿ ಆ ಕರಡಿಯನ್ನು ಕೊಂದುಹಾಕಿದಳು. ಅನಂತರ ಆ ಪೌರುಷಶಾಲಿಯು ಕೆಳಗಿಳಿದು ಬಂದನು. ಆ ಗುಂಡಿನ ಶಬ್ದವನ್ನು ಕೇಳಿ ಕೆಲವು ಜನರು ಕುತೂಹಲದಿಂದ ಅಲ್ಲಿಗೆ ಓಡಿಬಂದು "ಓ, ಈ ಭಯಂಕರ ಕರಡಿಯನ್ನು ಯಾರು ಕೊಂದರು?" ಎಂದು ಕೇಳಿದರು. ಅದಕ್ಕೆ ಆ ಪ್ರತಾಪಶಾಲಿಯು "ಓ, ಇವನ್ನು ನಾನೂ ನನ್ನ ಹೆಂಡತಿಯೂ ಇಬ್ಬರೂ ಸೇರಿ ಕೊಂದೆವು" ಎಂದನು. ಆದರೆ ಅದು ನಿಜವಾಗಿರಲಿಲ್ಲ. ಹೀಗೆಯೇ ಬೇರೆಯವರು ಒಂದು ಸಾಹಸಕಾರ್ಯವನ್ನು ಮಾಡಿದ ಮೇಲೆ ಅದನ್ನು ನಾನೇ ಮಾಡಿದೆನೆಂದು ಯಾರಾದರೂ ಹೇಳಿಕೊಳ್ಳಬಹುದು. ಆದರೆ ಅದು ನಿಜವಾಗಿರುವದಿಲ್ಲ. ತನ್ನಿಂದಾಗದಿರುವ ಸಾಧನೆಯನ್ನು ಕ್ರೈಸ್ತಧರ್ಮವು ತಾನೇ ಮಾಡಿದ್ದೆಂದು ಹೇಳಿಕೊಳ್ಳುವದೂ ಹಾಗೆ ಸುಳ್ಳಾಗಿರುತ್ತದೆ.

ಯೂರೋಪ್-ಅಮೇರಿಕಾದೇಶದವರು ತತ್ತ್ವಶಾಸ್ತ್ರದಲ್ಲಿಯೂ ವಿಜ್ಞಾನ ಶಾಸ್ತ್ರದಲ್ಲಿಯೂ ಸಾಧಿಸಿರುವ ಎಲ್ಲಾ ಪ್ರಗತಿಗಳಿಗೂ ಎಲ್ಲಾ ಶೋಧನೆಗಳಿಗೂ ಯಂತ್ರ ನಿರ್ಮಾಣಗಳಿಗೂ ಅವರು ವೇದಾಂತದ ಚೇತನಶಕ್ತಿಯನ್ನು ತಮ್ಮ ಸಾಧನೆಯಲ್ಲಿ

ಆಳವಡಿಸಿಕೊಂಡಿರುವುದೇ ಕಾರಣ. ವೇದಾಂತವೆಂದರೆ ಸ್ವಾತಂತ್ರ್ಯ ವಿಮೋಚನೆ. ಎಲ್ಲಾ ಪ್ರಗತಿಗೂ ಸ್ವಾತಂತ್ರ್ಯಭಾವದ ಕೆಚ್ಚೇ ಕಾರಣವು , ಬಿಡುಗಡೆಹೊಂದಬೇಕೆಂಬ ಮನೋಭಾವದ ಸತ್ವವೇ ಕಾರಣವು ; ದೈಹಿಕವಾದ ಆವಶ್ಯಕತೆಗಳನ್ನೂ, ಅಪೇಕ್ಷೆಗಳನ್ನೂ, ಮತ್ತು ಕೊರತೆಗಳನ್ನೂ ಮೀರಿ ನಿಲ್ಲುವ ಕೆಚ್ಚೇ ಕಾರಣವು. ಈ ಎಲ್ಲಾ ಮುನ್ನಡೆಗಳಿಗೂ ಪುರೋಭಿವೃದ್ಧಿಗಳಿಗೂ ಅದೇ ಕಾರಣವು ; ತಿಳಿಯದೇ ಆಚರಣೆಯಲ್ಲಿ ತಂದ ಅದೇ ವೇದಾಂತವು. ಅದನ್ನು ನೀವು ನಿಜವಾದ ಕ್ರೈಸ್ತಧರ್ಮವೆಂದೂ ಕರೆಯಬಹುದು. ನೀವು ಸರಿಯಾಗಿ ಅರ್ಥಮಾಡಿಕೊಂಡರೆ, ನಿಜವಾದ ಕ್ರೈಸ್ತ ಧರ್ಮವು ವೇದಾಂತದಿಂದ ಬೇರೆಯಲ್ಲ. ಗುಲಾಮಗಿರಿಯನ್ನು ಭೂಮಿತಾಯಿಯ ಮುಖದಿಂದಲೇ ತೊಡೆದುಹಾಕಿರುವದಾಗಿ ಹೇಳಿಕೊಳ್ಳುತ್ತಾರೆ ; ಮತ್ತು ಅನೇಕ ಸುಧಾರಣೆಗಳನ್ನು ಮಾಡಿರುವದಾಗಿಯೂ ಹೇಳಿಕೊಳ್ಳುತ್ತಾರೆ. ರಾಮನು ಹೇಳುವದೇನೆಂದರೆ, "ಸಹೋದರರೆ, ಗುಲಾಮಗಿರಿಯನು ನಿಜವಾಗಿಯೂ ನಿರ್ಮೂಲ ಮಾಡಿದ್ದೀರಾ ? ಆಹಾ ! ಅದನ್ನು ನಿಜವಾಗಿಯೂ ತೊಡೆದುಹಾಕಿದ್ದರೆ, ಎಷ್ಟು ಚೆನ್ನಾಗಿತ್ತೆಂದು ರಾಮನು ಆಶಿಸುತ್ತಾನೆ. ದಾಸ್ಯವನ್ನು ಕಿತ್ತೊಗೆದಿದೆ ಎಂಬ ಮಾತನ್ನು ನಾವು ಒಪ್ಪುವದಾದರೆ, ಅದಕ್ಕೆ ಕ್ರೈಸ್ತಮತವೇನೂ ಕಾರಣವಲ್ಲ. ಕ್ರೈಸ್ತಮತದಲ್ಲಿ ಅಂಥಾ ಗುಣವೇನಾದರೂ ಇದ್ದಿದ್ದರೆ, ಹಿಂದಿನ 1700 ವರ್ಷಗಳ ಕಾಲ, ಅದು ಏಕೆ ದಾಸ್ಯವನ್ನು ಕಳೆಯಲಿಲ್ಲ ? ಅದಕ್ಕೆ ಬೇರೆ ಕಾರಣಗಳು ಒದಗಿದವು. ಜನರು ಅಮೇರಿಕಾಕ್ಕೂ ಬಂದರು. ಯೂರೋಪಿನ ಜನಾಂಗವೂ ದೇಶದಿಂದ ದೇಶಕ್ಕೆ ಹೋಗುತ್ತಿತ್ತು. ಅವರಿಗೆ ಬೇರೆ ಜನಾಂಗದ ಸಂಪರ್ಕವೂ ಉಂಟಾಯಿತು ಆವರ ಶಿಕ್ಷಣವು ಬೆಳೆಯಿತು ; ಮನಸ್ಸೂ ಹೆಚ್ಚು ವಿಶಾಲವಾಯಿತು. ಇದೇ ವ್ಯವಹಾರ ಸಾಧ್ಯ ವೇದಾಂತವು ; ಕ್ರಿಯಾಶೀಲ ವೇದಾಂತವು ; ಕಾರ್ಯನಿಯೋಜ್ಯವೇದಾಂತವು. ದಾಸ್ಯವನ್ನು ತೊಡೆದುಹಾಕುವದಕ್ಕೆ ಅದು ಕಾರಣವೇ ಹೊರತು ಕ್ರೈಸ್ತಮತವಲ್ಲ. ರಾಜಕೀಯ ಮತ್ತು ಸಾಮಾಜಿಕ ಸಂದರ್ಭಗಳು ಜನರ ಹೃದಯಗಳನ್ನೂ ಆತ್ಮಗಳನ್ನೂ ಕಲಕಿದವು, ಕೆರಳಿಸಿದವು. ಕ್ರೈಸ್ತಮತದಲ್ಲಿ ಎಲ್ಲಾ ಒಳ್ಳೆಯಗುಣಗಳನ್ನೇ ತೋರಿಸುವದಾದರೆ, ಪಾಷಂಡವಾದವೆಂದು ಆರೋಪಿಸಿದ್ದವರನ್ನು ಅಡಗಿಸಲು ರೋಮನ್ ಕ್ಯಾಥೋಲಿಕ್ ಕ್ರೈಸ್ತರಲ್ಲಿ ಕೊಡುತ್ತಿದ್ದ ಕ್ರೂರ ಹಿಂಸೆಗಳು, ಮಂತ್ರವಾದಿನಿ ಮಾಟಗಾತಿಯರನ್ನು ಜೀವಸಹಿತ ಸುಡುತ್ತಿದ್ದುದು, ತಲೆಯನ್ನು ಕಡಿಯುವ ಯಂತ್ರವನ್ನು ಉಪಯೋಗಿಸುತ್ತಿದ್ದುದು ಮೊದಲಾದ ಘೋರ ರಾಕ್ಷಸೀ ಕೃತ್ಯಗಳನ್ನು ಯಾವದಕ್ಕೆ ಅನ್ವಯಿಸಬೇಕು ? ಪಾಷಂಡವಾದವನ್ನು ಅಡಗಿಸುವದಕ್ಕಾಗಿ ಕ್ರೈಸ್ತರು ಎದೆಯಿಂದ ರಕ್ತವನ್ನು ತೆಗೆಸುತ್ತಿದ್ದಂಥ ಕ್ರೂರಹಿಂಸೆಗಳು ಒಂದಾನೊಂದು ಕಾಲದಲ್ಲಿ ಸ್ಯಾನ್ ಫ್ರಾನ್ಸಿಸ್ಕೋದಲ್ಲಿ ಸಹ ಪರಮಾಧಿಕಾರದಿಂದ ತನ್ನ ಪೈಶಾಚಿಕ ನೃತ್ಯವನ್ನು

ನಡೆಸುತ್ತಿತ್ತು. ಓ ಭಯಂಕರ! ಭಯಂಕರ! ಭೀಕರ ಜುಗುಪ್ಸೆಯನ್ನುಂಟುಮಾಡುವ ಈ ಎಲ್ಲಾ ವಿವರಣೆಯಲ್ಲಿ ರಾಮನು ಪ್ರವೇಶಿಸುವ ಅಗತ್ಯವಿಲ್ಲ. ಆದರೆ ವಾಸ್ತವ ಐತಿಹಾಸಿಕವಾದ ಈ ಭೀಕರ ಕ್ರೌರ್ಯಗಳು ಕ್ರೈಸ್ತಮತದಲ್ಲಿಯೇ ಇದ್ದುದಕ್ಕೆ ಸಮಾಧಾನವೇನು ?

ರಾಮನು ಅನೇಕಪ್ರಶ್ನೋತ್ತರಗಳ ಮೇಲೆ ಹಾರಿಕೊಂಡು ಹೋಗುತ್ತಾನೆ. ನಾವು ಇನ್ನೊಮ್ಮೆ ಯಾವಾಗಲಾದರೂ ಅವುಗಳನ್ನು ತೆಗೆದುಕೊಳ್ಳೋಣ.

ಇನ್ನೊಂದು ಪ್ರಶ್ನೆ, "ಭಾರತವು ರಾಜಕೀಯವಾಗಿ ಏಕೆ ಅಷ್ಟು ಕೆಳಗಿದೆ ?" ಭಾರತದ—ಇಂಡಿಯಾದ—ಪತನಕ್ಕೆ ಅದರ ವೇದಾಂತವೇ ಕಾರಣವೆಂದು ಹೇಳುತ್ತಾರೆ. ನಿಜವಾದ ಕಾರಣವು ಆ ಮಾತಿನಿಂದ ಬಹಳ ದೂರವಿದೆ. ವೇದಾಂತದ ಕೊರತೆಯೇ ಭಾರತದ ಪತನಕ್ಕೆ ಕಾರಣವಾಗಿದೆ. ರಾಮನು ಎಲ್ಲಾ ದೇಶಗಳಿಗೂ ಸೇರಿದವನೆಂದು ಮೊದಲೇ ಹೇಳಿರುವುದು ನಿಮಗೆ ನೆನಪಿರಬಹುದು. ರಾಮನು ಇಂಡಿಯಾದವನಾಗಿ, ಹಿಂದೂವಾಗಿ, ವೇದಾಂತಿಯಾಗಿ ಇಲ್ಲಿಗೆ ಬಂದಿಲ್ಲ ರಾಮನು ರಾಮನಾಗಿ ಬಂದಿದ್ದಾನೆ, ರಾಮನೆಂದರೆ ಸರ್ವವ್ಯಾಪಿಯು, ನಿಮ್ಮನ್ನಾಗಲೀ ಇಂಡಿಯಾದವರನ್ನಾಗಲೀ ಮಿತಿಮೀರಿ ಹೊಗಳುವದು ರಾಮನಿಗೆ ಬೇಕಾಗಿಲ್ಲ. ರಾಮನು ಇಂಡಿಯಾದ. ಮೇಲಾಗಲೀ ಅಮೇರಿಕಾದ ಮೇಲಾಗಲಿ ಯಾವ ದೇಶದ ಮೇಲೂ ಅವನು ನಿಂತಿಲ್ಲ ರಾಮನು ನಿಂತಿರುವದು ಸತ್ಯದ ಮೇಲೆ; ಸಂಪೂರ್ಣ ಸತ್ಯದ ಮೇಲೆ, ಸತ್ಯದ ಹೊರತು ಬೇರೆ ಯಾವುದರ ಮೇಲೂ ಅಲ್ಲ. ರಾಮನು ಏನನ್ನು ಹೇಳಿದರೂ ಆ ಭೂಮಿಕೆಯಿಂದ, ಆ ನಿಲುಮೆಯಿಂದ. ಇಂಡಿಯಾದೇಶವನ್ನಾಗಲೀ ಅಮೇರಿಕಾದೇಶವನ್ನಾಗಲೀ ಮುಖಸ್ತುತಿ ಮಾಡುವದು ರಾಮನಿಗೆ ಬೇಕಾಗಿಲ್ಲ. ಸತ್ಯವೇನೆಂದರೆ, ಇಂಡಿಯಾದ ಜನಸಾಮಾನ್ಯರಲ್ಲಿಯೂ ಎಲ್ಲಿಯವರಗೆ ವೇದಾಂತವು ಪ್ರಚಲಿತವಾಗಿತ್ತೋ ಅಲ್ಲಿಯವರೆಗೆ ಆ ದೇಶವು ತನ್ನ ಮಹಿಮಾ ವೈಭವದ ಅತ್ಯಂತ ಉನ್ನತ ಶಿಖರದಲ್ಲಿತ್ತು. ಆಕೆಯು ಮಹತ್ತಮವಾಗಿ ವರಿಷ್ಠಪ್ರಭಾವಶಾಲಿನಿಯಾಗಿ ಆಧಿಪತ್ಯ ನಡೆಸಿದಳು; ಮತ್ತು ಸರ್ವತೋಮುಖವಾದ ಅಭಿವೃದ್ಧಿ-ಸಮೃದ್ಧಿ ಸ್ಥಿತಿಯಲ್ಲಿದ್ದಳು. ಆದರೆ, ವೇದಾಂತವು ವಿಶಿಷ್ಟವರ್ಗದ ಜನರ ಕೈಗಳಲ್ಲಿ ಸೇರುವ ಒಂದು ಕಾಲವು ಬಂದಿತು; ಆಗ ಅದು ಜನಸಾಮಾನ್ಯರಲ್ಲಿ ಪ್ರಸಾರವಾಗಲು ಅವಕಾಶವಾಗಲಿಲ್ಲ. ಇಂಡಿಯಾದ ಜನಸಾಮಾನ್ಯರು, "ನಾನು ದಾಸ, ನಾನು ದಾಸ, ಓ ದೇವರೇ, ನಾನು ನಿನ್ನ ದಾಸ" ಎಂಬ ಗುಲಾಮಗಿರಿಯ ಧರ್ಮವನ್ನು ನಂಬುವದಕ್ಕೆ ತೊಡಗಿದರು. ಈ ಧರ್ಮವಾದರೂ ಯೂರೋಪಿನಿಂದ ಇಂಡಿಯಾದೇಶಕ್ಕೆ ಆಮದುಮಾಡಿಕೊಳ್ಳಲ್ಪಟ್ಟಿತು.

ರಾಮನ ಈ ಹೇಳಿಕೆಯು ಇತಿಹಾಸಕಾರರೆಂದು ಕರೆಸಿಕೊಂಡವರನ್ನೂ ತತ್ತ್ವಶಾಸ್ತ್ರಜ್ಞರನ್ನೂ ಯೂರೋಪ್‌ಜನರನ್ನೂ ಆಶ್ಚರ್ಯಪಡಿಸಬಹುದು. ಆದರೆ ರಾಮನು ಆಳವಾಗಿ ಆಲೋಚನೆಮಾಡದೆ ಈ ಮಾತನ್ನಾಡಿಲ್ಲ. ಈ ಮಾತು ಸರಿಯಾದುದೆಂದು ಗಣಿತಶಾಸ್ತ್ರದ ನಿಷ್ಕೃಷ್ಟತೆಯಿಂದ, ಪ್ರಮಾಣಪೂರ್ವಕವಾಗಿ ತೋರಿಸಿಕೊಡಬಹುದು. ಆತ್ಮವನ್ನು ಕಡೆಗಣಿಸಿ, ಕೀಳಾಗಿ ಕಂಡು, ಆತ್ಮವನ್ನು ಖಂಡಿಸಿ, ದೂಷಿಸಿ. ನಮ್ಮನ್ನು ನಾವು ಕ್ರಿಮಿಕೀಟಗಳೆಂದೂ ನಿರ್ಭಾಗ್ಯರೆಂದೂ ದರಿದ್ರ ದುರಾತ್ಮರೆಂದೂ ಗುಲಾಮರೆಂದೂ ಪಾಪಿ–ಪರದೇಶಿಗಳೆಂದೂ ತುಚ್ಛವಾಗಿ ಭಾವಿಸಬೇಕೆಂದು ಬೋಧಿಸುವ ಧರ್ಮವು ಹೊರಗಿಂದ ಆಮದಾಗಿ ಇಂಡಿಯಾದ ಒಳಗೆ ಬಂದು ಜನಸಾಮಾನ್ಯರ ಧರ್ಮವಾದೊಡನೆ ಇಂಡಿಯಾದ ಪತನಕ್ಕೆ ಪ್ರಾರಂಭವಾಯಿತು. ಒಳ್ಳೆಯದು, ಇದರಲ್ಲಿ ಯೂರೋಪಿಯನ್ ಅಮೇರಿಕನ್‌ರ ಸಂಬಂಧವೇನು ? ಅವರೂ ತಮ್ಮ ಗುಲಾಮಗಿರಿಯಲ್ಲಿಯೇ ನಂಬಿಕೆಯುಳ್ಳ ಜನರಾಗಿದ್ದಾರೆ ; "ಓ ದೇವರೇ, ನಾವು ನಿನ್ನ ಗುಲಾಮರು." ಎಂದೇ ಅವರು ಪ್ರಾರ್ಥಿಸುತ್ತಾರೆ. ಹಾಗಾದರೆ, ರಾಜಕೀಯ, ಸಾಮಾಜಿಕ ದೃಷ್ಟಿಯಿಂದ, ಇಂಡಿಯಾದೇಶದ ಜನರಂತೆ ಅವರೇಕೆ ಅವನತಿಯನ್ನು ಪಡೆಯಲಿಲ್ಲ ? ಪ್ರಕೃತಿ ಶಾಸ್ತ್ರಜ್ಞರೂ ವಿಕಾಸವಾದಿಗಳೂ ಪದೇ ಪದೇ ಉದಾಹರಿಸುತ್ತಿರುವ ಒಂದು ಕಥೆಯಿಂದ ಇದರಕಾರಣವನ್ನು ನಿರೂಪಿಸಬಹುದು. ಇನ್ನೂ ಬದುಕಿರುವದಕ್ಕೆ ಕೆಲವು ಸಮಯ ದುರ್ಬಲತೆಯು ಕಾರಣವಾಗುವದೆಂದು ಅವರು ಹೇಳುವರು. ಯಾವಾಗಲೂ ಹೆಚ್ಚಿನ ಸತ್ತ್ವವುಳ್ಳುದೇ ಯೋಗ್ಯತೆಯುಳ್ಳುದೇ ಬದುಕಿ ಬೆಳೆಯುವದೆಂಬುದು ಅಷ್ಟು ನಿಜವಲ್ಲ. ಓಂ, ಓಂ.

ಅಸಂಖ್ಯಾತ ಮಿಡಿತೆಗಳ ಒಂದು ದೊಡ್ಡ ತಂಡವು ಒಂದು ದಿಕ್ಕಿಗೆ ಹಾರಿ ಹೋಗುತ್ತಿತ್ತು. ಅವುಗಳಲ್ಲಿ ಕೆಲವು ನೂರಾರು ಮಿಡಿತೆಗಳು ರೆಕ್ಕೆಗಳನ್ನು ಕಳೆದುಕೊಂಡವು ; ಆದ್ದರಿಂದ ಕೆಳಗೆ ಉದುರಿ ಬಿದ್ದವು. ಆರೋಗ್ಯವಾಗಿಯೂ ಸಶಕ್ತವಾಗಿಯೂ ಇದ್ದ ಉಳಿದ ಮಿಡಿತೆಗಳು ಮುಂದುವರಿದು ಹಾರಿಹೋದವು. ಅವು ಒಂದು ಬೆಟ್ಟವನ್ನು ಸೇರಿದಾಗ, ಆ ಬೆಟ್ಟವೆಲ್ಲಾ ಕಾಡ್ಗಿಚ್ಚಿನಿಂದ ಭಯಂಕರವಾಗಿ ಉರಿಯುತ್ತಿತ್ತು. ಅವು ಬಹುದೂರದಿಂದ ಹಾರಿಬಂದು ಪೂರಾ ಸೋತಿದ್ದರಿಂದ ಬೇರೆ ಸ್ಥಳಕ್ಕೆ ಹಾರಿಹೋಗಲಾರದೆ ಅ ಬೆಂಕಿಯಲ್ಲಿ ಬಿದ್ದು ಎಲ್ಲಾ ಸುಟ್ಟುಹೋದವು. ಈ ಸಂದರ್ಭದಲ್ಲಿ, ಆ ತಂಡದ ಮಿಡಿತೆಗಳಲ್ಲಿ ಹಿಂದೆಯೇ ರೆಕ್ಕೆಗಳನ್ನು ಕಳೆದುಕೊಂಡು ಉದುರಿಬಿದ್ದು ಹೋಗಿದ್ದ ನೂರಾರು ಮಿಡಿತೆಗಳು ಬದುಕಿಕೊಂಡವು ; ಆದರೆ ಬಲಶಾಲಿಗಳಾಗಿದ್ದ ಸಾವಿರಾರು, ಹುಳುಗಳು ಬೆಂಕಿಯಲ್ಲಿ ಪ್ರಾಣವನ್ನು ಕಳೆದುಕೊಂಡವು.

ಏನಾದರೂ ವಿಷಯವನ್ನು ಹಿಂದೂಗಳು ಹೇಳಿದರೆ, ಅದನ್ನು ತಿಳಿದೇ ಉದ್ದೇಶಪಟ್ಟೇ ಹೇಳುತ್ತಾರೆ. ಅವರು ಒಳಹೊರಗೆ ಒಂದಾಗಿದ್ದಾರೆ, ಅವರ ನಡೆ ನುಡಿಗಳು ಮನಃಪೂರ್ವಕವಾಗಿರುತ್ತವೆ. ಅವರು ಸತ್ಯಸಂಧರು, ನಿಷ್ಕಪಟಿಗಳು, ಆದ್ದರಿಂದ ಧರ್ಮವೇ ತಮ್ಮ ಸರ್ವಸ್ವವೆಂದು ತಿಳಿಯುತ್ತಾರೆ. ಅವರು "ಓ ದೇವರೇ, ಓ ದೇವರೇ, ನಾನು ನಿನ್ನ ದಾಸನು, ನಾನು ನಿನ್ನ ದೀನ–ಹೀನನಾದ ದುರ್ದೈವಿಯಾದ ದಾಸನು; ಓ ದೇವರೇ, ನಾನು ಪರಮ ಪಾಪಿಯು," ಎಂದು ಬೇಡುತ್ತಿದ್ದಾಗ ಆ ಪ್ರಾರ್ಥನೆಯು ಅವರ ಹೃತ್ಪೂರ್ವಕವಾಗಿತ್ತು. ಇಂಡಿಯಾದ ಜನಸಾಮಾನ್ಯರು ನಿರ್ವಂಚನೆಯಿಂದ ಹೀಗೆ ಬೇಡವದಕ್ಕೆ ಕಲಿತಾಗ, ಕರ್ಮದ ಕಠೋರವೂ ನಿರ್ದಾಕ್ಷಿಣ್ಯವೂ ನಿಷ್ಕರುಣವೂ ಆದ ನಿಯಮದ ಪ್ರಕಾರ, ಅವರ ಬಯಕೆಗಳೇ ಬೇಡಿಕೆಗಳೇ ಫಲವನ್ನು ಕೊಡಬೇಕಾಯಿತು. ಆದ್ದರಿಂದ ಅವರು ಗುಲಾಮರಾದರು; ಅಥವಾ ಗುಲಾಮರಾಗಿ ಮಾಡಲ್ಪಟ್ಟರು. ಯಾರಿಂದ? ದೇವರಿಂದಲೇ ಎಂದು ನೀವು ಹೇಳಬಹುದು ಆದರೆ ದೇವರಿಗೆ ರೂಪವಿದೆಯೇ? ಅವನೊಬ್ಬ ವ್ಯಕ್ತಿಯೆ? ಈ ದೇವರು ತನ್ನ ಆಕೃತಿಯಿಲ್ಲದ ರೂಪದಿಂದ ಬಂದು ಅವರನ್ನು ಆಳುವಂತಿರಲಿಲ್ಲ. ಆದರೂ ದೇವರು ಬಂದನು ಯಾವ ದೇವರು? ಪ್ರಕಾಶಗಳಿಗೆಲ್ಲಾ ಪ್ರಕಾಶರಾದ ಶ್ವೇತವರ್ಣೀಯರು, ಬಿಳಿಯರು ಆ ಮಹಾಶ್ವೇತವಾದ ಬೆಳಕಿನ ದೇವರು, ಚೆಲುವಾದ ಬಿಳಿಯ ಚರ್ಮವುಳ್ಳ ಆಂಗ್ಲ (ಇಂಗ್ಲಿಷ್) ಜನಾಂಗದ ರೂಪದಿಂದ ಅಂದು ಅವರನ್ನು ಗುಲಾಮರನ್ನಾಗಿ ಮಾಡಿದನು. ಅದು ಹೀಗಾಯಿತು. ತಪ್ಪಾಗಿ ತಿಳಿಯಲ್ಪಟ್ಟ ಕ್ರೈಸ್ತಮತವು ಕ್ರಿಶ್ಚಿಯಾನಿಟಿಯು,–ತಪ್ಪಾಗಿ ಅರ್ಥ ಮಾಡಲ್ಪಟ್ಟ ಚರ್ಚ್‌ಮತವು–ಚರ್ಚಿಯಾನಿಟಿಯು,–ಇಂಡಿಯಾದ ಪತನವನ್ನು ಪ್ರಬಲವಾಗಿ ಸಾಧಿಸಿತು.

ಇಂಡಿಯಾ ದೇಶಕ್ಕೆ ಹೋಗಿ, ಅಲ್ಲಿಯ ಸ್ಥಿತಿಗತಿಗಳನ್ನು ನೋಡಿ; ರಾಮನು ಹೇಳುವದೆಲ್ಲಾ ನಿಜವೆಂದು ನಿಮಗೆ ನಂಬಿಕೆಯಾಗುತ್ತದೆ. ಇಂಡಿಯಾದೇಶದ ಬೇರೆ ಸ್ವಾಮಿಗಳೂ ಬೇರೆ ಸಾಧುಗಳೂ ಹೇಳುವದನ್ನು ಮಾತ್ರ ನೀವು ನಂಬಿದರೆ, ತಪ್ಪು ದಾರಿಗೆ ಎಳೆಯಲ್ಪಡುತ್ತೀರಿ. ಕೇವಲ ವೇದಾಂತದ ಕೊರತೆಯೇ ಇಂಡಿಯಾದ ಪತನಕ್ಕೆ ಕಾರಣವಾಗಿದೆ. "ಓ ದೇವ, ನಾನು ನಿನ್ನ ದೀನ–ಹೀನ ದಾಸನು; ಓ ದೇವ, ನಾನು ಪಾಪಿ" ಎಂಬ ಇದೇ ಗುಲಾಮಗಿರಿಯ ಭಾವನೆಯುಳ್ಳ ಯೂರೋಪ್ ಜನರೇಕೆ ಗುಲಾಮರಾಗಲಿಲ್ಲ? ಏಕೆಂದರೆ, ಯೂರೋಪಿಯನ್‌ರಿಗೆ ಧನವು ಮುಖ್ಯವೇ ಹೊರತು ಧರ್ಮವಲ್ಲ. ಅವರಿಗೆ ಅಧಿಕಾರ, ಐಶ್ವರ್ಯಗಳು ಬೇಕಾಗಿರುವಷ್ಟು

ಅಧ್ಯಾತ್ಮ ಬೇಕಾಗಿಲ್ಲ. ಅವರು ಪ್ರಾಪಂಚಿಕ ಭೋಗ ಭಾಗ್ಯಗಳಿಗೆ ಹೆಚ್ಚು ಲಕ್ಷ್ಯ ಕೊಡುತ್ತಾರೆ. ಅವರ ಪ್ರಾರ್ಥನೆಗಳಲ್ಲಾಗಲೀ ಧರ್ಮಾಚರಣೆಯಲ್ಲಾಗಲೀ ಮೊದಲೇ ನಿಮಗೆ ತಿಳಿಸಿರುವಂತೆ ಅವರಿಗೆ ದೇವರು ಎಂದರೆ ಅವರ ಜೀವನದಲ್ಲಿ ಸುಮ್ಮನೆ ಒಂದು ' Extra ' ಹೊರಗಿನದು, ಹೆಚ್ಚಿನದು. ಏನೋ ಅದೂ ಒಂದು ಇರಲಿ, ಎಂದು ಇಟ್ಟುಕೊಂಡಿದ್ದು. ನಮ್ಮ ಸುಖ-ಸೌಭಾಗ್ಯಕ್ಕೆ ಮುಖ್ಯಕಾರಣವಾದ ಎಷ್ಟೆಷ್ಟೋ ಪ್ರಾಪಂಚಿಕ ವಸ್ತು-ವಿಷಯಗಳಿರುವಾಗ ಇದೊಂದನ್ನೇಕೆ ಇಲ್ಲವೆನಿಸಬೇಕು? ಅದಲ್ಲದೆ, ಮನೆಯಲ್ಲಿ ತಪ್ಪದೇ ಬೀಳುತ್ತಿರುವ ಧೂಳು-ಕಸಗಳನ್ನು ಗುಡಿಸಿ ಹಾಕುವದಕ್ಕೂ ನೆಲವನ್ನು ತೊಳೆಯುವದಕ್ಕೂ ಅನಿವಾರ್ಯವಾಗಿ ಒಬ್ಬ ಆಳು ಬೇಕೇ ಬೇಕು ; ಹಾಗೆ ಸಂಸಾರದಲ್ಲಿ ಯಾರಿಗಾದರೂ ಅನಿವಾರ್ಯವಾಗಿ ಬರುತ್ತಿರುವ ಕಷ್ಟಗಳನ್ನು ಪರಿಹರಿಸುವದಕ್ಕೆ ದೇವರೂ ಸಹಾಯವಾಗುವದಾದರೆ ಅವನ ಸೇವೆಯನ್ನು (Service) ಕಳೆದುಕೊಳ್ಳುವದು ಯಾವ ಜಾಣತನ ? ನಮ್ಮ ಸುಖಕ್ಕಾಗಿ, ಆಗಾಗ ಬರಬಹುದಾದ ಕಷ್ಟಗಳನ್ನು ಕಳೆಯುವದಕ್ಕೂ ತೊಳೆಯುವದಕ್ಕೂ ದೇವರಿರಲಿ ;-ಎಂದು ಅವರು ದೇವರನ್ನು ಇಟ್ಟು ಕೊಂಡಿರುತ್ತಾರೆ. ಅಲ್ಲದೆ ಮನೆಯಲ್ಲಿ ದಿವಾನಖಾನೆಯನ್ನು ಅಲಂಕರಿಸುವದಕ್ಕೆ ಗೋಡೆಗಳಿಗೆ ಭಾವಚಿತ್ರಗಳನ್ನು ತೂಗುಹಾಕಿದಂತೆ ಧರ್ಮವೂ ಸಂಸಾರಕ್ಕೆ ಒಂದು ಅಲಂಕಾರವೆಂದು ಅವರು ಅದನ್ನು ಇಟ್ಟುಕೊಂಡಿರುತ್ತಾರೆ. ಅವರ ಹೃದಯದಿಂದಲೂ ನಿಜವಾದ ಆತ್ಮದಿಂದಲೂ ಹೊರಬಂದ ಪ್ರಾರ್ಥನೆಗಳು ಗುಲಾಮಗಿರಿಗಾಗಿ ಇರಲಿಲ್ಲ ; ಪ್ರಾಪಂಚಿಕವಾದ ಸುಖ, ಸಂಪತ್ತು, ಸಮೃದ್ಧಿ, ಅಭಿವೃದ್ಧಿ, ಅಧಿಕಾರ, ಲಾಭ ಮೊದಲಾದವುಗಳಿಗಾಗಿ ಅವರ ಪ್ರಾರ್ಥನೆ ಇತ್ತು. ಆದ್ದರಿಂದ ಕರ್ಮಸಿದ್ಧಾಂತದ ನಿಯಮಕ್ಕೆ ಅನುಸಾರವಾಗಿಯೇ ಅವರು ಉಚ್ಚ್ರಾಯ ಸ್ಥಿತಿಗೆ ಬಂದರು. ವೇದಾಂತವು ಇಂಡಿಯಾದ ಜನಸಾಮಾನ್ಯರಲ್ಲಿ ಪ್ರಚಲಿತವಾಗಿರುವವರೆಗೂ ಆ ದೇಶವು ಸರ್ವತೋಮುಖವಾದ ಅಭಿವೃದ್ಧಿ ಸ್ಥಿತಿಯಲ್ಲಿ ಇದ್ದಿತೆಂದು ಇತಿಹಾಸವು ಹೇಳುತ್ತದೆ.

ಸಿರಿಯಾದೇಶದ ಸಮುದ್ರ ತೀರದ ಒಂದು ಭಾಗದಲ್ಲಿದ್ದ ಫಿನಿಷ್ಯನ್‌ರು (Phoenicians)-ಕಾರ್ತೇಜಿನವರು-ಹಿಂದೆ ಒಂದು ಕಾಲದಲ್ಲಿ ಬಹಳ ಬಲಿಷ್ಠರಾಗಿದ್ದರು. ಆದರೆ ಇಂಡಿಯಾದ ವಿರುದ್ಧವಾಗಿ ದಂಡೆತ್ತಿಬಂದು ಅದನ್ನು ಅವರು ಜಯಿಸಲಾಗಲಿಲ್ಲ. ಈಜಿಪ್ಟಿನವರೂ ಒಂದು ಕಾಲದಲ್ಲಿ ಬಹಳ ಉನ್ನತ ಸ್ಥಿತಿಯಲ್ಲಿದ್ದರು; ಆದರೂ ಇಂಡಿಯಾದೇಶವನ್ನು ಸ್ವಾಧೀನಪಡಿಸಿಕೊಳ್ಳುವದಕ್ಕೆ ಆಗಲಿಲ್ಲ. ಪರ್ಷಿಯಾ ಕೂಡ ಒಂದು ಕಾಲದಲ್ಲಿ ಪರಮಾಧಿಕಾರದಿಂದ ಮೆರೆದಿತ್ತು ; ಆದರೆ

ಅದೂ ಕೂಡ ಒಂದು ವೈರದೃಷ್ಟಿಯನ್ನೂ ಇಂಡಿಯಾದ ಮೇಲೆ ಬೀರಲು ಧೈರ್ಯಗೊಳ್ಳಲಿಲ್ಲ. ಆಗ ತಿಳಿದಿದ್ದ ಭೂಮಂಡಲವನ್ನೆಲ್ಲಾ ತಮ್ಮ ಪ್ರಭುತ್ವಕ್ಕೆ ಒಳಗು ಮಾಡಿಕೊಂಡು, ಬಹಳ ಮಟ್ಟಿಗೆ ಎಲ್ಲಾದೇಶಗಳ ಮೇಲೂ ತಮ್ಮ ಗೃಧ್ರ (ಹದ್ದು) Eagle-ಧ್ವಜವನ್ನು ರೋಮನ್‌ರು, ರೋಮನ್ ಚಕ್ರವರ್ತಿಗಳು ಇಂಡಿಯಾ ದೇಶವನ್ನು ಮಾತ್ರ ತಮ್ಮ ಆಧಿಪತ್ಯದೊಳಗೆ ತಂದುಕೊಳ್ಳುವ ಎದೆಗಾರಿಕೆಯನ್ನು ತೋರಿಸಲಿಲ್ಲ. ಪ್ರಭುತ್ವಶಕ್ತಿಯ ಶಿಖರಕ್ಕೇರಿದ್ದ ಗ್ರೀಕರು, ಶತಮಾನ ಶತಮಾನಗಳು ಇಂಡಿಯಾದ ಮೇಲೆ ಒಂದು ದುಷ್ಟ ದೃಷ್ಟಿಯನ್ನೂ ಬೀರಲಾಗಲಿಲ್ಲ. ಮಹಾಶಯ, ಮಹಾಯೋಧ, ಮಹಾಪ್ರಭು (The Great) ಎಂದು ತಪ್ಪಾಗಿ ಕರೆಯಲ್ಪಟ್ಟ ಅಲೆಕ್ಸಾಂಡರನು ಇಂಡಿಯಾಕ್ಕೆ ಹೋದನು. ಆಗಿನ ಕಾಲದಲ್ಲಿ ಇಂಡಿಯಾದ ಜನ ಸಾಮಾನ್ಯರಲ್ಲಿ ವೇದಾಂತದ ಕೆಚ್ಚು, ಸತ್ತ್ವವು ಇನ್ನೂ ಉಳಿದಿತ್ತು ; ಅದನ್ನು ಅವರು ಕಳೆದುಕೊಂಡಿರಲಿಲ್ಲ, ಅಥವಾ ಅವರಿಂದ ಅದು ಅಪಹೃತವಾಗಿರಲಿಲ್ಲ. ಇಂಡಿಯಾಕ್ಕೆ ಹೋಗುವದಕ್ಕೆ ಮುಂಚೆ ಅವನಿಗೆ ತಿಳಿದಿದ್ದ ಇಡೀ ಜಗತ್ತನ್ನೇ ಅವನು ಜಯಿಸಿದ್ದನು. ಪರ್ಷಿಯಾದ ಸಮಸ್ತ ಸೈನ್ಯಬಲವನ್ನೂ ಈಜಿಪ್ಟಿನ ಸಮಗ್ರ ಕ್ಷಾತ್ರಶಕ್ತಿಯನ್ನೂ ತನ್ನ ಸಹಾಯಕ್ಕಾಗಿ ಪಡೆದಿದ್ದ ಮಹಾಬಲಿಷ್ಠನಾದ ಅಲೆಕ್ಸಾಂಡರನು ಇಂಡಿಯಾಕ್ಕೆ ಹೋದಾಗ, ಅಲ್ಪವಾದ ಸೈನ್ಯಬಲಪಡೆದಿದ್ದ ಪುರು ಎನ್ನುವ (ಇಂಡಿಯಾದ) ರಾಜನು ಅವನನ್ನು ಧೈರ್ಯದಿಂದ ಎದುರಿಸಿ ಹೆದರಿಸಿದನು. ಈ ಇಂಡಿಯಾದ ರಾಜನು, ಅಲೆಕ್ಸಾಂಡರನ 'ಮಹಾ' (The Great) ಎನ್ನುವ ಬಿರುದನ್ನು ಅಲ್ಪತೆಗೆ ಇಳಿಸಿ ಅವನ ಸಕಲ ಸೈನ್ಯಗಳೂ ಹಿಮ್ಮೆಟ್ಟುವಂತೆ ಮಾಡಿದನು. ಪುರುವು ಅವನ ಎಲ್ಲಾ ಸೈನ್ಯಬಲವನ್ನೂ ಭಂಗಪಡಿಸಿ–ಸೋಲಿಸಿ–ಓಡಿಸಿದನು. ಮಹಾಯೋಧನಾದ (The Great) ಅಲೆಕ್ಸಾಂಡರನು ಅನಿವಾರ್ಯವಾಗಿ ಹಿಮ್ಮೆಟ್ಟುವಂತೆ ಒತ್ತಾಯಿಸಲ್ಪಟ್ಟನು. ಅದು ಹೇಗೆ ಸಾಧ್ಯವಾಯಿತು ? ಜನಸಾಮಾನ್ಯರಲ್ಲೆಲ್ಲಾ ವೇದಾಂತವು ರೂಢಿಯಲ್ಲಿದ್ದ ಕಾಲವು ಅದಾಗಿತ್ತು. ನಿಮಗೆ ಅದಕ್ಕೆ, ಪ್ರಮಾಣವೂ ಸಾಕ್ಷಿಯೂ ಬೇಕಾದರೆ, ಆಗಿನ ಕಾಲದ ಗ್ರೀಕರು ಇಂಡಿಯಾದ ವಿಷಯದಲ್ಲಿ ಬರೆದಿರುವ ಚರಿತ್ರೆಯನ್ನು ಓದಿರಿ. ಅಲೆಕ್ಸಾಂಡರನ ಜೊತೆಗೆ ಬಂದಿದ್ದ ಗ್ರೀಕರು ಬರೆದಿರುವ ಚರಿತ್ರೆಯನ್ನು ಓದಬೇಕು. ಆಗಿನ ಕಾಲದಲ್ಲಿ ಇಂಡಿಯಾದ ಜನಸಾಮಾನ್ಯರ ಜೀವನದಲ್ಲಿ ವೇದಾಂತವು ವ್ಯವಹಾರದಲ್ಲಿ ಅಳವಟ್ಟು ಇದ್ದುದರಿಂದ ಅವರು ಪ್ರಬಲರೂ ಸಮರ್ಥರೂ ಆಗಿದ್ದರು. ಆದ್ದರಿಂದ ಅಥಾ ಮಹಾಬಲಶಾಲಿಯಾದ ಅಲೆಕ್ಸಾಂಡರನು ತಲೆತಗ್ಗಿಸಿಕೊಂಡು ಹಿಂದಿರುಗಬೇಕಾಯಿತು.

ಇನ್ನೊಂದು ದುರ್ದೈವದ ಕಾಲ ಬಂದಿತು. ಮಹಮದ್‌ಘಜ್ನಿ (Mahmud

Gaznavi) ಎಂಬೊಬ್ಬ ಸಾಮಾನ್ಯ ದರೋಡೆಕೋರನು ಹದಿನೇಳುಸಲ ಇಂಡಿಯಾದ ಮೇಲೆ ದಂಡೆತ್ತಿ ಬಂದು, ದೇಶವನ್ನೆಲ್ಲಾ ಕೊಳ್ಳೆಹೊಡೆದನು. ಇವನು ಇಂಡಿಯಾದಲ್ಲಿ ಹದಿನೇಳುಸಲ ನುಗ್ಗಿ, ಲೂಟಿಮಾಡಿ, ಕೈಗೆ ಸಿಕ್ಕಿದ ಐಶ್ವರ್ಯವನ್ನೆಲ್ಲಾ ದೋಚಿ ಕೊಂಡು ಹೋದನು. ಆ ಕಾಲದಲ್ಲಿಯ ಇಂಡಿಯಾದ ಜನಸಾಮಾನ್ಯರ ಚರಿತ್ರೆಯನ್ನು ಪರಿಶೀಲಿಸಿದರೆ, ಅವರ ಜೀವನದಲ್ಲಿ ಧರ್ಮವು ವೇದಾಂತದ ವಿರುದ್ಧ ಧ್ರುವದಲ್ಲಿದ್ದುದು ಸ್ಪಷ್ಟವಾಗಿಕಾಣುತ್ತದೆ. ವೇದಾಂತವೇನೋ ಇದ್ದಿತು ; ಆದರೆ ಆದು ಆಯ್ಕೆ ಯಾದವರೆನಿಸಿಕೊಂಡ ಅಥವಾ ಅಧಿಕಾರಿಗಳೆನಿಸಿಕೊಂಡ ಕೆಲವರಲ್ಲಿ ಮಾತ್ರವೇ ಇದ್ದಿತು. ಜನಸಾಮಾನ್ಯರು ಅದನ್ನು ಕೈ ಬಿಟ್ಟಿದ್ದರಿಂದ ಇಂಡಿಯಾ ಕೆಳಗೆ ತರಲ್ಪಟ್ಟಿತು.

ವೇದಾಂತದಲ್ಲಿ ತ್ಯಾಗವನ್ನು ಉಪದೇಶಮಾಡುವದರಿಂದ ತ್ಯಾಗವು ಜನರನ್ನು ಬಡವರನ್ನಾಗಿ ಮಾಡುತ್ತದೆ–ಎಂದು ಆಕ್ಷೇಪಿಸುತ್ತಾರೆ. ಓ, ಸತ್ಯವು ಅದರಿಂದ ಬಹಳ ದೂರವೇ ಸರಿ. ವೇದಾಂತವನ್ನು ಅಭ್ಯಾಸಮಾಡಲು ಅರಣ್ಯಗಳಲ್ಲಿಯು ಅಥವಾ ಹಿಮಾಲಯದ ಗುಹೆಗಳಲ್ಲಿಯು ವಿವಿಕ್ತ ಸ್ಥಳಗಳಲ್ಲಿ ಕೆಲವುಕಾಲ ಏಕಾಂತವಾಸವನ್ನು ಮಾಡಬೇಕೆಂಬದು ನಿಜ. ಆದರೆ ಎಲ್ಲರೂ ವಿರಕ್ತಜೀವನವನ್ನು ಅಥವಾ ಸಂನ್ಯಾಸಿಯ ಜೀವನವನ್ನು ನಡೆಸಬೇಕೆಂದು ವೇದಾಂತವು ಒತ್ತಾಯದಿಂದ ಬೋಧಿಸುವದಿಲ್ಲ. ಎಂದೆಂದಿಗೂ ಇಲ್ಲ. ವೇದಾಂತಿಗಳ ಏಕಾಂತವಾಸವೆಂದರೆ ವಿದ್ಯಾರ್ಥಿಗಳು ಕಾಲೇಜಿಗೆ ಹೋದ ರೀತಿ. ಯಾವ ವಿಜ್ಞಾನವನ್ನಾದರೂ ತತ್ತ್ವಜ್ಞಾನವನ್ನಾದರೂ ಅಭ್ಯಾಸ ಮಾಡುವದಕ್ಕಾಗಿ ನಿಮ್ಮನ್ನು ನೀವು ಪ್ರತ್ಯೇಕಪಡಿಸಿಕೊಂಡು ಯಾವ ಕಿರುಕುಳವೂ ಪೀಡೆಯೂ ಇಲ್ಲದ ಸನ್ನಿವೇಶದಲ್ಲಿ ಕೆಲವು ಕಾಲ ವಾಸಮಾಡುವದು ಅತ್ಯವಶ್ಯ ವಾಗಿರುತ್ತದೆ. ನಿಮ್ಮ ವ್ಯಾಸಂಗವನ್ನು ನೀವು ನಿಷ್ಠೆಯಿಂದಲೂ ಮೌನವಾಗಿಯೂ ಶಾಂತವಾಗಿಯೂ ನಡೆಸುವದಕ್ಕೆಯೋಗ್ಯವಾದ ಸ್ಥಳದಲ್ಲಿ ಜೀವಿಸಿರಬೇಕಾದುದಂ ಸ್ವಾಭಾವಿಕವು. ಹೀಗೆ ವಿಜ್ಞಾನಿಗಳಿಗೆಲ್ಲಾ ,ವಿಜ್ಞಾನ (ಶಾಸ್ತ್ರಗಳಿಗೆಲ್ಲಾ ಶಾಸ್ತ್ರ)ವಾದ ಅಧ್ಯಾತ್ಮ ವಿದ್ಯೆಯನ್ನು ಸಂಪೂರ್ಣಸ್ವಾದೀನಪಡಿಸಿಕೊಳ್ಳುವದಕ್ಕಾಗಿ ಹಿಂದೂಗಳು ಸುಮ್ಮನೆ ಅರಣ್ಯದಲ್ಲಿ ಏಕಾಂತವಾಸಮಾಡುತ್ತಾರೆ. ಅಲ್ಲಿ ಅವರು ವೇದಾಂತದ ನಿಜವಾದ ಸತ್ತ್ವವನ್ನು ಅನುಭವಕ್ಕೆ ತಂದುಕೊಳ್ಳುತ್ತಾರೆ.

You know Vedanta is an experimental science like chemistry. In chemistry you cannot make any progress unless you make corresponding experiments Similarly what can a man know of vedanta who does not perform

spiritual experiments alongside the intellectual training that he gets!

ರಸಾಯನ ಶಾಸ್ತ್ರದಂತೆಯೇ ವೇದಾಂತವು ಪ್ರಯೋಗ ಸಾಧ್ಯವೂ ಪ್ರಯೋಗ ಸಿದ್ಧವೂ ಅನುಭವಾತ್ಮಕವೂ ಆದ ವಿಜ್ಞಾನವೆಂದು ನಿಮಗೆ ತಿಳಿದಿರಬೇಕು. ರಸಾಯನ ವಿಜ್ಞಾನದಲ್ಲಿ ಆಯಾ ವಿಷಯಗಳಿಗೆ ಅನುಗುಣವಾದ ಪ್ರಯೋಗಗಳನ್ನು ನಡೆಸದೆ ಮುಂದುವರಿಯುವದೂ ಯಾವ ಪ್ರಗತಿಯನ್ನು ಸಾಧಿಸುವದೂ ಸಾಧ್ಯವಿಲ್ಲ. ಹಾಗೆಯೇ ವೇದಾಂತದಲ್ಲಿ ಪಡೆಯಬೇಕಾದ ಬೌದ್ಧಿಕ ವಿಚಾರ ಶಿಕ್ಷಣದ ಜೊತೆ ಜೊತೆಗೆ ಆಧ್ಯಾತ್ಮಿಕ ಪ್ರಯೋಗಗಳನ್ನೂ ಸಾಧನೆಗಳನ್ನೂ ಮುಮುಕ್ಷುಗಳು ನಡೆಸದಿದ್ದರೆ ಅವರಿಗೆ ವೇದಾಂತದ ಸತ್ತ್ವವೂ ಪರಮ ಪುರುಷಾರ್ಥಫಲವೂ, ಹೇಗೆ ತಿಳಿದೀತು ? ಹೇಗೆ ದಕ್ಕೀತು ?

ಹೀಗೆ ಆಧ್ಯಾತ್ಮಿಕ ಪರೀಕ್ಷಾ ಪ್ರಯೋಗಗಳನ್ನು-ಪ್ರಯೋಗ ಪರೀಕ್ಷೆಗಳನ್ನು ನಡೆಸುವದಕ್ಕಾಗಿಯೂ ಮತ್ತು ಬೌದ್ಧಿಕ ಜ್ಞಾನವನ್ನು ಸಂಪಾದಿಸುವದಕ್ಕಾಗಿಯೂ ಜನರು ಅರಣ್ಯಗಳಲ್ಲಿ ಆಶ್ರಮವಾಸವನ್ನು ಮಾಡಬೇಕಾಗುತ್ತದೆ. ಅರಣ್ಯಗಳು ವಿಶ್ವವಿದ್ಯಾನಿಲಯಗಳಂತೆಯೂ ಕಾಲೇಜುಗಳಂತೆಯೂ ಇವೆ. ಈ ವೇದಾಂತ ತತ್ತ್ವಜ್ಞಾನವನ್ನು ಸಂಪಾದಿಸಿ, ಅವರು ಪರ್ವತಗಳಿಂದ ಇಳಿದು ಪ್ರಪಂಚದೊಳಗೆ ಬಂದು, ತಮ್ಮ ನಿತ್ಯಜೀವನದಲ್ಲಿ ಅಳವಡಿಸಿಕೊಂಡು, ಈ ತತ್ತ್ವಜ್ಞಾನವನ್ನು ತಮ್ಮ ನಿತ್ಯಜೀವನದ ಆಚರಣೆಯಲ್ಲಿ ಹೇಗೆ ಸಾಧಿಸಬಹುದೆಂಬುದನ್ನು ಜನರಿಗೆ ಉಪದೇಶಿಸಿ, ಕಲಿಸುತ್ತಾರೆ. ಈ ಜ್ಞಾನವನ್ನು ಸಂಪಾದಿಸುವದಕ್ಕಾಗಿ ಪ್ರತಿಯೊಬ್ಬ ಬ್ರಾಹ್ಮಣನೂ ಅಥವಾ ಹಿಂದುವೂ ಅಡವಿಗಳಲ್ಲಿ ಐದು ವರ್ಷಗಳು ಗುರುಕುಲ-ಋಷಿಕುಲ-ವಾಸ ಮಾಡಿ, ಸಾಧಿಸಿ, ಪ್ರಪಂಚದಲ್ಲಿ ಬಂದು ಬೋಧಿಸಿ, ಕಾರ್ಯತಃ ಪ್ರಯೋಗ ಮಾಡಿ ತೋರಿಸಬೇಕು. ಅವರಲ್ಲಿ ಕೆಲವರು ಗೃಹಸ್ಥರಾಗಿ ಸಾಮಾನ್ಯವಾದ ಪ್ರಾಪಂಚಿಕ ಧರ್ಮವನ್ನೂ ಕರ್ತವ್ಯಗಳನ್ನೂ ಕೈಗೊಳ್ಳಬೇಕಾಗಿರುತ್ತದೆ. ವೇದಾಂತದ ಪೂರ್ಣ ಜ್ಞಾನವನ್ನು ಸಂಪಾದಿಸಿದ ಮೇಲೆ ಪ್ರತಿಯೊಬ್ಬರೂ ಸನ್ಯಾಸಧರ್ಮವನ್ನು ಸ್ವೀಕರಿಸಬೇಕಾದುದಿಲ್ಲ. ಅನೇಕ ವಿದ್ಯಾರ್ಥಿಗಳು ಮಾಸ್ಟರ್ ಆಫ್ ಆರ್ಟ್ಸ್ (ಎಂ ಎ.) ಪರೀಕ್ಷೆಯಲ್ಲಿ ಉತ್ತೀರ್ಣರಾಗಬಹುದು , ಎಷ್ಟೋ ವಿದ್ಯಾರ್ಥಿಗಳು ವಿಜ್ಞಾನ ಶಾಸ್ತ್ರದಲ್ಲಿ ಡಾಕ್ಟರೇಟ್ ಪದವಿಯನ್ನೂ (Doctor of Science) ಪಡೆಯಬಹುದು. ಆದರೆ ಎಲ್ಲರೂ ಪ್ರೊಫೆಸರ್‌ಗಳು ಆಗಬೇಕಾದ್ದಿಲ್ಲ. ಅವರಲ್ಲಿ ಕೆಲವರು ಮ್ಯಾಜಿಸ್ಟ್ರೇಟ್‌ಗಳು ಆಗಬಹುದು ; ಕೆಲವರು ದೊಡ್ಡ ವರ್ತಕರಾಗಬಹುದು ; ಕೆಲವರು

ಪ್ರೊಫೆಸರ್‌ಗಳೂ ಆಗಬಹುದು. ಹಾಗೆ ವೇದಾಂತ ಜ್ಞಾನವನ್ನುಸಂಪಾದಿಸಿದ ಕೆಲವರು ಮಾತ್ರ ಸಂನ್ಯಾಸಿಗಳಾಗಬಹುದು.

ವೇದಾಂತಜ್ಞಾನವನ್ನು ಸಂಪೂರ್ಣವಾಗಿ ತಮ್ಮ ಅನುಭವದಲ್ಲಿ ತಂದುಕೊಳ್ಳ ತಕ್ಕವರಿಗೆ ಇಡಿಯ ಜಗತ್ತೇ ಸ್ವರ್ಗವೂ ನಂದನವನವೂ ಆಗುವದರಿಂದ ಜೀವನವು ಸಾರ್ಥಕವಾಗುತ್ತದೆ. ವೇದಾಂತವು ಪ್ರತಿಯೊಬ್ಬರಿಗೂ ಸಂನ್ಯಾಸಿಗಳಾಗುವದಕ್ಕೆ ಬೋಧಿಸುತ್ತದೆ ಎನ್ನತಕ್ಕವರು ಅದರ ಅಪಾರ್ಥವನ್ನು ಮಾಡುತ್ತಾರೆ. ಅದು ಎಂದೆಂದಿಗೂ ಹಾಗೆ ಹೇಳುವದಿಲ್ಲ. ಸಂನ್ಯಾಸ ಆಶ್ರಮುವನ್ನು ಸ್ವೀಕರಿಸುವದು, ಡಾಕ್ಟರ್ ಆಫ್ ಸೈನ್ಸ್ ಪರೀಕ್ಷೆಯಲ್ಲಿ ಉತ್ತೀರ್ಣರಾದ ಮೇಲೆ ಪ್ರೊಫೆಸರ್ ಉದ್ಯೋಗವನ್ನು ತೆಗೆದುಕೊಂಡಂತೆ ಎಂದು ಹೇಳಬಹುದು.

ಇನ್ನೊಂದು ರೀತಿಯಿಂದ ನೋಡಿದಗೆ, ಪ್ರಾಪಂಚಿಕ ಜೀವನದಲ್ಲಿ ಸೋತ್ಸಾಹ ದಿಂದ ಕಾರ್ಯಶೀಲವಾಗಿ ಉದ್ಯುಕ್ತರಾದವರೇ ವೇದಾಂತವನ್ನು ಹೆಚ್ಚಾಗಿ ಉಪದೇಶಿ ಸಿದರು. ಸಹೋದರರೇ, ವೇದಾಂತವು ಎಲ್ಲರಿಗೂ ಪ್ರಪಂಚದಲ್ಲಿ ಕೇವಲ ದುಃಖ ದೋಷಗಳನ್ನೇ (Pessimism) ತೋರಿಸುವ ವಾದವಲ್ಲ. ಅದು ಯಾವಾಗಲೂ ವಿಷಾದಯೋಗವಲ್ಲ.

Vedanta is no pessimism. They misrepresent it, that this religion is pessimism. Far from it, it is rather the highest pinnacle of optimism.

**ವೇದಾಂತವು ಕೇಡನ್ನೇ ನೋಡುವ ನೋಟವಲ್ಲ; ಪ್ರಪಂಚದಲ್ಲಿ ದುಃಖವನ್ನೇ ಕೇವಲ ದುಃಖದೋಷಗಳನ್ನೇ–ಅಶುಭವನ್ನೇ–ತೋರಿಸುವ ದರ್ಶನವಲ್ಲ. ಈ ಧರ್ಮವು ಹಾಗೆ ದುಃಖಪ್ರಪಂಚವಾದಿಯೆಂದು ಹೇಳತಕ್ಕವರು ಅದನ್ನು ತಪ್ಪಾಗಿ ತಿಳಿಸುತ್ತಾರೆ. ಸತ್ಯಾರ್ಥವು ಅದರಿಂದ ಬಹುದೂರವಿದೆ. ನಿಜವಾಗಿ, ವೇದಾಂತವು, ಪ್ರಪಂಚದಲ್ಲಿ ಕೊನೆಗೆ ಧರ್ಮವು ಅಧರ್ಮವನ್ನು ತುಳಿದು ಜಯಿಸಲೇಬೇಕೆಂಬ ವಾದ–ಶುಭ ಪ್ರತೀಕ್ಷೆಯ ವಾದ–ಆಶಾವಾದ, ಇವುಗಳ ಅತ್ಯಂತ ಉನ್ನತ ಶಿಖರವು, ಪರಾಕಾಷ್ಠೆಯು.**

ವೇದಾಂತವು ಹೇಳುವದೇನೆಂದರೆ, ನಿಮ್ಮ ದೇಹವೆಂಬ ನೌಕೆಯನ್ನು (ಅಥವಾ ದೋಣಿಯನ್ನು) ಚುಕ್ಕಾಣಿಯೂ ದಿಕ್‌ಸೂಚಿಯೂ (ಉತ್ತರ ಮುಖಿಯೂ) ಹುಟ್ಟುಗೋಲುಗಳೂ ನೌಕಾಪಟಗಳೂ ಆವಿಯೂ ಅಥವಾ ವಿದ್ಯುಚ್ಛಕ್ತಿಯೂ ಇಲ್ಲದೆ, ಪ್ರಪಂಚವೆಂಬ ಸಮುದ್ರದಲ್ಲಿ ತೇಲಿ ಬಿಟ್ಟರೆ, ನಿಮ್ಮ ಜೀವನದಲ್ಲಿ ಅವಶ್ಯವಾಗಿ ನೀವು ನಿಮ್ಮ ಹಡಗು ಒಡೆಯುವದನ್ನು ಕಾಣುತ್ತೀರಿ,–ಎಂದು. ಎಲ್ಲಾ ಬಗೆಯ ಗಾಳಿ, ಬಿರುಗಾಳಿಗಳ ಕರುಣೆಗೆ ನಿಮ್ಮನ್ನು ನೀವು ಕೈಬಿಟ್ಟಂತೆ ಆಗುತ್ತದೆ. ಪ್ರಪಂಚವು ಅಜ್ಞಾನದ ದೆಸೆಯಿಂದ ದುಃಖ-ದುರವಸ್ಥೆಗಳಿಂದಲೂ ಪಾಪ–ತಾಪ ಗಳಿಂದಲೂ ದಾರಿದ್ರ್ಯ–ದೌರಾತ್ಮ್ಯಗಳಿಂದಲೂ ತುಂಬಿ ಹೋಗಿದೆಯೆಂದು ಹೇಳುತ್ತದೆ. ಅಜ್ಞಾನವು ಇರುವವರೆಗೂ ಇವುಗಳು ತಪ್ಪುವದಿಲ್ಲವಾದ್ದರಿಂದ ನಿಜವಾದ ಆತ್ಮಜ್ಞಾನದಿಂದ, ಪೂರ್ಣಜ್ಞಾನದಿಂದ ಅಜ್ಞಾನವನ್ನು ಕಳೆದುಕೊಂಡರೆ, ಕತ್ತಲುಗವಿಗಳೂ ಕಾರಾಗೃಹಗಳೂ ಸಹ ನಿಮಗೆ ಸ್ವರ್ಗಲೋಕಗಳಾಗುತ್ತವೆ. ಜೀವನವು ಎಂದೂ ದುಃಖಮಯವೂ ಚಿಂತಾಮಯವೂ ಆಗುವುದಿಲ್ಲ. ಎಂದೂ ನೀವು ಮನಸ್ಸಿನ ಸಮತೋಲನೆಯನ್ನೂ (ಅನಿರೀಕ್ಷಿತ ಪರಿಸ್ಥಿತಿಯಲ್ಲಿ) ಶಾಂತಿಯನ್ನೂ ಚಿತ್ತಸ್ಥೈರ್ಯವನ್ನೂ ಕಳೆದುಕೊಳ್ಳದೆ, ಎಂದೂ ಯಾವದಕ್ಕೂ ಚಿಂತೆಮಾಡದೆ, ಖಿನ್ನರಾಗದೆ ಭಗ್ನೋತ್ಸಾಹಿಗಳಾಗದೆ, ಮುಖಜೋಲುಹಾಕಿಕೊಳ್ಳದೆ ಇರುತ್ತೀರಿ. ಯಾವ ಚಿಂತೆಯೂ ದುಃಖವೂ ಇಲ್ಲದೆ, ಸರ್ವದಾ ಆನಂದಸ್ಥಿತಿಯಲ್ಲಿರುವ ಜೀವನವು ಸಾರ್ಥಕವೆನಿಸುತ್ತದೆ ಇದು ವೇದಾಂತ ಜ್ಞಾನದ ಅನುಗ್ರಹವು. ಇದು ಯಾರಿಗೆ ಬೇಡವಾಗುತ್ತದೆ ? ಸತ್ಯವೆನ್ನುವದು ಅದೇ ಅಲ್ಲವೇ ? ವೇದಾಂತವು ಎಂದೂ ದುಃಖದರ್ಶನವಲ್ಲ. ಅದು ನಿತ್ಯಾನಂದ ದರ್ಶನವು. ಅದು ಹೇಳುವದೇನೆಂದರೆ, "ಓ ಪ್ರಪಂಚದ ಜನರೆ, ನೀವು ಪ್ರಪಂಚವನ್ನು ಪ್ರತ್ಯಕ್ಷ ನರಕವನ್ನಾಗಿ ಮಾಡಿ ಕೊಳ್ಳುತ್ತೀರಿ. ಇದನ್ನು ಪರಿಹರಿಸಿಕೊಳ್ಳಲು ಜ್ಞಾನವನ್ನು ಸಂಪಾದಿಸಿರಿ ; ತತ್ತ್ವ ಜ್ಞಾನವನ್ನು, ಆತ್ಮಜ್ಞಾನವನ್ನು ಸಂಪಾದಿಸಿರಿ" ಇದೇ ವೇದಾಂತದ ನಿಲುವು. ಅದರಲ್ಲಿ ಸ್ವಲ್ಪವೂ ಅಶುಭಪ್ರತೀಕ್ಷೆಯು (Pessimism) ಇಲ್ಲ. ದುಃಖದೋಷಾನು ದರ್ಶನವೇ ಅದರ ಗುರಿಯಲ್ಲ.

ತಾಪಸಿಗಳೂ ವಾನಪ್ರಸ್ಥರೂ ಸಂನ್ಯಾಸಿಗಳೂ (Ascetics) ಅಲ್ಲವಾದರೂ ತ್ಯಾಗಶೀಲರಾದ ಪ್ರಪಂಚದಲ್ಲಿರುವ ಜನರೇ ಈ ವೇದಾಂತವನ್ನು ಬೋಧಿಸಿದ್ದಾರೆ.

ಒಂದಾನೊಂದು ಕಾಲದಲ್ಲಿ, ಇಂಡಿಯಾದೇಶದ ಒಬ್ಬ ಮಹಾರಾಜನು, ತನ್ನ ಲೌಕಿಕವಾದ ಕರ್ತವ್ಯಗಳನ್ನೆಲ್ಲಾ ತ್ಯಜಿಸಿ, ವಾನಪ್ರಸ್ಥನಾಗಿ ಅರಣ್ಯಕ್ಕೆ ಹೋಗುವ

ಸಿದ್ಧತೆಯಲ್ಲಿ ಇದ್ದನು. ಆಗ, ಈ ದೇಹದ ವಂಶಪರಂಪರೆಯಲ್ಲಿ ಪೂರ್ವಜರಾಗಿದ್ದ, (ಆ ರಾಜನ) ಗುರುಗಳೊಬ್ಬರು ಅವನಿಗೆ ವೇದಾಂತವನ್ನು ಉಪದೇಶಮಾಡಿದರು. ಆ ರಾಜನು ತ್ಯಾಗದ ರಹಸ್ಯವನ್ನು ತಿಳಿದು, ನಿಜವಾದ ತ್ಯಾಗಪುರುಷನಾಗಿ, ಪ್ರಪಂಚದಲ್ಲಿಯೇ ಉಳಿದು ಮಹಾಸಮ್ರಾಟನಾದನು.

ಕುರುಕ್ಷೇತ್ರದಲ್ಲಿ, ಕೌರವ-ಪಾಂಡವರು ಒಬ್ಬರೊಡನೊಬ್ಬರು ಯುದ್ಧಮಾಡುವದಕ್ಕಾಗಿ, ಅಸಂಖ್ಯಾತಸೈನ್ಯ ಬಲವನ್ನು ನೇರಿಸಿ, ಯುದ್ಧವನ್ನು ಪ್ರಾರಂಭಿಸುವ ಸಮಯದಲ್ಲಿ, ಮಹಾಯೋಧನೂ ಆ ಕುರುಕ್ಷೇತ್ರ ಯುದ್ಧದ ಮಹಾವೀರನೂ ಆಗಿದ್ದ ಅರ್ಜುನನು, ಬಂಧುಗಳ ಕೊಲೆಗಾಗಿ ಹೇಸಿ, ಶೋಕ-ಮೋಹಗಳಿಗೆ ಒಳಗಾಗಿ, ಯುದ್ಧಮಾಡಬೇಕಾಗಿದ್ದ ತನ್ನ ಕ್ಷಾತ್ರಧರ್ಮವನ್ನು ತ್ಯಜಿಸುವದರಲ್ಲಿದ್ದನು. ಈ ಘೋರ ಕರ್ಮವನ್ನು ಮಾಡುವದಕ್ಕಿಂತಲೂ ಭಿಕ್ಷೆಬೇಡುವದು ಲೇಸೆಂದು ಅರ್ಜುನನು ಭಿಕ್ಷು (ಸಂನ್ಯಾಸಿ) ಆಗುವದರಲ್ಲಿದ್ದನು ಆಗ ಶ್ರೀಕೃಷ್ಣನು ಅರ್ಜುನನಿಗೆ ವೇದಾಂತವನ್ನು ಉಪದೇಶಮಾಡಿ ಅವನ ಶೋಕಮೋಹಗಳನ್ನು ಕಳೆದು, ಆವನು ತನ್ನ ಕರ್ತವ್ಯವನ್ನು ನಡೆಸುವಂತೆ ಪ್ರೋತ್ಸಾಹಿಸಿದನು. ಅರ್ಜುನನು ಸರಿಯಾಗಿ ಅರ್ಥಮಾಡಿಕೊಂಡ ವೇದಾಂತವೇ ಅವನಿಗೆ ಧೈರ್ಯವನ್ನುಕೊಟ್ಟು, ಅವನಲ್ಲಿ ಶಕ್ತಿ ಸಾಮರ್ಥ್ಯಗಳನ್ನೂ ತುಂಬಿ, ಜೀವಚೈತನ್ಯವನ್ನೂ ಕಾರ್ಯಸಾಧನೆಯ ಹುರುಪನ್ನೂ ಪ್ರೇರಿಸಿ ಅವನಿಂದ ಕಾರ್ಯವನ್ನು ಮಾಡಿಸಿತು. ಕೃಷ್ಣನ ಉಪದೇಶದ ಅನಂತರ ಅರ್ಜುನನು ಮಹಾ ಸಿಂಹನಂತೆ, ಪಂಚಾನನನಂತೆ ಮೇಲೆದ್ದು, ಮಹಾವೀರನಾಗಿ "ಸ್ಥಿತೋಽಸ್ಮಿ ಗತ ಸಂದೇಹಃ ಕರಿಷ್ಯೇವಚನಂ ತವ । "ಧರ್ಮಾಧರ್ಮಗಳ ವಿಚಾರದಲ್ಲಿ ನನಗೆ ಬಂದಿದ್ದ ಸಂದೇಹವೆಲ್ಲಾ ನಿವಾರಣೆಯಾಯಿತು. ನಿನ್ನ ಉಪದೇಶದಂತೆ ನಡೆದುಕೊಳ್ಳುತ್ತೇನೆ " ಎಂದು ತನ್ನ ಕರ್ತವ್ಯವನ್ನು ನಡೆಸಿದನು.

ವೇದಾಂತವು ನಿಮ್ಮಲ್ಲಿ ಶಕ್ತಿಸಾಮರ್ಥ್ಯಗಳನ್ನು ತುಂಬುತ್ತದೆಯೇ ಹೊರತು ದೌರ್ಬಲ್ಯವನ್ನಲ್ಲ. ಈ ಆತ್ಮನು ಈ ಸತ್ಯವು ಬಲಹೀನನಿಗೆ ಎಂದೆಂದಿಗೂ ಲಭ್ಯವಾಗುವದಿಲ್ಲ—ಎನ್ನುವ ಒಂದು ವಾಕ್ಯವು ವೇದಗಳಲ್ಲಿದೆ. ಆತ್ಮನು ದುರ್ಬಲನಿಗೆ ದಕ್ಕತಕ್ಕವನಲ್ಲ ; ಹೃದಯ ದೌರ್ಬಲ್ಯವುಳ್ಳವರೂ ದೇಹದೌರ್ಬಲ್ಯವುಳ್ಳವರೂ ಆತ್ಮನನ್ನು ಎಂದೂ ಸಾಧಿಸಲಾರರು.

ಒಬ್ಬ ಮಹಾರಾಜನು ತನ್ನ ರಾಜ್ಯವನ್ನು ತ್ಯಾಗಮಾಡಿ, ಅರಣ್ಯಕ್ಕೆ ತಪಸ್ಸಿಗಾಗಿ ಹೋದನು. ಅಲ್ಲಿ ಅವನು ಪೂರ್ಣಜ್ಞಾನವನ್ನು ಪಡೆದ ಬಳಿಕ ಪುನಃ ರಾಜ್ಯಕ್ಕೆ

ಹಿಂದಿರುಗಿ ರಾಜ್ಯಭಾರವನ್ನು ಮೊದಲಿಗಿಂತಲೂ ಉತ್ತಮವಾಗಿ ನಿರ್ವಹಿಸಿದನು. ಅವನು ಈ ಪೂರ್ಣಜ್ಞಾನವನ್ನು ಪಡೆದ ಮೇಲೆ ಅವನ ಸಾನ್ನಿಧ್ಯದಿಂದ ಸಿಂಹಾಸನವು ನಿಜವಾಗಿ ಅಲಂಕೃತವಾಯಿತು.

ತ್ಯಾಗವೆಂದರೆ ಸಂನ್ಯಾಸಧರ್ಮವಲ್ಲದಿದ್ದರೆ ತ್ಯಾಗವೆಂದರೆ ಏನು ? ಇದೊಂದು ಗಂಭೀರವಾದ ವಿಷಯವು. ಬೇರೊಂದು ಸಮಯದಲ್ಲಿ ಇದನ್ನು ತೆಗೆದು ಕೊಳ್ಳೋಣ.

ಹಿಂದೂಗಳ ಶಾಸ್ತ್ರಗಳಲ್ಲಿ ಒಂದು ಶ್ಲೋಕವಿದೆ. ದೇವರು ಎಲ್ಲೆಡೆಯಲ್ಲಿಯೂ ಇರುವನೆಂದು ಹಿಂದೂಗಳು ತಿಳಿದಿರುವದರಿಂದ ಅವರು ಮಾಂಸವನ್ನು ತಿನ್ನುವದಿಲ್ಲ ವೆಂದು ಕೆಲವರು ಹೇಳುತ್ತಾರೆ. ಅನೇಕ ಹಿಂದೂಗಳೂ ಮಾಂಸವನ್ನು ತಿನ್ನದಿರ ಬಹುದು. ಅದು ನಿಜ. ಆದರೆ ಅದಕ್ಕೆ, ಆ ಕಾರಣವು ನಿಜವಲ್ಲ. ಕಾರಣವು ಏನೋ ಬೇರೆಯೇ ಇದೆ ಆ ವಿಚಾರವನ್ನು ತೆಗೆದುಕೊಳ್ಳುವದಕ್ಕೆ ಈಗ ಸಮಯವಿಲ್ಲ, ಕಠೋಪನಿಷತ್ತಿನಲ್ಲಿ ಹೀಗಿದೆ ;

ಕೊಲ್ಲತಕ್ಕವನು 'ನಾನು ಕೊಂದೆ' ಎಂದು ತಿಳಿದರೂ ಕೊಲ್ಲಲ್ಪಡತಕ್ಕವನು 'ನಾನು ಕೊಲ್ಲಲ್ಪಡುತ್ತೇನೆ' ಎಂದು ತಿಳಿದರೂ ಇಬ್ಬರೂ ಸರಿಯಾಗಿ ತಿಳಿದವರಲ್ಲ. ಇಬ್ಬರಲ್ಲಿಯೂ ಯಾವದು ಜೀವವಾಗಿತ್ತೋ ಅದು ಕೊಲ್ಲತಕ್ಕದ್ದೂ ಅಲ್ಲ; ಕೊಲ್ಲಲ್ಪಡತಕ್ಕದ್ದೂ ಅಲ್ಲ.

ಓಂ ! ಓಂ ! ಓಂ !

# Class Lectures on Vedanta—II

# ವೇದಾಂತ ಪಾಠಕ್ರಮದ ಉಪನ್ಯಾಸಗಳು—೨

**ಅಮೇರಿಕಾದ ಸ್ಯಾನ್‌ಫ್ರಾನ್ಸಿಸ್ಕೋ ನಗರದ ' ಗೋಲ್ಡನ್‌ಗೇಟ್ ಹಾಲ್ ' ನಲ್ಲಿ ತಾ|| 25-1-1903ರಲ್ಲಿ ಮಾಡಿದ ಉಪನ್ಯಾಸ.**

ಸಂಪನ್ನ ಸ್ತ್ರೀ ಪುರುಷರ ಬದಲಾವಣೆ (ಪರಿವರ್ತನೆ) ಹೊಂದುವ ರೂಪಗಳಲ್ಲಿರುವ ಅಮೃತಾತ್ಮನೆ,

ಈ ಮುಂದಿನ ಪ್ರಶ್ನೆಗಳನ್ನು ವಿವರವಾಗಿ ವಿಚಾರಿಸುವದಕ್ಕೆ ಈಗ ಸಮಯವಿಲ್ಲ. ಆದರೆ, ಉತ್ತರಗಳನ್ನು ಸುಮ್ಮನೆ ಸೂಚಿಸುತ್ತೇನೆ.

**ಪ್ರಶ್ನೆ**— ಚಿಕ್ಕ ಮಕ್ಕಳು ಏಕೆ ಸಾಯುತ್ತವೆ ?

**ಉತ್ತರ**—ಇಲ್ಲಿ, ಯಾರೋ ಬರೆದಿರುವ ಒಂದು ಪುಸ್ತಕವಿದೆ. ಇದರಲ್ಲಿ ಅನೇಕ ಇಂಗ್ಲಿಷ್‌ಸಾಹಿತ್ಯದ ಭಾಗಗಳಿವೆ. ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳನ್ನೂ ಈ ಪುಸ್ತಕದಲ್ಲಿ ಉದಾಹರಿಸಿದೆ. ಆದರೆ ಸಂಸ್ಕೃತ ಲಿಪಿಗಳೇ ಬೇರೆ, ಇಂಗ್ಲಿಷ್ ಲಿಪಿಗಳೇ ಬೇರೆ. ಆದ್ದರಿಂದ ಒಬ್ಬ ಲೇಖಕನು ಇಂಗ್ಲಿಷ್ ಬರೆಯುವಾಗ ಒಂದು ಬಗೆಯ ಲಿಪಿಯನ್ನು ಉಪಯೋಗಿಸಿದರೆ, ಸಂಸ್ಕೃತವನ್ನು ಬರೆಯುವಾಗ ಇನ್ನೊಂದು ಬಗೆಯ ಲಿಪಿಯನ್ನು ಉಪಯೋಗಿಸಬೇಕಾಗುತ್ತದೆ ; ಹೀಗೆ ಭಾಷೆಗಳು ಬದಲಾಯಿಸಿದರೆ ಬರಹಗಳೂ ಬದಲಾಯಿಸುತ್ತವೆ ಹೀಗೆಯೇ, ಈ ಒಂದು ಸ್ಥೂಲದೇಹದಲ್ಲಿ ನೀವು ಜೀವಿಸಿರುವವರೆಗೂ ಇದನ್ನು ಒಂದು ಲೇಖನಿಯಂತೆ, ಒಂದು ಬಗೆಯ ಲಿಪಿಯಂತೆ ಉಪಯೋಗಿಸುತ್ತೀರಿ. ನಿಮ್ಮ ಉದ್ದೇಶಸಾಧನೆಯಾಗುವವರೆಗೂ ಈ ದೇಹವನ್ನು ನೀವು ನಿಮ್ಮ ಇಚ್ಛೆಯಂತೆ, ನಿಮ್ಮ ಸ್ವಾಧೀನದಲ್ಲಿ ಇಟ್ಟುಕೊಂಡು ಉಪಯೋಗಿಸುತ್ತೀರಿ. ದೇಹವು ಮುಪ್ಪಾದಾಗ, ದುರ್ಬಲವಾಗಿ ರೋಗಗ್ರಸ್ತವಾದಾಗ, ಅದರಿಂದ ಇನ್ನು ಪ್ರಯೋಜನವಿಲ್ಲವೆಂದು ಅದನ್ನು ಒಗೆಯುತ್ತೀರಿ. ಬಟ್ಟೆಗಳು

ಹಳೆಯದಾದರೆ ಅವುಗಳನ್ನು ಹೇಗೆ ಬದಲಾಯಿಸುತ್ತೀರೋ ಹಾಗೆ ನೀವು ನಿಮ್ಮ ಹಳೆಯ ದೇಹವನ್ನು ಬಿಟ್ಟು ಬೇರೆ ಹೊಸ ದೇಹವನ್ನು ತೆಗೆದುಕೊಳ್ಳುತ್ತೀರಿ. ಇದರಲ್ಲಿ ಭಯಂಕರವಾದುದು ಏನೂ ಇಲ್ಲ. ಇದು ಬಹಳ ಸ್ವಾಭಾವಿಕವಾದುದು.

ಮಕ್ಕಳು ಏಕೆ ಸಾಯುತ್ತವೆ ? ಇದೇ ಪ್ರಶ್ನೆ. ಒಬ್ಬ ಮನುಷ್ಯನಲ್ಲಿ ಬಗೆ ಬಗೆಯ ಬಯಕೆಗಳು ಇರುತ್ತವೆ. ಅವುಗಳು ಬದಲಾವಣೆ ಹೊಂದುವ ಕಾಲವು ಬರುತ್ತದೆ. ಆಗ ಅವನಲ್ಲಿ ಬೇರೆ ಬಗೆಯ ಬಯಕೆಗಳು ಏಳುತ್ತವೆ ಉದಾಹರಣೆಗಾಗಿ, ಒಬ್ಬ ಮನುಷ್ಯನು ಅಮೇರಿಕಾದ ಒಂದು ನಗರದಲ್ಲಿ ಬಹಳಕಾಲದಿಂದ ವಾಸಮಾಡುತ್ತಿದ್ದಾನೆ, ಎಂದು ಇಟ್ಟುಕೊಳ್ಳೋಣ. ಅವನು ಕೆಲವು ಗ್ರಂಥಗಳನ್ನು ವ್ಯಾಸಂಗಮಾಡಿದ್ದರಿಂದ ಅವನೊಳಗಿನ ಆಕಾಂಕ್ಷೆಗಳೂ ಪ್ರವೃತ್ತಿಗಳೂ ಪೂರಾ ಬದಲಾವಣೆ ಹೊಂದುತ್ತವೆ. ಒಂದು ವೇಳೆ ಅವನು ವೇದಾಂತ ಗ್ರಂಥಗಳನ್ನು ಓದಿ, ಬಹಳ ಮೆಚ್ಚಿಕೊಂಡು, ಹೃದಯವು ಪೂರಾ ಪರಿವರ್ತನೆ ಹೊಂದಿ, ಅಂತರಂಗದ ಆಳದಲ್ಲಿ ಅವನು ಒಬ್ಬ ಹಿಂದೂ ಆದ ಎಂದಿಟ್ಟುಕೊಳ್ಳೋಣ. ಅವನು ಕೆಲವು ಕಾಲ ಅಮೇರಿಕಾದಲ್ಲಿಯೇ ಉದ್ದಿಮೆಯನ್ನು ನಡೆಸಿದರೂ ಅವನ ಒಳ ಮನಸೆಲ್ಲಾ ಕ್ರಮೇಣ ಹೆಚ್ಚು ಹೆಚ್ಚಾಗಿ ಹಿಂದೂ ಆಗಿ ಬೆಳೆದಿರುವುದರಿಂದ, ಅವನ ಒಲವೂ ಪ್ರೀತಿಯೂ ಗುಣಸ್ವಭಾವವೂ ವ್ಯಕ್ತಿತ್ವವೂ ಈಗ ಸ್ವಲ್ಪವೂ ಅಮೇರಿಕಾಕ್ಕೆ ಸೇರಿಲ್ಲ; ಅವನು ಪೂರಾ ಇಂಡಿಯಾಕ್ಕೆ ಸೇರಿದ್ದಾನೆ ಅವನು ಸತ್ತರೆ ಪುನಃ ಇಂಡಿಯಾದಲ್ಲಿಯೇ ಹುಟ್ಟುತ್ತಾನೆ ಆದರೆ ಅವನಿಗೆ ಸಾಯುವ ಮುಂಚೆ ಸ್ಯಾನ್‌ಫ್ರ್ಯಾನ್ ಸಿಸ್ಕೋ ನಗರದ ಮೇಯರಲ್ಲಿ(ನಗರಾಧ್ಯಕ್ಷರಲ್ಲಿ)ಯೂ ಹೆಚ್ಚಿನ ಸ್ನೇಹಸಂಬಂಧ ವಿದ್ದಿತೆಂದು ಇಟ್ಟುಕೊಳ್ಳೋಣ. ಆದರೆ ಇದು ಅವನಿಗೆ ತಾನು ಇಂಡಿಯಾದಲ್ಲಿ ಹುಟ್ಟಬೇಕೆಂದು ಬಯಸುತ್ತಿದ್ದಷ್ಟು ತೀವ್ರವಾಗಿರಲಿಲ್ಲ ಈಗ ಅವನ ಈ ಎರಡು ಬಯಕೆಗಳೂ ಸಫಲವಾಗಬೇಕು. ಅದಕ್ಕಾಗಿ ಮೊದಲು ಅವನು ಇಂಡಿಯಾದಲ್ಲಿ ಹುಟ್ಟುತ್ತಾನೆ. ಆದರೆ ಅವನ ಸ್ನೇಹದ ಆಕರ್ಷಣೆಯು ಹಿಂದಿನ ಜನ್ಮದಲ್ಲಿ ಸ್ಯಾನ್ ಫ್ರ್ಯಾನ್‌ಸಿಸ್ಕೋ ಮೇಯರಲ್ಲಿ ಹೆಚ್ಚಾಗಿ ಇದ್ದುದರಿಂದಲೂ ಈ ಜನ್ಮದ ಸನ್ನಿವೇಶವು ಆ ವ್ಯಕ್ತಿಯ ಪ್ರೇಮವನ್ನು ಬೆಳೆಸುವದಕ್ಕೆ ಅನುಕೂಲವಾಗಿಲ್ಲದಿರುವದರಿಂದಲೂ ಅವನು ಬಾಲ್ಯದಲ್ಲಿಯೇ ಸತ್ತು ಪುನಃ ಅಮೆರಿಕಾದ ಸ್ಯಾನ್‌ಫ್ರ್ಯಾನ್‌ಸಿಸ್ಕೋ ಮೇಯರನ ಮಗನಾಗಿ ಹುಟ್ಟುತ್ತಾನೆ. ಅಲ್ಲಿ ಕೆಲವು ವರ್ಷಗಳು ಬದುಕಿದ್ದು, ಆ ತಂದೆಯ ಆಕರ್ಷಣಶಕ್ತಿಯ ಕರ್ಮವು ತೀರಿದ ಮೇಲೆ ಅವನು ಸಾಯುತ್ತಾನೆ. ಆದರೆ ಅವನಲ್ಲಿ ಹಿಂದಿನ ಜನ್ಮದಲ್ಲಿ ಇಂಡಿಯಾದ ಮೇಲೆ ಬೆಳೆದಿದ್ದ ಅಭಿಮಾನ ಭಾವನೆಯ

ಸಂಚಿತ ಕರ್ಮವು ತೀವ್ರವಾಗಿದ್ದು ಇನ್ನೂ ತೃಪ್ತಿಯಾಗಿಲ್ಲವಾದ್ದರಿಂದ, ಅವನು ಪುನಃ ಇಂಡಿಯಾದಲ್ಲಿ ಹುಟ್ಟುತ್ತಾನೆ. ಆದ್ದರಿಂದಲೇ ಮಕ್ಕಳು ಸಾಯುತ್ತಾರೆ.

ಹೃದಯವು ಪೂರ್ಣ ಇಂಡಿಯಾದ ಪ್ರೇಮದಿಂದಿದ್ದು, ಹೊರಗಿನ ಸ್ನೇಹಾಕರ್ಷಣೆಯ ಒಂದು ಋಣಾನುಬಂಧದ ದೆಸೆಯಿಂದ ಅಮೇರಿಕಾದಲ್ಲಿ ಹುಟ್ಟುವವರು ಒಂದು ಸಂಸ್ಕೃತ ಶ್ಲೋಕವನ್ನು ಇಂಗ್ಲಿಷ್ ಲಿಪಿಯಿಂದ ಬರೆದಂತೆ ಇರುತ್ತಾರೆ. ಆದ್ದರಿಂದ ಸಾಯತಕ್ಕ ಮಕ್ಕಳು ಪೂರ್ಣವಿದೇಶೀ ಭಾಷೆಯಲ್ಲಿ ಬರೆಯದಿರುವ ಸಾಹಿತ್ಯ ಪಂಕ್ತಿಯಂತೆ ಇರುತ್ತಾರೆ.

**ಪ್ರಶ್ನೆ**—ಪುಣ್ಯಕ್ಕೂ ಪಾಪಕ್ಕೂ ನಡುವೆ ಕೊರೆಯಬಹುದಾದ ಗಡಿಯ ಗೆರೆ, ಎಲ್ಲೆಯ ಗೆರೆ ಯಾವದು ?

**ಉತ್ತರ**—ಇಲ್ಲಿ ಒಂದು ಏಣಿ ಇದೆ ; ಇದರ ಮೇಲಕ್ಕೆ ಹತ್ತಿಹೋದರೆ ಅದು ಪುಣ್ಯ ; ಈ ಏಣಿಯ ಕೆಳಗಿಳಿದು ಹೋದರೆ ಅದು ಪಾಪ.

ಗಣಿತಶಾಸ್ತ್ರದಲ್ಲಿ ಆಧಾರ ಸೂತ್ರದ (Axiom) ಇಂಥಾ ಸ್ಥಾನವೇ (Position) ಧನ, ಇಂಥಾದ್ದೇ ಋಣ ಎನ್ನುವದಿಲ್ಲ ಧನ (Positive) ಋಣಗಳು (Negative) ಸಾಪೇಕ್ಷ ಭಾವಗಳು (Relative terms)

ಹೀಗೆಯೇ ವೇದಾಂತದ ಪ್ರಕಾರ ಪುಣ್ಯ-ಪಾಪಗಳು ಸಾಪೇಕ್ಷ ಭಾವಗಳು. ಇಲ್ಲಿ ಪಾಪ ಮುಗಿಯಿತು ; ಪುಣ್ಯವು ಪ್ರಾರಂಭವಾಯಿತು-ಎನ್ನುವಂಥ ವಿಭಾಗ ರೇಖೆಯೇ ಇಲ್ಲ.

ಇಲ್ಲಿ ಒಂದು ಸರಳರೇಖೆ ಇದೆ ; ಗಣಿತಶಾಸ್ತ್ರದಲ್ಲಿ ಇದರ ಅಗ್ರಕ್ಕೆ (Vertex) X ಎಂದು ಗುರುತಿಸುತ್ತೇವೆ. ಒಂದು ಬಿಂದುವಿನ ಚಲನೆಯು ಒಂದು ದಿಕ್ಕಿನಲ್ಲಿ ಇದ್ದರೆ, ಅದನ್ನು ಧನ ಎನ್ನುತ್ತೇವೆ. ಅದರ ವಿರುದ್ಧ ದಿಕ್ಕಿನಲ್ಲಿದ್ದರೆ ಋಣ ಎನ್ನುತ್ತೇವೆ. ಆದರೆ ಬಿಂದುವಿನ ಅದೇ ಸ್ಥಾನವನ್ನು ಋಣದ ದೃಷ್ಟಿಯಿಂದ ಧನವೆಂದೂ ಧನದ ದೃಷ್ಟಿಯಿಂದ ಋಣವೆಂದೂ ಕರೆಯಬಹುದು ; ನೀವು ಒಂದು ವಿಶಿಷ್ಟಬಗೆಯ ಕಾರ್ಯದಿಂದ ಮುಂದುಮುಂದುವರಿಯುತ್ತಾ ಮೇಲೆ ಮೇಲೆ ಏರುತ್ತಾ ಸತ್ಯಕ್ಕೆ ಹೆಚ್ಚು ಹೆಚ್ಚು ಸಮೀಪಿಸುತ್ತಾ ಮಾರ್ಗ ಕ್ರಮಣ ಮಾಡುತ್ತಿದ್ದರೆ

ಅದು ಪುಣ್ಯಕಾರ್ಯವಾಗುತ್ತದೆ. ಯಾವದಾದರೊಂದು ಬಗೆಯ ಕಾರ್ಯದಿಂದ ನೀವು ಸತ್ಯದಿಂದ ದೂರ ಸರಿಯುವದಾದರೆ, ಆಗ ಆ ಕಾರ್ಯವು ನಿಮಗೆ ವಿಷವಾಗುತ್ತದೆ. ವಿವಾಹಸಂಬಂಧದಿಂದ ನೀವು ವಿಶ್ವಪ್ರೇಮವನ್ನು ಹೆಚ್ಚು ಸಮೀಪಿಸುವದಾದರೆ-ಪ್ರಪಂಚವನ್ನೆಲ್ಲಾ ವ್ಯಾಪಿಸಿರುವ ವಿಶ್ವಪ್ರಕಾಶವನ್ನು ಹೆಚ್ಚು ಸಮೀಪಿಸುವದಾದರೆ,—ಆಗ ವಿವಾಹ ಬಂಧವು ನಿಮಗೆ ತಾರಕವಾಗಬಹುದು ; ನಿಮ್ಮ ಧರ್ಮಶ್ರದ್ಧೆಯನ್ನೂ ದೈವಭಕ್ತಿಯನ್ನೂ ಬೆಳೆಸುವದಾಗಬಹುದು. ನಿಮ್ಮ ವಿವಾಹ ಸಂಬಂಧದಿಂದ ನೀವು ವಿಶ್ವಪ್ರೇಮವನ್ನೂ ವಿಶ್ವಜ್ಯೋತಿಯನ್ನೂ ಹೆಚ್ಚು ಹೆಚ್ಚಾಗಿ ಸಮೀಪಿಸುತ್ತಿಲ್ಲವಾದರೆ, ಆಗ ಅದು ನಿಮಗೆ ವಿಷವಾಗುತ್ತದೆ ; ಪಾಪಮಯವಾಗುತ್ತದೆ ; ಶಾಪವೂ ಆಗುತ್ತದೆ.

ವೇದಾಂತದ ಪ್ರಕಾರ ಪ್ರತಿಯೊಬ್ಬರೂ ಈ ಪಶುಕಾಮಗಳ ಮೂಲಕ ಹಾದು ಹೋಗಬೇಕಾಗುತ್ತದೆ. ಇದು ಕರ್ಮಸಿದ್ಧಾಂತ. ಎಲ್ಲಾ ಜನರೂ ವಿಕಾಸವಾಗುತ್ತಿದ್ದಾರೆ ; ಜೀವಶಕ್ತಿವಿಕಾಸದ, ಭಾವಶಕ್ತಿ ವಿಕಾಸದ, ಜ್ಞಾನಶಕ್ತಿ ವಿಕಾಸದ ಪ್ರಕೃತಿನಿಯಮದ ಪ್ರಕಾರವೇ ಎಲ್ಲರೂ ಮುಂದುವರಿಯುತ್ತಿದ್ದಾರೆ ; ಮುಂದೆ ಮುಂದೆ ನಡಿಯುತ್ತಿದ್ದಾರೆ.

ಪಶುಜನ್ಮದಿಂದ ಈಗತಾನೇ ಮನುಷ್ಯ ಜನ್ಮದಲ್ಲಿಬಂದಿರುವ ಕೆಲವು ಜನರಿದ್ದಾರೆ; ಅವರಲ್ಲಿ ಪಶುಕಾಮಗಳು ಪ್ರಧಾನವಾಗಿ ಇರುವದು ಸ್ವಾಭಾವಿಕವಾಗಿದೆ. ಅವರು ಇತ್ತೀಚೆಗೆ ಹೊಸದಾಗಿ ತೋಳಗಳು ಹುಲಿಗಳು, ನಾಯಿಗಳು, ಹಂದಿಗಳು ಇವೇ ಮೊದಲಾದ ಪ್ರಾಣಿಗಳ ಶರೀರಗಳನ್ನು ಬಿಟ್ಟುಬಂದಿದ್ದಾರೆ. ಆದ್ದರಿಂದ ಪಶು–ಮೃಗ-ಪ್ರಾಣಿಗಳಿಗೆ ಸಹಜವಾದ ಕಾಮಗಳೇ ಆ ಜನರಲ್ಲಿ ಹೆಚ್ಚಾಗಿರುತ್ತವೆ. ಭೌತವಿಜ್ಞಾನದಲ್ಲಿ Law of Inertia-ಜಡತೆಯ ನಿಯಮ ಎನ್ನುವದಿದೆ. ಇದರ ಪ್ರಕಾರ, ಬಾಹ್ಯಬಲ–ಪ್ರಭಾವವಿಲ್ಲದಿದ್ದರೆ, ಒಂದು ಅಚಲವಸ್ತು ಇದ್ದಂತೆಯೇ ನಿಶ್ಚಲವಾಗಿರುತ್ತದೆ ; ಮತ್ತು ಚಲವಸ್ತು ಒಂದೇ ಸಮನಾದ ಗತಿಯಿಂದ ಋಜುರೇಖೆಯಲ್ಲಿ ಚಲಿಸುತ್ತಿರುತ್ತದೆ. ಇದು ಜಡತ್ವದ ಧರ್ಮ, ಬಲ. ಇದಕ್ಕೆ ಅನುಸಾರವಾಗಿ ಪ್ರತಿಯೊಂದು ಜೀವಿಯೂ ಬೇರೆಯೊಂದು ಪ್ರಭಾವವು ಅದರ ಮೇಲೆ ಬೀಳುವವರೆಗೂ ಒಂದೇಸಮನಾದ ಗತಿಯಿಂದ ಋಜುರೇಖೆಯಲ್ಲಿ ಚಲಿಸುತ್ತಿರುತ್ತದೆ.

ಈ ಪ್ರಪಂಚದಿಂದ ಈ ಜಡತೆಯ ನಿಯಮವನ್ನು ತೆಗೆದುಹಾಕಿದರೆ, ಪ್ರಪಂಚವು ಅವ್ಯವಸ್ಥಿತವಾದ ಸ್ಥಿತಿಯಲ್ಲಿರುತ್ತದೆ ; ಇದನ್ನು ತೆಗೆದುಹಾಕದಿದ್ದರೆ, ಪಶುಪ್ರಾಣಿಗಳ

ಜನ್ಮದಿಂದ ಹೊಸದಾಗಿ ಮೇಲೆಬಂದವರಲ್ಲಿ ಆ ಪಶುಸ್ವಭಾವವು ಇರಲೇಬೇಕು, ಇದ್ದೇ ಇರುತ್ತದೆ. ನೂರಾರು ವರ್ಷಗಳಿಂದ ಒಂದೇ ಪಾತ್ರದಲ್ಲಿ ಒಂದೇ ರೀತಿಯಿಂದ ಹರಿಯುತ್ತಿರುವ ನದಿಯನ್ನು ನಾವು ಹೇಗೆ ಆಕ್ಷೇಪಿಸಲಾರೆವೋ ಹಾಗೆಯೇ ಆ ಪಶು ಮಾನವರನ್ನೂ ಆಕ್ಷೇಪಿಸಬಾರದು. ನಿಂದಿಸಬಾರದು. ಅವರು ಪಾಪಿಗಳೆಂದು ಅವರನ್ನು ತುಚ್ಛವಾಗಿ ಕಾಣುವದಕ್ಕೆ ನಮಗೆ ಅಧಿಕಾರವಿಲ್ಲ. ದುರ್ಜನರೆಂದೋ ದುರ್ಗುಣಿಗಳೆಂದೋ ಅಸೂಯಾಪರರೆಂದೋ ಯಾರನ್ನು ದ್ವೇಷಿಸುವದಕ್ಕೂ ನಮಗೆ ಅಧಿಕಾರವಿಲ್ಲ. ಪಾಪಿಗಳೆನಿಸಿಕೊಂಡಿರುವ ಈ ಜನರನ್ನು ಪ್ರೇಮಿಸುವದಕ್ಕೆ ಮಾತ್ರ ನಮಗೆ ಅಧಿಕಾರವಿದೆ. ಯೇಸುಕ್ರಿಸ್ತನು " Love the sinner " " ಪಾಪಿಯನ್ನು ಪ್ರೀತಿಸಿರಿ ". ಎಂದು ಹೇಳುತ್ತಾನೆ. ಪಾಪಿಗಳೆಂದು ನಾವು ತಿಳಿದಿರುವವರನ್ನು ಅಥವಾ ಪಾಪಿಗಳನ್ನು, ನಾವು ಕಡೆಗಣಿಸುವದಕ್ಕೂ ಅವಗಣಿಸುವದಕ್ಕೂ ಪ್ರಪಂಚದಲ್ಲಿ ಯಾವ ಕಾರಣವೂ ಇಲ್ಲ. ಪಾಪಿಗಳಾಗಿರುವದು ಅವರಿಗೆ ಸ್ವಾಭಾವಿಕವಾಗಿದೆ.

ಅವರಾಗಿಯೇ ಒಂದು ಧ್ಯೇಯವನ್ನಿಟ್ಟುಕೊಳ್ಳುವದಕ್ಕೆ ಈ ಜನರಿಗೆ ಅಂಥಾ ಸಂಸ್ಕಾರವೇನಿದೆ ? ಪಾಪ ; ಹೇಗೇ ಆಗಲಿ, ಅವರು ಮುಂದುವರಿಯಬೇಕು. ಈ ಪ್ರಪಂಚವನ್ನು ಆಳುತ್ತಿರುವದು ಆ ಜಡತಾ ನಿಯಮ (The Law of Inertia) ಒಂದೇ ಅಲ್ಲ. ಅಂಥಾ ಪಶು-ಮಾನವರಲ್ಲಿ ನಿಜವಾಗಿಯೂ ಜೀವಸತ್ತ್ವವಿದ್ದರೆ ಅವರು ಆ ಜಡ-ನಿಯಮವನ್ನು ತುಳಿದು ಮೇಲೇರಬೇಕು.

All force is marked by the change it brings about in the original Inertia. If the original line of motion is not changed, there is no force, no life.

ಮೂಲ ಜಡತೆಯಲ್ಲಿ ವ್ಯತ್ಯಾಸವನ್ನು ಉಂಟುಮಾಡುವದರಿಂದಲೇ ಎಲ್ಲಾ ಬಲವೂ-ಶಕ್ತಿಯೂ ಗುರುತಿಸಲ್ಪಡುತ್ತದೆ. ಮೂಲ ಚಲನೆಯ ರೇಖೆಯು ಬದಲಾಯಿಸಲ್ಪಡದಿದ್ದರೆ, ಬಲವಿಲ್ಲ, ಪ್ರೇರಣೆಯಿಲ್ಲ, ಪ್ರಭಾವವಿಲ್ಲ—ಶಕ್ತಿಯಿಲ್ಲ, ಜೀವಸತ್ವವಿಲ್ಲ ಎಂದೇ ನಿಶ್ಚಯ. ಈಗ, ಈ ಜನರು ಜೀವಂತ ವ್ಯಕ್ತಿಗಳೆನಿಸಿಕೊಳ್ಳ ಬೇಕಾದರೆ. ಆ ಜೀವಂತಶಕ್ತಿಯನ್ನು ಅವರು ಅಭಿವ್ಯಕ್ತಮಾಡಬೇಕು. ಅವರು ತಮ್ಮ ಪಶುಸ್ವಭಾವದಿಂದ ತಮ್ಮನ್ನು ತಾವು ಪಾರುಮಾಡಿಕೊಳ್ಳಬೇಕು ; ಬಿಡುಗಡೆ ಮಾಡಿಕೊಳ್ಳಬೇಕು, ಉದ್ಧರಿಸಿಕೊಳ್ಳಬೇಕು ; ತಮ್ಮಲ್ಲಿರುವ ಜಡತಾನಿಯಮವನ್ನು ಬದಲಾಯಿಸಿಕೊಳ್ಳಬೇಕು. ಅವರು ಈ ಮಾರ್ಪಾಟಿನ ಬಲದಿಂದ ಅಥವಾ

ಆಧ್ಯಾತ್ಮಿಕ ಬಲದಿಂದ ಪರಿವರ್ತನೆಯ ಶಕ್ತಿಯಿಂದ ತಮ್ಮ ಸ್ವಾಭಾವಿಕ ಪ್ರವೃತ್ತಿಯನ್ನು ಆಮೂಲಾಗ್ರವಾಗಿ, ಸಂಪೂರ್ಣವಾಗಿ ಬದಲಾಯಿಸಿಕೊಳ್ಳಬೇಕು. ಇಲ್ಲಿ ಸ್ವಾಭಾವಿಕ ಪ್ರವೃತ್ತಿ ಎಂದಿದೆ. ಈ ಸ್ವಾಭಾವಿಕ ಎನ್ನುವ ಶಬ್ದಾರ್ಥವನ್ನು ವಿವರಿಸಬೇಕು. ಏಕೆಂದರೆ ಈ ಶಬ್ದವು ಸಾವಿರಾರು ಜನರನ್ನು, ಅಲ್ಲ, ಲಕ್ಷಾಂತರ ಜನರನ್ನು– ತಪ್ಪು ಅಭಿಪ್ರಾಯವನ್ನು ಕೊಟ್ಟು– ತಪ್ಪುದಾರಿಗೆ ಎಳೆಯುತ್ತಿದೆ. ಸ್ವಾಭಾವಿಕ ಎನ್ನುವ ಶಬ್ದದ ಆಶ್ರಯದಲ್ಲಿ ಎಲ್ಲಾ ಬಗೆಯ ಪಾಪಗಳನ್ನೂ ದುರಾಚಾರಗಳನ್ನು' ನಡಸಿಕೊಂಡು ಬರುತ್ತಿದ್ದಾರೆ ಮತ್ತು ಪ್ರೋತ್ಸಾಹಿಸುತ್ತಿದ್ದಾರೆ.

ಸ್ವಾಭಾವಿಕವೆಂದರೆ ಮನಸ್ಸಿನಲ್ಲಿ ಏಳುವ ಎಲ್ಲಾ ಬಗೆಯ ಪಶುಕಾಮಗಳು, ಕಾಮನೆಗಳು ಎಂದು ಅನೇಕರು ತಿಳಿದಿದ್ದಾರೆ. '' ನಮ್ಮ ಕಾಮೋದ್ರೇಕದ ಕುದುರೆಗಳನ್ನು ಸಡಿಲಬಿಟ್ಟುಬಿಡೋಣ ; ನಮ್ಮ ನಿಜವಾದ ಗುಣಶೀಲಗಳನ್ನು ವಶದಲ್ಲಿಟ್ಟುಕೊಂಡಿರುವ ಲಗಾಮುಗಳನ್ನು ಜಗ್ಗಿ ಹಿಡಿಯದೆ, ಕೈಬಿಟ್ಟು ಬಿಡೋಣ, ನಾವು ಬಿಡುಬೀಸಾಗಿರೋಣ, ತಡೆಯಿಲ್ಲದೆ, ಕಟ್ಟಿಲ್ಲದೆ, ಅಂಕೆಯಿಲ್ಲದೆ, ಸ್ವಚ್ಛಂದವಾಗಿರೋಣ." ಎಂದು ಅವರು ಹೇಳುತ್ತಾರೆ. ಈ ಸ್ವಚ್ಛಂದತೆಯ ಅರ್ಥವು ಪ್ರಾಪಂಚಿಕ ಪಶು ಜೀವನವೇ ಹೊರತು ಬೇರೇನೂ ಅಲ್ಲ.

ಇಲ್ಲಿ ಒಂದು ಮಕ್ಕಳ ಆಟದ 'ಕಾರು' ಪೂರ್ಣವೇಗದಿಂದ ಓಡುತ್ತಿದೆ. ಆಗ ಅದರ ಚಾಲಕ ಬಲವನ್ನು ಕಳೆದುಬಿಟ್ಟರೂ ಅದು ತನ್ನಷ್ಟಕ್ಕೆ ತಾನೇ ಕೆಲವು ದೂರ ಹಾಗೆಯೇ ಓಡುತ್ತಿರುತ್ತದೆ ಏಕೆ ? ಅದರಲ್ಲಿದ್ದ ಚಲನ ಶಕ್ತಿಯು ಅಥವಾ ವೇಗವು ಮುಂದೆ ಮುಂದೆ ಓಡಲು ಅದನ್ನು ಪ್ರೇರಿಸುತ್ತಿತ್ತು. ಅದು ಸ್ವಾಭಾವಿಕ. ಸ್ವಾಭಾವಿಕವೆಂದರೆ ಜಡತೆ. ಜಡತಾನಿಯಮದ ಪ್ರಕಾರ ಆ ಕಾರಿನ ಚಲನೆಯು ನಿಲ್ಲದೆ, ಕೆಲವು ದೂರ ಮುಂದುವರಿಯಬೇಕಾಯಿತು. ಒಂದು ಕಲ್ಲು ಜೋರಾಗಿ ಬೀಸಲ್ಪಟ್ಟರೆ, ಜಡತಾ ನಿಯಮದ ಪ್ರಕಾರ ಅದು ಮುಂದೆ ಮುಂದೆ ಚಲಿಸುತ್ತಲೇ ಇರಬೇಕು ; ಆದರೆ ಬೇರೆ ಕೆಲವು ನಿಯಮಗಳ ಪ್ರಭಾವದಿಂದ ಅದು ಕೆಲವು ದೂರ ಹೋಗಿ ನಿಲ್ಲುತ್ತದೆ. ಮಕ್ಕಳು ಬುಗುರಿಯನ್ನು ತಿರುಗಿಸುತ್ತಾರೆ ; (ಕೈಯಿಂದ ಕೊಟ್ಟ ಚಾಲನ ಬಲ ಇರುವ ವರೆಗೂ) ಅದು ಗಿರಗಿರನೆ ತಿರುಗುತ್ತಲೇ ಇರುತ್ತದೆ. ಇದು ಅದರ ಸ್ವಭಾವ.

ಹೀಗೆಯೇ ನೀವು ಪ್ರಾಣಿಗಳ ದೇಹದಲ್ಲಿ ಇರುವವರೆಗೂ ಒಂದು ಗೊತ್ತಾದ ದಿಶೆಯಲ್ಲಿ ಓಡುತ್ತಿದ್ದಿರಿ. ಪಶುಗಳ ದೇಹಗಳಲ್ಲಿ ಇರುವವರೆಗೂ ಪಶುಗಳ

ಕಾಮೋದ್ರೇಕಗಳನ್ನು ತೃಪ್ತಿಗೊಳಿಸುವ ದಿಕ್ಕಿನಲ್ಲಿಯೇ ಓಡುತ್ತಿದ್ದುದು ಜನರಿಗೆ-ಜೀವರಿಗೆ-ಸ್ವಾಭಾವಿಕವಾಗಿತ್ತು. ಆದ್ದರಿಂದ ಆಗ ನಿಮಗೆ ಆ ಕಾರ್ಯಗಳು ಯೋಗ್ಯವಾಗಿತ್ತು ; ವಿಹಿತವಾಗಿತ್ತು. ಏಕೆಂದರೆ ಆ ಕಾಮಗಳೂ ಆ ಕರ್ಮಗಳೂ ನಿಮಗಾಗ ಸದ್ಗುಣಗಳಾಗಿದ್ದವು ; ಅವುಗಳ ಮೂಲಕವೇ ನೀವು ಮೇಲೇರಿಬಂದಿರಿ. ಆ ಪಶು ದೇಹಗಳ ಅನುಭವದಿಂದ ನೀವು ಅವಶ್ಯವಾದ ಜ್ಞಾನವನ್ನು ಸಂಪಾದಿಸಿದಿರಿ.

ನಾಯಿಯಲ್ಲಿ ನಾಯಿಗಳಿಗೆ ಸ್ವಾಭಾವಿಕವಾದ ನಡವಳಿಕೆಯಿದ್ದರೆ, ನಾಯಿಯನ್ನು ಪಾಪಿಯೆನ್ನಬಾರದು ; ಅಥವಾ ಹಂದಿಯು ಹಂದಿಗಳಂತೆ ನಡೆದು ಕೊಂಡರೆ ಆ ಹಂದಿಯನ್ನು ಪಾಪಿ ಎನ್ನಬಾರದು.

ನೀವು ಹೊಸದಾಗಿ ಮನುಷ್ಯ ಜನ್ಮದಲ್ಲಿ ಬಂದಾಗ, ಹಿಂದೆ ನಿಮಗೆ ಪಶು ಶರೀರಗಳಲ್ಲಿ ಅಭ್ಯಾಸವಾಗಿದ್ದ ರೀತಿಯಲ್ಲಿಯೇ ಇಚ್ಛಿಸುವದೂ ಆಶಿಸುವುದೂ ಬಯಸುವದೂ ನಿಮಗೆ ಸ್ವಾಭಾವಿಕವಾಗಿತ್ತು. ಏಕೆಂದರೆ, ಆಗ ನಿಮ್ಮಲ್ಲಿ ಜಡತಾ ನಿಯಮದ ಪ್ರಭಾವವೇ ಪ್ರಬಲವಾಗಿತ್ತು. ಆದ್ದರಿಂದ ಪಶುಶರೀರಗಳಲ್ಲಿದ್ದಾಗ ನಿಮಗೆ ರೂಢಿಯಾಗಿದ್ದ ಕಾಮಕರ್ಮಗಳ ಗತಿ ವೇಗವೇ ದಿಶೆಯೇ ನಿಮ್ಮ ಕೆಲವು ಮನುಷ್ಯ ಜನ್ಮಗಳಲ್ಲಿಯೂ ಮುಂದುವರಿಯುವದು—ಆ ಜಡತಾನಿಯಮದ ವಶದಿಂದ—ಸ್ವಾಭಾವಿಕವಾಗಿದೆ. ಹೀಗೆ ಸ್ವಾಭಾವಿಕ ಎನ್ನುವದು ಜಡತಾನಿಯಮವೇ ಹೊರತು ಬೇರೆಯಲ್ಲ. ಆದರೆ, ಈ ಜಡತಾನಿಯಮವು ನಿಮಗೆ ನಿಮ್ಮ ನಿಜವಾದ ಚೈತನ್ಯ ಸ್ವಭಾವವನ್ನೇನೂ ತೆರೆದು ತೋರಿಸುವದಿಲ್ಲ, ಪ್ರಕಾಶಪಡಿಸುವದಿಲ್ಲ, ತಿಳಿಸುವದಿಲ್ಲ. ಅದು ಬೇಕಾದರೆ, ನಿಮ್ಮಲ್ಲಿರುವ ಮೃತವಾದ ಜಡತತ್ತ್ವಗಳನ್ನು ತೋರಿಸುತ್ತದೆ ; ನಿಮ್ಮ ನಿಜವಾದ ದೇವತ್ವವನ್ನು ಅದು ಬೆಳಗುವದಿಲ್ಲ ; ತಿಳಿಸುವದಿಲ್ಲ.

ತನ್ನಲ್ಲಿರುವ ಈ ಜಡತೆಯ ಪ್ರಭಾವವನ್ನು ದಮನಮಾಡಿ ಜಯಿಸಿದಾಗ, ಅದನ್ನು ಮೆಟ್ಟಿ ಮೇಲೆದ್ದಾಗ, ಮನುಷ್ಯನು ನಿಜವಾದ ಮನುಷ್ಯನಾಗುತ್ತಾನೆ. ಈ ಪಾಶವೀ ಕಾಮಾಸಕ್ತಿಗಳೂ ಬಯಕೆಗಳೂ ಪಶುಗಳಿಗೂ ಹೊಸದಾಗಿ ಮನುಷ್ಯ ಜನ್ಮದಲ್ಲಿ ಕಾಲಿಟ್ಟಿರುವ ಕೆಲವು ಬಗೆಯ ಜನರಿಗೂ ಮಾತ್ರ ಕೇವಲ ಸ್ವಾಭಾವಿಕವಾಗಿವೆ. ಮೊದಲು ಕೆಲವು ಜನ್ಮಗಳಲ್ಲಿ ಮಾತ್ರ ಅವರು ತಮ್ಮ ಪಶುಕಾಮಗಳನ್ನೇ ತೃಪ್ತಿಮಾಡಿಕೊಳ್ಳುತ್ತಾ ಇರುವದಕ್ಕೆ ಸ್ವತಂತ್ರರಿರಬಹುದು. ಆದರೆ ಕೆಲವು ಕಾಲದ ಅನಂತರ ಅವುಗಳನ್ನು ತ್ಯಜಿಸಿ, ಮೀರಿ ; ಏರಬೇಕು, ದೂರ ನಿಲ್ಲಬೇಕು.

ಈ ಸಂದರ್ಭಕ್ಕೆ ಅನುಚಿತವಾಗಲಾರದ ಒಂದು ಕತೆಯನ್ನು ಕೇಳಿ. ಇಂಡಿಯಾ ದಲ್ಲಿ ತುಳಸೀದಾಸರೆಂಬ ಸಾಧುಗಳಿದ್ದರು. ಅವರಿಗೆ ಅವರ ಹೆಂಡತಿಯಲ್ಲಿ ಅತಿಲಾಲ ಸೆಯಿದ್ದಿತು. ಹಿಂದೆಂದೂ ಯಾರೂ ತನ್ನ ಹೆಂಡತಿಯನ್ನು ಅಷ್ಟು ಪ್ರಿತಿಸಿರಲಿಲ್ಲ ವೆನ್ನುವಷ್ಟು ಅವರು ತಮ್ಮ ಹೆಂಡತಿಯನ್ನು ಪ್ರಿತಿಸುತ್ತಿದ್ದರು. ಅವರು ವಾಸಿಸುತ್ತಿದ್ದ ಊರಿನಿಂದ ಏಳೆಂಟು ಮೈಲಿಗಳು ದೂರದಲ್ಲಿದ್ದ ತನ್ನ ತೌರುಮನೆಗೆ ಅವರ ಹೆಂಡತಿಯು ಒಮ್ಮೆ ಹೋಗಬೇಕಾಗಿ ಬಂದಿತು. ಆ ಸಾಧುಗಳು ಆಕೆಯ ವಿರಹವನ್ನು ತಾಳಲಾರದೆ, ಮನೆಯನ್ನು ಬಿಟ್ಟು ರಾತ್ರಿ ಹನ್ನೊಂದು ಗಂಟೆಯಲ್ಲಿ ಆಕೆಯನ್ನು ಸೇರಲು ಹುಚ್ಚರಂತೆ ಓಡಿಹೋದರು. ಅವರು ನಡುವೆ ಒಂದು ನದಿಯನ್ನು ದಾಟಬೇಕಾಗಿತ್ತು. ಆದರೆ ಆ ನದಿಯು ವೇಗದಿಂದ ತುಂಬಿ ಹರಿಯುತಿತ್ತು; ಅಲ್ಲಿ ದೋಣಿಯಾಗಲೀ ದಾಟಿಸುವವರಾಗಲೀ ಆ ಮಧ್ಯರಾತ್ರಿಯಲ್ಲಿ ಇರಲಿಲ್ಲ. ಮೂರು ನಾಲ್ಕು ದಿನಗಳ ಹಿಂದೆ ಯಾರೋ ನದಿಯಲ್ಲಿ ಮುಳುಗಿ ಸತ್ತು, ಮೈಯೆಲ್ಲ ನೀರುಂಡು ಬಾತು, ಹಗುರವಾಗಿ ತೇಲುತ್ತಿದ್ದ ಒಂದು ಹೆಣವು, ತುಳಸೀದಾಸರಿಗೆ ಆ ದಂಡೆಯಲ್ಲಿ ಸಿಕ್ಕಿತು. ಹುಚ್ಚು ಪ್ರೇಮದ ಅ ಹುಚ್ಚುಸಾಹಸಿಗಳು ತೇಲುತ್ತಿದ್ದ ಬೆಂಡಿನ ತೊಲೆಯಂತಿದ್ದ ಆ ಹೆಣವನ್ನೇ ಬಿಗಿಯಾಗಿ ಅಪ್ಪಿ ಹಿಡಿದುಕೊಂಡು ನದಿ ಯಲ್ಲಿ ಈಜಿಕೊಂಡು ಹೋಗಿ ಆಚೆಯ ದಂಡೆಯನ್ನು ಸೇರಿದರು. ಅಲ್ಲಿಂದ ಅವರು ಓಡೋಡಿ ಹೋಗಿ ಅವರ ಹೆಂಡತಿಯ ಮನೆಯನ್ನು ಸೇರಿದರು. ಅದರೆ ಅಷ್ಟರಲ್ಲಿ ಮಧ್ಯರಾತ್ರಿ ಮೀರಿದ್ದರಿಂದ ಆ ಮನೆಯ ಎಲ್ಲಾ ಬಾಗಿಲುಗಳೂ ಹಾಕಿದ್ದವು. ಅದು ದೊಡ್ಡ ಮನೆಯಾಗಿದ್ದುದರಿಂದ ಬಹಳ ದೂರ ಒಳಗೆ ಎಲ್ಲಿಯೋ ಮಲಗಿದ್ದ ಜನರನ್ನು ಎಚ್ಚರಗೊಳಿಸಲಾಗಲಿಲ್ಲ. ಆಗ ಏನು ಮಾಡಬೇಕೆಂದು ಆ ಸಾಧುಗಳು ಬಹಳ ಯೋಚಿಸಿದರು. ದಾರಿಗೆ ಅಡ್ಡಲಾಗಿ ಒಂದು ಮಹಾನದಿ ಇದ್ದರೂ ಪ್ರೇಮವು ಅದನ್ನು ದಾಟುವದೆಂದೂ ಪರ್ವತವಿದ್ದರೂ ಪ್ರೇಮವು ಅದನ್ನು ಏರಿಹೋಗುವ ದೆಂದೂ ಹೇಳುತ್ತಾರೆ. ಆದ್ದರಿಂದ ಅವರು ಪ್ರೇಮದ ರೆಕ್ಕೆಗಳ ಮೇಲೆ ಹೆಂಡತಿಯು ಮಲಗಿದ್ದಲ್ಲಿಗೆ ಹೋಗಬೇಕಾಗಿತ್ತು. ಕಾತರದಿಂದ ಬಹಳ ಯೋಚಿಸುತ್ತಿರಲು, ಒಂದುಕಡೆ, ಮೇಲಿನ ಮಹಡಿಯ ಕೋಣೆಯ ಕಿಟಕಿಯಿಂದ ಏನೋ ಜೋತಾಡು ತ್ತಿದ್ದಂತೆ ಕಂಡಿತು. ತಮ್ಮ ಮೇಲಿನ ಅತಿ ಪ್ರೇಮದಿಂದ ತಮ್ಮ ಹೆಂಡತಿಯೇ ತಾವು ಮೇಲೆ ಹತ್ತಿಬರುವದಕ್ಕಾಗಿ ಒಂದು ಹಗ್ಗವನ್ನು ನೇತುಕಟ್ಟಿರಬೇಕೆಂದು ಯೋಚಿಸಿ ಬಹಳ ಸಂತೋಷದಿಂದ ಅ ಹಗ್ಗದ ತುದಿಯನ್ನು ಬಲವಾಗಿ ಹಿಡಿದು ಏರುವದಕ್ಕೆ ತೊಡಗಿದರು. ಆದರೆ ಅದು ಹಗ್ಗವಾಗಿರದೆ ಹಾವಾಗಿದ್ದಿತು. ಆ ದೊಡ್ಡಹಾವಿನ ಮೂತಿಯನ್ನೇ ಬಲವಾಗಿ ಹಿಡಿದು ಹತ್ತುವದಕ್ಕೆ ತೊಡಗಿದ್ದರಿಂದ ಅದು ಅವರನ್ನು ಕಚ್ಚುವದಕ್ಕೆ ಅವಕಾಶವಾಗಲಿಲ್ಲ. ಅವರ ಹಿಡಿತಕ್ಕೆ ಅದು

ಅರೆ ಜೀವವಾಯಿತು. ಆದರೂ ಅದು ತನ್ನ ಬಾಲದಿಂದ ಮೇಲೆ ಬಲವಾಗಿ ಸುತ್ತಿ ಹಿಡಿದುಕೊಂಡಿತ್ತಾದ್ದರಿಂದ ಅದನ್ನು ಅವರು ಹಿಡಿದುಕೊಂಡು ಹತ್ತಿ ಮೇಲಕ್ಕೆ ಹೋಗಿ ತಮ್ಮ ಹೆಂಡತಿಯು ಮಲಗಿದ್ದ ಕೋಣೆಯೊಳಗೆ ಪ್ರವೇಶಮಾಡಿದರು. ಆಕೆಗೆ ಎಚ್ಚರವಾಗಿ ಎದ್ದು, ತನ್ನ ಪತಿಯನ್ನು ನೋಡಿ ಬೆರಗಾಗಿ, ಆಶ್ಚರ್ಯದಿಂದ "ಏನಾಶ್ಚರ್ಯ ! ಹೇಗೆ ಬಂದಿರಿ ಇಲ್ಲಿಗೆ ?" ಎಂದು ಉದ್ಗಾರಮಾಡಿದಳು. ದಾಸರಿಗೆ ಆನಂದ ಬಾಷ್ಪಗಳು ಸುರಿಯುತ್ತಾ ಕಂಠವು ಗದ್ಗದವಾಗಿ ಅವರು "ಓ ದೇವಿ, ಈ ಹೊತ್ತಿನಲ್ಲಿ ನಾನಿಲ್ಲಿ ಬರುವದಕ್ಕೆ ಪ್ರೇಮದಿಂದ ನೀನೇ ಸಹಾಯ ಮಾಡಿದೆಯಲ್ಲವೆ ? ಆ ನದಿಯಲ್ಲಿ ನೀನೇ ಸಣ್ಣದೊಂದು ದೋಣಿಯನ್ನು ಇಟ್ಟಿದ್ದೆ ; ಈ ನಿನ್ನ ಕೋಣೆಯ ಕಿಟಕಿಗೆ ಕಟ್ಟಿ ನೀನೇ ಆ ಹಗ್ಗವನ್ನು ಗೋಡೆಯ ಮೇಲೆ ತೂಗುಬಿಟ್ಟಿದ್ದೆ ಅಲ್ಲವೆ ? ನಾನು ನದಿಯನ್ನು ದಾಟಿಬರುವದಕ್ಕೂ ಇಲ್ಲಿ ಗೋಡೆಯನ್ನು ಹತ್ತಿಬರುವದಕ್ಕೂ ನೀನೇ ಪ್ರೇಮದಿಂದ ಸುಲಭಗೊಳಿಸಿದ್ದೆಯಲ್ಲವೆ ?" ಎಂದು ಕೇಳಿದರು. ಅವರು ಅತಿಶಯ ಪ್ರೇಮಾವೇಶದಿಂದ ಹುಚ್ಚರಂತಾಗಿದ್ದರು. ಆಕೆಯು ಕುತೂಹಲದಿಂದ ಅವರು ಹೇಳಿದ್ದ ಹಗ್ಗವನ್ನು ನೋಡಿದಳು. ಅದು ದೊಡ್ಡದೊಂದು ಹಾವಾಗಿರುವದನ್ನು ಕಂಡು ಆಕೆಯು ದಿಗ್ಭ್ರಾಂತಳಾದಳು ಆಕೆಯು ವಿದ್ಯಾವತಿಯೂ ಸುಸಂಸ್ಕೃತಳೂ ಸಾತ್ವಿಕಳೂ ಆಧ್ಯಾತ್ಮಜ್ಞಾನದ ಅಧಿದೇವತೆಯಂತೆಯೂ ಇದ್ದಳು. ಆಕೆಯು ಕನಿಕರ–ಪ್ರೀತಿಗಳ ಕಣ್ಣೀರು ಸುರಿಸುತ್ತಾ "ಓ ದಿವ್ಯಾತ್ಮ ! ಓ, ಅತ್ಯಂತ ಮಧುರ ಪ್ರಿಯ ! ಈ ನನ್ನ ಶರೀರದಲ್ಲಿಯೂ ವ್ಯಕ್ತಿತ್ವದಲ್ಲಿಯೂ ಆಧಾರ ಚೈತನ್ಯ ಸ್ವರೂಪನಾದ ಪರಮಾತ್ಮನಲ್ಲಿ ಇದೇ ಉತ್ಕಟ ಪ್ರೇಮವನ್ನು ಇಟ್ಟಿದ್ದರೆ, ನೀವು ದೇವರೇ ಆಗುತ್ತಿದ್ದಿರಿ ; ನೀವು ಪ್ರಪಂಚದಲ್ಲಿ ಅತ್ಯಂತ ಶ್ರೇಷ್ಠ ಮಹಾತ್ಮರೇ ಆಗುತ್ತಿದ್ದಿರಿ ; ನೀವು ಅತ್ಯುನ್ನತ ಧರ್ಮಪ್ರಸಾರಕರೂ ಸಮಸ್ತ ವಿಶ್ವಕ್ಕೂ ಪೂಜ್ಯರಾದ ದೇವತಾ ಸಾರ್ವಭೌಮರೂ ಆಗುತ್ತಿದ್ದಿರಿ." ಎಂದು ಹೇಳಿದಳು.

ಆತ್ಮನಿಷ್ಠಳಾದ ಆಕೆಯು ಪರಮಾತ್ಮನಲ್ಲಿಯೇ ಮನಸ್ಸನ್ನಿರಿಸಿ, ಪತಿಗೆ ಬೋಧೆ ಮಾಡುತ್ತಾ, "ಓ ಪ್ರಿಯತಮ, ದೇವ ! ನೀವು ಈ ನನ್ನ ಶರೀರವನ್ನು ಪ್ರೀತಿಸುತ್ತೀರಲ್ಲವೆ ? ಇದು ಬಹಳ ಅನಿತ್ಯವಾದುದು ; ಬದಲಾವಣೆ ಹೊಂದತಕ್ಕದ್ದು ; ಇದು ನಿಮ್ಮ ಮನೆಯನ್ನು ಬಿಟ್ಟು ಈ ಮನೆಗೆ ಬಂದಿತು ಇದೇ ರೀತಿ ಈ ದೇಹವು ಇವತ್ತೋ ನಾಳೆಯೋ ಈ ಲೋಕವನ್ನೇ ಬಿಡಬಹುದು. ಈ ದೇಹವು ಬದುಕಿದ್ದರೂ ಯಾವದಾದರೂ ರೋಗಕ್ಕೆ ಬಲಿಯಾಗಿ ಸೌಂದರ್ಯವನ್ನೆಲ್ಲಾ ಕಳೆದುಕೊಳ್ಳಬಹುದು; ಒಂದು ಸೆಕಂಡಿನಲ್ಲಿ ಅತಿ ಕುರೂಪಿಯಾಗಬಹುದು. ನೋಡಿ ನನ್ನ ಚೆಲುವಾದ ಕೆನ್ನೆಗಳಿಗೆ ಈ ಕಳೆಯನ್ನು ಕೊಟ್ಟಿರುವುದು ಯಾವದು ? ನನ್ನ ಕಣ್ಣುಗಳಲ್ಲಿ ಈ

ಹೊಳಪನ್ನು ಇಟ್ಟಿರುವದು ಯಾವದು ? ನನ್ನ ವ್ಯಕ್ತಿಸೌಂದರ್ಯಕ್ಕೆ ಈ ವೈಭವವನ್ನು ಕೊಟ್ಟಿರುವದು ಯಾವದು ? ನನ್ನ ಕಣ್ಣುಗಳಲ್ಲಿ ಹೊಳೆಯುತ್ತಿರುವದೂ ನನ್ನ ಕೇಶಗಳಿಗೆ ಈ ಸ್ನಿಗ್ಧತೆಯನ್ನೂ ಆಕರ್ಷಕಗುಣವನ್ನೂ ನೀಡಿರುವುದೂ, ನನ್ನ ಇಂದ್ರಿಯಗಳಿಗೂ ದೇಹಕ್ಕೂ ಜೀವಶಕ್ತಿಯನ್ನೂ ಬೆಳಕನ್ನೂ ಚಟುವಟಿಕೆಯನ್ನೂ ಅನುಗ್ರಹಿಸಿರುವದೂ ಯಾವದು ? ನಿಮ್ಮನ್ನು ಮೋಹಗೊಳಿಸಿರುವದು ಈ ನನ್ನ ಚರ್ಮವೂ ಅಲ್ಲ ; ನನ್ನ ದೇಹವೂ ಅಲ್ಲ. ದಯವಿಟ್ಟು ವಿಚಾರಮಾಡಿ ನೋಡಿ ; ನಿಮ್ಮನ್ನು ಮೋಹಗೊಳಿಸಿರುವದೂ ಮರಳು ಮಾಡಿರುವುದೂ ಆಕರ್ಷಿಸಿರುವದೂ ನನ್ನಲ್ಲಿರುವ ನಿಜವಾದ ಆತ್ಮ, ದಿವ್ಯತೆ, ದೇವರು. ಎಲ್ಲಾ ಮನೋಹರತೆಗೂ ಲಾವಣ್ಯಕ್ಕೂ ಮೂಲವಾದುದು ದೇವರೆ ಹೊರತು ಬೇರೆಯಲ್ಲ. ಎಲ್ಲೆಲ್ಲಿಯೂ ಆ ದೇವರನ್ನೇ ಭಾವಿಸಿರಿ, ನೋಡಿರಿ ; ಆ ದೇವರೇ ನಕ್ಷತ್ರಗಳಲ್ಲಿಯೂ ಚಂದ್ರನಲ್ಲಿಯೂ ಇದ್ದು ನಿಮ್ಮನ್ನು—ನಮ್ಮನ್ನು ನೋಡುತ್ತಿಲ್ಲವೆ ? " ಎಂದು ಹೇಳಿದಳು.

ಆ ಮಹಾಮಾತೆಯ ಬೋಧೆಯನ್ನು ಕೇಳಿ ಆ ಮಹಾತ್ಮನ ಕಣ್ಣು ತೆರೆಯಿತು ; ಅವನ ಮನಸ್ಸಿನಲ್ಲಿ ವಿವೇಕವು ಮಿಂಚಿತು ; ವೈರಾಗ್ಯವು ಹೃದಯದಲ್ಲಿ ಉದಿಸಿತು. ಅವನು ವಿಷಯಮೋಹವನ್ನೂ ಸಂಸಾರದ ಆಸಕ್ತಿಯನ್ನೂ ಕಾಮಾದಿಗಳನ್ನೂ ಮೀರಿ ಮೇಲೇರಿದನು. ಮೊದಲು ತನ್ನ ಹೆಂಡತಿಯಲ್ಲಿ ಅಸಾಧಾರಣ ಪ್ರೇಮದಿಂದಿದ್ದ ಈ ಸಾಧುವು ಪ್ರಪಂಚದ ಎಲ್ಲಾ ವಸ್ತುಗಳಲ್ಲಿಯೂ ತನ್ನ ಇಷ್ಟದೇವನನ್ನು ದಿವ್ಯತೆಯನ್ನು—ಕಂಡನು. ಪರಮಾತ್ಮ ಪ್ರೇಮದಿಂದ ಹುಚ್ಚನಾಗಿದ್ದ ಈ ಮಹಾಭಕ್ತನು ಒಂದುದಿನ ಒಂದು ಅಡವಿಯಲ್ಲಿ ಹೋಗುತ್ತಿದ್ದನು. ಅಲ್ಲಿ ಸುಂದರವಾದ ಒಂದು ದೇವದಾರು ವೃಕ್ಷವನ್ನು ಕೊಡಲಿಯಿಂದ ಕಡಿಯುತ್ತಿದ್ದ ಒಬ್ಬ ಮನುಷ್ಯನನ್ನು ಆ ಸಾಧುವು ನೋಡಿ, ತನಗೆ ಆ ಏಟುಗಳು ಬೀಳುತ್ತಿರುವಂತೆ ಮನಸ್ಸಿಗೆ ನೋವಾಗಿ, ಮೂರ್ಛೆಗೊಂಡಂತಾದನು. ಅವನು ಸ್ವಲ್ಪ ಚೇತರಿಸಿಕೊಂಡು ಆ ಮನುಷ್ಯನಲ್ಲಿಗೆ ಹೋಗಿ, "ಅಪ್ಪ, ಈ ನಿನ್ನ ಕೊಡಲಿ ಏಟುಗಳು ನನ್ನ ಎದೆಗೇ ಬೀಳುತ್ತಿರುವಂತೆ ನೋವಾಗುತ್ತಿದೆ. ದಯವಿಟ್ಟು ಆ ಮರವನ್ನು ಕಡಿಯಬೇಡ" ಎಂದು ಬೇಡಿದನು. "ಅದು ಹೇಗೆ ಸ್ವಾಮಿ ?" ಎಂದು ಅವನು ಕೇಳಿದನು. ಆ ಮಹಾತ್ಮನು ಅವನನ್ನು ಕುರಿತು, "ಓ, ನನ್ನಪ್ಪಾ, ಈ ಮನೋಹರ ದೇವದಾರು ವೃಕ್ಷವೇ ನನ್ನ ದೇವರು ; ಇದರಲ್ಲಿ ನನಗೆ ಅತ್ಯಂತ ಪ್ರಿಯನಾದ ನನ್ನ ದೇವರನ್ನು ಕಾಣುತ್ತಿದ್ದೇನೆ. ಇದನ್ನು ಕಡಿಯಬೇಡ, ನೋಯಿಸಬೇಡ ; ನನ್ನನ್ನೇ ಕಡಿದಂತೆ, ನೋಯಿಸಿದಂತೆ ಆಗುತ್ತದೆ. " ಎಂದು ಹೇಳಿದನು.

ದೇವರೇ ಅವನಿಗೆ ವಧುವೂ ಪತಿಯೂ ಮಗುವೂ ತಾಯಿಯೂ ಸಹೋದರಿಯೂ ಸಹೋದರನೂ ಎಲ್ಲವೂ ಆದನು. ಅವನು ತನ್ನ ಎಲ್ಲಾ ಶಕ್ತಿಯನ್ನೂ ಪ್ರೇಮವನ್ನೂ ದೇವರ ಪಾದದಲ್ಲಿ ಸಮರ್ಪಿಸಿದನು; ಆದ್ದರಿಂದಲೇ ಅವನು ಮರಕಡಿಯುವ ಮನುಷ್ಯನಿಗೆ "ಅಯ್ಯೋ ಅಪ್ಪ, ನನ್ನ ದೇವರನ್ನು ಕಡಿಯುವದನ್ನು ನಾನು ಸಹಿಸಲಾರೆ" ಎಂದನು.

ಒಂದುದಿನ ಒಬ್ಬ ಬೇಟೆಗಾರನು ಒಂದು ಜಿಂಕೆಯನ್ನು ಬೇಟೆಯಾಡುವ ದರಲ್ಲಿದ್ದನು. ಅಷ್ಟರಲ್ಲಿ ಈ ಮಹಾತ್ಮನು ಅದನ್ನು ನೋಡಿ, ಓಡಿ ಹೋಗಿ ಅವನ ಪಾದಗಳಮೇಲೆ ಬಿದ್ದು "ಓ ನನ್ನಪ್ಪ, ಈ ಜಿಂಕೆಯನ್ನು ಕೊಲ್ಲಬೇಡ; ಇದನ್ನು ಉಳಿಸು, ಕೈಬಿಡು. ಇದರ ಸುಂದರವಾದ ಕಣ್ಣುಗಳೊಳಗಿಂದ ನನ್ನ ದೇವರೇ ನಮ್ಮನ್ನು ನೋಡುತ್ತಿದ್ದಾನೆ; ನೋಡು; ಅದನ್ನು ಕೊಲ್ಲುವದಕ್ಕೆ ಬದಲಾಗಿ ಈ ನನ್ನ ಶರೀರವನ್ನು ದೇವರ ಹೆಸರಿನಲ್ಲಿ ಕೊಲ್ಲು; ಇದನ್ನು ಬಲಿಗೊಡು; ಈ ಶರೀರವನ್ನು ಕೊಂದರೂ ನಾನು ಸಾಯುವದಿಲ್ಲ. ಆದರೆ ಈ ನನ್ನ ದೇವರನ್ನು ಕೊಲ್ಲಬೇಡ; ಇದರ ಜೀವದಾನ ಮಾಡು." ಎಂದು ಹಲವು ಬಗೆಯಿಂದ ಬೇಡಿದನು.

ಈ ಪ್ರಪಂಚದಲ್ಲಿ ನಿಮಗೆ ತೋರುವ ಎಲ್ಲಾ ಆಕರ್ಷಣೆಯೂ ನಿಜವಾದ ದೇವತ್ವದ ತೇಜಸ್ಸಲ್ಲದೆ ಬೇರೆಯಲ್ಲ. ನಿಮ್ಮ ಪ್ರೇಯಸಿಯಲ್ಲಿ ಕಾಣುವ ಸತ್ಯಸ್ವರೂಪ ದೇವರ ಆಕರ್ಷಕಸೌಂದರ್ಯವೇ ಪರ್ವತಗಳಲ್ಲಿಯೂ ಅರಣ್ಯಗಳಲ್ಲಿಯೂ ನದಿ ಗಳಲ್ಲಿಯೂ ಬೇರೊಂದು ರೂಪದಿಂದ, ವೇಷದಿಂದ, ಉಡುಗೆಯಿಂದ ತೋರುತ್ತದೆ. ಇದನ್ನು ಅರಿಯಿರಿ; ಹಾಗಾದರೆ, ಪ್ರಾಪಂಚಿಕವಾದ ಎಲ್ಲಾ ಕಾಮಮೋಹಗಳನ್ನೂ ನೀವು ಜಯಿಸುತ್ತೀರಿ. ಪ್ರಾಪಂಚಿಕ ಬಯಕೆಗಳನ್ನು ಆಧ್ಯಾತ್ಮಿಕವಾಗಿ ಉಪಯೋಗಿ ಸುವ ರೀತಿಯೇ ಹೀಗೆ. ಇಲ್ಲವಾದರೆ, ಆಧ್ಯಾತ್ಮಿಕ ವಿನಾಶಹೊಂದುತ್ತೀರಿ; ಪಾಪಿಗಳಾಗುತ್ತೀರಿ. ಆದರೆ ಪ್ರಾಪಂಚಿಕ ಬಯಕೆಗಳನ್ನೇ ಸರಿಯಾದ ರೀತಿಯಲ್ಲಿ ಉಪಯೋಗಿಸಿ, ಉನ್ನತಿಗೊಳಿಸುವದಾದರೆ, ಅದೇ ಕರ್ಮಗಳೇ ಪುಣ್ಯಕರಗಳಾಗುತ್ತವೆ

**ಪ್ರಶ್ನೆ**—ಅಪೂರ್ಣತೆಯಿಂದ ಪೂರ್ಣತೆಗೆ ಕ್ರಮವಾಗಿ ನಾವು ಮೇಲೆರುತ್ತೇವೆ, ಎನ್ನುವದೇ ವಿಕಾಸನಿಯಮದ ವಾದವಾಗಿರವದರಿಂದ ಅದು ಜನ್ಮಾಂತರವನ್ನು ಸಮರ್ಥನಮಾಡಿ ತೋರಿಸುವದೆ ?

**ಉತ್ತರ**—ವಿಕಾಸ ನಿಯಮಕ್ಕೆ 'ಅನುಸಾರವಾದ ಜನ್ಮಾಂತರವು ಮೊದಲಿ

ನಿಂದಲೂ ಮುಂದು ಮುಂದುವರಿಯುವದೇ ಹೊರತು ವಕ್ರವಾಗಿ ಹಿಮ್ಮೆಟ್ಟುವದಿಲ್ಲ. ಹಿಂದಿನ ದಿನದ ಉದಾಹರಣೆಯಲ್ಲಿ ಒಬ್ಬ ಮನುಷ್ಯನು ತನ್ನನ್ನು ತಾನು ಹಂದಿಯಾಗಿ ಮಾಡಿಕೊಳ್ಳಬಹುದೆಂದು ಹೇಳಿದ್ದು ಕೇವಲ ಊಹೆ, ಕಲ್ಪನೆ. ಆಗ ಆ ಪ್ರಶ್ನೆಯ ಒಂದೇ ಮುಖವನ್ನೇ ವಿಚಾರಮಾಡಿತ್ತು. ಆದರೆ ಒಂದು ಮಹತ್ವಾದ ಪ್ರಶ್ನೆಯನ್ನು ವಿಚಾರಮಾಡುವಾಗ, ಅದರ ಎಲ್ಲಾ ಅಂಶಗಳನ್ನೂ ತೆಗೆದುಕೊಳ್ಳಬೇಕು.

ವಿದ್ಯಾರ್ಥಿಗಳಿಗೆ (Dynamics) ಗತಿವಿಜ್ಞಾನವನ್ನು ಬೋಧಿಸುವಾಗ, ಬೇರೆ ನಿಯಮಗಳು ಆ ಕಾಲಕ್ಕೆ ನಿಶ್ಶಬ್ದವಾಗಿ-ನಿಷ್ಕ್ರಿಯವಾಗಿ-ಇವೆಯೋನೋ ಎನ್ನುವಂತೆ, ಕ್ರಿಯೆ ಮತ್ತು ಪ್ರತಿಕ್ರಿಯೆಗಳ (Action and Reaction) ನಿಯಮವನ್ನು ತೆಗೆದುಕೊಳ್ಳುತ್ತೇವೆ. ಆದರೆ, ಅನಂತರ ಅದನ್ನೇ ಮುಂದುವರಿದು ಹೇಳಿಕೊಡುವಾಗ, ಮಿಕ್ಕ ಎಲ್ಲಾ ನಿಯಮಗಳನ್ನೂ ತೆಗೆದುಕೊಳ್ಳಬೇಕಾಗುತ್ತದೆ. ಆದ್ದರಿಂದ ಹಿಂದಿನದಿನ ಸಮಯವಿಲ್ಲದ್ದಕ್ಕಾಗಿ ಆ ಪ್ರಶ್ನೆಯ ಒಂದು ಮುಖವನ್ನು ಮಾತ್ರ ತೆಗೆದುಕೊಂಡಿತ್ತು. ಈಗ ಇನ್ನೊಂದು ಮುಖವನ್ನು ತೆಗೆದುಕೊಳ್ಳಬೇಕು.

ಇವತ್ತು ಒಬ್ಬ ಮನುಷ್ಯನು ಹಿಂದಿರುಗುವದಕ್ಕೆ ಪ್ರಯತ್ನ ಮಾಡಬಹುದು, ಅವನು ಕೀಳು ಪ್ರಾಣಿಯ ಜೀವನವನ್ನು ನಡೆಸುವದಕ್ಕೆ ತನ್ನ ಎಲ್ಲಾ ಪ್ರಯತ್ನವನ್ನೂ ಮಾಡಬಹುದು. ಅವನು ತನ್ನ ಮನಸ್ಸಿನಲ್ಲಿರುವ ಹೆಚ್ಚು ಉನ್ನತವೂ ಉತ್ತಮವೂ ಹೆಚ್ಚು ಸೂಕ್ಷ್ಮವೂ ಆದ ಎಲ್ಲಾ ಭಾವನೆಗಳನ್ನೂ ಹೊರಗೆ ತಳ್ಳುವದಕ್ಕೆ ಪ್ರಯತ್ನ ಮಾಡಬಹುದು ; ಅವನು ತನ್ನನ್ನು ತಾನು ಮಂಗನನ್ನಾಗಿಯೂ ತನ್ನ ಎಲ್ಲಾ ಕಾಮಗಳನ್ನೂ ಪಶುಕಾಮಗಳನ್ನಾಗಿಯೂ ತನ್ನನ್ನು ತಾನು ಕೇವಲ ಪಶುವನ್ನಾಗಿಯೂ ಮಾಡಿಕೊಳ್ಳುವದರಲ್ಲಿ ಅವನು ಯಸಸ್ವಿಯಾದರೆ, ಮುಂದಿನ ಜನ್ಮದಲ್ಲಿ ಮಂಗನಾಗಿಯೇ - ಸಹಜವಾಗಿ - ಹುಟ್ಟಬಹುದು. ಆದರೆ ಮನುಷ್ಯನು ಹಾಗೆ ಮಾಡುವದು ಸಾಧ್ಯವಲ್ಲ. ಬೇರೆ ಶಕ್ತಿಗಳು, ಅವನು ಹಾಗೆ ಮಾಡದಂತೆ ತಡೆ ಹಿಡಿದು, ತಪ್ಪಿಸುತ್ತವೆ. ಈಗ, ಆ ಶಕ್ತಿಗಳು ಯಾವವು ? ಕೆಳಗೆ ಯಾವರೀತಿಯಿಂದಲೂ ಬೀಳದಿರುವದಕ್ಕೆ, ಹಿಮ್ಮೆಟ್ಟದಿರುವದಕ್ಕೆ ವ್ಯಥೆ, ವ್ಯಸನ, ಕ್ಲೇಶ, ಸಂಕಟ ಸಂತಾಪ, ದುಃಖ, ತೊಂದರೆ, ನೋವು ಇವೇ ಮೊದಲಾದವುಗಳು ನಂಬಿಕೆಯಾದ ಭದ್ರವಾದ ಶಕ್ತಿಗಳು ಈ ಶಕ್ತಿಗಳು ನೀವು ಬೀಳುವದಕ್ಕೆ ಅವಕಾಶಕೊಡುವದಿಲ್ಲ. ಹೀಗೆ ಜೀವನು ಮುಂದೆ ಮುಂದೆ ನಡೆಯಬೇಕು. ಆದ್ದರಿಂದ ನಿತ್ಯ ಪ್ರಯತ್ನವೂ ನಿರಂತರ ಹೋರಾಟವೂ ಅವಶ್ಯವಾಗಿವೆ. ನಿಮ್ಮ ಹೃದಯಗಳನ್ನು ಕ್ಲೇಶವೂ, ವ್ಯಥೆಯೂ ನೋವೂ ತೊಂದರೆಯೂ ದುಃಖವೂ ಚಿಂತೆಯೂ ಕಷ್ಟವೂ ಉದ್ರೇಕವೂ

ಪೇಚಾಟವೂ ಮುತ್ತಿ ಮುತ್ತಿ ಪೀಡಿಸುತ್ತಿರುವಾಗ ನಿಮ್ಮ ಮನಸ್ಸಿನಲ್ಲಿಯೂ ದೇಹಗಳಲ್ಲಿಯೂ ನಡೆಯುತ್ತಿರುವ ಬಹುಬಗೆಯ ಹೆಣಗಾಟವೂ ಹೋರಾಟವೂ ನಿಮ್ಮನ್ನು ಮುಂದುವರಿಯುವಂತೆ, ಮೇಲೇರುವಂತೆ ಮಾಡುತ್ತವೆ. ಈ ಶಕ್ತಿಗಳ ಮೂಲಕವೇ ನೀವು ಮುನ್ನಡೆಯಬೇಕು. ನಮ್ಮಲ್ಲಿರುವ ವಿರುದ್ಧ ಕಾಮನೆಗಳ ಪರಸ್ಪರ ಸಂಘರ್ಷದಿಂದಲೇ ತಿಕ್ಕಾಟದಿಂದಲೇ-ಮನಸ್ಸಿನಲ್ಲಿ ಹೋರಾಟವುಂಟಾಗುವದೆಂದು ಮೊನ್ನೆ ತೋರಿಸಿದೆ.

ಕೆಲವು ಸಂದರ್ಭಗಳು ಒಬ್ಬನಿಗೆ ಹಿತವಾಗಿರಬಹುದು, ಇನ್ನೊಬ್ಬನಿಗೆ ಅಹಿತವಾಗಬಹುದು. ಉದಾಹರಣೆಗಾಗಿ ತಿಂಗಳಿಗೆ ಒಂದು ಸಾವಿರ ರೂಪಾಯಿ ಸಂಬಳ ಬರುತ್ತಿದ್ದವನಿಗೆ ಐನೂರು ರೂಪಾಯಿಗೆ ಇಳಿಸಿದರೆ, ಆ ಐನೂರು ರೂಪಾಯಿಯು ಅವನಿಗೆ ಸಂಕಟಕ್ಕೂ ಕಷ್ಟಕ್ಕೂ ಕಾರಣವಾಗುತ್ತದೆ; ಆದರೆ ತಿಂಗಳಿಗೆ ಒಂದುನೂರು ರೂಪಾಯಿ ಸಂಬಳ ಬರುತ್ತಿದ್ದವನಿಗೆ ತಿಂಗಳಿಗೆ ಐನೂರು ರೂಪಾಯಿ ಬರುವ ಸ್ಥಾನಕ್ಕೆ ಏರಿಸಿದರೆ, ಆ ಸ್ಥಾನವು ಅವನಿಗೆ ಸ್ವರ್ಗದೋಪಾದಿಯಲ್ಲಿ ಆಗುತ್ತದೆ. ಅದು ಅವನಿಗೆ ಸುಖ-ಸಂತೋಷ - ಶಾಂತಿಗಳ ಮೂಲವಾಗುತ್ತದೆ. ಹೀಗೆ ಯಾವದೊಂದು ಸ್ಥಾನವೂ ಸ್ವತಃ ಒಳ್ಳೆಯ ಸ್ಥಿತಿಯೆಂದೂ ಕೆಟ್ಟ ಸ್ಥಿತಿಯೆಂದೂ ಹೇಳುವದಕ್ಕೆ ಆಗುವದಿಲ್ಲ. ಎಲ್ಲಾ ಕಾರ್ಯಗಳೂ ಸ್ವತಃ ಪುಣ್ಯವೂ ಅಲ್ಲ ಪಾಪವೂ ಅಲ್ಲ ಹೇಗೋ, ಹಾಗೆ ಎಲ್ಲಾ ಸ್ಥಾನಗಳೂ ಸ್ವತಃ ಒಳ್ಳೆಯವೂ ಅಲ್ಲ; ಕೆಟ್ಟವೂ ಅಲ್ಲ. ಹೊರಗಿನ ಸನ್ನಿವೇಶಗಳಿಗೂ ಸಂದರ್ಭಗಳಿಗೂ ಇರುವ ನಿಮ್ಮ ಸಂಬಂಧವನ್ನು ಅವಲಂಬಿಸಿ, ಸ್ಥಿತಿಗತಿಗಳು ವ್ಯತ್ಯಾಸವಾಗುತ್ತವೆ. ಇದು ಮುಂದುವರಿದ ಸ್ಥಿತಿಯಾದರೆ ನೀವು ಸುಖಿಗಳು; ಹಾಗಲ್ಲವಾದರೆ ನಿಮಗೆ ದುಃಖವೂ ಕಷ್ಟವೂ ಆಗುತ್ತದೆ. ಆದ್ದರಿಂದ ನಿಮ್ಮಲ್ಲಿ ಬಗೆ ಬಗೆಯ ಬಯಕೆಗಳಿರುವದರಿಂದ ಇವು ನಿಮ್ಮ ಪುರೋಭಿವೃದ್ಧಿಯನ್ನು ಸಾಧಿಸುತ್ತವೆ. ಇದು ಹಿಂದಿನ ಜನ್ಮಗಳಿಂದ ಬಂದುದಲ್ಲ. ನೀವು ಜಡತಾ ನಿಯಮವನ್ನು (Inertia) ಮೀರುವದಕ್ಕೆ ಇವು ಸಹಾಯಮಾಡುತ್ತವೆ. ಜಡತೆಯೇ ಪ್ರಬಲವಾಗಿ ಅಧ್ಯಾತ್ಮಶಕ್ತಿಯು ದುರ್ಬಲವಾದರೆ ನೀವು ಕಷ್ಟಪಡಬೇಕಾಗುತ್ತದ. ಈ ಕಷ್ಟವೂ ಈ ನೋವೂ ಒಂದು ಬಗೆಯ ಆಧ್ಯಾತ್ಮಿಕ ಉದ್ಬೋಧಕವಾಗುತ್ತವೆ. ಅವು ನಿಮ್ಮ ತಪ್ಪನ್ನು ತಿದ್ದಿ ಸರಿಪಡಿಸುತ್ತವೆ; ನಿಮ್ಮ ಹೆಚ್ಚು ಉತ್ತಮವಾದ ಸ್ವಭಾವವನ್ನು ನೆನಪು ಕೊಡುತ್ತವೆ; ನಿಮ್ಮ ಆಧ್ಯಾತ್ಮಿಕ ರೋಗವನ್ನು ಗುಣಪಡಿಸುತ್ತವೆ.

Pain and suffering are blessings of this world; if

there were no pain or suffering, there would be no progress. Thus Vedanta says that through this law of suffering, there is no fear of your falling. Think not that you will ever be dragged down, that you will ever fall back

**ನೋವೂ ಮತ್ತು ಕಷ್ಟವೂ ಪೇಚಾಟವೂ ಈ ಜಗತ್ತಿನ ವರ ಪ್ರಸಾದಗಳು; ಇಲ್ಲಿ ನೋವೂ ಸಂಕಟವೂ ಸಂಕಷ್ಟವೂ ಇಲ್ಲವಾಗಿದ್ದರೆ ಅಭಿವೃದ್ಧಿಯೇ ಇರುತ್ತಿರಲಿಲ್ಲ, ಮುನ್ನಡೆಯೇ ಇರುತ್ತಿರಲಿಲ್ಲ. ಹೀಗೆ ಈ ಸಂಕಷ್ಟನಿಯಮದ ಅನುಗ್ರಹದಿಂದ, ನೀವು ಬೀಳುವ ಭಯವೇನೂ ಇಲ್ಲ ಎಂದು ವೇದಾಂತವು ಹೇಳುತ್ತದೆ. ನೀವು ಎಂದಾದರೂ ಕೆಳಗೆ ಎಳೆಯಲ್ಪಡ ಬಹುದೆಂದೂ ಹಿಂದೆ ಬೀಳಬಹುದೆಂದೂ ಯೋಚಿಸಬೇಡಿ; ಭಯಪಡಬೇಡಿ.**

ನಿಮಗಿಂತಲೂ ಬಹಳ ಮುಂದುವರಿದಿರುವ ಯಾರನ್ನಾದರೂ ಕಂಡರೆ ನೀವು ಅಸೂಯೆಪಡಬಾರದು; ಏಕೆಂದರೆ ನೀವು ಮುಂದೆ ಎಂದಾದರೊಂದು ದಿನ ಅಲ್ಲಿಗೆ ಸೇರುವಿರಿ; ಮತ್ತು ನಿಮಗಿಂತಲೂ ಬಹಳ ಹಿಂದಿರುವ ಅಥವಾ ಕೆಳಗಿರುವ ಯಾರನ್ನಾದರೂ ಕಂಡರೆ, ಅವರನ್ನು ತಾತ್ಸಾರದಿಂದ ಕೀಳಾಗಿ ಕಾಣಬಾರದು; ಏಕೆಂದರೆ ಅವರೂ ಮುಂದೆ ಎಂದಾದರೊಂದು ದಿನ ಈಗ ನೀವಿದ್ದಲ್ಲಿಗೆ ಬರುವರು. ನೀವು ಹತ್ತು ಜನ್ಮಗಳ ಹಿಂದೆ ಎಲ್ಲಿದ್ದಿರೋ (ಯಾವ ಸಂಸ್ಕಾರ ಪಡೆದಿದ್ದಿರೋ) ಅಲ್ಲಿ ಕೆಲವು ಜನರು ಇವತ್ತಿದ್ದಾರೆ; ಮತ್ತು ನೀವು ಹತ್ತು ಜನ್ಮಗಳ ಮುಂದೆ ಎಲ್ಲಿರುವಿರೋ ಅಲ್ಲಿ ಕೆಲವು ಜನರು ಇವತ್ತಿದ್ದಾರೆ. ನಿಮ್ಮ ಪ್ರೇಮವು ಸರ್ವರಲ್ಲಿಯೂ ಸಮವಾಗಿರಬೇಕು ಯಾವುದನ್ನೂ ಯಾರನ್ನೂ ಕಡೆಗಾಣಬಾರದು, ಕೀಳಾಗಿ ಕಾಣಬಾರದು. ನಿಮಗಿಂತಲೂ ಬಹಳ ಮೇಲಿರತಕ್ಕವರನ್ನು ನೋಡಿ ನೀವು ಹೊಟ್ಟೆ ಕಿಚ್ಚು ಪಡ ಬೇಡಿ; ಏಕೆಂದರೆ ನೀವೂ ಉಚಿತವಾದ ಕಾಲದಲ್ಲಿ ಅಲ್ಲಿರುತ್ತೀರಿ

ಹೀಗೆ ವೇದಾಂತವು ಯೋಗ್ಯವೂ ಸತ್ಯವೂ ಆದ ತಿಳಿವಳಿಕೆಯನ್ನು ಕೊಟ್ಟು ಎಲ್ಲರ ಮನಸ್ಸನ್ನೂ ಸರಿಪಡಿಸುತ್ತದೆ, ಎಲ್ಲರಿಗೂ ಶಾಂತಿಯನ್ನೂ ಸುಖವನ್ನೂ ಅನುಗ್ರಹಿಸುತ್ತದೆ.

ಪ್ರಶ್ನೆ --ದುಃಖನಿಯಮದ ಮೂಲಕವಾಗಿ ನಾವು ಮುಂದುವರಿಯಲೇ ಬೇಕೆಂದು ಬಲಾತ್ಕರಿಸಲ್ಪಟ್ಟರೆ ಆನುವಂಶಿಕ ನಿಯಮದಲ್ಲಿ ಏನಾದರೂ ಸತ್ಯತೆ

ಇದೆಯೆ ? ತಂದೆತಾಯಿಗಳಲ್ಲಿರುವ ರೋಗಗಳು ಮಕ್ಕಳಿಗೂ ಬಾಧಿಸುತ್ತವೆ. ಇದಕ್ಕೆ ಸಮಾಧಾನವೇನು ?

ಉತ್ತರ—ನಮ್ಮ ತಂದೆ ತಾಯಿಗಳನ್ನು ನಾವೇ ಮಾಡಿಕೊಳ್ಳುತ್ತೇವೆ ಎಂದು ನಿನ್ನೆ ತಿಳಿಸಿದ್ದು ನಿಮಗೆ ನೆನಪಿರಬಹುದು. ಇಲ್ಲಿರುವ ಮನುಷ್ಯನಿಗೆ ಒಂದು ವಿಶಿಷ್ಟ ಬಗೆಯ ರೋಗವಿದೆ ಎಂದು ಇಟ್ಟುಕೊಳ್ಳೋಣ ಜನರು ಹೇಳುವಂತೆ ಅದು ಕೆಟ್ಟರೋಗವೆಂದೂ ಕಲ್ಪಿಸೋಣ. ಆದರೆ ಕೆಟ್ಟ, ಕೇಡು ಎನ್ನುವ ಶಬ್ದ ಅನಿಶ್ಚಿತ ವಾದುದು. ಏಕೆಂದರೆ, ಒಬ್ಬರಿಗೆ ಒಂದು ಸಂದರ್ಭದಲ್ಲಿ ಕೆಟ್ಟದ್ದೆಂದು ತೋರುವದು ಇನ್ನೊಬ್ಬರಿಗೆ, ಒಳ್ಳೆಯದೆಂದು ತೋರಬಹುದು , ಅಥವಾ ಅವರಿಗೇ ಬೇರೊಂದು ಸಂದರ್ಭದಲ್ಲಿ ಅದು ಒಳ್ಳೆಯದೆಂದು ತೋರಬಹುದು. ಒಳ್ಳೆಯವರ ವಿಚಾರವೂ ಹೀಗೆಯೇ ಇದೆ ಅಲ್ಲದೆ ನಕಲವೂ ದೇವರೇ ಆಗಿರುವಾಗ ಯಾವದನ್ನು ಕೆಟ್ಟದ್ದೆಂದು ಹೇಳಬೇಕು ? ಇರಲಿ. ಈ ಮನುಷ್ಯನ ಕಾಯಿಲೆಗೆ ಇವನ ಅತಿಯಾದ ವಿಷಯಾಸಕ್ತಿಯೇ, ಪಾಶವೀ ಕಾಮವೇ, ಮೃಗದ ಹಂಬಲವೇ ಹಸಿವೇ ಕಾರಣ ವಾಗಿದೆ. ಈಗ ಇಂಥಾ ಮನುಷ್ಯ ಸತ್ತರೆ, ಇವನು ತನ್ನ ಪಾಶವೀ ಕಾಮಗಳ ತೃಪ್ತಿಗೆ ಯಾವ ಕ್ಷೇತ್ರ ಬೀಜಗಳೂ (ತಾಯಿ ತಂದೆಗಳು), ಸನ್ನಿವೇಶಗಳೂ ಸಂದರ್ಭ ಗಳೂ ನಹಾಯವಾಗುವವೋ ಎಲ್ಲಿ ಇವುಗಳು ನಫಲವಾಗುವದಕ್ಕೆ ಮುಂಚೆ ಈ ಕಾಮಗಳೇ ತೋರಿಕೊಳ್ಳುವವೋ ಅಂಥಾ ಸ್ಥಾನವನ್ನೇ ಆರಿಸಿ ಕೊಳ್ಳುತ್ತಾನೆ.

ಆಧ್ಯಾತ್ಮಿಕ ಸ್ನೇಹಸಂಬಂಧ-ಆಕರ್ಷಣೆಗಳ ನಿಯಮದಂತೆ ಅವನು ಅಂಥಾ ಗುಣಸ್ವಭಾವದ ಜನರಲ್ಲಿಗೇ ಆಕರ್ಷಿಸಲ್ಪಡುತ್ತಾನೆ. ಅವನಲ್ಲಿರುವ ವಿಶಿಷ್ಟಕಾಮನೆ ಗಳು ನಫಲವಾಗುವದಕ್ಕೆ ಅನುಕೂಲ ಸಾಧನವಾದ ಮಿದುಳು, ಶರೀರೇಂದ್ರಿಯಗಳು ಆ ಪ್ರಕೃತಿ ಉಳ್ಳ, ತಂದೆ ತಾಯಿಗಳಲ್ಲಿ (ಆಹಾರದ ಮೂಲಕ) ಅವನು ಪ್ರವೇಶಮಾಡಿ ಅವರಲ್ಲಿ ಹುಟ್ಟುತ್ತಾನೆ ಅವನು ತನ್ನ ಇಚ್ಛೆಯಂತೆ ನಡೆದುಕೊಳ್ಳುವದಕ್ಕೆ ಅನು ಕೂಲವಾದ ಭೌತಿಕ ಶರೀರದ ವಿಶಿಷ್ಟ ಬಗೆಯ ನೈಸರ್ಗಿಕಪ್ರವೃತ್ತಿಯನ್ನು ಕೊಡುವ ಮಟ್ಟಿಗೆ ಆನುವಂಶಕ ನಿಯಮವು ನಿಜವಾಗುತ್ತದೆ. ದೃಷ್ಟಾಂತಕ್ಕಾಗಿ, “ಒಂದು ಪುಸ್ತಕವನ್ನು ಪ್ರಕಟಣೆಮಾಡಬೇಕೆಂದು ನನ್ನ ಯೋಜನೆ–ಯೋಜನೆ–ಇದೆ.” ಎಂದು ಅವನು ಹೇಳಬಹುದು ಅದಕ್ಕಾಗಿ ಅವನು, ಒಂದು ಮುದ್ರಣಾಲಯಕ್ಕೆ ಹೋದರೆ, ಅವರು ಅವನ ಕಾರ್ಯಕ್ಕೆ ಬೇಕಾದ ಯಂತ್ರವನ್ನು ಇತರ ಸಾಮಗ್ರಿಗಳನ್ನೂ ಒದಗಿಸಿ ಕೆಲಸವನ್ನು ಮಾಡಿಕೊಡುತ್ತಾರೆ. ವಂಶಪರಂಪರೆಗೆ ಅನುಗುಣವಾದ ಸ್ವಭಾವದ ನಿಯಮವು ಆ ಮುದ್ರಣಾಲಯದ ಕಾರ್ಯದಂತೆ ಬೇಡುವವನ ಬಯಕೆಗೆ ಸರಿಯಾದ

ಸಿದ್ಧಸಾಮಗ್ರಿಗಳನ್ನು ಒದಗಿಸುತ್ತದೆ: ಒಬ್ಬನು ಒಂದು ವೇಳೆ ಕೊಲೆಮಾಡಬೇಕೆಂದು ಬಯಸಬಹುದು ಇನ್ನೊಬ್ಬ ಮನುಷ್ಯನು ಅವನಿಗೆ ಒಂದು ಕರಾರಿಯನ್ನು ಕೊಡಬಹುದು. ಈ ಕರಾರಿಯಿಂದ ಅವನು ತನ್ನ ವೈರಿಯನ್ನು ಇರಿದು ಕೊಲೆಮಾಡಬಹುದು. ಆಗ, ಕರಾರಿಯನ್ನು ತನ್ನಕಾರ್ಖಾನೆಯಲ್ಲಿ ತಯಾರು ಮಾಡಿದವನಾಗಲಿ, ಅದನ್ನು ಕೊಲೆಗಡಿಕನಿಗೆ ಮಾರಿದವನಾಗಲಿ ಅಪರಾಧಿಗಳಾಗುವದಿಲ್ಲ. ಕೊಲೆಮಾಡಿದವನು ಮಾತ್ರ ಆ ಪಾಪಕರ್ಮಕ್ಕೆ ಹೊಣೆಯಾಗುತ್ತಾನೆ

ನಾವು ಬಯಸಿದ್ದರಿಂದ ಬೇಡಿದ್ದರಿಂದ ನಮ್ಮ ತಂದೆತಾಯಿಗಳು ನಮಗೆ ಈ ಮಿದುಳನ್ನೂ ದೇಹವನ್ನೂ ಕೊಟ್ಟಿದ್ದಾರೆ. ನಮಗೆ ಕೊಟ್ಟಿರುವ ದೇಹವು ರೋಗಿಯಾಗಿರಬಹುದು ಈಗ ಪ್ರಶ್ನೆಯೇನೆಂದರೆ, ಒಬ್ಬ ಮನುಷ್ಯನ ಬಯಕೆಗಳು ಸಫಲವಾಗಬೇಕಾದರೆ, ಅವನಿಗೆ ರೋಗಗ್ರಸ್ತವಾದ ಶರೀರವು ಬರಬಾರದಲ್ಲವೆ? ಎಂದು.

Well, these desires must be fulfilled and at the same time, we must give them up, this is the law

**“ ಒಳ್ಳೆಯದು, ಈ ಬಯಕೆಗಳು ಈಡೇರಬೇಕು, ಪೂರಯಿಸಬೇಕು; ಹಾಗೆಯೇ ನಾವು ಅವುಗಳನ್ನು ಬಿಟ್ಟು ಬಿಡಬೇಕು; ಇದೇ ಪ್ರಕೃತಿ ನಿಯಮ.”**

ಮನುಷ್ಯನು ತನ್ನ ಅದೃಷ್ಟಕ್ಕೆ ತಾನೇ ಒಡೆಯ. ನೀವು ಕೀಳು ಬಯಕೆಗಳನ್ನು ಬಿಟ್ಟು ಹೆಚ್ಚು ಮೇಲಾದ ಬಯಕೆಗಳನ್ನು ಆರಿಸಿಕೊಳ್ಳುವಿರೋ ಇಲ್ಲವೋ ಎನ್ನುವದಕ್ಕೆ ನೀವು ಸ್ವತಂತ್ರರು. ಈ ನೋವೂ ಸಂಕಷ್ಟವೂ ನಿಮ್ಮ ಸ್ವಾತಂತ್ರ್ಯವನ್ನು ಅಪಹರಿಸದೆ, ಬೆಳೆಸಬೇಕು. ಕಷ್ಟ—ಕ್ಲೇಶಗಳ ದೆಸೆಯಿಂದ ನಾವು ತಿಳಿದೋ ತಿಳಿಯದೆಯೋ ಹೆಚ್ಚು ಜಾಗರೂಕರೂ ಎಚ್ಚರಿಕೆಯುಳ್ಳವರೂ ಆಗುತ್ತೇವೆ. ಇದರಿಂದ ನಮ್ಮ ಸ್ವಂತ ಇಚ್ಛೆಯಿಂದಲೇ ಕೀಳಾದ ಬಯಕೆಗಳನ್ನು ಬಿಟ್ಟು ಮೇಲಾದ ಬಯಕೆಗಳನ್ನು ಹಿಡಿಯುತ್ತೇವೆ ಹೀಗೆ ನೋವೂ ಕಷ್ಟವೂ ನಮ್ಮ ಮೇಲೆ ಪ್ರಭುತ್ವ ನಡೆಸದೆ ನಮಗೆ ಸ್ವಾತಂತ್ರ್ಯವನ್ನೇ ಕೊಡುತ್ತವೆ.

ಕೀಳಾದ ಕಾಮಗಳು ಮೇಲುಗೈಯಾಗಿರುವ ಮನುಷ್ಯನ ಆ ಪ್ರಬಲ ಕಾಮಗಳು

ಸಫಲವೂ ಆಗಬೇಕಲ್ಲದೆ, ಅವನು ಅವನ್ನು ಬಿಡಲೂ ಬೇಕು - ಇದೇ ಪ್ರಕೃತಿನಿಯಮ. ನಿಮ್ಮಲ್ಲಿರುವ ಇಚ್ಛೆ ಎನ್ನುವರಾಜ, ಪ್ರಭುಶಕ್ತಿ, ತನ್ನ ಕಾಮಗಳ ತೃಪ್ತಿಸುಖಕ್ಕಾಗಿಯೂ ಮಹಿಮಾ ವೈಭವಗಳಿಗಾಗಿಯೂ ಕೇಳಿದ್ದಕ್ಕಾಗಿ ಅವುಗಳೂ ಈಡೇರಬೇಕು , ಆದರೆ ಇವುಗಳು ಕೈಗೂಡುತ್ತಿರುವಾಗ ನೋವೂ ವ್ಯಥೆಯೂ ಕಷ್ಟವೂ ಸಹ ಜೊತೆಗೇ ಒದಗುತ್ತವೆ. ಇವುಗಳು ನಿಮ್ಮನ್ನು ನಿಮ್ಮ ದೌರ್ಬಲ್ಯದಿಂದ ಬಿಡುಗಡೆ ಮಾಡುತ್ತವೆ ಹೀಗೆ ಅವನಿಗೆ ರೋಗವುಂಟುಮಾಡಿದ ಸುತ್ತಲ ಪರಿಸರಗಳು ಇಷ್ಟವಾಗದೆ, ಅಥವಾ ತಂದೆ ತಾಯಿಗಳಿಂದ ಬಂದ ರೋಗದಿಂದ ಆ ವಂಶವನ್ನೇ ಅವನು ದ್ವೇಷಿಸುವಂತಾಗಿ, ತನ್ನ ಸುತ್ತಲ ಪರಿಸ್ಥಿತಿಯನ್ನೂ ಅದರ ದೋಷಕ್ಕಾಗಿ ತಿರಸ್ಕರಿಸುವಂತಾಗುತ್ತದೆ ಹೀಗೆ ಇತ್ತಲಿಂದಲೂ ಅತ್ತಲಿಂದಲೂ ಎಡೆಬಿಡದೆ ಬೀಳುತ್ತಿರುವ ಏಟುಗಳಿಂದ ಅವನು ಮೆಲ್ಲ ಮೆಲ್ಲಗೆ ಕ್ರಮವಾಗಿ ಮೇಲೇರುತ್ತಾನೆ.

ಪ್ರಶ್ನೆ—ಸಾಮಾನ್ಯವಾಗಿ, ಕುಲಕ್ರಮಾನುಗತವಾಗಿ ಬರತಕ್ಕವುಗಳು ಎನಿಸಿಕೊಂಡಿರುವ ಕೀಳಾದ ಬಯಕೆಗಳ ಮತ್ತು ಬೇನೆಗಳ ವಿಷಯವಾಗಿ ಕೊಟ್ಟ ವಿವರಣೆ ಯೇನೋ ತಿಳಿದಂತಾಯಿತು. ಆದರೆ ಕ್ಷಯರೋಗದ ವಿಷಯವೇ ಬೇರೆಯೆಂದು ತಿಳಿಯುತ್ತೇನೆ ಏಕೆಂದರೆ ಇದರಲ್ಲಿ ಬಯಕೆಯ ಸಂಬಂಧವೇನೂ ಇಲ್ಲ. ಇದು ಜಿಹ್ವಾಚಾಪಲ್ಯದ ಫಲವೇ ಇರಬೇಕು.

ಉತ್ತರ—ಸಾಮಾನ್ಯವಾಗಿ ಮೇಲು, ಕೀಳು, ಪುಣ್ಯ, ಪಾಪ ಈ ಶಬ್ದಗಳು ಪೂರ್ಣವಿವರಣೆಯನ್ನು ಕೊಡುವದಿಲ್ಲ. ಜನರು ಸಾಮಾನ್ಯವಾಗಿ ಯಾವದನ್ನು ಒಳ್ಳೆಯದು, ಕೆಟ್ಟದ್ದು ಎನ್ನುತ್ತಾರೋ ವೇದಾಂತದ ದೃಷ್ಟಿಯಿಂದ ಅವು ಹಾಗಿರುವದಿಲ್ಲ.

ವೇದಾಂತದ ದೃಷ್ಟಿಯಲ್ಲಿ ಅತಿಯಾದ ಭೋಜನವೂ ಮತ್ತು ನಿಮ್ಮಲ್ಲಿ ಅಜೀರ್ಣಕ್ಕೆ ಕಾರಣವಾಗುವ ಅಹಿತವಾದ ಭೋಜನವೂ ನಿರುತ್ಸಾಹಕ್ಕೂ ಖೇದಕ್ಕೂ ಬಲಿಯಾಗುವಂತೆ ಮಾಡುವ ಅತ್ಯಾಹಾರವೂ ಎಲ್ಲಾ ಪಾಪಗಳ ಮೂಲವಾಗಿವ ಈ ಸಣ್ಣ ಐಬೇ, ದೋಷವೇ ಅನೇಕ ಪಾಪಗಳಿಗೆ ಮೂಲವಾಗುತ್ತದೆ ಅಜೀರ್ಣದ ಮೂಲಕ ನಿಮ್ಮ ಸಮಾಧಾನವನ್ನು ನೀವು ಕಳೆದುಕೊಂಡು ಸಿಟ್ಟಾಗುತ್ತೀರಿ ; ಇದರಿಂದ ಹಲವು ಬಗೆಯ ಪಾಪಗಳಿಗೆ ವಶವಾಗುತ್ತೀರಿ ವೇದಾಂತದೃಷ್ಟಿಯಿಂದ, ನಿಮ್ಮ ಪರಮಾನಂದಕ್ಕೆ - ಬ್ರಹ್ಮಾನಂದಕ್ಕೆ - ಯಾವದು ಅಡ್ಡಿಯಾಗುವದೋ, ಯಾವದು ಅದನ್ನು ಹಿಮ್ಮೆಟ್ಟಿಸುವದೋ ತಡಮಾಡುವದೋ ಅದೇ ಪಾಪ.

ಹೀಗೆ ನಿಮ್ಮ ಅನೇಕ ಪಾಪಗಳಿಗೆ ಮುಖ್ಯವಾಗಿ ನಿಮ್ಮ ಆಹಾರವೇ ಕಾರಣ. ಈ ವಿಷಯವನ್ನು ರಾಮನು ಎಷ್ಟು ಜೋರಾಗಿ ಒತ್ತಿ, ಮಹತ್ವಕೊಟ್ಟು ಹೇಳುತ್ತಾನೋ ಆ ರೀತಿಯಲ್ಲಿ ಬೇರೆ ಧರ್ಮದವರು ಹೇಳದಿರಬಹುದು; ಆದರೆ ಇದು ಬಹಳ ವಾಸ್ತವ, ನಮ್ಮ ಹೊಟ್ಟೆಯು, ಉದರವು ಹಗುರವಾಗಿದ್ದರೆ, ಅಥವಾ ನಾವು ಆರೋಗ್ಯವಾಗಿದ್ದರೆ, ನಮ್ಮ ಕೋಪವನ್ನು ನಾವು ಹತೋಟಿ ಯಲ್ಲಿಟ್ಟುಕೊಳ್ಳಬಹುದು, ನಮ್ಮ ಕಾಮಗಳನ್ನೂ ನಾವು ವಶದಲ್ಲಿಟ್ಟುಕೊಳ್ಳ ಬಹುದು; ನಮ್ಮ ಬಯಕೆಗಳನ್ನೂ ನಾವು ಸ್ವಾಧೀನದಲ್ಲಿಟ್ಟುಕೊಳ್ಳಬಹುದು ಎಂಬದನ್ನು ರಾಮನು ತನ್ನ ಸ್ವಂತ ಅನುಭವದಿಂದಲೂ ತನ್ನ ಪ್ರಿಯಮಿತ್ರರ ಅನುಭವದಿಂದಲೂ ನಿಮಗೆ ಹೇಳಬಲ್ಲನು

ಸಾವಿರಾರು ಆಕರ್ಷಕವಾದ ದುಷ್ಪ್ರೇರಣೆಗಳನ್ನು ಮೆಟ್ಟಿ ಮೀರಿ, ತನ್ನ ಕಾಮದಿಗಳನ್ನೆಲ್ಲಾ ಸ್ವಾಧೀನದಲ್ಲಿಟ್ಟುಕೊಂಡಿರುವ ಆದರ್ಶ ಸದ್ಗುಣಗಳುಳ್ಳ ಒಬ್ಬ ಮಹಾ ಸಂಯಮಿಯಾದ ಮನುಷ್ಯನು ಇವತ್ತು ಇಲ್ಲಿದ್ದಾನೆಂದು ತಿಳಿಯೋಣ ಇವತ್ತು ಚೊಕ್ಕ ಚಿನ್ನದಂಥ ಗುಣ ಶೀಲಗಳುಳ್ಳ ಈ ಋಷಿಸಮಾನನಾದ ಮನುಷ್ಯ ನನ್ನು ನೋಡಿ, ಜನರು ಅವನ ಇವತ್ತಿನ ವರ್ತನೆಯನ್ನು ವಿವೇಚಿಸಿ "ಓ, ಇವನು ಕ್ರಿಸ್ತನೇ ಸರಿ" ಎಂದು ಮೆಚ್ಚಿ ನುಡಿಯುಬಹುದು ಆದರೆ ನಾಳೆ ಅವನನ್ನು ನೋಡಿರಿ, ಪರಮ ನೀಚ, ಅಧಮಾಧಮಕಾಮಕ್ಕೆ ಇದೇ ಮನುಷ್ಯನೇ ಬಲಿಯಾಗುವ ಸಂಭವವಿದೆ

ಬೇಗ ಓಡೋಡಿ, ಹಾರಿ ತೀರ್ಮಾನಗಳಲ್ಲಿ ನಿಲ್ಲುವದಕ್ಕೆ ಜನರಿಗೆ ಬಹಳ ಆತುರ, ಕಾತರ ಯಾವನೊಬ್ಬನ ಹಣೆಯ ಮೇಲೆ "ಮಹಾತ್ಮ" ಎಂದು ಬರೆದು ಬಿಡಬೇಕು, ಇನ್ನೊಬ್ಬನ ಹಣೆಯ ಮೇಲೆ "ದುರಾತ್ಮ, ಪಾಪಿ, ಅಪರಾಧಿ" ಎಂದು ಬರೆದು ಬಿಡಬೇಕು, ಎಂದು ಅವರ ಹಂಬಲ ಆದರೆ, ವಾಸ್ತವವಾಗಿ ನೋಡಿದರೆ, ನಿನ್ನೆ ಸಜ್ಜನನಾಗಿದ್ದವನು ನಾಳೆ ದುರ್ಜನನಾಗುವ ಸಂಭವವಿದೆ, ಅಥವಾ ನಿನ್ನೆ ದುರ್ಜನನಾಗಿದ್ದವನು ನಾಳೆ ಸಜ್ಜನನಾಗಬಹುದಾದ ಸಂಭವವಿದೆ

ಛಾರ್ಲ್ಸ್‌ಡಿಕ್ಕನ್ಸ್ (Charles Dickens) ಬರೆದಿರುವ "ಎರಡು ನಗರಗಳ ಕತೆ" (A Tale of Two Cities) ಎಂಬ ಕಾದಂಬರಿಯಲ್ಲಿ ಸಿಡ್ನಿ ಕಾರ್ಲ್‌ಟನ್ (Sidney Carlton) ಎನ್ನುವವನನ್ನು ಅತ್ಯಂತ ಹೀನಪಾತ್ರವನ್ನಾಗಿ ಚಿತ್ರಿಸಿದ್ದಾನೆ; ಆದರೆ ಅವನ ಸಾವು ಅವನ ಎಲ್ಲಾ ದೋಷಗಳನ್ನೂ ಅಪರಾಧಗಳನ್ನೂ

ಪಾಪಮಯಸ್ವಭಾವವನ್ನೂ ತೊಡೆದು ಹಾಕಿ ಬಿಡುವಷ್ಟು ವೀರೋಚಿತವೂ ಸಾಹಸ ಮಯವೂ ಉದಾತ್ತವೂ ಭವ್ಯವೂ ಆಗಿದೆ. ರಷ್ಯದ ಪ್ರಸಿದ್ಧ ಕೌಂಟ್ ಟಾಲ್ ಸ್ಟಾಯಿಯು (Count Tolstoi) ಬರೆದಿರುವ ಒಂದು ಕಾದಂಬರಿಯಲ್ಲಿ ಅವನು ಒಂದು ಸ್ತ್ರೀಪಾತ್ರವನ್ನು ಚಿತ್ರಿಸಿದ್ದಾನೆ ಆದ್ಯಂತವಾಗಿ ಆಕೆಯನ್ನು ಅತ್ಯಂತ ಪಾಪಕರವಾದ ಕಾಮಾಸಕ್ತಿಯುಳ್ಳ ಸ್ತ್ರೀಯನ್ನಾಗಿ ವರ್ಣಿಸಿದ್ದಾನೆ; ಆದರೆ ಅವಳ ಅಂತ್ಯವು ನಾವು ನಮ್ಮ ಅಭಿಪ್ರಾಯವನ್ನು ಬದಲಾಯಿಸುವಷ್ಟು ಹೃದಯ ಸ್ಪರ್ಶಿಯಾಗಿದೆ.

ಲಾರ್ಡ್‌ಬೈರನ್ನನನ್ನು (Lord Byron) ಇಂಗ್ಲೆಂಡಿನಲ್ಲಿ ತಿರಸ್ಕಾರದ ಹುಯ್ಲೆಬ್ಬಿಸಿ ಓಡಿಸಿದರು, ರಸ್ತೆಗಳಲ್ಲಿ ಸಹ ಹಾದು ಹೋಗುವದಕ್ಕೆ, ನಡೆದಾಡು ವದಕ್ಕೆ ಅವನಿಗೆ ಅವಕಾಶಕೊಡುತ್ತಿರಲಿಲ್ಲ. ಅವನ ಇರುವಿಕೆಗೇ ಜನರು ಅಸಹ್ಯ ಪಟ್ಟುಕೊಳ್ಳುತ್ತಿದ್ದರು ಆದರೆ ಅವನ ಜೀವನದ ಕೊನೆಯ ದೃಶ್ಯಗಳು, ಇಂಗ್ಲಿಷ್ ಜನಾಂಗವು ಅವನನ್ನು ಪ್ರೀತಿಸುವಷ್ಟು ಉದಾತ್ತವೂ ಘನತೆಯುಳ್ಳದೂ ವೀರ ವರ್ತನೆಯದೂ ಆಗಿದ್ದಿತು ಆದರೆ ನಾವು ಯಾವಾಗಲೂ ಉದಾತ್ತವಾಗಿಯೋ ಶ್ಲಾಘ್ಯವಾಗಿಯೋ ಜೀವನವನ್ನು ಕೊನೆಗಾಣಿಸುತ್ತೇವೆ, ಎಂಬದಿಲ್ಲ

ಇಂಗ್ಲೆಂಡಿನ ಹೌಸ್ ಆಫ್ ಲಾರ್ಡ್ಸ್‌ನಲ್ಲಿ (House of Lords) ತನ್ನ ಲಾರ್ಡ್‌ಬೇಕನ್ನನು (Lord Bacon) ಅವನ ಪ್ರಪ್ರಥಮ ಭಾಷಣವನ್ನು ಮಾಡಿದಾಗ ಜನರೆಲ್ಲಾ ಆಶ್ಚರ್ಯಚಕಿತರಾದರು ವೃತ್ತಪತ್ರಿಕೆಗಳು "He awoke one morning and found himself famous)" ಅವನು ಒಂದು ದಿನ ಸುಪ್ರಭಾತದಲ್ಲಿ ಎಚ್ಚರಗೊಳ್ಳುವದರೊಳಗೆ, ತಾನು ಪ್ರಖ್ಯಾತನಾಗಿರುವದನ್ನು ಕಂಡನು". ಎಂದು ಬರೆದವು ಆದರೆ ಅದೇ ಲಾರ್ಡ್ ಬೇಕನ್ನನ ಮುಂದಿನ ಬಾಳು ಜನರ ಕಣ್ಣಿನಲ್ಲಿ ಅಸಹ್ಯಕರವಾಯಿತು

ಸರ್‌ವಾಲ್ಟರ್‌ಸ್ಕಾಟ್‌ನ ಜೀವನದ ಪ್ರಥಮಾರ್ಧದಲ್ಲಿ ಅವನನ್ನು ಲಾರ್ಡ್ ಬೈರನ್ನನಷ್ಟು ಸೊಗಸಾದ ಉತ್ತಮ ಕವಿಯನ್ನಾಗಿ ಜನರು ಎಣಿಸಿರಲಿಲ್ಲ ಅವನು ರಾಷ್ಟ್ರಕವಿ ಪೋಯೆಟ್ ಲಾರೆಟ್ (Poet Laureate) ನೆಂದೂ ಎಂದೂ ಪ್ರಖ್ಯಾತ ಮಾಡಲಿಲ್ಲ; ಆದರೆ ಅವನ ಜೀವನದ ಕೊನೆಯ ಭಾಗದಲ್ಲಿ, ಅವನನ್ನು ಕಾದಂಬರಿ ಕಾರರ ರಾಜನೆಂದು (Prince of Novelists) ಕರೆಯುವಂತೆ ಅವನ ಕೃತಿಗಳು ಅಷ್ಟು ದಿವ್ಯವಾಗಿದ ವು.

ಆದ್ದರಿಂದ ರಾಮನು ಹೇಳುವದೇನೆಂದರೆ, "ಆಧ್ಯಾತ್ಮಿಕ ಶಕ್ತಿಗಳಲ್ಲಿಯೂ ನೀವು ಸಂಸರ್ಗಪಡೆಯುವ ಜನರಲ್ಲಿರುವ ಅನಂತ ಸಾಧ್ಯತೆಗಳಲ್ಲಿಯೂ ಯಾವಾಗಲೂ ನಂಬಿಕೆಯನ್ನಿಡಿ.

Give up judging, never form any particular opinion, never condemn any body.

"ಜನರ ಯೋಗ್ಯತೆಯನ್ನು ವಿವೇಚಿಸಿ ನಿರ್ಣಯಿಸುವದನ್ನು ಬಿಟ್ಟು ಬಿಡಿ ; ಇನ್ನೊಬ್ಬರ ವಿಷಯದಲ್ಲಿ ಯಾವದೊಂದು ವಿಶಿಷ್ಟವಾದ ಅಭಿಪ್ರಾಯವನ್ನು ಎಂದೂ ರೂಪಿಸಿಕೊಳ್ಳಬೇಡಿ , ಯಾರ ಮೇಲೆಯೂ ಎಂದೂ ದೋಷಾರೋಪಣೆ ಮಾಡಬೇಡಿ; ಯಾರನ್ನೂ ಎಂದೂ ಖಂಡಿಸಬೇಡಿ."

ನಿಮ್ಮ ಎದುರಿಗೆ ಒಬ್ಬ ಅಪರಾಧಿಯು, ಪಾತಕಿಯು ಘಾತುಕಿಯು ಬರ ಬಹುದು. ಹೃದಯದಲ್ಲಿ ಯಾವ ದುರಭಿಪ್ರಾಯವನ್ನಾಗಲೀ ದ್ವೇಷವನ್ನಾಗಲೀ ವೈರವನ್ನಾಗಲೀ ಇಟ್ಟುಕೊಂಡು ಅವನಲ್ಲಿಗೆ ಹೋಗಬೇಡಿ. ಒಂದು ಚೈತನ್ಯದ ನಿಗೂಢವಾದ ಅನಂತಶಕ್ತಿಯ ಭಾವನೆಯಿಂದ ಅವನನ್ನು ಸಮೀಪಿಸಿ, ಅವನನ್ನು ಕಾಣಿರಿ. ಇವತ್ತಿನ ಈ ಪಾತಕಿಯೇ ಪರಿವರ್ತನೆ ಹೊಂದಿ, ನಾಳೆ ಮಹಾವೀರನೋ ಮಹಾಸಂತನೋ ಆಗಬಹುದೆಂಬದನ್ನು ಮರೆಯಬೇಡಿ. ಆತ್ಮನ ಅನಂತವಾದ ಶಕ್ಯತೆಗಳನ್ನೂ ಸಾಧ್ಯತೆಗಳನ್ನೂ ಸಾಮರ್ಥ್ಯಗಳನ್ನೂ ಮಾತ್ರ ನಂಬಿ.

ಯಾರು ನಿಮ್ಮಲ್ಲಿಗೆ ಬಂದರೂ ಅವರನ್ನು ದೇವರಂತೆ ಬರಮಾಡಿಕೊಳ್ಳಿ, ಸ್ವಾಗತಿಸಿ ; ಅದೇ ಸಮಯದಲ್ಲಿ ನಿಮ್ಮನ್ನು ನೀವು ಕೀಳಾಗಿ ಭಾವಿಸಬೇಡಿ. ಇವತ್ತು ನೀವು ಕಾರಾಗೃಹದಲ್ಲಿದ್ದರೆ, ನಾಳೆ ಕೀರ್ತಿ - ವೈಭವಗಳಿಂದ ಮೆರೆಯಬಹುದು.

ಹಳೆಯ ಒಡಂಬಡಿಕೆಯಲ್ಲಿ (ಬೈಬಲ್, Old Testament) ಸ್ಯಾಂಸನ್‌ನ (Samson) ವಿಚಾರವು ಬಂದಿದೆ. ತನ್ನ ದೇಶಕ್ಕೂ ಜನಾಂಗಕ್ಕೂ ಅಪಕೀರ್ತಿಯನ್ನು ತಂದ ಆ ಸ್ಯಾಂಸನ್ನನೇ ಪ್ರತಿಕ್ಷಣದಲ್ಲಿಯೂ ಆ ಹಿಂದಿನ ಅಪಖ್ಯಾತಿಯನ್ನು ಕಳೆಯಬಲ್ಲವನಾಗಿ ಬಲ್ಲಷ್ಟವನ್ನು ತೊಡೆದು ಹಾಕಿದನು. ನಿಮ್ಮಲ್ಲಿರುವ ನಿಜವಾದ ಚೈತನ್ಯದಲ್ಲಿ ನಿಜವಾದ ದೇವತ್ವದಲ್ಲಿ ದೇವರಲ್ಲಿ ನಂಬಿಕೆಯನ್ನಿಡಬೇಕೆಂದು ವೇದಾಂತವು ನಿಮಗೆ ಹೇಳುತ್ತದೆ. ಅದನ್ನು ನಂಬಬೇಕೇ ಹೊರತು ಹೊರಗಿನ

ಯಾರ ತೀರ್ಮಾನವನ್ನೂ ಒಪ್ಪಬಾರದು, ಅವು ಏನೂ ಇಲ್ಲ, ನಿಷ್ಪ್ರಯೋಜನ. ಹಿಂದಿನ ಕೆಟ್ಟದ್ದನ್ನು ತೊಡೆದುಹಾಕಿ ಅವುಗಳನ್ನು ಮೀರಿ ನಿಲ್ಲಬಹುದು.

ಆಧ್ಯಾತ್ಮಿಕತೆಯು ಎಲ್ಲಿವೆಯೋ ಅಲ್ಲಿ ಎಲ್ಲಾ ಇವೆ. ಇದು ಎಲ್ಲಿಯಾದರೂ ಇರಬಹುದು

ಪ್ರಪಂಚದ ನೀತಿಯನ್ನು ಧರ್ಮಗಳು ತಪ್ಪಾಗಿ ತಿಳಿಯುತ್ತವೆ. ಎಲ್ಲಾ ಕೇಡುಗಳ ಬೇರಿಗೆ ಅವು ಕೊಡಲಿ ಹಾಕುವದಿಲ್ಲ, ಎಲ್ಲಾ ವ್ಯಾಮೋಹಗಳನ್ನೂ ದುಷ್ಪ್ರೇರಣೆಗಳನ್ನೂ ಇವತ್ತು ತಡೆಗಟ್ಟಿದವನು ನಾಳೆ ಕೊಲೆಗಡಕನೂ ಕುಲಭ್ರಷ್ಟನೂ ಆಗಬಹುದು. ಕರ್ಮಸಿದ್ಧಾಂತದ ದೃಷ್ಟಿಯಿಂದಲೂ ದೇಹದೃಷ್ಟಿಯಿಂದಲೂ ಇದನ್ನು ವಿವರಿಸಿದೆ.

ಭೌತಿಕ ಭೂಮಿಕೆಯಲ್ಲಿ ವಿವರಿಸುವದಾದರೆ, ನಿಮ್ಮ ದೇಹವೂ ಉದರವೂ ಆರೋಗ್ಯವಾಗಿದ್ದರೆ ನಿಮ್ಮ ಶೀಲವು ಚೆನ್ನಾಗಿರುತ್ತದೆ, ಮತ್ತು ನೀವು ದುಷ್ಟಪ್ರೇರಣೆಗಳನ್ನು ಎದುರಿಸಿ, ಮೀರಿ ನಿಲ್ಲಬಹುದು ನಾಳೆ ನೀವು ಯಾವದಾದರೂ ಬೇನೆಯಿಂದ ನರಳಬಹುದು, ನಿಮ್ಮ ಉದರವೂ ಸರಿಯಾಗಿಲ್ಲದಿರಬಹುದು, ಆಗ ನಿಮ್ಮ ಮನಸ್ಸೂ ಸಣ್ಣ ಬಾಧೆಗಳಿಂದಲೂ ಕಲಕಬಹುದು, ಕೆರಳಬಹುದು, ತಬ್ಬಿಬ್ಬಾಗಬಹುದು. ಇದು ವಾಸ್ತವವಾದ ಅನುಭವವು.

ಈ ವಿಷಯುವನ್ನು ತೆಗೆದುಕೊಂಡು ಜನರಿಗೆ ಮನಸ್ಸಿನಲ್ಲಿ ಚೆನ್ನಾಗಿ ಊರುವಂತೆ ಬೋಧಿಸುವದು ತಮ್ಮ ಗೌರವಕ್ಕೆ ಕೀಳಾದುದೆಂದು ಧರ್ಮಪ್ರಚಾರ ಮಾಡತಕ್ಕವರು ತಿಳಿದಿರುವದು ಬಹಳ ಆಶ್ಚರ್ಯ. ನಿಜವಾಗಿ ಹೇಳಬೇಕೆಂದರೆ, ಆಹಾರದ ವಿಷಯದಲ್ಲಿ ನೀವು ಎಚ್ಚರವಾಗಿದ್ದರೆ ನಿಮ್ಮ ರೋಗವನ್ನು ನೀವೇ ಗುಣಪಡಿಸಿಕೊಳ್ಳಬಹುದು

ಹೊಟ್ಟೆಯು ಭಾರವಾಗುವಂತೆ ತಿನ್ನುವದು, ಅಹಿತವೂ ಅಯೋಗ್ಯವೂ ಆದ ಆಹಾರವನ್ನು ಸೇವಿಸುವದು, ಎಲ್ಲಾ ಪಾಪಗಳ ಮೂಲವಾಗಿದೆ. ಅತ್ಯಾಹಾರ-ದುರಾಹಾರ ಸೇವನೆಯ ಕೆಟ್ಟಚಟವುಳ್ಳವರು-ವೇದಾಂತ ದೃಷ್ಟಿಯಿಂದ-ಪಂಚ ಮಹಾಪಾತಕಗಳಲ್ಲಿ ಯಾವದೊಂದನ್ನು ಅಥವಾ ಎಲ್ಲವನ್ನೂ ಒಟ್ಟಿಗೆ ನಡೆಸುವ ಮಹಾಪಾತಕಿಗಳಿಗೆ ಸಮಾನರಾಗುತ್ತಾರೆ. ಹೊಟ್ಟೆಯು [illegible] ಅತಿ [illegible] ಪ್ರೀತಿಯುಳ್ಳ ಸಹೋದರ [illegible] ತಂದೆತಾಯಿಗಳನ್ನೇ ಕೊಲ್ಲುತ್ತ[illegible]

ಅದರಿಂದ ನಾವು ಪಡುವ ಕಷ್ಟಗಳಿಂದ ಸತ್ಯವೇನೆಂಬುದು ನಮಗೆ ಮನವರಿಕೆಯಾಗುತ್ತದೆ.

ಪ್ರಶ್ನೆ— ಒಂದೇ ಕುಟುಂಬದಲ್ಲಿ ಹುಟ್ಟುವ ಐದಾರು ಮಕ್ಕಳಲ್ಲಿ ಒಬ್ಬ ಸಜ್ಜನನಾಗಿಯೂ ಇನ್ನೊಬ್ಬ ದುರ್ಜನನಾಗಿಯೂ ಒಬ್ಬ ಆರೋಗ್ಯವಂತನಾಗಿಯೂ ಇನ್ನೊಬ್ಬ ರೋಗಿಯಾಗಿಯೂ ಆಗುವುದಕ್ಕೆ ಕಾರಣವೇನು ? ಅವರೆಲ್ಲರೂ ಏಕೆ ಬೇರೆ ಬೇರೆ ಸ್ವಭಾವದವರಾಗುತ್ತಾರೆ ?

ಉತ್ತರ— ಇವರ ಸ್ವಭಾವಗಳು ಬೇರೆಬೇರೆಯಾದರೂ ಇವರಲ್ಲಿ ಸಮಾನವಾದ ಅಂಶವು ಯಾವುದೂ ಇಲ್ಲವೆಂದಲ್ಲ. ಅವರೆಲ್ಲರೂ ತಮ್ಮ ಹಿಂದಿನ ಜನ್ಮಗಳಲ್ಲಿ ಸಮಾನವಾದ ಆದರಾಸಕ್ತಿ ಉಳ್ಳವರಾಗಿರಬಹುದು. ಅವರ ಆಸ್ತಿಯಲ್ಲಿಯೂ ಮನೆಯಲ್ಲಿಯೂ ಸುತ್ತಲ ಸನ್ನಿವೇಶಗಳಲ್ಲಿಯೂ ಅವರಿಗೆ ಸಮಾನವಾದ ಅಭಿರುಚಿಯಿರಬಹುದು. ಆದರೆ ಅವರವರ ಗುಣಸ್ವಭಾವಗಳೂ ಬಯಕೆಗಳೂ ಬೇರೆ ಬೇರೆ ಇರಬಹುದು. ಹೀಗೆ, ಈ ಜಗತ್ತಿನಲ್ಲಿ ಹುಟ್ಟಿ ಬರತಕ್ಕವರು ಒಬ್ಬೊಬ್ಬರು ಒಂದೊಂದು ಬೇರೆ ಬೇರೆ ದಾರಿಗಳಿಂದ ಬಂದರೂ ಎಲ್ಲರೂ ಎಲ್ಲಾ ದಾರಿಗಳು ಸೇರುವ ಕತ್ತಲೆಯ ಕೇಂದ್ರದಲ್ಲಿ ಒಟ್ಟುಗೂಡಬಹುದು.

ಒಂದೇ ಕುಟುಂಬದ ಮಕ್ಕಳು ಬೇರೆ ಬೇರೆ ಸ್ವಭಾವದವರಾಗುವುದಕ್ಕೆ ಅವರವರ ಪೂರ್ವಜನ್ಮದ ಕರ್ಮಗಳೂ ಸಂಸ್ಕಾರಗಳೂ ವಾಸನೆಗಳೂ ಬೇರೆ ಬೇರೆಯಾಗಿರುವುದೇ ಕಾರಣವು.

ಪ್ರಶ್ನೆ— ಕೆಲವು ಸಮಯ, ಕೆಲವು ಜನರನ್ನು ಅವರ ಆಯುಸ್ಸು (ಇನ್ನೂ ಸ್ವಲ್ಪ) ಉಳಿದಿರುವಾಗಲೇ ಮುಗಿಸಿಬಿಡುತ್ತಾರೆ. ಇದು ತಪ್ಪಲ್ಲವೆ ? ಅವರನ್ನು ಬದುಕಿಸಬೇಡವೆ ? ಅಥವಾ ಅದು ಅವರ ಪ್ರಾರಬ್ಧ ಕರ್ಮವೆಂದು ತಿಳಿಯಬೇಕೆ ? ವೇದಾಂತ ದೃಷ್ಟಿಯೇನು ?

ಉತ್ತರ— ಕರ್ಮನಿಯಮವು, ಉಚಿತವು, ನಿರಂತರ ಚಟುವಟಿಕೆಯುಳ್ಳ, ಕ್ರಿಯಾಶೀಲ, ಸತ್ವಶಾಲಿಯಾದ ಜೀವನವನ್ನು ಬೋಧಿಸುತ್ತದೆ. ಯಾವ ಕಾರಣದಿಂದಲೂ ಬದಲಾಯಿಸಲಿಕ್ಕೆ ಬಾರದಂತೆ ಮೊದಲೇ ನಿರ್ಧಾರವಾಗಿರುವ ಹಣೆಯ ಬರಹವನ್ನು, ವಿಧಿಯನ್ನು, ಅದೃಷ್ಟವನ್ನು ಕರ್ಮನಿಯಮವು ಪ್ರತಿಪಾದಿಸುವುದಿಲ್ಲ.

ಅದು ಸೋಮಾರಿತನವನ್ನೂ ಪುಕ್ಕಲುತನವನ್ನೂ ಪ್ರೋತ್ಸಾಹಿಸುವದಿಲ್ಲ ಕರ್ಮವೆಂದರೆ ಕ್ರಿಯಾಶಕ್ತಿ, ಸತ್ತ್ವಶಾಲಿತ್ವ, ಜೀವನ

ಮನುಷ್ಯನು ತನ್ನ ಅದೃಷ್ಟಕ್ಕೆ ತಾನೇ ಒಡೆಯ—ಎಂದು ರಾಮನು ತೋರಿಸಿದ್ದಾನೆ; ಅವನು ಯಾವದಕ್ಕೂ ದಾಸನಲ್ಲ, ಅವನು ತನ್ನ ಸ್ಥಿತಿಗೆ ತಾನೇ ಪ್ರಭು-ಎಂದೂ ತಿಳಿಯಪಡಿಸಿದ್ದಾನೆ ಆದ್ದರಿಂದ ಜೀವ ಇರುವಂತೆಯೇ ಸಮಾಧಿಯಾಗಿದೆಯೆಂದು ತಿಳಿದವರು ಆ ಘಟನೆಯಲ್ಲಿ ಮಧ್ಯೆ ಪ್ರವೇಶಮಾಡಿ ಏಕೆ ಆ ದುರಂತವನ್ನು ತಪ್ಪಿಸಬಾರದು? ಯಾರು ಒಪ್ಪಿದರೂ ಒಪ್ಪದಿದ್ದರೂ ತಿಳಿದವರು ಅಂಥಾ ದುರ್ಘಟನೆಯನ್ನು ತಪ್ಪಿಸಬೇಕು.

ಪ್ರಶ್ನೆ—ನಾವು ಈ ಶರೀರವನ್ನು ಬಿಟ್ಟ ಮೇಲೆ, ಸೂಕ್ಷ್ಮ ಶರೀರದ ಪ್ರೇತ ಜಗತ್ತಿನಲ್ಲಿ, ಪೂರ್ಣತೆಯನ್ನು ಪಡೆಯುತ್ತೇವೆಯೆ?

ಉತ್ತರ—ವೇದಾಂತ ದೃಷ್ಟಿಯಿಂದ ನೋಡಿದರೆ, ಮುಂದಿನ ಜನ್ಮಗಳಲ್ಲಿ ನಾವು ಪೂರ್ಣತೆಯನ್ನು ಸಾಧಿಸಬಲ್ಲವೇ ಹೊರತು ಬೇರೆ ರೀತಿಯಿಂದ ಅಲ್ಲ. ಪ್ರೇತ ಚೇತನಗಳ ಪ್ರಪಂಚವೆಂಬದು ನಮ್ಮ ನಿತ್ಯದ ಸ್ವಪ್ನ ಪ್ರಪಂಚವಿರುವಂತೆ ಇದೆ.

ಪ್ರಶ್ನೆ—ದೇಹವನ್ನು ಬಿಟ್ಟಿರುವ ಚೇತನರಿಗೆ ನಾವು ಆಧ್ಯಾತ್ಮಿಕವಾಗಿ ಸಹಾಯ ಮಾಡುವುದು ಸಾಧ್ಯವೆ?

ಉತ್ತರ—ಹೌದು, ಸಾಧ್ಯ. ಮನಸ್ಸಿನಲ್ಲಿ ಆ ವ್ಯಕ್ತಿಯ ರೂಪವನ್ನು ಸ್ಮರಣೆ ಮಾಡುತ್ತಾ ಅವನು ದೇವರೆಂದು ಚಿಂತಿಸಬೇಕು, ಭಾವಿಸಬೇಕು. ಅದರ ಸ್ನೇಹವನ್ನು ಮನಗಾಣಬೇಕು, ಅವರ ವಿಷಯದಲ್ಲಿ ಒಳ್ಳೆಯ ಆಲೋಚನೆಯನ್ನು ಮಾಡಿ, ಅವರೆಡೆಗೆ ಅತ್ಯಂತ ಸದ್ಭಾವನೆಗಳನ್ನು ಕಳಿಸಿ ಇದರಿಂದ ಅವರಿಗೆ ಸಹಾಯವಾಗುವದಲ್ಲದೆ, ನಿಮಗೂ ಸಹಾಯವಾಗುತ್ತದೆ

ಪ್ರಶ್ನೆ—ನಮಗೆ ಪ್ರಪಂಚ ವ್ಯವಹಾರದಲ್ಲಿ ಅವರು ಯಾವಾವರೂ ಸಹಾಯ ಮಾಡಬಲ್ಲರೆ?

ಉತ್ತರ—ವ್ಯವಹಾರದಲ್ಲಿ ಜನರು ನಿಮಗೆ ಸಹಾಯ ಮಾಡಬಲ್ಲರಾದರೆ,

ಸ್ಥೂಲ ದೇಹವಿಲ್ಲದಿರುವ ವಾಸನಾ ಶರೀರಿಗಳಾದ ಪ್ರೇತಗಳೂ ನಿಮಗೆ ಸಹಾಯ ಮಾಡಬಹುದು. ಆದರೆ ವೇದಾಂತದ ರೀತಿಯಿಂದ ವಿಚಾರ ಮಾಡಿದರೆ, ಪ್ರೇತ ಪ್ರಪಂಚದಲ್ಲಿ ಮಾತ್ರವಲ್ಲ, ಈ ಭೌತಿಕ ಪ್ರಪಂಚದಲ್ಲಿಯಾದರೂ ನಿಮಗೆ ಸಹಾಯ ವಾಗುವದು ನಿಮ್ಮಿಂದಲೇ ಎನ್ನುವದನ್ನು ಮರೆಯಬಾರದು. ಪ್ರೇತಶರೀರಿಗಳ ಮೂಲಕವಾಗಿಯಾದರೂ ಜೀವಂತ ಶರೀರಿಗಳ ಮೂಲಕವಾಗಿಯಾದರೂ ನಿಮಗೆ ಸಹಾಯವಾಗತಕ್ಕವರು ನೀವೇ ಹೊರತು ಬೇರೆ ಅಲ್ಲ. ಹೀಗೆ, ವೇದಾಂತದ ಪ್ರಕಾರ ಯಾವದನ್ನೂ ಹೊರಗೆ ಹುಡುಕಬಾರದು ; ನಿಮ್ಮ ಲಕ್ಷ್ಯದ ಕೇಂದ್ರವು ಯಾವಾಗಲೂ ನಿಮ್ಮೊಳಗೇ ಇರಬೇಕು ; ಅದು ಹೊರಗೆ ಬೀಳಬಾರದು. ಯಾವದನ್ನಾದರೂ ನಿಮ್ಮೊಳಗೇ ಅನ್ವೇಷಿಸಬೇಕು. ನಿಮಗೆ ಅರ್ಹತೆಯಿದ್ದರೆ, ನೀವು ಅಪೇಕ್ಷಿಸುವ ಅಗತ್ಯವಿಲ್ಲ. ನಿಮಗೆ ಅರ್ಹತೆ ಮಾತ್ರವಿದ್ದರೆ ನಿಮ್ಮ ಬಯಕೆಯ ವಸ್ತುಗಳೆಲ್ಲಾ ತಾವಾಗಿಯೇ ನಿಮ್ಮನ್ನು ಹುಡುಕಿಕೊಂಡು ಬರುತ್ತದೆ. ನಿಮ್ಮಲ್ಲಿ ಯೋಗ್ಯತೆ ಯನ್ನು ತಂದುಕೊಂಡರೆ ಸಾಕು, ಸಹಾಯವು ತಾನಾಗಿಯೇ ಬರುತ್ತದೆ.

ಯಾವಾಗಲೂ ಭಾರತದೇಶದಲ್ಲಿಯೂ ಭಾರತ ಜನಾಂಗದಲ್ಲಿಯೂ ಭಾರತ (ಹಿಂದೂ) ಧರ್ಮದಲ್ಲಿಯೂ ಸಂಸ್ಕೃತಿಯಲ್ಲಿಯೂ ಪ್ರೀತಿಯನ್ನು ಹುಟ್ಟಿಸತಕ್ಕಂಥ, ಅಭಿಮಾನವನ್ನು ಮೆಚ್ಚುಗೆಯನ್ನೂ ಬೆಳೆಸತಕ್ಕಂಥ ಗ್ರಂಥಗಳನ್ನು ಓದುತ್ತಾ ಜನ ರೊಡನೆ ಮಾತಾಡುತ್ತಾ ನಿರಂತರ ಭಾರತದ ಚಿಂತನೆಯನ್ನು ಮಾಡುತ್ತಾ ಇದ್ದರೆ, ಅಮೆರಿಕಾದವನಾದರೂ ಇಂಗ್ಲೆಂಡ್‌ನವನಾದರೂ ಅವನ ಚಿಂತನೆಯ ಫಲವಾಗಿ ಭಾರತದಲ್ಲಿಯೇ ಹುಟ್ಟುತ್ತಾನೆ. ಹೀಗೆ, ಅವನ ಬಯಕೆಯ ಫಲವಾಗಿಯೇ ಅವನಿಗೆ ಆ ಜನ್ಮ ಬರುತ್ತದೆ.

ಪ್ರಶ್ನೆ— ಮನುಷ್ಯರು ಹಿಂದಿರುಗಿ ಬೆಕ್ಕುಗಳಾಗಿಯೂ ನಾಯಿಗಳಾಗಿಯೂ ಹುಟ್ಟುವದುಂಟೆ ?

ಉತ್ತರ— ಇಂದಿನ ನಮ್ಮ ಸಂಸ್ಕಾರಕ್ಕೂ ಶಿಕ್ಷಣಕ್ಕೂ ಸಾಧನಕ್ಕೂ ವರ್ತನಕ್ಕೂ ಜೀವನಕ್ಕೂ ಯಾವ ಸಹವಾಸ, ಸನ್ನಿವೇಶ ಸಂದರ್ಭಗಳು ಕಾರಣವಾಗುತ್ತವೆಯೋ ಅವೇ ನಮ್ಮ ಮುಂದಿನ ಜನ್ಮಗಳಿಗೂ ಕಾರಣವಾಗುತ್ತವೆ. ನಾವು ಯಾವ ಪ್ರಾಣಿಯಾಗಿ ಹುಟ್ಟುವದಕ್ಕೂ ನಮ್ಮ ಸಂಸ್ಕಾರ--ಸನ್ನಿವೇಶಗಳೇ ಕಾರಣವಾಗುತ್ತವೆ ಒಟ್ಟಿನ ಮೇಲೆ ಎಲ್ಲವೂ ಸಂಸ್ಕಾರ–ಸಹವಾಸ–ಸನ್ನಿವೇಶಗಳನ್ನು ಅವಲಂಬಿಸಿವೆ.

[illegible]

ಭಾರತದೇಶದಲ್ಲಿ ಒಬ್ಬ ಋಷಿಯ ಹತ್ತಿರ ಪ್ರಶ್ನೆಕೇಳುವದಕ್ಕಾಗಿ ಎರಡು ಜನರು ಬಂದರು. ಇವರಲ್ಲಿ ಒಬ್ಬನದು ನಾಯಿಯ ಸ್ವಭಾವವಾಗಿಯೂ ಇನ್ನೊಬ್ಬನದು ಬೆಕ್ಕಿನ ಸ್ವಭಾವವಾಗಿಯೂ ಇದ್ದಿತು ; ಅಥವಾ ಒಬ್ಬ ಋಷಿಯ ಹತ್ತಿರ ಒಂದ್ಯ ನಾಯಿಯೂ ಒಂದು ಬೆಕ್ಕೂ ಬಂದವು——ಎಂದು ಹೇಳಬಹುದು ನಾಯಿಯು ಕೇಳಿದ್ದೇನೆಂದರೆ, '' ಸ್ವಾಮಿ, ಇಲ್ಲಿ ಈ ಬೆಕ್ಕು ಇದೆ, ಅಥವಾ ಬೆಕ್ಕಿನ ಸ್ವಭಾವದ ಈ ಮನುಷ್ಯನಿದ್ದಾನೆ ಇವನು ಬಹಳ ಕಪಟಿ, ಕೇಡಿಗ, ದುಷ್ಟ. ಮುಂದಿನ ಜನ್ಮದಲ್ಲಿ ಇವನು ಏನಾಗಬಹುದು ?'' ಅನಂತರ ಕೆಲವು ಹೊತ್ತಿನ ಮೇಲೆ ಆ ಬೆಕ್ಕಿನ ಸ್ವಭಾವದ ಮನುಷ್ಯನು ಬಂದು ''ಸ್ವಾಮಿ, ಇಲ್ಲಿ ಈ ನಾಯಿ ಇದೆ , ಅಥವಾ ಈ ನಾಯಿಯ ಸ್ವಭಾವದ ಮನುಷ್ಯನಿದಾ ನೆ ಇವನು ಬಹಳ ಕೆಟ್ಟವನು. ಇವನು ಯಾವಾಗಲೂ ಹಲ್ಲುಕಿಸಿದು ಗುರುಗುಟ್ಟುತ್ತಾನೆ ; ಬಾಯಿಗೆ ಬಂದಂತೆ ಬೊಗಳುತ್ತಾನೆ ಇವನು ಸತ್ತ ಮೇಲೆ ಮುಂದಿದ ಜನ್ಮದಲ್ಲಿ ಇವನ ಗತಿಯೇನು?'' ಎಂದು ಕೇಳಿದನು. ಆ ಋಷಿಯು ಸುಮ್ಮನಿದ್ದನು ಆದರೆ ಅವರಿಬ್ಬರು ಬಿಡದೆ ಮತ್ತೆ ಮತ್ತೆ ಅದೇ ಪ್ರಶ್ನೆ ಯನ್ನು ಮಾಡಿದರು ಆಗ ಋಷಿಯು '' ತಮ್ಮ, ನೀವು ಈ ಪ್ರಶ್ನೆಯನ್ನು ಮಾಡದಿದ್ದರೆ ಚೆನ್ನಾಗಿತ್ತು " ಎಂದು ಪುನಃ ಸುಮ್ಮನಾದನು ಆದರೂ ಅವರಿಬ್ಬರು ಬಿಡದೆ ಉತ್ತರ ಹೇಳಲೇ ಬೇಕೆಂದು ಅವನನ್ನು ಒತ್ತಾಯಪಡಿಸಿದರು. ಅದರಿಂದ ಆ ಋಷಿಯು ಹೇಳಿದ್ದೇನೆಂದರೆ, '' ಓ ನಾಯಿಯೆ ! ಈ ಬೆಕ್ಕು ಯಾವಾಗಲೂ ನಿನ್ನ ಸಹವಾಸದಲ್ಲಿಯೇ ಜೀವಿಸುತ್ತಿರುವುದರಿಂದ ನಿನ್ನ ಗುಣಸ್ವಭಾವಗಳನ್ನು ಇದು ಹೀರಿಕೊಂಡು ನಿನ್ನ ಶೀಲವನ್ನು ಅಭ್ಯಾಸಮಾಡುತ್ತದೆ ಆದ್ದರಿಂದ ಮುಂದಿನ ಜನ್ಮದಲ್ಲಿ ಇದು ನಾಯಿಯಾಗುತ್ತದೆ. ಹೀಗಲ್ಲದೆ ಇನ್ನೇನಾಗಬಲ್ಲದು ? ಎಲೈ ಬೆಕ್ಕೆ ! ಈ ನಾಯಿಯು ಯಾವಾಗಲೂ ನಿನ್ನ ಸಹವಾಸದಲ್ಲಿ ಸ್ನೇಹದಿಂದ ಇರುವದರಿಂದ ಇದು ನಿನ್ನ ಗುಣ ಶೀಲ–ಸ್ವಭಾವಗಳನ್ನೇ ಅಭ್ಯಾಸಮಾಡುತ್ತಿದೆ. ಆದ್ದರಿಂದ ಮುಂದಿನ ಜನ್ಮದಲ್ಲಿ ಇದು ರಕ್ಕಿನ ಸ್ವಭಾವದ ಬೆಕ್ಕು ಆಗುತ್ತದೆ "

ಆದ್ದರಿಂದ ಹಗಲಿರುಳೂ ನಾಯಿಗಳನ್ನೂ ಬೆಕ್ಕುಗಳನ್ನೂ ಅತಿಯಾಗಿ ಪ್ರೀತಿ ಸುತ್ತಾ ಅಭಿಮಾನಿಸುತ್ತಾ ಮುದ್ದಿಸುತ್ತಾ ಅವುಗಳ ಸಹವಾಸದಲ್ಲಿಯೇ ಸಂತೋಷ ದಿಂದ ಜೀವಿಸುತ್ತಿರುವ ಮನುಷ್ಯರು ಮುಂದಿನ ಜನ್ಮದಲ್ಲಿ ನಾಯಿಗಳಾಗಿಯೋ ಬೆಕ್ಕು ಗಳಾಗಿಯೋ ಹುಟ್ಟುವದರಲ್ಲಿ ಸಂಶಯವಿಲ್ಲ. (ಜಿಂಕೆಯನ್ನು ಅತಿಯಾಗಿ ಪ್ರೀತಿಸಿ ಮುದ್ದಿಸುತ್ತಾ ಅಂತ್ಯದಲ್ಲಿಯೂ ಅದೇ ಚಿಂತೆಯಿಂದ ಸತ್ತ ಭರತರಾಜನು ಮುಂದಿನ ಜನ್ಮದಲ್ಲಿ ಜಿಂಕೆಯಾಗಿಯೇ ಹುಟ್ಟಿದನೆಂಬದು ಪ್ರಸಿದ್ಧವಾಗಿದೆ). ಈ ಪ್ರಶ್ನೆಗೆ ಇದಕ್ಕಿಂತಲೂ ಹೆಚ್ಚಿನ ವಿವರಣೆಯ ಅಗತ್ಯವಿಲ್ಲ.

ಪ್ರಶ್ನೆ– ಒಬ್ಬ ಮನುಷ್ಯನು ಸತ್ತಮೇಲೆ ಪುನಃ ಹುಟ್ಟುವದಕ್ಕೆ ಎಷ್ಟು ಕಾಲ ಬೇಕಾಗುತ್ತದೆ ?

ಉತ್ತರ —ಒಬ್ಬನು ಎಚ್ಚರದಲ್ಲಿ ಎಲ್ಲಾ ವ್ಯವಹಾರಗಳನ್ನೂ ಮಾಡಿ ನಿದ್ರಿಸುತ್ತಾನೆ ; ಪುನಃ ಮರುದಿನ ಬೆಳಿಗ್ಗೆ ಎಚ್ಚರಗೊಳ್ಳುತ್ತಾನೆ. ಅವನ ನಿದ್ರೆಯ ಕಾಲವೇ ಸಾವಿನ ಕಾಲದಂತಿದೆ, ಅವನು ಪುನಃ ಎಚ್ಚರಗೊಳ್ಳುವದೇ ಪುನರ್ಜನ್ಮವಂತಿದೆ. ಸತ್ತಮೇಲೆ ಕಾಣುವ ಸ್ವರ್ಗ ನರಕಾದಿ ಲೋಕಾಂತರಗಳ ಅನುಭವವು ನಿದ್ರಾಕಾಲದಲ್ಲಿ ಕಾಣುವ ಸ್ವಪ್ನಾನುಭವದಂತೆ ಇದೆ ಈ ಲೋಕದಲ್ಲಿ ಕೆಲವರು ನಾಲ್ಕೈದು ಗಂಟೆಗಳು ಮಾತ್ರ ನಿದ್ರಿಸುವದನ್ನು ನೋಡುತ್ತೇವೆ ; ಕೆಲವರು ಎಂಟು ಗಂಟೆಗಳು ನಿದ್ರೆ ಮಾಡುತ್ತಾರೆ, ಇನ್ನು ಕೆಲವರು ಹತ್ತು ಗಂಟೆಗಳು ನಿದ್ರಿಸುತ್ತಾರೆ. ಮಕ್ಕಳು ಹೆಚ್ಚು ಕಾಲ ನಿದ್ರೆ ಮಾಡುತ್ತಾರೆ. ಮುದುಕರು ಹೆಚ್ಚು ಕಾಲ ನಿದ್ರಿಸುವದಿಲ್ಲ. ತರುಣರಿಗೂ ಹೆಚ್ಚು ಕಾಲ ನಿದ್ರೆಯ ಆವಶ್ಯಕತೆಯಿದೆ. ಆದ್ದರಿಂದ ಸತ್ತ ಮೇಲೆ ಮತ್ತೆ ಹುಟ್ಟುವದೆಂಬುದು ಅವರವರ ಆಧ್ಯಾತ್ಮಿಕವಾದ ಬೆಳವಣಿಗೆಯನ್ನು ಅವಲಂಬಿಸಿರುತ್ತದೆ ಈ ಪ್ರಪಂಚದಲ್ಲಿ ಎಲ್ಲರೂ ನೂರು ವರ್ಷಗಳೇ ಬದುಕುತ್ತಾರೆಂಬುದಿಲ್ಲ. ಕೆಲವರು ಕೇವಲ ಶೈಶವದಲ್ಲಿ ಸಾಯುತ್ತಾರೆ ; ಕೆಲವರು ಬಾಲ್ಯದಲ್ಲಿ, ಕೆಲವರು ಯೌವ್ವನದಲ್ಲಿ ಸಾಯುತ್ತಾರೆ. ಕೆಲವರು ಮೂವತ್ತು ವರ್ಷಗಳು ಬದುಕಬಹುದು; ಕೆಲವರು ಐವತ್ತು, ಕೆಲವರು (ಮೂರಿಪ್ಪತ್ತು ಮೇಲೆ ಹತ್ತು) ಎಪ್ಪತ್ತು ವರ್ಷಗಳು ಬದುಕಬಹುದು. ಹೀಗೆ, ಜೀವನದಲ್ಲಿ ಎಲ್ಲರಿಗೂ ಹೇಗೆ ಒಂದೇ ಸಮನಾಗಿ ನಿಶ್ಚಿತವಾದ ಆಯುಷ್ಯದ ಕಾಲವಿಲ್ಲವೋ ಹಾಗೆ ಸತ್ತಮೇಲೆ ಪ್ರತಿಯೊಬ್ಬರೂ ಇಷ್ಟೇ ಕಾಲಕ್ಕೆ ಹುಟ್ಟಬೇಕೆನ್ನುವ ಎಲ್ಲರಿಗೂ ಒಂದೇ ಸಮನಾದ ಕಾಲವಿಲ್ಲ.

ಪ್ರಶ್ನೆ ಈ ಯುಗದಲ್ಲಿ ಒಬ್ಬ ಮನುಷ್ಯನು ವೇದಾಂತದ ಅನುಭವವನ್ನು ಪಡೆಯುವದು ಸಾಧ್ಯವೆ ? ಅದರಲ್ಲಿಯೂ ಈ ಇಪ್ಪತ್ತನೇ ಶತಮಾನದ ನಾಗರಿಕತೆಯ ನಡುವೆ ಜೀವಿಸಿರತಕ್ಕವನು ವೇದಾಂತದ ಅನುಭವವನ್ನು ಹೊಂದುವದು ಶಕ್ಯವೆ ? ವೇದಾಂತ ಜ್ಞಾನವನ್ನು ಸಾಧಿಸುವದಕ್ಕೆ ಹೀಗೆ ಹೀಗೆಯೇ ಜೀವಿಸಬೇಕು ಎಂದು ಸೂಚಿಸುತ್ತೀರಿ. ಆದ್ದರಿಂದ ಆ ಸಾಧನೆಗಾಗಿ ಹಿಮಾಲಯದ ಅರಣ್ಯಗಳಲ್ಲಿಯೂ ಗುಹೆಗಳಲ್ಲಿಯೂ ಏಕಾಂತವಾಸಮಾಡಬೇಕೆಂದು ತೋರುತ್ತದೆ.

ಉತ್ತರ ರಾಮನು ಹೇಳುವದೇನೆಂದರೆ, ನೀವು ಅರಣ್ಯದಲ್ಲಿ ಏಕಾಂತವಾಸ

ಮಾಡುವ ಆವಶ್ಯಕತೆಯಿಲ್ಲ ತಮಗೆ ಪರಮಾರ್ಥ ಸಾಧನೆಗೆ ಹೊತ್ತೇ ಇಲ್ಲವೆಂದು, ಬಿಡುವೇ ಇಲ್ಲವೆಂದು ಜನರು ಹೇಳುವದುಂಟು ಜೀವನೋಪಾಯದ ಉದ್ಯೋಗಕ್ಕಾಗಿಯೂ ಇತರ ಅನೇಕ–ಉಪಯುಕ್ತವೋ ಅನುಪಯುಕ್ತವೋ ಆದ–ವ್ಯವಹಾರಕ್ಕಾಗಿಯೂ ನಮ್ಮ ನಿತ್ಯದ ಹೆಚ್ಚು ಹೊತ್ತು ಬಳಸಿ ಹೋಗುತ್ತದೆ ಆದರೆ ನಮ್ಮ ಜೀವನದಲ್ಲಿ ಬಹಳ ಹೆಚ್ಚಿನ ಭಾಗವನ್ನು ನಮ್ಮ ಇಷ್ಟಮಿತ್ರರೂ ಬಂಧುಗಳೂ ಕಬಳಿಸುತ್ತಾರೆ ಹಿಂದಿನ ಕಾಲದಲ್ಲಿ "O God, save me from my enemies" "ಓ ದೇವರೆ, ನನ್ನ ಶತ್ರುಗಳ ಬಾಧೆಯಿಂದ ನನ್ನನ್ನು ರಕ್ಷಿಸು" ಎಂದು ಪ್ರಾರ್ಥಿಸುತ್ತಿದ್ದರು ; ಆದರೆ ಇಂದಿನ ಕಾಲದಲ್ಲಿ ಜನರು ಸಲ್ಲಿಸಬೇಕಾದ ಪ್ರಾರ್ಥನೆಯು ಹೆಚ್ಚು ಉಚಿತವಾದ ರೀತಿಯೆಂದರೆ, "O God, save me from my friends" "ಓ ದೇವರೆ, ನನ್ನನ್ನು ನನ್ನ ಮಿತ್ರರ ಪೀಡೆಯಿಂದ ರಕ್ಷಿಸು" ಇದೇ ಹೆಚ್ಚು ವಿಹಿತವಾದ ಪ್ರಾರ್ಥನೆ. ಏಕೆಂದರೆ, ನಮ್ಮ ಎಲ್ಲಾ ಹೊತ್ತನ್ನೂ ನಮ್ಮ ಸ್ನೇಹಿತರೇ ಅಪಹರಿಸಿ ಬಿಡುತ್ತಾರೆ ಅದರಿಂದ ಚಿಂತಾತಂಕಗಳು ಬೆನ್ನು ಹತ್ತುತ್ತವೆ

ಕೊನೆಯಲ್ಲಿ ಒಂದು ಮಾತನ್ನು ಹೇಳಬೇಕಾಗಿದೆ ಓದುವದು ಅಥವಾ ವ್ಯಾಸಂಗವು ಹಲವು ಬಗೆಯಾಗಿದೆ ಕೆಲವು ಜನರು ಗಿಳಿಗಳಂತ ನಾಲಿಗೆಯಿಂದ ಮಾತ್ರ ಓದುತ್ತಾರೆ. ಇನ್ನು ಕೆಲವರು ನೌಕಾಶಿಲ್ಪಿಗಳಂತೆ ಅಥವಾ ಕಲಾವಿದರಂತೆ ಕೈಯಿಂದ ಕಲಿಯುತ್ತಾರೆ ಕಲಾವಿದರೆಲ್ಲಾ ವಿಜ್ಞಾನಿಗಳಲ್ಲವೆಂಗು ರಾಮನು ಹೇಳುವದಿಲ್ಲ ಆದರೆ ವಿಜ್ಞಾನಿಗಳಲ್ಲದ ಕಲಾವಿದರನ್ನು ನಾವು ನೋಡಿದ್ದೇವೆ. ಭೂಮಿಯೊಳಗೆ ನುಗ್ಗಿರುವ ಸಮುದ್ರದ ದೊಡ್ಡಭಾಗವನ್ನು (ಕೊಲ್ಲಿ) ಈಜಿ ದಾಟಬಲ್ಲವರಿರಬಹುದು ; ಆದರೆ ಅವರಿಗೆ ಜಲಸಮುಸ್ಥಿತಿ ವಿಜ್ಞಾನದ Hydro-statics) ತಿಳಿವಳಿಕೆ ಇಲ್ಲದಿರಬಹುದು ವಿಮಾನವನ್ನು ನಡೆಸಬಲ್ಲವರಿರಬಹುದು ; ಆದರೆ ಅವರಿಗೆ ವಾಯು ಯಾನದ ವಿದ್ಯೆ, ವಿಜ್ಞಾನ, ಕಲೆ ಅಥವಾ ತಂತ್ರವು ತಿಳಿಯದಿರಬಹುದು ಔಷಧವಸ್ತುಗಳನ್ನು ತಯಾರು ಮಾಡುವ ಜನರಿಗೆ ಅನೇಕ ವೇಳೆ ರಸಾಯನ ಶಾಸ್ತ್ರದ ಜ್ಞಾನವೇ ಇರುವದಿಲ್ಲ ಈಗ, ಕೈಯಿಂದ ಕಲಿಯಬಲ್ಲವರಿಗೆ ಸ್ವಾಗತ ತಮ್ಮ ಹೃದಯದಿಂದಲೇ ಕಲಿಯಬಲ್ಲವರು ಕೆಲವರಿದ್ದಾರೆ. ಅವರೇ ಲೋಕದಲ್ಲಿ ಧನ್ಯರು ಯಾರು ಊಹಿಸಬಲ್ಲರೋ ಭಾವಿಸಬಲ್ಲರೋ ಕ್ಷಣದೃಷ್ಟಿಯಿಂದ - ಕುಡಿ ನೋಟದಿಂದ – ಯಾರು ವಸ್ತುಸ್ಥಿತಿಯನ್ನು ಅರಿಯಬಲ್ಲರೋ, ಯಾರು ಅತೀಂದ್ರಿಯ ದೃಷ್ಟಿ ಉಳ್ಳವರೋ ಅವರೆಲ್ಲರಿಗೂ ಸ್ವಾಗತ. ಕೇವಲ ಹೃದಯದಿಂದಲೇ ಕಲಿಯುವದರಿಂದ ಅಷ್ಟು ಲಾಭವಿಲ್ಲ. ನಮ್ಮ ವಿದ್ಯೆಯನ್ನು ಇತರರಿಗೆ ಕಲಿಸುವುದಕ್ಕೆ ನಮ್ಮಲ್ಲಿ ಉತ್ತಮವಾದ ಸಂಸ್ಕೃತಿಯೂ

ಉತ್ಕಟ ಇಚ್ಛೆಯೂ ಬೇಕು ಹೃದಯ ಒಂದನ್ನೇ ಅನುಸರಿಸತಕ್ಕವರು ಏಕಪಕ್ಷದವರು. ಯಾರ ತಲೆಯೂ ಕೈಯೂ ನಾಲಿಗೆಯೂ ಕೂಡ ಸುಶಿಕ್ಷಿತವಾಗಿ, ಹರಿತವಾದ ಈ ಮೂರು ಮೊನಚುಗಳಿಂದ ಕೆಲಸಮಾಡಬಲ್ಲರೋ ಅವರೇ ಪ್ರಪಂಚಕ್ಕೆ ಅತ್ಯಂತ ಶ್ರೇಷ್ಠವಾದ ಸೇವೆಯನ್ನು ಸಲ್ಲಿಸಬಲ್ಲರು. ಇವರೇ ನಿಜವಾದ ಉನ್ನತ ವಿದ್ಯಾವಂತರು ; ಸುಸಂಸ್ಕೃತರು.

ಆದ್ದರಿಂದ ನೀವು ವೇದಾಂತವನ್ನು ಹೃದಯದಿಂದಲೂ ತಲೆಯಿಂದಲೂ ಕೈಯಿಂದಲೂ ನಾಲಿಗೆಯಿಂದಲೂ ಆತ್ಮದಿಂದಲೂ ಎಲ್ಲಾ ಸಾಧನ ಮಾರ್ಗದಿಂದಲೂ ಅಭ್ಯಾಸ ಮಾಡಬೇಕೆಂದು ರಾಮನು ಬಯಸುತ್ತಾನೆ. ವೇದಾಂತ ವಿಜ್ಞಾನವು ನಿಮ್ಮ ರಕ್ತದಲ್ಲಿ ಜುಮ್ಮೆಂದು ಪುಲಕಿತವಾಗಲಿ ; ಅದು ನಿಮ್ಮ ನರನಾಡಿಗಳಲ್ಲಿ ಹರಿಯಲಿ ; ಅದು ನಿಮ್ಮ ಹೃದಯವನ್ನು ತೂರಿ ಮೊರೆಯಲಿ ; ನಿಮ್ಮ ಮಿದುಳು ಅದರಲ್ಲಿಯೇ ಮುಳುಗಿರಲಿ; ನಿಮ್ಮ ಎಲ್ಲಾ ಇರುವಿಕೆಯೂ ಜೀವನವೂ ವೇದಾಂತ ತತ್ತ್ವಜ್ಞಾನದಲ್ಲಿ ಪೂರಾ ನೆನೆದು ಅದನ್ನು ಹೀರಿಕೊಳ್ಳಲಿ ; ಆಗ ನಿಮ್ಮನ್ನು ನೀವು ಉದ್ಧಾರ ಮಾಡಿಕೊಳ್ಳುತ್ತೀರಿ ; ಎಲ್ಲಾ ದೃಷ್ಟಿಯಿಂದಲೂ ನೀವು ಮುಕ್ತರಾಗುತ್ತೀರಿ. ಆಗ ನೀವು ನಿಮ್ಮ ನಿಜವಾದ ಸ್ವಭಾವವನ್ನೂ ಪರಮಾತ್ಮ ಸ್ವರೂಪವನ್ನೂ ಅರಿಯುತ್ತೀರಿ; ಪೂರ್ಣ ಜೀವನ್ಮುಕ್ತರಾಗುತ್ತೀರಿ

ನಿಮಗೆ, ಯಾರಾದರೂ ಬಾಯಿಂದ ಉಪದೇಶಿಸಿದಂತೆ ಕಾರ್ಯತಃ ನಡೆಯುವುದಿಲ್ಲವೆಂದು ತೋರಿದರೆ, ಅದಕ್ಕೆ ನೀವು ಮಹತ್ವವನ್ನೇ ಕೊಡಕೂಡದು. ಇನ್ನೊಬ್ಬರು ಹೇಗಾದರೂ ಇರಲಿ ; ನೀವು ಮಾತ್ರ ಬುದ್ಧಿಯಿಂದಲೂ ಹೃದಯದಿಂದಲೂ ಆತ್ಮದಿಂದಲೂ ತತ್ತ್ವಜ್ಞಾನದಲ್ಲಿಯೇ ಮುಳುಗಿರಬೇಕು ; ಸತ್ಯನಿಷ್ಠರಾಗಿರಬೇಕು. ನೀವು ಅದರಲ್ಲಿಯೇ ಜೀವಿಸಿದರೆ, ಹೆಚ್ಚು ಉತ್ತಮರೂ ಉನ್ನತರೂ ದಿವ್ಯರೂ ಭವ್ಯರೂ ಆಗುತ್ತೀರಿ. ನೀವು ಹಾಗಿರಬೇಕು ; ಅದಾಗಬೇಕು ಎಂದು ರಾಮನು ಬಯಸುತ್ತಾನೆ.

ರಾಮನಲ್ಲಿ ಸಹಸ್ರದೋಷಗಳಿರಬಹುದು ; ಅವನು ಸಹಸ್ರವಿಧವಾಗಿ ತಪ್ಪು ನಡೆಯಬಹುದು, ಅಪರಾಧಗಳನ್ನು ಮಾಡಬಹುದು ; ಅದರಿಂದ ನಿಮಗೇನು ನಷ್ಟ, ನಿಮಗೇನು ಕಷ್ಟ ? ಅವನ ದೋಷಗಳಿಗೂ ತಪ್ಪುಗಳಿಗೂ ಅವನೇ ಹೊಣೆಗಾರ. ಆದರೆ ರಾಮನು ನಿಮಗೆ ದಿವ್ಯವಾದ ಜ್ಞಾನವನ್ನು ನೀಡುತ್ತಾನೆ. ಅದನ್ನು ನೀವು

ನಿಮ್ಮ ಜೀವನ ಸರ್ವಸ್ವವನ್ನಾಗಿ ಮಾಡಿಕೊಳ್ಳಿ ; ಅದರಿಂದ ನಿಮಗೆ ಸುಖವಾಗುತ್ತದೆ ನೀವು ಎಲ್ಲಾ ಸಂಶಯಗಳನ್ನೂ ಮೀರಿ ನಿಲ್ಲುತ್ತೀರಿ.

ರಾಮನು ಏನನ್ನು ಉಪದೇಶಿಸುತ್ತಾನೋ ಅದರಂತೆ ಅವನು ಒಂದು ವೇಳೆ ನಡೆಯದಿರಬಹುದು ; ಹಾಗೆ ನಡೆಯುವದಕ್ಕೆ ಪ್ರತಿಕೂಲವಾದ ಸನ್ನಿವೇಶ–ಸಂದರ್ಭ ಗಳಲ್ಲಿ ಅವನಿರಬಹುದು ಆದರೆ ನೀವು ಅವನ ಉಪದೇಶವನ್ನು ಪರೀಕ್ಷಿಸಿ, ಪ್ರಯೋಗಿಸಿ ನೋಡಬಹುದು ; ಅದರಂತೆ ನಡೆಯಬಹುದು.

ಕಾಲ್ವಿನ್, ಎಡಿಸನ್ ಮೊದಲಾದ ಮಹಾಶಯರು ತಮ್ಮ ಮಿದುಳಿನಿಂದ ಆಲೋಚನೆ ಮಾಡಿ, ಕಾರ್ಯರೀತಿಯನ್ನೂ ನೀತಿಯನ್ನೂ ರೂಪಿಸುತ್ತಾರೆ. ಆ ಮಾದರಿಗಳನ್ನೂ ನಕ್ಷೆಗಳನ್ನೂ ಆಕೃತಿಗಳನ್ನೂ ಪ್ರತಿಕೃತಿಗಳನ್ನೂ ಬರಿ ಕೈಯಿಂದ ಮಾಡುವದಕ್ಕೆ ಸಾಧ್ಯವಲ್ಲ. ಅವಕ್ಕೆ ಒಂದೊಂದು ಬಗೆಯ ಯಂತ್ರೋಪಕರಣಗಳು ಬೇಕು. ಆದ್ದರಿಂದ ಅವರು ನಿಮಗೆ ಅವುಗಳನ್ನು ರಚಿಸುವ ಸಂವಿಧಾನಗಳನ್ನೂ ಯೋಜನೆಗಳನ್ನೂ ಕೊಡುತ್ತಾರೆ. ನಿಮಗೆ ಕೈಗಳಿವೆ, ಕುಶಲತೆಯಿದೆ ; ಆದ್ದರಿಂದ ನೀವು ಆ ಯಂತ್ರಗಳನ್ನು ನಿರ್ಮಾಣ ಮಾಡಬಹುದು ಅವುಗಳ ಮೂಲ ತತ್ತ್ವ ವನ್ನೂ ತಂತ್ರವನ್ನೂ ಯೋಜನೆಗಳನ್ನೂ ಸಂಯೋಜನೆಗಳನ್ನೂ ಆಲೋಚಿಸುವ ಶಕ್ತಿಯು ನಿಮ್ಮಲ್ಲಿ ಇಲ್ಲದೇ ಇರಬಹುದು. ಆದರೆ ಆ ಯೋಜನೆಗಳನ್ನು ಕಾರ್ಯ ರೂಪದಲ್ಲಿ ಸಾಧಿಸುವ ಕೈಯೂ ಕೌಶಲವೂ ನಿಮ್ಮಲ್ಲಿರಬಹುದು.

ಕೆಲಸಗಾರರ ಕಷ್ಟಕ್ಕೆ ಇದೇ ಕಾರಣ. ಅವರಿಗೆ ಕೊಟ್ಟ ಯೋಜನೆಗಳನ್ನೂ ಮಾದರಿಗಳನ್ನೂ ಅವರು ಕಾರ್ಯರೂಪದಲ್ಲಿ ತರುವದಿಲ್ಲ.

ಹಾಗೆಯೇ, “ಈ ಗುರುಗಳು ಇತರರಿಗೆ ಉಪದೇಶಿಸುವಂತೆ ತಾವು ಆಚರಿಸುವದಿಲ್ಲ ; ಆದ್ದರಿಂದ ಇವರು ಬೋಧಿಸುವ ಯಾವ ವಿಚಾರವನ್ನೂ ನಾವು ಒಪ್ಪುವದಿಲ್ಲ.” ಎಂದು ಹೇಳುವ ಜನರ ತರ್ಕವು ಸರಿಯಾದುದಲ್ಲ.

ಮತ್ತೇನೆಂದರೆ, ಒಬ್ಬ ವರ್ತಕನು ಟಾನಿಕ್ಕು (ತ್ರಾಣಕ) ಗಳನ್ನೂ ಹಾಲನ್ನೂ ಮಿಠಾಯಿಗಳನ್ನೂ ಮಾರುತ್ತಿರುತ್ತಾನೆ. ಅವನು ಮಾತ್ರ ಹಾಲನ್ನಾಗಲೀ ಟಾನಿಕ್ಕನ್ನಾಗಲೀ ಮಿಠಾಯಿಯನ್ನಾಗಲೀ ಸೇವಿಸದಿರಬಹುದು. ಹಾಗಾದರೆ ಯಾರೂ ಈ ಪದಾರ್ಥಗಳನ್ನು ಅವನಲ್ಲಿ ಕೊಳ್ಳಬಾರದೇ ?

ಒಬ್ಬ ವೈದ್ಯರು ಯಾವದೋ ಕಾಯಿಲೆಯಿಂದ ನರಳುತ್ತಿರಬಹುದು ; ಅದನ್ನು ಗುಣಪಡಿಸಿಕೊಳ್ಳುವದು ಅವರಿಂದ ಸಾಧ್ಯವಿಲ್ಲದೆಯೂ ಇರಬಹುದು. ಹೀಗಾದ ಮಾತ್ರಕ್ಕೆ ಯಾರೂ ಅವರಿಂದ ಔಷಧಿಯನ್ನೇ ತೆಗೆದುಕೊಳ್ಳಬಾರದೆ ? ಯಾವ ರೋಗದಿಂದ ನೀವು ನರಳುತ್ತಿದ್ದೀರೋ ಆ ರೋಗವನ್ನು ಅವರು ಗುಣಪಡಿಸಬಲ್ಲರು. ಆದರೆ ಅವರ ರೋಗಕ್ಕೆ ಅವರಿಗೆ ಚಿಕಿತ್ಸೆಯು ತಿಳಿಯದು. ಅವರ ರೋಗವನ್ನು ಅವರು ಗುಣಪಡಿಸಿಕೊಳ್ಳಲಾರರಾದರೂ ನಿಮ್ಮ ರೋಗವನ್ನು ಅವರು ಗುಣಪಡಿಸಬಹುದು. ಅಂಥವರಿಂದ ಚಿಕಿತ್ಸೆಯನ್ನು ಪಡೆಯದೆ ಇರುವದು ತಪ್ಪೆಂದು ವೇದಾಂತವು ಹೇಳುತ್ತದೆ.

ಒಂದು ಪುಸ್ತಕದ ಲೇಖಕರು ಯಾರು, ಎಂದು ಮೊದಲು ತಿಳಿದ ಹೊರತು ಜನರು ಆ ಪುಸ್ತಕವನ್ನು ಓದುವದಿಲ್ಲವೆಂದು.ಇಂಡಿಯಾದಲ್ಲಿಯೂ ಅಮೆರಿಕಾದಲ್ಲಿಯೂ ಜನರೊಡನೆ ಮಾತನಾಡುವದರಿಂದ ರಾಮನಿಗೆ ಗೊತ್ತಾಗಿದೆ. ಅನೇಕರು, "ಈ ಪುಸ್ತಕದಲ್ಲಿ ಲೇಖಕನು ತಾನೇ ದೇವರೆಂದು ಹೇಳಿಕೊಂಡಿದ್ದಾನೆ ; ಆದರೆ ಇವನು ಎಷ್ಟೋ ನಾಚಿಕೆಗೇಡಿನ ನಿಂದ್ಯಕರ್ಮವನ್ನು ಮಾಡಿದ್ದಾನೆ. ಆದ್ದರಿಂದ ಇವನ ಈ ಪುಸ್ತಕವನ್ನು ನಾನೆಂದೂ ಓದುವದಿಲ್ಲ" ಎಂದು ಹೇಳಬಹುದು. ರಾಮನು ಹೇಳುವದೇನೆಂದರೆ, "ತಮ್ಮ, ತಮ್ಮ, ತಪ್ಪಾಗಿ ತಿಳಿಯಬೇಡ ; ಒಬ್ಬ ಮನುಷ್ಯನು ಕೆಟ್ಟವನಿರಬಹುದು ; ಆದರೆ ಅವನ ಮಾತಿನ ಸತ್ಯತೆಯನ್ನು ವಿವೇಚನೆ ಮಾಡುವದಕ್ಕೆ ಅವನ ಕೆಟ್ಟತನವು ಅಡ್ಡಿಯಾಗಬಾರದು. ಅವನ ಮಾತನ್ನೇ ಬೇರೆ ತೆಗೆದುಕೊಂಡು ಸ್ವತಃ ಅದರಲ್ಲಿ ಸತ್ಯವೇನಿದೆ ಎಂಬದನ್ನು ವಿಚಾರಮಾಡು." ಎಂದು ರಾಮನು ಹೇಳುತ್ತಾನೆ.

ಇಂಡಿಯಾದಲ್ಲಿ ಪರ್ಷಿಯಾದ ಗಾಲಿಗಳ ಸಹಾಯದಿಂದ ಬಾವಿಗಳಿಂದ ನೀರನ್ನು 'ಪೋಂಪ್' ಮಾಡಿ, ಹೊರಗೆ ಕಾಲುವೆಗಳ ಮೂಲಕ ಹೊಲಗಳಿಗೆ ಬಿಟ್ಟುಕೊಳ್ಳುತ್ತಾರೆ. ಬಾವಿಯಲ್ಲಿ ನೀರು ಇರುವಾಗ ಅಲ್ಲಿ ಹುಲ್ಲುಗಾವಲಾಗಲೀ ಪಯಿರುಪಚ್ಚೆಗಳಾಗಲೀ ಇಲ್ಲ ; ನೀರು ಕಾಲುವೆಗಳಲ್ಲಿ ಹರಿಯುವಾಗಲೂ ಸಸ್ಯಗಳಿಗೆ ಉಪಯೋಗವಿಲ್ಲ ; ಆದರೆ ಹೊಲಗಳಿಗೆ ನೀರನ್ನು ಬಿಟ್ಟುಕೊಂಡಾಗ, ಅಲ್ಲಿಯ ಭೂಮಿಯು ನೆನೆದು ಫಲವತ್ತಾಗಿ ಸಸ್ಯಗಳು ಕಾಣಿಸಿಕೊಳ್ಳುತ್ತವೆ. ಆದ್ದರಿಂದ ನೀರು ಬಾವಿಯಲ್ಲಿರುವಾಗಲೂ ಕಾಲುವೆಗಳಲ್ಲಿ ಹರಿಯುವಾಗಲೂ ಸಸ್ಯಗಳು ಹುಟ್ಟಲಿಲ್ಲವಾದ್ದರಿಂದ ಹೊಲಗಳಲ್ಲಿಯೂ ನೀರಿನಿಂದ ಸಸ್ಯಗಳು ಉತ್ಪನ್ನವಾಗುವದಿಲ್ಲವೆಂದು ವಾದಿಸಬಾರದು.

ಹೀಗೆ, ಜ್ಞಾನವು ನಿಮಗೆ ಯಾವ ಮೂಲದಿಂದ ಬಂದರೂ ಅದನ್ನು ನೀವು ಸ್ವೀಕರಿಸಬೇಕೆಂದು ರಾಮನು ಹೇಳುತ್ತಾನೆ. "ಇಂಡಿಯಾದಿಂದ ಜ್ಞಾನವು ಬಂದರೆ, ಪ್ರಕೃತಿ ವಿಕಾಸದ ಆಳತೆಯಲ್ಲಿ ಸ್ವತಃ ಇಂಡಿಯಾದವರೇ ಏಕೆ ಇಷ್ಟು ಕೆಳಗಿದ್ದಾರೆ?" ಎಂದು ನೀವು ಕೇಳಬೇಡಿ. ಸತ್ಯವನ್ನು ಅದರ ಯೋಗ್ಯತೆಯ ಮೇಲೆಯೇ ಬೆಲೆಯನ್ನು ಕಟ್ಟಬೇಕು: ಪರೀಕ್ಷಿಸಬೇಕು, ತೂಕಮಾಡಬೇಕು. ಮನುಷ್ಯನನ್ನು ಸುಖಿಯನ್ನಾಗಿ ಮಾಡುವದಕ್ಕೆ, ಅವನು ತನ್ನ ದೇವತ್ವವನ್ನು ಅರಿತು ನಿಜಾನಂದವನ್ನು ಪಡೆಯುವದಕ್ಕೆ ಇದೊಂದೇ ದಾರಿ. ನೀವು ಎಲ್ಲಾ ಚಿಂತೆಗಳನ್ನೂ ದುಃಖಗಳನ್ನೂ ಮೀರುವಂತೆ ಅದು ಮಾಡುತ್ತದೆ. ಅದಕ್ಕೆ ಇದೊಂದೇ ಮಾರ್ಗವೇ ಹೊರತು ಬೇರೆ ಮಾರ್ಗವಿಲ್ಲ.

ಹೀಗೆಯೇ ಕ್ರಿಸ್ತನ ಗುಣಶೀಲಗಳು ಉದಾತ್ತವಾಗಿದ್ದ ಮಾತ್ರಕ್ಕೆ ಅವನ ಉಪದೇಶಗಳೆಲ್ಲಾ ಪೂರ್ಣಸತ್ಯದ ಹೊರತು ಬೇರೆಯಲ್ಲವೆಂದು ತಿಳಿಯಬೇಡಿ. ಕೆಲವು ಸಮಯ ನಾವು ಅತ್ಯಂತ ಸುಂದರ ತರುಣರನ್ನು ನೋಡುತ್ತೇವೆ; ಆದರೆ ಅವರಲ್ಲಿ ಏನೋ ಸ್ವಲ್ಪ ಬಹಳ ಕೆಟ್ಟದ್ದನ್ನೂ ಕಾಣುತ್ತೇವೆ. ಒಬ್ಬ ಮನುಷ್ಯನ ಕಾರ್ಯವು ಶ್ರೇಷ್ಠವೂ ಶ್ಲಾಘ್ಯವೂ ಆಗಿರಬಹುದು; ಅವನ ಬೋಧನಗಳೂ ಲೇಖನಗಳೂ ಹಾಗೆಯೇ ಇರಬಹುದು; ಆದರೆ ಅವನಿಂದ ಉತ್ಪನ್ನವಾದುದೆಲ್ಲಾ ಒಳ್ಳೆಯದಲ್ಲದೆ ಇರಬಹುದು. ಅವನ ರಕ್ತವೋ ಅವನ ಮೂಳೆಗಳೋ ಒಳ್ಳೆಯವಲ್ಲದೆ ಇರಬಹುದು.

ಹಾಗೆಯೇ ಬೈಬಲ್ಲನ್ನು ಓದುವಾಗ, ಅದರಲ್ಲಿರುವದೆಲ್ಲಾ ಕ್ರಿಸ್ತನ ಉಪದೇಶಗಳೆಂದು ತಿಳಿಯಬೇಡಿ. ಕ್ರಿಸ್ತನೂ ಪರಿಪೂರ್ಣ, ಪರಿಶುದ್ಧ; ಅವನ ಬೋಧೆಯೂ ಪರಿಪೂರ್ಣ, ನಿರ್ದುಷ್ಟ. ಆದರೆ ಒಬ್ಬರಿಗೆ ಸೇರಿದ್ದನ್ನು ಇನ್ನೊಬ್ಬರಿಗೆ ಆರೋಪಿಸಬೇಡಿ; ಬೈಬಲ್ಲಿನ ನಿಜವಾದ ಯೋಗ್ಯತೆಯನ್ನು ಅರಿಯಿರಿ. ಸರ್‌ಇಸ್ಸಾಕ್‌ನ್ಯೂಟನ್‌ನ (Sir Issac Newton) ಪ್ರಿನ್ಸಿಪಿಯ (Principia) ಎನ್ನುವ ಗ್ರಂಥದಲ್ಲಿ ಅನೇಕ ತಪ್ಪುಗಳಿವೆ. ಅವನ ಕಾಲದಲ್ಲಿ ಅವನು ಅತ್ಯಂತ ಶ್ರೇಷ್ಠಮನುಷ್ಯ ಇದ್ದಿರಬಹುದು; ಆದರೂ ಅವನ ಗ್ರಂಥಗಳ ನಿಜವಾದ ಯೋಗ್ಯತೆಯನ್ನು ಪರೀಕ್ಷಿಸಿ ನಿರ್ಣಯಿಸಬೇಕು.

ಹೀಗೆಯೇ ರಾಮನಲ್ಲಿರುವ ಸದ್ಗುಣಗಳಿಗೂ ಅಥವಾ ದುರ್ಗುಣಗಳಿಗೂ ನಿಮಗೂ ಏನೂ ಸಂಬಂಧವಿಲ್ಲ. ರಾಮನ ಉಪದೇಶಗಳಲ್ಲಿರುವ ಆಧ್ಯಾತ್ಮಿಕ

ಯೋಗ್ಯತೆಯನ್ನು ಅರಿತು ಸ್ವೀಕರಿಸಿ. ವೇದಾಂತ ಬೋಧೆಗಳು ನಿಮ್ಮನ್ನು ಮೇಲಕ್ಕೆ ಎತ್ತುತ್ತವೆ. ಅವು ರಾಮನದೆಂದು ಭಾವಿಸಬೇಡಿ ; ಅವು ನಿಮ್ಮವೇ.

ವೇದಾಂತವು ದಾಸ್ಯವಲ್ಲ. ಬೌದ್ಧಮತವು ಬುದ್ಧನ ಗುಲಾಮಗಿರಿ ; ಮಹಮ್ಮದೀಯ ಧರ್ಮವು ಮಹಮ್ಮದನ ಗುಲಾಮಗಿರಿ, ಜೊರೋಸ್ಟ್ರಿಯ ಧರ್ಮವು ಜೊರೋಸ್ಟ್ರಿಯನ ಗುಲಾಮಗಿರಿ ; ಆದರೆ ವೇದಾಂತವು ಯಾವ ಸಂತನ ಮಹಾಂತನ–ಗುಲಾಮಗಿರಿಯೂ–ಅಲ್ಲ. ಅದು ಸತ್ಯವು ; ಸತ್ಯವು ಯಾರೊಬ್ಬಗೆ–ಸೇರಿದ್ದಲ್ಲ, ಅದು ಎಲ್ಲರಿಗೂ ಸೇರಿದ್ದು.

ನಾವು ಹೊರಗೆ ಬಿಸಿಲಿನಲ್ಲಿ ಕುಳಿತರೆ, ಸೂರ್ಯನಿಗೇನೂ ಆ ಹಿತಕ್ಕಾಗಿ ನಾವು ಕೃತಜ್ಞರಾಗಿರುವದಿಲ್ಲ ; ಏಕೆಂದರೆ ಸೂರ್ಯನು ಪ್ರತಿಯೊಬ್ಬರಿಗೂ ಸೇರಿದವನು. ರಾಮನು ವೇದಾಂತವಿಜ್ಞಾನದ ಎಳೆಬಿಸಿಲಿನಲ್ಲಿ ಕುಳಿತು ಹಿತವಾಗಿ ಕಾಯಿಸಿಕೊಂಡರೆ, ನೀವೂ ಅದರಲ್ಲಿ ಕುಳಿತು ಹಾಯಾಗಿ ಕಾಯಿಸಿಕೊಳ್ಳಬಹುದು ; ಆ ಹೂಬಿಸಿಲು ಹೇಗೆ ರಾಮನದೋ ಹಾಗೆ ನಿಮದೂ ಆಗಿದೆ. ಸತ್ಯವು ಹೇಗೆ ಭಾರತಕ್ಕೆ ಸೇರಿದೆಯೋ ಹಾಗೆ ಅಮೇರಿಕಾಕ್ಕೂ ಸೇರಿದೆ. ಅದರ ಸ್ವಂತ ಯೋಗ್ಯತೆಯ ಮೇಲೆ ಅದನ್ನು ತೆಗೆದುಕೊಳ್ಳಿ. ಅದು ಒಳ್ಳೆಯದಾದರೆ ಅದನ್ನು ಸ್ವೀಕರಿಸಿ ; ಕೆಟ್ಟದ್ದಾದರೆ ತಿರಸ್ಕರಿಸಿ. ಖಡ್ಗ ಮತ್ತು ಹಣದ ಮೂಲಕವಾಗಿ ಇಂಡಿಯಾ ದೇಶಕ್ಕೆ ಮಹಮ್ಮದೀಯ ಮತ್ತು ಕ್ರೈಸ್ತ ಧರ್ಮಗಳನ್ನು ತಂದಂತೆ ನಾವು ವೇದಾಂತವನ್ನು ತರುವದಿಲ್ಲ. ರಾಮನು ಅದನ್ನು ಹಾಗೆ ತಂದಿಲ್ಲ. ವೇದಾಂತವು ನಿಮ್ಮದೇ ಆದ್ದರಿಂದ ಅದನ್ನು ತೆಗೆದುಕೊಂಡು ಅಭ್ಯಾಸಮಾಡಿ.

ಒಬ್ಬ ಸ್ನೇಹಿತನು ಹೊರಗೆ ಬಿಸಿಲಿನಲ್ಲಿ ಕುಳಿತರೂ ಕೂಡ ಅದರ ಸುಖವನ್ನು ಅನುಭವಿಸದಿದ್ದರೆ, ನೀವೂ ಅನುಭವಿಸದಿರುವದಕ್ಕೆ ಕಾರಣವಿಲ್ಲ. ವೇದಾಂತವಿಚಾರವೂ ಹಾಗೆಯೇ. ಅದರಲ್ಲಿರುವ ಗುಣಗಳಿಗಾಗಿ, ಮಹಿಮೆಗಾಗಿ, ಅದನ್ನು ಕಲಿತು, ನಿಮ್ಮ ಶೀಲದಲ್ಲಿ ಅಳವಡಿಸಿಕೊಳ್ಳಿ. ಎಲ್ಲಾ ವ್ಯಕ್ತಿತ್ವವನ್ನೂ ಮೀರಿ ನಿಲ್ಲಿ, ಎಲ್ಲಾ ಕ್ರಿಸ್ತರನ್ನೂ ಬುದ್ಧರನ್ನೂ ಮಹಮ್ಮದರನ್ನೂ ಅಥವಾ ರಾಮರನ್ನೂ ಮೀರಿ ನಿಲ್ಲಿ. ರಾಮನು ಹೇಳುವದೇನೆಂದರೆ " ಈ ದೇಹವನ್ನು ಬೇಕಾದರೆ ನಿಮ್ಮ ಕಾಲುಗಳ ಕೆಳಗೆ ಹಾಕಿ ತುಳಿಯಿರಿ ; ಇದು ನಾನಲ್ಲ–ಇದನ್ನು ಚೆನ್ನಾಗಿ ಮನವರಿಕೆಮಾಡಿಕೊಂಡು ಅರಿಯಿರಿ. " ಸತ್ಯವೇ ನಾನು, ಸಚ್ಚಿದಾನಂದನೇ ನಾನು." ಇದನ್ನರಿತು ಮುಕ್ತರಾಗಿ. ಓಂಕಾರವನ್ನು ಉಚ್ಚರಿಸಿ "I am" (ನಾನಿದ್ದೇನೆ) ಇದೇ ಓಂ ಆಗಿದೆ. ಕ್ರಿಸ್ತರಿಗೆಲ್ಲಾ

ಕ್ರಿಸ್ತನೂ ಜೆಹೋವನೂ ನಾನೇ, ಓಂ , ನಾನೇ ನೀವು. ಇದನ್ನರಿತರೇ ನೀವು ಎಲ್ಲಾ ಚಿಂತೆಗಳನ್ನೂ ಮೆಟ್ಟಿ ನಿಲ್ಲುತ್ತೀರಿ. ಈ ಎಲ್ಲಾ ಎಡವುಗಲ್ಲುಗಳನ್ನೂ ಬಿಟ್ಟು, ವೇಗವಾಗಿ ಮುನ್ನಡೆಯಿರಿ ಎಲ್ಲಾ ಕ್ರಿಸ್ತರನ್ನೂ ಎಲ್ಲಾ ಮಹಮ್ಮದರನ್ನೂ ಎಲ್ಲಾ ಮಿತ್ರರನ್ನೂ ಮೀರಿ ನಿಲ್ಲಿ. ಅವರೇನೂ ಸ್ಥಿರವಾದ ಮಾರ್ಗದರ್ಶಿಗಳೆಂದು ನಂಬಬೇಡಿ.

ಅವರು ಬದಲಾಯಿಸತಕ್ಕವರು, ಚಂಚಲರು. ಈ ಎಲ್ಲಾ ಛಾಯಾರೂಪಿಗಳ ಕಾರಣವೂ ಮೂಲವೂ ಆದ ಪರಮಸತ್ಯವನ್ನು ಅರಿಯಿರಿ. ಅದನ್ನರಿತು ಮುಕ್ತರಾಗಿ.

ಓಂ ! ಓಂ ! ಓಂ !

# Class Lectures on Vedanta—III

# ವೇದಾಂತ ಪಾಠಕ್ರಮದ ಉಪನ್ಯಾಸಗಳು—೩

## ತಾ॥ 22-1-1903 ರಲ್ಲಿ ಸ್ಯಾನ್‌ಫ್ರಾನ್ಸಿಸ್ಕೋ ನಗರದಲ್ಲಿ ಗೋಲ್ಡನ್ ಗೇಟ್‌ಹಾಲ್‌ನಲ್ಲಿ ಮಾಡಿದ ಉಪನ್ಯಾಸ

ಸಂಪನ್ನ ಸ್ತ್ರೀಪುರುಷ ರೂಪದಲ್ಲಿರುವ ನನ್ನ ಆತ್ಮವೆ,

ಪ್ರಶ್ನೆ—ಸ್ವಾಮಿಗಳು "ನಾವು ಮುಕ್ತರಾಗುತ್ತೇವೆ" ಎನ್ನುತ್ತಾರೆ ; ಇದರ ಅರ್ಥವೇನು ?

ಉತ್ತರ—ಕರಾರುವಾಕಾಗಿ, ನಿಷ್ಕೃಷ್ಟವಾಗಿ ಹೇಳುವದಾದರೆ, "ನಾವು ಮುಕ್ತರಾಗುತ್ತೇವೆ" ಎನ್ನುವ ಮಾತು ತಪ್ಪಾದುದು. ಮುಂದೆ ನಾವು ಮುಕ್ತರಾಗುವೆವು' ಎಂದು ಆ ಮಾತಿನ ಅರ್ಥವಲ್ಲ ; ಈ ಕ್ಷಣವೇ ನಾವು ಮುಕ್ತರಾಗಿದ್ದೇವೆ. ನಾವು ಮೊದಲಿನಿಂದಲೂ ಮುಕ್ತರೇ, ಎಂದೆಂದೂ ಮುಕ್ತರೇ. ನಾವು ಎಂದೂ ಬಂಧನದಲ್ಲಿಯೂ ದಾಸ್ಯದಲ್ಲಿಯೂ ಇರಲಿಲ್ಲ. ನಾವು ಮುಕ್ತರಾಗುತ್ತೇವೆ ಎಂದರೆ, ರೂಢಿಯ ಭಾಷೆಯಲ್ಲಿ 'ನಾವು ಜ್ಞಾನಸಂಪನ್ನರಾಗುತ್ತೇವೆ' ಎಂದು ಅರ್ಥ. ದಾಸ್ಯದಿಂದಲೂ ಬಂಧನದಿಂದಲೂ ಮುಕ್ತರಾಗುತ್ತಾರೆ ಎಂದರೆ, ಆ ದಾಸ್ಯ–ಬಂಧನಗಳು ನಿಜವಾದವು ಎಂದೇನೂ ಅರ್ಥವಲ್ಲ. ಅಜ್ಞಾನ, ತಪ್ಪು ತಿಳಿವಳಿಕೆ, ಭ್ರಮೆ—ಇವುಗಳ ಫಲವೇ ಬಂಧನವಾಗಿ ತೋರುತ್ತದೆ. ನಿಜವಾದ ದಾಸ್ಯ—ಬಂಧನಗಳಿಲ್ಲ ; ದಾಸ್ಯಬಂಧನಗಳು ನಿಜವಲ್ಲ. ನಿಜವಾದ ಜ್ಞಾನವೂ ಆತ್ಮಾನುಭವವೂ ತಮ್ಮನ್ನು ಶಾಶ್ವತವಾಗಿ ಮುಕ್ತರನ್ನಾಗಿ ಮಾಡುತ್ತದೆ. ಆ ಸ್ವಾತಂತ್ರ್ಯವನ್ನೂ ಮುಕ್ತಿಯನ್ನೂ ನಾವೆಂದೂ ಕಳೆದುಕೊಂಡಿಲ್ಲ. ಅದನ್ನು ಮುಂದೆ ಸಂಪಾದಿಸಬೇಕಾಗಿಲ್ಲ. ಅದು ನಿಮ್ಮ ನಿಜ ಸ್ವಭಾವವಾಗಿದೆ ; ನಿಮ್ಮ ಸ್ವರೂಪವಾಗಿದೆ ; ಅದು ಯಾವಾಗಲೂ ನಿಮ್ಮದೇ ಆಗಿದೆ ; ಅದು ನಿಮ್ಮ ಜನ್ಮಸಿದ್ಧವಾದ ಹಕ್ಕು.

ಒಬ್ಬ ಹೆಂಗಸಿನ ಕೊರಳಲ್ಲಿ ಒಂದು ಅನರ್ಘವಾದ ರತ್ನಮಾಲೆ ಇತ್ತು. ರಾತ್ರಿ ಮಲಗಿದಾಗ ಆಕೆಯ ಬೆನ್ನಮೇಲೆ ಅದು ಜಾರಿ ಸರಿದಿತ್ತು ಬೆಳಿಗ್ಗೆ ಎದ್ದು ಮನೆ ಗೆಲಸ ಮಾಡುವಾಗ ನಿತ್ಯವೂ ಕೊರಳಲ್ಲಿ ಎದೆಯ ಮೇಲೆ ಜೋಲಾಡುತ್ತಿದ್ದ ಸರವು ಆ ದಿನ ಕಾಣದಾಗಲು ಆಕೆಯು ಗಾಬರಿಯಾಗಿ ಮನೆಯೆಲ್ಲಾ ಹುಡುಕಿ ದೊರಕದೆ ಅಳುವದಕ್ಕೆ ತೊಡಗಿದಳು. ಆಕೆಯ ನೆರೆಮನೆಯ ಗೆಳತಿಯು ಯಾವದೋ ಕೆಲಸ ಕ್ಕಾಗಿ ಆ ಮನೆಗೆ ಬಂದವಳು ಈಕೆಯ ಶೋಕಕ್ಕೆ ಕಾರಣವನ್ನು ಕೇಳಿ, ಕಂಠಹಾರವು ಕಳೆದಿದೆಯೆಂಬದನ್ನು ತಿಳಿದು, ಆಕೆಯ ಕೊರಳನ್ನು ನೋಡಿದಳು ಅದು ಅಲ್ಲಿಯೋ ಜಾರಿ ಹಿಂದೆ ಸರಿದಿರುವದನ್ನು ನೋಡಿ, ಆ ಗೆಳತಿಯು ಆಕೆಗೆ ತೋರಿಸಿದಳು. ಆಕೆಯು ವಿಸ್ಮಯ ಸಂತೋಷದಿಂದ ತನ್ನ ಹಾರವನ್ನು ಕೈಯಿಂದ ಮುಟ್ಟಿ ನೋಡಿಕೊಂಡು ಸರಿಮಾಡಿಕೊಂಡಳು. ನಿಜವಾಗಿ ನೋಡಿದರೆ, ಆ ಸರವನ್ನು ಆಕೆಯು ಕಳೆದು ಕೊಂಡೂ ಇರಲಿಲ್ಲ. ಅದನ್ನು ಹೊಸದಾಗಿ ಪಡೆಯಲೂ ಇಲ್ಲ. ಆದರೆ ಅದನ್ನು ಆಕೆ ಮರೆತಿದ್ದಳು; ಯಾವಾಗಲೂ ಅದು ಆಕೆಯ ಕೊರಳಲ್ಲಿಯೋ ಇದ್ದಿತು. ಹೀಗೆಯೇ ನಿಮ್ಮ ನಿಜವಾದ ಆತ್ಮನು—'ನಾನಿದ್ದೇನೆ' ಎಂಬ ಆತ್ಮನು-ಹಿಂದೂ ಇಂದೂ ಮುಂದೂ ಎಂದೆಂದೂ ಒಂದೇ ರೂಪವಾಗಿದ್ದಾನೆ ಆದರೆ ಮನಸ್ಸು, ಬುದ್ಧಿಯು ಅಜ್ಞಾನವನ್ನು ಕಳೆದುಕೊಳ್ಳಬೇಕಾಗಿದೆ. ಆ ಅಮೂಲ್ಯ ರತ್ನ ಮಾಲೆಯು ಸಿಕ್ಕಿತೆಂದು ನಂಬುವಂತೆ ನೀವು ಮುಕ್ತಿಯನ್ನು ಪಡೆಯುತ್ತೀರಿ, ಪಡೆದಿರಿ ಎನ್ನಬಹುದು. ಎಂದೂ ಕಳೆಯದಿದ್ದ ರತ್ನಮಾಲೆಯು ನಿಮಗೆ ಸಿಕ್ಕಿತೆಂದು ಹೇಳು ವಂತೆ ಮೋಕ್ಷಪ್ರಾಪ್ತಿಯ ವ್ಯವಹಾರವೂ ಇದೆ.

ಪ್ರಶ್ನೆ— ಜೀವಾತ್ಮನ (soul) ಪ್ರತ್ಯೇಕ ಅಸ್ತಿತ್ವವನ್ನು, ವ್ಯಕ್ತಿತ್ವವನ್ನು (Individuality) ನಾವು ಮುಂದುವರಿಸುತ್ತೇವೆಯೆ ?

ಉತ್ತರ—ಒಳ್ಳೆಯದು, ಈ ಪ್ರಶ್ನೆಯ ಉತ್ತರವು ಸೋಲ್ (soul) (ಜೀವ) ಆತ್ಮ ಎಂಬ ಶಬ್ದದ ಅರ್ಥವನ್ನು ಅವಲಂಬಿಸುತ್ತದೆ. ಅದನ್ನು ಆತ್ಮ ಎಂದು ಅರ್ಥಮಾಡಿದರೆ, ಆತ್ಮನು ಎಂದೂ ಹುಟ್ಟಿಲ್ಲ; ಅವನು ಸಾಯುವದೂ ಇಲ್ಲ ಆತ್ಮನಿಗೆ ಹುಟ್ಟುಸಾವುಗಳಿಲ್ಲವಾದ್ದರಿಂದ ಅವನ ಮುಂದುವರಿಕೆಯ ಸಂಭವವೇ ಇಲ್ಲ ಸೋಲ್ (ಜೀವಾತ್ಮ) ಎಂಬ ಶಬ್ದಕ್ಕೆ ಜನ್ಮಾಂತರವನ್ನು ತೆಗೆದುಕೊಳ್ಳುವ ಆತಿವಾಹಕ ಶರೀರ, ಸೂಕ್ಷ್ಮ ಶರೀರ ಎಂದು ಅರ್ಥ ಮಾಡಿದರೆ, ಜೀವದ ಮುಂದುವರಿಕೆ ಇದೆ, ಎಂದು ಹೇಳಬೇಕು.

ಯಾಜ್ಞವಲ್ಕ್ಯ ಮಹರ್ಷಿಗೆ ಕಾತ್ಯಾಯನೀ ಮತ್ತು ಮೈತ್ರೇಯೀ ಎಂಬ ಇಬ್ಬರು ಹೆಂಡಿರಿದ್ದರು. ಅವನಲ್ಲಿ ಅತ್ಯಂತ ಮಹತ್ತಾದ ಸಂಪತ್ತು ಇದ್ದಿತು. ಅವನು ಇಂಡಿಯಾ ದೇಶದಲ್ಲಿ ಅತ್ಯಂತ ಐಶ್ವರ್ಯವಂತನಾದ ರಾಜನ ಗುರುವಾಗಿದ್ದನು ತನ್ನ ಆಸ್ತಿಯನ್ನೆಲ್ಲಾ ಎರಡು ಸಮಭಾಗಮಾಡಿ ಇಬ್ಬರು ಹೆಂಡಿರಿಗೆ ಹಂಚಿಕೊಟ್ಟು ತಾನು ಅರಣ್ಯದಲ್ಲಿ ಏಕಾಂತವಾಸದಲ್ಲಿ ತಪೋಮಯ ಜೀವನವನ್ನು ನಡೆಸಬೇಕೆಂದು ಆ ಮಹರ್ಷಿಯು ಇಚ್ಛಿಸಿದನು. ಆದರೆ ಲೌಕಿಕ ಸಂಪತ್ತು ಅಮೃತತ್ವಕ್ಕೆ ಸಾಧನವಾಗಿದ್ದರೆ, ತನ್ನ ಪತಿಯು ಅದನ್ನು ತ್ಯಾಗಮಾಡುತ್ತಿರಲಿಲ್ಲ, ಎಂದು ಆಲೋಚಿಸಿ ಮೈತ್ರೇಯಿಯು ತನ್ನ ಭಾಗವನ್ನು ತೆಗೆದುಕೊಳ್ಳಲು ನಿರಾಕರಿಸಿದಳು. ಭಾರತದೇಶದಲ್ಲಿಯೇ ಅತ್ಯಂತ ಶ್ರೀಮಂತನಾದ ತನ್ನ ಪತಿಯು, ತನ್ನ ಹಿಂದಿನ ಜೀವನಕ್ಕಿಂತಲೂ ಬೇರೆ ಬಗೆಯಾದ ಮುಂದಿನ ಜೀವನದಲ್ಲಿ ಹೆಚ್ಚು ಸುಖ ಸಂತೋಷಗಳೂ ಶಾಂತಿಯೂ ಇಲ್ಲದಾಗಿದ್ದರೆ, ಆ ಹಿಂದಿನ ಜೀವನದ ಸಕಲ ಸಂಪತ್ತನ್ನೂ ಕೊಟ್ಟುಬಿಡುತ್ತಿರಲಿಲ್ಲ, ಎಂದು ಮೈತ್ರೇಯಿಯ ಮನಸ್ಸಿನಲ್ಲಿ ವಿಚಾರವು ಹುಟ್ಟಿತು. ಆಕೆಯು ತನ್ನ ಪತಿಯನ್ನು ಕುರಿತು, "ದೇವ, ಆಧ್ಯಾತ್ಮಿಕ ಸಂಪತ್ತಿನಲ್ಲಿ ಹೆಚ್ಚು ಸುಖವಿದೆಯೊ, ಲೌಕಿಕ ಸಂಪತ್ತಿನಲ್ಲಿ ಸುಖವಿದೆಯೋ ? ಅಮೃತತ್ವಕ್ಕೆ ಯಾವುದು ಸಾಧನ ? ಐಹಿಕ ಸಂಪತ್ತಿನಿಂದ ಸಾವಿಲ್ಲದಂತೆ ಮಾಡಿಕೊಳ್ಳಲಾಗುವದೆ ? ಅದರಿಂದ ಮೃತ್ಯುವನ್ನು ಜಯಿಸಬಹುದೆ ? " ಎಂದು ಕೇಳಿದಳು.

ಯಾಜ್ಞವಲ್ಕ್ಯರು ಹೇಳಿದ್ದೇನೆಂದರೆ, "ಐಶ್ವರ್ಯವಂತರ ಜೀವನದಲ್ಲಿ ನಿಜವಾದ ಸುಖವಿಲ್ಲ ; ಶಾಂತಿಯಿಲ್ಲ ; ಸ್ವಾತಂತ್ರ್ಯವಿಲ್ಲ. ಅದರಿಂದ ಅಮೃತತ್ವವಿಲ್ಲ ; ಸಾವನ್ನು ತಪ್ಪಿಸಿಕೊಳ್ಳುವದು ಸಾಧ್ಯವಲ್ಲ."

ಮೈತ್ರೇಯಿ, "ಸಂಸಾರದ ಆಶಾಪಾಶಗಳಿಂದಲೂ ದುಃಖದಿಂದಲೂ ಬಂಧನದಿಂದಲೂ ಪೂರಾ ಬಿಡುಗಡೆಯಾಗುವದು ಹೇಗೆ ? ಜೀವನದ ಈ ಅಮೃತವನ್ನು ದಯವಿಟ್ಟು ವಿವರಿಸಬೇಕು. ನನಗೆ ಇದೊಂದೇ ಬೇಕಾಗಿದೆ." ಎಂದು ಕೇಳಿದಳು.

ಯಾಜ್ಞವಲ್ಕ್ಯರು ತಮ್ಮ ಎಲ್ಲಾ ಲೌಕಿಕ ಸಂಪತ್ತನ್ನು ಕಾತ್ಯಾಯನಿಗೂ ಪಾರಮಾರ್ಥಿಕ ಸಂಪತ್ತನ್ನು ಪೂರ್ಣವಾಗಿ ಮೈತ್ರೇಯಿಗೂ ಹಂಚಿಕೊಟ್ಟರು. ಆ ಆಧ್ಯಾತ್ಮಿಕ ಸಂಪತ್ತು ಯಾವದೆಂಬದನ್ನು ಬೃಹದಾರಣ್ಯಕ ಉಪನಿಷತ್ತಿನಲ್ಲಿ ಹೇಳಿದೆ

" ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತು
ಕಾಮಾಯ ಪತಿಃ ಪ್ರಿಯೋ ಭವತಿ ।
ನ ವಾ ಅರೇ ಜಾಯಾಯೈ ಕಾಮಾಯ ಜಾಯಾ ಪ್ರಿಯಾ ಭವತ್ಯಾತ್ಮನಸ್ತು
ಕಾಮಾಯ ಜಾಯಾ ಪ್ರಿಯಾ ಭವತಿ ॥ (ಬೃಹದಾರಣ್ಯಕ ಉಪನಿಷತ್)

ಈ ವಾಕ್ಯಕ್ಕೆ ಅನೇಕ ಅರ್ಥಗಳಿರಬಹುದು. ಮ್ಯಾಕ್ಸ್ ಮುಲ್ಲರ್ ಒಂದು ಬಗೆಯಿಂದ ಅರ್ಥಮಾಡುತ್ತಾನೆ, ಹಿಂದೂಗಳು ಇನ್ನೊಂದು ಬಗೆಯಲ್ಲಿ ವ್ಯಾಖ್ಯಾನ ಮಾಡುತ್ತಾರೆ. ಎರಡೂ ಒಂದೊಂದು ದೃಷ್ಟಿಯಿಂದ ಸರಿಯೇ. ಒಂದು ವ್ಯಾಖ್ಯಾನವೇನೆಂದರೆ, ಪತಿಯಲ್ಲಿ ಇರುವ ಕೇವಲ ಸದ್ಗುಣ-ಸೌಂದರ್ಯಗಳ ದೆಸೆಯಿಂದಲೇ ಅವನು ಪತ್ನಿಗೆ ಪ್ರಿಯನಾಗುವದಿಲ್ಲ ; ಮತ್ತೇನೆಂದರೆ, ಪತಿಯು ಆಕೆಗೆ ಕನ್ನಡಿಯಂತಾಗುತ್ತಾನೆ. ನಮ್ಮನ್ನೇ ನಾವು ಕನ್ನಡಿಯಲ್ಲಿ ನೋಡಿಕೊಂಡು ಸಂತೋಷಪಡುವಂತೆ ಪತ್ನಿಯು ಪತಿಯಲ್ಲಿ ತನ್ನನ್ನು ತಾನು ನೋಡಿಕೊಂಡು ಪ್ರೇಮಿಸಿ ಸಂತೋಷಪಡುತ್ತಾಳೆ ಆದ್ದರಿಂದ ಅವನು ಪ್ರಿಯನಾಗುತ್ತಾನ.

ಇನ್ನೊಂದು ಅರ್ಥವೇನೆಂದರೆ, ಗಂಡನಿಗಾಗಿ ಗಂಡನು ಪ್ರಿಯನಾಗುವದಿಲ್ಲ. ಹೆಂಡತಿಯು ತನ್ನ ಸುಖಕ್ಕಾಗಿಯೇ ಗಂಡನನ್ನು ಪ್ರೀತಿಸುತ್ತಾಳೆ ; ಗಂಡನು ಪ್ರಿಯನಾಗುತ್ತಾನೆ. ಹೆಂಡತಿಯು ನಿಜವಾದ ಸತ್ಯವನ್ನೇ, ದೇವರನ್ನೇ, ದಿವ್ಯತೆಯನ್ನೇ ತನ್ನ ಗಂಡನಲ್ಲಿ ನೋಡಬೇಕು. ಒಬ್ಬರು ಮಾಡುವ ಪ್ರೇಮಕ್ಕೆ ಪ್ರತಿಯಾಗಿ ಇನ್ನೊಬ್ಬರು ಪ್ರೇಮಮಾಡದಿದ್ದರೆ,—ಪ್ರೇಮವನ್ನು ಪ್ರತಿಪ್ರೇಮವು ಆದರಿಸದಿದ್ದರೆ—ಯಾರೂ ಪ್ರೇಮಮಾಡುವದಿಲ್ಲ. ಇದರಿಂದ ಏನು ತಿಳಿಯುವದೆಂದರೆ, ನಾವು ಪ್ರೀತಿಸುವದು ಇನ್ನೊಬ್ಬರಲ್ಲಿ ಪ್ರತಿಫಲನವಾದ ನಮ್ಮನ್ನೇ ಹೊರತು ಅವರನ್ನಲ್ಲ. ಇನ್ನೊಬ್ಬರಲ್ಲಿರುವ ನಮ್ಮನ್ನೇ ನಾವು ನೋಡಿಕೊಂಡು ಪ್ರೀತಿಸುತ್ತೇವೆ ನಮ್ಮಲ್ಲಿರುವ ನಿಜಾತ್ಮನನ್ನು, ದೇವರನ್ನು ನಾವು ನೋಡಬೇಕಾಗಿದೆ. ತನ್ನೊಳಗೆ ತಿರುಗಿ, ನಿಜವಾದ ತನ್ನನ್ನು ನೋಡಿ ಆನಂದ ಪಡಲಾರದೆ ಹೊರಗೆ ನೋಡುವ ಕಣ್ಣು, ತನಗೆ ಅನುಕೂಲವಾಗಿ ಕನ್ನಡಿಯಂತಿರುವ ಇನ್ನೊಬ್ಬರಲ್ಲಿ—ಇನ್ನೊಂದು ವಸ್ತುವಿನಲ್ಲಿ—ಆ ತನ್ನನ್ನು ಕಂಡು ಪ್ರೀತಿಸಿ, ಸಾತೋಷಪಡುತ್ತದೆ. ನಾವು ಯಾರನ್ನೂ ಅವರಿಗಾಗಿ ಪ್ರೀತಿಸುವದಿಲ್ಲ ; ನಮಗಾಗಿಯೇ ನಮ್ಮ ಸುಖಕ್ಕಾಗಿಯೇ ಪ್ರೀತಿಸುವದು, ಯಾವ ವಸ್ತುವು ಪ್ರಿಯವಾಗುವದೂ ನಮ್ಮ ನಿಜಾತ್ಮಕ್ಕಾಗಿಯೇ ಎನ್ನುವ ತತ್ತ್ವಾರ್ಥವನ್ನು ಚೆನ್ನಾಗಿ ಪರೀಕ್ಷೆಮಾಡಿ, ಸೂಕ್ಷ್ಮವಾಗಿ ಪರಿಶೀಲಿಸಿ, ಪರಿಶೋಧನೆಮಾಡಿ. ಎಲ್ಲಾ ಮಾಧುರ್ಯವೂ ಸೌಂದರ್ಯವೂ ಇರುವದು ನಮ್ಮ ಆತ್ಮದಲ್ಲಿಯೇ. ಆ ಸತ್ಯದಿಂದ

ಚಿಮ್ಮುವ ಭಾವನೆಗಳನ್ನು ತಪ್ಪಾಗಿ ತಿಳಿಯಬೇಡಿ ; ತಪ್ಪಾಗಿ ಬಳಸಬೇಡಿ. ನಿಮ್ಮನ್ನು ಮೇಲೇರಿಸುವದಕ್ಕೆ ಉದ್ದಿಷ್ಟವಾದ ಏಣಿಯು ಅಜ್ಞಾನ ದುಃಖಗಳಲ್ಲಿ ನೀವು ಜಾರಿ ಬೀಳುವದಕ್ಕೆ ಕಾರಣವಾಗದಿರಲಿ. ಇದನ್ನು ಚೆನ್ನಾಗಿ ಪರೀಕ್ಷೆಮಾಡಿ ; ನಿಜವಾದ ಮಾಧುರ್ಯವೂ ನಿಜವಾದ ಸಂತೋಷವೂ ನಿಜವಾದ ಸುಖವೂ ಎಲ್ಲಿದೆಯೆಂಬದು ನಿಮಗೆ ತಿಳಿಯುತ್ತದೆ. ಅದು ನಿಮ್ಮೊಳಗೇ ನಿಮ್ಮ ನಿಜಾತ್ಮನಲ್ಲಿಯೇ ಇದೆ, ನಿಮ್ಮೊಳ ಗಿರುವ ದೇವರಲ್ಲಿಯೇ ಇದೆ. ಅದನ್ನು ಚೆನ್ನಾಗಿ ಮನಗಂಡು ಬಿಡುಗಡೆ ಹೊಂದಿರಿ, ಮುಕ್ತರಾಗಿರಿ. ಅದನ್ನು ತಿಳಿದು ಎಲ್ಲಾ ಪ್ರಾಪಂಚಿಕ ಆಶೆಗಳನ್ನೂ ಮೀರಿ ನಿಲ್ಲಿರಿ. ಈ ಕೀಳೂ ಕ್ಷುದ್ರವೂ ಆದ ಎಲ್ಲಾ ಕಾಮನೆಗಳನ್ನೂ ಮೆಟ್ಟಿ ನಿಂತು ನಿಮ್ಮನ್ನು ನೀವು ಉದ್ಧಾರಮಾಡಿಕೊಳ್ಳಿ. ದೇವರಲ್ಲಿ ಒಂದಾಗಿರಿ.

ನ ವಾ ಅರೇ ಪುತ್ರಾಣಾಂ ಕಾಮಾಯ ಪುತ್ರಾಃ ಪ್ರಿಯಾ ಭವಂತ್ಯಾತ್ಮನಸ್ತು
ಕಾಮಾಯ ಪುತ್ರಾಃ ಪ್ರಿಯಾ ಭವಂತಿ ! (ಬೃ. ಉ.)

ಮಕ್ಕಳಿಗಾಗಿ ಮಕ್ಕಳು ಪ್ರಿಯರಾಗುವದಿಲ್ಲ ; ಆತ್ಮನಿಗಾಗಿ ಮಕ್ಕಳು ಪ್ರಿಯ ರಾಗುತ್ತಾರೆ. ಮಕ್ಕಳು ಅವಿಧೇಯರೂ ವಿರೋಧಿಗಳೂ ಆದರೆ, ನಿಮಗೆ ತುಂಬಾ ದುಃಖವಾಗುತ್ತದೆ ; ಅವರನ್ನು ನೀವು ಹೊರಗಟ್ಟಿಬಿಡುತ್ತೀರಿ. ಆಗ ಯಾರಿಗಾಗಿ ಮಕ್ಕಳು ಪ್ರಿಯರಾಗಿದ್ದಾರೆಂಬದು ಸ್ಪಷ್ಟವಾಗುತ್ತದೆ. ಕೆಲವು ವಸ್ತುಗಳು ನಿಮ್ಮ ಮಕ್ಕಳಿಗಾಗಿ ನಿಮಗೆ ಪ್ರಿಯವಾಗುತ್ತವೆ ; ಆ ವಸ್ತುಗಳಿಗಾಗಿ ವಸ್ತುಗಳ ಪ್ರೀತಿಯಲ್ಲ. ಹಾಗೆಯೇ ಆ ಮಕ್ಕಳೂ ನಿಮಗಾಗಿ, ನಿಮ್ಮ ನಿಜಾತ್ಮನಿಗಾಗಿ ಪ್ರಿಯರಾಗುತ್ತಾರೆ. ಮಕ್ಕಳಿಗಿಂತಲೂ ಹೆಚ್ಚಿನ ಸುಖವು ಆತ್ಮನಲ್ಲಿದೆ.

"ನ ವಾ ಅರೇ ವಿತ್ತಸ್ಯ ಕಾಮಾಯ ವಿತ್ತಂ ಪ್ರಿಯಂ ಭವತ್ಯಾತ್ಮನಸ್ತು
ಕಾಮಾಯ ವಿತ್ತಂ ಪ್ರಿಯಂ ಭವತಿ!" (ಬೃ.ಉ.)

"ಆಸ್ತಿ, ಐಶ್ವರ್ಯ. ಸಂಪತ್ತುಗಳಿಗಾಗಿ ಅವು ಪ್ರಿಯವಾಗುವುದಿಲ್ಲ. ಆತ್ಮನಿ ಗಾಗಿ ಅವು ಪ್ರಿಯವಾಗುತ್ತವೆ.

ಈ ದೇವರನ್ನಾಗಲೀ ಆ ದೇವರನ್ನಾಗಲೀ ಯಾವ ದೇವರನ್ನಾಗಲೀ ನೀವು ಪ್ರಾರ್ಥಿಸುವದೇನೆಂದರೆ, "ಓ ದೇವರೆ, ನೀನು ಪರಮಾನಂದಸ್ವರೂಪ, ಅನಂತ ಮಹಿಮ, ಅಪಾರ ಪ್ರೇಮ, ಕರುಣಾಸಾಗರ, ಸರ್ವಜ್ಞ, ಸರ್ವಶಕ್ತ, ಸರ್ವೇಶ್ವರ,

ಸರ್ವಾಂತರ್ಯಾಮಿ, ಸರ್ವಕರ್ತಾ" ಇತ್ಯಾದಿಯಾಗಿ ಹೀಗೇಕೆ ಪ್ರಾರ್ಥಿಸುತ್ತೀರಿ ? ಏಕೆಂದರೆ, ದೇವರು ನಿಮ್ಮ ಇಚ್ಛೆಯನ್ನೆಲ್ಲಾ ಪೂರೈಸುತ್ತಾನೆ ; ನಿಮ್ಮ ನಿಜಾತ್ಮನನ್ನು ಸೇವಿಸುತ್ತಾನೆ, ಸಂತೋಷಪಡಿಸುತ್ತಾನೆ ; ಸಂತೃಪ್ತಿಪಡಿಸುತ್ತಾನೆ ; ನಿಮ್ಮನ್ನು ಎಲ್ಲಾ ಬಗೆಯಿಂದ ಅನುಗ್ರಹಿಸುತ್ತಾನೆ. ಆದ್ದರಿಂದ ನಿಮಗಾಗಿ, ನಿಮ್ಮ ಸುಖಕ್ಕಾಗಿ ನೀವು ದೇವರನ್ನು ಪ್ರೀತಿಸುವದೇ ಹೊರತು, ದೇವರಿಗಾಗಿ ದೇವರನ್ನು ಪ್ರೀತಿಸುವದಿಲ್ಲ. ಇದನ್ನು ಚೆನ್ನಾಗಿ ನೆನಪಿನಲ್ಲಿಡಿ. ಒಂದು ವೇಳೆ ದೇವರು ನಿಮ್ಮ ಇಷ್ಟಾರ್ಥವನ್ನು ನೆರವೇರಿಸದಿದ್ದರೆ, ಅವನ ಮೇಲೆ ಸಿಟ್ಟು ಮಾಡುತ್ತೀರಿ ; ಅವನನ್ನು ನಿಂದಿಸುತ್ತೀರಿ ; ಅವನ ಪೂಜೆಯನ್ನೂ ಪ್ರಾರ್ಥನೆಯನ್ನೂ ಬಿಟ್ಟು ಅವನನ್ನು ದ್ವೇಷಿಸುತ್ತೀರಿ. ಆದ್ದರಿಂದ ಎಲ್ಲಾ ಸುಖ ಸಂತೋಷಗಳಿಗೂ ಆನಂದಕ್ಕೂ ನಿಜಾತ್ಮನೇ ಮೂಲ. ಅದನ್ನು ತಿಳಿದು ಆನಂದವಾಗಿರಿ.

ಇಂಡಿಯಾದೇಶದಲ್ಲಿ ಒಂದುಬಗೆಯ ಕಲಾವಿದರು ಆಡುವ ಗೊಂಬೆಯಾಟವು ಬಹಳ ವಿಚಿತ್ರವಾಗಿರುತ್ತದೆ. ರಂಗಭೂಮಿಯ ಮೇಲೆ ಬಗೆ ಬಗೆಯಾದ ಬೊಂಬೆಗಳಿರುತ್ತವೆ. ಅವುಗಳ ಹಿಂದುಗಡೆ ಒಂದು ಪರದೆ ಇರುತ್ತದೆ. ಗೊಂಬೆಯಾಟದವನು ಪ್ರೇಕ್ಷಕರಿಗೆ ಕಾಣದಂತೆ ಪರದೆಯ ಹಿಂದುಗಡೆ ಕುಳಿತು ಸೂಕ್ಷ್ಮವಾದ ಸೂತ್ರಗಳಿಂದ ಮುಂದಿರುವ ಗೊಂಬೆಗಳನ್ನು ತನ್ನ ಇಷ್ಟಪ್ರಕಾರ ಕುಣಿಸುತ್ತಾನೆ. ಆ ಸೂತ್ರದ ಬೊಂಬೆಯಾಟವನ್ನು ನೋಡುವದಕ್ಕೆ ಬಂದ ಪ್ರೇಕ್ಷಕರಿಗೆ ಆ ಸೂತ್ರವಾಗಲಿ, ಅದನ್ನು ಚಾಲನಮಾಡುವ ಆ ಸೂತ್ರಧಾರಿಯಾಗಲೀ ಕಾಣಿಸುವದಿಲ್ಲ. ಹಾಗೆಯೇ ಈ ಜಗತ್ತಿನಲ್ಲಿ ಎಲ್ಲಾ ಸ್ಥೂಲ ವಸ್ತುಗಳೂ ವ್ಯಕ್ತಿಗಳೂ ಆ ನಾಟಕದ ಸ್ಥೂಲ ಬೊಂಬೆಗಳಂತೆ ಇವೆ. ಸಾಮಾನ್ಯ ಜನರು ಈ ಸ್ಥೂಲ ದೇಹಗಳನ್ನೇ ಒಳ್ಳೆಯ, ಕೆಟ್ಟ ಕರ್ಮಗಳನ್ನು ಮಾಡುವ ಸ್ವತಂತ್ರ ಕರ್ತೃಗಳನ್ನಾಗಿ ತಿಳಿಯುತ್ತಾರೆ. ಆದ್ದರಿಂದ ಹೊರಗೆ ತೋರುವ ವ್ಯಕ್ತಿಯ ಜೀವಾತ್ಮನ ಸಾಪೇಕ್ಷದೃಷ್ಟಿಯಿಂದ ಎಲ್ಲಾ ವಿಷಯವನ್ನೂ ವಿವರಿಸುತ್ತಾರೆ. ದೇಹವನ್ನೇ ಸ್ವತಂತ್ರ ಕರ್ತಾ ಆಗಿ ತಿಳಿಯುತ್ತಾರೆ. ಆದ್ದರಿಂದ ಬಂಧು ಮಿತ್ರರು ಅವರ ಸೇವೆಯನ್ನು ಮಾಡಿ, ಅವರಿಗೆ ಹಿತವಾಗಿ ನಡೆದುಕೊಂಡು, ಸಂತೋಷಪಡಿಸಿದರೆ ಅವರು ಸುಪ್ರೀತರಾಗುತ್ತಾರೆ. ಆದರೆ ಬಂಧು ಮಿತ್ರರು ವಿರೋಧವಾಗಿ ನಡೆದುಕೊಂಡರೆ, ಮನಸ್ತಾಪವೂ ದ್ವೇಷವೂ ಅಸಮಾಧಾನವೂ ಆಶಾಭಂಗವೂ ಉಂಟಾಗಿ ಬಂಧು ಮಿತ್ರರನ್ನು ಪ್ರೀತಿಸುವದಕ್ಕೆ ಬದಲಾಗಿ ಅವರ ಸೇಡು ತೀರಿಸಿಕೊಳ್ಳುವದಕ್ಕೆ ಹವಣಿಸುತ್ತೇವೆ. ಇವರು ಒಂದು ವರ್ಗದ ಜನ. ಸ್ವಲ್ಪ ಮೇಲಿನ ಮಟ್ಟದ ಇನ್ನೊಂದು ವರ್ಗದ ಜನರಿದ್ದಾರೆ. ಇವರು ಬೊಂಬೆಗಳಿಗೆ ಕೊಡುವ ಬೆಲೆಗಿಂತಲೂ ಹೆಚ್ಚು ಬೆಲೆಯನ್ನು

ಸೂತ್ರಕ್ಕೆ ಕೊಡುತ್ತಾರೆ. ಸೂತ್ರದ ಬೆಲೆಯನ್ನು ಉತ್ಪ್ರೇಕ್ಷೆಮಾಡುತ್ತಾರೆ. ಇವರು ಹೆಚ್ಚು ಬುದ್ಧಿವಂತರು, ಹೆಚ್ಚಿನ ತಾತ್ತ್ವಿಕ ದೃಷ್ಟಿಯುಳ್ಳವರು, ಹೆಚ್ಚಿನ ಆಧ್ಯಾತ್ಮಿಕ ವಿಚಾರವುಳ್ಳವರು ಈ ಜನರು ಆ ಗೊಂಬೆಗಳನ್ನು ಆಡಿಸುವ ಸೂಕ್ಷ್ಮಸೂತ್ರಕ್ಕೇ ಅತಿಯಾದ ಮಹತ್ವವನ್ನು ಕೊಡುತ್ತಾರೆ. ಜನರ ಕರ್ಮಗಳಿಗೆ ಅವರೇ ಸ್ವತಂತ್ರಹೊಣೆಗಾರರಲ್ಲವೆಂದೂ ಬೇರೆ ಲೋಕದ, ಶರೀರವಿಲ್ಲದ, ಸ್ವಚ್ಛಂದ ವಾದ ದೇವತಾಶಕ್ತಿಗಳೇ ಕಾರಣವೆಂದೂ ಅವರು ತಿಳಿದು ವಾದಿಸುತ್ತಾರೆ. ಆ ಲೋಕಾಂತರ ಚೇತನಗಳಿಗೆ ಸ್ಥೂಲಶರೀರವಿಲ್ಲವಾದರೂ ಜ್ಯೋತಿರ್ಮಯವಾದ ಸೂಕ್ಷ್ಮಶರೀರವಿದೆಯೆಂದು ಹೇಳುತ್ತಾರೆ.

ಅವರು ಹೇಳುವದು ಕೆಲವು ಮಟ್ಟಿಗೆ ಸರಿ. ಅವರು ಕಾರಣ ಕಾರ್ಯಗಳನ್ನು ನೋಡುತ್ತಾರೆ. ಅವರು ಹಿನ್ನೆಲೆಯಲ್ಲಿರುವ ಸೂಕ್ಷ್ಮ ಸೂತ್ರವನ್ನೂ ಸ್ಥೂಲ ಶರೀರದ ಮೇಲೆ ಅದರಿಂದಾಗುವ ಪರಿಣಾಮವನ್ನೂ ನೋಡುತ್ತಾರೆ. ಆದರೆ ಅವುಗಳನು ನಾವು ಆ ಪರದೆಯ ಹಿಂದಿರುವ ವ್ಯಕ್ತಿಯ ಶಕ್ತಿಯ–ಸಂಬಂಧವಾಗಿ ನೋಡುತ್ತೇವೆ. ಈ ಹಲವು ಬಗೆಯ ಭಾವನೆಗಳ ಸೂತ್ರವನ್ನು -ತಂತಿಯನ್ನು–ಎಳೆದಾಡುವ ಪರದೆಯ ಹಿನ್ನೆಲೆಯ ಶಕ್ತಿಯು ದೇಶ-ಕಾಲ-ಕಾರಣ-ಕಾರ್ಯಗಳಿಗೆ ಸಿಲುಕದಿರುವ ಆತ್ಮವೇ ಆಗಿದೆ. ಅದೇ ನಿಜವಾದ ಅಮೃತತತ್ವ; ನಿಜಸುಖ, ನಿಜಾನಂದ, ಎಲ್ಲವೂ ಅದೇ.

ಪ್ರಪಂಚದಲ್ಲಿರುವ ಕ್ಷುಬ್ಧತೆಯೂ, ಅದಕ್ಕೆ ಕಾರಣವಾದ ಪ್ರಾಪಂಚಿಕ ಸಂಬಂಧ ಗಳೂ ಮಾನವರಿಗೆ ಶಿಕ್ಷಣವಾಗಿದೆ. ಎಲ್ಲಾ ದೃಶ್ಯಗಳ ಹಿನ್ನೆಲೆಯಲ್ಲಿ ಅದೃಶ್ಯವಾದ ಸೂತ್ರವನ್ನು ಸಂಚಾಲನೆ ಮಾಡುವ ಅವ್ಯಕ್ತನೂ ವ್ಯಕ್ತಾವ್ಯಕ್ತಗಳಿಗೆ ಆಧಾರನೂ ಆದ ಪರಮಾತ್ಮನ ಜ್ಞಾನವನ್ನು ಮಾಡಿಕೊಡುವದೇ ಲೌಕಿಕ ಸಂಬಂಧಗಳು ನಿಮ್ಮನ್ನು ಮುಂದೊಯ್ದು ಮುಟ್ಟಿಸುವ ಮುಹಾರಂಗ. ಪ್ರಪಂಚದಲ್ಲಿರುವ ಕ್ಷೋಭೆಯೂ ಮನಸ್ಸಿನ ಕಲಕಾಟವೂ ಕದಲಾಟವೂ ಎಲ್ಲಾ ದೃಶ್ಯದ ಹಿನ್ನೆಲೆಯಲ್ಲಿದ್ದು ದೇಹವನ್ನೂ ಮನಸ್ಸನ್ನೂ ಪ್ರೇರಿಸಿ ನಿಯಂತ್ರಿಸುತ್ತಿರುವ ನಿಜಾತ್ಮನನ್ನು, ಪರಮಾತ್ಮ ಶಕ್ತಿಯನ್ನು ಅರಿತು ಸಮಾಧಾನ ಪಡೆಯಬೇಕೆಂಬದನ್ನು ತೋರಿಸುತ್ತದೆ. ಜನರ ದೇಹಗಳೂ ಮನಸ್ಸೂ ಪ್ರೇಮ ಸ್ವರೂಪವಾದ ಆ ಮಹೋನ್ನತ ಸತ್ಯದ, ಪರಮೇಶ್ವರ ಶಕ್ತಿಯ ಸ್ವಾಧೀನದಲ್ಲಿವೆ.

ಹೀಗೆ, ನೀವು ಒಬ್ಬ ಗೆಳೆಯನನ್ನು ಕಂಡು ಪ್ರೇಮಿಸುತ್ತಿದ್ದರೆ, ಅವನಲ್ಲಿರುವ ಆತ್ಮನನ್ನು ಕಂಡು ಪ್ರೇಮಿಸುವದಾಗಿ ತಿಳಿಯಬೇಕು. ಅವನು ಮಾತನಾಡುತ್ತಿರುವ ದನ್ನು ನೀವು ಕೇಳುತ್ತಿದ್ದರೆ ನಿಮ್ಮ ಆ ಶ್ರವಣಕ್ರಿಯೆಯನ್ನೂ ಶಕ್ತಿಯನ್ನೂ ಹಿಂದಿರುವ,

ಒಳಗಿರುವ ನಿಮ್ಮ ಆತ್ಮನೇ ನಿಯಮಿಸುತ್ತಿದ್ದಾನೆಂದು ತಿಳಿಯಿರಿ ನಿಮ್ಮ ಸ್ನೇಹಿತನಲ್ಲಿರುವ ಒಂದು ಶಕ್ತಿಯನ್ನು ನೀವು ಗುರುತಿಸಿದರೆ, ಅವನ ಒಳಗಿರುವ ದೇವತ್ವವನ್ನೇ ನೀವು ಗುರುತಿಸಿದುದಾಗಿ ತಿಳಿಯಿರಿ. ಈ ದಿವ್ಯಶಕ್ತಿಗೆ ನಿಮ್ಮ ಅರಿವು ಜೀವಂತವಾಗಿದ್ದರೆ ನೀವು ಮೋಸ ಹೋಗುವದಿಲ್ಲ ; ನೀವು ಕ್ಷುಬ್ಧರಾಗುವದಿಲ್ಲ ; ಉದ್ವಿಗ್ನರಾಗುವದಿಲ್ಲ , ಸಾಮಾನ್ಯ ಜನರು ಗೊಂಬೆಗಳೇ ಸ್ವತಂತ್ರ ಕರ್ತೃಗಳೆಂದು ತಿಳಿಯುತ್ತಾರೆ ; ಆದರೆ ನಿಜಾತ್ಮನೇ ಎಲ್ಲವುದರ ಹಿನ್ನೆಲೆಯಲ್ಲಿರುವ ಶಕ್ತಿಯೆಂದು ತತ್ತ್ವಜ್ಞರು ತಿಳಿಯುತ್ತಾರೆ

ಜನರ ಎಲ್ಲಾ ಕ್ರಿಯೆಗಳಿಗೆ ಹಿನ್ನೆಲೆಯಲ್ಲಿರುವ ಶಕ್ತಿಯೇ ನೀವೆಂದು, ರೂಪ ವರ್ಣಗಳನ್ನು ಸತ್ಯವೆಂದು ತಿಳಿಯುವ ಭಾವನೆಗಿಂತಲೂ ಹೆಚ್ಚು ಉತ್ಕಟಭಾವದಿಂದ ಸತ್ಯವಾಗಿ ತಿಳಿಯಿರಿ

ಬ್ರಹ್ಮ ತಂ ಪರಾದಾದ್, ಯೋಽನ್ಯತ್ರಾತ್ಮನೋ ಬ್ರಹ್ಮ ವೇದ ।
ಕ್ಷತ್ರ ತಂ ಪರಾದಾದ್, ಯೋಽನ್ಯತ್ರಾತ್ಮನಃ ಕ್ಷತ್ರಂ ವೇದ ।
ಲೋಕಾಸ್ತಂ ಪರಾದುರ್ಯೋಽನ್ಯತ್ರಾತ್ಮನೋ ಲೋಕಾನ್ ವೇದ ।
ದೇವಾಸ್ತಂ ಪರಾದುರ್ಯೋಽನ್ಯತ್ರಾತ್ಮನೋ ದೇವಾನ್ ವೇದ ।
ಭೂತಾನಿ ತಂ ಪರಾದುರ್ಯೋಽನ್ಯತ್ರಾತ್ಮನೋ ಭೂತಾನಿ ವೇದ ।
ಸರ್ವ ತಂ ಪರದಾದ್, ಯೋಽನ್ಯತ್ರಾತ್ಮನಃ ಸರ್ವಂ ವೇದ ।
ಇದಂ ಬ್ರಹ್ಮ ಇದಂ ಕ್ಷತ್ರಮ್, ಇಮೇ ಲೋಕಾಃ ಇಮೇ ದೇವಾ ।
ಇಮಾನಿ ಭೂತಾನಿ, ಇದಂ ಸರ್ವಂ, ಯದಯಮಾತ್ಮಾ ॥

(ಬೃ.ಉ ) ೨–೪–೬

"ಬ್ರಾಹ್ಮಣ ವರ್ಗವನ್ನು ತಮ್ಮ ಆತ್ಮನಲ್ಲಿ ಅಲ್ಲದೆ ಬೇರೆಯಾಗಿ ಯಾರು ಕಂಡರೋ ಅವರು ಬ್ರಾಹ್ಮಣವರ್ಗದಿಂದ ತ್ಯಜಿಸಲ್ಪಟ್ಟರು ಕ್ಷತ್ರಿಯ ವರ್ಗವನ್ನು ತಮ್ಮ ಆತ್ಮನಲ್ಲಿ ಅಲ್ಲದೆ ಬೇರೆಯಾಗಿ ಯಾರು ನೋಡಿದರೋ ಅವರು ಕ್ಷತ್ರಿಯ ವರ್ಗದಿಂದ ಬಿಡಲ್ಪಟ್ಟರು. ದೇವತೆಗಳನ್ನು ತಮ್ಮ ಆತ್ಮನಲ್ಲಿ ಅಲ್ಲದೆ, ಬೇರೆಯೆಂದು ಯಾರು ಭಾವಿಸಿದರೋ ಅವರು ದೇವತೆಗಳಿಂದ ಪರಿತ್ಯಜಿಸಲ್ಪಟ್ಟರು. ಪ್ರಾಣಿವರ್ಗವನ್ನು ತಮ್ಮ ಆತ್ಮನಲ್ಲಿ ಅಲ್ಲದೆ ಬೇರೆಯಾಗಿ ಯಾರು ಬಗೆದರೋ ಅವರು ಪ್ರಾಣಿ ವರ್ಗದಿಂದ ಕೈಬಿಡಲ್ಪಟ್ಟರು. ಯಾವದನ್ನೇ ಆಗಲಿ ತಮ್ಮ ಆತ್ಮನಲ್ಲಿ ಅಲ್ಲದೆ ಬೇರೆಯಾಗಿ ಯಾರು ಅರಿಯುವರೋ ಅವರು ಆ ವಸ್ತುವಿನಿಂದ ಬಿಡಲ್ಪಡುವರು.

ಏಕೆಂದರೆ, ಈ ಬ್ರಾಹ್ಮಣ ವರ್ಗವೂ ಈ ಕ್ಷತ್ರಿಯ ವರ್ಗವೂ ಈ ಲೋಕಗಳೂ ಈ ದೇವತೆಗಳೂ ಈ ಪ್ರಾಣಿಗಳೂ ಈ ಎಲ್ಲವೂ ಆತ್ಮನೇ ಆಗಿವೆ."

ಇದರಲ್ಲಿ, ಶುದ್ಧವೂ ಸರಳವೂ ಸ್ಪಷ್ಟವೂ ಆದ ಭಾಷೆಯಲ್ಲಿ ದೇವತ್ವವನ್ನು ವರ್ಣಿಸಿದೆ. ಇದು ನಿಮ್ಮ ಹೃದಯದಲ್ಲಿ ಚೆನ್ನಾಗಿ ಇಳಿಯಲಿ ; ಹಾಗಾದರೆ ನೀವು ಮುಕ್ತರೆಂದು ಅರಿಯುತ್ತೀರಿ ; ನಿಮ್ಮ ಜನ್ಮಸಿದ್ಧವಾದ ಹಕ್ಕನ್ನು ನೀವು ಪುನಃ ಸಾಧಿಸಿದಂತಾಗುತ್ತದೆ.

" ಈ ಬ್ರಾಹ್ಮಣವರ್ಣವೂ ವೇದಗಳೂ ಎಲ್ಲವೂ ಆತ್ಮನೇ."

ಇದೇ ದೈವೀ ನಿಯಮ. ನೀವು ಭೌತಿಕವಸ್ತುವನ್ನು ನಂಬಿದರೂ ಅವಲಂಬಿಸಿದರೂ ಪ್ರಕೃತಿನಿಯಮದ ಮತ್ತು ವೇದಗಳ ಪ್ರಕಾರ ನೀವು ಭಂಗಪಡಲೇ ಬೇಕು. ನಿಮ್ಮ ಬಯಕೆಗಳನ್ನೂ ನೀವು ಬಯಸುವ ವಸ್ತುಗಳನ್ನೂ ನೀವು ಮೀರಿ ನಿಲ್ಲಬೇಕು, ಎಂಬದೇ ವಿಶ್ವನಿಯಮ ; ದೈವೀನಿಯಮ. ನೀವು ಒಬ್ಬ ಮಹಾಪುರುಷನ ಅಥವಾ ಮಹಾರಾಜನ ಎದುರಿಗೆ ಬಂದಾಗ, ಅವನ ದೇಹವನ್ನೋ ವ್ಯಕ್ತಿತ್ವವನ್ನೋ ನಂಬಿ ಆಶ್ರಯಿಸಿದರೆ, ದುರ್ಬಲವೂ ಕ್ಷಣಭಂಗುರವೂ ಆದ ಒಂದು ಜೊಂಡು ಹುಲ್ಲುಗರಿಕೆಯನ್ನು ಒರಗಿದಂತಾಗಿ ಬೀಳುತ್ತೀರಿ. ಅವನಲ್ಲಿರುವ ಸತ್ಯವಾದ ದೇವತ್ವಕ್ಕಿಂತಲೂ ಹೆಚ್ಚಾಗಿ ಅವನ ದೇಹಕ್ಕೆ ಮಹತ್ವಕೊಡುವದರಿಂದ ನೀವು ಪಾಪವನ್ನು ಮಾಡುತ್ತೀರಿ ; ನೀವು ಸತ್ಯವನ್ನು ಬಿಟ್ಟು ಸುಳ್ಳು ರೂಪಗಳನ್ನೂ ವೃತ್ತಗಳನ್ನೂ ಕಲ್ಪಿಸಿಕೊಳ್ಳುತ್ತೀರಿ ; ಒಳಗಿರುವ ದೇವತ್ವವನ್ನು ಅಲ್ಲಗಳೆದಂತೆ ಆಗುತ್ತದೆ. ದೇಹದ ರೂಪವನ್ನು ನೀವು ಗೌರವಿಸುವದರಿಂದ ಅದೂ ಒಂದು ಬಗೆಯ ಮೂರ್ತಿಪೂಜೆ ; ನೀವು ಒಳಗಿರುವ ದೇವರನ್ನು ಪೂಜಿಸದೆ, ಹೊರಗಿನ ವಿಗ್ರಹವನ್ನು ಆರಾಧಿಸುವದರಿಂದ ಅಗಲಿಕೆಯನ್ನೂ ಅಭಾವವನ್ನೂ ನೋವನ್ನೂ ಅನುಭವಿಸಬೇಕಾಗುತ್ತದೆ. ಇದೇ ದೈವೀ ನಿಯಮ. ನೀವು ಲೋಕವ್ಯವಹಾರವನ್ನು ಮಾಡುವಾಗಲೂ ವಸ್ತುಗಳ ಮತ್ತು ವ್ಯಕ್ತಿಗಳ ಒಳಗಿರುವ ಆತ್ಮನಲ್ಲಿಯೇ ನಿಮ್ಮ ಲಕ್ಷ್ಯವನ್ನಿಡಬೇಕು ಎಂದು ವೇದವು ಹೇಳುತ್ತದೆ. ಲೋಕ ವ್ಯವಹಾರವೇ ಅಷ್ಟು ಮುಖ್ಯವಾಗಬಾರದು ; ಅದು ಗೌಣವಾಗಬೇಕು. ಅದನ್ನು ಕೇವಲ ಸ್ವಪ್ನವೆಂದು ಭಾವಿಸಬೇಕು. ಒಳಗಿರುವ ಸತ್ಯದಷ್ಟು ಅದು ಮುಖ್ಯವಾಗಬಾರದು. ಹೊರಗಿನ ವ್ಯಕ್ತಿತ್ವಕ್ಕಿಂತಲೂ ಒಳಗಿನ ಸತ್ಯತೆಯು ಹೆಚ್ಚೆಂದು ಭಾವಿಸಬೇಕು. ಒಬ್ಬ ಮಿತ್ರನ ಭಾವಚಿತ್ರವನ್ನು ಪ್ರೀತಿಸುವದೂ ಗೌರವಿಸುವದೂ ಆ ಭಾವಚಿತ್ರಕ್ಕಾಗಿ ಅಲ್ಲ : ಆ ಮಿತ್ರನಿಗಾಗಿ, ಆ ಚಿತ್ರಕ್ಕಿಂತಲೂ ಮಿತ್ರನೇ ಹೆಚ್ಚು ಪ್ರಿಯಕರನಾದವನು.

ಯಾವದಾದರೂ ವಸ್ತುವಿಗಿಂತಲೂ ಅದಕ್ಕೆ ಆಧಾರವಾದ ಇರುವಿಕೆಯನ್ನೇ ಹೆಚ್ಚೆಂದು ತಿಳಿಯಬೇಕು. ಹೀಗಾದರೆ, ಪ್ರಾಪಂಚಿಕ ಸಂಬಂಧವೂ ವ್ಯವಹಾರವೂ ಮೃದುವಾಗಿಯೂ ನಯವಾಗಿಯೂ ಕ್ಷುಬ್ಧವಾಗದೆಯೂ ನಡೆಯುತ್ತವೆ; ಇಲ್ಲವಾದರೆ ಘರ್ಷಣೆಯೂ ಚಿಂತೆಯೂ ವ್ಯಥೆಯೂ ಉಂಟಾಗುತ್ತವೆ. ಇದೇ ನಿಯಮ.

ಇಲ್ಲಿ ಒಂದು ಕಥೆಯನ್ನು ಹೇಳಬೇಕಾಗಿದೆ :

ಒಂದು ಸಣ್ಣ ಹಳ್ಳಿಯಲ್ಲಿ ಒಂದು ಹುಚ್ಚು ಮುದುಕಿ ಇದ್ದಿತು. ಅವಳ ಹತ್ತಿರ ಒಂದು ಕೋಳಿಯ ಹುಂಜವಿದ್ದಿತು. ಆ ಹಳ್ಳಿಯ ಜನರು ಆಕೆಯನ್ನು ಗೇಲಿಮಾಡಿ, ಗೋಳುಗುಟ್ಟಿಸುತ್ತಿದ್ದರು. ಆಕೆ ಬಹಳ ನೊಂದುಕೊಂಡು, "ನೀವು ನನಗೆ ಎಷ್ಟು ಕೀಟಲೆ ಮಾಡಿ, ಕಿರುಕುಳ ಕೊಡುತ್ತೀರಿ? ನೋಡಿ, ನಾನು ನಿಮ್ಮ ಮೇಲೆ ಸೇಡು ತೀರಿಸಿಕೊಳ್ಳುತ್ತೇನೆ. ಬಹಳ ಎಚ್ಚರ, ಎಚ್ಚರ! ಹುಷಾರ್, ನನ್ನ ಮನಸ್ಸು ಬಹಳ ಕಠೋರವಾಗುತ್ತಿದೆ. ನಾನು ಸಹಿಸಲಾರೆ, ನಿಮಗೆ ಬಹಳ ಕಷ್ಟವಾಗುತ್ತದೆ, ಬಹಳ ದೊಡ್ಡ ವಿಪತ್ತು ಕಾದಿದೆ" ಎಂದಳು ಜನರು ಮೊದಲು ಮೊದಲು ಆಕೆಯ ಹುಚ್ಚು ಎಚ್ಚರಿಕೆಗೆ ಗಮನ ಕೊಡಲೇ ಇಲ್ಲ; ಕೊನೆಗೆ ಅವಳ ಭಯ ಪ್ರದರ್ಶನವು ಅತಿಯಾದುದರಿಂದ, "ಏಲು ಮರುಳೆ, ನೀನು ಏನು ಮಾಡಬಲ್ಲೆ?" ಎಂದು ರೇಗಿ ಕೇಳಿದರು. "ನಿಮ್ಮೂರಿನ ಮೇಲೆ ಸೂರ್ಯನೇ ಹುಟ್ಟಿ ಏಳದಂತೆ ಮಾಡುತ್ತೇನೆ. ನಿತ್ಯವೂ ನನ್ನ ಹುಂಜ ಕೂಗಿದ ಮೇಲೇ ಸೂರ್ಯನು ಉದಯಿಸುವದು. ನೀವು ಹೀಗೇ ಪೀಡಿಸುತ್ತಿದ್ದರೆ, ನಾನು ನನ್ನ ಹುಂಜವನ್ನು ಬೇರೊಂದು ಹಳ್ಳಿಗೆ ಒಯ್ಯುತ್ತೇನೆ; ಆಗ ಸೂರ್ಯನು ನಿಮ್ಮ ಹಳ್ಳಿಯ ಮೇಲೆ ಬೆಳಗುವದೇ ಇಲ್ಲ. ಮುಟ್ಠಾಳರೆ, ನೀವೆಲ್ಲಾ ಕಗ್ಗತ್ತಲೆಯಲ್ಲಿ ಸಾಯುತ್ತೀರಿ. ನಿಮ್ಮ ಹೊಲಗಳಲ್ಲಿ ಪೈರೂ ಬೆಳೆಯುವದೇ ಇಲ್ಲ, ಮಳೆಯೋ ಬರುವದಿಲ್ಲ. ನೀವೆಲ್ಲಾ ಹೊಟ್ಟೆಗಿಲ್ಲದೆ, ನವೆದು ನವೆದು ನೊಂದು ನೊಂದು ಸಾಯುತ್ತೀರಿ" ಎಂದು ಆಕೆ ಆಕ್ರೋಶ ಮಾಡಿದಳು.

ನಿತ್ಯವೂ ಆ ಮುದುಕಿಯ ಕೋಳಿಯು ಕೂಗಿದಾಗಲೇ ಸೂರ್ಯನು ಹುಟ್ಟುತ್ತಿದ್ದನೆಂಬದು ನಿಜ; ಆದರೆ ಸೂರ್ಯೋದಯಕ್ಕೆ ಆ ಕೋಳಿಯ ಕೂಗೇನೂ ಕಾರಣವಾಗಿರಲಿಲ್ಲ. ಆದರೆ ಅವಳು ಆ ಹಳ್ಳಿಯನ್ನು ಬಿಟ್ಟು ಬೇರೊಂದು ಹಳ್ಳಿಗೆ ಹೋದಳು. ಅವಳ ಮನಸ್ಸು ಸೇಡಿನಿಂದ ಕುದಿಯುತ್ತಿತ್ತು. ಅವಳ ಕೋಳಿಯು ಎಂದಿನಂತೆ ಮುಂಜಾನೆ ಕೂಗಿತು. ಸ್ವಲ್ಪ ಹೊತ್ತಿನಲ್ಲಿ ಆ ಹಳ್ಳಿಯ ಮೇಲೆ

ಸೂರ್ಯ ಭಗವಾನನು ತೋರಿಕೊಂಡನು. ಆದರೆ, ಆ ಮುದುಕಿಯು ತಿರಸ್ಕರಿಸಿ ತೊರೆದು ಬಂದಿದ್ದ ಹಳ್ಳಿಯ ಮೇಲೂ ಎಂದಿನಂತೆ ಸೂರ್ಯನು ಉದಯಿಸಿ ಚೆನ್ನಾಗಿ ಬೆಳಗಿದನು. ಹಾತೊರೆಯುವ ನಿಮ್ಮ ಬಯಕೆಗಳ ಹಂಬಲಗಳು ಆ ಮುದುಕಿಯ ಕೋಳಿಯ ಕೂಗಿನಂತಿವೆ ; ನೀವು ಬಯಸಿದ ವಸ್ತುಗಳು ನಿಮ್ಮೆದುರಿಗೆ ತೋರಿಕೊಳ್ಳುವದು ಸೂರ್ಯೋದಯದಂತಿದೆ. ಕಾಮನಾ ವಸ್ತುಗಳಿಗಾಗಿ ನಿಮ್ಮ ತೃಷ್ಣೆಯನ್ನೂ ಹಂಬಲವನ್ನೂ ಪ್ರೇರಿಸುವವನೂ ನಿಯಮಿಸುವವನೂ ನಿಯಂತ್ರಿಸುವವನೂ ಆಳುವವನೂ ಜ್ಞಾನಭಾಸ್ಕರನಾದ ಆತ್ಮನೇ. ಬೆಳಗು ಮುಂಜಾನೆಯನ್ನಾಗಲೀ ಸಂಜೆಯನ್ನಾಗಲೀ ಹಗಲನ್ನಾಗಲೀ ರಾತ್ರಿಯನ್ನಾಗಲೀ ಉಂಟು ಮಾಡುವವನು ನಿತ್ಯೋದಿತ ಸೂರ್ಯನಾದ ನಿಜಾತ್ಮನೇ. ಎಲ್ಲಾ ಪ್ರಾಪಂಚಿಕ ವ್ಯವಹಾರಗಳ ವಿಧಾಯಕನೂ ನಿಯಾಮಕನೂ ಈ ನಿಜಾತ್ಮನೇ. ಅದು ಇಂದ್ರಿಯಗಳನ್ನೆಲ್ಲಾ ವ್ಯಾಪಿಸಿಕೊಂಡಿದೆ. ಆ ಸೂತ್ರಧಾರಿಯ ಆ ಸೂತ್ರಸಂಚಾಲಕನ ನಿಯಂತ್ರಕನೂ ಆತ್ಮನೇ ಆಗಿದ್ದಾನೆ. ಅವನು ಸೂರ್ಯರಿಗೆಲ್ಲಾ ಸೂರ್ಯ. ಬೆಳಕಿಗೆಲ್ಲಾ ಬೆಳಕು. ಇದನ್ನು ನೆನಪಿಡಿ.

ಹಂಬಲಿಸಿ, ಹಸಿದು, ಗೋಗರೆಯುತ್ತಿರುವ ಸ್ವಾರ್ಥಿಯಾದ ಜೀವಾತ್ಮನಿಗೇ ಜನರು ಎಲ್ಲವನ್ನೂ ಹೊಂದಿಸುತ್ತಾರೆ. ನೀವೂ ಆ ತಪ್ಪನ್ನು ಮಾಡಬೇಡಿ. ಅದರಿಂದ ನೀವು ದೂರವಿರಿ. ಸ್ವಲ್ಪ ಪರೀಕ್ಷಿಸಿ. ಸುಪ್ರಭಾತಕ್ಕೆ ಕಾರಣನಾದ ಸೂರ್ಯನೇ ಕೋಳಿಯ ಕಣ್ಣನ್ನೂ ಪ್ರವೇಶಿಸಿ, ಅದರ ಕಂಠವನ್ನೂ ತೆರೆಸಿ, ಅದು ಕೂಗುವಂತೆಯೂ ಮಾಡುತ್ತಾನೆ. ಕೋಳಿ ಕೂಗುವದಕ್ಕೂ ಬೆಳಗಾಗುವದಕ್ಕೂ ಸೂರ್ಯನ ಹಿತಕರವಾದ ಶಾಖ-ಪ್ರಕಾಶಗಳೇ ಕಾರಣ. ನೋಡಿ, ಒಂದು ಕಡೆ ಈ ಜೀವಂತ ವಸ್ತುಗಳನ್ನೂ ಇನ್ನೊಂದು ಕಡೆ ನಿಮ್ಮ ಸ್ವಂತ ಭಾವನೆಗಳನ್ನೂ ಆಲೋಚನೆಗಳನ್ನೂ ಪ್ರೇರಿಸಿ, ನಿಯಮಿಸುತ್ತಿರುವವನು ಆ ಸರ್ವವ್ಯಾಪಿಯಾದ ಸೂರ್ಯರ ಸೂರ್ಯನೂ ಪ್ರಕಾಶಗಳ ಪ್ರಕಾಶಕನೂ ಆದ ನಿಮ್ಮ ನಿಜಾತ್ಮನೇ. ಅದನ್ನು ತಿಳಿದು ಮುಕ್ತರಾಗಿರಿ. ಸುಳ್ಳು ಕಲ್ಪನೆಗಳನ್ನು ಮಾಡಬೇಡಿ ; ತಪ್ಪಾದ ವ್ಯಾಖ್ಯಾನಗಳನ್ನೂ ಮಾಡಬೇಡಿ ವಸ್ತುಗಳು ಸ್ವತಃ ನಿಜವೆಂದು ತಿಳಿಯಬೇಡಿ. ಸುಖದುಃಖಗಳಿಗೆ ವಸ್ತುಗಳೇ ಸ್ವತಃ ಕಾರಣವೆಂದು ತಿಳಿಯುವದು ತಪ್ಪು ತಿಳಿವಳಿಕೆ. ಇದನ್ನು ಅರಿತು ಎಲ್ಲಾ ವಸ್ತುಗಳನ್ನೂ ದೊಡ್ಡ ತಮಾಷೆಯಾಗಿಯೂ ಮಹತ್ತಾದ ನಾಟಕವಾಗಿಯೂ ನೋಡಬೇಕು. ಒಬ್ಬನು ನಾಟಕದಲ್ಲಿ ಕ್ಲಿಯೋಪಾತ್ರಳ (Cleopatra) ಅಥವಾ ಮ್ಯಾಕ್‌ಬೆತ್‌ನ (Macbeth) ಪಾತ್ರವನ್ನು ವಹಿಸಿ ಅಭಿನಯಿಸಬಹುದು ; ಆದರೆ ಆತನು ನಿಜವಾಗಿಯೂ ಆತ್ಮಹತ್ಯೆಯನ್ನಾಗಲಿ

ನರಹತ್ಯೆಯನ್ನಾಗಲೀ ಮಾಡಿದವನಾಗುವದಿಲ್ಲ. ಅವನು ರಾಣಿಯೂ ಅಲ್ಲ, ರಾಜನೂ ಅಲ್ಲ. ಅವನು ಕೇವಲ ಪಾತ್ರಧಾರಿ, ಮತ್ತು ಆ ಪಾತ್ರವನ್ನು ವಹಿಸಿರುವ ಶ್ರೀಮಾನ್ ಇಂಥಾವನು. ನೀವು ಏನು ಬೇಕಾದರೂ ವ್ಯವಹಾರ ಮಾಡಬಹುದು. ಆದರೆ ನಿಮ್ಮ ಪರಮಾತ್ಮ ಸ್ವರೂಪವನ್ನು ಮರೆಯಬೇಡಿ. 'I am' 'ನಾನಿದ್ದೇನೆ' ಎಂಬದು ಎಂದೂ ಬದಲಾವಣೆಯನ್ನು ಹೊಂದುವದಲ್ಲ, ಅದು ಪೂರ್ಣಾನಂದ ಸ್ವರೂಪವೆಂಬದನ್ನು ಮರೆಯದೆ ಮುಕ್ತರಾಗಿರಿ.

"ಸ ಯಥಾ ದುಂದುಭೇರ್ಹನ್ಯಮಾನಸ್ಯ ನ ಬಾಹ್ಯಾನ್ ಶಬ್ದಾನ್ ಶಕ್ನುಯಾದ್ ಗ್ರಹಣಾಯ, ದುಂದುಭೇಸ್ತು ಗ್ರಹಣೇನ ದುಂದುಭ್ಯಾಘಾತಸ್ಯ ವಾ ಶಬ್ದೋ ಗೃಹೀತಃ" ॥ ೪–೫–೮ ॥ (ಬೃ.ಉ.).

"ನಗಾರಿಯನ್ನು ಬಾರಿಸಿದಾಗ, ಆ ಶಬ್ದವನ್ನು ಹೊರಗೆ ಹಿಡಿಯಲಾಗುವದಿಲ್ಲ, ಆದರೆ ಭೇರಿಯನ್ನು ಹಿಡಿದಾಗ, ಅದನ್ನು ಬಾರಿಸುವವನನ್ನು ಹಿಡಿದಾಗ, ಅದರ ಶಬ್ದವನ್ನು ಹಿಡಿದಂತಾಗುತ್ತದೆ."

ಪ್ರಾಪಂಚಿಕವಾದ ಎಲ್ಲಾ ಕಾಮನಾ ವಸ್ತುಗಳಿಗೂ ಯಾವನು ಆಧಾರನೋ ಯಾವನಿಂದ ಇವುಗಳೆಲ್ಲಾ ಹೊರಹೊಮ್ಮಿವೆಯೋ ಅವನನ್ನು ಹಿಡಿಯುವದರಿಂದ ಎಲ್ಲಾ ಇಷ್ಟ ವಸ್ತುಗಳೂ ನಿಮ್ಮ ಸ್ವಾಧೀನವಾಗುತ್ತವೆ.

"ಸ ಯಥಾ ಶಂಖಸ್ಯ ಧ್ಮಾಯಮಾನಸ್ಯ ನ ಬಾಹ್ಯಾನ್ ಶಬ್ದಾನ್ ಶಕ್ನುಯಾದ್ ಗ್ರಹಣಾಯ, ಶಂಖಸ್ಯ ತು ಗ್ರಹಣೇನ ಶಂಖಧ್ಮಸ್ಯ ವಾ ಶಬ್ದೋ ಗೃಹೀತಃ" ॥ ೪- ೫–೯ ॥ (ಬೃ ಉ)

ಶಂಖವನ್ನು ಬಾರಿಸಿದಾಗ ಅದರ ಧ್ವನಿಯನ್ನು ಹೊರಗೆ ಹಿಡಿಯಲಾಗುವದಿಲ್ಲ ಆದರೆ ಶಂಖವನ್ನಾಗಲೀ ಶಂಖವನ್ನು ಊದತಕ್ಕವನನ್ನಾಗಲೀ ಹಿಡಿದಾಗ ಅದರ ಧ್ವಾನವನ್ನೂ ಹಿಡಿದಂತಾಗುತ್ತದೆ.

ತಾನೇ ಬ್ರಹ್ಮವಾದವನು ಪೂರ್ಣ ಕಾಮನಾದ್ದರಿಂದ, ಎಲ್ಲಾ ಕಾಮವನ್ನೂ ಏಕಕಾಲಕ್ಕೆ ಪಡೆದವನಾಗುತ್ತಾನೆ, ಭೋಗಿಸಿದವನಾಗುತ್ತಾನೆ. ಯಾರೂ ಎಂದೂ

ಅವನನ್ನು ಮೋಸಪಡಿಸುವದಕ್ಕೆ ಆಗುವದಿಲ್ಲ. ಎಂದೂ ಅವನು ದುಃಖಿ ಯಾಗುವದಿಲ್ಲ.

"ಸ ಯಥಾ ಸರ್ವಾಸಾಮಪಾಂ ಸಮುದ್ರ ಏಕಾಯನಮ್, ಏವಂ ಸರ್ವೇಷಾಂ ಸ್ಪರ್ಶಾನಾಂ ತ್ವಗೇಕಾಯನಮ್ ಏವಂ ಸರ್ವೇಷಾಂ ಗಂಧಾನಾಂ ನಾಸಿಕೇ ಏಕಾಯನಮ್, ಏವಂ ಸರ್ವೇಷಾಂ ರಸಾನಾಂ ಜಿಹ್ವೈಕಾಯನಮ್, ಏವಂ ಸರ್ವೇಷಾಂ ರೂಪಾಣಾಂ ಚಕ್ಷುರೇಕಾಯನಮ್, ಏವಂ ಸರ್ವೇಷಾಂ ಶಬ್ದಾನಾಂ ಶ್ರೋತ್ರಮೇಕಾಯನಮ್, ಏವಂ ಸರ್ವೇಷಾಂ ಸಂಕಲ್ಪಾನಾಂ ಮನ ಏಕಾಯನಮ್ ಏವಂ ಸರ್ವಾಸಾಂ ವಿದ್ಯಾನಾಂ ಹೃದಯಮೇಕಾಯನಮ್, ಏವಂ ಸರ್ವೇಷಾಂ ಕರ್ಮಾಣಾಂ ಹಸ್ತಾವೇಕಾಯನಮ್, ಏವಂ ಸರ್ವೇಷಾಮಾನಂದಾನಾಮುಪಸ್ಥ ಏಕಾಯನಮ್, ಏವಂ ಸರ್ವೇಷಾಂ ವಿಸರ್ಗಾಣಾಂ ಪಾಯುರೇಕಾಯನಮ್, ಏವಂ ಸರ್ವೇಷಾಮಧ್ವಾನಾಂ ಪಾದಾವೇಕಾಯನಮ್, ಏವಂ ಸರ್ವೇಷಾಂ ವೇದಾನಾಂ ವಾಗೇಕಾಯನಮ್ ॥ ೧೨ ॥

"ಲೋಕದಲ್ಲಿರುವ ಎಲ್ಲಾ ನೀರಿಗೂ ಸಮುದ್ರವೇ ನಿಧಾನವಾಗಿರುವಂತೆ, ಎಲ್ಲಾ ಸ್ಪರ್ಶಸಂವೇದನೆಗಳಿಗೂ ತ್ವಗಿಂದ್ರಿಯವೂ ಎಲ್ಲಾ ಗಂಧಗಳಿಗೂ ನಾಸಿಕವೂ ಸಮಸ್ತರಸಗಳಿಗೂ ರಸನೇಂದ್ರಿಯವೂ ಎಲ್ಲಾ ರೂಪ-ವರ್ಣಗಳಿಗೂ ನೇತ್ರೇಂದ್ರಿ ಯವೂ ಸಕಲ ಶಬ್ದಗಳಿಗೂ ಶ್ರೋತ್ರೇಂದ್ರಿಯವೂ (ಕಿವಿಗಳೂ) ಸರ್ವ ಸಂಕಲ್ಪ ಗಳಿಗೂ ಮನಸ್ಸೂ ಸಮಸ್ತ ವಿದ್ಯೆಗಳಿಗೂ ಹೃದಯವೂ ಎಲ್ಲಾ ಕರ್ಮಗಳಿಗೂ ಕೈಗಳೂ ಎಲ್ಲಾ ಆನಂದಗಳಿಗೂ ಜನನೇಂದ್ರಿಯವೂ ಎಲ್ಲಾ ವಿಸರ್ಜನೆಗಳಿಗೂ ಗುದವೂ ಎಲ್ಲಾ ಚಲನೆಗಳಿಗೂ ಪಾದಗಳೂ ಎಲ್ಲಾ ವೇದಗಳಿಗೂ ವಾಗಿಂದ್ರಿಯವೂ (ಮಾತೂ) ನಿಧಾನವಾಗಿವೆ."

ಹೀಗೆ ಎಲ್ಲಾ ಲೋಕಗಳಿಗೂ ಪ್ರಪಂಚದಲ್ಲಿರುವ ಎಲ್ಲಾ ವಸ್ತುಗಳಿಗೂ ಆತ್ಮನೇ ಮೂಲ ಉಗಮವೂ ವಿಶ್ರಾಮಧಾಮವೂ ಆಗಿದ್ದಾನೆ. ಎಲ್ಲಾ ಶಬ್ದಗಳೂ ಎಲ್ಲಾ ವರ್ಣಗಳೂ ಎಲ್ಲಾ ರಸಗಳೂ ಇವುಗಳಿಂದುಂಟಾಗುವ ಇಂದ್ರಿಯ ಸಂವೇದನೆಗಳೂ ಆತ್ಮನಲ್ಲಿಯೇ ತಮ್ಮ ತಮ್ಮ ಕೇಂದ್ರಗಳನ್ನು ಪಡೆದಿವೆ, ಮತ್ತು ಎಲ್ಲವೂ ಆತ್ಮನಿಂದಲೇ ಹೊರಹೊಮ್ಮುತ್ತವೆ.

"ಸ ಯಥಾ ಸೈಂಧವಖಿಲ್ಯ ಉದಕೇ ಪ್ರಾಸ್ತ ಉದಕಮೇವಾನು ವಿಲೀಯೇತ,

ನ ಹ ಅಸ್ಯೋದ್ ಗ್ರಹಣಾಯೇವ ಸ್ಯಾತ್ । ಯತೋ ಯತಸ್ತ್ವಾದದೀತ ಲವಣ ಮೇವ । ಏವಂ ವಾ ಅರೇ ಇದಂ ಮಹದ್‌ಭೂತಮನಂತಮಪಾರಂ ವಿಜ್ಞಾನಘನ ಏವ, ಏತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾ ನು ವಿನಶ್ಯತಿ ನ ಪ್ರೇತ್ಯ ಸಂಜ್ಞಾಸ್ತೀತ್ಯರೇ ಬ್ರವೀಮಿ, ಇತಿ ಹೋವಾಚ ಯಾಜ್ಞವಲ್ಕ್ಯಃ ॥ ೧೩ ॥ (ಬೃ.ಉ.)

ಒಂದು ಉಪ್ಪಿನ ಗಟ್ಟಿಯನ್ನು ನೀರಿನಲ್ಲಿ ಎಸೆದರೆ, ಅದು ನೀರಿನಲ್ಲಿ ಕರಗಿ ಹೋಗುವದರಿಂದ, ಅದನ್ನು ಹೊರತೆಗೆಯುವದಕ್ಕೆ ಆಗುವದಿಲ್ಲ; ಆದರೆ ಎಲ್ಲೆಲ್ಲಿ ಅದನ್ನು ರುಚಿ ನೋಡಿದರೂ ಆ ನೀರು ಉಪ್ಪಾಗಿರುತ್ತದೆ. ಹೀಗಿಯೇ ಮೈತ್ರೇಯಿ, ಅನಂತವೂ ಅಪಾರವೂ (ಬಚ್ಚಬರಿ ಅರಿವಿನ ಹೊರತು ಬೇರೆ ಏನೂ ಇಲ್ಲದ) ವಿಜ್ಞಾನ ಘನವೂ ಆದ ಈ ಮಹತ್ತಾದ ಚೈತನ್ಯವು ಈ ಭೂತಗಳಿಂದ ಉದಿಸಿ ಪ್ರಕಾಶವಾಗಿ ಅವುಗಳಲ್ಲಿಯೇ ಪುನಃ ಲೀನವಾಗುತ್ತದೆ—ಅಡಗಿಹೋಗುತ್ತದೆ. ಅದು ಅದೃಶ್ಯವಾದ ಅನಂತರ ಯಾವ ನಾಮರೂಪ ಸಂಜ್ಞೆಯೂ ಉಳಿಯುವದಿಲ್ಲ, ಎಂದು ಹೇಳುತ್ತೇನೆ, ಓ ಮೈತ್ರೇಯಿ ! ಹೀಗೆ ಯಾಜ್ಞವಲ್ಕ್ಯ ಮಹರ್ಷಿಯು ಹೇಳಿದನು.

ಈ ತತ್ತ್ವವನ್ನರಿತವನು ಆದರಲ್ಲಿ ಒಂದಾಗುತ್ತಾನೆ. ಅನಂತರ ಅವನು ನಾಮ ರೂಪಗಳನ್ನು ನಂಬುವದಿಲ್ಲ, ಅವಲಂಬಿಸುವದಿಲ್ಲ.

" ಸಾ ಹೋವಾಚ ಮೈತ್ರೇಯೀ, ಅತ್ರೈವ ಮಾ ಭಗವಾನ್, ಅಮೂಮುಹತ್, ನ ಪ್ರೇತ್ಯ ಸಂಜ್ಞಾಸ್ತಿ, ಇತಿ ?

ಆಗ ಮೈತ್ರೇಯಿ ಹೇಳಿದಳು ; " ಭಗವಾನರೆ, ನೀವು ಇಲ್ಲಿ ನನ್ನನ್ನು ಮೋಹ ಗೊಳಿಸಿದಿರಿ, ದಿಗ್ಭ್ರಮೆಹಿಡಿಸಿದಿರಿ. ಚೈತನ್ಯವು ಭೂತಗಳಲ್ಲಿ ಕಣ್ಮರೆಯಾದ ಮೇಲೆ (ನಾಮರೂಪ) ಪ್ರಜ್ಞೆ ಉಳಿಯುವದಿಲ್ಲವೆಂದು ಹೇಳಿದಿರಿ , ಇದರಿಂದ ನನ್ನ ಮನಸ್ಸು ತಬ್ಬಿಬ್ಬಾಯಿತು. ಅದು ಹೇಗೆ ?"

ಆತ್ಮನೊಬ್ಬನೇ ಸತ್ಯವಾದರೆ, ಎಲ್ಲಾ ದುಃಖ-ದುರವಸ್ಥೆಗಳಿಗೂ ಸಂಕ್ಷೋಭೆ ಗಳಿಗೂ ಅವನೇ ಕಾರಣನಾಗಬೇಕಾಯಿತು ; ನಮ್ಮ ಮನಸ್ಸು ಏನೂ (ವಸ್ತು) ಅಲ್ಲವಾದರೆ, ನಮ್ಮ ವ್ಯಕ್ತಿತ್ವವೇ ಕಳೆದುಹೋದರೆ, ನಾವೇ ಸಂಪೂರ್ಣ ನಿಶ್ಶೇಷವಾಗಿ ನಿರ್ನಾಮವಾಗಬೇಕು–ಎಂದು ಮೈತ್ರೇಯಿಯ ಮನಸ್ಸಿನಲ್ಲಿ ಸಂಶಯವು ಬಂದಿತು. ಆಕೆಯು ನನಗೆ ಸರ್ವನಾಶವು ಬೇಡ, ಮರಣವೂ ಬೇಡ, ನಿರ್ನಾಮವಾಗುವದೂ

ಬೇಡ. ಮೃತ್ಯುವಿಗೆ ಬಲಿಯಾಗುವ ಈ ನಮ್ಮ ಆತ್ಮನಿಂದ ಪ್ರಯೋಜನವೇನು ? ಅಂಥಾ ಆತ್ಮ ನನಗೆ ಬೇಡ ; ಎಲ್ಲವನ್ನೂ ಕಳೆದುಕೊಳ್ಳುವದಾದರೆ, ಆ ಆತ್ಮ ನನಗೆ ಬೇಡ.” ಎಂದು ಹೇಳಿದಳು.

ಸ ಹೋವಾಚ, ನ ವಾ ಅರೇಽಹಂ ಮೋಹಂ ಬ್ರವೀಮ್ಯಲಂ ವಾ, ಅರೇ ಇದಂ ವಿಜ್ಞಾನಾಯ ॥ ೧೪ ॥

ಯತ್ರ ಹಿ ದ್ವೈತಮಿವ ಭವತಿ, ತದಿತರ ಇತರಂ ಜಿಘ್ರತಿ, ತದಿತರ ಇತರಂ ಪಶ್ಯತಿ, ತದಿತರ ಇತರಂ ಶೃಣೋತಿ, ತದಿತರ ಇತರಮಭಿವದತಿ, ತದಿತರ ಇತರಂ ಮನುತೇ, ತದಿತರ ಇತರಂ ವಿಜಾನಾತಿ ; ಯತ್ರ ವಾ ಅಸ್ಯ ಸರ್ವಮಾತ್ಮೈವಾಭೂತ್, ತತ್ ಕೇನ ಕಂ ಜಿಘ್ರೇತ್ ತತ್ಕೇನ ಕಂ ಪಶ್ಯೇತ್' ತತ್ ಕೇನ ಕಂ ಶೃಣುಯಾತ್, ತತ್ ಕೇನ ಕಮಭಿವದೇತ್, ತತ್ಕೇನ ಕಂ ಮನ್ವೀತ, ತತ್ಕೇನ ಕಂ ವಿಜಾನೀಯಾತ್? ಯೇನೇದಂ ಸರ್ವಂ ವಿಜಾನಾತಿ, ತಂ ಕೇನ ವಿಜಾನೀಯಾತ್ ? ವಿಜ್ಞಾತಾರಮರೇ ಕೇನ ವಿಜಾನೀಯಾತ್ ? ॥ ೧೪ ॥ (ಬೃ. ಉ.)

ಆದರೆ ಯಾಜ್ಞವಲ್ಕ್ಯರು ಹೇಳಿದರು ; “ಓ ಮೈತ್ರೇಯಿ, ನಾನು ಭ್ರಮೆಗೊಳಿಸುವ ಯಾವದನ್ನೂ ಹೇಳುವದಿಲ್ಲ. ಪ್ರಿಯೆ, ಸತ್ಯದ ಅರಿವಿಗೆ, ಅನುಭವ ಜ್ಞಾನಕ್ಕೆ, ವಿಜ್ಞಾನಕ್ಕೆ ಇಷ್ಟೇ ಸಾಕು.

“ಎಲ್ಲಿ ದ್ವೈತದಂತೆ ಇರುವದೋ ಅಲ್ಲಿ ಒಂದು ಇನ್ನೊಂದನ್ನು ಮೂಸುತ್ತದೆ ; ಒಂದು ಇನ್ನೊಂದನ್ನು ನೋಡುತ್ತದೆ ; ಒಂದು ಇನ್ನೊಂದನ್ನು ಕೇಳುತ್ತದೆ ; ಒಂದು ಇನ್ನೊಂದನ್ನು ನಮಸ್ಕರಿಸುತ್ತದೆ ; ಒಂದು ಇನ್ನೊಂದನ್ನು ಭಾವಿಸುತ್ತದೆ ; ಒಂದು ಇನ್ನೊಂದನ್ನು ಅರಿಯುತ್ತದೆ ; ಆದರೆ ಎಲ್ಲಿ ಇವನಿಗೆ ಆತ್ಮವೇ ಇದೆಲ್ಲವೂ ಆಗಿದೆಯೋ ಅಲ್ಲಿ ಏತರಿಂದ ಏನನ್ನು ಕಂಡಾನು ? ಅಲ್ಲಿ ಏತರಿಂದ ಏನನ್ನು ಮೂಸಿಯಾನು ? ಅಲ್ಲಿ ಏತರಿಂದ ಏನನ್ನು ಸವಿದಾನು ? ಅಲ್ಲಿ ಏತರಿಂದ ಏನನ್ನು ಮಾತನಾಡಿಯಾನು ? ಅಲ್ಲಿ ಏತರಿಂದ ಏನನ್ನು ಕೇಳಿಯಾನು ? ಅಲ್ಲಿ ಏತರಿಂದ ಏನನ್ನು ಆಲೋಚಿಸಿಯಾನು ? ಅಲ್ಲಿ ಏತರಿಂದ ಏನನ್ನು ಮುಟ್ಟಿಯಾನು ? ಅಲ್ಲಿ ಏತರಿಂದ ಏನನ್ನು ಅರಿತಾನು ? ಯಾವನಿಂದ ಇದೆಲ್ಲವನ್ನೂ ಅರಿಯುತ್ತಾನೋ ಅವನನ್ನು ಏತರಿಂದ ಅರಿತಾನು ? ಆ ಇವನು ನೇತಿ ನೇತಿ (ಹೀಗಲ್ಲ, ಹೀಗಲ್ಲ) ಎಂಬ ಆತ್ಮನು. ಅಗೃಹ್ಯನು

ಗ್ರಹಿಸಲ್ಪಡುವದಿಲ್ಲವಷ್ಟೆ ? ಅಶೀರ್ಯನು ಸವೆಯುವದಿಲ್ಲವಷ್ಟೆ ? ಅಸಂಗನು ಅಂಟಿಸಿಕೊಳ್ಳುವದಿಲ್ಲವಷ್ಟೆ ? ಅಸಿತನು ವ್ಯಥೆಪಡುವದಿಲ್ಲ, ಹಿಂಸಿತನಾಗುವುದಿಲ್ಲ. ಎಲೆ ವಿಜ್ಞಾತೃವನ್ನು ಏತರಿಂದ ಅರಿತಾನು ? ಮೈತ್ರೇಯಿ, (ಹೀಗೆ) ಉಕ್ತವಾದ ಅನುಶಾಸನವುಳ್ಳವಳಾಗಿರುವೆ. ಎಲೆ, ಇಷ್ಟೇ ಅಮೃತತ್ವವು-ಹೀಗೆಂದು ನುಡಿದು ಯಾಜ್ಞವಲ್ಕ್ಯನು ಹೊರಟುಹೋದನು.

ಕೇಳದಿರುವದಕ್ಕೆ ಎರಡು ಕಾರಣಗಳಿರಬಹುದು ; ಒಂದನೆಯ ಕಾರಣ ಕಿವುಡನೂ ಮೂಕನೂ ಇರಬಹುದು ; ಎರಡನೆಯ ಕಾರಣ, ಹೊರಗೆ ಯಾವ ಶಬ್ದವೂ ಇಲ್ಲದಿರಬಹುದು ; ನೋಡದಿರುವದಕ್ಕೆ ಎರಡು ಕಾರಣಗಳಿರಬಹುದು ; ಮೊದಲನೆಯ ಕಾರಣ, ಕುರುಡನಿರಬಹುದು ; ಎರಡನೆಯ ಕಾರಣ ನೋಡುವದಕ್ಕೆ ಇನ್ನೊಂದು ವಸ್ತು ಇಲ್ಲದಿರಬಹುದು ; ಮೂಸಿನೋಡದಿರುವದಕ್ಕೆ ಎರಡು ಕಾರಣ ಗಳಿರಬಹುದು ; ಒಂದನೆಯದು, ನಿಮಗೆ ಆ ಇಂದ್ರಿಯ ಶಕ್ತಿ ಇಲ್ಲದಿರಬೇಕು ; ಎರಡನೆಯದು, ನಿಮ್ಮ ಹೊರಗೆ ಮೂಸುವದಕ್ಕೆ ಯಾವ ವಸ್ತುವೂ ಇಲ್ಲದಿರಬೇಕು ; ಹೀಗೆ ನಿಜಾತ್ಮನಲ್ಲಿ ಮುಳುಗುವದರಿಂದ ನಮ್ಮ ಕೇಳುವ ಶಕ್ತಿಯೂ ನೋಡುವ ಶಕ್ತಿಯೂ ಮೂಸುವ ಶಕ್ತಿಯೂ ರುಚಿನೋಡುವ ಶಕ್ತಿಯೂ ಸ್ಪರ್ಶೇಂದ್ರಿಯ ಶಕ್ತಿಯೂ ಹೋಗಿ ಬಿಟ್ಟರೆ, ನಾವು ವಾಸ್ತವವಾಗಿ ಕಿವುಡರೂ ಮೂಕರೂ ಕುರುಡರೂ ಇತ್ಯಾದಿಯಾಗಿ ಆಗುವದಿಲ್ಲವೆ ?—ಇದು ಮೈತ್ರೇಯಿಯ ಆಕ್ಷೇಪ ಅಥವಾ ಸಂದೇಹ. ಇದಕ್ಕೆ ಸಮಾಧಾನವೇನೆಂದರೆ, ಕೇಳದಿರುವದು, ನೋಡದಿರುವದು ಆ ಇಂದ್ರಿಯಗಳ ಶಕ್ತಿಯು ನಾಶವಾದುದರಿಂದ ಅಲ್ಲ ; ಮತ್ತೇನೆಂದರೆ- ಕೇಳುವದಕ್ಕೆ, ನೋಡುವದಕ್ಕೆ ಶಬ್ದವಾಗಲೀ ರೂಪವಾಗಲೀ ಇನ್ನೊಂದು ವಿಷಯವೇ—ವಸ್ತುವೇ— ಇಲ್ಲದಿರುವದರಿಂದ. ಆಗ, ಅಲ್ಲಿ, ಎರಡನೆಯದಿಲ್ಲ ; ಆಗ ಎನ್ನುವ ಕಾಲವಾಗಲೀ ಅಲ್ಲಿ ಎನ್ನುವ ದೇಶವಾಗಲೀ ಇಲ್ಲ ; ದೇಶದ ಪರಿಮಿತಿಯಾಗಲೀ ಕಾಲದ ಪರಿಮಿತಿ ಯಾಗಲೀ ಕಾರಣ-ಕಾರ್ಯಗಳ ಪರಿಮಿತಿಯಾಗಲೀ ಇಲ್ಲ. ನೀವು ಗ್ರಹಿಸುವದಕ್ಕೆ ಅಲ್ಲಿ ವಿಷಯಗಳೇ ಇಲ್ಲ ; ವಸ್ತುಗಳೇ ಇಲ್ಲ. ನಿಮ್ಮ ಆಲೋಚಿಸುವ, ಭಾವಿಸುವ ಶಕ್ತಿಯು ನಷ್ಟವಾದುದರಿಂದ ಆಲೋಚಿಸಲಾರಿರಿ, ಭಾವಿಸಲಾರಿರಿ, ಅರಿಯ ಲಾರಿರಿ, ಎಂದಲ್ಲ ; ಆತ್ಮನ ಹೊರತು ಬೇರೆ ವಸ್ತುವಿಲ್ಲದುದರಿಂದಲೂ ಆಲೋಚಿ ಸುವ ಮನಸ್ಸೂ ಆತ್ಮನೇ ಆಗಿರುವದರಿಂದಲೂ ಆಲೋಚನೆಯಿಲ್ಲ. ಅಲ್ಲದೆ ಇನ್ನೊಂದೇನೆಂದರೆ, ಅನಂತಾತ್ಮವು ಒಂದೇ ಇರುವದರಿಂದ ಕೇಳುವದಕ್ಕೂ ನೋಡುವದಕ್ಕೂ ಆಲೋಚಿಸುವದಕ್ಕೂ ಎಲ್ಲಕ್ಕೂ ಅದೇ ಕಾರಣವಾಗಿದೆ. ಏತಕ್ಕೂ

ಆತ್ಮಶಕ್ತಿಯೇ ಕಾರಣ. ಆತ್ಮನ ಮಹಿಮಾ ಪ್ರಕಾಶದಿಂದಲೇ ಕಣ್ಣುಗಳು ನೋಡ ಬಲ್ಲವು. ಎಲ್ಲಾ ಇಂದ್ರಿಯಗಳ ಇರುವಿಕೆಗೂ ಒಂದು ಅನಂತಾತ್ಮವೇ ಆಧಾರವು.

ಅಂಥಾ ಅನಂತಸ್ಥಿತಿಯೊಳಗೆ, ಅಂಥಾ ಅವರ್ಣನೀಯವಾದ ಲೋಕದೊಳಗೆ ಮನಸ್ಸು ಏರಿದಾಗ ಅದು ಆಲೋಚಿಸಲಾರದು ; ಅಲ್ಲಿ ಆಲೋಚನೆ ಭೇದಿಸಲಾರದು ತೂರಲಾರದು. ಯಾವದು ತನ್ನನ್ನು ಆಳುವದೋ ಅದನ್ನು ಆಲೋಚನೆಯು ಪ್ರವೇಶಿಸುವದಾದರೂ ಹೇಗೆ ?

ನಿಮ್ಮಲ್ಲಿ ಇಕ್ಕುಳವಿದೆಯೆಂದು ಇಟ್ಟುಕೊಳ್ಳಿ. ಅದನ್ನು ನಿಮ್ಮ ಕೈ ಬೆರಳು ಗಳಿಂದ ಬಲವಾಗಿ ಹಿಡಿದುಕೊಂಡು, ನಿಮ್ಮ ಇಚ್ಛೆಯಂತೆ ಅದನ್ನು ಹಿಡಿದಾಡುತ್ತಾ ಬೇರೆ ಯಾವ ವಸ್ತುವನ್ನಾದರೂ ಅದರಿಂದ ತೆಗೆದುಕೊಳ್ಳಬಹುದು, ಆದರೆ ಯಾವ ಕೈಬೆರಳುಗಳು ತನ್ನನ್ನು ಹಿಡಿದುಕೊಂಡು ಇಷ್ಟಪ್ರಕಾರ ನಿಯೋಜಿಸುತ್ತಿವೆಯೋ ಉಪಯೋಗಿಸುತ್ತಿವೆಯೋ, ಅವನ್ನು ತಾನೇ ಹಿಂದಿರುಗಿ ಹಿಡಿದುಕೊಳ್ಳುವ ಶಕ್ತಿಯು ಆ ಇಕ್ಕುಳಗಳಿಗಿಲ್ಲ.

ಹೀಗೆಯೇ ನಿಮ್ಮ ಅರಿವು ಅಥವಾ ಬುದ್ಧಿಯು, ನಿಮ್ಮ ಮನಸ್ಸು ಅಥವಾ ಮಿದುಳು ಇಕ್ಕಳದಂತಿದೆ. ಆದರೆ ಇದು ವಿಲಕ್ಷಣವಾದ ಇಕ್ಕುಳ, ತಂಡಸ. ಸಾಮಾನ್ಯವಾಗಿ ಇಕ್ಕುಳಕ್ಕೆ ಎರಡು ಕಾಲುಗಳಿರುತ್ತವೆ ; ಆದರೆ, ಈ ಮನಸ್ಸೆಂಬ ಇಕ್ಕುಳಕ್ಕೆ ಮೂರು ಕಾಲುಗಳಿವೆ, ಮೂರು ಹಿಡಿತಗಳಿವೆ. ಒಂದನೆಯದು, ಏಕೆ ? ಎನ್ನುವ ಹಿಡಿತ. ಎರಡನೆಯದು, ಯಾವಾಗ ? ಎನ್ನುವ ಹಿಡಿತ. ಮೂರನೆಯದು, ಎಲ್ಲಿ ? ಎನ್ನುವ ಹಿಡಿತ ಅಥವಾ ಕಾರಣ–ಕಾರ್ಯಗಳ ಹಿಡಿತ, ಕಾಲದ ಹಿಡಿತ, ಮತ್ತು ದೇಶದ ಹಿಡಿತ.

ಒಂದು ವಸ್ತುವನ್ನಾಗಲೀ ಒಂದು ಘಟನೆಯನ್ನಾಗಲೀ, ಸಂಪೂರ್ಣವಾಗಿ ತಿಳಿಯುವದೆಂದರೆ ಏನು ? ಮನಸ್ಸಿನ ಈ ಮೂರು ಹಿಡಿತಗಳಿಂದ, ಈ ಮೂರು ಚಿಮುಟಿಗಳಿಂದ ಒಂದು ವಸ್ತುವನ್ನು ಬಲವಾಗಿ ಹಿಡಿದುಕೊಳ್ಳುವದೇ ಅದನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳುವದು. ಯಾವದಾದರೊಂದು ವಸ್ತುವಿನ ಅಥವಾ ಒಂದು ಘಟನೆಯ ಏಕೆ, ಯಾವಾಗ, ಎಲ್ಲಿ ಎನ್ನುವದನ್ನು ತಿಳಿದಾಗ ಅದನ್ನು ಸಂಪೂರ್ಣವಾಗಿ ತಿಳಿದಂತೆ ಆಗುತ್ತದೆ, ಗ್ರಹಿಸಿದಂತಾಗುತ್ತದೆ. ತಿಳಿದುಕೊ, ಅರ್ಥ ಮಾಡಿಕೊ, ಎನ್ನುವದಕ್ಕೆ ಇಂಗ್ಲಿಷ್‌ನಲ್ಲಿ Understand ಎಂಬ ಶಬ್ದವಿದೆ.

ಈ ಶಬ್ದಕ್ಕೆ ಅವಯವಾರ್ಥ ಮಾಡಿದರೆ, under =ಕೆಳಗೆ, stand =ನಿಲ್ಲು ಎಂದಾಗುತ್ತದೆ ಒಂದು ರೀತಿಯಿಂದ ನೋಡಿದರೆ, ಒಂದು ವಿಷಯವನ್ನು ಬುದ್ಧಿಯು ಗ್ರಹಿಸುವಾಗ, ಆ ವಿಷಯವು ಅದರ ಕೆಳಗೆ ನಿಲ್ಲುತ್ತದೆ. ಬುದ್ಧಿಯು ವಿಷಯದೊಳಗೆ ನಿಲ್ಲುತ್ತದೆ ; ಅದರಲ್ಲಿ ವ್ಯಾಪಿಸಿ ನಿಲ್ಲುತ್ತದೆ, ವಿಷಯವು ಬುದ್ಧಿಯ ಕೆಳಗೆ ನಿಲ್ಲುತ್ತದೆ.

ಬುದ್ಧಿಯು ಅಥವಾ ಗ್ರಾಹಕ ಶಕ್ತಿಯು—ಸಾಧನವು—ಮೂರು ಹಿಡಿತಗಳುಳ್ಳ ವಿಲಕ್ಷಣವಾದ ಇಕ್ಕುಳದಂತಿದೆ. ಬುದ್ಧಿಯು ಎಲ್ಲ ವಸ್ತುಗಳನ್ನೂ ತಿಳಿಯಬಲ್ಲದು, ಗ್ರಹಿಸಬಲ್ಲದು, ಆದರೆ ಈ ಬುದ್ಧಿಯು ಅಥವ ಮನಸ್ಸು ಇಕ್ಕುಳದಂತೆ ವಿಲಕ್ಷಣ ವಾದ ಜ್ಞಾತೃವಿನ ಸ್ವಾಧೀನದಲ್ಲಿದೆ. ಜ್ಞಾತೃವಿನ ವಿಲಕ್ಷಣವಾದ ಶಕ್ತಿಯು ಜ್ಞಾನದ ಮೇಲೆ ಪ್ರಭುತ್ವಮಾಡುತ್ತದೆ. ಆದರೆ ಇಕ್ಕುಳದಂತೆ ಬುದ್ಧಿಯು ಹಿಂದಿರುಗಿ ಜ್ಞಾತೃವನ್ನು (ಆ ನಿಜರೂಪವನ್ನು) ಹಿಡಿಯಲಾರದು

ನಿಮ್ಮ ಬುದ್ಧಿಯು, ಮನಸ್ಸು, ಬಿಡುಬೀಸಾಗಿದೆಯೆ ? ವಿಮುಕ್ತ ವಾಗಿದೆಯೆ ? ಸ್ವತಂತ್ರವಾಗಿದೆಯೆ ? ಹಾಗಾದರೆ, ಅದು ಗಾಢನಿದ್ರೆಯ ಜಡ ಸ್ಥಿತಿಯಲ್ಲಿ ಏಕೆ ಇರುವದಿಲ್ಲ ? ಅದು ಸ್ವತಂತ್ರವಾಗಿದ್ದರೆ, ಎಲ್ಲಾ ಅವಸ್ಥೆಗಳಲ್ಲಿಯೂ ಅದು ಸ್ವತಂತ್ರವಾಗಿಯೇ ಇರುತ್ತಿತ್ತು. ಅದು ಸ್ವತಂತ್ರವಾಗಿಲ್ಲ. ಬುದ್ಧಿಯು ಅಥವಾ ತಿಳಿವಳಿಕೆಯು ಅದಕ್ಕಿಂತಲೂ ಹೆಚ್ಚು ಶ್ರೇಷ್ಠವಾದ ಪ್ರಬಲವಾದ ಶಕ್ತಿಯ ವಶದಲ್ಲಿದೆ. ಬುದ್ಧಿಯು ಹಿಂತಿರುಗಿ, ತನ್ನನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ ಅನಂತಶಕ್ತಿಯ ನಿಜಾತ್ಮನನ್ನು ಹಿಡಿಯಲಾರದು, ಗ್ರಹಿಸಲಾರದು. ಅದು ನಿಜಾತ್ಮನಿಗೆ, "ಏಕೆ, ಯಾವಾಗ, ಎಲ್ಲಿ–ನೀನಿದ್ದಿ ?" ಎನ್ನುವ ಪ್ರಶ್ನೆಯನ್ನು ಹಾಕಲಾರದು. ಆತ್ಮನನ್ನು ಬುದ್ಧಿಯು ಗ್ರಹಿಸಲಾರದು, ತಿಳಿಯಲಾರದು. ಆತ್ಮನು ಬುದ್ಧಿಯನ್ನು ಮೀರಿ ಬುದ್ಧಿಯ ಆಚೆ ಇದ್ದಾನೆ. ಬುದ್ಧಿಯ ಮೇಲಿದ್ದಾನೆ.

ಬುದ್ಧಿಯು ಆತ್ಮನನ್ನು ಗ್ರಹಿಸಲಾರದಾದರೂ ಅದು ಆತ್ಮನಲ್ಲಿ ಮುಳುಗ ಬಲ್ಲದು. ಸಮುದ್ರದ ನೀರಿನಲ್ಲಿರುವ ಗುಳ್ಳೆಗಳೂ ತೆರೆಗಳೂ ನೀರನ್ನು ಬಿಟ್ಟು ಹೊರಗೆ ಬರಲಾರವಾದರೂ ಅವು ಒಡೆದು ನೀರಿನಲ್ಲಿಯೇ ಅಡಗಬಹುದು. ಹೀಗೆ ಬುದ್ಧಿಯು ಆತ್ಮನನ್ನು ಗ್ರಹಿಸಲಾರದಾದರೂ ತನ್ನನ್ನು ತಾನು ಆತ್ಮನಲ್ಲಿ ಕಳೆದು ಕೊಳ್ಳಬಹುದು ; ಕರಗಬಹುದು, ಒಡೆದು ಅಡಗಬಹುದು. ಅದು ಆತ್ಮನೇ ಆಗಿದ್ದು, ಆತ್ಮನಾಗಬಹುದು. ಇದೇ ಮಾಯೆಯ ಒಟ್ಟಿನ ಸಾರ. ಬುದ್ಧಿಯು ಆತ್ಮನನ್ನು

ಅಥವಾ ದೇವರನ್ನು "ನೀನು ಈ ಪ್ರಪಂಚವನ್ನು ಏಕೆ ಸೃಷ್ಟಿಸಿದಿ? ಯಾವಾಗ ಸೃಷ್ಟಿಸಿದಿ? ಎಲ್ಲಿ ಸೃಷ್ಟಿಸಿದಿ?" ಎಂದು ಪ್ರಶ್ನಿಸಲಾರದು, ಧೈರ್ಯವಾಗಿ ಕೇಳಲಾರದು.

ಅನಂತಾತ್ಮದೊಡನೆ ಒಂದಾಗಬೇಕಾದರೆ, ಸರ್ವನಿಯಾಮಕನೂ ಸರ್ವಾಂತರ್ಯಾಮಿಯೂ ಸತ್ಯದ ಸಾಗರವೂ ಆದ ಈ ಸರ್ವೇಶ್ವರ ಆತ್ಮನನ್ನು ಅರಿಯಬೇಕು, ಭಾವಿಸಬೇಕು, ಕಣ್ಣಾರೆ ಕಾಣಬೇಕು—ಒಳಗಣ್ಣಿನಿಂದ, ಅನುಭವದ ಕಣ್ಣಿನಿಂದ. ಈ ನಿಜಾತ್ಮನಿಗೇ "ನಾನಿದ್ದೇನೆ" 'I am' ಎನ್ನುವದು. ಪರಿಪೂರ್ಣನಾದ ಈ ನಿಜಾತ್ಮನು ಕಾರಣ-ಕಾರ್ಯಗಳನ್ನೂ ಕಾಲ-ದೇಶಗಳನ್ನೂ ಮೀರಿದ್ದಾನೆ. ಇವನನ್ನೇ 'ಓಂ' ಎನ್ನುವದು, ಓಂ ಎನ್ನುವದು ಈ ಆತ್ಮನ ಪ್ರತೀಕವು. ಇಂಗ್ಲಿಷ್ ಭಾಷೆಯಲ್ಲಿ ಓಂ ಎನ್ನುವದನ್ನು 'I am' 'ನಾನಿದ್ದೇನೆ' ಎಂದು ಪರಿವರ್ತನೆ ಮಾಡಬಹುದು. ಓಂ ಎಂಬ ಮಂತ್ರವನ್ನು ಉಚ್ಚರಿಸುತ್ತಿರುವಾಗ ಬೇರೆ ಯಾರನ್ನು ಪ್ರಾರ್ಥನೆ ಮಾಡಬೇಕಾಗಿಲ್ಲ; ನಿಮ್ಮಿಂದ ಹೊರಗೆ ಬೇರೆ ಯಾರನ್ನೂ ಚಿಂತಿಸಬೇಕಾಗಿಲ್ಲ; ಭಾವಿಸಬೇಕಾಗಿಲ್ಲ. ಈ 'I am' 'ನಾನಿದ್ದೇನೆ' 'ಅಸ್ಮಿ' 'ಅಹಮಸ್ಮಿ' 'ಅಹಂ ಬ್ರಹ್ಮಾಸ್ಮಿ' ಎನ್ನುವ ನಿಜಾತ್ಮನನ್ನೇ ಓಂಕಾರದ ಉಚ್ಚಾರಣೆಯಲ್ಲಿ ಭಾವಿಸಬೇಕು. ಈ ತೀವ್ರವಾದ ಭಾವನೆಯಿಂದ, ಈ ಉತ್ಕಟವಾದ ಚಿಂತನೆಯಿಂದ ಮನಸ್ಸು ನಿಜಾತ್ಮನಲ್ಲಿ ಮುಳುಗಿ ಹೋಗುತ್ತದೆ, ಅದರಲ್ಲಿಯೇ ಕರಗಿ ಒಂದಾಗುತ್ತದೆ. ಈ ಪ್ರಬಲವಾದ ನಂಬಿಕೆಯಿಂದಲೂ ಮನಸ್ಸಿನ ಈ ಜೀವಂತವಾದ ವಿಜ್ಞಾನದಿಂದಲೂ ಮನಸ್ಸು ಆ ಸಚ್ಚಿದಾನಂದ ಮಹಾಸಾಗರದಲ್ಲಿ ಒಡೆದು ಸೇರುವ ಗುಳ್ಳೆಯಂತಾಗುತ್ತದೆ. ಆತ್ಮಾನುಭವಕ್ಕೆ ಇದೇ ಮಾರ್ಗ, ಇದೇ ಸಾಧನ. ಮನಸ್ಸಿನ ಈ ಬಲಿಷ್ಠವಾದ ಭಾವನೆಯೂ ಜೀವಂತವಾದ ಅರಿವೂ ನಿಮ್ಮನ್ನು ಬಲವಾಗಿ ಹಿಡಿದು 'ನಾನು ದೇಹ, ನಾನು ಮನಸ್ಸು, ನಾನು ಜೀವಾತ್ಮ' ಎಂಬ ಮೋಹವನ್ನು ಕಳೆದು ನಿಮ್ಮನ್ನು ಮುಕ್ತರನ್ನಾಗಿ ಮಾಡುತ್ತದೆ. ಸತ್ಯಪ್ರಾಪ್ತಿಗೆ ಇದೇ ಸಾಧನ.

ನಿಜವಾದ 'ನಾನಿದ್ದೇನೆ' ಎನ್ನುವದು ಪ್ರತಿಯೊಂದು ದೇಹದಲ್ಲಿಯೂ ಕಾಣುತ್ತಿದೆ. ಸರ್ವನಿಯಾಮಕವೂ ಸರ್ವನಿಯಂತೃವೂ ಅನಂತವೂ ಆದ 'I am' ಈ ಆತ್ಮನು ಮಹಾಸಾಗರದಲ್ಲಿ ಇರುವಂತೆ ಪರಮಾಣು ಗರ್ಭದಲ್ಲಿಯೂ ಇದೆ ಇದು ಎಲ್ಲಾ ದೇಶಕಾಲಗಳಲ್ಲಿಯೂ ಕಾರ್ಯ-ಕಾರಣಗಳಲ್ಲಿಯೂ ಒಂದೇ ಸಮನಾಗಿ ತುಂಬಿದೆ. ಆ ಅನಂತವೂ ಅವಿನಾಶಿಯೂ ಆದ 'I am' 'ನಾನಿದ್ದೇನೆ' ಎಂಬ ನಿಜಾತ್ಮನನ್ನು ಭಾವಿಸಿ, ಅರಿತು, ಅನುಭವದಲ್ಲಿ ಅಳವಡಿಸಿಕೊಳ್ಳಿರಿ. ಇದು ನಿಮ್ಮ

ಮನಸ್ಸ್ಥಿತಿಯಲ್ಲಿ ಎಂಥಾ ಭವ್ಯವಾದ ಐಂದ್ರಜಾಲಿಕ ಮಹತ್ ಪರಿವರ್ತನೆಯನ್ನು ಉಂಟುಮಾಡುತ್ತದೆ! 'ಎಲ್ಲಾ ದೇಶಗಳಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ ನಾನೇ ತುಂಬಿದ್ದೇನೆ; ಎಲ್ಲಕ್ಕೂ ನಾನೇ ಆಧಾರವಾಗಿದ್ದೇನೆ. ಅನಂತಕಾಲವೂ ಅನಂತ ದೇಶವೂ ಅನಂತ ಕಾರಣ-ಕಾರ್ಯಗಳೂ ಅನಂತ ಬಲವೂ ಅನಂತ ಶಕ್ತಿಯೂ ಅನಂತ ಸಾಮರ್ಥ್ಯವೂ ನಾನೇ ಆಗಿದ್ದೇನೆ." ಆಹಾ! ಕೇವಲ ಈ ಭಾವನೆಯಿಂದಲೇ ಎಂಥಾ ಮಹದಾನಂದವಾಗುತ್ತದೆ! ಶ್ರದ್ಧೆಯಿಂದ ಸಾಧನೆಮಾಡಿ ಅನುಭವದಲ್ಲಿ ಅಳವಡಿಸಿಕೊಂಡರೆ ಪರಮಾನಂದವೇ ನಿಜಾನಂದವೇ ಆಗುತ್ತದೆ ಇದು ಅಜ್ಞಾನದ ವಿಷಯವಲ್ಲ. ನಾನೀಗ ಏನಾಗಿದ್ದೇನೋ ಈ ಸ್ಥಿತಿಗೆ ಈ ಭಾವವೇ ಈ ಅನುಭಾವವೇ ಕಾರಣ. ಇದು ಯಾವಾಗಲೂ ನಿಮ್ಮದೇ ಆಗಿದೆ. ಇದನ್ನು ನೀವು ಭಾವಿಸಿದರೆ ನೀವು ಉದ್ಧಾರವಾಗುತ್ತೀರಿ. ನಿಮ್ಮ ಎಲ್ಲಾ ಸ್ವಾರ್ಥ ಉದ್ದೇಶಗಳೂ ಬಯಲಾಗುತ್ತವೆ; ಇದನ್ನು ನಂಬಿರಿ; ಇದು ನಿಮ್ಮ ಎಲ್ಲಾ ಚಿಂತಾವ್ಯಥೆಗಳನ್ನೂ ದೂರೀಕರಿಸುತ್ತದೆ. ಎಲ್ಲಾ ಮತ್ಸರಗಳನ್ನೂ ಅಸೂಯೆಗಳನ್ನೂ ಮೀರುತ್ತೀರಿ; ಎಲ್ಲಾ ಶೋಕ, ಮೋಹಗಳನ್ನೂ ಮೀರುತ್ತೀರಿ. ಆ 'I am' 'ನಾನಿದ್ದೇನೆ' ಎನ್ನುವ ಕೇವಲ ನಿರುಪಾಧಿಕವಾದ ಬಚ್ಚಬರಿ ಇರುವಿಕೆಯೇ ನೀವು. ಇದನ್ನೇ ನೀವು ನಿರಂತರ ಭಾವಿಸಿರಿ.

ಕಾರ್ಯಕ್ಕೆ ಕಾರಣವನ್ನು ಕೇಳುವ ಅಧಿಕಾರವು ನಿಮ್ಮ ಬುದ್ಧಿಗಿಲ್ಲ. ಮತ್ತು ಕಾರಣವೇ ತಾನು—ಎಂದು ಹೇಳಿಕೊಳ್ಳುವ ಅಧಿಕಾರವೂ ಅದಕ್ಕೆ ಇಲ್ಲ.

ಈ ಅಂಗ ವಸ್ತ್ರವನ್ನು ನೋಡಿ; ಇದು ರೇಷ್ಮೆಯದು ಈ ಉತ್ತರೀಯವು, ರೇಷ್ಮೆಯಿಂದ ಮಾಡಲ್ಪಟ್ಟಿರುವದರಿಂದ ಅಥವಾ ರೇಷ್ಮೆಯಲ್ಲಿ ಇದು ತೋರುತ್ತಿರುವದರಿಂದ ತಾನು ರೇಷ್ಮೆಯೆಂದು ಇದು ಹೇಳಿಕೊಳ್ಳಬಹುದೇ ಹೊರತು ಆ ವಸ್ತ್ರದ ಉದ್ದ, ಅಗಲ, ದಪ್ಪಗಳನ್ನು ತಾನೆಂದು ಹೇಳಿಕೊಳ್ಳುವದಕ್ಕೆ ಅಧಿಕಾರವಿಲ್ಲ.

ಬುದ್ಧಿಯು ಯಾವದನ್ನಾದರೂ ತಾನೆನ್ನಬಹುದಾದರೆ, ತನಗೆ ಉಪಾದಾನ ಕಾರಣನಾದ ಪರಮಾತ್ಮನನ್ನು— ತನ್ನ ನಿಜಸ್ವಭಾವ—ಸ್ವರೂಪವನ್ನು—ತಾನೆಂದು ಕೊಳ್ಳಬಹುದು. ಏಕೆಂದರೆ, ನಾವು ಪರಮಾತ್ಮನನ್ನೇ ದೇಹ, ಇಂದ್ರಿಯ, ಮನಸ್ಸು, ಬುದ್ಧಿ, ಮೊದಲಾದ ಪ್ರಪಂಚರೂಪವಾಗಿ ವಿಕಲ್ಪಿಸುತ್ತಿದ್ದೇವೆ. ಅದು ದೇಹವನ್ನೇ ತಾನೆಂದುಕೊಳ್ಳದೆ, ಪೊಳ್ಳುಗುಳ್ಳೆಯಾಗಿ ಒಡೆದು 'ನಾನಿದ್ದೇನೆ' 'I am' ಎಂಬ

ನಿಜಾತ್ಮನ ಮಹಾಸಾಗರದಲ್ಲಿ ಒಂದಾಗಬೇಕು. ದೇಹವು ಕಾಲ್ಪನಿಕ (ಜಂಗಮವು) ವಾದುದರಿಂದ, ಅದು ತಾನೆಂದುಕೊಳ್ಳುವದಕ್ಕೆ ಬುದ್ಧಿಗೆ ಅಧಿಕಾರವಿಲ್ಲ

ಪ್ರಾಪಂಚಿಕ ಕಾರ್ಯಗಳನ್ನೂ ಸಂಬಂಧಗಳನ್ನೂ ತಾನೆಂದುಕೊಳ್ಳುವದಕ್ಕೆ ಓ! ಆ ದಿವ್ಯವಾದ ಆತ್ಮಶಕ್ತಿಗೆ ಅಧಿಕಾರವಿಲ್ಲ. ಆ ಭವ್ಯವೂ ದಿವ್ಯವೂ ಆದ ದೇವತ್ವವೇ ಸತ್ಯತೆಯೋ ನೀವು ಇದನ್ನೇ ಅರಿತು, ಇದನ್ನೇ ವಿಚಾರಿಸಿ, ಇದನ್ನೇ ಭಾವಿಸಿ ಎಲ್ಲಾ ಶೋಕ ಮೋಹಗಳನ್ನೂ ದುಃಖ ಸಂಕಟಗಳನ್ನೂ ಮೀರಿ, ಏಳಿ.

ಓಂ! ಓಂ! ಓಂ!

# Class Lectures on Vedanta IV

## ವೇದಾಂತ ಪಾಠಕ್ರಮದ ಉಪನ್ಯಾಸಗಳು -೪

### ಸಂಪನ್ನ ಸ್ತ್ರೀಪುರುಷರೂಪದಲ್ಲಿರುವ ನನ್ನ ಆತ್ಮನೆ,

ಪ್ರಶ್ನೆ.— ಮುಂದೆ ಎಂದಾದರೂ ಒಂದೇ ಮತಧರ್ಮವು ಮಾನವ ಕುಲವನ್ನೆಲ್ಲಾ ಆಳಬಹುದೆ ?

ಉತ್ತರ.— ಹೌದು ಮತ್ತು ಅಲ್ಲ ಕೂಡ. ಮುಂದೆ ಮತಧರ್ಮಗಳು ಮಾನವಜನಾಂಗವನ್ನು ಆಳುವದಿಲ್ಲ ; ಅಂಥಾ ಮತಧರ್ಮಗಳು ನಮ್ಮಲ್ಲಿರುವದಿಲ್ಲ. ಮಾನವಕುಲವು ಧರ್ಮಕ್ಕೆ ಸೇರಿದವರಾಗುವದಿಲ್ಲ, ಧರ್ಮವೇ ಮಾನವರಿಗೆ ಸೇರಿದ್ದಾಗುತ್ತದೆ. ಯಾವ ಧರ್ಮವೂ ಮನುಷ್ಯರನ್ನು ಆಳುವದಿಲ್ಲ. ಮತಧರ್ಮಗಳೂ ಸಂಸ್ಥೆಗಳೂ ನಿಯಮಗಳೂ ಕಟ್ಟಳೆಗಳೂ ಮನುಷ್ಯನಿಗೆ ಸೇರಿವೆ ಮನುಷ್ಯನು ಅವುಗಳಿಗೆ ಸೇರಿಲ್ಲ. ನನಗಾಗಿ ನಿಯಮಗಳು. ನಿಯಮಗಳಿಗಾಗಿ, ಸಂಸ್ಥೆಗಳಿಗಾಗಿ ನಾನು ಸೃಷ್ಟಿಯಾಗಿಲ್ಲ.

There will be in the future a religion which will serve, not rule, mankind.

**“ ಮುಂದೆ ಜಗತ್ತಿನಲ್ಲಿ ಮಾನವರನ್ನು ಆಳುವ ಅಲ್ಲ, ಸೇವಿಸುವ ಒಂದು ಧರ್ಮವಿರುತ್ತದೆ. ”**

ಒಂದು ಮತಧರ್ಮ ಎಂಬ ಪ್ರಶ್ನೆವಿಷಯಕ್ಕೆ ರಾಮನು, “ ಹೌದು, ಮನುಷ್ಯಕುಲವನ್ನು ಸೇವಿಸುವದಕ್ಕೆ ಒಂದೇ ಧರ್ಮವಿರುತ್ತದೆ” ಎನ್ನುತ್ತಾನೆ. ಹಾಗಾದರೆ, ಆ ಧರ್ಮವು ಯಾವುದು? ಎಂದು ನೀವು ಕೇಳಬಹುದು ಆ ಧರ್ಮವು ಯಾವದೆಂದು ಹೇಳುವದಕ್ಕೆ ಮೊದಲು ಅದಕ್ಕೆ ಹೆಸರಿರುವದಿಲ್ಲವೆಂದು ರಾಮನು ಹೇಳುತ್ತಾನೆ.

ಅದು ಯಾವ ಧರ್ಮವೆಂದು ಒಂದು ವೇಳೆ ಹೇಳಬೇಕೆಂದರೆ, ಅದು ವಿಜ್ಞಾನ ಧರ್ಮವಾದ (The religion of Science) ವೇದಾಂತ ಎಂದು ರಾಮನು ಹೇಳುತ್ತಾನೆ. Vedanta is the Universal Religion. ವೇದಾಂತವೇ ವೇದಾಂತ ವಿಜ್ಞಾನವೇ–(ಸಾರ್ವತ್ರಿಕವಾದ) ವಿಶ್ವಧರ್ಮ. ಇದೇ ಸರ್ವಸಮ್ಮತ ವಾದ ಧರ್ಮ.

ಮತ್ತೇನೆಂದರೆ, ಧರ್ಮವೆಂದರೆ, ವಿಚಾರಕ್ಕೆ ಎಡೆಗೊಡದ ಒಂದು ನಂಬಿಕೆ, ಒಂದು ಮತ ತತ್ತ್ವ, ಅಧಿಕಾರಯುಕ್ತವಾದ ಒಂದು ಸಿದ್ಧಾಂತ (Dogma) ಎಂದು ನೀವು ತಿಳಿಯುವದಾದರೆ, ಅದೆಂದೂ ಬದಲಾಯಿಸಲಾರದ ಸ್ಥಿರವಾದ, ರಿಜಿಸ್ಟರಾದ ಏನೋ ಒಂದು ನಿರ್ಜೀವ ಆಚರಣೆ ಎಂದು ನೀವು ತಿಳಿಯುವದಾದರೆ ರಾಮನು, ಎಚ್ಚರಿತ್ತು ಕೊಳ್ಳಿ, ಎಚ್ಚರಿಕ್ಕೆಕೊಳ್ಳಿ, ಎನ್ನುತ್ತಾನೆ. ಈ ಅರ್ಥದ ಧರ್ಮವು ಮುಂದೆ ಬಹುದೂರದಲ್ಲಿ ಇರುವದಿಲ್ಲ. ಅಗೋ, ನೋಡಿ ; ಇವತ್ತು ಜನರು ವಿಜ್ಞಾನವನ್ನು ಅಧ್ಯಯನಮಾಡುತ್ತಿದ್ದಾರೆ ; ಮತ್ತು ಜ್ಞಾನದ ಹೆಚ್ಚು ಉನ್ನತವಾದ ವಲಯಗಳಲ್ಲಿ ಏನು ನಡೆಯುತ್ತಿದೆ ಎಂಬದಕ್ಕೆ ಕಣ್ಣು ತೆರೆಯುತ್ತಿದ್ದಾರೆ. ಇಂಥಾ ಸ್ವತಂತ್ರ ಪುರುಷರು ಎಲ್ಲಾ ಜಾತಿಮತಗಳನ್ನೂ ಅಧಿಕಾರಯುತವಾದ ಸಿದ್ಧಾಂತಗಳನ್ನೂ ಮೀರಿದವರಾಗಿರುತ್ತಾರೆ. ನಿಜವಾದ ಧರ್ಮವು ನಮ್ಮನ್ನು ಬಿಡುಗಡೆ ಮಾಡುವದೇ ಹೊರತು ಬಂಧಿಸುವದಿಲ್ಲ. ನಮ್ಮನ್ನು ಪ್ರಭುಗಳನ್ನಾಗಿಯೂ ಸರ್ವೇಶ್ವರ ರನ್ನಾಗಿಯೂ ಮಾಡುವದು ಧರ್ಮದ ಉದ್ದೇಶವೇ ಹೊರತು, ನಮ್ಮನ್ನು ಗುಲಾ ಮರನ್ನಾಗಿ ಮಾಡುವದಲ್ಲ.

ಧರ್ಮದಲ್ಲಿ ಹೆಸರುಗಳಿರುವದು ಪ್ರಪಂಚದಲ್ಲಿ ಬಹಳ ಕೇಡನ್ನುಂಟುಮಾಡುತ್ತಿದೆ. ಬೌದ್ಧ ಮತ್ತು ಕ್ರೈಸ್ತ ಎನ್ನುವ ಹೆಸರುಗಳನ್ನು ತೆಗೆದುಕೊಳ್ಳಿರಿ. ಆ ಎರಡು ಮತಗಳ ದೃಷ್ಟಿಯಲ್ಲಿಯೂ ದರ್ಶನಗಳಲ್ಲಿಯೂ ಮಹತ್ತಾದ ಭೇದಗಳಿವೆ.

ಬೌದ್ಧಮತವು ಇಂಡಿಯಾ ದೇಶವನ್ನು ನಾಲ್ಕು ಪಂಥಗಳಾಗಿಯೂ ಪಂಗಡಗಳಾಗಿಯೂ ಒಡೆಯಿತು. ಚೈನಾದಲ್ಲಿ ಬೌದ್ಧರು ಏಳು ಪಂಗಡಗಳಾಗಿ ವಿಭಾಗಿಸಲ್ಪಟ್ಟಿದ್ದಾರೆ.

ಒಬ್ಬ ಮನುಷ್ಯ ತಾನು ಹಿಂದು ಎಂದು ಕೊಳ್ಳುತ್ತಾನೆ ; ತಾನು ಹಿಂದೂ

ಆದ್ದರಿಂದ ಕ್ರೈಸ್ತರ ಜೊತೆಗೆ ಅಥವಾ ಮಹಮ್ಮದೀಯರ ಜೊತೆಗೆ ಯುದ್ಧಮಾಡು ವದಾಗಿ ಹೇಳುತ್ತಾನೆ. ಏಕೆ ? ಎಂದರೆ, ಹಿಂದು ಎನ್ನುವ ಹೆಸರನ್ನು ಎತ್ತಿಹಿಡಿಯ ಬೇಕೆಂದು. ಹಿಂದೂಗಳ ಮತ ವಿಚಾರಗಳನ್ನು ನೀವು ವಿಶ್ಲೇಷಣೆಮಾಡಿ, ವಿವೇಚನೆ ಮಾಡಿ ನೋಡಿದರೆ, ಸಹಸ್ರಾರು ಹಿಂದೂಗಳು ತಮ್ಮ ಬೋಧನೆಗಳಲ್ಲಿ ಸ್ವತಃ ಕ್ರೈಸ್ತ ರೆನಿಸಿಕೊಂಡವರಿಗಿಂತಲೂ ಹೆಚ್ಚು ಕ್ರೈಸ್ತರಾಗಿರುವದು ನಿಮಗೆ ಕಂಡುಬರಬಹುದು. ಆದರೆ ಅವರು ಹಿಂದೂಗಳ ವೇಷವನ್ನು ತೊಟ್ಟವರಲ್ಲಿ ಅತಿಯಾದ ಅಭಿಮಾನ ವುಳ್ಳವರಾಗಿದ್ದಾರೆ.

ಮುಂದಿನ ಜಗತ್ತಿನ ಧರ್ಮದ ವಿಷಯದಲ್ಲಿ ಇನ್ನೊಂದು ಮಾತನ್ನು ಹೇಳ ಬೇಕಾಗಿದೆ. ವೇದಾಂತ ವಿಜ್ಞಾನವೂ ವೇದಾಂತ ಸಾಹಿತ್ಯವೂ ಪ್ರತಿಯೊಂದು ಹಳ್ಳಿಯಲ್ಲಿಯೂ ಮನೆಯಲ್ಲಿಯೂ ಪ್ರವೇಶಿಸಿ ವ್ಯಾಪಿಸಿದಾಗ, ಮುಂದೆ ಪ್ರತಿ ಯೊಬ್ಬರಿಗೂ ಜೀವನದಲ್ಲಿ ಧರ್ಮವು ಅಳವಡುತ್ತದೆ. ವಿಶ್ವಧರ್ಮವಾದ ವೇದಾಂತವು ಇಡೀ ಜಗತ್ತಿನಲ್ಲಿ ವ್ಯಾಪಿಸುವ ಕಾಲವು ದೂರವಿಲ್ಲ. ಆದರೆ ಮನುಷ್ಯನು ವೇದಾಂತ ಎನ್ನುವ ಹೆಸರಿನ ಅಭಿಮಾನವನ್ನು ಬಿಟ್ಟು ಮೇಲೇರಬೇಕು. ಅವನು ಬೌದ್ಧ, ಕ್ರೈಸ್ತ ಮೊದಲಾದ ಹೆಸರುಗಳನ್ನೂ ಎಲ್ಲಾ ಹೆಸರುಗಳನ್ನೂ ಮೀರಿ ಮೇಲೇರಬೇಕು.

ನೀವು ಕೆಲವು ಭಾವಗಳನ್ನೂ ಅಭಿಪ್ರಾಯಗಳನ್ನೂ ನಿಜವೆಂದು ನಂಬಿ ಹಿಡಿದಿರುತ್ತೀರಿ. ಇನ್ನು ಕೆಲವರು, ಸ್ವರ್ಗಕ್ಕಿರುವ ಒಂದೇ ದಾರಿಯು ತಮ್ಮ ಚರ್ಚ್‌ಮೂಲಕವಾಗಿ ಮಾತ್ರ ಇದೆ ಎಂದು ಹೇಳಬಹುದು. ಅದು ಸರಿಯೋ ತಪ್ಪೋ ; ಅದು ತಪ್ಪು ಎನ್ನುವದಕ್ಕೆ ನಿಮಗೇನು ಅಧಿಕಾರ ? ನಿಮಗೆ ಅಧಿಕಾರವಿಲ್ಲ. ಅದು ಅವನಿಗೂ ಅವನ ದೇವರಿಗೂ ಸಂಬಂಧಪಟ್ಟ ವಿಷಯವು ; ನಿಮಗೇನು ಸಂಬಂಧ ?

ಯಾವದೊಂದು ವ್ಯಕ್ತಿಯ ಧರ್ಮವು ಅವನಿಗೂ ಅವನ ದೇವರಿಗೂ ಸಂಬಂಧಪಟ್ಟ ಪ್ರಶ್ನೆಯೆಂಬದನ್ನು ಪ್ರತಿಯೊಬ್ಬರೂ ಒಪ್ಪಿ ಗೌರವಿಸಬೇಕೆಂಬದು ವೇದಾಂತದ ಮುಖ್ಯವಾದ ಉಪದೇಶವು.

ಪ್ರಶ್ನೆ—ತಮ್ಮ ಜೀವವನ್ನು ತಾವೇ ತೆಗೆದುಕೊಳ್ಳುವ—' ಆತ್ಮಹತ್ಯೆ ' ಮಾಡಿ ಕೊಳ್ಳುವ—ಜನರ ಆತ್ಮದ ಗತಿ ಏನಾಗುತ್ತದೆ ?

ಉತ್ತರ —ರಾಮನು ಹೇಳುವದೇನೆಂದರೆ, ಪ್ರತಿಯೊಬ್ಬನೂ ತನ್ನ ಜೀವವನ್ನು ತಾನು ತೆಗೆದುಕೊಳ್ಳತಕ್ಕವನೇ. ಸಾಯುತಕ್ಕ ಪ್ರತಿಯೊಬ್ಬನೂ ‘ ಆತ್ಮಹತ್ಯೆ ’ ಮಾಡಿಕೊಳ್ಳತಕ್ಕವನೇ. ಹಾಗೆ ಸಾಯುವವರ ಗತಿಯೇನು ? ಏನೂ ಇಲ್ಲ ; ವಿಶೇಷವೇನೂ ಇಲ್ಲ. ಹಾಗೆಯೇ, ರೂಢಿಯಲ್ಲಿ, ಆತ್ಮಹತ್ಯೆಮಾಡಿಕೊಂಡವರೆನಿಸಿಕೊಂಡವರಿಗೆ ಉಂಟಾಗುವ ಗತಿಯಲ್ಲಿಯೂ ವಿಶೇಷವೇನೂ ಇಲ್ಲ. ನಿಮ್ಮ ಜೀವನದಲ್ಲಿ ನೀವು ಮಾಡಬೇಕಾಗಿರುವ ಕಾರ್ಯವು ಮುಗಿದ ಹೊರತು ನೀವು ಸಾಯುವದಿಲ್ಲ. ಸಾವು ಬರುವದು ಹೇಗೆ ? ಅಥವಾ ಜನರು ತಮ್ಮ ಸಾವನ್ನು ತಾವು ಹೇಗೆ ತಂದುಕೊಳ್ಳುತ್ತಾರೆ ?

ಜನರು ತಮ್ಮ ಬಯಕೆಗಳಿಂದಲೂ ಅಜ್ಞಾನದಿಂದಲೂ ತಪ್ಪು ತಿಳಿವಳಿಕೆಯಿಂದಲೂ, ತಮ್ಮ ದೇಹವು ಕೊನೆಗೊಂಡರೆ ಸಾಕು, ಜೀವವು ಹೋದರೆ ಸಾಕು, ಎಂದು ತಾವೇ ಇಚ್ಛಿಸುವ ಪರಿಸ್ಥಿತಿಯಲ್ಲಿ ಸಿಕ್ಕಿಕೊಳ್ಳುತ್ತಾರೆ. ಹೃದಯಾಂತರಾಳದಲ್ಲಿ ಅವರು ಸಾವನ್ನೇ ಇಚ್ಛಿಸುವದರಿಂದ, ಅವರಿಗೆ ಸಾವು ಬರುತ್ತದೆ. ಇದೇ ವಿಶ್ವನಿಯಮ. ಜನರು ತಮ್ಮ ಇಚ್ಛೆಯಿಂದಲೇ ರೋಗವನ್ನು ತಂದುಕೊಳ್ಳುತ್ತಾರೆ. ಅವರು ರೋಗದಿಂದ ನರಳುತ್ತಾ ಹಾಸಿಗೆಯಲ್ಲಿ ಮಲಗಿರುವಾಗ, ಅವರ ಹಿಂದಿನ ಬಯಕೆಯು ಫಲವಾಗಿ, ಅವರು ಸಾವನ್ನೇ ತೀವ್ರವಾಗಿ ಬಯಸುವಂತಾಗುತ್ತದೆ ; ಸಾವು ಬರುತ್ತದೆ. ಆದ್ದರಿಂದ ಎಲ್ಲರೂ ಆತ್ಮಹತ್ಯೆಮಾಡಿಕೊಳ್ಳತಕ್ಕವರೇ.

ಪ್ರಶ್ನೆ- -ಹಿಂದಿನ ಜನ್ಮಗಳನ್ನು ನೆನಪುಮಾಡಿಕೊಳ್ಳುವದು ಸಾಧ್ಯವೆ ?

ಉತ್ತರ - ತನ್ನ ಹಿಂದಿನ ಜನ್ಮಗಳನ್ನು ನೆನಪುಮಾಡಿಕೊಳ್ಳುವ ಅಥವಾ ನೆನಪುಮಾಡಿಕೊಳ್ಳಲು ಪ್ರಯತ್ನಪಡುವ ಮನುಷ್ಯನು ಎಷ್ಟೋ ರಸ್ತೆಗಳಲ್ಲಿ ನಡೆದು ಬಂದು, ಇನ್ನು ನಡೆಯುವದಕ್ಕೆ ನಾಲ್ಕೈದು ರಸ್ತೆಗಳು ಉಳಿದಿರುವ ಪ್ರವಾಸಿಯಂತೆ ಆಗುತ್ತಾನೆ ಅವನು ತಾನು ಹೊರಟ ಸ್ಥಳವನ್ನೂ ನಡೆದು ಬಂದ ಮೊದಲನೆಯ, ಎರಡನೆಯ, ಮೂರನೆಯ ರಸ್ತೆಗಳ ಹೆಸರುಗಳನ್ನೂ ವಿಚಾರಿಸುವದಕ್ಕೆ ತೊಡಗುತ್ತಾನೆ. ಎಲ್ಲಾ ರಸ್ತೆಗಳನ್ನೂ ಗಂಟೆಯ ಹಿಂದೆ, ೧೫ ನಿಮಿಷಗಳ ಹಿಂದೆ ನಡೆಯುತ್ತಿದ್ದ ರಸ್ತೆಗಳನ್ನೂ ವಿಚಾರಿಸುತ್ತಾನೆ ; ನೆನಪುಮಾಡಿಕೊಳ್ಳುತ್ತಾನೆ, ಹಿಂದಿಟ್ಟುಕೊಳ್ಳಿ. ಇದೆಲ್ಲಾ ನಿಷ್ಪ್ರಯೋಜಕವಾದ ಶ್ರಮವಲ್ಲವೆ ? ಮನುಷ್ಯನು ಮುಂದೆ ಮುಂದೆ ನೋಡಬೇಕು, ಹಿಂದ ನೋಡುವವರ ಪ್ರಯೋಜನವೇನು ? ನಡೆಯಿರಿ ಮುಂದೆ, ಮುಂದೆ. ಎಷ್ಟೋ ಜನ್ಮಗಳ ಮೂಲಕ, ರಸ್ತೆಗಳ ಮೂಲಕ ನೀವು ಬಂದಿರಬಹುದು.

ಈಗ ನೀವು ಮುಂದೆ ನಡೆಯಬೇಕಾದುದಿದೆ. ನೀವು ಮುಂದೆ ಮುಂದೆ ನಡೆಯುತ್ತಿದ್ದರೆ ಸರಿ; ನೀವು ನಿಂತರೆ, ಕೆಡುತ್ತೀರಿ ; ನಿಮ್ಮ ಮುನ್ನಡೆಯನ್ನು ನೀವೇ ತಡೆಹಿಡಿಯುತ್ತೀರಿ ನಡೆಯಿರಿ, ನಡೆಯಿರಿ, ಮುನ್ನಡೆಯಿರಿ

ಪ್ರಶ್ನೆ—ಸ್ಥೂಲ ಭೌತಿಕ ದೇಹದಲ್ಲಿರುವಾಗ ಮನೋ ಭೂಮಿಕೆಯ ಮೇಲೆ ಪ್ರಜ್ಞಾಪೂರ್ವಕವಾಗಿ ತೋರಿಕೊಳ್ಳಲು ಸಾಧ್ಯವೆ ? ಬ್ರಹ್ಮವಿದ್ಯಾಸಮಾಜದ ಗುರುಗಳು ( Theosophical Teachers) ಸಾಧ್ಯವಿಲ್ಲವೆಂದು ನನಗೆ ಹೇಳಿದ್ದಾರೆ.

ಉತ್ತರ—ಈ ಪ್ರಶ್ನೆಯಲ್ಲಿ ಅನೇಕ ವಿಷಯಗಳು ಅಡಗಿವೆ. ವಿವರವಾದ ವಿಚಾರಕ್ಕೆ ಈಗ ಅವಕಾಶವಿಲ್ಲ.

ಒಳ್ಳೆಯದು ; ತಿಯಾಸೊಫಿಸ್ಟ ಗುರುಗಳು ಹಾಗೆ ಹೇಳಿದ್ದು ಸರಿ. ಭೌತಿಕ—ಮಾನಸಿಕ ಭೂಮಿಕೆಗಳು ಅನ್ಯೋನ್ಯ ಆಶ್ರಯದಿಂದಿವೆ. ಮಾನಸ ಸಂಶೋಧನೆಗಳೆಲ್ಲಾ ಮನಸ್ಸಿನಿಂದಲೇ ನಡೆಯಬೇಕು. ಆದರೆ, ಭೌತಿಕ ಭೂಮಿಕೆಯ ಮೇಲೆ, ಒಂದು ಕಾರ್ಯವು ಮನಸ್ಸಿನಿಂದಲೇ ಅಲ್ಲದೆ ದೇಹದಿಂದಲೂ ನಡೆಯುವದನ್ನು ನೋಡುತ್ತೇವೆ. ಭೌತಿಕ ಭೂಮಿಕೆಯ ಮೇಲೆ, ಮನಸ್ಸು ಅನೇಕ ಕಾರ್ಯಗಳನ್ನು ಮಾಡುತ್ತದೆ ಕಡಲ ತಂತಿಗಳು (cables) ಹಡಗು ಮೊದಲಾದವುಗಳೂ ನಿಮ್ಮ ಮನೋಭಾವಗಳ ತೋರಿಕೆಗಳೇ ಆಗಿವೆ. ಆದರೆ ಈ ಭೌತಿಕ ವಸ್ತುಗಳು ಭೌತಿಕ ಭೂಮಿಕೆಯ ಮೇಲೆ ದೇಹದ ಸಾಧನೆಯ ಮೂಲಕವೇ ಅಭಿವ್ಯಕ್ತವಾಗಿವೆ. ಹಡಗುಗಳನ್ನು ನಿರ್ಮಾಣಮಾಡುವದಕ್ಕೂ ಕಡಲ ತಂತಿ ಮೊದಲಾದವನ್ನು ತಯಾರಿಸುವದಕ್ಕೂ ಯಂತ್ರೋಪಕರಣಗಳನ್ನು ಉಪಯೋಗಿಸಬೇಕು ಮನಸ್ಸು ನಾಯಕನೋ (Captain) ಉಪಕರಣವೋ ? (Tool). ಮನಸ್ಸೂ ಒಂದು ಉಪಕರಣವೇ ; ಅದು ಕರ್ತೃವಲ್ಲ, ಕಾರ್ಯಭಾರಿಯಲ್ಲ (Agent).

ಎಲ್ಲಾ ಮಹಾನೌಕೆಗಳೂ ಮಹಾಸೌಧಗಳೂ ಮಹಾಕಲಾಕೃತಿಗಳೂ ಮೊದಲು ಮನಸ್ಸಿನ ಭಾವನೆಯಲ್ಲಿ ಮೂಡಿ ಯೋಜನೆಗೊಂಡು ದೇಹದಿಂದ ಸಾಧನೆಯಾಗುತ್ತವೆ

ನಿಮ್ಮ ಏಕತ್ವವನ್ನು ನೀವು ಅರಿಯಬೇಕಾದರೆ, ತನು-ಮನ ಎರಡನ್ನೂ ಉಪಯೋಗಿಸಬೇಕು. ಏಕತ್ವವನ್ನು ಅರಿಯುವದೂ ಮನೋಭೂಮಿಕೆಯ ಮೇಲೆ

ಅಭಿವ್ಯಕ್ತ ಮಾಡುವದೂ ಬೇರೆ ಬೇರೆ. ನಿಮ್ಮ ಏಕತ್ವವನ್ನು ನೀವು ಅರಿಯಬೇಕಾದರೆ, ನಿಮ್ಮ ಮಾನಸಿಕ ಮತ್ತು ಭೌತಿಕ ಭೂಮಿಕಗಳೆರಡೂ ಪ್ರಪಂಚಗಳೇ ಆದ್ದರಿಂದ, ಅವುಗಳನ್ನು ತಿರಸ್ಕರಿಸಬೇಕು.

ಪ್ರಶ್ನೆ—ದೇವರು ಸರ್ವಸಮರ್ಥನಾಗಿದ್ದು, ಆ ದೇವರೇ ನಾವಾಗಿದ್ದರೆ, ಕಣ್ಣಿನಿಂದ ಕೇಳಬಾರದೇಕೆ ? ಕಿವಿಯಿಂದ ನೋಡಬಾರದೇಕೆ ?

ಉತ್ತರ—ನೀವು ನನ್ನ ಕಾಲು, ನನ್ನ ಕೈ, ನನ್ನ ಕಣ್ಣು, ನನ್ನ ಕಿವಿ ಎಂದು ಹೇಳುತ್ತೀರಿ. ಹಾಗಾದರೆ ಇವುಗಳು ನಿಮ್ಮವಾದರೆ, ಕಿವಿಗಳಿಂದ ನೀವು ನೋಡಬಾರದೇಕೆ? ಕಣ್ಣುಗಳಿಂದ ಕೇಳಬಾರದೇಕೆ? ದೇವರು ಒಬ್ಬ ಮತ್ತು ಸರ್ವಶಕ್ತ ಎನ್ನುವದನ್ನು ನೀವು ಒಪ್ಪುವದಾದರೆ, ಅವನಿಗೆ ಇಚ್ಛೆಬಂದಂತೆ ಮಾಡಿಕೊಳ್ಳಲಿ.

ದೇವರು ಮನಸ್ಸಿನ ಮೂಲಕವಾಗಿ ಕೆಲವು ಭೂಮಿಕೆಗಳ ಮೇಲೆ ತೋರಿಕೊಳ್ಳುತ್ತಾನೆ, ಮತ್ತು ಇತರ ಭೂಮಿಕೆಗಳ ಮೇಲೆ ದೇಹದ ಮೂಲಕವಾಗಿ ತೋರಿಕೊಳ್ಳುತ್ತಾನೆ. ಇಡೀ ವಿಶ್ವದ ತುಂಬಾ ಅವನು ವಸ್ತುಗಳ ಮೂಲಕ ತೋರಿಕೊಳ್ಳುತ್ತಾನೆ. ಅವನು ಪರಾವಲಂಬಿಯಾಗಿದ್ದರೆ ಮನುಷ್ಯರ ಇಚ್ಛೆಯಂತೆಯೂ ಹುಚ್ಚಾಟಿಕೆಯಂತೆಯೂ ಕಯಾಲಿಯಂತೆಯೂ ಕುಣಿಯಬಹುದಾಗಿತ್ತು, ನಡೆಯಬಹುದಾಗಿತ್ತು.

ಅವನು ಯಾವ ನಿಯಮಗಳಿಂದಲೂ ಶಕ್ತಿಗಳಿಂದಲೂ ಮನುಷ್ಯನ ಖಯಾಲಿಗಳಿಂದಲೂ ಬದ್ಧನಾಗಿಲ್ಲವಾದ್ದರಿಂದ ಆ ದೇವರು ತನ್ನ ಇಷ್ಟಬಂದಂತೆ ಮಾಡುತ್ತಾನೆ.

ಆಲೋಚಿಸುವ ಮತ್ತು ಬಯಸುವ ಮನಸ್ಸು ನೀವಲ್ಲವೆಂದು ರಾಮನು ಹೇಳುತ್ತಾನೆ. ಅದು ನೀವಾಗಿದ್ದರೆ, ಖಂಡಿತ, ನಿಮಗಿಷ್ಟಬಂದಂತೆ ನೀವು ಮಾಡಬಹುದಾಗಿತ್ತು. ನೀವೇ ಮನಸ್ಸಾಗಿದ್ದರೆ, ಮನಸ್ಸಿನ ಕಾರ್ಯಸಂವಿಧಾನವನ್ನು ದೇಹ ರಚನೆಗೆ ಅನುಗುಣವಾಗಿ ಅಥವಾ ಇದಕ್ಕೆ ವಿಪರೀತವಾಗಿ ಮಾರ್ಪಡಿಸಬಹುದಾಗಿತ್ತು. ಆದರೆ ಆ ಬಯಸುವ ಮನಸ್ಸು ನೀವಲ್ಲ. ಈ ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡುತ್ತಿರುವ ಸರ್ವಶಕ್ತನೂ ಸರ್ವತಂತ್ರ ಸ್ವತಂತ್ರನೂ ಆದ ಆ ದೇವರೇ ನೀವಾಗಿದ್ದೀರಿ

ಮನಸ್ಸನ್ನು ಮೆಟ್ಟಿ ಮೇಲೇರಿ. ಮನಸ್ಸು ಬಯಸುತ್ತದೆ; ಆದರೆ ಈ ಬಯಕೆಗಳೂ ಹಂಬಲಗಳೂ ಹಾತೊರಿಕೆಗಳೂ ನೀವಲ್ಲ.

ಯಾವ ಮಹಾಶಕ್ತಿಯು ಸಸ್ಯಗಳನ್ನೆಲ್ಲಾ ಬೆಳೆಸುವದೋ ಹಕ್ಕಿಗಳನ್ನು ಹಾರಿಸುವದೋ ಇತ್ಯಾದಿ, ಅದೇ ನೀವು. ದೇವರೇ ನೀವು; ನೀವೇ ದೇವರು. ದೇವರು ಎನ್ನುವದು ನಿಮ್ಮ ಗುಣವಲ್ಲ; ವಿಶೇಷಣವಲ್ಲ.

ಪ್ರಶ್ನೆ—ಮಂಡಲ ನೃತ್ಯವನ್ನು ಅಭ್ಯಾಸ ಮಾಡುವದು ಅವಶ್ಯವೆ ?

ಉತ್ತರ—ನಿಮ್ಮ ಮನಸ್ಸಿನಲ್ಲಿ ಅಜ್ಞಾನವಿರುವವರೆಗೂ ನೀವು ಯಾವಾಗಲೂ ಎಲ್ಲಾ ಬಗೆಯ ಆಟಗಳನ್ನೂ ವಿನೋದಗಳನ್ನೂ ಇಚ್ಛಿಸುತ್ತೀರಿ. ನೀವು ಬೆಳೆದ ಮೇಲೆ ನಿಮ್ಮ ಆಟದ ಸಾಮಾನುಗಳನ್ನು ಕೈಬಿಡುತ್ತೀರಿ ನೀವು ನಿಜವಾದ ಜ್ಞಾನವನ್ನು ಸಂಪಾದಿಸಿದರೆ, ಸ್ಥೂಲ ಪ್ರಪಂಚದ ಮತ್ತು ಸೂಕ್ಷ್ಮ ಪ್ರಪಂಚದ ಕ್ರೀಡಾ ವಸ್ತುಗಳನ್ನು ಬಿಟ್ಟುಬಿಡುತ್ತೀರಿ. ನೀವು ಎಲ್ಲಿಯುವರೆಗೆ ಅದನ್ನು ಸಂಪಾದಿಸಿಲ್ಲವೋ ಅಲ್ಲಿಯುವರೆಗೆ ಈ ಆಟದ ವಸ್ತುಗಳಿಂದ ವಿನೋದಪಡದೆ, ಸಂತೋಷಪಡದೆ ಇರಲಾರಿರಿ.

ಅಜ್ಞಾನವನ್ನು ಸುಡುವದೇ ಜ್ಞಾನ.

ಜ್ಞಾನವೂ ಅಜ್ಞಾನವೂ ಒಂದೇ ಏಣಿಯನ್ನು ಹತ್ತುವದು ಮತ್ತು ಇಳಿಯುವದು. ಏಣಿಯನ್ನು ಇಳಿಯುವದೇ ಅಜ್ಞಾನ, ಏಣಿಯನ್ನು ಏರುವದೇ ಜ್ಞಾನ. ಒಂದೇ ವಸ್ತುವನ್ನು ಬೇರೆ ಬೇರೆ ದೃಷ್ಟಿಕೋನದಿಂದ, ನಿಲುಮೆಯಿಂದ ನೋಡುವದೇ ಜ್ಞಾನಾಜ್ಞಾನ

ಬೆಳಕು ಮತ್ತು ಕತ್ತಲು ಬೇರೆಯಲ್ಲವೆಂದೂ ಒಂದೇ ಎಂದೂ ಕೇವಲ ತೀವ್ರತೆಯ ತಾರತಮ್ಯವೆಂದೂ ವಿಜ್ಞಾನವು ತೋರಿಸಿಕೊಡುತ್ತದೆ.

ಕತ್ತಲೆಯ ಕೋಣೆಯಲ್ಲಿ ಕುಳಿತುಕೊಂಡು, ಸುಮ್ಮನೆ ಕಣ್ಣುಗಳನ್ನು ಬಿಟ್ಟು ಕತ್ತಲೆಯನ್ನೇ ನೋಡಿ. ಸ್ವಲ್ಪ ಹೊತ್ತಿನಲ್ಲಿ ಕಣ್ಣಿನ ಪಾಪೆಯು ವಿಸ್ತೃತವಾಗಿ—ಅರಳಿ—ಕತ್ತಲಾಗಿದ್ದುದೇ ಬೆಳಕಾಗಿ ಕಾಣುತ್ತದೆ.

ಜ್ಞಾನ ಮತ್ತು ಅಜ್ಞಾನಗಳು ಪರಸ್ಪರ ವಿರುದ್ಧವಾದ ದ್ವಂದ್ವಗಳಲ್ಲ. ಅಂಶದಲ್ಲಿ ಭೇದವೇ ಹೊರತು ಗುಣದಲ್ಲಿ ಅಲ್ಲ; ನೀವು ಅಜ್ಞಾನದಲ್ಲಿ ಇರುವವರೆಗೆ ಜ್ಞಾನದ ನಿಚ್ಚಣಿಕೆಯ ಕೆಳಸುತ್ತಿನಲ್ಲಿರುತ್ತೀರಿ. ಈ ಕೆಳಸುತ್ತಿನಲ್ಲಿರುವವರೆಗೆ ಆಟಗಳಿಂದ ವಿನೋದ ಪಡದೆ ಗತಿಯಿಲ್ಲ. ನೀವು ಆ ನಿಚ್ಚಣಿಕೆಯಲ್ಲಿ ಮೇಲೆ ಮೇಲೆ ಏರಿದಂತೆ, ಆ ಆಟಗಳು ತಾವಾಗಿಯೇ ಕಳಚಿ ಬೀಳುತ್ತವೆ.

ಪ್ರಶ್ನೆ—"Voice of Silence" 'ಮೌನದ ವಾಣಿ, ನಿಶ್ಶಬ್ದತೆಯ ಧ್ವನಿ, ಸದ್ದಿಲ್ಲದ ದನಿ" ಎಂಬ ಗ್ರಂಥದಲ್ಲಿ "The self of matter and the self of spirit can never meet." "ಜಡವಸ್ತುವಿನ ಆತ್ಮವೂ ಚೇತನದ ಆತ್ಮವೂ ಎಂದೂ ಕೂಡುವದಿಲ್ಲ. ಎರಡರಲ್ಲಿ ಒಂದು ಮಾಯವಾಗಲೇ ಬೇಕು. ಎರಡಕ್ಕೂ ಸ್ಥಳವಿಲ್ಲ." ಎಂದು ಹೇಳಿದೆ. ವೇದಾಂತವು ಇದನ್ನು ಒಪ್ಪುವದೆ ?

ಉತ್ತರ—"Self of matter and self of spirit" ಜಡವಸ್ತುವಿನ ಆತ್ಮ ಮತ್ತು ಚೇತನದ ಆತ್ಮ" ಎನ್ನುವ ಮಾತುಗಳಿಗೆ ನೀವು ತಿಳಿದಿರುವದಕ್ಕಿಂತಲೂ ಬೇರೆ ಅರ್ಥವಿರಬೇಕು.

ಚೇತನದ ಆತ್ಮವನ್ನು ಅರಿಯುವದಕ್ಕೆ ಮೊದಲು, ಯಾವ ವಸ್ತುವಿನ ಆತ್ಮವು ಕಾಣದಾಗಬೇಕೋ ಅದನ್ನೇ ರಾಮನು ಮಿಥ್ಯಾ-ಆತ್ಮ, ಸುಳ್ಳು ಅಹಂಕಾರ, ಸುಳ್ಳು ಅಥವಾ ತೋರಿಕೆಯ ಆತ್ಮ ಎನ್ನುವುದು. ಅದು ನೀರಿನಲ್ಲಿ ಮೂಡಿರುವ ಪ್ರತಿಬಿಂಬದಂತೆ ಇದೆ.

ದೇವರಲ್ಲಿ ನಿಮ್ಮ ಐಕ್ಯಭಾವವನ್ನು ಅರಿಯುವದಕ್ಕೆ ಮೊದಲು ಅದು ಮೈಗರೆಯಬೇಕು. ಆ ಅರ್ಥದಲ್ಲಿ ಅದು ನಿಜ, ಅಜ್ಞಾನದಿಂದ ಆಲೋಚಿಸುವದನ್ನು ಮೊದಲು ತೊಲಗಿಸಬೇಕು. 'ದೇಹವೇ ನಾನು' ಎಂದುಕೊಳ್ಳುವ ಈ ಅಜ್ಞಾನವು, ಈ ಹೊಣೆಹೊರುವ ಅಭಿಮಾನವು, ಏಕ ಬಾಧ್ಯತೆಯ ಹಕ್ಕನ್ನೂ ಸ್ವಾಮ್ಯವನ್ನೂ ಸ್ಥಾಪಿಸುವ (This responsible copy-righting self) ಈ ಅಹಂಕಾರವು-ಇದೇ ಜಡವಸ್ತುವಿನ ಆತ್ಮ. ಇದನ್ನೇ ಮೊದಲು ನಾಶಮಾಡಬೇಕು; ಅಥವಾ ತೊಲಗಿಸಬೇಕು.

ವಸ್ತುವಿನ ಆತ್ಮ, ಚೇತನದ ಆತ್ಮ ಎನ್ನುವ ಮಾತುಗಳಿಗೆ ವಸ್ತು ಇಲ್ಲಿದೆ,

ಚೇತನ ಇನ್ನೆಲ್ಲಿಯೋ ಇದೆ ಎಂದಾಗಲೀ, ವಸ್ತುವಿಗೆ ಒಂದು ಆತ್ಮವಿದೆ, ಚೇತನಕ್ಕೆ ಇನ್ನೊಂದು ಆತ್ಮವಿದೆ, ಅವು ಬೇರೆ ಬೇರೆ ಇವೆ, ಭಿನ್ನಸ್ವಭಾವವುಳ್ಳವಾಗಿವೆ, ಎಂದಾಗಲೀ ತಿಳಿದರೆ, ಇದು ತಪ್ಪು. ವಸ್ತುವಿನ ಆತ್ಮವೂ ಚೇತನದ ಆತ್ಮವೂ ಒಂದೇ ; ಬೇರೆ ಬೇರೆಯಲ್ಲ.

' Spirit ' ' ಚೇತನ ' ಎಂಬ ಶಬ್ದದ ಅರ್ಥವನ್ನು ತಪ್ಪಾಗಿ ತಿಳಿದಿದ್ದಾರೆ. ತತ್ತ್ವಶಾಸ್ತ್ರಜ್ಞರು ಮನಸ್ಸು ಎನ್ನುವದನ್ನೇ Spirit ಚೇತನ ಎನ್ನುವದಾದರೆ, ಆಗಲೂ ಮನಸ್ಸಿನ ಆತ್ಮವೂ ವಸ್ತುವಿನ ಆತ್ಮವೂ ಬೇರೆ ಬೇರೆಯಲ್ಲ. ಅವೆರಡೂ ಒಂದೇ. ಅಂಶ-ಅಂಶಿಗಳ ಭೇದವೇ ಹೊರತು ಸ್ವಭಾವ-ಸ್ವರೂಪಗಳಲ್ಲಿ ಭೇದವಿಲ್ಲ.

ವಸ್ತುವೂ ಮನಸ್ಸೂ (Mind and Matter) ಒಂದೇ ಎಂದು ವಿಜ್ಞಾನವು ತೋರಿಸಿ ಸಿದ್ಧಮಾಡಿ ಕೊಟ್ಟಿದೆ. ತತ್ತ್ವಶಾಸ್ತ್ರಜ್ಞರು ವಸ್ತುವೂ ಶಕ್ತಿಯೂ ಒಂದೇ ಎಂದೂ ತೋರಿಸುತ್ತಾರೆ.

" Atoms are simply centres of force " " ಪರಮಾಣು ಗಳೆಂದರೆ, ಶಕ್ತಿಯ ಕೇಂದ್ರಗಳು " ಎಂದು ಲಿಬ್‌ನಿಟ್ಸ್‌ನು (Leibnitz) ಯೂರೋಪಿನಲ್ಲಿ ಮೊಟ್ಟಮೊದಲು ತಿಳಿಸಿದರೂ ಇಂಡಿಯಾ ದೇಶದಲ್ಲಿ ಅದು 10,000 ವರ್ಷಗಳ ಹಿಂದೆಯೇ ತಿಳಿದಿತ್ತು. ಈ ವಾದವನ್ನು ವಿಜ್ಞಾನವು ತೆಗೆದುಕೊಂಡು ಸತ್ಯವೆಂದು ತೋರಿಸಿದೆ. ಲಾರ್ಡ್ ಕಾಲ್ವಿನ್ (Lord Calvin) ತಮ್ಮ ಮಹಾಲೇಖನ ಗಳೊಂದರಲ್ಲಿ ಗಣಿತಶಾಸ್ತ್ರದ ಪ್ರತಿಜ್ಞೆಗಳಿಂದ (Mathematical propositions) ' ವಸ್ತುವೆಂದರೆ ಶಕ್ತಿ ', ಎಂದು ತೋರಿಸಿದ್ದಾರೆ. ಹಾಗಾದ ಮೇಲೆ ವಸ್ತು ಮತ್ತು ಚೈತನ್ಯ (Matter and spirit) ಇವೆರಡು ಹೇಗೆ ಬೇರೆಯಾದಾವು ? (Spirit) ಚೈತನ್ಯವನ್ನು ಮನಸ್ಸು ಎಂದು ಇಟ್ಟುಕೊಂಡರೂ ವಸ್ತು ಮತ್ತು ಮನಸ್ಸು ಒಂದೇ ಆಗಿವೆ.

ನೀವು ಪರ್ವತಗಳಿಗೆ ಹೋಗಿ ನೋಡಿ. ಹಿಮಾಲಯ ಪರ್ವತಗಳ ಮೇಲೆ ಭವ್ಯವೂ ಸುಂದರವೂ ಆದ ದೃಶ್ಯಗಳಿವೆ. ಅಲ್ಲಿ ಬಗೆಬಗೆಯ ಹೂವುಗಳ ಪರಿಮಳ ವಿದೆ ; ಹಕ್ಕಿಗಳ ಗಾನ, ಜಲಝರಿಗಳ ಜುಳುಜುಳು ನಿನಾದ, ಮಂದಮಾರುತನ ಮಧುರ ಶಬ್ದ, ಇವೆಲ್ಲಾ ಅಲ್ಲಿ ತುಂಬಿವೆ. ಇವೆಲ್ಲಾ ಏನು ? ಇವೆಲ್ಲಾ ಭೌತಿಕ ವಸ್ತುಗಳಲ್ಲವೆ ? ಈ ವಸ್ತುಗಳು ಶಕ್ತಿಯಾಗಿಯೂ ಭಾವನೆಯಾಗಿಯೂ

ಹರ್ಷೋಲ್ಲಾಸವಾಗಿಯೂ ಸಂಗಾನವಾಗಿಯೂ ಪರಿವರ್ತನೆ ಹೊಂದಿ ನಿಮ್ಮಲ್ಲಿ ಉನ್ನತ ಭಾವಗಳನ್ನೂ ಪರಮಾತ್ಮ ಪ್ರಜ್ಞೆಯನ್ನೂ ಹುಟ್ಟಿಸುತ್ತವೆ. ಇದರಲ್ಲಿ ಹೊರಗಿನ ವಸ್ತುವು ಭಾವನಾರೂಪದಲ್ಲಿ ಪರಿವರ್ತನೆ ಹೊಂದುವದನ್ನು ಕಾಣುತ್ತೇವೆ ನಿಮ್ಮ ದೊಡ್ಡ ದೊಡ್ಡ ನಗರಗಳು, ಪಟ್ಟಣಗಳು, ಮಹಾ ಸದನಗಳು, ಸೌಧಗಳು, ನೌಕೆಗಳು ಸ್ತ್ರೀಪುರುಷರೂ ಸಹ ಇವೆಲ್ಲಾ ಏನು? ಒಂದು ಕಾಲದಲ್ಲಿ ಇವೆಲ್ಲಾ ಕೇವಲ ಮನೋಭಾವನೆಗಳಾಗಿದ್ದವು. ಒಂದು ಮನೆಯನ್ನು ಕಟ್ಟಬೇಕಾದರೆ, ಅದನ್ನು ಮೊದಲು ಮನಸ್ಸಿನಲ್ಲಿ ಕಲ್ಪಿಸಿಕೊಂಡು, ಅನಂತರ ಹೊರಗೆ ನಿರ್ಮಾಣಮಾಡ ಬೇಕಾಗುತ್ತದೆ.

ನೀರು ಆವಿಯಾದಂತೆಯೂ ಆವಿಯು ನೀರಾದಂತೆಯೂ ಓಡಾಡುವ ಭೌತಿಕ ವಸ್ತುಗಳು ಮಾನಸ ಭಾವನೆಗಳಾಗುತ್ತವೆ. ಇದು ಏನನ್ನು ತೋರಿಸುತ್ತದೆ? ವಸ್ತುವೂ ಮನಸ್ಸೂ ಒಂದೇ ; ವಸ್ತುವು ಮನಸ್ಸಾಗುತ್ತದೆ-ಎನ್ನುವದನ್ನು ತೋರಿಸು ತ್ತದೆ. ಹೀಗೆ ವಸ್ತುವು ಮನಸ್ಸಿನಿಂದ ಬೇರೆಯಾಗಿದ್ದರೆ, ಮನಸ್ಸು ವಸ್ತುವಿನ ಮೇಲೆ ಪರಿಣಾಮವನ್ನು ಉಂಟುಮಾಡುತ್ತಿರಲಿಲ್ಲ ; ಮತ್ತು ವಸ್ತುವೂ ಮನಸ್ಸಿನ ಮೇಲೆ ಪರಿಣಾಮವನ್ನು ಉಂಟುಮಾಡುತ್ತಿರಲಿಲ್ಲ

ಪರ್ಷಿಯನ್ ಭಾಷೆಯಲ್ಲಿ ಒಂದು ಸುಂದರವಾದ ಪದ್ಯವಿದೆ. ಅದರ ಸಾರವೇ ನೆಂದರೆ, ಮೋಡಗಳಿಂದ ಕಣ್ಣೀರಿನ ರೂಪದಲ್ಲಿ ಒಂದು ಹನಿ ನೀರು ಬಿತ್ತು. ಕಣ್ಣೀರ ಹನಿಗಳ ಸುರಿಮಳೆ ಆಯಿತು. '' ಈ ಅಳು ಏಕೆ? ಏಕೆ ಅಳುತ್ತಿ?" ಎಂದು ಕವಿಯು ಮೋಡಗಳನ್ನು ಕೇಳಿದನು. ಅದಕ್ಕೆ ಮೋಡ ಹೇಳಿತು, " ಓ, ನಾನು ಎಷ್ಟು ಅಲ್ಪ ಚಿಕ್ಕ ವಸ್ತು, ಅನಾಮಧೇಯ ವಸ್ತು! ಓ ನಾನು ಅತ್ಯಂತ ಅಲ್ಪನಾದವನು, ಕ್ಷುದ್ರ ನಾದವನು. ಆದರೆ ಸಾಗರವು ಎಷ್ಟು ಮಹತ್ತಾದುದು, ಅಪಾರವಾದುದು! ಸಾಗರದ ಅಪಾರತೆಗೆ ಹೋಲಿಸಿದರೆ, ನಾನು ಎಷ್ಟು ತುಚ್ಛ ಎನ್ನುವದಕ್ಕಾಗಿ ಅಳುತ್ತೇನೆ." ಆ ಕವಿಯು, ಆ ಮೋಡವನ್ನು ಕುರಿತು "ಅಳಬೇಡ, ನೀನು ನಾಮ ರೂಪಗಳಲ್ಲಿ ಸೆರೆಯೆಂದು ತಿಳಿಯಬೇಡ. ಆದರೆ, ನೀನು ಯಾರು, ಎಂದು ನಿನ್ನೊಳಗೆ ನೋಡಿಕೊ. ನೀನು ನೀರಲ್ಲವೆ? ಸಮುದ್ರವೇನು? ಅದೂ ನೀರಲ್ಲವೇ? ದೇಶಕಾಲ ವಸ್ತುಗಳ ಪರಿಮಿತಿಯಲ್ಲಿ ಸಿಕ್ಕಿಕೊಂಡಿದ್ದೇನೆಂದು ತಿಳಿಯಬೇಡ. ದೇಶಕಾಲಗಳ ಆಚೆ ನೋಡಿ, ನಿನ್ನ ನಿಜವೇನು ಎನ್ನುವದನ್ನು ತಿಳಿ." ಎಂದು ಹೇಳಿದನು. ಒಂದು ವಸ್ತುವಿಗೆ ಸಮವಾದ ವಸ್ತುಗಳು, ಪರಸ್ಪರ ಸಮವಾದವುಗಳು. ನೀವು ಕಾಲದಲ್ಲಿ ಸಿಕ್ಕಿಕೊಂಡ ಕೂಡಲೇ ದುಃಖಿಯಾಗುತ್ತೀರಿ. ದೇಶಕಾಲ ವಸ್ತುಗಳನ್ನು ಮೀರಿ, ಮೇಲೇಳಿ

ವಸ್ತು ಮತ್ತು ಚೇತನಗಳು, ಜಡ ಮತ್ತು ಚೈತನ್ಯ ಮಾತ್ರ ಒಂದಾಗಿಲ್ಲ ; ಎಲ್ಲವೂ ಒಂದಾಗಿವೆ. ನಿಜವಾದ ಆತ್ಮವು ಎಲ್ಲಾಕಾಲವನ್ನೂ ಮೀರಿದೆ. ಇಡೀ ಜಗತ್ತೇ ನಿನ್ನೊಳಗೆ ಇದೆ. ಕನಸಿನಲ್ಲಿ ನೀವು ಪರ್ವತಗಳ ಮಧ್ಯದಲ್ಲಿ ಆರಣ್ಯದಲ್ಲಿ ಒಂದು ನದಿಯ ತೀರದಲ್ಲಿ ಇದ್ದಂತೆ ಕಾಣುತ್ತೀರಿ. ಅವೆಲ್ಲಾ ನಿಮ್ಮ ಹೊರಗೆ ಇರುವಂತೆ ಕಾಣುತ್ತವೆ. ಆದರೆ ಎಲ್ಲವೂ ನಿಮ್ಮ ಒಳಗೇ ಇರುತ್ತವೆ. ಕನಸಿನಲ್ಲಿ ಕಂಡ ಆ ಪರ್ವತವು ಹೊರಗೆ ಇದ್ದಿದ್ದರೆ, ನೀವು ಮಲಗಿರುವ ಮನೆಯೂ ನಿಮ್ಮ ದೇಹವೂ ಪುಡಿಪುಡಿಯಾಗುತ್ತಿದ್ದವು ; ಆ ಕನಸಿನ ನದಿಯು ಹೊರಗೆ ಹರಿಯುತ್ತಿದ್ದರೆ ನಿಮ್ಮ ಹಾಸಿಗೆಯು ಒದ್ದೆಯಾಗಿ ಕೊಚ್ಚಿಹೋಗುತ್ತಿತ್ತು.

ಹೀಗೆ ವೇದಾಂತವು ಹೇಳುವದೇನೆಂದರೆ, ''ಎಲ್ಲಾ ಪ್ರಪಂಚವೂ ನಿಮ್ಮ ಒಳಗೇ ಇದೆ. ಸೂಕ್ಷ್ಮ ಮತ್ತು ಮಾನಸ ಪ್ರಪಂಚಗಳು ಎಲ್ಲಾ ನಿಮ್ಮೊಳಗೇ ಇವೆ. ಆದರೆ ನೀವು ಅವುಗಳೊಳಗೆ ಇರುವದಾಗಿ ಭಾವಿಸುತ್ತೀರಿ. ತನ್ನ ಹೆಬ್ಬೆರಳಲ್ಲಿ ಇಟ್ಟು ಕೊಂಡಿರುವ ಒಂದು ಕನ್ನಡಿಯಲ್ಲಿ ಒಬ್ಬ ಕನ್ಯೆಯು ತನ್ನನ್ನು ತಾನು ನೋಡಿಕೊಂಡು, ತಾನು ಕನ್ನಡಿಯಲ್ಲಿ ಇರುವದಾಗಿ ತಿಳಿದರೂ ಆಕೆಯು ಹೊರಗೇ ಇರುತ್ತಾಳೆ. ಹೀಗೆ ನೀವು ಪ್ರಪಂಚದಲ್ಲಿ ಇರುವಂತೆ ತೋರುತ್ತಿದ್ದರೂ ಪ್ರಪಂಚವೇ ನಿಮ್ಮ ಒಳಗೆ ಇದೆ, ನೀವು ಪ್ರಪಂಚದಲ್ಲಿಲ್ಲ. ಎರಡು ಬಗೆಯ ಮಾತುಗಳಿವೆ . ತಲೆಯಿಂದ ಹೊರಡುವ ಮಾತು, ಹೃದಯದಿಂದ ಹೊರಡುವ ಮಾತು ತಲೆಯಿಂದ ಆಡುವ ಮಾತನ್ನು ನಾವು ಯಾವಾಗ ಬೇಕಾದರೂ ನಮ್ಮ ಇಷ್ಟದಂತೆ ಹಿಡಿದಾಡಬಹುದು, ಬಳಸ ಬಹುದು ಹೃದಯದಿಂದ ಮಾತು ಹೊರಚಿಮ್ಮಿದಾಗ ಅದರ ಪ್ರಭಾವವೇ ಮಹಿಮೆಯೇ ಬೇರೆಯಾಗುತ್ತದೆ.

ಹಲವು ಬಗೆಯ ಸೀಟಿಗಳಿವೆ. ಕೆಲವು ನೋಡುವದಕ್ಕೆ ಮಾತ್ರ ರೂಪ–ವರ್ಣ ಗಳಲ್ಲಿ ನವಿಲಿನಂತೆ ಇರುತ್ತವೆ ; ಕೆಲವು ನವಿಲಿನಂತೆ ಧ್ವನಿಮಾಡುತ್ತವೆ ; ಇನ್ನು ಕೆಲವು ಕೋಳಿಯಂತೆ, ಹಂದಿಯಂತೆ ಕೂಗುತ್ತವೆ ನೀವು ಈ ಸಿಳ್ಳಿಗಳನ್ನು ಊದಿದಾಗ ನಿಮ್ಮ ಇಷ್ಟಪ್ರಕಾರ, ನವಿಲಿನಂತೆಯೋ ಕೋಳಿಯಂತೆಯೋ ಹಂದಿಯಂತೆಯೋ ಹಂಸ ನಂತೆಯೋ ಧ್ವನಿಮಾಡಬಹುದು. ಆದರೆ ನಿಜವಾದ ನವಿಲನ್ನೂ ಕೋಳಿ, ಹಂದಿ, ಹಂಸ ಮೊದಲಾದ ಪ್ರಾಣಿಗಳನ್ನೂ ನಿಮಗೆ ಬೇಕಾದಾಗ ಕೂಗಿಸುವದಕ್ಕೂ ಆಗುವ ದಿಲ್ಲ ; ಅವು ತಾವಾಗಿಯೇ ಖುಷಿ ಬಂದು ಕೂಗುವಾಗ ಅದನ್ನು ನಿಲ್ಲಿಸುವದಕೂ ಆಗುವದಿಲ್ಲ. ನೈಜವು ದೇಶ-ಕಾಲ-ವಸ್ತುಗಳ ಕಟ್ಟಿಗೆ ಒಳಗಾಗುವದಿಲ್ಲ. ಹಿಮಾ ಲಯದಲ್ಲಿ ಚರಾಚರ ಪ್ರಕೃತಿಯ ಮಧುರಗಾನವಾಹಿನಿಯು ನಿರಂತರವಾಗಿ,

ರೋಮಾಂಚಕಾರಿಯಾಗಿ ಪ್ರವಹಿಸುತ್ತಿದೆ. ಅದು ದಿವ್ಯ ಭಾವೋನ್ನತಿಯಾಗಿ ರೂಪ ಗೊಂಡು ಯಾರಿಗೂ ತಿಳಿಯದ ಯಾವದೋ ಅವ್ಯಕ್ತಾನಂತವಾದ ಅಮೃತ ಸಾಗರಕ್ಕೆ ಪ್ರವಹಿಸುತ್ತಿದೆ. ಅದು ನಾಶವಾಗುವದೆ ? ಇಲ್ಲ. ಆ ಮಹಾಭಾವಸ್ಪಂದನಗಳನ್ನು ಗಿಡಮರಬಳ್ಳಿಗಳು ಹಿಡಿದಿಟ್ಟುಕೊಂಡು ಕಾಪಾಡುತ್ತವೆ ; ನದಿಗಳು ಆ ಭಾವಸಾರವನ್ನು ಹೀರಿಕೊಂಡು, ಹರಿದಲ್ಲಿ ಎಲ್ಲಕಡೆಗೂ, ಸೇವಿಸಿದವರನ್ನೂ ಪವಿತ್ರಮಾಡುತ್ತವೆ, ಭೂಮಿಯು ಅದನ್ನು ಸಂಗ್ರಹಿಸಿ ಸಂರಕ್ಷಿಸುತ್ತದೆ ; ಅದನ್ನು ಗ್ರಹಿಸುವ ಯೋಗ್ಯತೆ ಯುಳ್ಳ—ಅರ್ಹತೆಯುಳ್ಳ—ಒಂದು ವ್ಯಕ್ತಿಯು, ಒಂದು ಮಹಾವ್ಯಕ್ತಿಯು ಸಿಕ್ಕುವ ವರೆಗೂ ಗಾಳಿಯು ಅದನ್ನು ತನ್ನ ತಲೆಯ ಮೇಲೆ ಹೊತ್ತು ವಾತಾವರಣದಲ್ಲಿ ಸೇರಿಸಿ, ಇಡೀ ವಿಶ್ವದ ಮೇಲೆಲ್ಲಾ ಬೀಸುತ್ತದೆ.

ಎಲ್ಲಾ ಭಾವಗಳೂ ವಿಚಾರಗಳೂ ದೇವರಿಂದಲೇ ನೇರವಾಗಿ ಬರುತ್ತವೆ. ಅವು ಈ ಸುಳ್ಳಾದ ಹೊಣೆ ಹೊತ್ತು, ಸ್ವಾಮಿತ್ವದ ಹಕ್ಕುಸಾಧಿಸುವ ಅಹಂಕಾರದಿಂದ ಹೊರಹೊಮ್ಮುವದಿಲ್ಲ. ಆದರೆ ಆ ಮಿಥ್ಯಾಅಹಂಕಾರವು ತೊಲಗಿದಾಗಲೇ ದಿವ್ಯ ಭಾವಗಳು ತಾವೇ ತಾವಾಗಿ ಒಳಗಿನಿಂದ ಪ್ರವಹಿಸುತ್ತವೆ.

ರಾಮನ ಅಭಿಪ್ರಾಯದಲ್ಲಿ, ಪ್ರತಿಯೊಂದು ಪುಸ್ತಕವೂ ಭಗವತ್ ಪ್ರೇರಣೆ ಯಿಂದ ಬರೆದ ಪುಸ್ತಕವೇ, ಭಗವಂತನ ಪುಸ್ತಕವೇ. ಬೈಬಲ್ ಒಂದೇ ಅಲ್ಲ, ಎಮರ್‌ಸನ್, ಡಾರ್‌ವಿನ್, ಷೇಕ್ಸ್‌ಪಿಯರ್ ಮೊದಲಾದ ಎಲ್ಲರ ಪುಸ್ತಕಗಳೂ ವೇದಗಳಷ್ಟೇ ದೈವಪ್ರೇರಿತವಾದವುಗಳು ; ಏಕೆಂದರೆ, ಮನುಷ್ಯನ ಅಲ್ಪವಾದ ಅಹಂಕಾರವು ತೊಲಗಿದ ಹೊರತು ಅಂಥಾ ವಿಚಾರಗಳ ಸ್ಫೂರ್ತಿಯು ಬರುವದಿಲ್ಲ.

ಪ್ರಶ್ನೆ—ವಿವಾಹಿತ ಪುರುಷನು ಆತ್ಮಾನುಭವವನ್ನು ಪಡೆಯುವದು ಸಾಧ್ಯವೆ ?

ಉತ್ತರ—ವೇದಾಂತವು. ವಿರಕ್ತರು ಮತ್ತು ಸಂನ್ಯಾಸಿಗಳಿಗಾಗಿ ಇರುವದ ಕ್ಕಿಂತಲೂ ಹೆಚ್ಚಾಗಿ ಮದುವೆಯಾದವರಿಗಾಗಿಯೇ—ಗೃಹಸ್ಥರಿಗಾಗಿಯೇ—ಇದೆ, ಎಂಬು ದನ್ನು ತೋರಿಸಬಹುದು. ಹಿಮಾಲಯದಲ್ಲಿ ವಾಸಮಾಡತಕ್ಕವರಿಗಿಂತಲೂ ಹೆಚ್ಚಾಗಿ ನಗರಗಳಲ್ಲಿಯೂ ಪಟ್ಟಣಗಳಲ್ಲಿಯೂ ಹಳ್ಳಿಗಳಲ್ಲಿಯೂ ವಾಸಮಾಡತಕ್ಕವರಿಗಾಗಿಯೇ ವೇದಾಂತವಿದೆ.

ಪ್ರತಿಯೊಂದು ಕುಟುಂಬದಲ್ಲಿಯೂ ಗಂಡನು ಹೆಂಡತಿಯ ಸುಖವನ್ನು

ಬೆಳೆಸಬೇಕೆಂದೂ ಹೆಂಡತಿಯು ಗಂಡನ ಸುಖವನ್ನು ಬೆಳೆಸಬೇಕೆಂದೂ ಅತ್ಯಂತ ಒಳ್ಳೆಯ ಉದ್ದೇಶದಿಂದಲೇ ಪ್ರಯತ್ನಮಾಡುತ್ತಾರೆ. ಆದರೆ ಅದರ ಫಲಿತಾಂಶ ವೇನಾಗುತ್ತಿದೆ ? ಇಬ್ಬರೂ ಪರಸ್ಪರ ಪತನಕ್ಕೆ ಕಾರಣರಾಗುತ್ತಾರೆ. ಅದಕ್ಕೇನು ಕಾರಣ ? ಯಾರನ್ನು ದೂಷಿಸಬೇಕು ? ಅವರ ಒಳ್ಳೆಯ ಉದ್ದೇಶವನ್ನೇ ನಿಂದಿಸ ಬೇಕೆ ? ಇಲ್ಲ. ಅವರ ಅಜ್ಞಾನವನ್ನು ಬೈಯಬೇಕು. ತಮ್ಮ ತಮ್ಮ ಒಳ್ಳೆಯ ದೆಂಬದು ಯಾವದರಲ್ಲಿದೆ ಎಂಬುದು ಅವರಿಗೆ ತಿಳಿಯ ದು. ಅವರ ಎಲ್ಲಾ ಕಷ್ಟ ಗಳಿಗೂ ದುಃಖಗಳಿಗೂ ಇದೇ ಕಾರಣ ತಮ್ಮ ತಮ್ಮ ಕೀಳಾದ ವೈಷಯಿಕ ವಾಸನೆಗಳಿಗೂ ಕಾಮನೆಗಳಿಗೂ ತೃಪ್ತಿಯನ್ನು ಒದಗಿಸುವದರಿಂದಲೂ ಅವುಗಳನ್ನು ಲಾಲನೆ ಪಾಲನೆ ಮಾಡುವದರಿಂದಲೂ ಪರಸ್ಪರ ಸುಖಸೌಭಾಗ್ಯಗಳನ್ನು ಬೆಳೆಸುತ್ತಿರುವ ದಾಗಿ ಜನರು ತಿಳಿಯುತ್ತಾರೆ. ಒಬ್ಬರೊಬ್ಬರ ಒಣಜಂಬವನ್ನು ಬೆಳೆಸುವದು ತಮಗೆ ಒಳ್ಳೆಯದೆಂದು ಅವರು ತಿಳಿಯುತ್ತಾರೆ. ಈ ಒಳ್ಳೆಯದು ಎಂಬ ಭಾವನೆಯೇ ಅಜ್ಞಾನದ ನೆಲಗಟ್ಟಿನ ಮೇಲೆ ನಿಂತಿದೆ. ಆ ಅಜ್ಞಾನವನ್ನು ಕಳೆದರೆ ಪ್ರತಿಯೊಂದು ಮನೆಯೂ ಸುಖದ ಬೀಡಾಗುತ್ತದೆ.

ದೇವರನ್ನಾಗಲೀ ಪ್ರಕೃತಿಯನ್ನಾಗಲೀ ಬದಲಾಯಿಸಲಾರೆವು ಎಂಬುದನ್ನು ಮರೆಯಬೇಡಿ ; ನಮ್ಮನ್ನು ಆತ್ಮಜ್ಞಾನದ ಭೂಮಿಕೆಗೆ ಎತ್ತಬೇಕೆಂಬುದೇ ಪ್ರಕೃತಿ ನಿಯಮದ ಉದ್ದೇಶ ; ದೇವರ ನಿಯಮದ ಉದ್ದೇಶ. ಪ್ರಪಂಚದಲ್ಲಿರುವ ಎಲ್ಲಾ ಮರಳುತನ, ಹುಚ್ಚುತನಗಳೂ ಅವಿವೇಕಗಳೂ ಎಲ್ಲಾ ಜಾಣತನಗಳೂ ವಿವೇಕ ವಿಚಾರಗಳೂ ದೇವರೇ ತಾನೆಂದು ತಿಳಿಯುವ ಮಾರ್ಗದಲ್ಲಿ ಪ್ರತಿಯೊಬ್ಬರನ್ನೂ ಮುಂದೆ ಮುಂದೆ ನೂಕುವ ಒಲವನ್ನು ಪಡೆದಿವೆ. ಬಂದೂಕಿನ ಸನೀನಿನ ಮೊನೆಚಿ ನಲ್ಲಿ ಒಡ್ಡಿದ ಎದೆಯಿಂದ ಪ್ರತಿಯೊಬ್ಬರೂ ವೇದಾಂತಿಗಳಾಗಲು ಕಲಿಯಬೇಕಾಗುತ್ತದೆ

ನಿಮ್ಮ ಮನಸ್ಸನ್ನು ಒಪ್ಪಿಸುವದಕ್ಕೂ ಮೆಚ್ಚಿಸುವದಕ್ಕೂ ವೇದಾಂತವು ತನ್ನ ಕೈಯಲ್ಲಿ ಖಡ್ಗವನ್ನೂ ಬೆಂಕಿಯನ್ನೂ ತರಬೇಕಾಗಿ ಇಲ್ಲ. ಆತ್ಮಾನುಭವ ಪಡೆಯುವ ಮುನ್ನಡೆಯಲ್ಲಿ ಪ್ರಕೃತಿಯ ನಿಯಮಗಳೆಲ್ಲಾ ದೇವರ ಸೈನಿಕರಂತೆಯೂ ಮಹಾ ಸೈನ್ಯದಂತೆಯೂ ನಿಮ್ಮನ್ನು ಮುಂದೆ ಮುಂದೆ ತಳ್ಳುತ್ತಿವೆ. ನೀವು ಮುಂದೆ ಮುಂದೆ ನಡೆಯದೆ ಇರಲು ಸಾಧ್ಯವೇ ಇಲ್ಲ.

ನಿಮ್ಮನೆರೆಯವರ ನಿಜವಾದ ಒಳ್ಳೆಯದೆಂಬದು ಏತರಲ್ಲಿದೆಯೆಂಬದನ್ನು ನೀವು ತಿಳಿದರೆ ಪ್ರಕೃತಿನಿಯಮಕ್ಕೆ ಅನುಸಾರವಾಗಿ ನಡೆದುಕೊಳ್ಳಬಹುದು. ಪ್ರತಿಯೊಂದು

ಮನೆಯೂ ಕತ್ತಲುಮನೆಯೂ ಸೆರೆಮನೆಯೂ ದೇವರಾಗಿ ಅಥವಾ ಸ್ವರ್ಗವಾಗಿ ಪರಿವರ್ತನೆ ಹೊಂದುತ್ತದೆ

ಪ್ರಕೃತಿ ನಿಯಮಗಳಂತೆ ನಿಮ್ಮ ನಿಜವಾದ ಒಳಿತು, ಹಿತವು ದೇವರಲ್ಲಿ ನಿಮ್ಮ ಏಕತ್ವವನ್ನು ಅರಿತು ಅನುಭವಿಸುವದರಲ್ಲಿ ಇದೆ ನಿಮ್ಮ ನಿಜವಾದ ಶ್ರೇಯಸ್ಸು ನೀವು ಮುಕ್ತರಾಗುವದರಲ್ಲಿ ಇದೆ ; ಮತ್ತು 'ನಾನೇ ದೇವರು' ಎಂದು ತಿಳಿದಾಗ ಮಾತ್ರ ನೀವು ಮುಕ್ತರಾಗುತ್ತೀರಿ. ಈಗ ನೀವು "ಈ ದೇಹವೇ ನಾನು ; ನಾನು ಇಂಥವರ ಮಗನು" ಎಂದು ದೃಢವಾಗಿ ತಿಳಿದಿದ್ದೀರಿ ; ಸತ್ಯವೆಂದು ತಿಳಿದಿದ್ದೀರಿ. ಈ ಭ್ರಮಾಚಕ್ರವು ಪೂರ್ಣವಾಗಿ ತಿರುಗಿ, "ಇದಕ್ಕೆ ವಿಪರೀತವಾಗಿ" ಅನಂತನೂ ಸರ್ವ ಸಮರ್ಥನೂ ಆದ ಪರಮಾತ್ಮನೇ ನಾನು" ಎಂದು (ದೇಹವೇ ನಾನು ಎನ್ನುವ ತಿಳಿವಳಿಕೆಗಿಂತಲೂ) ಹೆಚ್ಚು ದೃಢವಾಗಿಯೂ ಸತ್ಯವಾಗಿಯೂ ತಿಳಿಯಬೇಕು. ನಾನು ದೇಹ, ನಾನು ಇಂಥವರ ಮಗನು ಎಂಬ ಭಾವನೆಯು ಸ್ವಪ್ನಕಲ್ಪನೆಯಂತಾಗಬೇಕು ; ಎಷ್ಟೋ ಯುಗದ ಹಿಂದಿನ ತಪ್ಪು ತಿಳಿವಳಿಕೆಯಂತೆ ಆಗಬೇಕು ; ಇದೇ ಅನುಭವದ ಗುರಿ.

ನಿಮ್ಮ ದುಃಖ-ದುಮ್ಮಾನಗಳೂ ಚಿಂತಾವ್ಯಥೆಗಳೂ ಎಲ್ಲಾ ಒಂದೇ ದಿಕ್ಕಿನಲ್ಲಿ ನಿಮ್ಮನ್ನು ಆತ್ಮಾನುಭವದ ಕಡೆಗೇ ಹೇಗೆ ಮಾರ್ಗಹಿಡಿಸುತ್ತವೆ ಎನ್ನುವದಕ್ಕೆ, 'ದೇವರೇ ನಾನು' ಎನ್ನುವ ಅರಿವಿನ ಭೂಮಿಕೆಗೆ ನಿಮ್ಮನ್ನು ನೀವು ಎತ್ತಿಕೊಳ್ಳುವಂತೆ ಮಾಡುವದೇ ಪ್ರಕೃತಿಯ ಯೋಜನೆಯೆಂದು, ಗಣಿತ ಶಾಸ್ತ್ರದ ನಿಷ್ಕೃಷ್ಟತೆಯಿಂದ ನಿಮಗೆ ಹೃದಯಂಗಮ ವಾಗುವಂತೆ ತೋರಿಸಿಕೊಡಬಹುದೆಂದು ಹೇಳಿದರೆ ಸಾಕು. ಆ ಗುರಿಗೆ ನೀವು ಮುಟ್ಟದಿರುವದರಲ್ಲಿಯೇ ನಿಮ್ಮ ಎಲ್ಲಾ ಕಷ್ಟಗಳೂ ಇವೆ. ಆ ಗುರಿಯ ಮಟ್ಟಕ್ಕೆ ನೀವು ಏರಿದರೆ ನಿಮಗೆ ಯಾವ ಪಾಪವೂ ಇರುವದಿಲ್ಲ ; ಎಲ್ಲವನ್ನೂ ನೀವು ಮೀರುತ್ತೀರಿ ಆಗ (ಈಗಲೂ) ನೀವೇ ಪರಿಪೂರ್ಣ ಪರಬ್ರಹ್ಮ

ಒಂದೇ ಹಾರಿಕೆಗೆ ಆತ್ಮಾನುಭವವಾಗುವದಿಲ್ಲ. ಕಾಲವೂ ಬೇಕು. ವಿಕಾಸ ಕ್ರಮದ ಸೋಪಾನಗಳಲ್ಲಿ ಸದ್ಯದ ಘಟ್ಟಕ್ಕೆ ಈ ದೇಹವನ್ನು ರಚಿಸಿಕೊಳ್ಳುವದಕ್ಕಾಗಿ ಲಕ್ಷಾಂತರ ವರ್ಷಗಳನ್ನು ತೆಗೆದುಕೊಂಡಿದೆ.

ಸಹಸ್ರಾರು ಜನ್ಮಗಳ ಹಿಂದೆ ಒಂದು ಕಾಲದಲ್ಲಿ ನೀವು ಸಸ್ಯವಾಗಿ ಇದ್ದಿರಬಹುದು , ಅನಂತರ ಪ್ರಾಣಿಗಳಾದಿರಿ ; ಅನಂತರ ಒಂದು ಕಾಲದಲ್ಲಿ ಆಫ್ರಿಕಾದೇಶದಲ್ಲಿ

ನೀಗ್ರೋ ಗುಲಾಮರಾಗಿದ್ದಿರಿ, ಇನ್ನೊಂದು ಕಾಲದಲ್ಲಿ ಬೇರ ದೇಶದ ಬೇರೆ ಜನಾಂಗದಲ್ಲಿ ಜನ್ಮ ಎತ್ತಿದಿರಿ; ಈಗ ಇಲ್ಲಿ ಹುಟ್ಟಿ ಬಂದಿದ್ದೀರಿ.

ಒಂದು ಮನೆಯನ್ನು ನಾಶಮಾಡುವದಕ್ಕಾಗಿಯೂ ಕಾಲವು ಬೇಕು ಆದರೆ ಅದನ್ನು ಕಟ್ಟುವದಕ್ಕೆ ಅವಶ್ಯವಾದಷ್ಟು ಕಾಲವು ನಾಶಮಾಡುವದಕ್ಕೆ ಬೇಕಾಗುವದಿಲ್ಲ. ನಿಮ್ಮಲ್ಲಿ ಸಾಕಷ್ಟು ಸಿಡಿಮದ್ದಿನ ಪುಡಿಯೋ ತೀವ್ರಸ್ಫೋಟಕವಾದ ಡೈನಮೈಟೋ, ಸಾಕಷ್ಟು ಶಕ್ತಿಯೋ ಇದ್ದರೆ, ಎಂಥಾ ಮನೆಯನ್ನಾದರೂ ನಿರ್ಮೂಲ ಮಾಡ ಬಹುದು ಆದರೆ ಎಷ್ಟೋ ಜನರಲ್ಲಿ ಅದನ್ನು ಹಾರಿಸಿಬಿಡುವುದಕ್ಕೆ ಸಾಕಷ್ಟು ಸಿಡಿಮದ್ದು ಇರುವದಿಲ್ಲ.

ನೀವು ನಿಮ್ಮ ಹೆಂಡತಿ ಮಕ್ಕಳೊಡನೆ ವಾಸಮಾಡುತ್ತಿದ್ದರೂ ಈ ತತ್ತ್ವ ಶಾಸ್ತ್ರವನ್ನು ಸಂಪೂರ್ಣವಾಗಿ ಅಭ್ಯಾಸಮಾಡಿ, ಆ ವಿದ್ಯೆಯನ್ನು ಸ್ವಾಧೀನಪಡಿಸಿ ಕೊಳ್ಳುವದರಿಂದ-ನಿಮ್ಮ ಮಾನವ ಬುದ್ಧಿಯಿಂದ ನೀವು ಅದನ್ನು ಸ್ವಾಧೀನ ಪಡಿಸಿಕೊಂಡರೂ ಕೂಡ-ನೀವು ಪರಿವರ್ತನೆಹೊಂದಿ ಮುಕ್ತರಾಗುತ್ತೀರಿ, ನೀವು ಇನ್ನು ಮುಂದೆ ಜನನ ಮರಣಗಳಿಗೆ ಬಲಿಯಾಗುವದಿಲ್ಲ, ಎಂದು ವೇದಾಂತವು ಹೇಳುತ್ತದೆ ಈ ಜನ್ಮದಲ್ಲಿಯೇ ನಿಮ್ಮ ದೇವತ್ವವನ್ನು ನೀವು ಅರಿಯಬೇಕಾದರೆ ಮೂರು ದಾರಿಗಳಿಂದ ಹೋಗಬೇಕಾಗಿಲ್ಲ, ಒಂದೇ ದಾರಿಯಿಂದ ಹೋಗಬೇಕು. ಮರಣಾನಂತರ ಪ್ರಾಪ್ತವಾಗುವದೆಂದು ಭರವಸೆಕೊಟ್ಟಿರುವ ಎಲ್ಲಾ ಸುಖಗಳೂ ಲಭಿಸಬೇಕಾದರೆ, ವೇದಾಂತವು ಮನಸ್ಸಿಗೆ ಒಡಂಬಟ್ಟಿರುವ ಜನರು, ಅದನ್ನು ವಿಚಾರದಲ್ಲಿಯೂ ಆಚರಣೆಯಲ್ಲಿಯೂ ತರಬೇಕು ಅವರು ಅದನ್ನು ತೀವ್ರವಾಗಿ ಭಾವಿಸಬೇಕು, ಮತ್ತು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕು.

ಕರ್ಮದಿಂದ ಮೋಕ್ಷವೆಂದು ಬೋಧಿಸಿ, ಹಳೆಯ ಒಡಂಬಡಿಕೆಯಲ್ಲಿ (Old Testament) ಕರ್ಮವನ್ನು ವಿಧಿಸಿದೆಯೆಂದೂ ಹೊಸ ಒಡಂಬಡಿಕೆಯಲ್ಲಿ (New Testament), ಶ್ರದ್ಧಾಭಕ್ತಿಯಿಂದ (Faith) ಮೋಕ್ಷವೆಂದು ಬೋಧಿಸಿದೆಯೆಂದೂ ಹೇಳುತ್ತಾರೆ. ಆದರೆ, ಓ, ದೇವರೇ! ನಿಜವಾದ ಆನಂದ ಸ್ಥಿತಿಯು, ಆ ಪರಮಾನಂದ ಸ್ಥಿತಿಯು ಜ್ಞಾನದಿಂದಲೇ ಪ್ರಾಪ್ತಿಯಾಗುತ್ತದೆ.

ಕರ್ಮ ಒಂದೇ ಮೋಕ್ಷವನ್ನು ಕೊಡಲಾರದು. ಯೇಸುಕ್ರಿಸ್ತನಲ್ಲಿ ನೀವು ಮಾಡುವ ವಿಶ್ವಾಸವೂ ನಂಬಿಕೆಯೂ ಭಕ್ತಿಯೂ ಮೋಕ್ಷವನ್ನು ತರಲಾರದು.

ನಿಮ್ಮಿಂದ ನಿಮಗೆ ಮೋಕ್ಷವೇ ಹೊರತು, ಇನ್ನೊಬ್ಬರು ಎಷ್ಟು ದೊಡ್ಡವರಾದರೂ ಕ್ರಿಸ್ತ-ಬುದ್ಧರಿಗಿಂತ ದೊಡ್ಡವರಾದರೂ ಸಹ ಅವರಿಂದ ನಿಮಗೆ ಮೋಕ್ಷವಾಗಲಾರದು. ನಿಮ್ಮನ್ನು ನೀವು ಅರಿತರೆ ಆ ಕ್ಷಣವೇ ನಿಮಗೆ ಮೋಕ್ಷವಾಗುತ್ತದೆ

ಅರಿಯುವದು ಎರಡು ಬಗೆ ; ಬುದ್ಧಿಯಿಂದ, ವಿಚಾರದಿಂದ ಅರಿಯುವದು ಒಂದು ಬಗೆ ; ಹೃದಯದಿಂದ, ಭಾವದಿಂದ (feelıng) ಅರಿಯುವದು ಇನ್ನೊಂದು ಬಗೆ.

ನಿಜಾತ್ಮನನ್ನು ಭಾವದ(feelıng)ಮೂಲಕವಾಗಿ ಅನುಭಾವದ ಮೂಲಕವಾಗಿ ಅರಿಯುವದೇ ನಿಜವಾದ ಜ್ಞಾನ. ಮೋಕ್ಷವಾಗುವದು ಜೀವಂತಭಾವದಿಂದ ಅಥವಾ ಜೀವಂತವಾದ ಅರಿವಿನಿಂದ. ಇದನ್ನು ನೀವು ಪಡೆಯಬೇಕು. ಇದನ್ನು ನೀವು ಬಿಟ್ಟು ಓಡಿಹೋದರೆ, ನಿಮ್ಮ ಹೃದಯವು ನಿರಾಶೆಯಿಂದ ತುಂಬಿ ಹೋಗುತ್ತದೆ. ಆದ್ದರಿಂದ ನೀವು ಮೋಕ್ಷವನ್ನು ಪಡೆಯಲೇ ಬೇಕು.

ಸಾಮಾನ್ಯವಾಗಿ ನಮ್ಮ ಮನೆಗಳಲ್ಲಿ ಏನಾಗಬೇಕಾಗಿದೆ ಎಂದರೆ, ಗಂಡಹೆಂಡಿರು ನಿಜವಾದ ಪೂರ್ಣಜ್ಞಾನವನ್ನು ಪಡೆಯುವ ಮೂಲಕ ಮುಕ್ತರಾಗುವದಕ್ಕಾಗಿ ಪರಸ್ಪರ ಸಹಾಯಮಾಡಬೇಕು. ಹಾಗೆ ಮಾಡುವದರಲ್ಲಿ ಹೆಂಡತಿಯು ಸಹಾಯಕಳಾದರೆ, ಆಕೆಯೇ ಪತಿಯ ಭಾಗಕ್ಕೆ ಉದ್ಧಾರಕಳಾದ (Saviour) ಕ್ರಿಸ್ತಳು ; ಪತಿಯು ಸಹಾಯಕನಾದರೆ, ಪತ್ನಿಯ ಭಾಗಕ್ಕೆ ಆತನೇ ವಿಮೋಚಕನಾದ (Saviour) ಕ್ರಿಸ್ತನು. ಈಗಿರುವ ಸ್ಥಿತಿಯಲ್ಲಿ ಹೆಂಡತಿಯೇ ಗಂಡನಿಗೆ ದ್ರೋಹಿಯಾದ ಜೂಡಾಸ್ ಇಸ್ಕಾರಿಯಟ್ (Indas Iscariot) ಆಗುತ್ತಾಳೆ ; ಅಥವಾ ಗಂಡನೇ ಹೆಂಡತಿಗೆ ವಿಶ್ವಾಸಘಾತಕಿಯಾದ ಜೂಡಾಸ್ ಆಗುತ್ತಾನೆ.

ನಿಮ್ಮ ಅಜ್ಞಾನವೇ ನಿಮ್ಮನ್ನು ಕೆಳಗೆ ಎಳೆಯುತ್ತಿದೆ ಅಲ್ಲದೆ, ಕುಟುಂಬ ವ್ಯವಸ್ಥೆಯಲ್ಲಿ ಯಾವದೂ ನಿಮ್ಮನ್ನು ಕೆಡಿಸುತ್ತಿಲ್ಲ. ಆ ಸಂಬಂಧಗಳ ದುರುಪಯೋಗವೇ ನಿಮ್ಮ ಶಾಂತಿಯನ್ನು ಕದಲಿಸುತ್ತಿದೆ. ಗೃಹಸ್ಥ ಜೀವನದಲ್ಲಿ ಹೆಂಡತಿಯೇ ಜೂಡಾಸ್‌ನ ಪಾತ್ರವನ್ನು ನಿರ್ವಹಿಸುತ್ತಾಳೆ. ಗಂಡನು ತನ್ನ ಆತ್ಮವನ್ನು 30 ಬೆಳ್ಳಿಯ ನಾಣ್ಯಗಳಿಗೆ ಮಾರಿಕೊಳ್ಳಬೇಕೆಂದು ಬಯಸುತ್ತಾಳೆ ; ಆಕೆಯೂ ತನ್ನ ದಿವಾನಖಾನೆಯನ್ನೋ ಶಯ್ಯಾಗೃಹವನ್ನೋ ತನ್ನ ದೇಹವನ್ನೋ

ಅಲಂಕರಿಸಿಕೊಳ್ಳಲು ಕೆಲವು ಥಳಕು ಪಳುಕಿನ ಸಾಮಾನುಗಳಿಗಾಗಿಯೂ ಬೆಡಗಿನ ಒಡವೆಗಳಿಗಾಗಿಯೂ ಡೌಲು—ಡಬಡ್ಡಾಳಿಕೆಗಳಿಗಾಗಿಯೂ ತನ್ನ ನಿಜಾತ್ಮನನ್ನು ಮಾರಿ ಕೊಳ್ಳುತ್ತಾಳೆ. ಹಾಗೆಯೇ ಗಂಡನೂ ಜುಡಾಸ್‌ನ ಪಾತ್ರವನ್ನು ವಹಿಸುತ್ತಾನೆ. ಗಂಡನು ತನ್ನನ್ನು ಅವಲಂಬಿಸದಂತೆ ಹೆಂಡತಿಯೂ ಹೆಂಡತಿಯು ತನ್ನನ್ನೇ ಅವಲಂಬಿಸ ದಂತೆ ಗಂಡನೂ ಮಾಡಬೇಕು. ಆದರೆ, ತನಗೇ ಸೇರಿದವಳೆಂದು ಹೆಂಡತಿಯು ತಿಳಿಯಬೇಕೆಂದು ಗಂಡನೂ ತನಗೆ ಸೇರಿದವನೆಂದು ಗಂಡನು ತಿಳಿಯಬೇಕೆಂದು ಹೆಂಡತಿಯೂ ಇಚ್ಛಿಸುತ್ತಾರೆ ; ತೊಂದರೆಗಳೆಲ್ಲಾ ಪ್ರಾರಂಭವಾಗುವದು ಇದರಿಂದಲೇ. ಗಂಡನು ತನ್ನ ಗುಲಾಮನಾಗಿರಬೇಕೆಂದು ಹೆಂಡತಿಯೂ, ಹೆಂಡತಿಯೂ ತನ್ನ ದಾಸಿಯೂ ತೊತ್ತೂ ಆಗಿರಬೇಕೆಂದು ಗಂಡನೂ ಬಯಸುತ್ತಾರೆ.

ನೀವು ಒಂದು ಎತ್ತನ್ನು ಹಗ್ಗದಿಂದ ಕಟ್ಟಿ ಹಗ್ಗವನ್ನು ಹಿಡಿದುಕೊಳ್ಳುವದಕ್ಕೆ ಪ್ರಯತ್ನಪಟ್ಟರೆ, ನೀವು ಎತ್ತನ್ನು ಹಿಡಿದುಕೊಂಡಿರುವದಲ್ಲದೆ, ಆ ಎತ್ತೂ ನಿಮ್ಮನು ಹಿಡಿದುಕೊಂಡಿರುತ್ತದೆ. ಹೀಗೆ ಎಲ್ಲಾ ಆಸ್ತಿಗಳೂ ಸ್ವತ್ತುಗಳೂ ಸ್ವಾಮಿತ್ವವೂ ಬಂಧನವೇ.

ವೇದಾಂತದ ದೃಷ್ಟಿಯಿಂದ, ಆಸ್ತಿಯನ್ನು ಬೆಳೆಸಿ, ಬೆಲೆಕಟ್ಟುವ ಮನೋಭಾವ ವಿಲ್ಲದೆ, ತೆಗೆದುಕೊಳ್ಳುವ ಪ್ರವೃತ್ತಿಯನ್ನು ಬಿಟ್ಟುಕೊಡುತ್ತಿರುವ ಒಲವನ್ನು ಬೆಳೆಸಿಕೊಂಡರೆ ಪ್ರತಿಯೊಂದು ಮನೆಯನ್ನೂ ಸ್ವರ್ಗವನ್ನಾಗಿ ಮಾಡಬಹುದು.

ಪತಿಪತ್ನಿಯರಿಬ್ಬರೂ ಅನ್ಯೋನ್ಯ ಅಭ್ಯುದಯಕ್ಕಾಗಿ ತಮ್ಮ ಶಕ್ತಿಯಲ್ಲಿರುವ ಎಲ್ಲಾ ಪ್ರಯತ್ನವನ್ನೂ ಮಾಡಬೇಕು. ಯಾವದನ್ನೂ ಅಪೇಕ್ಷಿಸದೆ, ಯಾವದನ್ನೂ ನಿರೀಕ್ಷಿಸದೆ ಇದ್ದರೆ, ಆಗ ಎಲ್ಲವೂ ತಾವಾಗಿಯೇ ನಿಮ್ಮಲ್ಲಿಗೆ ಬರುತ್ತವೆ. ನಿಮ್ಮಲ್ಲಿ ಸ್ವರ್ಗವೇ ತುಂಬಿಕೊಳ್ಳುತ್ತದೆ.

“ ಈ ಪದಾರ್ಥವನ್ನು ಕೊಡು ; ಇಂಥಾ ವಸ್ತುವನ್ನು ನನಗೆ ತೆಗೆದುಕೊಂಡು ಬಾ ” ಎಂದು ಹೇಳುತ್ತೀರಿ. ಅವು ನಿಮಗೆ ತರಲ್ಪಡುತ್ತವೆ. ಆದರೆ ಅವನ್ನು ಯಾರಾದರೂ ತೆಗೆದುಕೊಂಡು ಹೋದರೆ, ಆ ವಸ್ತುಗಳು ಬೇಕೆಂಬ ಬಯಕೆಯಿಂದ ನೀವು ಸಂಕಟಪಡುತ್ತೀರಿ.

Desire is a disease, it keeps you in a state of suspense.

**" ಬಯಕೆ ಎಂಬದು ಒಂದು ಬೇನೆ, ಅದು ನಿಮ್ಮನ್ನು ನಿರೀಕ್ಷೆಯ ಕಾತರ–ಕಳವಳ ಸ್ಥಿತಿಯಲ್ಲಿಟ್ಟು ತೂಗಾಡಿಸುತ್ತದೆ "**

ಬಯಕೆಯ ವಸ್ತುವು ನಿಮಗೆ ಲಭಿಸಿದ ಮೇಲೆ ನಿಮಗೆ ಸುಖವಾಗಬಹುದು, ಸಂತೋಷವಾಗಬಹುದು. ಆದರೆ ಅದುವರೆಗೆ ನೀವು ಸಂದಿಗ್ಧತೆಯ ಸಂಕಟದಲ್ಲಿ ಸಿಕ್ಕು ತಳಮಳಗೊಳ್ಳಬೇಕಾಯಿತು ; ಅನಿಶ್ಚತೆಯ ಜೋಕಾಲಿಯಾಟದಲ್ಲಿ ಜೀಕಿ ಜಾರಬೇಕಾಯಿತು. ಇಷ್ಟೆಲ್ಲಾ ಕಷ್ಟದ ಕುಲುಮೆಯ ಅಗ್ನಿಪರೀಕ್ಷೆಯಲ್ಲಿ ಹಾದು ಹೊರಬಿದ್ದ ಮೇಲೆ ಸಿಕ್ಕುವ ಸುಖವ್ರೋ, ಕೇವಲ ಕ್ಷಣಿಕವೂ ಕ್ಷುದ್ರವೂ ಆದುದು.

ನೀವು ಏನನ್ನೂ ನಿರೀಕ್ಷಿಸದೆ, ಪ್ರತಿಯಾಗಿ ಬಯಸದೆ ಕೊಟ್ಟರೆ, ಕೊಡುತ್ತಿದ್ದರೆ, ಕೊಡುವದರಲ್ಲಿ ನೀವು ಸುಖವನ್ನು ಕಾಣುತ್ತೀರಿ. ಯಾವ ವಸ್ತುವನ್ನು ಸುಖಕ್ಕೆ ಪ್ರತಿನಿಧಿಯೆಂದು, ಸುಖವಾಗಲೆಂದು ನೀವು ಕೊಡುತ್ತೀರೋ ಅದರಲ್ಲಿ ಸುಖವು ತೋರಿಕೊಳ್ಳುತ್ತದೆ. ಆದರೆ ನೀವು ಸ್ವೀಕರಿಸುವ ವಸ್ತುವಿನಲ್ಲಿ ನಿಮ್ಮ ಸುಖವನ್ನು ಕಲ್ಪಿಸಿಕೊಳ್ಳಬೇಡಿ ; ನೀವು ಕೊಡುವ ವಸ್ತುವಿನಲ್ಲಿ ನಿಮ್ಮ ಸುಖವನ್ನು ಭಾವಿಸಬೇಕು ಕೊಡುವದು ಯಾವಾಗಲೂ ಸುಖವನ್ನೇ ಕೊಡುತ್ತದೆ.

ನಿಮ್ಮ ದೇವಾಲಯಕ್ಕೆ (ಚರ್ಚ್‌ಗೆ) ನೀವು 50 ಡಾಲರುಗಳನ್ನು ಕೊಟ್ಟರೆ. ನಿಮ್ಮ ಹೃದಯಕ್ಕೆ ಅದು ಶಾಂತಿಯನ್ನೂ ಸುಖವನ್ನೂ ಕೊಡುತ್ತದೆ.

ನೀವು ಕೊಡುವ ಸ್ಥಾನದಲ್ಲಿ ನಿಂತರೆ ಸುಖವೇ ಮೂರ್ತಿಗೊಂಡಂತೆ ಇರುತ್ತೀರಿ.

ಪತಿಪತ್ನಿಯರು ಎಂದೂ ಪ್ರತಿಗ್ರಹ ಮಾಡುವದರಲ್ಲಿ ಉತ್ಸುಕರಾಗದೆ, ಯಾವಾಗಲೂ ಪ್ರದಾನಮಾಡುವದರಲ್ಲಿಯೇ ಉತ್ಸಾಹಶೀಲರಾಗುವದರಲ್ಲಿ ಗೃಹ ಜೀವನ ಸುಖದ ರಹಸ್ಯವಿದೆ. ಆಗ ಇಬ್ಬರೂ ಸುಖಿಗಳಾಗುತ್ತಾರೆ. ಏನನ್ನು ಕೊಡಬೇಕು, ಎನ್ನುವದೇ ಈಗ ಪ್ರಶ್ನೆ. ಪತಿಪತ್ನಿಯರು ತಮ್ಮ ತಮ್ಮ ಯೋಗ್ಯತೆಯಲ್ಲಿ ಇರುವಷ್ಟು ಜ್ಞಾನವನ್ನು ಒಬ್ಬರಿಗೊಬ್ಬರು ಕೊಡಬೇಕಲ್ಲದೆ ಹೊರಗೂ ಕೊಡಬೇಕು. ಪತಿಪತ್ನಿಯರಲ್ಲಿ ಒಬ್ಬರು ಇನ್ನೊಬ್ಬರನ್ನು ಜ್ಞಾನನಿಷ್ಠೆಗೆ

ಪಾತ್ರರನ್ನಾಗಿ ಮಾಡಲು ಎಷ್ಟೆಷ್ಟು ಹೆಚ್ಚಾಗಿ ಪರಿಶುದ್ಧರನ್ನು ಮಾಡುತ್ತಾರೋ ಅವರು ಅಷ್ಟಷ್ಟು ನಿಜವಾದ ಪತಿಪತ್ನಿಯರಾಗುತ್ತಾರೆ. ಇದೇ ವಿಶ್ವನಿಯಮ.

ಭಾರತದೇಶದಲ್ಲಿ ಶಿಖಿಧ್ವಜನೆಂಬ ರಾಜನಿದ್ದನು. ಅವನು ಸಮರ್ಥನಾದ ಚಕ್ರವರ್ತಿಯಾಗಿದ್ದನು. ಅವನು ವಿವೇಕಿಯೂ ವಿಚಾರಶೀಲನೂ ಇದ್ದುದರಿಂದ, ಪ್ರಪಂಚ ಜೀವನದಲ್ಲಿ ದುಃಖದೋಷಗಳನ್ನೇ ಕಂಡು ವಿರಕ್ತನಾದನು. ಸರ್ವ ಜಗತ್ತಿಗೂ ಕಾರಣನಾದ ಭಗವಂತನನ್ನು ಕಂಡು ಶಾಂತಿಯನ್ನು ಪಡೆಯುವದಕ್ಕಾಗಿ ತನ್ನ ಸಂಸಾರ ಜೀವನವನ್ನೂ ರಾಜ್ಯವನ್ನೂ ತ್ಯಾಗಮಾಡಿ ಅರಣ್ಯದ ಏಕಾಂತ ವಾಸದಲ್ಲಿ ತಪಸ್ಸನ್ನು ಮಾಡುವದು ಅವಶ್ಯವೆಂದು ಅವನಿಗೆ ತೋರಿತು

ಅವನಿಗೆ ಚೂಡಾಲಾ ಎನ್ನುವ ಪತ್ನಿಯಿದ್ದಳು ಆಕೆಯು ಸಾಧ್ವಿಯೂ ಸುಸಂಸ್ಕೃತಳೂ ವಿದ್ಯಾವತಿಯೂ ವಿವೇಕಿಯೂ ಭಗವದ್ಭಕ್ತಳೂ ಯೋಗಿನಿಯೂ ಆಗಿದ್ದಳು. ಆಕೆಯು ತನ್ನ ಪತಿಯ ಮನಸ್ಸ್ಥಿತಿಯನ್ನು ತಿಳಿದು, ಆಗಾಗ ಸಮಯ ವರಿತು, ವಿನಯದಿಂದ ತತ್ತ್ವಬೋಧೆ ಮಾಡುತ್ತಿದ್ದರೂ ಮಹಾರಾಣಿಯ ಮಾತಿನಲ್ಲಿ ಅವನಿಗೆ ವಿಶೇಷ ವಿಶ್ವಾಸವುಂಟಾಗಲಿಲ್ಲ. ಆಕೆಯು ಪತ್ನಿಯಾಗಿದ್ದುದರಿಂದ ಅವಳ ನಿಜವಾದ ಯೋಗ್ಯತೆಯನ್ನು ಅವನು ಅರಿತಿರಲಿಲ್ಲ. ಆಕೆಯು ಯಾವಾಗಲೂ ಉಲ್ಲಸಿತ ವೃತ್ತಿಯವಳೂ ಸಂತೋಷಚಿತ್ತಳೂ ಆನಂದಪೂರ್ಣಳೂ ಲಾವಣ್ಯ ವತಿಯೂ ಇದ್ದುದರಿಂದ ಆ ಮಹಾರಾಜನು ಆಕೆಯಲ್ಲಿ ಅಸಧಾರಣವಾದ ತೇಜಸ್ಸನ್ನು ಮಾತ್ರ ಕಂಡು ಮುಗ್ಧನಾಗುತ್ತಿದ್ದನು ಭಗವಂತನ ಸಾಕ್ಷಾತ್ಕಾರವೆಂಬ ಮಹೋನ್ನತ ಸಾಧನ ಪಥದಲ್ಲಿ ಆಕೆಯೂ ಮಾರ್ಗದರ್ಶಿನಿಯಾಗಬಲ್ಲಳೆಂಬದನ್ನು ಅವನು ಅರಿತಿರಲಿಲ್ಲ.

ಶಿಖಿಧ್ವಜ ಮಹಾರಾಜನು, ತನ್ನ ಪತ್ನಿಗೂ ಯಾರಿಗೂ ತಿಳಿಯದಂತೆ ಒಂದು ಮಧ್ಯರಾತ್ರಿಯಲ್ಲಿ ರಾಜ್ಯವನ್ನು ತ್ಯಾಗಮಾಡಿ ಹಿಮಾಲಯಕ್ಕೆ ಹೊರಟುಹೋದನು. ತನ್ನ ಪತಿಯು ರಾಜ್ಯವನ್ನು ತ್ಯಾಗಮಾಡಿ ತಪಸ್ಸಿಗೆ ಹೋದ ಕಾರಣವನ್ನು ತಿಳಿದ ಚೂಡಾಲೆಯು ತಾನೇ ರಾಜ್ಯಭಾರವನ್ನು ವಹಿಸಿ ದಕ್ಷತೆಯಿಂದಲೂ ಚಾತುರ್ಯ ದಿಂದಲೂ ನಡೆಸುತ್ತಿದ್ದಳು ಶಿಖಿಧ್ವಜನು ಹಿಮಾಲಯದ ಅರಣ್ಯಗಳಲ್ಲಿ ಅನೇಕ ವರ್ಷಗಳು ತಪಸ್ಸುಮಾಡಿಕೊಂಡಿದ್ದನು.

ಅಷ್ಟು ವರ್ಷಗಳ ತಪಸ್ಸಿನಿಂದ ತನ್ನ ಪತಿಯ ಮನಸ್ಸು ಪರಿಶುದ್ಧವೂ

ಪರಿಪಕ್ವವೂ ಆಗಿರಬಹುದೆಂದು ಯೋಚಿಸಿ ಚೂಡಾಲೆಯು ಅವನಿಗೆ ತತ್ತ್ವೋಪದೇಶ ಮಾಡಿ ಶಾಂತಿಸುಖಗಳ ನೆಲೆಯನ್ನು ತಿಳಿಸಬೇಕೆಂದು ಒಂದು ಉಪಾಯವನ್ನು ಮಾಡಿದಳು. ತನ್ನ ನಿಜರೂಪದಿಂದ ತೋರಿಕೊಂಡರೆ ಅವನಿಗೆ ವಿಶ್ವಾಸವುಂಟಾಗ ಲಾರದೆಂದೂ ವೈರಾಗ್ಯದ ಭರದಲ್ಲಿ ತಿರಸ್ಕಾರವೇ ಹುಟ್ಟಬಹುದೆಂದೂ ಭಾವಿಸಿ, ಸಂನ್ಯಾಸಿಯ ವೇಷದಲ್ಲಿ ಪತಿಯ ತಪೋವನದಲ್ಲಿ ಕಾಣಿಸಿಕೊಂಡಳು. ಬಹಳ ಹೊತ್ತು ಧ್ಯಾನಸ್ಥನಾಗಿ ಕುಳಿತಿದ್ದ ಶಿಖಿಧ್ವಜನು, ಬಾಹ್ಯಜ್ಞಾನವು ಬಂದು, ಕಣ್ಣುತೆರೆದು ನೋಡಿ ತನ್ನ ಎದುರಿಗೇ ನಿಂತಿದ್ದ ಅಪೂರ್ವ ತೇಜಸ್ವಿಯಾದ ಆ ಮಹಾ ಯತೀಶ್ವರ ನನ್ನು ಕಂಡು ಆಶ್ಚರ್ಯಾನಂದದಿಂದ ಧಿಗ್ಗನೆದ್ದು ನಮಸ್ಕರಿಸಿ, ಭಯಭಕ್ತಿಯಿಂದ ಆ ಮಹಾತ್ಮನ ಪಾದಗಳ ಮೇಲೆ ಪುಷ್ಪಾಂಜಲಿಯನ್ನು ಅರ್ಪಿಸಿ, "ನಾರಾಯಣ ಸ್ವರೂಪಿಗಳಾದ ತಾವು ಯಾರೋ ತಿಳಿಯದು ; ಆದರೆ, ದೇವರೇ ನನ್ನನ್ನು ಅನುಗ್ರ ಹಿಸಲು, ತಮ್ಮಲ್ಲಿ ಮೂರ್ತೀಭವಿಸಿ ಬಿಜಯ ಮಾಡಿಸಿದಂತೆ ತೋರುತ್ತದೆ." ಎಂದನು.

ಆ ಮಹಾತ್ಮನು, "ಮಹಾರಾಜ, ನಿಜಾನಂದ ಪ್ರಾಪ್ತಿಗಾಗಿ ನೀನು ಇಷ್ಟೆಲ್ಲಾ ಶ್ರಮಪಟ್ಟು ತಪಸ್ಸುಮಾಡುತ್ತಿದ್ದಿ ; ಪೂರ್ಣಾನಂದವನ್ನು ನೀನು ಅನುಭವಿಸ ಬೇಕಾದರೆ ಸರ್ವಸ್ವವನ್ನೂ ಸಂಪೂರ್ಣವಾಗಿ ತ್ಯಾಗಮಾಡಬೇಕು." ಎಂದನು. ಮಹಾರಾಜನಿಗೆ ಆಶ್ಚರ್ಯವಾಯಿತು ; "ಮಹಾತ್ಮಾ, ನಾನು ಸಾಮ್ರಾಜ್ಯವನ್ನೂ ಸರ್ವಸಂಪತ್ತನ್ನೂ ಮಹಾಲಕ್ಷ್ಮಿಯಂಥ ಪತ್ನಿಯನ್ನೂ ಪುತ್ರರನ್ನೂ ಪರಿತ್ಯಾಗಮಾಡಿ ಬಂದಿದ್ದೇನೆ." ಎಂದನು. ಆ ಮಹಾತ್ಮನು, "ನೀನು ಏನನ್ನೂ ತ್ಯಾಗಮಾಡಿಲ್ಲ" ಎಂದನು. ಅವನು ದಿಗ್ಭ್ರಾಂತನಾದನು. "ಇದೇನು ಹೀಗೆ ಹೇಳುತ್ತೀರಿ? ನಾನು ರಾಜ್ಯವನ್ನೂ ಕುಟುಂಬವನ್ನೂ ಬಿಟ್ಟು ಬಂದಿಲ್ಲವೆ ?" ಎಂದನು. ಆ ಮಹಾತ್ಮನೆಂದನು "ಇಲ್ಲ, ಇಲ್ಲ, ನೀನು ತ್ಯಾಗಮಾಡದಿರುವದು ಇನ್ನೂ ನಿನ್ನಲ್ಲಿ ಉಳಿದಿಲ್ಲವೆ? ಎಲ್ಲಿಯವರೆಗೆ ನೀನು ಒಂದು ವಸ್ತುವನ್ನು ಹೊಂದಿದ್ದೀಯೋ ಅಲ್ಲಿಯ ವರೆಗೆ ಅದೂ ನಿನ್ನನ್ನು ಹೊಂದಿರುತ್ತದೆ. ಕ್ರಿಯೆ-ಪ್ರತಿಕ್ರಿಯೆಗಳು ಪರಸ್ಪರ ವಿರುದ್ಧವೂ ಸರಿಸಮವೂ ಆಗಿವೆ. 'ರಾಜ್ಯವನ್ನು ಬಿಟ್ಟು ಬಂದರೂ ಈ ಕುಟೀರವೂ ದಂಡಕಮಂಡಲಗಳೂ ಮಾತ್ರ ನನ್ನವಾಗಿ ಉಳಿದಿವೆ,' ಎಂದು ಹೇಳುತ್ತಿ. ನೀನು ಒಂದು ವಸ್ತುವಿನಿಂದ ಹೊಂದಲ್ಪಡದೆ, ಅದನ್ನು ನೀನು ಹೊಂದುವಂತಿಲ್ಲ. ನೀನು ಒಂದರ ಸ್ವತ್ತಾದ ಹೊರತು, ಅದು ನಿನ್ನ ಸ್ವತ್ತಾಗುವಂತಿಲ್ಲ."

ಆಗ ಶಿಖಿಧ್ವಜನು ಪೂರ್ಣತ್ಯಾಗವನ್ನು ಸಾಧಿಸುವ ಆವೇಶದಿಂದ ಎದ್ದು ತನ್ನ ಕುಟೀರವನ್ನೆಲ್ಲಾ ಎಳೆದೆಳೆದು ಒಟ್ಟಿ ರಾಶಿಹಾಕಿ ಸುಟ್ಟನು. ತನ್ನ ದಂಡವನ್ನು

ನದಿಯಲ್ಲಿ ಎಸೆದನು. ಕಮಂಡಲವನ್ನೂ ಜಪಸರವನ್ನೂ ತನ್ನ ಎಲ್ಲಾ ತಪಸ್ಸಾಮಗ್ರಿಗಳನ್ನೂ ಕುಟೀರದ ಬೆಂಕಿಯಲ್ಲಿಯೇ ಸುಟ್ಟುಹಾಕಿದನು. ಶಿಖಿಧ್ವಜನು "ಮಹಾತ್ಮಾ! ಈಗಲಾದರೂ ನಾನು ಸರ್ವಸ್ವತ್ಯಾಗ ಮಾಡಿದ್ದೇನೋ ಇಲ್ಲವೋ ಹೇಳು. ಈಗ ನಾನು ಸರ್ವವನ್ನೂ ತ್ಯಾಗಮಾಡಿರುವದರಿಂದ ಕೇವಲ ಪರಿಶುದ್ಧನೂ ಜ್ಞಾನಿಯೂ ಆಗಿದ್ದೇನೆ; ಅತಿಶಯ ಶಾಂತನೂ ಸುಖಿಯೂ ಆಗಿದ್ದೇನೆ. ನಾನೀಗ ದಿಗಂಬರನಾಗಿದ್ದೇನೆ. ದೇವಾ! ಪೂರ್ಣತ್ಯಾಗದಲ್ಲಿ ಈಗ ಉಳಿದಿರುವದಾದರೂ ಏನು? ಹೇಳು". ಎಂದು ಕೇಳಿದನು.

ಇದಕ್ಕೆ ಆ ಮಹಾತ್ಮನು (ಚೂಡಾಲೆಯು) ''ರಾಜಾ! ನೀನು ಈಗಲೂ ಕೂಡ ಸರ್ವತ್ಯಾಗವನ್ನು ಮಾಡಿಲ್ಲ. ಈ ಮೂರೂವರೆ ಮೊಳದುದ್ದ ಮಣ್ಣಿನ ದೇಹವನ್ನು" ಇನ್ನೂ ನಿನ್ನದೆಂದೇ ತಿಳಿದಿದ್ದಿ. ಅಡವಿಯ ವಸ್ತುಗಳನ್ನು ತಂದು ಕಟ್ಟಿಕೊಂಡಿದ್ದ ಕುಟೀರವು ಎಂದೂ ನಿನ್ನದಾಗಿರಲಿಲ್ಲ. ಅವುಗಳನ್ನು ನೀನು ಸುಟ್ಟಿದ್ದು ತಪ್ಪು; ಅದರಿಂದ ನೀನು ಏನನ್ನೂ ಗಳಿಸಿದಂತಾಗಲಿಲ್ಲ. ಸರ್ವತ್ಯಾಗದಿಂದಾಗುವ ಆನಂದವನ್ನು ವ್ಯರ್ಥವಾಗಿ ನಟನೆಮಾಡಿ ತೋರಿಸುತ್ತಿದ್ದಿ. ನೀನು ಬಿಡದಿರುವ ಉತ್ತಮ ಭಾಗವು ಈಗಲೂ ನಿನ್ನಲ್ಲಿಯೇ ಇದೆ. ಅದೊಂದನ್ನೂ ಬಿಟ್ಟರೆ ಎಲ್ಲವನ್ನೂ ಬಿಟ್ಟಂತಾಗುತ್ತದೆ; ನೀನು ಶೋಕರಹಿತನಾಗುತ್ತಿ.'' ಎಂದು ಹೇಳಿದನು.

ಆಗ ರಾಜನು ತನ್ನೊಳಗೇ ವಿಚಾರಮಾಡಿ ''ದಿವ್ಯಾತ್ಮಾ! ತಿಳಿಯಿತು; ಸರ್ವತ್ಯಾಗದಲ್ಲಿ ಈ ದೇಹ ಒಂದೇ ಉಳಿದಿದೆ, ಒಳ್ಳೆಯದು, ಈ ಉರಿಯುತ್ತಿರುವ ಬೆಂಕಿಯಲ್ಲಿ ಹಾರಿಕೊಂಡು ಸರ್ವತ್ಯಾಗವನ್ನು ಸಾಧಿಸುತ್ತೇನೆ." ಎಂದು ಹೇಳಿ ಆವೇಶದಿಂದ ಎದ್ದು ಬೆಂಕಿಯಲ್ಲಿ ಹಾರಿಕೊಳ್ಳಲು ಹೊರಟನು. ಆಗ ಚೂಡಾಲೆಯು ಅವನನ್ನು ತಡೆದು, "ರಾಜಾ, ನಿಲ್ಲು, ಈಗ ನಿನ್ನ ದೇಹವು ಪೂರಾ ಸುಟ್ಟು ಹೋಯಿತೆಂದು ತಿಳಿ. ಆಗ ಉಳಿಯುವದೇನು?" ಎಂದು ಕೇಳಿದಳು.

**ರಾಜಾ.**— „ಉಳಿಯುವದೇನು, ಬೂದಿ, ಹಿಡಿ ಬೂದಿ ಉಳಿಯುತ್ತದೆ"

**ಚೂಡಾಲಾ** —"ಯಾರ ಬೂದಿ?"

**ರಾಜಾ.**—''ನನ್ನ ಬೂದಿ.''

ಚೂಡಾಲಾ—'' ಓ, ನೋಡು, ಹಾಗಾದರೆ ಆ ಬೂದಿಯು ನಿನ್ನ ಆಸ್ತಿ, ಸ್ವತ್ತು, ಆದ್ದರಿಂದ ನೀನು ಬೂದಿಯ ಆಸ್ತಿ, ಸ್ವತ್ತು. ಬೂದಿಯು ನಿನಗೆ ಸೇರಿದ್ದಾದರೆ, ನೀನು ಬೂದಿಗೆ ಸೇರಿದವನು. ಬೆಂಕಿಯಲ್ಲಿ ಬಿದ್ದು ದೇಹವನ್ನು ಸುಟ್ಟು ಬೂದಿ ಮಾಡಿಕೊಂಡರೂ ನಿನಗೆ ತ್ಯಾಗವು ಸಿದ್ಧಿಸಲಿಲ್ಲ."

ರಾಜ.—(ರಾಜನು ಗಾಢಚಿಂತಾ ಮಗ್ನನಾಗಿ,) '' ಆಹಾ ! ಹೇಗೆ ತ್ಯಾಗಮಾಡಲಿ ? ಏನನ್ನು ತ್ಯಾಗಮಾಡಲಿ ?''

ಚೂಡಾಲಾ —" ರಾಜಾ, ಇದು ಯಾರ ದೇಹ ?"

ರಾಜಾ—''ಇದು ನನ್ನ ದೇಹ "

ಚೂಡಾಲಾ.—'' ನಿನ್ನ ಯಾವ ವಸ್ತುವೂ ಹೇಗೆ ನೀನಲ್ಲವೋ, ಹಾಗೆ ನಿನ್ನದೆನ್ನುವ ದೇಹವೂ ನೀನಲ್ಲ. ಈ ದೇಹವು ನಾನು ಎನ್ನುವ ಭ್ರಮೆಯನ್ನು, ತಪ್ಪು ತಿಳಿವಳಿಕೆಯನ್ನು ತ್ಯಾಗ ಮಾಡು. ಅದು ನೀನೂ ಅಲ್ಲ ; ಅದು ನಿನ್ನದೂ ಅಲ್ಲ. ಹಾಗೆಯೇ ಇಂದ್ರಿಯಗಳೂ ಮನಸ್ಸೂ ಬುದ್ಧಿಯೂ ಯಾವದೂ ನೀನೂ ಅಲ್ಲ , ಅವು ನಿನ್ನವೂ ಅಲ್ಲ. ಅವು ನಿನ್ನವಾದರೆ, ಜಗತ್ತಿನಲ್ಲಿರುವ ಎಲ್ಲಾ ದೇಹಗಳೂ ಎಲ್ಲಾ ಮನಸ್ಸೂ ನಿನ್ನವೇ ಆಗಬೇಕು. ಆದ್ದರಿಂದ ಯಾವದೂ ನೀನಲ್ಲ ; ನಿನ್ನದಲ್ಲ. ಮನಸ್ಸೂ ಈ ಅಹಂಕಾರವೂ ನಾನು, ಎನ್ನುವ ಅಜ್ಞಾನವನ್ನೂ ಭ್ರಮೆಯನ್ನೂ ತ್ಯಾಗಮಾಡಬೇಕು."

ರಾಜಾ—'' ಈ ದೇಹ, ಇಂದ್ರಿಯ, ಮನಸ್ಸು, ಬುದ್ಧಿ, ಅಹಂಕಾರ ಇವು ಯಾವವೂ ನಾನಲ್ಲವಾದರೆ, ನನ್ನ ಸ್ವರೂಪವೇನು ? ನಿಜವಾದ ನಾನು ಯಾರು?''

ಚೂಡಾಲಾ —'' ಇದನ್ನೇ ವಿಚಾರಮಾಡಬೇಕು. ಚಿತ್ತವೇ ವಿವರ್ತವಾಗಿ ಮಿಥ್ಯಾ ಪರಿಣಾಮವಾಗಿ ಜಗದ್ರೂಪದಿಂದ ತೋರುತ್ತದೆ. ಮಹಾತ್ಯಾಗಿಗಳಾದ ಮಹಾತ್ಮರು ಚಿತ್ತತ್ಯಾಗವನ್ನೇ ಸರ್ವತ್ಯಾಗವೆನುತ್ತಾರೆ ಚಿತ್ತದ

ತ್ಯಾಗವನ್ನು ಮಾಡಿಬಿಟ್ಟರೆ ಪರಮ ಶಾಂತವೂ ನಿರ್ಮಲವೂ ಆನಂದವೂ ಚಿನ್ಮಾತ್ರ ಸ್ವರೂಪವೂ ಆದ ಆತ್ಮನ ಅನುಭವವಾಗುತ್ತದೆ.

" ಈ ದೇಹವೂ ನಿರ್ಮಲವಾದ ಮನಸ್ಸೂ ಇದ್ದರೆ, ವಿಚಾರಮಾಡಿ ನಿಜಾತ್ಮನ ಅನುಭವವನ್ನು ಪಡೆಯಬಹುದು. ಆದ್ದರಿಂದ ಒಂದು ವೇಳೆ ನೀನು ಶರೀರವನ್ನು ಬಿಟ್ಟರೂ ಸರ್ವತ್ಯಾಗವಾಗಲಾರದು. ಈ ಶರೀರವನ್ನು ಕಳೆದುಕೊಂಡ ಮೇಲೆ ಜ್ಞಾನ ಸಾಧನೆಗೆ ಅನುಕೂಲವಾದ ಮತ್ತೊಂದು ಅಧಿಕಾರಸಂಪನ್ನ ಶರೀರವು ಬರುವದೆಂಬ ಭರವಸೆಯಿಲ್ಲ ; ಇದರಿಂದ ಸರ್ವತ್ಯಾಗವು ಮತ್ತಷ್ಟು ದುರ್ಲಭವೇ ಆದೀತು. ನೀರು ತೆರೆನೊರೆಗಳಾದಂತೆ ವಿಚಿತ್ರವಾಸನಾಯುಕ್ತಚಿತ್ತವೇ ಅಹಂ ಭಾವಾದಿ ವಿಲಾಸದಿಂದ ವಿವರ್ತವಾಗುತ್ತದೆ ; ಸುಳ್ಳು ಪರಿಣಾಮವಾಗುತ್ತದೆ. ರಾಜಾ, ನೀನು ಯಾವ ಅಹಂಕಾರದ ಯೋಗದಿಂದ ಎಲ್ಲವನ್ನೂ ತ್ಯಾಗಮಾಡಿದ್ದೀಯೋ ಆ ಅಹಂಕಾರವನ್ನೂ ತ್ಯಾಗಮಾಡು ; ನಾನು ತ್ಯಾಗ ಮಾಡಿದ್ದೇನೆ ಎಂಬ ರೂಪದ ಅಭಿಮಾನವನ್ನೂ ಬಿಟ್ಟು ವಿಮುಕ್ತನಾಗು

" ಅನುಕಂಪವು, ದಯೆಯು ದಾನಶೀಲತೆಯು, ಧರ್ಮಬುದ್ಧಿಯು, ತ್ಯಾಗ ಗುಣವು ಮೊದಲು ಮನೆಯಲ್ಲಿ ಪ್ರಾರಂಭವಾಗಬೇಕೆಂದು ಹೇಳುತ್ತಾರೆ. ಆದ್ದರಿಂದ ನಮಗೆ ಅತ್ಯಂತ ಸಮೀಪವೂ ಅತ್ಯಂತ ಪ್ರಿಯವೂ ಆದ ವಸ್ತುಗಳನ್ನು ಮೊದಲು ತ್ಯಾಗಮಾಡಬೇಕು. ಆತ್ಮನಿಗೆ ಅತ್ಯಂತ ಸಮೀಪವೂ ಅತ್ಯಂತ ಪ್ರಿಯವೂ ಆದುದು 'ನಾನು, ನಾನು ' ಎಂದು ಪ್ರತಿಯೊಂದರಲ್ಲಿಯೂ ತೋರಿಕೊಳ್ಳುವ ಸುಳ್ಳು ಅಹಂಕಾರ. ಈ 'ನಾನು ' ನಿಜವಾದ ನಾನಲ್ಲ, ಆತ್ಮನಲ್ಲ ಆದರೆ ಇದನ್ನೇ ಆತ್ಮನೆಂದು ಭ್ರಮಿಸಿರುವದರಿಂದ ಎಲ್ಲಾ ಸಂಸಾರ ದುಃಖವೂ ಬಂಧವೂ ಉಂಟಾಗಿದೆ. ಈ ಸುಳ್ಳು ನಾನೇ ಸರ್ವಸಂಸಾರಕ್ಕೆ ಕಾರಣವಾಗಿದೆ. ಇದು ಬುದ್ಧಿಯನ್ನೂ ಮನಸ್ಸನ್ನೂ ಪ್ರಾಣವನ್ನೂ ಇಂದ್ರಿಯಗಳನ್ನೂ ದೇಹವನ್ನೂ ಅಭಿಮಾನಿಸಿ, ಬುದ್ಧಿಯು ನಾನು, ಮನಸ್ಸು ನಾನು, . . . . . ದೇಹವು ನಾನು ಎಂದು ತೋರಿಕೊಳ್ಳುತ್ತಿದೆ. 'ನಾನು ಈ ಕರ್ಮವನ್ನು ಮಾಡುತ್ತೇನೆ" ನಾನು ಈ ಫಲವನ್ನು ಭೋಗಿಸುತ್ತೇನೆ, ಅನುಭವಿಸುತ್ತೇನೆ ಎಂಬೀ ರೀತಿಯಲ್ಲಿ ಈ ಸುಳ್ಳು ನಾನು ತೋರಿಕೊಂಡು ಸಂಕಟಪಡಿಸುತ್ತಿದೆ. ಹೀಗೆ ಸರ್ವ ಅನರ್ಥಗಳಿಗೂ ಮೂಲಕಾರಣವಾದ ಈ ಸುಳ್ಳು ಅಹಂಕಾರವನ್ನು ನಾವು ಮೊದಲು ತ್ಯಾಗಮಾಡಬೇಕು. ನಿಜವಾದ ಆತ್ಮಸ್ವರೂಪವನ್ನು ತಿಳಿಯದಿರುವ ಅಜ್ಞಾನವೇ ಈ ಅಹಂಕಾರವಾಗಿದೆ. ಈ ತೋರಿಕೆಯ ಅಹಂಕಾರವು ಸುಳ್ಳು, ನಿಜವಲ್ಲ

ಎಂದು ಅರಿತಕೂಡಲೇ ಅದು ನಾಚಿ ಮೈಗರೆಯುತ್ತದೆ. ಆದರೆ ಮತ್ತೆ ಮತ್ತೆ ಅದು ತಲೆಯೆತ್ತಿನಾಚಿಕೆಯಿಲ್ಲದೆ ತೋರಿಕೊಳ್ಳುತ್ತಿರುತ್ತದೆ ; ಮತ್ತೆ ಮತ್ತೆ ಅದನ್ನು ಗುರುತಿಸಿ ಅರಿಯುತ್ತಿರಬೇಕು. ಆ ಎಚ್ಚರದರಿವು ಯಾವಾಗಲೂ ಬೆಳಗುತ್ತಿರಬೇಕು. ಸರ್ವಕ್ಕೂ ಸರ್ವದಾ ಸಾಕ್ಷಿಯಾದ ಚೈತನ್ಯವೇ ಅರಿವೇ ನಾನು ಎಂದು ನಿಶ್ಚಯಿಸು ವದರಿಂದ ಅಹಂಕಾರದ ತ್ಯಾಗವಾಗುತ್ತದೆ. ನನ್ನ ದೇಹ, ನನ್ನ ಮನಸ್ಸು, ನನ್ನ ಹೆಂಡತಿ, ನನ್ನ ಗಂಡ, ನನ್ನ ಮಕ್ಕಳು, ನನ್ನ ವಸ್ತು ವಾಹನಗಳು, ನನ್ನ ಮನೆ, ನನ್ನ ಐಶ್ವರ್ಯ, ಅಧಿಕಾರ ಇವೇ ಮೊದಲಾದ ಅಭಿಮಾನಗಳನ್ನು ಬಿಟ್ಟು ಹೊರತು ಆತ್ಮಾನುಭವವಾಗುವದಿಲ್ಲ."

ಆ ಮಹಾತ್ಮನ ಈ ದಿವ್ಯಬೋಧೆಯನ್ನು ಕೇಳ ಕೇಳುತ್ತಾ ತಪಸ್ವಿಯಾದ ಶಿಖಿಧ್ವಜನ ನಿರ್ಮಲ ಚಿತ್ತವು ಆತ್ಮಸ್ವರೂಪದಲ್ಲಿ ಕರಗಿಹೋಯಿತು.

ಹೀಗೆ ಚೂಡಾಲೆಯು ಕೆಲವು ಕಾಲ ಆ ಯೋಗಿಯ ವೇಷದಿಂದ ರಾಜನ ಜೊತೆಗೇ ಇದ್ದುದರಿಂದ ರಾಜನ ಆತ್ಮಾನುಭವವು ಬೆಳೆಯುತ್ತಾ ಹೋಯಿತು.

ಆದರೆ, ದೇವತಾಸ್ತ್ರೀಯಾದ ಚೂಡಾಲೆಯ ಮಹಾ ಸಮಸ್ಯೆಯಲ್ಲಿ ಅರ್ಧ ಭಾಗವು ಮಾತ್ರ ಪರಿಹಾರವಾಗಿತ್ತು. ತನ್ನ ಪತಿಯನ್ನು ಪೂರ್ಣ ತತ್ತ್ವಜ್ಞಾನಿ ಯನ್ನಾಗಿ ಮಾಡಬೇಕಾಗಿದ್ದ ಪಾರಮಾರ್ಥಿಕರ್ತವ್ಯವು ಮಾತ್ರ ಸಾಧಿಸಿತ್ತು. ಆ ಮಹಾಪುರುಷನಿಗೆ ಪತ್ನಿಯಾದ ತನ್ನಲ್ಲಿ ವಿಶ್ವಾಸವನ್ನು ಹುಟ್ಟಿಸಿ, ಕ್ಷಾತ್ರಧರ್ಮವಾದ ರಾಜ್ಯ ಪರಿಪಾಲನ ಮಾಡುವ ಲೋಕಸಂಗ್ರಹ ಕಾರ್ಯವನ್ನು ಆತನು ನೆರವೇರಿಸು ವಂತೆ ಮಾಡಬೇಕಾಗಿದ್ದ ಪ್ರಾಪಂಚಿಕ ಕರ್ತವ್ಯವನ್ನು ಆಕೆಯು ಸಾಧಿಸಬೇಕಾಗಿತ್ತು. ರಾಜನಿಗೆ ತಾರಕಗುರುವಾಗಿ, ಪರಮಪೂಜ್ಯನೆನಿಸಿದ್ದ ಆ ಯೋಗಿಯೇ 'ತಾನೆಂದು ಚೂಡಾಲೆಯು ಮೊದಲು ಪ್ರಕಟಪಡಿಸಬೇಕಾಗಿತ್ತು. ಅನಂತರ ತನ್ನಲ್ಲಿ ರಾಜನಿಗೆ ರತಿವುಂಟಾಗುವಂತೆ ಚೂಡಾಲೆಯು ಮಾಡಬೇಕಾಗಿತ್ತು. ಆದ್ದರಿಂದ ಚೂಡಾಲೆಯು ಬಹಳ ಚಾತುರ್ಯದಿಂದಲೂ ಉಪಾಯಾಂತರದಿಂದಲೂ ಕೆಲವು ಕಾಲದ ಮೇಲೆ, ಆ ಯತಿಯು ತಾನೇ ಎಂದು ರಾಜನಿಗೆ ಆಶ್ಚರ್ಯಪ್ರೇಮಗಳು ಉಂಟಾಗುವಂತೆ ತೋರಿಸಿಕೊಂಡಳು.

ಆ ಅರಣ್ಯದಲ್ಲಿಯೇ ರಾಜನ ಜೊತೆಗೆ ಚೂಡಾಲೆಯು ಕೆಲವು ಕಾಲ

ಸುಖವಾಗಿ ವಾಸಮಾಡುತ್ತಿರಲು, ಅವನ ನಿರಭಿಮಾನತೆಯನ್ನು ಪರೀಕ್ಷಿಸುವದಕ್ಕಾಗಿ ಆಕೆಯು ಒಂದು ದಿನ ಒಂದು ಉಪಾಯವನ್ನು ಮಾಡಿದಳು.

ಒಂದು ರಾತ್ರಿ, ಚಂದ್ರೋದಯವಾದಾಗ, ಶಿಖಿಧ್ವಜನು ಸಮೀಪದಲ್ಲಿರುವ ನದೀ ತೀರದಲ್ಲಿ ಸಂಧ್ಯೋಪಾಸನೆ ಮಾಡಿ ಎದ್ದುಬಂದಾಗ, ಸಮೀಪದ ವನಸ್ಥಲಿಯಲ್ಲಿದ್ದ ಒಂದು ಪುಷ್ಪಾಲಂಕೃತ ಲತಾಗೃಹದಲ್ಲಿ, ಶಿಲಾಫಲಕದ ಮೇಲೆ, ಕುಸುಮ ಶಯ್ಯೆಯಲ್ಲಿ ಸುಂದರ ತರುಣನೋರ್ವನನ್ನು ದೃಢಾಲಿಂಗನ ಮಾಡಿಕೊಂಡು ಮಲಗಿರುವಂತೆ ತೋರಿಸಿಕೊಂಡಳು. ಶಿಖಿಧ್ವಜನಿಗೆ ಆವರಿಬ್ಬರೂ ಕಾಮಾತುರತೆಯಿಂದ ನಿರ್ಭಯರೂ ನಿರ್ಲಜ್ಜರೂ ಆಗಿರುವಂತೆ ತೋರಿತು. ಆನಂದಭರದಲ್ಲಿರುವ ಅವರ ಭೋಗಸುಖಕ್ಕೆ ಭಂಗ ತರಬಾರದೆಂದೂ ಅವರವರ ಮನೋರಥವನ್ನು ಪೂರ್ಣ ಮಾಡಿಕೊಳ್ಳುವದಕ್ಕೆ ಅವರವರು ಸ್ವತಂತ್ರರೆಂದೂ ಭಾವಿಸಿ ರಾಜನು ಆ ಲತಾ ಗೃಹದಿಂದ ಹೊರಗೆ ಬಂದು ಕ್ರೋಧವನ್ನು ಜಯಿಸಿ ಸ್ವಸ್ಥ ಮನಸ್ಸಿನಿಂದ ಕುಳಿತನು.

ಅನಂತರ ಸ್ವಲ್ಪ ಹೊತ್ತಿನಲ್ಲಿಯೇ ವಿಲಾಸದಿಂದ ಬಳಲಿದ ಶರೀರವುಳ್ಳವಳಂತೆ ಚೂಡಾಲೆಯು ರಾಜನ ಹತ್ತಿರ ಬಂದು, ಲಜ್ಜಿತಳೂ ಖಿನ್ನಳೂ ಆಗಿ, "ಮಹಾರಾಜ! ಚಂಚಲವೂ ಚಪಲವೂ ಆದ ಸ್ತ್ರೀಸ್ವಭಾವಕ್ಕೆ ಅನುಗುಣವಾಗಿ ನನ್ನಿಂದ ಅಪರಾಧವಾಯಿತು. ನಾನು ವನಮಧ್ಯದಲ್ಲಿ ಮಧುರವಾದ ಬೆಳ್ದಿಂಗಳಿನಲ್ಲಿ ಏಕಾಂತದಲ್ಲಿರುವದನ್ನೂ ನೀನು ದೂರದಲ್ಲಿ ಧ್ಯಾನಸ್ಥನಾಗಿರುವದನ್ನೂ ನೋಡಿದ ಆ ಸುಂದರ ಕಾಮುಕನು ನನ್ನನ್ನು ಪ್ರಾರ್ಥಿಸಿದನು. ಅಬಲೆಯಾದ ನಾನು ಆಗ ಅವನನ್ನು ತಿರಸ್ಕರಿಸದವಳಾದೆ. ನನ್ನ ಮೇಲೆ ದಯವಿಟ್ಟು ಕೋಪಮಾಡಿಕೊಳ್ಳದೆ ಕ್ಷಮಾ ಮಾಡಬೇಕು. ಸಾಧು ಪುರುಷರು ಸರ್ವದಾ ಕ್ಷಮಾಶೀಲರಲ್ಲವೆ ?" ಎಂದಳು.

ಶಿಖಿಧ್ವಜ, "ಓ ಬಾಲೆ, ಆಕಾಶದಲ್ಲಿಯ ವೃಕ್ಷದಂತೆ ನನ್ನಲ್ಲಿ ಕ್ರೋಧದ ಅತ್ಯಂತ ಅಭಾವವಿದೆ. ಪ್ರೇಮವೇ ನಮ್ಮ ಸ್ವರೂಪವಾದುದರಿಂದ ಯಾವ ಕಾಲಕ್ಕೂ ಯಾವ ಕಾರಣದಿಂದಲೂ ನನ್ನ ಪ್ರೇಮಕ್ಕೆ ಚ್ಯುತಿ ಬರುವದಿಲ್ಲ. ಪೂರ್ಣಿಮಾ ಪೂರ್ಣಚಂದ್ರನು ಒಳ್ಳೆಯವರಿಗೂ ಕೆಟ್ಟವರಿಗೂ ಸಮವಾಗಿ ತನ್ನ ಮಧುರವಾದ ಬೆಳ್ದಿಂಗಳಿಂದ ಸರ್ವದಾ ಆಹ್ಲಾದಪಡಿಸುವಂತೆ ನನ್ನ ಪ್ರೇಮವಿದೆ. ನನ್ನಲ್ಲಿ ನಿತ್ಯೋದಿತ ಆನಂದ ಸ್ವರೂಪನಾದ ಆತ್ಮನ ಅರಿವು ಇಲ್ಲದೆ, ಈ ದೇಹವು ಸತ್ಯವೆಂದೂ ಇದು ನಾನೆಂದೂ ನೀನು ನನ್ನವಳೆಂದೂ ತಿಳಿದಿದ್ದರೆ, ನಿನ್ನ ಕೆಟ್ಟ ನಡತೆಯು ನನಗೆ ದುಃಖವನ್ನು ಉಂಟುಮಾಡುತ್ತಿತ್ತು. ಸ್ವಾಮಿತ್ವವನ್ನು ಸಾಧಿಸುವ

ಮನೋಭಾವಕ್ಕೂ ಬಯಕೆಗೂ ನಾನು ಬಲಿಯಾಗಿದ್ದರೆ, ಆ ರೋಗಕ್ಕೆ ನಾನು ತುತ್ತಾಗಿದ್ದರೆ, ನನಗೆ ತೀವ್ರ ವ್ಯಥೆಯೂ ಸಂತಾಪವೂ ಆಗುತ್ತಿತ್ತು. ಆದರೆ ಈಗಿರುವ ನನ್ನ ಮನಸ್ಸಿನ ಸ್ಥಿತಿಯಲ್ಲಿ, ನನ್ನ ದೇಹದಲ್ಲಿ ಗಂಡನನ್ನು ಕಾಣುವದಿಲ್ಲ. ನಾನು ನಿನ್ನ ಗಂಡನೆಂದು ಭಾವಿಸುವದಿಲ್ಲ. ಇನ್ನೊಂದನ್ನು ಕಟ್ಟಿಹಾಕಿರುವ ಯಾವ ಹಗ್ಗವನ್ನೂ ನಾನು ನನ್ನ ಕೈಯಲ್ಲಿ ಹಿಡಿದಿಲ್ಲ ; ಯಾವದೂ ನನ್ನ ಸ್ವತ್ತಲ್ಲ ; ನಾನು ಯಾವದರ ಸ್ವತ್ತೂ ಅಲ್ಲ. ನಾನು ಅನಂತನಾಗಿದ್ದೇನೆ. ಇಡೀ ಜಗತ್ತನ್ನು ಆಳುತ್ತಿರುವ ವಿಶ್ವಶಕ್ತಿಯೇ, ವಿಶ್ವೇಶ್ವರನೇ ನಾನಾಗಿದ್ದೇನೆ. ಸೂರ್ಯ, ಚಂದ್ರ, ನಕ್ಷತ್ರಗಳೂ ವಾಯ್ವಗ್ನಿ ಜಲದೇವತೆಗಳೂ ನನ್ನ ಮಹಿಮಾ ಪ್ರಕಾಶಕರು, ನೀನೂ ಪರಿಶುದ್ಧಪ್ರಜ್ಞಾಸ್ವರೂಪಳಾದ ವಿಶ್ವಶಕ್ತಿಯೇ ಆಗಿದ್ದಿ. ಇದನ್ನೇ ಚಿಂತಿಸು, ಧ್ಯಾನಿಸು. ನೀನು ಪರಿಶುದ್ಧಳಾಗುತ್ತಿ. ಆದರೆ ಈ ಲೋಕದಲ್ಲಿ ಪರಿಶುದ್ಧರಲ್ಲದಿರುವ ಅಪವಿತ್ರರಾದ—ಎಷ್ಟೋ ಜನ ಬಾಲಕಿಯರಿದ್ದಾರೆ ; ಅವರೆಲ್ಲರೂ ನನ್ನವರೇ. ಅವರೆಲ್ಲರಲ್ಲಿಯೂ ಇರುವದು ನಾನೇ. ಆದ್ದರಿಂದ ಯಾರನ್ನು ದೂಷಿಸಲಿ ? ಯಾರನ್ನು ತಿರಸ್ಕರಿಸಲಿ ? ಅವರ ಕಷ್ಟವೇ ನನ್ನ ಕಷ್ಟ, ಅವರ ನೋವೇ ನನ್ನ ನೋವು, ಪುಣ್ಯ ಪಾಪಗಳ ಲೇಪವಿಲ್ಲದ ಪರಿಶುದ್ಧನಾದ ಅಂತರಾತ್ಮನೇ ಅವರಲ್ಲಿ ಬೆಳಗಲಿ ಎಂದು ಬಯಸುತ್ತೇನೆ. ಸಮಸ್ತ ಜಗತ್ತೂ ವಿಶ್ವವನ್ನೇ ಬೆಳಗುವ ನನ್ನದು, ನಾನು ಯಾವದಕ್ಕೆ ಕೋಪಗೊಳ್ಳಲಿ ? ಯಾವದಕ್ಕೆ ಸಂತೋಷಪಡಲಿ ?

ನೆರೆಹೊರೆಯವರು ಯಾರಾದರೂ ಪಾಪವನ್ನು ಮಾಡಿದರೆ ನಮಗೆ ದುಃಖವಾಗುವದಿಲ್ಲ ; ಆದರೆ ನಮ್ಮ ಹೆಂಡತಿಯು ಒಂದು ಪಾಪವನ್ನು ಮಾಡಿದರೆ ನಮಗೆ ಅತಿಶಯವಾದ ಸಂತಾಪವೂ ಸಂಕಟವೂ ಆಗುತ್ತದೆ. ತನ್ನ ಸ್ವಾಮಿತ್ವವನ್ನು ಸ್ಥಾಪಿಸುವ ಸ್ವಾರ್ಥಸಾಧಕ ಮನೋ ಭಾವವೇ ಇದಕ್ಕೆ ಕಾರಣ".

ಮಹಾರಾಣೀ ಚೂಡಾಲೆಯು ಆಗಾಗ ತನ್ನ ರಾಜ್ಯಕ್ಕೆ ಹೋಗಿ, ರಾಜಕಾರ್ಯಗಳನ್ನು ನಿರ್ವಹಿಸಿ ಬರುತ್ತಿದ್ದಳು. ಒಂದುಸಲ ಚೂಡಾಲೆಯು ರಾಜನನ್ನು ಕುರಿತು, "ಓ ಮಹಾರಾಜ ! ನೀನು ದೇವರೇ ಸರಿ. ಎಲ್ಲಾ ಜಗತ್ತೂ ನಿನ್ನದಾಗಿರುವಾಗ ನೀನು ಎಲ್ಲಿ ವಾಸಿಸಿದರೆ ಏನು ? ಅರಮನೆಗಿಂತಲೂ ಹಿಮಾಲಯವು ನಿಮಗೆ ಹೆಚ್ಚಿನದೆ ?—ಹೆಚ್ಚು ನಿಮದೆ ?" ಎಂದು ಕೇಳಿದಳು.

ರಾಜ, "ಚಿತ್‌ಸ್ವರೂಪಿಯಾದ ನಾನು ಎಲ್ಲೆಲ್ಲಿಯೂ ತುಂಬಿದ್ದೇನೆ. ಎಲ್ಲಾ ದೇಹಗಳೂ ನನ್ನವೇ ; ಬೇರೆ ದೇಹಗಳಿಗಿಂತಲೂ ಈ ದೇಹವು ನನಗ ಹೆಚ್ಚಿನದೇನಲ್ಲ.

ಜ್ಞಾನಿಯ ದೃಷ್ಟಿಯಲ್ಲಿ ಈ ದೇಹವೇ ಇಲ್ಲ ಸತ್ಯವನ್ನು ಸಂಪೂರ್ಣವಾಗಿ ತಿಳಿಯದ ವರಿಗೆ ಈ ದೇಹವಿದೆ. ಈ ಪ್ರಪಂಚವೆಲ್ಲಾ ನಮ್ಮ ಕಲ್ಪನೆಯಿಂದ ತೋರುತ್ತಿದೆ. ಗಣಿತಶಾಸ್ತ್ರದ ನಿಯಮದಷ್ಟು ಇದು ಸತ್ಯ. ಇದು ಸಾಹಸೋಕ್ತಿಯಂತೆ ಕಂಡರೂ ಬಹಳ ಸತ್ಯ."

ಚೂಡಾಲೆ, " ಪ್ರಭೂ ! ಹಾಗಿದ್ದರೆ ನಾನು ಹೇಳಿದಂತೆ ಕೇಳಿ, ಅದರಂತೆ ಮಾಡಿ. ಅಜ್ಞಾನವು ನಾಶವಾಗಿರುವದರಿಂದಲೂ ಸರ್ವತ್ರ ಆತ್ಮನೊಬ್ಬನೇ ಇರುವನೆಂಬ ಜ್ಞಾನವಾಗಿರುವದರಿಂದಲೂ ಆಕಾಶದಂತೆ ನಿರ್ಮಲರೂ ಸ್ವಚ್ಛರೂ ಆಗಿದ್ದೇವೆ, ನಮಗೆ ಇಚ್ಛೆಯೂ ನಿರಿಚ್ಛೆಯೂ ಒಂದೇ ಆಗಿವೆ. ನಾವು ನಮ್ಮ ಜೀವನದ ಮೊದಲನ್ನೂ ಮಧ್ಯವನ್ನೂ ಕೊನೆಯನ್ನೂ ನೋಡಿದರೆ, ರಾಜ್ಯಭಾರವನ್ನು ಮಾಡುವದೇ ನಮಗೆಜನ್ಮದಿಂದ ಬಂದಂಥ ಕರ್ತವ್ಯವಾಗಿದೆ. ಆದ್ದರಿಂದ ತಾವು ಪೂರ್ವದಿಂದಲೂಬಂದಿರುವ ರಾಜ್ಯಭಾರವನ್ನು ನಡೆಸಬೇಕು" ಎಂದು ಹೇಳಿದಳು.

ಇದಕ್ಕೆ ರಾಜನು ಒಪ್ಪಿದ್ದರಿಂದ, ಇಬ್ಬರೂ ತಮ್ಮ ರಾಜ್ಯಕ್ಕೆ ಹೋಗಿ ರಾಜ್ಯ ಪರಿಪಾಲನೆ ಮಾಡುತ್ತಿದ್ದರು. ಸಕಲ ಭೋಗಭಾಗ್ಯಗಳ ಸಮೃದ್ಧಿಯಲ್ಲಿ ಅವರು ವಾಸಿಸುತ್ತಿದ್ದರೂ ಇಂದ್ರಿಯಗಳಿಗೆ ವಶರಾಗದೇ ಸ್ಥಿತಪ್ರಜ್ಞರಾಗಿ, ವಾತ್ಸಲ್ಯದಿಂದ ಪ್ರಜಾಕೋಟಿಯ ಸರ್ವತೋಮುಖವಾದ ಅಭಿವೃದ್ಧಿಯನ್ನು ಸಾಧಿಸುತ್ತಾ ಬಹುಕಾಲ ರಾಜ್ಯಭಾರಮಾಡಿದರು ಶಿಖಿಧ್ವಜನು ಕೇವಲ ಮಹಾರಾಜನೂ ಚಕ್ರವರ್ತಿಯೂ ಮಾತ್ರ ಆಗಿರಲಿಲ್ಲ ; ಅವನು ದೇವರೇ ಆಗಿದ್ದನು ಇದೇ ನಿಜವಾದ ತ್ಯಾಗ

ಅವನಿಗೆ ಹಂಸತೂಲಿಕಾತಲ್ಪವೂ ಮುಖಮಲ್ಲಿನ ಮೆತ್ತೆಗಳೂ ರೇಷ್ಮೆಯ ಮೃದುಗಾದಿಗಳೂ ಮುಳ್ಳು ಗುಲಾಬಿಗಳೂ ಕಲ್ಲುಮುಳ್ಳುಗಳೂ ಶಿಲಾಫಲಕಗಳೂ ಹೊನ್ನೂ ಮಣ್ಣೂ ಅರಮನೆಯೂ ಹರಕುಗುಡಿಸಿಲೂ ಮೃಷ್ಟಾನ್ನ ಕದನ್ನಗಳೂ ಒಂದೇ ಆಗಿದ್ದವು

ಆಸಕ್ತಿಯೂ ಇರಕೂಡದು, ಹಾಗೇ ದ್ವೇಷಾಸೂಯೆಗಳೂ ಇರಕೂಡದು, ಇಂಡಿಯಾದೇಶದಲ್ಲಿ ತಪಸ್ಸಾಧನೆಯು ಸತ್ಯದ ಅನುಭವಕ್ಕೆ ಏಣಿಯು ಮಾತ್ರ ನೀವೇ ದೇವರೆಂದು ನಿಶ್ಚಯವಾದಾಗ ನಿಜವಾದ ಅನುಭವವಾಗುತ್ತದೆ ಕೃತ್ರಿಮ ವಾದ ತ್ಯಾಗದಿಂದ ಪ್ರಯೋಜನವಿಲ್ಲ. ಸಾಧ್ವಿಯೂ ಮಹಾಯೋಗಿನಿಯೂ ಆದ ಮಹಾರಾಣಿಯು ಸಾಹಸದಿಂದ ಮಹಾ ಸಮರ್ಥನಾದ ಸಮ್ರಾಟನು ತನ್ನೊಳಗಿರುವ

ನಿಜವಾದ ದೇವತ್ವದ ಅನುಭವವನ್ನು ಪಡೆದನು. ಹೀಗೆ ವಿವಾಹಿತ ಸ್ತ್ರೀಪುರುಷರು ಪರಸ್ಪರ ಪ್ರೇಮದಿಂದ ಜೀವಿಸಿದ್ದು ಒಬ್ಬರಿಗೊಬ್ಬರು ಆತ್ಮಾನುಭವ ಮಾಡಿಕೊಡುವದಕ್ಕೆ ಸಹಾಯಂಕರಾಗಿ ತಮ್ಮ ಮನೆಯನ್ನೇ ಸ್ವರ್ಗಸೀಮವನ್ನಾಗಿ ಮಾಡಿಕೊಳ್ಳಬಹುದು.

ಓಂ ! ಓಂ ! ಓಂ !

## The Present Needs of India

# ಇಂಡಿಯಾ ದೇಶದ ವರ್ತಮಾನಕಾಲದ ಆವಶ್ಯಕತೆಗಳು

## (ಅಮೆರಿಕಾದ ಕ್ಯಾಲಿಫೋರ್ನಿಯಾ ಶಸ್ತಾಸ್ಪ್ರಿಂಗ್)

ಸಂಪನ್ನಸ್ತ್ರೀಪುರುಷರಲ್ಲಿರುವ ನನ್ನ ಆತ್ಮವೇ,

ಸ್ವಚ್ಛ–ನಿಷ್ಕಳಂಕವಾದ ಮಂಜಿನ ಮೋಹಕವಾಗಿ ಥಳಥಳಿಸುತ್ತಿರುವ ಚೂರುಗಳು, ರಾಮನ ಕುಟೀರದ ಕಿಟಕಿಯ ಹೊರಗೆ, ರಭಸದಿಂದ, ಆದರೂ ಮನೋಹರವಾಗಿ, ಸುರಿಯುತ್ತಿವೆ, ಈ ಸಮಗ್ರ ಶಸ್ತಾಪರ್ವತವೇ, ರಸ್ತಾ ಶಬ್ದದ ಫ್ರೆಂಚ್ ಭಾಷೆಯ ಅರ್ಥಕ್ಕೆ ಅನುಗುಣವಾಗಿ ನಿರ್ಮಲವಾಗಿಯೂ ಪರಿಶುದ್ಧವಾಗಿಯೂ ಸೊಬಗಿನಿಂದ ಪರಿಶೋಭಿಸುತ್ತಿದೆ ವಿಕಾಸವಾದದ ಮೇಲೆ ಬರೆದಿರುವ ಅತ್ಯಾಧುನಿಕ ಕೃತಿಯೊಂದನ್ನು, ರಾಮನು ಈಗ ತಾನೇ ಓದಿ ಮುಗಿಸಿ ಪಕ್ಕದಲ್ಲಿ ಇಟ್ಟಿದ್ದಾನೆ.

ಮೂಲಭೂತವಾಗಿಯೂ ನವೀನವಾಗಿಯೂ ಅನುಕರಣವಲ್ಲದೆಯೂ ಜನಪ್ರಿಯವಾಗಿಯೂ ಕಣ್ಣಿಗೆ ಹೊಡೆಯುವಂತೆ ಗಮನ ಸೆಳೆಯುವದಾಗಿಯೂ ಇರಬೇಕೆಂಬ ಹಂಬಲವು ಅನೇಕವೇಳೆ ಸತ್ಯಪಥದಿಂದ ಜನರನ್ನು ದೂರವಿಡುತ್ತದೆ. ಈ ಬಗೆಯ ಬಯಕೆಯನ್ನು ವರ್ಜಿಸಿ, ತಲೆಯನ್ನು ಸಮತೂಕದಲ್ಲಿ ಇಟ್ಟುಕೊಂಡು, ಭಗ್ನೋತ್ಸಾಹದಿಂದ ಮಂಕುಬಡಿದು, ಜೋಲು ಮೋರೆ ಹಾಕದೆ, ಅಥವಾ ಆತ್ಮಪ್ರಶಂಸೆಯಿಂದ ಓರಿಓಗ್ಗಿ ಅಂತರಿಕ್ಷದ ಮೋಡಗಳಲ್ಲಿ ಹಾರಾಡದೆ, ಇಂಡಿಯಾದೇಶದ ವರ್ತಮಾನಕಾಲದ ಆವಶ್ಯಕತೆಗಳ ವಾಸ್ತವ ಸಮಸ್ಯೆಯನ್ನು ಎದುರಿಸುವದಾದರೆ, ಭಾರತದೇಶದ ಒಂದೇ ಪವಿತ್ರಭೂಮಿಯ ಮೇಲೆ ನಾವೆಲ್ಲರೂ ಕೂಡಿ ಜೀವಿಸುತ್ತಿದ್ದೇವೆಂಬ ಅರಿವನ್ನು ಆಧರಿಸಿರುವ ಎಲ್ಲಾ ಪ್ರೇಮ ಸಂಬಂಧವನ್ನೂ ಬಾಂಧವ್ಯವನ್ನೂ ಆ ಜನರು ಸಂಪೂರ್ಣ ನಿರ್ಲಕ್ಷಿಸಿರುವ ಘೋರವಾದ ಕರ್ಮವಿಲಾಸವು ನಮ್ಮ ಮುಖಕ್ಕೆ ಅಪ್ಪಳಿಸಿ ರಾಚುತ್ತಿದೆ. ಇದು ಅತ್ಯವಶ್ಯವಾದ ಸಹಜೀವನ ಪ್ರೇಮದ ಅರಿವೇ ಆ ಜನರಿಗೆ ಇಲ್ಲದಿರುವ ಪರಿಶೋಚನೀಯ ಪರಿಸ್ಥಿತಿ ಧಾರ್ಮಿಕ ಮತಾಂಧತೆಯು, ಜನರಲ್ಲಿರುವ ಮಾನವೀಯತೆಯ ಪ್ರೇಮವು ತಲೆಯೆತ್ತದಂತೆ

ಮಾಡಿರುವದರಿಂದ ಸಮಾನ ರಾಷ್ಟ್ರೀಯತೆಯ ಬಾಂಧವ್ಯಭಾವನೆಗೆ ಖಗ್ರಾಸ ಗ್ರಹಣವೇ ಬಡಿದು ಕೊಂಡಿದೆ.

ಇಂಡಿಯಾದಲ್ಲಿರುವಂತೆ ಅಮೆರಿಕೆಯಲ್ಲಿಯೂ ಪಂಥಗಳೂ ಪಂಗಡಗಳೂ ಮತಶ್ರದ್ಧೆಗಳೂ ಅಷ್ಟೇ ಅಥವಾ ಇನ್ನೂ ಹೆಚ್ಚಾಗಿವೆ. ಮುಖ್ಯವಾಗಿ ಮತಧರ್ಮ ದಿಂದಲೇ ಜೀವನ ನಡೆಸುತ್ತಿರುವ ಕೆಲವು ಸಂಕುಚಿತ ಧರ್ಮಭ್ರಾಂತ ಉನ್ಮತ್ತಾಭಿ ಮಾನಿಗಳನ್ನು ಬಿಟ್ಟರೆ, ಕ್ರೈಸ್ತರ ಉದಾರ ಭಾವದ ಕ್ಯಾತೊಲಿಕ್ ವಾದವಾಗಲೀ (Catholicism), ಕ್ರಮಾನುಸರಣೆಯ ಹುಚ್ಚಿನ ಮೆತೋಡಿಸ್ಟರ ತತ್ತ್ವವಾಗಲೀ (Methodism), (ಪುರೋಹಿತರೂ ಸೇರಿ–ಸಮಾನ ಪದವಿಯ ಮರದ ಹಿರಿಯರು ಆಡಳಿತನಡೆಸುವ ಕ್ರೈಸ್ತ) ಪ್ರೆಸ್‌ಬಿಟೀರಿಯನ್ (Presbyterianism) ಸಂಪ್ರ ದಾಯವಾಗಲಿ, ಸಮಾನ ದೇಶೀಯರ ಬಂಧುಭಾವನೆಯನ್ನು ಎಂದೂ ಕಳೆಯ ಲಾರದು ಅಥವಾ ಕೀಳುಗೊಳಿಸಲಾರದು. ನ್ಯಾಯವಾಗಿಯೂ ಸತ್ಯವಾಗಿಯೂ ಹೇಳುವದಾದರೆ, ಧಾರ್ಮಿಕವೆನಿಸಿಕೊಂಡಿರುವ ಭಾವನೆಯು ಇಂಡಿಯಾದಲ್ಲಿ ಮಾಡಿರುವಂತೆ ಅಮೆರಿಕಾದಲ್ಲಿ ಸಹಜವಾದ ಮನವೀಯಗುಣವನ್ನು ಎಂದೂ ಕಾವ ಳದಲ್ಲಿ ತಳ್ಳಿರುವದಿಲ್ಲ. ಇಂಡಿಯಾದಲ್ಲಿ ಮಹಮ್ಮದೀಯರು ತಲೆತಲಾಂತರದಿಂದ ಹಿಂದೂಗಳ ಜೊತೆಗೇ ಒಂದೇ ಭೂಮಿಯ ಮೇಲೆ ವಾಸಮಾಡುತ್ತಿದ್ದಾರೆ ; ಆದರೆ ಅವರ ಸ್ನೇಹ–ಸಹಾನುಭೂತಿಗಳು, ಹಿಂದೂಸ್ಥಾನದಲ್ಲಿರುವ ಪಕ್ಕದ ಮನೆಯ ನೆರೆ ಹೊರೆಯವರಲ್ಲಿ ಇರುವದಕ್ಕಿಂತಲೂ ಹೆಚ್ಚಾಗಿ, ದಕ್ಷಿಣಯೂರೋಪಿನ ತುರುಕರಲ್ಲಿವೆ. ಹಿಂದೂ ತಂದೆಯ ರಕ್ತಮಾಂಸವೇ ಆದ ಒಂದು ಮಗುವು ಕ್ರೈಸ್ತಮತಕ್ಕೆ ಸೇರಿ ಸಲ್ಪಟ್ಟಕೂಡಲೇ ಬೀದಿಯ ನಾಯಿಗಿಂತಲೂ ಹೆಚ್ಚು ಪರಕೀಯವೂ (ವಿದೇಶೀಯವೂ) ಆಗುತ್ತದೆ. (ಇಂಡಿಯಾದ) ಮಧುರೆಯಲ್ಲಿರುವ ವೈಷ್ಣವದ್ವೈತಿಯು ದೂರದ ದಖ್ಖನ್ನಿನಲ್ಲಿರುವ ಸಹ ವೈಷ್ಣವದ್ವೈತಿಯ ಹಿತಸಾಧನೆಗಾಗಿಯೂ ಆದರೆ, ತನ್ನ ಪಟ್ಟಣದಲ್ಲಿಯೇ ಇರುವ ಅದ್ವೈತ ವೇದಾಂತಿಯ ಅಪಮಾನಕ್ಕಾಗಿಯೂ ಏನು ಸಾಹಸ ಬೇಕಾದರೂ ಮಾಡುತ್ತಾನೆ. ಇದಕ್ಕೆ ಯಾರನ್ನು ನಿಂದಿಸಬೇಕು ? ಎಲ್ಲಾ ಮತಭ್ರಾಂತರ ಸಂಕುಚಿತಜ್ಞಾನವೂ ಅವಿವೇಕವೂ ದ್ವೇಷಾಸೂಯೆಗಳೂ ಕಾರಣ ವಾಗಿವೆ.

ಪರಸ್ಪರ ಶತ್ರುಗಳು ಒಂದೇ ಸ್ಥಳದಲ್ಲಿ ಒಟ್ಟಿಗೆ ತೀವ್ರ ಸ್ಫೋಟಕಪ್ರವೃತ್ತಿ ಯಿಂದ ವಾಸಮಾಡುತ್ತಿದ್ದಾರೆ-ಎಂದರೆ ಸದ್ಯಃಪರಿಸ್ಥಿತಿಯ ವಾಸ್ತವ ಚಿತ್ರಣವಾದೀತು. ಸಮಾನ ರಾಷ್ಟ್ರೀಯತೆಯ ಭಾವನೆಯೇ ಈಗ ಅರ್ಥವಿಲ್ಲದ ಹುಚ್ಚಾಟಿಕೆಯಾಗಿದೆ.

ಅದಕ್ಕೆ ಕಾರಣವೇನು, ಎನ್ನುವರೋ, ನಿರ್ಜೀವವಾದ ಗತಕಾಲದ ಮೃತಸಂಪ್ರದಾಯದಲ್ಲಿರುವ ಅಂಧಾಭಿಮಾನವೂ ಧರ್ಮದ ಪವಿತ್ರವಾದ ಹೆಸರಿನಲ್ಲಿ ಉಪದೇಶಿಸಲ್ಪಡುತ್ತಿರುವ ಹುಚ್ಚುಹುಚ್ಚಾದ ಮೂಢಭಕ್ತಿ, ಮೂಢಾಚರಣೆಗಳ ತುಚ್ಛದಾಸ್ಯವೂ ಕಾರಣ. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳಬಹುದು. ಶಾಸ್ತ್ರಪ್ರಮಾಣದ ಪರಮಾಧಿಕಾರಕ್ಕೆ ವಿಧೇಯತೆಯೇ ನ್ಯಾಯಸಮ್ಮತವಾದುದೆಂಬ ಮೆರುಗಿನ ಶ್ಲಾಘ್ಯತೆಯನ್ನು ಪಡೆದಿರುವ ಆಧ್ಯಾತ್ಮಿಕ ಆತ್ಮಹತ್ಯೆಯೇ (Spiritual Suicide) ಇದು.

ಕೇವಲ ವೃತ್ತಿಗೆ, ಕೈಗಾರಿಕೆಗೆ, ಸಂಬಂಧಿಸದೆ ಮನೋವೈಶಾಲ್ಯವನ್ನುಂಟು ಮಾಡುವ ಸಾಂಸ್ಕೃತಿಕ ವಿದ್ಯಾಭ್ಯಾಸದ (Liberal educationl) ಸಾರವಿಳಿಸುವ ಕ್ರಮವನ್ನು ಪರಿಶೋಧಿಸದೆ, ವಿವೇಕಜ್ಞಾನವೂ ಪ್ರಾಯೋಗಿಕ ಸಂಶೋಧನೆಯೂ ಇಲ್ಲದೆ, ಅಥವಾ ವಿಜ್ಞಾನ ವಿಚಾರಗಳ ವ್ಯವಸ್ಥಿತವಾದ ವ್ಯಾಸಂಗವಿಲ್ಲದೆ, ಈ ಪರಸತ್ತ್ವೋಪಜೀವಿಯ ಭಾವನೆಗಳನ್ನು ಕಳೆಯುವದಕ್ಕೆ ಆಗುವದಿಲ್ಲ. (ವರ್ತಮಾನ ಕಾಲದ ವೈಜ್ಞಾನಿಕ ಸಂಶೋಧನೆಗಳ ಹಿತಕರವೂ ದಯಾಮಯ ವೂ ಆದ ಮಾನವೀಕರಣವೆಂಬ ಫಲಿತಾಂಶಗಳನ್ನು ಅರ್ಥಮಾಡಿಕೊಳ್ಳದಿರುವ ಯಾವ ಮತಕ್ಕೂ ಅಥವಾ ಯಾವ ಧರ್ಮಕ್ಕೂ ತನ್ನ ಬುದ್ಧಿಹೀನ ಭಕ್ತರನ್ನು ಸುಲಿಗೆಮಾಡುವ ಅಧಿಕಾರವಿಲ್ಲ). ರಾಮನ ಅಭಿಪ್ರಾಯದಂತೆ, ಹಿಂದಿನ ಧಾರ್ಮಿಕ ತತ್ತ್ವಗಳ ಅನೇಕ ಬೇರೆ ಬೇರೆ ಮತಗಳೂ ಪದ್ಧತಿಗಳೂ ಆಯಾ ಕಾಲದಲ್ಲಿ ಜ್ಞಾನವಾಗಿದ್ದ ವಿಜ್ಞಾನದ ಅಧಿಕಾರಯುತವಾದ ಆದೇಶಗಳ ಹೊರತು ಬೇರೆ ಏನಲ್ಲ. ಆದರೆ, ದುರ್ದೈವವೋ ಎನ್ನುವಂತೆ, ಇವುಗಳನ್ನು ಜನರು ಮೊದಲು ಮೊದಲು ಅತ್ಯುಗ್ರ ವಿರೋಧದಿಂದಲೂ ಅನಂತರ ಅತ್ಯುತ್ಸಾಹದಿಂದಲೂ ಸ್ವೀಕರಿಸುವ ಭರದಲ್ಲಿ, ನೂತನ ಜಾತ ಶಿಶುವನ್ನು ಪೋಷಿಸುವಾಗ ಜನ್ಮವಿತ್ತ ಸ್ವತಂತ್ರ ವಿಚಾರ-ಚಿಂತನಗಳೆಂಬ ತಾಯಿಯನ್ನು ಕೊಂದರು. ಆ ಉಪದೇಶಗಳನ್ನು ಕ್ರಮೇಣ ನಂಬಿಕೆಯ ಮೇಲೆ ಅಂಗೀಕರಿಸುತ್ತ, ಅನುಸರಿಸುತ್ತ, ಬಂದುದರಿಂದ ಒಬ್ಬ ಬಾಲಕನು, ತಾನು ಮನುಷ್ಯನೆಂದು ಅರಿಯುವದಕ್ಕೆ ಮೊದಲೇ ತಾನು ಕ್ರೈಸ್ತನೆಂದೋ ಮಹಮ್ಮದೀಯನೆಂದೋ ಹಿಂದೂ ಎಂದೋ ಕಾಣುವದಕ್ಕೆ ತೊಡಗಿದನು. ಧರ್ಮೋಪದೇಶಕರೆನಿಸಿಕೊಂಡವರು ಭೌತಿಕ ಅಥವಾ ಆಧ್ಯಾತ್ಮಿಕ ಪ್ರಕೃತಿಯನ್ನೂ ಆಕೆಯ ನಿಯಮಗಳನ್ನೂ ಯಾವ ಮೂಲಭೂತ ಸಂಶೋಧನೆಯಿಂದಲೂ ಶ್ರದ್ಧೆಯಿಂದಲೂ ಶ್ರಮದಿಂದಲೂ ಕಾರ್ಯತತ್ಪರತೆಯಿಂದಲೂ ಚಿತ್ತೈಕಾಗ್ರತೆಯಿಂದಲೂ ವ್ಯಾಸಂಗಮಾಡಿದ್ದರೋ ಆ ಯಾವ ಯೋಗ್ಯತೆಯನ್ನೂ ಅರ್ಥ ಮಾಡಿಕೊಳ್ಳದೆ, ಈ ಮತಸಿದ್ಧಾಂತಗಳನ್ನೂ ಪದ್ಧತಿಗಳನ್ನೂ ಆಯಾ ಮತಾನುಯಾಯಿಗಳು ತಮ್ಮಲ್ಲಿರುವ ಜಡತ್ವದಿಂದಲೂ ಸೋಮಾರಿತನದಿಂದಲೂ ಮತಚಾರ್ಯರುಗಳ ಮತ್ತು ದೊಡ್ಡ

ದೊಡ್ಡ ಮತಗ್ರಂಥಗಳ ಅಧಿಕಾರ–ಪ್ರಮಾಣಗಳ ಮೇಲೆ ಅಂಗೀಕರಿಸ ತೊಡಗಿದ್ದರಿಂದ, ಧಾರ್ಮಿಕ ಕ್ಷೇತ್ರದಲ್ಲಿ ಯಾವ ವಿಕಾಸವೂ ಮುನ್ನಡೆಯೂ ಇಲ್ಲದೆ ಜಡತೆಯೇ ಸ್ವಾಭಾವಿಕವಾದ ಪರಿಣಾಮವಾಯಿತು. ಸಿನೈ ಬೆಟ್ಟದ ಮೇಲೆ ಮಾಡಿದ್ದೆಂದು ಬೈಬಲ್‌ನಲ್ಲಿ ಹೇಳಿರುವ ಕ್ರಿಸ್ತನ ಧರ್ಮೋಪದೇಶದ (Christ's Sermon on the Mount) ಆಚರಣೆಯನ್ನೂ ವೈದಿಕ ಯಜ್ಞಗಳ ಅನುಷ್ಠಾನವನ್ನೂ ಕ್ರಮೇಣ ಅನೇಕ ಸಂದರ್ಭಗಳಲ್ಲಿ ಉದ್ದೇಶಪೂರ್ವಕವಾಗಿಯೇ ಜನರು ಬಿಡುತ್ತ ಬಂದರು.

ಆದರೆ ಆ ಸ್ಥಾನವನ್ನು ಪೊಳ್ಳು ಹೆಸರುಗಳಲ್ಲಿರುವ ಹೆಚ್ಚು ಪ್ರಬಲವಾದ ನಿಷ್ಠೆಯು ತುಂಬಿಕೊಂಡಿತು ಸತ್ತ್ವಹೀನವಾದ ಹೊರಗಿನ ಕೇವಲ ಆಚಾರ ಸಂಪ್ರದಾಯವೆಂಬ ಸತ್ತಹೆಣವನ್ನು ಪೂಜಿಸುವದಕ್ಕಾಗಿ ಒಳಗಿನ ತತ್ತ್ವನಿಷ್ಠೆಯೆಂಬ ಚೈತನ್ಯಶಕ್ತಿಯನ್ನು ಬಡಿದೋಡಿಸಿದರು. ದೈವಪ್ರೇರಿತ ಧರ್ಮಪ್ರಸಾರಕರೆಂದು ಉಪನಾಮಪಡೆದಿದ್ದ ಕ್ರಿಸ್ತ, ಮಹಮ್ಮದ, ವ್ಯಾಸ, ಶಂಕರರು ಪ್ರಾಮಾಣಿಕ ಕಾರ್ಯಕರ್ತರಾಗಿದ್ದರು. ಅವರು ಸ್ವರ್ಗದಿಂದ ಪವಿತ್ರಾಗ್ನಿಯನ್ನು ಅಪಹರಿಸಿದವರೆಂದು ಪ್ರಸಿದ್ಧರಾದವರು ಅವರ ಗ್ರಂಥಗಳು ಮೂಲ ಭೂತವಾದ ಪ್ರಕೃತಿಪುಸ್ತಕದ ಅಸ್ಪಷ್ಟವೂ ದುರ್ಬಲವೂ ಆದ ಭಾಗಶಃ ವಾಚನಮಾತ್ರವಾಗಿವೆ ಆದರೆ ಅವುಗಳನ್ನು ಪ್ರಕೃತಿ ಗ್ರಂಥದ ವಿರುದ್ಧವಾಗಿ ಅರ್ಥಮಾಡಿಕೊಂಡಿದ್ದರಿಂದ ಆ ಗ್ರಂಥಗಳನ್ನೂ ಅವುಗಳ ಲೇಖಕರಾದ ಕ್ರಿಸ್ತ, ಮಹಮ್ಮದ, ವ್ಯಾಸ ಶಂಕರಾದಿಗಳನ್ನೂ ಅಪಮಾನ ಗೊಳಿಸಿದಂತಾಯಿತು.

ಪ್ರಪಂಚದ ಸಂವಿಧಾನ–ವ್ಯವಸ್ಥೆಗಳೊಳಗೆ ಈ ಮತಸಂಪ್ರದಾಯಗಳು ಯಾವ ಉಪಯೋಗಕ್ಕೂ ಬಾರದವುಗಳೆಂದು ರಾಮನು ಹೇಳುವದಿಲ್ಲ. ಖಂಡಿತ ವಾಗಿಯೂ ಅವುಗಳ ಉಪಯೋಗವಿದೆ. ಬೀಜಗಳಿಗೆ ಹೊರ ಮುಸುಕಾಗಿದ್ದು ಅವುಗಳ ಜೀವರಕ್ಷಣೆಗೂ ಬೆಳವಣಿಗೆಗೂ ಕೆಲವು ಕಾಲದ ವರೆಗೆ ಅವಶ್ಯವಿದ್ದ ಅವುಗಳ ಹೊಟ್ಟಿನಂತೆ ಆ ಮತ ಸಂಪ್ರದಾಯಗಳಿದ್ದವು. ಆದರೆ ಹೊರಗಿನ ಒಣಸಿಪ್ಪೆಗಿಂತಲೂ ಎಷ್ಟೋ ಹೆಚ್ಚು ಬೆಲೆಯುಳ್ಳ ಒಳಗಿನ ಧಾನ್ಯವು, ಹೊರಹೊಮ್ಮಿ ಬೆಳೆದು ಆ ಸಿಪ್ಪೆಯನ್ನು ಕಳಚಿ ಒಗೆಯದಿದ್ದರೆ, ಅದರ ಬೆಳವಣಿಗೆಯ ವಿಶಿಷ್ಟ ಘಟ್ಟವನ್ನು ಮೀರಿದ ಮೇಲೆ ಆ ಸಿಪ್ಪೆಯೇ ಅದರ ಕಾಳಿಗೆ ಉಸಿರುಕಟ್ಟಿಸುವ ಸಾವಿನಸೆರೆಯಾಗುತ್ತದೆ. ವಿಕಾಸ ಹೊಂದದೆ ಇದ್ದಂತೆ ಇರುವ, ಮತ್ತೊಬ್ಬರಿಂದ ಪಡೆದ, ಎಂಜಲು ತಂಗಳಾದ ಪ್ರಕೃತಿಜ್ಞಾನವೇ ಹೊರಗಿನ ಒಣ ಸಿಪ್ಪೆ, ಹೊಟ್ಟು. ಉಸಿರು ಕಟ್ಟಿಸಿ ಕೊಲ್ಲುವ ನಿಸ್ಸಾರವಾದ ಈ ಹೊಟ್ಟನ್ನು ಜಾಡಿಸಿ ಒಗೆಯುವದಕ್ಕಾಗಿ ಮತ ಸ್ಥಾಪಕರ ಪ್ರಭುತ್ವ ಶಕ್ತಿಯು ಕೂಡ ತಮ್ಮ ಜನ್ಮಸಿದ್ಧವಾದ ಹಕ್ಕೇ ಹೊರತು

ಅದರಲ್ಲಿ ಲೌಕಿಕವನ್ನು ಮೀರಿದ್ದು ಏನೂ ಇಲ್ಲವೆಂದು ಪ್ರತಿಯೊಬ್ಬರೂ ಭಾವಿಸಬೇಕು.

ತಮ್ಮ ಎದುರಿಗೆ ಮನೆಯನ್ನು ಕಟ್ಟಿ ನಿಲ್ಲಿಸಿದ ಹೊರತು, ಆ ಮನೆಯ ಕಟ್ಟಡದ ಭೂಮಿಕೆಯ ಬೇರೆ ಬೇರೆ ಭಾಗಗಳ ಸ್ಥಾನ, ಅಳತೆ ಮೊದಲಾದವನ್ನು ತೋರಿಸಲು ಚಪ್ಪಟೆಯ ಮೇಲ್ಮೈ ಮೇಲೆ ರೇಖಿಸಿದ ನಕ್ಷೆಯನ್ನು (Plan) ತೋರಿಸಿದರೆ ಕೆಲವರಿಗೆ ಏನೂ ತಿಳಿಯುವದಿಲ್ಲ. ಹಾಗೆಯೇ ಈಗಿರುವ ವಸ್ತುಸ್ಥಿತಿಯ ರಚನಾಕ್ರಮದಲ್ಲಿಯೂ ಘಟನಾಕ್ರಮದಲ್ಲಿಯೂ ಹಿಂದಿನ ಒಂದು ಹೆಜ್ಜೆಯನ್ನಾಗಲೀ ಮುಂದಿನ ಒಂದು ಹೆಜ್ಜೆಯನ್ನಾಗಲೀ ಊಹಿಸುವದಕ್ಕೆ ಕೆಲವರಿಗೆ ಸಾಧ್ಯವೇ ಇಲ್ಲ. ಇಂಡಿಯಾದಲ್ಲಿ ಅಂಥವರ ಸಂಖ್ಯೆಯು ವೇಗವಾಗಿ ಕಡಿಮೆಯಾಗುತ್ತಿದೆ, ಎಂಬ ಆಶಾಭಾವನೆಯನು ಹಿಡಿಯಬೇಕಾಗಿದೆ. ಜನರ ಮನಸ್ಸನ್ನು ಅನಿಶ್ಚಿತವಾಗಿ ತೂಗಾಟ, ಹೊಯ್ದಾಟಗಳಿಂದ ತಪ್ಪಿಸುವದೂ ಕಾಣುವ ಎಲ್ಲ ಜೀವರಲ್ಲಿ ಐಕ್ಯವನ್ನೂ ಸ್ನೇಹವನ್ನೂ ಸಹಜ ಘನತೆಯನ್ನೂ ಅರಿಯುವಂತೆ ಮಾಡುವದೂ ವ್ಯವಹಾರದಲ್ಲಿ ಸ್ವಾಭಾವಿಕವೂ ಸಹಾಯಕರವೂ ಆದ ತಾರತಮ್ಯಗಳನ್ನು ಪಾಲಿಸಿದರೂ ಸಹಜವೂ ಸ್ಥಿರವೂ ಆದ ಸಂಯೋಜಿತ ಸಮಗ್ರತೆಯನ್ನು ಸಾಧಿಸುವದೂ, ರಾಮನು ತಿಳಿದಿರುವಂತೆ ಕ್ರಿಯಾಶಕ್ತಿಯುತ ವೇದಾಂತದ ಉದ್ದೇಶವಾಗಿದೆ. ಇಂಥಾ ವೇದಾಂತವು ಯಾರಿಗೆ ಬೇಡ ? ಯಾವ ಜನಾಂಗಕ್ಕೆ ಯಾವ ದೇಶಕ್ಕೆ ಬೇಡ ? ಆದರೆ ಇಂಡಿಯಾಕ್ಕೆ ಅದು ಅತ್ಯಂತ ಅವಶ್ಯವಾಗಿಯೂ ಅತ್ಯಂತ ಹೆಚ್ಚಾಗಿಯೂ ಬೇಕಾಗಿದೆ.

ಇಂಡಿಯಾದಲ್ಲಿ ಈಗಿರುವ ಆವಶ್ಯಕತೆಗಳನ್ನು ಪೂರೈಸುವದಕ್ಕಾಗಿಯೂ ಪ್ರೇಮವನ್ನೂ ಬೆಳಕನ್ನೂ ಹರಡುವ, ಉದ್ದೇಶಕ್ಕಾಗಿಯೂ, ರಾಮನು "Life Institution" "ಜೀವನ ಸಂಸ್ಥೆ" ಎಂಬ ಸಂಸ್ಥೆಯನ್ನು ಪ್ರಾರಂಭಿಸಬೇಕೆಂದು ಆಲೋಚಿಸಿದ್ದಾನೆ.

## Rough Outline

# ಧರ್ಮ ಮತ್ತು ದರ್ಶನ—ಇವುಗಳ ಸ್ಥೂಲರೂಪರೇಖೆ

ವಿವರಗಳನ್ನು ಬಿಟ್ಟು ಸ್ಥೂಲವಾದ ಹೊರಮೈ ರೂಪರೇಖೆ. ಈ ಸಂಸ್ಥೆಯು (Life Institution) ಮೊದಲು ಮುಖ್ಯವಾಗಿ ಧರ್ಮಗಳ ಮತ್ತು ತತ್ತ್ವಶಾಸ್ತ್ರಗಳ ತುಲನಾತ್ಮಕ ಅಧ್ಯಯನವನ್ನು ಆದರದಿಂದ ಅಂಗೀಕರಿಸುತ್ತದೆ.

**1. ಧರ್ಮ ಮತ್ತು ದರ್ಶನ**

ಪ್ರಾಚೀನ ಮತ್ತು ಅರ್ವಾಚೀನ ವಿವಾದಾತ್ಮಕ ಧರ್ಮ ಮತ್ತು ದರ್ಶನ ಪದ್ಧತಿಗಳನ್ನು ಅತ್ಯಂತ ರಾಗದ್ವೇಷರಹಿತವಾದ ಸಮತೆಯ ಮನಸ್ಸಿನಿಂದ, ಪಕ್ಷಪಾತ, ಮುನ್ನೊಲವುಗಳಿಲ್ಲದೆ, ಪ್ರಶಾಂತ ನ್ಯಾಯಾಧೀಶರಂತೆ, ಪ್ರಸನ್ನಸಾಕ್ಷಿಯಾಗಿ ಅಭ್ಯಾಸಮಾಡುವದಕ್ಕಾಗಿ ಅಭ್ಯರ್ಥಿಗಳಿಗೆ ಸಹಾಯಮಾಡುತ್ತದೆ. ಅವನವನ ಯೋಗ್ಯತೆಗೆ ತಕ್ಕನಾದ ಧಾರ್ಮಿಕ ಅಥವಾ ತಾತ್ತ್ವಿಕ ಗ್ರಂಥಗಳನ್ನು-ಅವಶ್ಯವಾದರೆ ಪ್ರೊಫೆಸರ್‌ರ ಸಹಾಯದಿಂದ ಪ್ರತಿಯೊಬ್ಬ ವಿದ್ಯಾರ್ಥಿಯೂ ತಾನೇ ವ್ಯಾಸಂಗಮಾಡಬೇಕು ; ಮತ್ತು ಅವನು ಹಗಲು ಓದಿದ ಗ್ರಂಥಭಾಗದಲ್ಲಿ ಗ್ರಹಿಸಿದ ವಿಷಯವನ್ನು ಸಂಜೆಯಲ್ಲಿ ಎಲ್ಲರೂ ಸೇರಿದ ಸಭೆಯಲ್ಲಿ ನಿರೂಪಿಸಬೇಕು ಅಂಥಾ ಸಂಕ್ಷಿಪ್ತ ವಿವರಣೆಯನ್ನು ಕೇಳಿದಮೇಲೆ, ಪ್ರತಿರಾತ್ರಿಯಲ್ಲಿಯೂ ಸಂಸ್ಥೆಯ ಬೇರೆ ಬೇರೆ ಸದಸ್ಯರು ವಿಚಾರಮಾಡಿರುವ ವಿಷಯಗಳನ್ನು ಹಿತವಾಗಿ ಹೊಂದಿಸಿ–ಸಮಂಜಸಮಾಡಿ–ತೋರಿಸುವದಕ್ಕಾಗಿ ಅಧ್ಯಕ್ಷಸ್ಥಾನದಲ್ಲಿರುವ ರಾಮನ ಮಧ್ಯಸ್ಥಗಾರಿಕೆಯಲ್ಲಿ ಪರಿಶೋಧಿಸುವ ಆದರೆ ಗೌರವಯುತವಾದ ಸಂಭಾಷಣೆಯು ನಡೆಯುತ್ತದೆ. ಹೀಗೆ ಎಲ್ಲರ ಬೌದ್ಧಿಕ ಶ್ರಮದ ಫಲಗಳನ್ನು ಪ್ರತಿಯೊಬ್ಬರೂ ಸವಿಯುತ್ತಾ ಪ್ರತಿಯೊಬ್ಬರೂ ತಮ್ಮ ತಮ್ಮ ಮಿದುಳಿನ ಕೆಲಸದ ಸಂಪಾದನೆಯನ್ನು–ಪ್ರತಿಯಾಗಿ–ಎಲ್ಲರೆದುರು ಇಡಲು ಪ್ರಯತ್ನಿಸುತ್ತಾ ಇದ್ದರೆ ಎಲ್ಲರ ಪರಸ್ಪರ ಸೌಹಾರ್ದ ಸ್ನೇಹಗಳೂ ಅನ್ಯೋನ್ಯ ಪರಿಜ್ಞಾನ ಪ್ರೀತಿಗಳೂ ಬೆಳೆಯುತ್ತವೆ.

ಸದ್ಯಃ ಪರಿಸ್ಥಿತಿಯ ಅಗತ್ಯಗಳಿಗೆ ಯೋಗ್ಯವಾದ ಇಂಥಾ ಬೌದ್ಧಿಕ ಹಾಗೂ

ಸಾಮಾಜಿಕ ಸಹಕಾರವು ಮಾನಸಿಕ ಕಾರ್ಯಸಾಮರ್ಥ್ಯವನ್ನು ಹೆಚ್ಚಾಗಿ ಬೆಳೆಸಿ ನಿಜವಾದ ಸಂಪತ್ತನ್ನು ನೀಡಬೇಕು.

ಇಂಡಿಯಾದೇಶದಲ್ಲಿ ಹೆಚ್ಚು ನೇರವಾದ ಬೇಡಿಕೆಯಿರುವ ಧರ್ಮ ಮತ್ತು ದರ್ಶನ ಶಾಸ್ತ್ರಗಳ ಮೂಲಕವಾದ ವಿದ್ಯಾಭ್ಯಾಸದ ಸಹಕಾರ ಪದ್ಧತಿಯ ರುಚಿಯನ್ನು

**2. ವಿಜ್ಞಾನ**

ಹೊಸದಾಗಿ ಸೇರಿದ ವಿದ್ಯಾರ್ಥಿಗಳಿಗೆ ನೀಡಿದ ಮೇಲೆ ಸಸ್ಯ ವಿಜ್ಞಾನ (Botany), ಪ್ರಾಣಿವಿಜ್ಞಾನ (Zoology), ಭೂವಿಜ್ಞಾನ (Geology) ರಸಾಯನ ವಿಜ್ಞಾನ (Chemistry) ಖಗೋಳವಿಜ್ಞಾನ (Astronomy), ವಿದ್ಯುದ್ವಿಜ್ಞಾನ (Electricity) ಇತ್ಯಾದಿ, ವಿಜ್ಞಾನದ ಬೇರೆ ಬೇರೆ ಶಾಸ್ತ್ರಶಾಖೆಗಳು ಅಭ್ಯಾಸ ಕ್ರಮದಲ್ಲಿ ಸೇರಿಸಲ್ಪಡುತ್ತವೆ. ಹೀಗೆ ವಿಜ್ಞಾನದ ಬೇರೆ ಬೇಗೆ ಅಭ್ಯಾಸಕ್ರಮಗಳ ಪರಿಚಯದ ಜೊತೆಗೆ ಒಂದು ಪುಸ್ತಕಭಂಡಾರವೂ ಪ್ರಯೋಗಶಾಲೆಯೂ (Laboratory) ಗ್ರಹನಕ್ಷತ್ರ ಸಮೀಕ್ಷಾಮಂದಿರವೂ (Observatory) ಇವೇ ಮೊದಲಾದವು ಖಂಡಿತವಾಗಿಯೂ ಬೆಳೆಯಬೇಕು.

ಈ ಸಂಸ್ಥೆಯು ವಿಜ್ಞಾನವನ್ನು ಜನಪ್ರಿಯಗೊಳಿಸುವ ಪ್ರಯತ್ನದಲ್ಲಿ, ಕಣ್ಣಿಗೆ ಹೊಡೆಯುವಂತೆ ಎದ್ದುಕಾಣುವ ಕೆಲವು ಧಾರ್ಮಿಕ ತಪ್ಪು ತಿಳಿವಳಿಕೆಗಳನ್ನೂ ವೈಮನಸ್ಯಗಳನ್ನೂ ಕಳೆಯುವದರ ಮೂಲಕ ಜನರ ಶಕ್ತಿಗಳನ್ನು ಹೆಚ್ಚು ವಿಚಾರ ಪೂರ್ವಕವೂ ಪ್ರಯೋಜನಕರವೂ ಆದ ದಿಶೆಗಳಲ್ಲಿ ನಿಯೋಜಿಸುವ ಗುರಿಯನ್ನು ಹೊಂದಿದೆ. ಇದೆಲ್ಲದರ ಜೊತೆಗೆ, ಈ ಸಂಸ್ಥೆಯಲ್ಲಿ ಅತ್ಯಂತ ಧಾರ್ಮಿಕ ಮನೋಭಾವದಿಂದ ವಿಜ್ಞಾನವನ್ನು ಅಭ್ಯಾಸ ಮಾಡಬೇಕಾಗಿದೆ ವೇದಾಂತಿಕ ಮನೋಭಾವವನ್ನು ವ್ಯವಹಾರದಲ್ಲಿ ಪ್ರಯೋಗಿಸುವದಕ್ಕಾಗಿ ಅಥವಾ ಕ್ರಿಯಾತ್ಮಕ ವೇದಾಂತದ ಅಭ್ಯಾಸಕ್ಕಾಗಿ ಲೌಕಿಕವೆಂದು ತೋರುವ ವಿಜ್ಞಾನವನ್ನೂ ಸಾಹಿತ್ಯವನ್ನೂ ಇತರ ಶಾಸ್ತ್ರಗಳನ್ನೂ ಅಧ್ಯಯನ ಮಾಡಬೇಕಾಗಿದೆ. ಆಫ್ ಅಗಾಸ್ಸಿಜ್ (Of Agassiz) ಎಂಬ ಪ್ರಸಿದ್ಧ ಪ್ರಕೃತಿಶಾಸ್ತ್ರಜ್ಞನಿಗೆ ಚರ್ಚ್‌ದೇವಾಲಯಕ್ಕಿಂತ ಪ್ರಯೋಗಶಾಲೆಯೇನೂ ಕಡಿಮೆ ಪವಿತ್ರವಾಗಿರಲಿಲ್ಲ ನೈತಿಕ ನಿಯಮಕ್ಕಿಂತ ಭೌತಿಕ ವಿದ್ಯಮಾನವೇನೂ ಕಡಿಮೆ ಪಾವನವಾಗಿರಲಿಲ್ಲ. ಪ್ರಕೃತಿಯಲ್ಲಿರುವ ಬೇರೆ ಬೇರೆ ಜಾತಿಗಳ ಅನುರೂಪತೆಯ–ಸಂಬಂಧಸಾಮ್ಯದ–ಸುಳಿವನ್ನು ಕಂಡುಹಿಡಿಯುವ ಕಾರ್ಯವು ಅವನಿಗೆ " ದೇವರ ಆಲೋಚನೆಗಳನ್ನೇ ಪುನಃ ಆಲೋಚಿಸುವ " ಕಾರ್ಯವಾಗಿದ್ದಿತು.

**3. ಕೈಗಾರಿಕೆಯ ಕಲೆಗಳು**

ಇಂಡಿಯಾದೇಶದಲ್ಲಿ ಈಗ ಅತ್ಯಗತ್ಯವಾದ ಕೈಗಾರಿಕೆಯ ಕಲೆಗಳನ್ನು ಸೇರಿಸಿಕೊಳ್ಳುವ ಮೂರನೆಯ ಶಾಖೆಯನ್ನು ಪ್ರಾರಂಭಿಸುವದಕ್ಕೆ ಸಂಸ್ಥೆಯ ಕಾರ್ಯಾಂಗಗಳನ್ನು ಸಕಾಲದಲ್ಲಿ ಬಡಾಯಿಸುತ್ತದೆ. ಅದರ ಆವಶ್ಯಕತೆ ಎಷ್ಟು ಎನ್ನುವದನ್ನು ಈಗೇನೂ ಹೇಳಬೇಕಾಗಿಲ್ಲ. ಅಮೆರಿಕಾ ಮತ್ತು ಯೂರೋಪ್‌ಗಳಲ್ಲಿರುವ ಮಹಾ ವಿಶ್ವವಿದ್ಯಾನಿಲಯಗಳಲ್ಲಿ ಕೆಲವು (ಯೇಲ್, ಹಾರ್ ವಾರ್ಡ್ ಸ್ಟ್ಯಾಂಡ್‌ಫರ್ಡ್, ಚಿಕಾಗೋ ಇವುಗಳು ಉದಾಹರಣೆಗೆ) ಸಂಪೂರ್ಣ ಖಾಸಗಿ ಸಂಸ್ಥೆಗಳು. ಇಂಡಿಯಾ ದೇಶದ ಜನರು ತಮ್ಮ ವಿದ್ಯಾಭ್ಯಾಸಕ್ಕಾಗಿ ಇನ್ನೂ ಸರ್ಕಾರದ ಮಾದರಿಗಳನ್ನೇ ಎದುರು ನೋಡುತ್ತಾ ತಮ್ಮ ಸ್ವಂತ ಅಗತ್ಯಗಳನ್ನು ಪರಿಗಣಿಸದಿರುವದು ಪರಿಶೋಚನೀಯವಾದುದು.

ರಾಮನು ಯೋಚಿಸಿರುವ ಜೀವನ ಸಂಸ್ಥೆಯಲ್ಲಿ (Life Institute) ವೈಜ್ಞಾನಿಕವಾದ ಸಮದೃಷ್ಟಿಯಿಂದ ಸಂಪ್ರದಾಯ ಸಮ್ಮತವಾದ ಲೇಖನಗಳನ್ನೂ ಹಾಗೆಯೇ ಸಂಪ್ರದಾಯವಿರುದ್ಧವಾದ ಲೇಖನಗಳನ್ನೂ ಕೂಡ ಸ್ವಾಗತಿಸುತ್ತಾನೆ. "ಸತ್ಯ, ಸಂಪೂರ್ಣಸತ್ಯ, ಸತ್ಯದ ಹೊರತು ಅನ್ಯಥಾ ಇಲ್ಲ". "Truth, the whole Truth; and nothing but the Truth". ಈ ವಾಕ್ಯವೇ ಸಂಸ್ಥೆಯ ಗುರಿನುಡಿಯಾದ ಸಾಂಕೇತಿಕ ಸೂತ್ರವಾಕ್ಯವಾಗಿರುತ್ತದೆ. (Watch-word).

ಓಂ! ಓಂ! ಓಂ!

---

ಈ ಮೇಲಿನ ಲೇಖನವು ಮಧುರೆಯ ಶಾಂತಿ ಆಶ್ರಮದ ಸ್ವಾಮಿಶಿವಗಣ ಆಚಾರ್ಯರಿಗೆ ಸಂಬೋಧಿಸಲ್ಪಟ್ಟಿತ್ತು.

## National Dharma

## ರಾಷ್ಟ್ರ ಧರ್ಮ

‘ ಜಗದಲಿ ಎಷ್ಟೋ ಪಂಥಗಳು ಮಗುಳೆಷ್ಟೋ ಮತಗಳು,
ಸುತ್ತಿ ಸುತ್ತಿ ಜನಮನ ಸುತ್ತಿಸುವ ಅಷ್ಟೇ ಪಥಗಳು ; ದುಃಖಿಯುಹ
ಜಗಕೆ ಬೇಕಾಗಿರುವದೆಲ್ಲಾ, ಕರುಣೆಯ ಕಲಾಮಾತ್ರವಲ್ಲದೆ ಬೇರಲ್ಲಾ.’

ಸೂರ್ಯನು ಮುಳುಗುತ್ತಿದ್ದಾನೆ ಆಳವಾದ ನಿಡುಸುಯಿಲುಗಳಿಂದ ಈ ಮುಂದಿನ ಭಾವಗೀತೆಯ ಗಾನ ನಡೆಯುತ್ತಿದೆ ; ಹರಿಯುತ್ತಿರುವ ಕಣ್ಣೀರುಗಳಿಂದ ಇದು ಬರೆಯಲ್ಪಡುತ್ತಿದೆ

ಒಂದು ವಿಚಿತ್ರ ದೃಶ್ಯವ ನಾನೊಮ್ಮೆ ಕಂಡೆ, ಕೆಲವೊಮ್ಮೆ ಮತ್ತದೇ ತೋರುವದು.

ಅದು ದಿಟವೋ ಸಟೆಯೋ ನಾನರಿಯೆ ; ಏಕೆನೆ ಎನಗೆ ಸ್ವಸ್ಥತೆಯಿರಲಿಲ್ಲ ವೆಂದರವರು ;

ಆದೊಡೆ, ಆಗಾಗ ರವಿಯು ಮುಳುಗುತಿರುವಾಗ, ಎನ್ನ ಕಂಗಳಲಿ ಕಂಬನಿಯು ತುಂಬುವದು.

ಮತ್ತಾಗ ಅದೇ ದೃಶ್ಯ ತೋರುವದು, ನಾನೆನ್ನ ಇಷ್ಟವಸ್ತುವ (ಇಂಡಿಯಾ) ಕಾಂಬೆ ;

ಹಗಲು ಮೆಲುವಾಗಿ ಜಗುಳುತಿದ್ದುದು ಕೆಳಗೆ ; ಮಂಚಮಾರುತ ಸತ್ತೇ ಹೋಗಿತ್ತದು ;

ಪಶ್ಚಿಮದಿಂದ ಜಲರಾಶಿ ಮೆಲ್ಲ ಮೆಲ್ಲನೆ ಉರುಳುರುಳಿ ಬಂದಿತ್ತು ; ಆಗಸವು, ಮೋಡಗಳು, ಕಡಲಲೆಗಳೆಲ್ಲ ಕರಗುತೊಂದೆ ಮಹಿಮೆಯ ಮೆರೆಯುತ್ತಿದ್ದವು ,

ತೀವ್ರರಕ್ತವರ್ಣದ ಭಾನುವಿಂದೆಲ್ಲ ಪ್ರಜ್ವಲಿತವಾಗಿ ಕಡುಗೆಂಪಗಿದ್ದುದು. ಮೌನದಿಂ ನಿಂದು ಕಳೆದ ಭವ್ಯ ದಿನಗಳ ನೆನೆದು ದಿಟ್ಟಿಸಿ ನೋಡಿದೆನು.

ಬಹಳ ಹಿಂದೆ ಕಳೆದ ದಿನಗಳ ದುಃಖಿದಾ ಸ್ಮೃತಿ ಎದ್ದುದು ಮನದಿ, ಎನ್ನ ಯೌವನವು, ಶೈಶವವು ಬಂದುದು ಮತ್ತೆ, ಎನ್ನ ಮನವ ಕವಿದಿತ್ತು ಆ ನೆನಹು.

ಮುಳುಗುತಿಹ ಕೆಂಪು ಸೂರ್ಯನ ಎವೆಯಿಕ್ಕದೇ ನೋಡುತಿದ್ದೆ. ನುಗ್ಗಿದುದು ಆ ಭೂತಸ್ಮೃತಿ ಎನ್ನ ಚೇತನದ ಮೇಲ್, ಸತ್ತವರು ಹತ್ತಿರವೆ ನಿಂತಿರಲು

ಜೀವದಿಂದವರ ಕೆನ್ನೆಗಳು ಮತ್ತೆ ಬಿಸಿಯಾಗಿಹವು, ಅವರ ವಸ್ತ್ರಗಳು ಕಳಚಿಹವು ; ಮತ್ತೊಮ್ಮೆ ಎನ್ನಕಿವಿಗಳ ಮೇಲೆ ಅವರ ದನಿಗಳು ಮದುವೆ ಗಂಟೆಗಳಂತೆ ಬಾರಿಸಿದವು ,

ಆ ಕೆಂಪು ಭಾಸ್ಕರನನ್ನು ನಿಟ್ಟಿಸುತ್ತಿದ್ದವು ಅವರ ನೇತ್ರಗಳು ಎನ್ನ ಕಂಗಳೊಡನೆ, ಅಂದಿನಿಂದ ಬಗೆಬಗೆಯ ಅನುಭವದ ಹಲವು ವರ್ಷಗಳು ಹಲವು ದಿನಗಳು ಕಳೆದಿಹವು ;

ದೂರ ವಿಸ್ತರದಿ ಅಲೆದಿಹೆನು, ಆದರೂ ನಾ ನೆಮ್ಮದಿಯಿಂದಿಲ್ಲವೆಂದು ಹೆದರಿಹೆನು.

ಅದೇಕೆನಲು ಎನ್ನ ಕಣ್ಣುಗಳು ಕಂಬನಿಯಿಂದ ತುಂಬುವವು, ಆಗಾಗ ಸೂರ್ಯನಿಳಿಯುವಾಗ ;

ಮತ್ತಾಗ ಆ ದೃಶ್ಯವೇ ಬರುತಿಹುದು, ಮೇಣ್ ನಾನೆನ್ನ ಇಷ್ಟ ದೇವತೆಯ ಭಾರತಾಂಬೆಯ ಕಾಣುತಿಹೆನು.

ಓ ಅಸ್ತನಾಗುತ್ತಿರುವ ಸೂರ್ಯನೆ ! ನೀನು ಭಾರತದಲ್ಲಿ ಉದಯವಾಗುವವನಿದ್ದಿ ! ಆ ಮಹಿಮಾ ವೈಭವದ ಭಾರತಭೂಮಿಗೆ ರಾಮನ ಈ ಸಂದೇಶವನ್ನು ದಯಮಾಡಿ ಒಯ್ಯುವೆಯ ? ಪ್ರೇಮದ ಈ ಕಂಬನಿಗಳು ಭಾರತದೇಶದ ಹೊಲಗಳಲ್ಲಿ ಮುಂಜಾನೆಯ ಮಂಜಿನ ಹನಿಗಳಾಗಲಿ ! ಶೈವನು ಶಿವನನ್ನೂ ವೈಷ್ಣವನು ವಿಷ್ಣುವನ್ನೂ ಬೌದ್ಧನು ಬುದ್ಧನನ್ನೂ ಕ್ರೈಸ್ತನು ಕ್ರಿಸ್ತನನ್ನೂ ಮಹಮ್ಮದೀಯನು ಮಹಮ್ಮದನನ್ನೂ ಪೂಜಿಸುವಂತೆ, ತಪಿಸಿ ಕೆಂಪೇರಿರುವ ಹೃದಯದಿಂದ ಭಾರತಾಂಬೆಯನ್ನು ನೋಡಿ, ಶೈವನಾಗಿಯೋ ವೈಷ್ಣವನಾಗಿಯೋ ಬೌದ್ಧನಾಗಿಯೋ ಕ್ರೈಸ್ತನಾಗಿಯೋ ಮಹಮ್ಮದೀಯನಾಗಿಯೋ ಪಾರ್ಸಿಯಾಗಿಯೋ ಸಿಖ್ಖನಾಗಿಯೋ ಸಂನ್ಯಾಸಿಯಾಗಿಯೋ ಪರಯನಾಗಿಯೋ ಆಕೆಯ ಮಕ್ಕಳಲ್ಲಿ ಯಾರಾದರೂ ಆಗಿ, ಅಥವಾ ಈ ಎಲ್ಲವೂ ಆಗಿ ಪೂಜಿಸುತ್ತೇವೆ. ನನ್ನ ಗಂಗಾಜಿಯಲ್ಲಿಯೂ ನನ್ನ ಕಾಳೀ ಮಾತೆಯಲ್ಲಿಯೂ ನನ್ನ ಇಷ್ಟದೇವನಲ್ಲಿಯೂ ನನ್ನ ಸಾಲಿಗ್ರಾಮದಲ್ಲಿಯೂ ಓ ಭಾರತ ಮಾತೆಯೇ, ನಿನ್ನ ಈ ಎಲ್ಲಾ ತೋರಿಕೆಗಳಲ್ಲಿಯೂ ನಿನ್ನನ್ನೇ ಆರಾಧಿಸುತ್ತೇನೆ ಬಾಲ್ಯದಲ್ಲಿ ಬಹಳ ಪ್ರೀತಿಯಿಂದ ಭಾರತದ ಮಣ್ಣನ್ನೇ ತಿನ್ನುವದಕ್ಕೆ ಇಷ್ಟಪಟ್ಟ ಕೃಷ್ಣಪರಮಾತ್ಮನು

ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತ ಚೇತಸಾಂ ।
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ (ಗೀ.)

"ಅವ್ಯಕ್ತದಲ್ಲಿ ಮನಸ್ಸನ್ನು ಇಟ್ಟವರಿಗೆ ಬಹಳ ಕಷ್ಟವಾಗುತ್ತದೆ ;

ದೇಹಾಭಿಮಾನವುಳ್ಳವರಿಗೆ ಅವ್ಯಕ್ತ ಮಾರ್ಗವು ದುಸ್ಸಾಧ್ಯವಾದುದು ಎಂದು ಹೇಳಿದ್ದಾನೆ ಬಹಳ ಒಳ್ಳೆಯದು, ಮಧುರಾನಾಥನಾದ ಮಧುರ ಕೃಷ್ಣ ! ಯಾರ ಆಸ್ತಿಯೆಲ್ಲಾ ಒಂದು ಮುದಿಯೆತ್ತೋ ಮುರುಕುಮಂಚದ ಒಂದು ಭಾಗವೋ ಹಳೆಯ ಕೈಕೊಡಲಿಯೋ ಬೂದಿಯೋ ಹಾವೋ ಹೆಣದ ಖಾಲಿ ತಲೆಬುರುಡೆ ಆಗಿದೆಯೋ ಅಂಥಾ ದಿವ್ಯ ಶಿವರೂಪ ಮಹಾದೇವನ ಆರಾಧನಾ ಪಥವು ನನ್ನದಾಗಲಿ. ಆ ರೂಪವು ಶಿವಮಹಿಮ್ನ ಸ್ತೋತ್ರದ ಮಹಾದೇವನದಿರಬಹುದೆ ? ಅಲ್ಲ, ಅವನು ಹೊಟ್ಟೆಗಿಲ್ಲದೆ ಹಸಿವಿನಿಂದ ಕಂಗಾಲಾಗಿರುವ ಜೀವಂತ ನಾರಾಯಣನಾದ ಹಿಂದುಸ್ಥಾನಿ ಹಿಂದು. ಇದೇ ನನ್ನ ಧರ್ಮ ; ಪ್ರತಿಯೊಬ್ಬ ಭಾರತೀಯನಿಗೂ ಇದೇ ಧರ್ಮವಾಗಬೇಕು ; ಇದೇ ಸಮಾನ ಪಥವಾದ ಕ್ರಿಯಾತ್ಮಕ ವೇದಾಂತ, ವ್ಯವಹಾರ ಸಾಧ್ಯ ವೇದಾಂತ ಅಥವಾ ದೈವೀ ಪ್ರೇಮ. ಉತ್ಸಾಹವಿಲ್ಲದ ಉದಾಸೀನತೆಯ

ಮೆಚ್ಚಿಗೆಯಾಗಲಿ ಸಹನೆಯಾಗಲಿ ಪ್ರಯೋಜನವಿಲ್ಲ. ರಾಷ್ಟ್ರಧರ್ಮದ ಕ್ರಿಯಾತ್ಮಕ ವಾದ ಈ ಚೇತನಶಕ್ತಿಯನ್ನು ಪ್ರಸಾರ ಮಾಡುವದಕ್ಕಾಗಿ ಭಾರತದ ಪ್ರತಿಯೊಂದು ಶಿಶುವಿನಿಂದಲೂ ನನಗೆ ಕ್ರಿಯಾಶೀಲ ಸಹಕಾರವು ಬೇಕು. ಶಿಶುವು ಬಾಲ್ಯವಿಲ್ಲದೆ ತರುಣನಾಗುವದಿಲ್ಲ. ಸಮಗ್ರ ರಾಷ್ಟ್ರವೇ ತಾನೆಂಬ ಭಾವನೆಯು ದೇಹದ ಪ್ರತಿಯೊಂದು ನರನಾಡಿಯಲ್ಲಿಯೂ ಮಿಡಿಯುತ್ತಿದ್ದ ಹೊರತು ಒಬ್ಬ ಮನುಷ್ಯನು ಸರ್ವಾತ್ಮನಾದ ದೇವನೇ ತಾನೆಂಬ ಅನುಭವವನ್ನು ಎಂದೂ ಪಡೆಯಲಾರನು. ಪ್ರತಿಯೊಬ್ಬ ಭಾರತಪುತ್ರನಲ್ಲಿಯೂ ಸಮಗ್ರ ಭಾರತವೇ ಮೈವೆತ್ತಿದೆ ಎಂಬದನ್ನು ಮನಗಂಡು ಭಾರತದ ಪ್ರತಿಯೊಬ್ಬ ಪುತ್ರನೂ ಇಡೀ ರಾಷ್ಟ್ರದ ಸೇವೆಗಾಗಿ ಟೊಂಕ ಕಟ್ಟಿ ನಿಲ್ಲಲಿ. ಪ್ರತಿಯೊಂದು ನಗರವೂ ಪಟ್ಟಣವೂ ಗ್ರಾಮವೂ ಕುಟುಂಬವೂ ವ್ಯಕ್ತಿಯೂ ಪ್ರಾಣಿಯೂ ಸಸ್ಯಜಾತಿಯೂ ನದಿಯೂ ಸಮುದ್ರವೂ ಕಲ್ಲೂ ಮಣ್ಣೂ ಪವಿತ್ರ ಭಾರತದೇವಿಯ ವ್ಯಕ್ತರೂಪವಾಗಿದೆ. ಸಂಪೂರ್ಣ ಮಾತೃಭೂಮಿಯನ್ನೇ ಮಹಾದೇವಿಯ ರೂಪವಾಗಿ ಕಾಣುವದರಿಂದ, ಅದರ ಪ್ರತಿಯೊಂದು ಅಂಶದ ಅಭಿವ್ಯಕ್ತಿಯೂ ಪೂರ್ಣದಲ್ಲಿ ಭಕ್ತಿಮಾಡುವದಕ್ಕೆ ನಮ್ಮನ್ನು ಪ್ರೇರಿಸಲಿ ಇದಕ್ಕೆ ಈಗ ಬಹಳ ಹೆಚ್ಚಿನ ಸಮಯವಾಗಿಲ್ಲವೆ ? ದುರ್ಗಾ ಪ್ರತಿಮೆಯಲ್ಲಿ ಪ್ರಾಣಪ್ರತಿಷ್ಠೆ ಮಾಡುವದರ ಮೂಲಕ ಹಿಂದೂಗಳು ಅದರಲ್ಲಿ ರಕ್ತಮಾಂಸಗಳನ್ನು ತುಂಬುತ್ತಾರೆ. ಅದಕ್ಕಿಂತಲೂ ಹೆಚ್ಚು ನಿಜವಾದ ಭಾರತಮಾತಾ ರೂಪ ದುರ್ಗಾದೇವಿಯಲ್ಲಿ ಸಹಜವಾಗಿರುವ ಮಹಿಮೆಯು ಆವಿರ್ಭಾವವಾಗುವಂತೆ ಮಾಡಿ, ಜೀವವನ್ನೂ ಜ್ವಲಂತ ಶಕ್ತಿಯನ್ನೂ ಆವಾಹಿಸುವದು ಅತ್ಯವಶ್ಯವಲ್ಲವೆ ? ನಮ್ಮ ಹೃದಯಗಳನ್ನೆಲ್ಲಾ ಒಟ್ಟುಗೂಡಿಸಿದರೆ, ತಲೆಗಳೂ ಕೈಗಳೂ ಸ್ವಾಭಾವಿಕವಾಗಿಯೇ ಕೂಡಿಕೊಳ್ಳುತ್ತವೆ.

ಪ್ರಪಂಚದ ಮಹಾಯೋಧನೂ ಧರ್ಮೋಪದೇಶಕನೂ ಆದ ಕೃಷ್ಣನು, “ಶ್ರದ್ಧಾಮಯೋऽಯಂ ಪುರುಷಃ ಯೋ ಯಚ್ಛ್ರದ್ಧಸ್ಸ ಏವ ಸಃ” “ಮನುಷ್ಯನು ಶ್ರದ್ಧಾಮಯನು ; ಯಾರ ಶ್ರದ್ಧೆ ಯಾವದೋ ಅದೇ ಅವನು.” ಎಂದು ಹೇಳಿದ್ದಾನೆ.

ಪ್ರೀತಿಯ ಸಂಪ್ರದಾಯನಿಷ್ಠ ಭಾರತೀಯರು ಶಾಸ್ತ್ರದಂತೆ ಸರಿಯಾದ ರೀತಿಯಲ್ಲಿ ಆಚರಿಸುತ್ತಾರೆ. ರಾಷ್ಟ್ರದ ಆಪತ್ತಿಧರ್ಮವು, ಕಠಿಣವಾದ ಜಾತಿನಿಯಮಗಳನ್ನು ಸಡಿಲಗೊಳಿಸಬೇಕೆಂದೂ ತೀಕ್ಷ್ಣವಾದ ವರ್ಣಭೇದ–ವರ್ಗಭೇದಗಳನ್ನು ರಾಷ್ಟ್ರದ ಬಂಧು ಭಾವನೆಗೆ ಅಧೀನವಮಾಡಬೇಕೆಂದೂ ಅಧಿಕಾರಯುತವಾಗಿ ಕೇಳುತ್ತದೆ.

ಯಾವ ಭಾರತವು, ತಲೆತಪ್ಪಿಸಿಕೊಂಡು ಪಲಾಯನಮಾಡಿ ಬಂದ ಎಲ್ಲಾ ದೇಶ ಭ್ರಷ್ಟರಿಗೂ ಸಾಹಸಕರ್ಮಿಗಳಿಗೂ ತನ್ನ ಬಂದರುಗಳನ್ನು ತೆರೆದಿಟ್ಟಿತ್ತೋ ಎಷ್ಟೋ ಜನಾಂಗಗಳನ್ನೂ ದೇಶಗಳನ್ನೂ ಪೋಷಿಸಿತ್ತೋ ಅಂಥಾ ರಾಷ್ಟ್ರವು ಈಗ ತನ್ನ ಸ್ವಂತ ಮಕ್ಕಳಿಗೇ ತುಣುಕು ರೊಟ್ಟಿಯನ್ನೂ ಕೊಡಲಾರದಾಗಿದೆಯೆಂಬದು ನಿಮಗೆ ಕಾಣುವದಿಲ್ಲವೇ ? ತಮ್ಮ ತಮ್ಮ ಮಟ್ಟವನ್ನು ಕಂಡುಕೊಳ್ಳುವದಕ್ಕೂ ಪಡೆಯುವದಕ್ಕೂ ಪ್ರತಿಯೊಬ್ಬರಿಗೂ ಸ್ವಾತಂತ್ರ್ಯವಿರಬೇಕು. ತಲೆಯನ್ನು ಎಷ್ಟು ಎತ್ತರ ಬೇಕಾದರೂ ಇಟ್ಟುಕೊಳ್ಳಿ ; ಆದರೆ ನಿಮ್ಮ ಕಾಲುಗಳನ್ನು ಮಾತ್ರ ಯಾವಾಗಲೂ ಸಮಾನ ಭೂಮಿಯ ಮೇಲೇ ಇಟ್ಟುಕೊಂಡಿರಿ. ದುರ್ಬಲರಾದವರು ಒಪ್ಪಿದರೂ ಅವರ ತಲೆಯ ಮೇಲಾಗಲೀ ಕುತ್ತಿಗೆಯ ಮೇಲಾಗಲೀ ಭುಜಗಳ ಮೇಲಾಗಲೀ ನಿಮ್ಮ ಕಾಲುಗಳನ್ನಿಡಬೇಡಿ.

ತರುಣ ಭಾವೀ ಸುಧಾರಕರೆ ! ಭಾರತದ ಪ್ರಾಚೀನ ಪದ್ಧತಿಗಳನ್ನೂ ಅಧ್ಯಾತ್ಮವನ್ನೂ ಜರೆಯಬೇಡಿ. ವೈಮನಸ್ಯದ ಹೊಸದೊಂದು ಅಪಸ್ವರವನ್ನು ಸೇರಿಸಿದ್ದರಿಂದ ಭಾರತೀಯರಲ್ಲಿ ಐಕಮತ್ಯವನ್ನು ಸಾಧಿಸಿದಂತಾಗುವದಿಲ್ಲ. ಭಾರತದ ಭೌತಿಕ ಪತನಕ್ಕೆ ಭಾರತದ ಧರ್ಮವನ್ನೂ ಅಧ್ಯಾತ್ಮವನ್ನೂ ದೂಷಿಸಬೇಡಿ. ಮುಳ್ಳು ಬೇಲಿಗಳೂ ಚುಚ್ಚುಗಿಡ ಸಾಲುಗಳೂ ಇಲ್ಲದಿದ್ದರಿಂದ ಫಲಪುಷ್ಪಗಳ ತೋಟವನ್ನು ದರೋಡೆಮಾಡಿದ್ದಾರೆ. ಸುಧಾರಣೆಯ ಮತ್ತು ಮೇಲ್ಮೆಯ ಹೆಸರಿನಲ್ಲಿ ತೋಟದ ಮಧ್ಯದಲ್ಲಿರುವ ಗುಲಾಬಿಯ (ಹೂ) ಗಿಡಗಳನ್ನೂ ಹಣ್ಣಿನ ಮರಗಳನ್ನೂ ಕಿತ್ತೊಗೆಯುವದಕ್ಕೆ ಹುಚ್ಚೆದ್ದು ದುಡುಕಬೇಡಿ. ಓ ಪುಣ್ಯಾತ್ಮರಾದ ಕಳ್ಳಿ ಮುಳ್ಳುಗಳ ಬೇಲಿಗಳೆ, ನೀವೇ ಸಂರಕ್ಷಕ ವಸ್ತುಗಳು ; ಭಾರತದಲ್ಲಿ ಬೇಕಾಗಿರುವದು ನೀವು.

ಶೂದ್ರರ ಶ್ರಮಕಾರ್ಯಗಳ ಘನತೆಯನ್ನು ರಾಮನು ಶ್ಲಾಘಿಸಿ ಕೀರ್ತಿಸಿದರೆ, ಸತ್ತ್ವರಜೋಗುಣಗಳಿಗಿಂತಲೂ ತಮೋಗುಣವು ಹೆಚ್ಚೆಂದು ಹೊಗಳಿದಂತಲ್ಲ. ಭಾರತದಲ್ಲಿ ತಮಸ್ಸನ್ನು ಸಾಕಷ್ಟು ಹಳಿದು ತೆಗಳಿದ್ದೇವೆ ಎಂದು ಮಾತ್ರ ರಾಮನು ಹೇಳುತ್ತಾನೆ. ಮತ್ತು ನಮ್ಮ ಕ್ರೋಧ-ನಿರೋಧಗಳಿಂದಲೇ ನಮ್ಮ ಮಧ್ಯದಲ್ಲಿ ಅದನ್ನು ಭಯಂಕರವಾಗಿ ಬೆಳೆಸಿದ್ದೇವೆ. ಇಷ್ಟರೊಳಗೆ, ನಾವು ತಮಸ್ಸನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ಕಲಿತು ಅದನ್ನು ಆ ರೀತಿಯಿಂದ ಯಶಸ್ವಿಯಾಗಿಯೂ ಪ್ರಭಾವಯುತವಾಗಿಯೂ ಮಾಡೋಣ. ನಾವು ಹೊಲಸು ಗೊಬ್ಬರವನ್ನು ಉಪಯೋಗಿಸದೆ, ಎಸೆದುಬಿಟ್ಟರೆ, ತೋಟಗಳಲ್ಲಿ ಹೂ-ಹಣ್ಣುಗಳು ಬೆಳೆಯುವದು ಹೇಗೆ ?

ತಮಸ್ಸೇ ಕಲ್ಲಿದ್ದಲು ; ಅದಿಲ್ಲದೆ ಬೆಂಕಿಯಾಗಲೀ ಆವಿಯಾಗಲೀ (ರಜಸ್ಸು) ಬೆಳಕಾಗಲೀ (ಸತ್ತ್ವ) ಇಲ್ಲವೇ ಇಲ್ಲ.

ದೇಶದಲ್ಲಿ ಚಲನ (ಚಳುವಳಿಯ) ಶಕ್ತಿಯಿಂದ ತಮೋಗುಣದ ಮಹತ್ತಾದ ತಳಹದಿಯ ಪ್ರಮಾಣಕ್ಕೆ ಅನುಗುಣವಾಗಿ ರಜೋಗುಣದ ಅಗ್ನಿಯ ಮತ್ತು ಸತ್ತ್ವ ಗುಣದ ಪ್ರಕಾಶದ ತೀವ್ರತೆಯನ್ನೂ ಶಕ್ತಿಯನ್ನೂ ಬೆಳೆಸಬಹುದು ಬುದ್ಧಿಯ ವಿವಿಧ ಸಾಮರ್ಥ್ಯಗಳ ನೆಲೆಯೆಂದು ಊಹಿಸುವ ಮಿದುಳಿನ ಭಾಗಗಳ ಸ್ಥಾನ ಮತ್ತು ಅಭಿವೃದ್ಧಿ ಸ್ಥಿತಿ–ಇವಕ್ಕೆ ಸಂಜ್ಞೆಯಾಗಿರುವ ತಲೆ ಬುರುಡೆಯ ಹೊರರೂಪ ವಿನ್ಯಾಸ ವನ್ನು ಪರೀಕ್ಷಿಸುವ ಆಧುನಿಕ ಕಪಾಲ ಸಾಮುದ್ರಿಕಶಾಸ್ತ್ರದ ಸಿದ್ಧಾಂತಗಳಿಗೆ ಅಸಾಧಾರಣ ಸುಸಂಗತವಾಗಿರುವ ಒಂದು ದೃಷ್ಟಿ ಇದು ; ಈ ದೃಷ್ಟಿಯಲ್ಲಿ ಒಂದು ವ್ಯಕ್ತಿಯ ವೀರೋಚಿತ ಮಹತ್ವಕ್ಕೂ ಶೀಲದ ಶಕ್ತಿಗೂ ಮನುಷ್ಯನ ಪಶುಶಕ್ತಿಗಳ ಅಥವಾ ತಮಶ್ಶಕ್ತಿಗಳ ಪ್ರಬಲವಾದ ತಳಹದಿಯಿಲ್ಲದೆ, ನೈತಿಕ ಮತ್ತು ಬೌದ್ಧಿಕ ಅಂಗಗಳ ಎಷ್ಟೇ ಅನುಕೂಲವಾದ ಬೆಳವಣಿಗೆ ಇದ್ದರೂ ಸಾಲದೆಂದು ಕಂಡು ಹಿಡಿದಿದ್ದಾರೆ.

It is for this that Mahadeva, the great Lord, was depicted as the Lord or Ruler of Tamas by the Hindus

**" ಇದಕ್ಕಾಗಿಯೇ ಹಿಂದೂಗಳು ಮಹಾದೇವನನ್ನು ತಮೋಗುಣದ ಅಧಿಪತಿಯೆಂದು ರೂಪಿಸಿದರು. "**

ಭಾರತದ ಇತಿಹಾಸದ ಅಪಾಯಕರವಾದ ವಿಷಮಪರಿಸ್ಥಿತಿಯಲ್ಲಿ ನಾವು ಒಂದು ವೇಳೆ ಹುಟ್ಟಿದ್ದರೆ ಈಗ ನಮ್ಮ ರಾಷ್ಟ್ರಸೇವೆಗೆ ಹೆಚ್ಚು ಸಮೃದ್ಧಿಯಾದ ಸಂದರ್ಭಗಳು ಇರುವದರಿಂದ ನಾವು ಕೃತಜ್ಞರಾಗಿರಬೇಕು. ಈಗ ನಮ್ಮ ಸೇವಾಕಾರ್ಯವು ಹೆಚ್ಚು ಅಪೂರ್ವವೂ ಹೆಚ್ಚು ಕಾವ್ಯಮಯವೂ ಕ್ರಿಯಾಶೀಲವೂ ಆಗಿದೆ. ಚೆನ್ನಾಗಿ ನಿದ್ರಿಸಿ ದವರು ಚೆನ್ನಾಗಿ ಎಚ್ಚರಗೊಳ್ಳುತ್ತಾರೆ,– ಎನ್ನುತ್ತಾರೆ. ಭಾರತವು ಇದುವರೆಗೆ ದೀರ್ಘ ನಿದ್ರೆಯಲ್ಲಿದ್ದುದರಿಂದ ಆಕೆಯ ಎಚ್ಚರದ ಸ್ಥಿತಿಯೂ ಅತ್ಯಂತ ಗಮನಾರ್ಹವೂ ಅಸಾಧಾರಣವೂ ಆಗುತ್ತದೆ. ಭಾರತೀಯರಲ್ಲಿ ನಾವು ಎಚ್ಚರಗೊಳಿಸಿ ಹುರಿದುಂಬಿಸ ಬೇಕಾದುದೆಲ್ಲಾ ಏನೆಂದರೆ, " ದೋಷಾರೋಪಣೆಯನ್ನು ಮಾಡದ ಗುಣಗ್ರಾಹಕ

ಮನೋಭಾವ; ಭ್ರಾತೃಭಾವನಾ, ಸಂಘಟನಾತ್ಮಕ ಸಹಜಪ್ರವೃತ್ತಿ, ಕಾರ್ಯಾಂಗಗಳ ಸುಸಂಯೋಜನೆ, ದುಡಿಮೆಯ-ಶ್ರಮಜೀವನದ-ಶ್ರೀಮಂತ ಗೌರವ. ”

ಓ! ಒಂದು ಮತವು ಇನ್ನೊಂದು ಮತವನ್ನು ದೂಷಿಸುವದರಿಂದ ದೇಶದಲ್ಲಿ ಎಷ್ಟು ಅಪಾರವಾದ ಶಕ್ತಿಯು ನಿರ್ಲಕ್ಷ್ಯವಾಗಿ ಪೋಲಾಗುತ್ತಿದೆ, ಹಾಳಾಗುತ್ತಿದೆ! ನಮ್ಮ ನಮ್ಮಲ್ಲಿ ಪರಸ್ಪರ ಮೆಚ್ಚಿಗೆಗೂ ಪ್ರೇಮಕ್ಕೂ ಕಾರಣವಾದ ಸಮಾನ ಗುಣಗಳನ್ನು ಕಂಡುಕೊಳ್ಳುವದಕ್ಕೆ ಪ್ರಯತ್ನಮಾಡಿ ಅವುಗಳನ್ನೇ ಒತ್ತಿ ಹೇಳೋಣ. ಸನಾತನ ಧರ್ಮದವರು ಸಂಪರ್ಕ ಪಡೆಯಲಾಗದ, ಆದರೆ ಆರ್ಯಸಮಾಜದವರು ಶ್ರದ್ಧಾಭಕ್ತಿಯನ್ನು ಹುಟ್ಟಿಸಬಹುದಾದ ಜನರಿದ್ದಾರೆ; ಇನ್ನು ಕೆಲವರಿಗೆ ಬ್ರಹ್ಮ ಸಮಾಜವು ಮಾತ್ರ ಮೆಚ್ಚಿಗೆಯಾಗುತ್ತದೆ; ವೈಷ್ಣವಾದಿ ಮತಗಳೂ ಹಾಗೆಯೇ. ತನ್ನ ಮತವು ನೀಡುವ ಶಕ್ತಿಗೂ ಸಂತೋಷಕ್ಕೂ ಆದರ ತೋರಿಸದಿರುವ ಜನರು ಮೇಲೆ ದೋಷಾರೋಪಣೆಮಾಡುವದಕ್ಕೆ ಏನು ಅಧಿಕಾರವಿದೆ ?

ನಮ್ಮ ಮತಕ್ಕೆ ಯಾರು ಬೇಕಾದರೂ ಬರಲಿ, ಇರಲಿ, ಅಥವಾ ಅವರ ಇಷ್ಟ ಬಂದಂತೆ ಬಿಡಲಿ. ನದಿಯಲ್ಲಿ ನೀರು ಸ್ವೇಚ್ಛೆಯಾಗಿ ಹರಿದಂತೆ ವಸ್ತುಗಳೂ ಘಟನೆಗಳೂ ಸಹಜವಾಗಿ ಹರಿಯುವದಕ್ಕೆ ರಾಮನು ಅವಕಾಶಮಾಡಿಕೊಡುತ್ತಾನೆ. ಸಹಾನುಭೂತಿಯನ್ನು ತೋರಿಸುವವರ ಮೇಲೆ ನಿಮ್ಮ ಒಬ್ಬರದೇ ಸ್ವಾಮಿತ್ವವನ್ನು ಏಕೆ ಸ್ಥಾಪಿಸುತ್ತೀರಿ ? ಸೇವೆಗೆ ಮಾತ್ರ ನಮ್ಮ ಅಧಿಕಾರ; ಸಕಲರನ್ನೂ ಸೇವಿಸುವದಕ್ಕೆ, –ಪ್ರೀತಿಸುವವರನ್ನೂ ಯಾರಾದರೂ ದ್ವೇಷಿಸುವವರಿದ್ದರೆ ಅವರನ್ನೂ–ಸೇವಿಸುವದಕ್ಕೆ ಮಾತ್ರ ನಮಗೆ ಹಕ್ಕಿದೆ. ಯಾವ ಮಕ್ಕಳು ಅತ್ಯಂತ ದುರ್ಬಲರೂ ಕ್ಷುಲ್ಲಕರೂ ಇದ್ದಾರೋ ಅವರನ್ನೇ ತಾಯಿಯು ಅತ್ಯಂತವಾಗಿ ಪ್ರೀತಿಸುತ್ತಾಳೆ. ನಿಮ್ಮ ಅಭಿಪ್ರಾಯಕ್ಕೆ ಒಪ್ಪದವರದೆಲ್ಲಾ ತಪ್ಪೆಂದೇ ಭಾವಿಸುತ್ತೀರಾ ? ಒಂದು ವೇಳೆ ಹಾಗಿದ್ದರೆ, ದೇಶಕ್ಕೆ ಅವರೂ ಬೇಕು. ಬಲದ ಒಂಟಿಕಾಲಿನ ಮೇಲೆ ಕುಂಟಿ ಕುಂಟಿ ನಡೆಯುವದಾದರೆ ಅವನಿಗೆ ಎಷ್ಟು ಕಷ್ಟ ? ನಿಜವಾದ ವಿದ್ಯಾಭ್ಯಾಸವೆಂದರೆ ಎಲ್ಲವನ್ನೂ ದೇವರ ಕಣ್ಣುಗಳಿಂದ ನೋಡುವದಕ್ಕೆ ಕಲಿಯುವದು.

ಓ ದೇವ, ಎನ್ನ ದುರ್ಗುಣಗಳನೆ ನೋಡದಿರಾ !
ನಿನ್ನ ನಾಮ, ಓ ರಾಮ, ಸಾಮ್ಯದರ್ಶಿಯಲಾ,
ನೀನಿಚ್ಛಿಸಿದೊಡೆ ನಿನ್ನ ಸ್ಪರ್ಶಮಾತ್ರದಿ
ಎನ್ನನೀ ಪರಿಶುದ್ಧ ಮಾಡಲಾಪೆ

ಯಮುನೆಯೊಳಿಹ ಒಂದುಹನಿ ನೀರು ಪವಿತ್ರ,
ರಸ್ತೆಯ ಬದಿಯ ಗುಂಡಿಯೊಳಿಹ ಇನ್ನೊಂದು ಹನಿಯದೇ ಮಲಿನ,
ಆದೊಡಾ ಎರಡು ಹನಿ ಹರಿದು ಗಂಗೆಯಲಿ ಬೀಳೆ
ಎರಡೂ ಸಮಾನ ಪವಿತ್ರವಾಗುವವು.
ಲೋಹದ ಒಂದು ಚೂರು ದೇಗುಲದಿ ಪ್ರತಿಮೆಯಾಗಿಹುದು,
ಇನ್ನೊಂದು ತುಂಡು ಕಟುಕನ ಕೈಯೊಳಗೆ ಕತ್ತಿಯಾಗಿಹುದು.
ಆದೊಡವೇ ಸ್ಪರ್ಶಮಣಿ ಸೋಂಕಿನಿಂ
ಎರಡು ಸಮವಾಗಿ ಬಂಗಾರವಾಗುವವು.
ಅದರಿಂ ದೇವ, ಎನ್ನ ದುರ್ಗುಣಗಳನೆ ನೋಡದಿರಾ !
ಓ ರಾಮ, ತವನಾಮ, ಸಾಮ್ಯದರ್ಶಿಯಲಾ,
ನೀನಿಚ್ಛಿಸಿದೊಡೆ ನಿನ್ನ ಸ್ಪರ್ಶಮಾತ್ರದಿ,
ಎನ್ನನೀ ಪರಿಶುದ್ಧ ಗೈಯಲಾಪೆ.

(ನಿವೇದಿತಾ ಸೋದರಿಯ ಸುಂದರ ಕೃತಿಯಾದ "The web of Indian Life'' 'ಭಾರತೀಯ ಜೀವನಜಾಲ' ಎಂಬ ಗ್ರಂಥದಲ್ಲಿರುವ 'ಸಂತಸೂರದಾಸ್', ಇವರ ಕವಿತೆಯ ಅನುವಾದ )

ನಮ್ಮ ವೈಯಕ್ತಿಕ ಹಾಗೂ ಸ್ಥಳೀಯ ಧರ್ಮಗಳನ್ನು ರಾಷ್ಟ್ರಧರ್ಮಕ್ಕಿಂತಲೂ ಹೆಚ್ಚೆಂದು ತಿಳಿಯಬಾರದು. ವ್ಯವಹಾರದಲ್ಲಿ ತಾರತಮ್ಯ ಪಾಲನೆಯು ಸುಖ ಸೌಭಾಗ್ಯಗಳಿಗೆ ಕಾರಣವಾಗುತ್ತದೆ.

ರಾಷ್ಟ್ರದ ಯೋಗಕ್ಷೇಮವನ್ನು ಬೆಳೆಸುವದಕ್ಕೆ ಏನು ಮಾಡಿದರೂ ಅದು ವಿಶ್ವಶಕ್ತಿಯ–ದೇವರ–ಸೇವೆಯೇ ಆಗಿದೆ. ದೇವತಾಸ್ವರೂಪವಾದ ಭಾರತಕ್ಕೆ ಈ ಬಗೆಯ ಯಜ್ಞವನ್ನು ಸಮರ್ಪಿಸಬೇಕು. ಗೀತೆಯಲ್ಲಿರುವ ಈ ಮುಂದಿನ ಶ್ಲೋಕವು, ಈಗಿನ ಕಾಲದಲ್ಲಿ, ಈ ಬಗೆಯ ಯಜ್ಞಕ್ಕೇ ಅನ್ವಯಿಸುವದು.

ಯಜ್ಞಶಿಷ್ಟಾಶಿನಸ್ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ !
ಭುಂಜತೇತೇತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥ಗೀ 3–13.

"ಯಜ್ಞದಲ್ಲಿ ಸಮರ್ಪಣೆಯಾಗಿ ಉಳಿದ ಪ್ರಸಾದವನ್ನು ತಿನ್ನುವ ಸಜ್ಜನರು

ಎಲ್ಲಾ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾರೆ ; ಆದರೆ ಯಾವ ಪಾಪಾತ್ಮರು ತಮಗಾಗಿಯೇ ಪಾಕಮಾಡಿಕೊಳುತ್ತಾರೆಯೋ ಅವರು ಪಾಪವನ್ನೇ ತಿನ್ನುತ್ತಾರೆ."

ದೇವರ ಸ್ವರೂಪವನ್ನು ಅನುಭವ ಪಡೆಯಬೇಕಾದರೆ, ಸಂನ್ಯಾಸದ ಮನೋಭಾವವು ಬೇಕು ; ಅಂದರೆ ವ್ಯಕ್ತಿಯ ಅಲ್ಪವಾದ ಅಹಂಕಾರವನ್ನು ಭಾರತಮಾತೆಯ ಮಹತ್ತಾದ ಆತ್ಮದಲ್ಲಿ ಸಂಪೂರ್ಣವಾಗಿ ಒಂದಾಗಿಸಿ ಸ್ವಾರ್ಥಪರವಾದ ಆಸಕ್ತಿಯನ್ನು ಪರಿಪೂರ್ಣವಾಗಿ ತ್ಯಾಗಮಾಡುವದೇ ಸಂನ್ಯಾಸ. ದೇವರನ್ನು ಅಥವಾ ಪರಮಾನಂದವನ್ನು ಅನುಭವ ಮಾಡಬೇಕಾದರೆ, ರಾಷ್ಟ್ರದ ಅಭಿವೃದ್ಧಿಗಾಗಿ ನಿಮ್ಮ ಬುದ್ಧಿ ವಿಚಾರಗಳನ್ನೆಲ್ಲಾ ಸಮರ್ಪಿಸುವ ಬ್ರಾಹ್ಮಣಮನೋಭಾವವನ್ನು ಬೆಳೆಸಿಕೊಳ್ಳಬೇಕು. ಪರಮಾನಂದದ ಅನುಭವಕ್ಕಾಗಿ, ಪ್ರತಿಸೆಕೆಂಡಿನಲ್ಲಿಯೂ ದೇಶದ ಸ್ವಾತಂತ್ರ್ಯವನ್ನೂ ಅಭ್ಯುದಯವನ್ನೂ ಸಾಧಿಸಲು ನಿಮ್ಮ ಪ್ರಾಣವನ್ನು ಅರ್ಪಿಸುವದಕ್ಕೆ ಸಿದ್ಧರಾಗುವಂತೆ ಕ್ಷಾತ್ರತೇಜಸ್ಸನ್ನು ಬೆಳೆಸಿಕೊಳ್ಳಬೇಕು. ದೇವರನ್ನು ಅರಿಯಲು, ನಿಮ್ಮ ಸಂಪತ್ತು–ಐಶ್ವರ್ಯಗಳನ್ನೆಲ್ಲಾ ರಾಷ್ಟ್ರಸೇವೆಗಾಗಿ ವಿನಿಯೋಗಿಸುವ ವಿಶ್ವಾಸಪಾತ್ರಧರ್ಮದರ್ಶಿಯಂತಿರುವ (Trustee) ನಿಜವಾದ ವೈಶ್ಯಮನೋಭಾವವನ್ನು ಬೆಳೆಸಿಕೊಳ್ಳಬೇಕು. ಈ ಲೋಕದಲ್ಲಿ ಅಥವಾ ಲೋಕಾಂತರದಲ್ಲಿ) ಪರಮಾತ್ಮನ ಅಥವಾ ಪರಮಾನಂದದ ಅನುಭವ ಪಡೆಯುವದಕ್ಕಾಗಿಯೂ ನಿಮ್ಮ ವ್ಯಕ್ತಿನಿಷ್ಠವಾದ ಕೇವಲ ಭಾವನಾ ಸ್ವರೂಪವಾದ ಧರ್ಮಕ್ಕೆ ವಸ್ತುನಿಷ್ಠವಾಗಿ ಜೀವಂತ ಸ್ಥೂಲ ಸತ್ಯತೆಯನ್ನು ಕೊಡುವದಕ್ಕಾಗಿಯೂ ಹಿಂದೆ ಪವಿತ್ರ ಶೂದ್ರರಿಗೆ ಮಾತ್ರ ವಹಿಸಿದ್ದ ಕೈದುಡಿಮೆಯಲ್ಲಿ ನಿಮ್ಮ ಕೈಕಾಲುಗಳ ಮೂಲಕ ಬ್ರಾಹ್ಮಣ-ಕ್ಷತ್ರಿಯ-ವೈಶ್ಯರ ವಿವೇಕ–ಧೀರ-ಚಾತುರ್ಯವನ್ನು ಸಾಧಿಸುವ ಸಂನ್ಯಾಸಧರ್ಮವನ್ನು ನೀವು ಆಚರಿಸಬೇಕು. ಹೊಲೆಯ ಕೈಗಳಿಗೆ ಸಂನ್ಯಾಸದೀಕ್ಷೆಯನ್ನು ಜೋಡಿಮಾಡಬೇಕು. ಇವತ್ತಿಗೆ ಉಳಿದಿರುವದು ಇದೊಂದೇ ಮಾರ್ಗ. ಎಚ್ಚರಗೊಳ್ಳಿ, ಎಚ್ಚರಗೊಳ್ಳಿ ! ಜಾಗ್ರತ, ಜಾಗ್ರತ !

ಇಡೀ ಜಗತ್ತಿನಲ್ಲಿ ಒಂದೇ ಬ್ರಾಹ್ಮಣಭೂಮಿಯಾದ ನಮ್ಮ ಭಾರತಕ್ಕೆ ಇವತ್ತು ಈ ಧರ್ಮವನ್ನು ಪರದೇಶಗಳು ಕೂಡ ತಮ್ಮ ಆಚರಣೆಯ ಮೂಲಕ ಬೋಧಿಸುತ್ತಿವೆ.

ತಾಯಿಯ ರಕ್ಷಣೆಯ ಹೊಣೆಹೊತ್ತಿರುವ ಒಬ್ಬನೇ ಮಗನೆಂಬ ಕಾರಣದಿಂದ ಜಪಾನೀ ತರುಣನೊಬ್ಬನನ್ನು ಜಪಾನಿನ ಸೈನ್ಯದಲ್ಲಿ ಸೈನಿಕವೃತ್ತಿಗೆ ಸೇರಿಸಿಕೊಳ್ಳದಿದ್ದರೆ ಆ ತಾಯಿಯು ಶ್ರೇಷ್ಠವಾದ ರಾಷ್ಟ್ರಧರ್ಮಕ್ಕಾಗಿ ಕನಿಷ್ಠವಾದ ಕೌಟುಂಬಿಕ ಧರ್ಮವನ್ನು ಬಲಿಗೊಟ್ಟಂತೆ (ತನ್ನ) ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ರಾಷ್ಟ್ರಧರ್ಮಕ್ಕಾಗಿ ವೈಯಕ್ತಿಕ, ಕೌಟುಂಬಿಕ ಹಾಗೂ ಸಾಮಾಜಿಕ ಧರ್ಮಗಳನ್ನು ಬಲಿದಾನಮಾಡಿದ ಆದರ್ಶಪ್ರಭಾವಶಾಲಿ ಗುರುಗಳಾದ ಗುರು ಗೋವಿಂದ ಸಿಂಗರ ಮಹಾತ್ಯಾಗಕ್ಕೆ ಯಾವ ವೀರಕರ್ಮಗಳನ್ನು ಹೋಲಿಸುವದಕ್ಕೆ ಸಾಧ್ಯವಾದೀತು.

ಜನರು ಅಧಿಕಾರಕ್ಕಾಗಿ ಹಂಬಲಿಸುತ್ತಾರೆ. ಇಡೀ ರಾಷ್ಟ್ರದ ಆತ್ಮದಲ್ಲಿ ನೀವು ಒಂದಾಗಿ ನಿಂತಾಗ ಎಂಥಾ ಅಪಾರವಾದ ಅಧಿಕಾರಶಕ್ತಿಗಳನ್ನು ನಿಮ್ಮ ವಶದಲ್ಲಿ ನೀವು ಪಡೆಯಲಾರಿರಿ ! ಕೊನೆಯಲ್ಲಿ, ರಾಮನು ಈ ಮನೋಧರ್ಮದ ತೇಜಸ್ಸನ್ನು ಇಸ್ಲಾಂ ಧರ್ಮಸ್ಥಾಪಕನಾದ ಮಹಮ್ಮದನ ಸುಂದರವಾದ ಮಾತುಗಳಲ್ಲಿ ನಿರೂಪಿಸುತ್ತಾನೆ ·

ಒಂದು ವೇಳೆ ಸೂರ್ಯನು ಬಲಭಾಗದಲ್ಲಿಯೂ ಚಂದ್ರನು ಎಡಭಾಗದಲ್ಲಿಯೂ ನಿಂತು ಹಿಂದಿರುಗಲು ನನಗೆ ಆಜ್ಞೆಮಾಡಿದರೆ ನಾನದಕ್ಕೆ ವಿಧೇಯನಾಗಿ ನಡೆಯುತಕ್ಕವನಲ್ಲ."

हम रूखे टुकडे खायेंगे भारत पर वारे जायेंगे ।
हम सूखे चने चबायेगे भारत की बात बनायेंगे ।
हम नंगे उमर बितायेंगे भारत पर जान मिटायेंगे ।
सूलों पर दौडे जायेंगे काँटों को राख बनायेंगे ।
हम दर दर धक्के खायेंगे आनन्द की झलक दिखायेंगें ।
सब रिश्ते-नाते तोडेंगे दिल एक आत्म सँग जोडेंगे ।
सब विषकों से मुँह मोडेंगे सिर सब पापों का फोडेंगे ।

# The Problem of India

# ಭಾರತದ ಸಮಸ್ಯೆ

(ಈ ಲೇಖನವನ್ನು ಸ್ವಾಮಿ ರಾಮತೀರ್ಥರು, ಲಾಹೋರಿನ " young-men's Indian Association", ತರುಣರ ಭಾರತೀಯ ಸಂಸ್ಥೆಯ ವಾರ್ಷಿಕೋತ್ಸವದಲ್ಲಿ ಓದಲೋಸ್ಕರ ಲಾಲಾ ಹರ ದಯಾಲ್ ಎಂ. ಎ (Lala Har Dayal, M A.,) ಇವರಿಗೆ ಕಳಿಸಿದ್ದರು. ಇದು "The East and the West" ಪೂರ್ವ ಮತ್ತು ಪಶ್ಚಿಮ ಎಂಬ ಪತ್ರಿಕೆಯಲ್ಲಿ ಉದಯೋನ್ಮುಖನಾದ ಭಾರತಕ್ಕೆ ಸಾಮಾನ್ಯ ಸಂದೇಶವಾಗಿ ಪ್ರಕಟವಾಯಿತು )

ಐಕ್ಯ, ಐಕಮತ್ಯ, ಸಂಯೋಗ, ಒಕ್ಕಟ್ಟು, ಒಕ್ಕೂಟ. ಐಕಮತ್ಯವು,ಒಕ್ಕಟ್ಟು ಆತ್ಯಗತ್ಯವೆಂದು ಪ್ರತಿಯೊಬ್ಬರಿಗೂ ಅನಿಸುತ್ತದೆ. ಕೋಟ್ಯನುಕೋಟಿ ಶಕ್ತಿಗಳು ಒಂದಕ್ಕೊಂದು ವಿರುದ್ಧ ಪ್ರಭಾವವನ್ನು ಬೀರಿ ನಿಷ್ಪರಿಣಾಮವಾಗುವಂತೆ ಮಾಡುತ್ತಿವೆ. ಮುಖ್ಯವಾಗಿ, ಹೆಚ್ಚುಕಡಮೆ ಪರಸ್ಪರ ಪ್ರತಿರೋಧ ಬಲಗಳ ಒಟ್ಟಿನ ಪರಿಣಾಮವಾಗಿ ಯಾವದೊಂದು ಶಕ್ತಿಯೂ ಲಭ್ಯವಿಲ್ಲ. ಕೋಟಿ ಮಿದುಳುಗಳೂ ಕೈಗಳೂ ಪ್ರವಾಹದ ಹೊಡೆತಕ್ಕೆ ಸಿಕ್ಕು, ಎತ್ತೆತ್ತಲೊ ಹರಿದು, ಸರಿದು, ಕೊರೆದು, ಕೊಚ್ಚಿ ಹೋಗುತ್ತಿವೆ ; ಎತ್ತಕಡೆಗೆಂದು ಯಾರು ಹೇಳಬಲ್ಲರು ? ಸಹಸ್ರಾರು ಜಾತಿ-ಮತ ವರ್ಗಗಳಲ್ಲಿ ಪ್ರತಿಯೊಬ್ಬರೂ ತಮ ತಮಗೆ ಇಚ್ಛೆಬಂದಂತೆ, ಹುಚ್ಚು ಹಿಡಿದಂತೆ, ಮೆಚ್ಚಾದ ದಿಕ್ಕಿನಲ್ಲಿ (ರಾಷ್ಟ್ರ) ಜೀವನ ನೌಕೆಯನ್ನು ನಡೆಸುವದಕ್ಕೆ ಪ್ರಯತ್ನ ಮಾಡುತ್ತಿದ್ದಾರೆ. ನಿಯಮಿತವೂ ನಿರ್ದಿಷ್ಟವೂ ಆದ ಚಾಲನವಿಲ್ಲ ! ಹುಟ್ಟುಗೋಲುಗಳು ಇದ್ದಲ್ಲಿ ಇರಲಿ. ನಿಮ್ಮ ಸ್ಥಾನವನ್ನು ಬಲವಾಗಿ ಹಿಡಿದು, ಹಿಡಿದ ದಿಕ್ಕನ್ನು ಬಿಡದೆ, ಒಂದೇ ದಿಶೆಯಲ್ಲಿ ದೋಣಿಯನ್ನು ನಡಸಿರಿ, ಹುಟ್ಟುಹಾಕಿ ಹಾಯಿಸಿರಿ. ಅಂಥಾ ಸಾಂಗತ್ಯ, ಸಾಮರಸ್ಯ, ವೈವಿಧ್ಯದಲ್ಲಿ ಏಕತ್ವ, ವೈಷಮ್ಯದಲ್ಲಿ ಸಾಮ್ಯ ಇವೇ ಪ್ರಗತಿಯನ್ನು ಭದ್ರಪಡಿಸತಕ್ಕ ಗುಣಗಳಾಗಿವೆ. ಹೀಗೆ ನಿಮ್ಮ ನಿಮ್ಮ ಸ್ಥಾನಗಳಲ್ಲಿ ಶ್ರದ್ಧೆಯಿಂದ ಕೆಲಸಮಾಡುತ್ತಾ ಗಾನಮಾಡಿರಿ, ಯಾನ ಮಾಡಿರಿ,

ಮುಂದೆ ಮುಂದೆ ಪ್ರಯಾಣಮಾಡಿರಿ. ರಾಷ್ಟ್ರಹಿತಸಾಧನೆಗೆ ಇದು ಅಗತ್ಯ. ಸಮಷ್ಟಿಯ ಹಿತದಲ್ಲಿ ವ್ಯಷ್ಟಿಹಿತವು ಅಡಗಿದೆ.

ಹೀಗೆ ಹೇಳುವದು ಸುಲಭವಾದ, ಅಗ್ಗವಾದ ಭಾಷಣಚಾತುರ್ಯ, ವಾಗ್ಮಿಕಲೆ ಎನಿಸಬಹುದು. ಆದರೆ, ಭಾರತದಲ್ಲಿ ಐಕಮತ್ಯ-ಸಾಮರಸ್ಯಗಳ ಮನೋಧರ್ಮವು ತನ್ನ ವಿಲಕ್ಷಣವಾದ ಅಭಾವದಿಂದ ಇಷ್ಟು ದೀರ್ಘಕಾಲ ಏಕೆ ಮಹತ್ವಪಡೆದು ಎದ್ದು ಕಾಣುತ್ತದೆ ?

ಮುಖ್ಯವಾದ ಕಾರಣಗಳು ಯಾವವೆಂದರೆ,

1. ವ್ಯವಹಾರ ಜಾಣ್ಮೆಯ ದಾರಿದ್ರ್ಯ

2. ಸಮೃದ್ಧವಾದ ಜನಸಂಖ್ಯೆ.—ಇವುಗಳನ್ನು ಕ್ರಮವಾಗಿ ವಿಚಾರ ಮಾಡೋಣ.

1. ವ್ಯವಹಾರ ಚಾತುರ್ಯದ ದಾರಿದ್ರ್ಯ

ಇಂಡಿಯಾದಲ್ಲಿ ಮಹಮ್ಮದೀಯರ ಆಡಳಿತಕ್ಕೆ ಮುಂಚೆ ಖುರಾಸನ್ನಿನ ಆಲ್ಬೆರುನಿ (Alberuni of Khurasan) ದೇಶದಲ್ಲೆಲ್ಲಾ ಪ್ರವಾಸಮಾಡಿದನು. ಅವನು ಜ್ಞಾನೋದಯ ಪಡೆದ ತತ್ತ್ವಜ್ಞನೂ ಸುಸಂಸ್ಕೃತ ವಿದ್ವಾಂಸನೂ ಆಗಿದ್ದನು. ಅವನು ಪ್ಲೇಟೋ ಮತ್ತು ಅರಿಸ್ಟೋಟಲ್‌ರ ತತ್ತ್ವಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದ ಶ್ರದ್ಧಾದರಗಳಿಂದಲೇ ಸಂಸ್ಕೃತ ಭಾಷೆಯನ್ನೂ ನಮ್ಮ ವೇದಶಾಸ್ತ್ರಗಳನ್ನೂ ಅಭ್ಯಾಸ ಮಾಡಿದನು. ಅವನು ಆಗ ಇಂಡಿಯಾ ದೇಶವನ್ನು ಕಂಡರೀತಿಯ ವಿವರವಾದ ವರ್ಣನೆಯನ್ನು ಬಿಟ್ಟುಹೋಗಿದ್ದಾನೆ-ಕೊಟ್ಟುಹೋಗಿದ್ದಾನೆ-. ಅವನು ಹಿಂದೂಗಳ ತತ್ತ್ವಶಾಸ್ತ್ರ, ಕಾವ್ಯ, ಮತ್ತು ಖಗೋಳಶಾಸ್ತ್ರ ಇವುಗಳ ವಿಷಯದಲ್ಲಿ ಮಹತ್ತಾದ ಗೌರವದಿಂದಲೂ ಪೂಜ್ಯಭಾವದಿಂದಲೂ ನುಡಿದಿದ್ದಾನೆ; ಅವನಿಗೆ ಸಮಾಗಮವಾದ ಕೆಲವು ಪಂಡಿತರಲ್ಲಿದ್ದ ಹೆಚ್ಚಿನ ವಿದ್ವತ್ತನ್ನೂ ಪ್ರಶಂಸಿಸಿದ್ದಾನೆ. ಆದರೆ ಜನಸಾಮಾನ್ಯರ ಸ್ಥಿತಿಯೂ ಸ್ತ್ರೀಯರ ಪರಿಸ್ಥಿತಿಯೂ ಅತ್ಯಂತ ಶೋಚನೀಯವೆನ್ನುವದಕ್ಕಿಂತಲೂ ಕೇಡಾದುದೆಂದು ವರ್ಣಿಸಿದ್ದಾನೆ. ಪ್ರತಿಯೊಂದು ರೀತಿಯಲ್ಲಿಯೂ

ಅವರು ಉದಾಸೀನಮಾಡಲ್ಪಟ್ಟವರೂ ಅಲಕ್ಷ್ಯವಾದವರೂ ತುಳಿಯಲ್ಪಟ್ಟವರೂ ಆಗಿದ್ದರಿಂದ ದೈಹಿಕವಾಗಿಯೂ ಬೌದ್ಧಿಕವಾಗಿಯೂ ನೈತಿಕವಾಗಿಯೂ ಆಧ್ಯಾತ್ಮಿಕವಾಗಿಯೂ ಕೂಡ ಜರ್ಜರಿತರಾದವರೆಂದೂ ಮಾನವಭಗ್ನಾವಶೇಷರಾಗಿ ತೋರುತ್ತಿದ್ದರೆಂದೂ ಹೇಳಿದ್ದಾನೆ. ಜನರು ಸಾಮಾಜಿಕವಾಗಿಯೂ ಧಾರ್ಮಿಕವಾಗಿಯೂ ರಾಜಕೀಯವಾಗಿಯೂ ಹರಿದು ಹಂಚಿಹೋಗಿದ್ದುದರಿಂದ ವಿಕ್ಷಿಪ್ತ ಮನಸ್ಸಿನಿಂದಲೂ ದುರ್ವ್ಯಸನದಿಂದ ಕ್ಷೀಣವಾದ ದೇಹಗಳಿಂದಲೂ ಅಸಂಖ್ಯಾತ ತಂಡತಂಡಗಳಲ್ಲಿ, ಪ್ರತಿವರ್ಷವೂ ಇಂಡಿಯಾ ದೇಶವನ್ನು ಕೊಳ್ಳೆಹೊಡೆಯುವದಕ್ಕಾಗಿ ಮಹಮುದ್ ಘಜ್ನಿಯ ನೇತೃತ್ವದಲ್ಲಿ ಬರುತ್ತಿದ್ದ ಮುಸಲ್ಮಾನ ದಾಳಿಕಾರರ ಎದುರಿಗೆ, ಇಲ್ಲಿಯ ಜನರು ಶಿಸ್ತೂ ಸೈನಿಕ ಶಿಕ್ಷಣವೂ ಇಲ್ಲದ್ದರಿಂದ ಚಂಡಮಾರುತಕ್ಕೆ ಸಿಕ್ಕ ಧೂಳಿನ ಕಣಗಳಂತೆಯೂ ಕಸದಂತೆಯೂ ಹಾರಿ ಹೋಗುತ್ತಿದ್ದರೆಂದೂ—ಓಡಿಹೋಗುತ್ತಿದ್ದರೆಂದೂ— ಆಲ್ಬೆರುನಿ ವರ್ಣಿಸಿದ್ದಾನೆ. ಅನಂತರ ಬಾಬರನು, ಉಪಾಯಕೌಶಲದಲ್ಲಿಯೂ ನವೀನತೆಯಲ್ಲಿಯೂ ಕೈಗಾರಿಕೆಗಳ ಕಲೆಯಲ್ಲಿಯೂ ಕುಶಲ ಕಲೆಗಳಲ್ಲಿಯೂ ಭಾರತದೇಶೀಯರು ಪ್ರಾಯಶಃ ಏನೂ ತಿಳಿಯದಿರುವದು ಶೋಚನೀಯವೆಂದೂ ಅವರಲ್ಲಿ ಶಿಲ್ಪವಿದ್ಯೆಯಾಗಲೀ ತೋಟಗಾರಿಕೆಯಾಗಲೀ ಕೃಷಿಕಾರ್ಯಗಳಿಗೆ ಉಪಯುಕ್ತವಾದ ಕಾಲುವೆಗಳಾಗಲೀ ಕೊನೆಗೆ ಬಂದೂಕು—ಫಿರಂಗಿಗಳ ಹಾರುಮದ್ದುಗಳಾಗಲೀ ಇಲ್ಲವೆಂದೂ ಆಕ್ಷೇಪಣೆ ಮಾಡಿದ್ದಾನೆ. ಅವರು ಒಬ್ಬರೊಡನೊಬ್ಬರು ಸ್ವಚ್ಛಂದವಾಗಿ ಜೊತೆಗೂಡುವದಕ್ಕೆ ಸಹ ಅಸಮರ್ಥರೆಂದೂ ಬಾಬರನು ದೂಷಿಸಿದ್ದಾನೆ. ಈ ಕಥನದಲ್ಲಿ ಇರಬಹುದಾದ ವಿವರಣಕಾರರ ವೈಯಕ್ತಿಕ ನ್ಯೂನಾತಿರೇಕಗಳನ್ನೆಲ್ಲಾ ಸರಿಗಟ್ಟುವದಕ್ಕೆ ಅವಕಾಶವಿತ್ತು, ಸೇರಿಸಿರಬಹುದಾದ ಉತ್ಪ್ರೇಕ್ಷೆಗಳನ್ನೆಲ್ಲಾ ಕಳೆದರೂ ಈ ಹೇಳಿಕೆಗಳು ಬಹಳ ದುಃಖಕರವಾಗಿ ಸತ್ಯವೆನಿಸುತ್ತವೆ. ಇದರಿಂದ ವ್ಯವಹಾರ ನೈಪುಣ್ಯದ (practical wisdom) ದಾರಿದ್ರ್ಯವೇ ಭಾರತಪತನಕ್ಕೆ ಕಾರಣವಾಯಿತೆಂಬದು ಸ್ಪಷ್ಟವಾಗುತ್ತದೆ.

ಪರದೇಶೀಯರಾದ ಈ ಚರಿತ್ರಕಾರರು ಹೇಳಿರುವದನ್ನೆಲ್ಲಾ ವಾದಕ್ಕಾಗಿ ಅಪ್ರಮಾಣವೆಂದು ಅಲ್ಲಗಳೆಯುವದು ರಾಮುನಿಗೂ ಯಾರಿಗಾದರೂ ಸುಲಭವಾಗಬಹದು. ಆದರೆ, ಅವರು ಸರಳವಾದ ವಿದ್ಯಮಾನವನ್ನೂ ಸಾಧಾರವಾದ ಸತ್ಯವನ್ನೂ ಯಥಾರ್ಥವಾಗಿ ಉಲ್ಲೇಖಿಸಿದ್ದಾರೆ. ಸ್ವತಃಸಿದ್ಧವಾದ ಸಾಕ್ಷಿಗೆ ರಾಮನು 'ಅಲ್ಲ' 'ಸುಳ್ಳು' ಎಂದು ಹೇಗೆ ಹೇಳಬೇಕು ? ಮೇಲೆ ಸೂಚಿಸಿರುವ ವ್ಯವಹಾರ ಜಾಣ್ಮೆಯ ಕಾರ್ಯಚಾತುರ್ಯದ-ಕೊರತೆ ಎನ್ನುವದರಲ್ಲಿ, ಕೈದುಡಿಮೆಯ ತಾತ್ಸಾರ, ಜಾತಿ ಮತಗಳ ಆಧಾರದ ಮೇಲೆ ಬೆಳೆದಿರುವ ಅಸ್ವಾಭಾವಿಕ ಭೇದ—ಪ್ರಭೇದಗಳು,

ಪರದೇಶಪ್ರಯಾಣಕ್ಕಿರುವ ವಿರೋಧ–ವಿಮುಖತೆ, ಬಾಲ್ಯವಿವಾಹ, ಸ್ತ್ರೀಯರ ಮೇಲೆ ಹೇರಿರುವ ದೈಹಿಕ-ಬೌದ್ಧಿಕವಾದ ಸಾಮಾನ್ಯ ಅಂಧಕಾರ, ಇವೇ ಮೊದಲಾದ ಸಾಮಾಜಿಕ ದೋಷಗಳೂ ಕೇಡುಗಳೂ ಎಲ್ಲಾ ಸೇರಿಕೊಂಡಿವೆ. ಈ ಸಾಮಾಜಿಕ ಭ್ರಷ್ಟಾಚರಣೆಗಳನ್ನೂ ದುರ್ವ್ಯಾಪಾರಗಳನ್ನೂ ಕಳಂಕವನ್ನೂ ಕಳೆಯುವದೂ ಸರಿಪಡಿಸುವದೂ ಸುಧಾರಿಸುವದೂ ಬಹಳ ಕಠಿಣ. "ನಮಗೆ ಪ್ರಿಯವಾಗಬೇಕಾದರೆ, ಸುಧಾರಣೆಯನ್ನು ಬಹಳ ದೂರದಲ್ಲಿ ಇಟ್ಟಿರಬೇಕು" ಎಂದು ಬರ್ಕನು (Burke) ಬಹಳ ಸರಿಯಾಗಿ ಹೇಳಿದ್ದಾನೆ. ಪದ್ಧತಿಗಳ ಸರಪಳಿಯ ಬಿಗಿತದಿಂದ ಹರಿದುಕೊಂಡು ಹೋಗುವದು ಬಹಳ ಕಠಿಣವಾದ ಕಾರ್ಯ. ಕಾರ್ಯಕರ್ತರ ಮೇಲೆ ಸಮಾಜದ ದೋಷಾರೋಪಣೆಯೂ ವಾಗ್ದಂಡನೆಯೂ ಸಮಾಜದ ಮೇಲೆ ಕಾರ್ಯಕರ್ತರ ಆಕ್ಷೇಪಣೆಯೂ ಖಂಡನೆಯೂ ಈ ಸುಧಾರಣೆಯ ಕಾರ್ಯದಲ್ಲಿ ಅನಿವಾರ್ಯವಾಗಿ ಸೇರಿಕೊಂಡು ದುರಭಿಪ್ರಾಯಗಳನ್ನೂ ಮನಸ್ತಾಪಗಳನ್ನೂ ಐಕಮತ್ಯಭಂಗವನ್ನೂ ಉಂಟುಮಾಡುತ್ತವೆ. ಈ ವೈಮನಸ್ಯವನ್ನೂ ಅನೈಕಮತ್ಯವನ್ನೂ ತಪ್ಪಿಸಲು ಸಮಾಜದ ವಿದ್ಯಮಾನಗಳು ಮನಸ್ಸಿಗೆ ಬಂದಂತೆ ಗೊತ್ತುಗುರಿಯಿಲ್ಲದೆ, ಸಿಕ್ಕಾಬಟ್ಟೆ, ಹೇಗಾದರೂ ಎತ್ತಲಾದರೂ ಚಲಿಸಲಿ ಎಂದು ಕೈಬಿಟ್ಟು, ನಮ್ಮ ನಮ್ಮ ಉದ್ಯೋಗಗಳನ್ನು ನಾವು ಗಮನಿಸುವದು ಜಾಣತನವೆಂದು ಜಂಬಕೊಚ್ಚಿಕೊಳ್ಳೋಣವೆ ? ನಮ್ಮ ಉದ್ಧಾರವನ್ನು ನಾವು ನೋಡಿಕೊಂಡರೆ ಸಾಕು, ಸಮಾಜದ ತಂಟೆ ನಮಗೇಕೆ ? ಅದು ಏನಾದರೂ ಹಾಳಾಗಲಿ, ಎಂದು ಬಿಟ್ಟು ಬಿಡೋಣವೆ ? ಓಹೊ ! ಅದು ಮಾತ್ರ ಸಾಧ್ಯವಿದ್ದರೆ ಹಾಗೇ ಮಾಡಬಹುದಾಗಿತ್ತು ! ಇಡೀ ಸಮಾಜವೇ ಮುಳುಗುತ್ತಿರುವಾಗ ಅದರ ಮಧ್ಯದಲ್ಲಿ ಸಿಕ್ಕಿಕೊಂಡಿರುವ ನೀನೊಬ್ಬನು ತೇಲಿ ಮೇಲೇಳುವದಕ್ಕೆ ಅದು ಬಿಡಲಾರದು. ಸಮಾಜವು ಮುಳುಗಿದರೆ ನೀನೂ ಮುಳುಗಬೇಕು ; ಅದು ಮೇಲೆದ್ದರೆ ನೀನೂ ಏಳಬೇಕು. ದೋಷಯುಕ್ತವಾದ ಸಮಾಜದಲ್ಲಿರುವ ಒಂದು ವ್ಯಕ್ತಿಯು ನಿರ್ದೋಷಿಯಾಗಬಲ್ಲನೆಂಬದನ್ನು ನಂಬುವದು ತೀರಾ ಅಸಂಬದ್ಧವಾದುದು. ಹಾಗಾದರೆ ಕೈಯು ತನ್ನನ್ನು ತಾನು ಮೈಯಿಂದ ಕತ್ತರಿಸಿಕೊಂಡು ಪೂರ್ಣಶಕ್ತಿಸಂಪನ್ನವಾಗಬಹುದು.

ಇಂಡಿಯಾದೇಶದಲ್ಲಿ ವೇದಾಂತತತ್ತ್ವಕ್ಕೆ ವಿರೋಧವಾದ ಈ ಭಾವನೆಯು ಬಹುಕಾಲದಿಂದ ಬೆಳೆದುಬಂದು ಸಮಾಜದ ಅಂಗಚ್ಛೇದವಾಗಿ, ಉಂಟಾಗಿರುವ ಕ್ಷೀಣದಶೆಯು ಕರುಣಾಜನಕವಾಗಿದೆ. ಭರವಸೆಯ ಭಾವೀ ಭಾಗ್ಯನಿಧಿಗಳಾದ ತರುಣಬಂಧುಗಳೆ ! ಭಾರತದ ಭವಿಷ್ಯವೇ ನಿಮ್ಮ ಭವಿಷ್ಯ ; ಭಾರತದ ಭಾವೀ ಭಾಗ್ಯೋದಯಕ್ಕೆ ನೀವೇ ವಿಧಾತರು, ನೀವೇ ಹೊಣೆಗಾರರು. ಬಹುಮತದ ಇಂದ್ರಜಾಲ

ಶಕ್ತಿಯಲ್ಲಿರುವ ಮೂಢನಂಬಿಕೆಯು ಹೇಡಿಗಳ ಮೇಲೆ ಪ್ರಭಾವಬೀರಬಲ್ಲದೇ ಹೊರತು ವಿವೇಕಿಗಳಾದ ಧೀರರ ಮೇಲಲ್ಲ. ನೈಜವಾದ ಜೀವಂತ ಆತ್ಮನು ಜನರ ಹೃದಯಗಳನ್ನೂ ವಿಚಾರಗಳನ್ನೂ ಆಳುತ್ತಿರುವಾಗ ಹೊರಗೆ ಹೆಸರಿಗೆ ಮಾತ್ರವಿರುವ ಆಡಳಿತಗಾರರು ಯಾರಾದರೂ ಇರಲಿ. ನೀವು ಬಿ.ಎ. ಅಥವಾ ಎಂ.ಎ. ಪದವಿಗಳನ್ನು ವಿಶ್ವವಿದ್ಯಾನಿಲಯಗಳಿಂದ ಪಡೆಯಬಹುದು, ಆದರೆ ಹೇಡಿಗಳಾಗಬೇಕೋ ವೀರರಾಗಬೇಕೋ ಎನ್ನುವದನ್ನು ನೀವೇ ಆರಿಸಿಕೊಳ್ಳಬೇಕು. ಹೇಳಿ, ನಿಮಗೆ ಯಾವ ಸ್ಥಾನವು ಇಷ್ಟ ? ಜೀವನದಲ್ಲಿ ತುಚ್ಛಗುಲಾಮರಾಗುತ್ತೀರೋ ರಾಜಾಧಿರಾಜರಾಗುತ್ತೀರೋ ? ಶುದ್ಧವೂ ಸತ್ತ್ವಯುತವೂ ಆದ ಜೀವನವೇ ಚರಿತ್ರೆಯ ಮೀಟುಗೋಲು. ಯಾವದರ ಮೇಲೆ ತಾನು ಕ್ರಿಯೆ ನಡಸುವದೋ ಆ ಕಾಯದ ಚಲನೆಯಲ್ಲಿ ಬದಲಾವಣೆಯನ್ನುಂಟುಮಾಡುವದೇ ಬಲದ ಅಥವಾ ಚಲನ ಶಕ್ತಿಯ (Force) ಲಕ್ಷಣವೆಂದು ನ್ಯೂಟನ್ನನ ಚಲನೆಯ (Motion) ಎರಡನೇ ನಿಯಮವು ಹೇಳುತ್ತದೆ ನಮ್ಮ ದೇಶದಲ್ಲಿ ನೂರಾರು ವರ್ಷಗಳಿಂದ, ಪದ್ಧತಿಯ ಮತ್ತು ಮೂಢಭಕ್ತಿಯ ಜಾಡುಗಳಲ್ಲಿ ಅಸ್ವಾಭಾವಿಕ ರೂಢವೈರಗಳೂ ಇನ್ನೂ ಹೆಚ್ಚು ಕೇಡೆಂದರೆ, ನಿರುತ್ಸಾಹ ನಿರಾಸಕ್ತಿಗಳೂ ಒಂದೇ ಸಮನೆ ಹರಿದು ಬಂದಿವೆ. ಸುಸಂಸ್ಕೃತ ಮತ್ತು ಸುಶೀಲ ಯುವಕರೆ, ಇನ್ನು ಮೇಲೆ ಅಗತ್ಯವಿಲ್ಲದ, ಹಾಳುಮಾಡುವ ಭಾವಾವೇಗ-ರಭಸಗಳನ್ನು ಬದಲಾಯಿಸುವ ಸಾಮರ್ಥ್ಯವುಳ್ಳ ಜೀವಂತ ಶಕ್ತಿಯಾಗುವ ಹೊಣೆಗಾರಿಕೆಯು ನಿಮ್ಮ ಮೇಲಿದೆ. ಹಳೆಯ ಜಡತೆಯನ್ನು ಮೆಟ್ಟಿ, ಮೀರಿ, ಅಗತ್ಯವಾದಲ್ಲಿ ಚಲನದಿಶೆಯನ್ನು ತಿರುಗಿಸಿ, ಅವಶ್ಯವಾದಲ್ಲಿ ವೇಗವನ್ನು ವೃದ್ಧಿಮಾಡಿ, ಉಚಿತವಾದಲ್ಲಿ ಚಲಿಸುವ ವಸ್ತುವನ್ನು ಬದಲಾಯಿಸಬೇಕು. ಕೆಲಸಮಾಡಿ, ಕೆಲಸಮಾಡಿ. ಹಿಂದಿನದನ್ನು ಇಂದಿನದಕ್ಕೆ ಎರಕಹೊಯ್ದು, ರೂಪುಕೊಟ್ಟು ಹೊಂದಿಸಿಕೊಂಡು, ಮುಂದಿನ ಮುಂದೋಟ-ಮೇಲಾಟಗಳಲ್ಲಿ ನಿಮ್ಮ ಶುದ್ಧವೂ ಶಕ್ತಿಯುತವೂ ಆದ ವರ್ತಮಾನವನ್ನು ಧೈರ್ಯವಾಗಿ ತೇಲಿಬಿಡಿರಿ. ನಮ್ಮ ಪೂರ್ವಜರಿಂದ ಪಿತ್ರಾರ್ಜಿತವಾಗಿ ಪಡೆದ ಉತ್ತರಾಧಿಕಾರವನ್ನು ನಾವು ಬಿಟ್ಟು ನಡೆಯಲಾರೆವು; ಯಾವ ಸಮಾಜವು ಇದನ್ನು ಪರಿತ್ಯಜಿಸುತ್ತದೋ ಅದು ಹೊರಗಿನ ಪ್ರಭಾವದಿಂದ ನಾಶವಾಗಲೇ ಬೇಕು. ಅದನ್ನೇ ಹೆಚ್ಚಾಗಿ ಕಟ್ಟಿಕೊಂಡರೂ ನಾವು ಬಾಳಲಾರೆವು. ಯಾವ ಸಮಾಜದಲ್ಲಿ ಅದು ಅತ್ಯಂತ ಪ್ರಬಲವಾಗಿರುತ್ತದೆಯೋ ಆ ಸಮಾಜವು ಒಳಗಿನ ಪ್ರಭಾವದಿಂದ ನಾಶವಾಗಬೇಕು-ನಾಶವಾಗುತ್ತದೆ. ನಿಮ್ಮ ಸತ್ಯನಿಷ್ಠಜೀವನವು ಸಮಾಜದಲ್ಲಿ ವೈಮನಸ್ಯವನ್ನೂ ಒಡಕನ್ನೂ ಅನೈಕ್ಯವನ್ನೂ ಮನಸ್ತಾಪವನ್ನೂ ಹುಟ್ಟಿಸುವದೆಂದು ತಿಳಿಯುತ್ತೀರಾ ? ನೀವು ಒಬ್ಬರೇ ಆದರೂ ಸತ್ಯಪಥದಲ್ಲಿ ದೃಢವಾಗಿ ನಿಲ್ಲಿ. ನಿಮ್ಮ ನಿಲುವು ತಪ್ಪೆಂದು ತ್ಯಜಿಸಬೇಡಿ ; ಇದೇ ಪೌರುಷ; ಪ್ರವಾಹವು ನಿಮ್ಮ

ಗತಿಯ ದಿಶೆಗೆ ಅನುಕೂಲವಾಗಿದೆ; ಉಚ್ಚರವಿಳಿತಗಳು ನಿಮ್ಮ ಕಡೆಗಿವೆ; ಅವು ಹಿಂದಿನದನ್ನು ತಮ್ಮದೆಂದು ಸಾಧಿಸಿಕೊಳ್ಳಲಿ: ಸತ್ಯಮಾರ್ಗದಿಂದ ನೀವು ಹೊರಳದಿದ್ದರೆ ಮಾತ್ರ ಭವಿಷ್ಯವೆಲ್ಲಾ ನಿಮ್ಮದೇ ಆಗಿದೆ. ಇನ್ನು ರಾಷ್ಟ್ರದ ವಿಷಯವಾಗಿ ಯಾವಬಗೆಯ ಸಂಘಟನೆಯು ಧರ್ಮಕ್ಕಾಗಿ ಇಲ್ಲವೋ ಅದು ರಾಷ್ಟ್ರವನ್ನು ರಕ್ಷಿಸಬಲ್ಲದೆ ? ಜನರನ್ನು ಕತ್ತಲೆಯಲ್ಲೇ ಇಟ್ಟು ಸಂಘಟನೆಮಾಡಬಲ್ಲಿರಾ ? ಪ್ರಮಾದ, ಭ್ರಾಂತಿ, ಮೂಢನಂಬಿಕೆಗಳಲ್ಲಿ ಪ್ರತಿಜ್ಞಾಪೂರ್ವಕವಾದ ದಾಸ್ಯವಿರುವಾಗ ರಾಷ್ಟ್ರದಲ್ಲಿ ಮಧುರ ಮೈತ್ರಿಯನ್ನೂ ಸಾಂಗತ್ಯ ಸಾಮರಸ್ಯಗಳನ್ನೂ ಸಾಧಿಸಲು ಸಾಧ್ಯವೆ ? ಎಲ್ಲಾ ನಾವಿಕರೂ ಒಂದೇ ದಿಕ್ಕಿನಲ್ಲಿ ನೌಕೆಯನ್ನು ನಡಸುತ್ತಾರೆಂದು ಇಟ್ಟುಕೊಳ್ಳೋಣ; ಆದರೆ ಆ ದಿಕ್ಕು ವಿಕಾಸ ಕ್ರಮಕ್ಕೆ ಅನುಗುಣವಾಗಿಲ್ಲದೆ, ಸತ್ಯದ ಕಡೆಗೆ ಇಲ್ಲವಾದರೆ, ಅದು ಇಷ್ಟವಾಗುವದೆ ? ಹಿತಕರವಾಗುವದೆ ? ಅಂಥಾ ದೋಣಿಯು ಬಂಡಗೆ ಬಡಿದು ಒಡೆದು ನುಚ್ಚುನೂರಾಗುವದು ಖಂಡಿತ; ಅದು ಹಾಗೆ ಎಷ್ಟು ಬೇಗ ಆದೀತು ಅಷ್ಟು ಒಳ್ಳೆಯದು. ಆಗ ಸ್ವರ್ಗದಲ್ಲಿ ಮಾತ್ರ ಸೇರುವದು ಸಾಧ್ಯವಾಗಬಹುದು. ಶುದ್ಧಿಯಲ್ಲಿಯೂ ಸತ್ಯದಲ್ಲಿಯೂ ಸಂಘಟನೆಯಾಗುವದು ಮಾತ್ರ ವ್ಯವಹಾರಯೋಗ್ಯವೂ ಪ್ರಯೋಜನಕರವೂ ಆಗುವದು. ರಾಷ್ಟ್ರದ ಐಕಮತ್ಯವನ್ನು ಬಯಸತಕ್ಕ ಜನರೆ, ಮೊದಲು ನೀವು ರಾಷ್ಟ್ರವನ್ನು ಅನೇಕ ಅಮಾನುಷವಾದ ತಪ್ಪುಗಳಿಂದ-ಪ್ರಮಾದಗಳಿಂದ—ವಿಮೋಚನೆಮಾಡಬೇಕು. ಮಾನವ ಕಲ್ಯಾಣಕ್ಕಾಗಿಯೂ ಸತ್ಯಪಾಲನೆಗಾಗಿಯೂ ಪ್ರಗತಿಸಾಧನೆಗಾಗಿಯೂ ಈಗ ಜನಸಾಮಾನ್ಯರು ಹಿಂಸಿಸಲ್ಪಡುತ್ತಿದ್ದರೆ, ಕೆಲಸಗಾರರು ಪೀಡಿಸಲ್ಪಡುತ್ತಿದ್ದರೆ, ದೇಶವು ಆಧ್ಯಾತ್ಮಿಕವಾಗಿ ಜೀವಂತವಾಗಿದೆಯೆಂದೂ ಏರಿಳಿದು ಮಾಡುವ ಉಸಿರಾಟವು ಸರಿಯಾಗಿ ನಡೆಯುತ್ತಿದೆಯೆಂದೂ ತೋರಿಸುತ್ತದೆ.

ಆದರ್ಶಪ್ರಾಯವಾದ ಅತ್ಯುಚ್ಚಭಾವನೆಗೆ ಅನುರೂಪವಾದ ವರ್ತನೆಯಲ್ಲಿ ಯಾವ ನೋವೂ ಇರುವದಿಲ್ಲ; ಪೂರ್ಣವಾದ ಆ ಶಾಂತಿ ಸ್ವಭಾವವು ತನ್ನ ಸುತ್ತಲೂ ಪ್ರೀತಿಯನ್ನೂ ಜ್ಯೋತಿಯನ್ನೂ ಚೆಲ್ಲುತ್ತಿರುತ್ತದೆ. ಯಾವ ದೇಶದಲ್ಲಿ ಇನ್ನೂ ಬೆಳಕಿನ ಸಾಮೀಪ್ಯವೇ ಯಮಯಾತನೆಯೆಂದು ಭಾವಿಸಲ್ಪಟ್ಟಿದೆಯೋ ಆ ಸಮಾಜದಲ್ಲಿ ನೋವಿಲ್ಲದ ಶಾಂತಿಯೂ ಎಚ್ಚರಗೊಳಿಸುವ ಬೆಳಕೂ ಕೂಡಿ ಬಾಳುವದೂ ಚಲಿಸುವದೂ ಹೇಗೆ ಸಾಧ್ಯ ? ಹೀಗೆ ಕೇವಲ ಸಂದರ್ಭದ ಸ್ವಭಾವದಿಂದಲೇ ಆದರ್ಶವಾದ ವರ್ತನೆಯನ್ನು ನಡಸುವದು ಸಾಧ್ಯವಿಲ್ಲವಾದರೆ, ಕೊನೆಗೆ ಅದು ನೈಜವಾಗಿಯಾದರೂ ಇರಲಿ. ಅತ್ಯಂತ ಅವಶ್ಯವಾಗಿರುವದು ನೈಜತೆ. ಸಣ್ಣ ದೃಷ್ಟಿಯುಳ್ಳ ಮಹಾಜನರಿಂದ ದೇಶವು ಬಲಿಷ್ಠವಾಗುವದಿಲ್ಲ; ಉನ್ನತ ದೃಷ್ಟಿಯುಳ್ಳ

ಸಣ್ಣ ಜನರಿಂದ ದೇಶವು ಪ್ರಬಲವಾಗುತ್ತದೆ. ಶಾಂತಿ? ಪಾಶವೀ ಜಡತ್ವವೂ ಅಸಹ್ಯವಾದ ಗೋರಿಯೂ ಶಾಂತಿ ಶೀಲವಾಗಿರುತ್ತವೆ. ಜೀವಂತ ಶಾಂತಿಯನ್ನು ನಾವು ಅಪೇಕ್ಷಿಸುತ್ತೇವೆಯೇ ಹೊರತು, ಮೃತಶಾಂತಿಯನ್ನಲ್ಲ! ಕತ್ತಲೆಯಲ್ಲಿ ಜನರು ಮುಗ್ಗರಿಸಿ ಬೀಳುತ್ತಿರುವಾಗ, ನಿಮ್ಮಲ್ಲಿ ಬೆಳಕು ಇಲ್ಲದಿದ್ದುದಕ್ಕಿಂತಲೂ ನೀವು ಇದ್ದ ಬೆಳಕನ್ನು ಮುಚ್ಚಿಟ್ಟುಕೊಳ್ಳುವದು ಹೆಚ್ಚು ಕೇಡಾದುದು. ಅಂಥಾ ಸಮಯುಗಳಲ್ಲಿ, ತನ್ನಲ್ಲಿರುವ ಸಹಾಯಕವಾದ ಒಂದು ಶಬ್ದವನ್ನೂ ಉಚ್ಚರಿಸದೆ ಮೌನವಾಗಿರತಕ್ಕವನು ಮಹಾಪರಾಧಿ.

(2) ಈಗ ನಾವು ಹೇರಳವಾದ ಜನಸಾಂದ್ರತೆಯ ಪ್ರಶ್ನೆಗೆ ಬರುತ್ತೇವೆ.

ಈ ವಿಷಯದಲ್ಲಿ ಮಾಲ್ಥಸ್ (Malthus) ಮತ್ತು ಇತರ ರಾಜಕೀಯ ಅರ್ಥಶಾಸ್ತ್ರಜ್ಞರು ಏನು ಹೇಳತ್ತಾರೆಂಬದನ್ನು ಇಲ್ಲಿ ಹೇಳಬೇಕಾಗಿಲ್ಲ. ಮಾಲ್ಥಸ್ಸನು ಸುಮ್ಮನೆ (ಸಸ್ಯಗಳ ಮತ್ತು ಪ್ರಾಣಿಗಳ) ಜೀವವಿಜ್ಞಾನದ ತೀರ್ಮಾನವನ್ನು ಪುನಃ ಪ್ರತಿಧ್ವನಿಸುತ್ತಾನೆ. ಈ ವಿಷಯದಲ್ಲಿ ಪ್ರಕೃತಿವಿಜ್ಞಾನಿಗಳು ಏನು ಹೇಳುವರೆಂಬದನ್ನು ನೋಡೋಣ. ಹಕ್ಸ್ಲೀ ಮಹಾಶಯನು ಜನರ ಸಮುದಾಯವನ್ನು ಅಥವಾ ವಸಾಹತನ್ನು ಸ್ವೇಚ್ಛೆಯಾದ ವನ್ಯಪ್ರಕೃತಿಯ ಕಾನಿನಲ್ಲಿ ಬೆಳೆಸಿರುವ ಒಂದು ತೋಟಕ್ಕೆ ಹೋಲಿಸುತ್ತಾನೆ. ಸಾಮಾಜಿಕ ವಿಕಾಸದ ಕಾರ್ಯಗತಿಯು (ನೈತಿಕ ವರ್ಧನ ಕ್ರಮವು) ತೋಟಗಾರಿಕೆಯ ಕಾರ್ಯವಿಧಾನಕ್ಕೆ ಹೋಲಿಕೆಪಡೆದಿದೆ. ಆದರೆ ಈ ಎರಡು ಪ್ರತಿಕ್ರಿಯೆಗಳೂ ವನ್ಯಪ್ರಕೃತಿಯ ಬೆಳವಣಿಗೆಯ ಬಗೆಗೆ ಅಥವಾ ವಿಶ್ವದ ಕಾರ್ಯಗತಿಗೆ ವಿರೋಧವಾಗಿವೆ. ವನ್ಯಪ್ರಕೃತಿಕಾರ್ಯಗತಿಯಲ್ಲಿ ಅತಿತೀವ್ರವಾದ ನಿಲುಗಡೆಯಿಲ್ಲದ ಜೀವನದ ಹೋರಾಟದ ಲಕ್ಷಣವಿದೆ ಆದರೆ ತೋಟಗಾರಿಕೆಯ ಮತ್ತು ನೈತಿಕ ಕಾರ್ಯವಿಧಾನಗಳಲ್ಲಿ ಈ ಹೋರಾಟವನ್ನು ಹೊರಹಾಕಿದ–ಅದಕ್ಕೆ ಕಾರಣವಾದ ಪರಿಸ್ಥಿತಿಯನ್ನು ತೆಗೆದುಹಾಕಿದ-ಲಕ್ಷಣವಿದೆ. ಈ ಬಗೆ ಬಗೆಯ ಕಾರ್ಯವಿಧಾನಗಳೆಲ್ಲಾ ಒಂದೇ ಎಂದು ತೋರಿಸುವದಕ್ಕೆ ಹೆನ್ರಿಡ್ರಮ್ಮಂಡ್ (Henoy Drummond) ಮಹಾಶಯನು ಶ್ರಮಪೂರಿತ ಪ್ರಯತ್ನಮಾಡಿದ್ದಾನೆ; ಆದರೆ ಅವನು ಅಷ್ಟೆಲ್ಲಾ ಆಡಂಬರ ಪ್ರದರ್ಶನ ಮಾಡಿಯೂ ಡಾರ್ವಿನ್ ಮತ್ತು ಹಕ್ಸ್ಲೀ ಸಿದ್ಧಾಂತಗಳಿಗಿಂತಲೂ ಒಂದು ಅಂಗುಲವೂ ಮುಂದೆ ಹೋಗಿಲ್ಲ. ತೋಟಗಾರನು, ಕಳೆಕೀಳುವದರ ಮೂಲಕ ಮೊದಲಾದ ವಿಧಾನಗಳಿಂದ ಸ್ವೇಚ್ಛೆಯೂ ದಟ್ಟವೂ ಆದ ಬೆಳವಣಿಗೆಯ ಅತಿರೇಕವಾದ ವೃದ್ಧಿಯನ್ನು ನಿರಂತರವಾಗಿ ತಡೆಗಟ್ಟದಿದ್ದರೆ. ಬಹಳ ಬೇಗ ಸ್ವಚ್ಛಂದವಾದ

ವನ್ಯಪ್ರಕೃತಿಯ ಕಾರ್ಯಗತಿಯು ತೋಟದಲ್ಲಿ ತಾನಾಗಿಯೇ ಪುನಃ ಸ್ಥಾಪನೆಯಾಗಿ, ಶಾಂತಿಯುತವೂ ಹಿತಕರವೂ ಆದ ವೃದ್ಧಿ–ಸಮೃದ್ಧಿಗಳ ನಿಯಮ–ಸಂಯಮಶೀಲ ಧರ್ಮವನ್ನು ಹೊರಗೋಡಿಸಿ, ಹಳೆಯ ನಿರ್ದಯವಾದ ಹೋರಾಟ ಹೊಡೆದಾಟಗಳ ಜಾಡನ್ನು ಹಿಡಿದು, ಹಾಳು–ಹಾವಳಿ ಮಾಡುವದಕ್ಕೆ ತೊಡಗುತ್ತದೆ. ವಾಸ್ತವವಾಗಿ ವಿವೇಕಿಗಳಾದ ಯಾರೂ ಅಲ್ಲಗಳೆಯಲಾಗದ ಈ ಸತ್ಯವನ್ನು ಹೆನ್ರಿಯೂ ನಿರಾಕರಿಸ ಲಾರನು. ಹೀಗೆಯೇ, ಒಂದು ಸಮಾಜದಲ್ಲಿ ಜನಸಂಖ್ಯೆಯು ಶಕ್ತವಾದ ಉಬ್ಬರದ ಮಿತಿಯನ್ನು ಮೀರುತ್ತಿರುವಾಗ ಹೆಚ್ಚಿನ ಜನಸಂಖ್ಯೆಯನ್ನು ವಿನಿಯೋಗಿಸುವದಕ್ಕೆ ಅಥವಾ ತೊಲಗಿಸುವದಕ್ಕೆ ಯಾವ ಕಾರ್ಯಕ್ರಮವನ್ನು ಕೈಗೊಳ್ಳದಿದ್ದರೆ, ಭಯಂಕರ ವಾದ ಹೋರಾಟವು ಮತ್ತೆ ಪ್ರಾರಂಭವಾಗಿ, ಶಾಂತಿಯನ್ನು ನಾಶಮಾಡಿ, ನೈತಿಕ ವಿಕಾಸಕ್ರಮವನ್ನು ಉಸಿರುಕಟ್ಟಿಸಿ, ನೈತಿಕ ವಿಧಿಗಳನ್ನೂ ಬೋಧೆಗಳನ್ನೂ ತೊಡೆದು ಹಾಕಿ, ದೇವರ ಆಜ್ಞೆಗಳನ್ನು ಆಚರಣೆಯಲ್ಲಿ ಬಾರದಂತೆ ಮಾಡುತ್ತದೆ. ಇಂಥಾ ಸಂಧಿ ಸಮಯಗಳಲ್ಲಿ ರಾಷ್ಟ್ರಗಳ ಭ್ರಷ್ಟಾಚರಣೆಯೂ ಪತನವೂ ಅನಿವಾರ್ಯವಾಗಿ ಪ್ರಾರಂಭವಾಗುತ್ತದೆ. ರೋಂ, ಗ್ರೀಸ್ ಮೊದಲಾದ ದೇಶಗಳ ಅವನತಿ ಮತ್ತು ಪತನಗಳ ತಳಹದಿಯಲ್ಲಿ ಈ ಜನಸಾಂದ್ರತೆಯ ಉಬ್ಬರದ ಪ್ರಶ್ನೆಯಿದ್ದಿತು. ಭಾರತವು ಬಹಳ ಹಿಂದೆಯೇ ಜನಸಂಖ್ಯೆಯ ಉಬ್ಬರದ ಈ ಅಪಾಯಕರವಾದ ಘಟ್ಟ ವನ್ನು ಮುಟ್ಟಿತು. ಮೂಲವಾದ ಈ ಕೇಡನ್ನು–ದೋಷವನ್ನು ಕಳೆಯಲು ನಾವು ಏನನ್ನೂ ಮಾಡಿಲ್ಲ. ಭೂಮಿಯ ಮೇಲೆ ಭಾರತ ದೇಶದಷ್ಟು ಜನಭರಿತವೂ ಆದರೆ ಬಡತನದ ಬವಣೆಯುಳ್ಳದೂ ಆದ ದೇಶವು ಇನ್ನೊಂದಿಲ್ಲ. ಭಾರತದಲ್ಲಿರುವ ಒಂದು ಸಾಮಾನ್ಯವಾದ ಬಡಕುಟುಂಬವು ಇಡೀ ರಾಷ್ಟ್ರದ ಸ್ಥಿತಿಯು ಹೇಗಿದೆಯೆಂಬುದಕ್ಕೆ ಮಾದರಿಯಾಗಬಹುದು ; ಧನಸಂಪಾದನೆಯ ಮಾರ್ಗಗಳು ಅತ್ಯಲ್ಪವೂ ದುರ್ಬಲವೂ ಆಗಿರುವಾಗ, ಪ್ರತಿವರ್ಷವೂ ಹೆಚ್ಚು ಹೆಚ್ಚಾಗಿ ಆಹಾರ ಒದಗಿಸಬೇಕಾಗಿರುವ ಸಂತಾನವು ವೃದ್ಧಿಯಾಗುತ್ತಿರುತ್ತದೆ ; ಮತ್ತು ಬುದ್ಧಿಹೀನವಾದ ಹಳೆಯ ಕಂದಾ ಚಾರಗಳಿಗೆ ದಾಸರಾಗಿ ಅರ್ಥಹೀನವೂ ಹಿಂಸಾಕರವೂ ಆದ ವ್ರತಾಚರಣೆ ಕರ್ಮಾ ಚರಣೆಗಳಿಗಾಗಿ ಅನುಚಿತವಾದ ಧನವ್ಯಯಕ್ಕೆ ಗುರಿಯಾಗುತ್ತಾರೆ. ಒಂದೆರಡಕ್ಕೆ ಮಾತ್ರ ಮೇವಿರುವ ಗೋಶಾಲೆಯಲ್ಲಿ ನೂರಾರು ದನಕರುಗಳನ್ನು ಬಿಟ್ಟರೆ ಎಲ್ಲವೂ ಮೇವಿಗಾಗಿ ಕಾದಾಡಿ ಸಾಯುತ್ತವೆ. ವಿವಾದದ ಮೂಳೆಯನ್ನೇ ಕೀಳದೆ ಜನರಿಗೆ ಶಾಂತಿಯನ್ನು ಉಪದೇಶಿಸುವದೆಂದರೆ, ಉಪದೇಶದ ಅವಹೇಳನವೇ ಸರಿ. ನಮ್ಮ ನಾಡಿನ ಜನರು ಭಕ್ತಿಯುತವಾದ ನಮ್ರಭಾವವುಳ್ಳವರೂ ಸಾಧು ಸ್ವಭಾವದವರೂ ಆಗಿದ್ದಾರೆ. ಅವರು ಹೃದಯದಲ್ಲಿ ಶಾಂತಿಪ್ರಧಾನರಾದವರು. ಹೃದಯವು

ಪರಹಿತಸಾಧನೆಗೆ ಒಪ್ಪಿದರೂ ಮಾಂಸಮಯ ದೇಹದ ದೌರ್ಬಲ್ಯಗಳನ್ನು ಸಂದರ್ಭದ ಆವಶ್ಯಕತೆಗಳು ಅವರ ಮೇಲೆ ಬಲಾತ್ಕರಿಸಿದರೆ, ಸ್ವಾರ್ಥವನ್ನೂ ದ್ವೇಷಾಸೂಯೆಗಳನ್ನೂ ಅವರು ಹೇಗೆ ತಡೆದಿಡುವದು ಸಾಧ್ಯವಾದೀತು ? ಜನಸಂಖ್ಯೆಯ ಅತಿರೇಕದ ಏರಿಕೆಯ ಸಮಸ್ಯೆಯನ್ನು ಪರಿಹಾರ ಮಾಡದೇ ಬಿಟ್ಟರೆ, ರಾಷ್ಟ್ರದ ಐಕಮತ್ಯ ಮತ್ತು ಪರಸ್ಪರ ಸೌಹಾರ್ದ ಮೊದಲಾದ ಈ ಮಾತುಗಳು ಕಾರ್ಯಸಾಧ್ಯವಲ್ಲದ ಆದರ್ಶವೂ ಭ್ರಾಂತಿ ಮಾತ್ರವೂ ಆಗುತ್ತವೆ. ತಬ್ಬಿಬ್ಬು ಹಿಡಿಸುವ ಈ ಗೂಢವಾದ ' Sphinx ' ಸ್ಫಿಂಕ್ಸ್ ಒಗಟನ್ನು ಬಿಡಿಸಬೇಕು, ಇಲ್ಲವೇ ಸಾಯಬೇಕು. ಸ್ಫಿಂಕ್ಸ್ ಎಂದರೆ, ಗ್ರೀಕ್ ಪುರಾಣದಲ್ಲಿ,—ಧೀಬ್ಸ್ ಜನರ ಮುಂದೆ ಒಗಟೆಯೊಂದನ್ನು ಒಡ್ಡಿ ಅದನ್ನು ಬಿಡಿಸಲಾರದವರನ್ನೆಲ್ಲಾ ಕೊಂದುಹಾಕುತ್ತಾ ಹಾವಳಿ ಮಾಡುತ್ತಿದ್ದು, ಕೊನೆಗೆ ಈಡಿಪಸ್ ಎಂಬಾತನು ಬಂದು ಒಗಟೆಯನ್ನು ಬಿಡಿಸಲು ತಾನು ನೆಲಸಿದ್ದ ಬಂಡೆಯಿಂದ ಕೆಳಕ್ಕುರುಳಿ ಸತ್ತುಹೋದ, ಹೆಂಗಸಿನ ತಲೆಯೂ ಸಿಂಹದ ಒಡಲೂ ರೆಕ್ಕೆಗಳೂ ಇದ್ದ ಒಂದು ಅದ್ಭುತ ಪ್ರಾಣಿ : ಸ್ಫಿಂಕ್ಸ್ ರಕ್ಕಸಿ. (“ ನಾಲ್ಕು ಕಾಲುಗಳ ಮೇಲೆ, ಎರಡು ಕಾಲುಗಳ ಮೇಲೆ, ಮತ್ತು ಮೂರು ಕಾಲುಗಳ ಮೇಲೆ ಚಲಿಸುವ ಒಂದು ಪ್ರಾಣಿ ಯಾವುದು ?” ಎಂಬುದು ಆ ಸಮಸ್ಯೆ —ಉತ್ತರ : ಮನುಷ್ಯ. ಮಗುವಾಗಿದ್ದಾಗ ಅಂಬೆಗಾಲಿಡುತ್ತ ನಾಲ್ಕು ಕಾಲು, ಬೆಳೆದಾಗ ಎರಡುಕಾಲು, ಮುದಿಯಾದಾಗ ಕೋಲೂರಿಕೊಂಡು ಮೂರುಕಾಲು).

ಎಲ್ಲಿ ನಿತ್ಯವೂ ನಮ್ಮ ಒಡನಾಡಿಗಳಿಂದ ನೋವೂ ಸಂಕಷ್ಟವೂ ಒದಗುವವೋ ಅಂಥಾ ಸಾಮಾನ್ಯವಾದ ಸಾಮಾಜಿಕ ಸನ್ನಿವೇಶಗಳಲ್ಲಿ ಜೀವ ವಿಜ್ಞಾನದ ನಿಯಮಗಳ ಪ್ರಕಾರವಾಗಿ ಸಹಾನುಭೂತಿಯೂ ನಿಸ್ಸ್ವಾರ್ಥತೆಯೂ ಬೆಳೆಯಲಾರವು. ನಿಮ್ಮ ಸುತ್ತಲೂ ಅಷ್ಟು ಜನಭರಿತವಾದ ದಾರಿದ್ರ್ಯವಿರುವಾಗ, ಓ ಭಾರತೀಯರೆ, ಸಹಾನುಭೂತಿಯನ್ನೂ ಸ್ನೇಹವನ್ನೂ ಬೆಳೆಸಬೇಕೆಂದರೆ, ಆಶೆಗೆ ವಿರುದ್ಧವಾಗಿ ಆಶೆ ಮಾಡುವದೇ ಸರಿ. ಯಾವದೊಂದು ಭೌತವಸ್ತುವಿನಲ್ಲಿ, ಸುತ್ತಲಿರುವ ಅಣುಗಳ ಚಲನವಲನಗಳಿಗೆ ಅವಶ್ಯವಾದ ಸಮಾನಾವಕಾಶಗಳಿಂದ ಸುತ್ತುವರಿಯಲ್ಪಟ್ಟ ಪ್ರತಿಯೊಂದು ಅಣುವೂ ತಾಳಗತಿಯಿಂದ ಚಲಿಸುವದಕ್ಕಾಗಿ, ಆ ವಸ್ತುವಿನ ಅಂಗಭಾಗಗಳಾದ ಕಣಗಳು ಎಲ್ಲಿಯವರೆಗೆ ಬೇರೆ ಬೇರೆಯಾಗಿ ತಮ್ಮ ನೆರೆಯ ಕಣಗಳಿಂದ ಸಮದೂರದ ಸ್ಥಾನಗಳಲ್ಲಿ ನಿಲ್ಲುವವೋ ಅಲ್ಲಿಯವರೆಗೆ, ಆ ವಸ್ತುವಿನಲ್ಲಿರುವ ದ್ರವ್ಯವು ತನ್ನೊಳಗಿನ ಸಮತೂಕ ಸ್ಥಿತಿಯನ್ನು ತಪ್ಪದೆ ಉಳಿಸಿಕೊಂಡು ಬರುತ್ತದೆ, ಎಂಬದನ್ನು ಭೌತವಿಜ್ಞಾನದ ವಿದ್ಯಾರ್ಥಿಗಳು ಬಲ್ಲರು. ಈಗ ಭಾರತದ ದ್ರವ್ಯ

ಪರಿಮಾಣದ (Mass) ವಿಷಯವೇನು ? ಅದರ ಏಕಾಂಶವಾದ ಬಿಡಿ ವ್ಯಕ್ತಿಗಳು ಇತರ ವ್ಯಕ್ತಿಗಳೊಡನೆ ತಾಕಲಾಡದೆ ತಮ್ಮ ನಿಯಮಿತವಾದ ತಾಳಗತಿಯ (Rhythmic movements) ಚಲನವಲನಗಳನ್ನು ನಡಸಬಲ್ಲರೆ ? ಅವರಿಗೆ ಬಿಡು ಬೀಸ್ಸಾದ ಸ್ವಾಭಾವಿಕ ಚಲನಕ್ಕೆ ಸಾಕಷ್ಟು ಅವಕಾಶವಿದೆಯೆ ? ಒಬ್ಬನು ಹೊಟ್ಟೆ ತುಂಬ ಉಂಡರೆ, ಹತ್ತು ಜನರು ಹೊಟ್ಟೆಗಿಲ್ಲದೆ ಸಾಯಬೇಕಾಗಿರುವಾಗ ರಾಷ್ಟ್ರದೊಳಗಿನ ಸಮತೂಕ ಸ್ಥಿತಿಯನ್ನು ಹೆಚ್ಚು ಭದ್ರಗೊಳಿಸುವದಕ್ಕಾಗಿ ತಡಮಾಡದೇ ಒಡನೆಯೇ ಅವಶ್ಯವಾದ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು. ಇಲ್ಲವಾದರೆ, ನಮ್ಮಗಳ ಸ್ಥಿತಿಯಂಥ ಪರಮಾವಧಿಯ ಪರಿಸ್ಥಿತಿಯಲ್ಲಿ, ವಸಿಷ್ಠ ಮಹರ್ಷಿಗಳು ಹೇಳಿರುವಂತೆ, ಪ್ರಚಂಡೋನ್ಮತ್ತ ಪ್ರಕೃತಿಯ ಉಗ್ರಾಚರಣೆಯ ಕ್ರಮಗಳಾದ ಸಾಮೂಹಿಕವಾಗಿ ಸಾವು ತರುವ ಪ್ಲೇಗು ಜಾಡ್ಯ, ಮಹಾಮಾರಿಕಾ ಉಪದ್ರವ ಮೊದಲಾದ ಅಂಟುರೋಗಗಳು, ದುರ್ಭಿಕ್ಷ, ವಿನಾಶಕರವಾದ ಯುದ್ಧ, ವಿಧ್ವಂಸಕವಾದ ಭೂಕಂಪಗಳು, ಮೊದಲಾದ ಮಹಾ ವಿಪತ್ತುಗಳಲ್ಲಿ ಭಾರತದ ಪ್ರಜಾ ಸಂಖ್ಯೆಯ ಅತಿವ್ಯಾಪ್ತಿಯ ನಿಯಂತ್ರಣದ ಭರವಸೆಯು ನೆಲೆಸಿದೆ. ಅನರ್ಥಗಳ ವಿವರಣೆಯು ಸಾಕು. ಈಗ ಪರಿಹಾರವೇನು ? ಅದು ಅನೇಕ ವಿಧವಾಗಿದೆ.

1. ಇಂಡಿಯಾ ದೇಶದಿಂದ ಹೊರಗೆ ಕಾಲಿಟ್ಟರೆ, ನೀವು ಸ್ವರ್ಗದಿಂದ ಬಹಿಷ್ಕರಿಸಲ್ಪಡುತ್ತೀರಿ ಎಂಬ ಅಂಥ ವಿಶ್ವಾಸವೂ ಅಂಧಕಾರ ಭಾವನೆಯೂ ನಮ್ಮ ನಾಡನ್ನೇ ಬಿಟ್ಟು ಅಂತಿಮವಾಗಿ ತೊಲಗಬೇಕು. ಆ ಭ್ರಾಂತಿಯು ನಮ್ಮ ದೇಶವನ್ನು ಬಿಟ್ಟುಹೋಗುವದರ ಜೊತೆಗೆ ಎಷ್ಟುಸಾಧ್ಯವೋ ಅಷ್ಟು ಜನರೂ ದೇಶವನ್ನು ಬಿಟ್ಟು ಪರದೇಶಗಳಿಗೆ ವಲಸೆ ಹೋಗಲಿ. ನಿಮ್ಮನ್ನು ನೀವು ಕಲ್ಪನಾಕಥೆಯ ಕೂಪ-ಮಂಡೂಕವನ್ನು (ಬಾವಿಯಲ್ಲಿರುವ ಕಪ್ಪೆಯಂತೆ) ಮಾಡಿಕೊಳ್ಳುವದರಲ್ಲಿ ಯಾವ ಸುಖವಿದೆ ? ಸೊಗಸಾದ ಭಾರತವನ್ನು ಉಸಿರು ಕಟ್ಟಿಸುವ ಕತ್ತಲು ಸೆರೆಕೋಣೆಯನ್ನಾಗಿ ಮಾಡಿಕೊಳ್ಳುತ್ತಿರುವದನ್ನು ನೀವೆಂದೂ ಕಾಣಲಾರಿರಾ ?

2. ಇಂಡಿಯಾದಲ್ಲಿ ವಸಾಹತುಗಾರರಾದ ಆರ್ಯರು, ಅಧಿಕ ಸಂಖ್ಯೆಯ ಸಂತಾನವನ್ನು ಪಡೆಯುವದು ದೈವಾನುಗ್ರಹವೆಂದು ತಿಳಿಯುತ್ತಿದ್ದ ಕಾಲವೊಂದಿತ್ತು. ಆದರೆ ಆ ಬಗೆಯ ಕಾಲವು ಕಳೆದು ಹೋಗಿದೆ. ಈಗಿನ ಪರಿಸ್ಥಿತಿಯು ವಿಪರ್ಯಸ್ತವಾಗಿದೆ ; ಕಾಲವು ತಲೆಕೆಳಗಾಗಿದೆ. ಈಗ ನಮ್ಮ ದೇಶದಲ್ಲಿ ಕಿಕ್ಕಿರಿದು ನೆರೆದಿರುವ ಜನನಿಬಿಡತೆಯ ಸ್ಫೋಟಕ ಪರಿಸ್ಥಿತಿಯ ದೃಷ್ಟಿಯಿಂದ ದೊಡ್ಡಕುಟುಂಬವನ್ನು

ಪಡೆದಿರುವದು ಶಾಪರೂಪವಾಗಿದೆ. ಮರಣಾನಂತರದ ಸ್ವರ್ಗಪ್ರಾಪ್ತಿಯು ತನ್ನ **ಸಂತಾನವನ್ನು ಅವಲಂಬಿಸಿದೆ ಎಂಬ ಬಾಲಿಶ ಭಾವನೆಗೆ ಇನ್ನೂ ಜೋತು ಬಿದ್ದಿರುವ ವಿಚಾರಹೀನ ಜನರು, ಆಧುನಿಕ ಭಾರತದಲ್ಲಿ ಬಹು ಸಂಖ್ಯಾಕ ವಾಗಿ ಸಂತಾನ ವೃದ್ಧಿಮಾಡುವದರಿಂದ ಸಾಯುವದಕ್ಕೆ ಮೊದಲೇ ತನ್ನ ಮನೆಯನ್ನು ನರಕವನ್ನಾಗಿ ಮಾಡಿಕೊಳ್ಳುತ್ತಿರುವದನ್ನು ಕಣ್ಣು ತೆರೆದು ನೋಡಲಿ !**

ಭಗವದ್ಗೀತೆಯಲ್ಲಿ, ಭೋಗಪರವಾದ ಸ್ವರ್ಗಸುಖವನ್ನು ಬಯಸುವ ಮುಮುಕ್ಷುಗಳನ್ನು ಶ್ರೀಕೃಷ್ಣನು ದೂಷಿಸಿರುವದಕ್ಕೆ, ಅರ್ಜುನನು, (ಪತನ್ತಿ ಪಿತರೋಹ್ಯೇಷಾಂ ಲುಪ್ತಪಿಣ್ಡೋದಕ ಕ್ರಿಯಾಃ ॥) ಪುತ್ರ ಸಂತಾನವೇ ಸ್ವರ್ಗ ಲಾಭಕ್ಕೆ ಮೀಟುಗೋಲೆಂದು ಹೂಡಿದ ವಾದವನ್ನು ಮನಸ್ಸಿನಲ್ಲಿ ಇಟ್ಟುಕೊಂಡುದೇ ಕಾರಣವು. ಭಗವದ್ಗೀತೆಯಲ್ಲಿರುವ ಈ ಮುಂದಿನ ಶ್ಲೋಕಗಳನ್ನು ಓದಿ, ಇವು ಗಳಲ್ಲಿರುವ ಸ್ವತಂತ್ರ ಮನೋಧರ್ಮವನ್ನು ಮೆಚ್ಚಬೇಕು :

ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।
ವೇದವಾದರತಾಃ ಪಾರ್ಥ, ನಾನ್ಯದಸ್ತೀತಿ ವಾದಿನಃ ॥ ೨–೪೨ ॥
ಕಾಮಾತ್ಮಾನಃ ಸ್ವರ್ಗಪರಾ, ಜನ್ಮಕರ್ಮಫಲಪ್ರದಾಮ್ ।
ಕ್ರಿಯಾ ವಿಶೇಷಬಹುಲಾಂ ಭೋಗೈಶ್ವರ್ಯ ಗತಿಂ ಪ್ರತಿ ॥ ೪೩ ॥
ಭೋಗೈಶ್ವರ್ಯ ಪ್ರಸಕ್ತಾನಾಂ ತಯಾಪಹೃತ ಚೇತಸಾಂ ।
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ ೪೪ ॥
ತ್ರೈಗುಣ್ಯ ವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।
ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥
೨–೪೫ ॥

" ವೇದದಲ್ಲಿರುವ ಅರ್ಥವಾದಗಳಲ್ಲಿಯೇ ರತರಾಗಿಯೂ—ಅವುಗಳು ಹೇಳು ವದನ್ನು ಬಿಟ್ಟರೆ—ಮತ್ತೇನೂ ಇಲ್ಲವೆಂದು ವಾದಿಸುವವರಾಗಿಯೂ, ಕಾಮಾತ್ಮ ರಾಗಿಯೂ, ಸ್ವರ್ಗದಲ್ಲಿಯೇ ತಾತ್ಪರ್ಯವಿಟ್ಟವರಾಗಿಯೂ, ಇರುವ ಅಜ್ಞಾನಿಗಳು ಜನ್ಮಕರ್ಮಫಲಪ್ರದವಾಗಿರುವ ಭೋಗೈಶ್ವರ್ಯಗಳನ್ನು ಪಡೆಯುವದಕ್ಕೆ-

ಸಾಧನವಾದ-ಬಗೆ ಬಗೆಯ ಕರ್ಮಗಳಿಂದ ಕೂಡಿದ ಯಾವ ಬಣ್ಣನೆಯ ಮಾತು ಗಳನ್ನು ಗಳಹುತ್ತಿರುವರೋ ಆ ಮಾತಿಗೆ ಮನಸೋತು ಭೋಗೈಶ್ವರ್ಯಗಳಲ್ಲಿಯೇ ಆಸಕ್ತರಾಗಿರುವವರಿಗೆ ಅಂತಃಕರಣದಲ್ಲಿ ನಿಶ್ಚಯಾತ್ಮಕವಾದ ಜ್ಞಾನವು ಎಂದಿಗೂ ಉಂಟಾಗಲಾರದು.

" ವೇದವಾದರತರಾದ ಅಲ್ಪ ಬುದ್ಧಿಯುಳ್ಳ ಅವಿವೇಕಿಗಳು ಸ್ವರ್ಗಪ್ರಾಪ್ತಿಯೇ ಪರಮ ಪುರುಷಾರ್ಥವೆಂದು ವಾದಿಸುವ ಕಾಮಾತ್ಮರೂ ಭೋಗೈಶ್ವರ್ಯ ಪ್ರಸಕ್ತರೂ ಆದ್ದರಿಂದ ಮೂಢರಾದ ಆ ಸಂಸಾರಿಗಳಿಗೆ ನಿಶ್ಚಯಾತ್ಮಕವಾದ ಸಾಂಖ್ಯವಿಷಯಕ ಬುದ್ಧಿಯು ಸಮಾಧಿಯಲ್ಲಿ ಉಂಟಾಗಲಾರದು.

"ಎಲೈ ಅರ್ಜುನನೆ, ವೇದಗಳು ತ್ರೈಗುಣ್ಯದ ಸಂಸಾರ ವಿಷಯವಾದವುಗಳು. ಆದರೆ ನೀನು ನಿಸ್ತ್ರೈಗುಣ್ಯನಾಗಿರು, ಕಾಮವಿಲ್ಲದವನಾಗಿರು ; ಸುಖದುಃಖಾದಿ ದ್ವಂದ್ವರಹಿತನಾಗಿರು ; ಯಾವಾಗಲೂ ಸತ್ತ್ವಗುಣವನ್ನೇ ಆಶ್ರಯಿಸಿಕೊಂಡಿರು. ಯೋಗಕ್ಷೇಮದ ಚಿಂತೆಯನ್ನೂ ಬಿಟ್ಟು ಎಚ್ಚರಿಕೆ ತಪ್ಪದೆ ಆತ್ಮವಂತನಾಗಿರು. "

ವಾಸ್ತವವಾಗಿ, ಸಹಸ್ರಾರು ವರ್ಷಗಳು ನಮ್ಮ ಮೇಲೆ ಆಧಿಪತ್ಯ ನಡೆಸಿರುವ ಈ ವಿನಾಶಕರವಾದ ಭಾವನೆಯನ್ನು ನಮ್ಮ ದೇಶದಿಂದ ಗುಡಿಸಿ ಒಗೆಯೋಣ :— ಮದುವೆಯಾಗಿ, ಅಜ್ಞಾನದಲ್ಲಿ ಯಥೇಚ್ಛೆಯಾಗಿ ಸಂತಾನವೃದ್ಧಿಯನ್ನು ಮಾಡಿ, ಸಂಸಾರ ಬಂಧನದಲ್ಲಿಯೇ ಬದುಕಿದ್ದು, ಸಾಯಿರಿ. ಈ ನಾಚಿಕೆಗೇಡಿನ ಬದುಕಿನ ಪದ್ಧತಿಯನ್ನೇ ಹೊಲಸು ಕಸದಂತೆ ಗುಡಿಸಿ ಎಸೆಯಬೇಕು.

ನಾವು ಹಿಂದುಳಿದಿರುವದಕ್ಕಾಗಿ ಈಗ ಮಹಮ್ಮದೀಯ ರಾಜರುಗಳನ್ನು ನಿಂದಿಸುತ್ತೇವೆ ; ಈಗ ಬ್ರಿಟಿಷ್ ಸರ್ಕಾರದ ಆಡಳಿತದಲ್ಲಿ ತಪ್ಪನ್ನು ಹುಡುಕುತ್ತೇವೆ ; ಅನಂತರ ಈ ಕೇಡಿಗೆಲ್ಲಾ ಇಲ್ಲಿರುವ ಅನೇಕಾನೇಕ ಜಾತಿಮತಗಳೇ ಹೊಣೆಯೆಂದು ಹಳಿಯುತ್ತೇವೆ ; ಕೊನೆಗೆ ಶಿಕ್ಷಣ ಪದ್ಧತಿಯ ಮೇಲೆ ದೋಷಾರೋಪಣೆ ಮಾಡುತ್ತೇವೆ. ನಮ್ಮೀ ಆಕ್ಷೇಪಣೆಗಳು ಕೆಲವು ಮಟ್ಟಿಗೆ ಸರಿಯಿರಬಹುದು, ಯಾವ ಸಂಬಂಧವು ಎಲ್ಲಾ ಭಾರತೀಯರನ್ನೂ ಉತ್ಪತ್ತಿಮಾಡಿ, ನಾವೀಗಿರುವಂತೆ ನಮ್ಮನ್ನು ರೂಪಿಸಿದೆಯೋ, ಪ್ರಪಂಚದಲ್ಲಿಯೇ ಅತ್ಯಂತ ಪವಿತ್ರವಾದ ಆ ವಿವಾಹಸಂಬಂಧ ವನ್ನು ಕಳಂಕಿತವಾಗಿ ಮಾಡುವ ದೋಷದ ದ್ವಾರದಲ್ಲಿ ನಿಜವಾದ ದೂಷಣೆಯಿದೆ.

ಎಲ್ಲಾ ಸಂಸ್ಥೆಗಳಲ್ಲಿ ಅತ್ಯಂತ ಪ್ರಾಮುಖ್ಯವೂ ಅತ್ಯಂತ ಪವಿತ್ರವೂ ಆದ ವಿವಾಹ ಸಂಸ್ಥೆಯನ್ನು ಅತ್ಯಂತ ನಿರ್ಲಕ್ಷ್ಯವಾಗಿಯೂ ಅತ್ಯಂತ ಅವೈಜ್ಞಾನಿಕವಾಗಿಯೂ ಅತ್ಯಂತ ಲಜ್ಜಾಸ್ಪದವಾಗಿಯೂ ನಾವು ಉಪಯೋಗಿಸುತ್ತಿದ್ದೇವೆ. ಎಲ್ಲಾ ಜಾತಕಾನುಕೂಲತೆಗಳನ್ನು ವಿಮರ್ಶೆಮಾಡಿಯೂ ಜ್ಯೋತಿರ್ಗಣಿತ ಮಾಡಿಯೂ ಮುಹೂರ್ತಸಾಧನೆಮಾಡಿಯೂ ಶುಭ ಶಕುನಗಳನ್ನು ನೋಡಿಯೂ ಕೂಡ, ವೇದ ಮಂತ್ರೋಚ್ಚಾರಣೆಯಿಂದಲೂ ಲೆಕ್ಕವಿಲ್ಲದಷ್ಟು ಪವಿತ್ರ ಕರ್ಮಾಚರಣೆಯಿಂದಲೂ ಭಾರತದಲ್ಲಿ ಮಾಡುವ ಮದುವೆಗಳು ಅತ್ಯಂತ ಸಮಯೋಚಿತವಲ್ಲದ್ದೂ ಅಮಂಗಳ ಕರವೂ ಅಪವಿತ್ರವೂ ಆಗಿವೆ. ಯಾವ ಗ್ರಹಗಳ ಪ್ರಭಾವದ ಹೆಸರಿನಲ್ಲಿ ಅಲ್ಪ ವಯಸ್ಸಿನ ಬಾಲಕ ಬಾಲಕಿಯರು ವಿವಾಹಸಿದ್ಧರಾಗಿ ನಿಂತಿರುವರೋ ಆ ಗ್ರಹಗಳಲ್ಲಿ ಯಾವದೊಂದೂ ಆ ಅಕಾಲಿಕ ವಧೂವರರನ್ನು ನೋಡಿ ದುಷ್ಪಭಾವದಲ್ಲಿ ನಿಲ್ಲಲು ಧೈರ್ಯಮಾಡಲಾರದು. ಪಶುಗಳ ಘನತೆಗೆ ಕೂಡ ಕೀಳಾದ ಈ ದೃಶ್ಯವನ್ನು ನೋಡಿ, ಗ್ರಹಗಳು ಒಂದು ವೇಳೆ ಅನಿಷ್ಟ ಸ್ಥಾನಗಳಲ್ಲಿದ್ದರೂ ಸಹ ತತ್ತರಿಸಿ, ನಡುಗಿ ಆ ಸ್ಥಾನಗಳಿಂದ ಓಡುತ್ತವೆ ! ತಮ್ಮ ಜೀವನವನ್ನು ತಾವು ನಡೆಸಲಾರದ ಅಲ್ಪವಯಸ್ಸಿನ ಆ ಜೋಡಿಯ ಅಪವಿತ್ರವಾದ ಮದುವೆಯನ್ನು ವೇದ ಮಂತ್ರಗಳು ಪವಿತ್ರ ಗೊಳಿಸುವದಕ್ಕೆ ಬದಲು ತಮ್ಮ ಸತ್ತ್ವವನ್ನೆಲ್ಲಾ ಕಳೆದುಕೊಂಡು, ಅಂದಿನಿಂದ ಮುಂದೆ ಎಂದೆಂದೂ ಅವು ಪ್ರಭಾವಶೂನ್ಯವಾಗಿ ನಿಷ್ಫಲವಾಗಿರುತ್ತವೆ. ದೇಶದಲ್ಲಿ ಅಯೋಗ್ಯರನ್ನೂ ಅಶಕ್ತರನ್ನೂ ಅಪ್ರಯೋಜಕರಾದ ಪರಸತ್ತ್ವೋಪಜೀವಿಗಳನ್ನೂ ಹೆಚ್ಚು ಸಂಖ್ಯೆಯಲ್ಲಿ ಬೆಳೆಸುವದಕ್ಕಾಗಿ ಭಿಕಾರಿಗಳನ್ನು ದಾಂಪತ್ಯದಲ್ಲಿ ಕೂಡಿಸುವ ವಿವಾಹ ಕಾರ್ಯಕಲಾಪಗಳ ದೈವದ್ರೋಹಕರವಾದ ದುರ್ಗಂಧದಲ್ಲಿ ಯಾವ ದೇವ ಮಂದಾರಪುಷ್ಪವು ತಾನೆ ತನ್ನ ಮಧುರ ಪರಿಮಳವನ್ನು ಉಳಿಸಿಕೊಂಡೀತು !

ತರುಣ ಸಹೋದರರೆ, ಇದನ್ನು ನಿಲ್ಲಿಸಿರಿ ; ನಿಲ್ಲಿಸಿರಿ ! ದಿವ್ಯ ಭಾರತಮಾತೆಯ ಭವ್ಯ ಭವಿಷ್ಯಕ್ಕೆ ಹೊಣೆಗಾರರಾದ ದೇವ ಕುಮಾರರೇ, ಈ ಅನರ್ಥವನ್ನು ನಿಲ್ಲಿಸಿಬಿಡಿ. ನೀತಿಯ ಹೆಸರಿನಲ್ಲಿಯೂ ಭಾರತದ ಹೆಸರಿನಲ್ಲಿಯೂ ನಿಮಗಾಗಿಯೂ ನಿಮ್ಮ ಮುಂದಿನ ಸಂತತಿಗಾಗಿಯೂ ನಿಮ್ಮನ್ನು ಪ್ರಾರ್ಥಿಸುತ್ತೇನೆ ; ಅವಿವೇಕ ಪೂರ್ವಕವಾದ, ಕಾಲೋಚಿತವಲ್ಲದ, ದೇಶದಲ್ಲಿಯ ಅಂಧವಿವಾಹಗಳನ್ನು ಮುಕ್ತಾಯಮಾಡಿಬಿಡಿ. ಅದು ಜನರನ್ನು ಪರಿಶುದ್ಧಗೊಳಿಸಿ ಜನಸಾಂದ್ರತೆಯ ಸಮಸ್ಯೆಯನ್ನು ಸ್ವಲ್ಪಮಟ್ಟಿಗೆ ಪರಿಹರಿಸುತ್ತದೆ.

ಒಂದು ವೇಳೆ, ಈ ಸೂಚನೆಗಳನ್ನು ನೀವು ಅಸ್ವಾಭಾವಿಕವೆಂದು ಭಾವಿಸಬಹುದು.

ಈ ನಿರ್ದೇಶನಗಳನ್ನು ನೀವು ಆಚರಣೆಯಲ್ಲಿ ತರಬೇಕು ; ಇಲ್ಲವಾದರೆ, ಕೊರಗಿ ಸೊರಗುವ ಕ್ಷಾಮವೂ ದೀರ್ಘಯಾತನೆಯ ಸಾವೂ ಇದಕ್ಕೆ ಶಿಕ್ಷೆಗಳು. ಇದರಲ್ಲಿ ಅತಿಶಯೋಕ್ತಿ ಏನೂ ಇಲ್ಲ ! ಈ ಮಾತಿನ ಉಡಿಗೆಯೊಳಗೆ ಅತ್ಯಂತ ಕಠೋರವಾದ ವಸ್ತುಸ್ಥಿತಿಗಳೂ ಭೀಕರ ನಿಜಸ್ಥಿತಿಯೂ ಅಡಗಿವೆ. ಶಿಶು ವಿವಾಹದ ಮತ್ತು ಕನ್ನಿಕಾ (ಅಕ್ಷತ) ವೈಧವ್ಯದ ವಿಚಿತ್ರ ವಿಲಾಸವು ಪ್ರಪಂಚದಲ್ಲಿ ಅತ್ಯಂತ ಅಸ್ವಾಭಾವಿಕವಲ್ಲವೆ ? ಪ್ರಪಂಚದಲ್ಲಿ ಯಾವ ನಾಗರಿಕ ಸಮಾಜವನ್ನಾದರೂ ಕೇಳಿ. ನಿಮ್ಮಲ್ಲಿ ಅಣುಮಾತ್ರವಾದರೂ ಮಾನವೀಯತೆ ಉಳಿದಿದೆಯೆ ? ಹಾಗಾದರೆ, ಅಮಾನುಷವೂ ಅಸ್ವಾಭಾವಿಕವೂ ಆದ ಈ ಪದ್ಧತಿಗಳನ್ನು ತಡೆಗಟ್ಟದ ಹೊರತು ಹೇಗೆ ಸುಮ್ಮನಿರುತ್ತೀರಿ ? ಹೇಗೆ ವಿಶ್ರಾಂತಿ ಪಡೆಯುತ್ತೀರಿ ? ವೈಧವ್ಯ ಪಡೆದಿರುವ ಮಕ್ಕಳು ತಮ್ಮ ಕೋಮಲ ಕೈಗಳನ್ನು ಅರಿವಿಲ್ಲದೆ, ಸಹಾಯಕ್ಕಾಗಿ ಮುಂದೆ ಚಾಚಿವೆ; ಜೀವಂತ "ಸತಿ" ಯರು ನಿಮ್ಮ ಕ್ರೂರ ಪದ್ಧತಿಗಳ ಘೋರ ಚಿತೆಯ ಮೇಲೆ, ನಿಮ್ಮ ಕಣ್ಣೆದುರಿಗೇ ಅಂಗುಲ–ಅಂಗುಲವಾಗಿ ಸುಟ್ಟು ಸಂಕಟಪಡುತ್ತಿದ್ದಾರೆ ; ನಿರಪರಾಧಿಗಳಾದ ಅವರ ಕಂಬನಿಗರೆಯುತ್ತಿರುವ ಕಣ್ಣುಗಳ ಮೂಲಕವಾಗಿ ದೈವವೇ ನಿಮ್ಮ ಕಡೆಗೆ ಸಹಾಯಕ್ಕಾಗಿ ಇಣಕಿ ನೋಡುತ್ತಿದೆ. ಆ ಗೋಳಿಡುತ್ತಿರುವ 'ಭವಾನಿ' ಯಿಂದ ಎಷ್ಟುಕಾಲ ಮುಖವನ್ನು ತಿರುಗಿಸಿಕೊಂಡಿರುತ್ತೀರಿ ? ಆಕೆಯ ಮರ್ಮಭೇದಕವಾದ ದಾರುಣಪ್ರಲಾಪಗಳಿಗೆ ಇನ್ನು ಹೆಚ್ಚುಕಾಲ ಕಿವಿಗೊಡದಿದ್ದರೆ, ಆಕೆಯು ರಕ್ತದಾಹಿಯಾದ ಸೇಡಿನ ಬಯಕೆಯ ಭಯಂಕರ ಪ್ರತೀಕಾರದೇವತೆಯಾಗಿ ಪರಿವರ್ತನೆ ಹೊಂದುತ್ತಾಳೆ. ಆಕೆಯನ್ನು ನೋಡಿ ಭೂಮಿಯು ಸಹ ಗಡಗಡ ನಡಗುತ್ತದೆ. ಶಾಂತಿ ! ಶಾಂತಿ ! ಎಂದು ಶಾಂತಿಯ ವಿಷಯವಾಗಿ ತುಂಬಾ ಮಾತನಾಡುತ್ತಾರೆ. ಎಲ್ಲಿಯವರೆಗೆ ಉಗ್ರವಾದ ಸೇಡಿನ ಕಿಡಿಕಿಡಿಕಾರುವ ಪ್ರತೀಕಾರದೇವತೆಯೇ ಸ್ವಯಂ ಆಹ್ವಾನಿತಳಾಗಿದ್ದಾಳೋ ಅಲ್ಲಿಯವರೆಗೆ ದೇಶದಲ್ಲಿ ಶಾಂತಿಯು ಹೇಗಿದ್ದೀತು ? ಯೂರೋಪಿನಲ್ಲಿ ಜನರು ಸಮಾಜದಲ್ಲಿ ಎಷ್ಟು ಕೀಳು ಮಟ್ಟದವರೋ ಅಷ್ಟು ಮುಂಚೆ ಲಗ್ನವಾಗುತ್ತಾರೆ ; ಆದರೆ ಆ ಕೀಳುಜನರಲ್ಲಿ ಅತ್ಯಂತ ಕೀಳಾದವರು ಕೂಡ ಖಂಡಿತ ಹಿಂದೂಸ್ಥಾನಿಗಳಷ್ಟು ಚಿಕ್ಕ ವಯಸ್ಸಿನಲ್ಲಿ ಲಗ್ನವಾಗುವದಿಲ್ಲ. ಅಲ್ಲಿ ಹೆಚ್ಚು ಮೇಲಿನ ವರ್ಗದವರು ಬಹಳ ಅಪರೂಪವಾಗಿ ಮೂವತ್ತು ವರ್ಷದೊಳಗೆ ಲಗ್ನವಾಗುತ್ತಾರೆ. ಯೋಗ್ಯರಾದ ಕೆಲವೇ ಮಕ್ಕಳನ್ನು ಪಡೆಯುವದೇ ಅವರ ಉದ್ದೇಶ.

ಹೆರ್ಬರ್ಟ್‌ಸ್ಪೆನ್ಸರ್, ತನ್ನ ಜೀವವಿಜ್ಞಾನ ಶಾಸ್ತ್ರದ ತತ್ತ್ವಗಳಲ್ಲಿ ಬುದ್ಧಿಶಕ್ತಿಯು ಹೆಚ್ಚು ಉನ್ನತವಾಗಿ ಬೆಳೆದಷ್ಟೂ ಸಂತಾನಫಲಶಕ್ತಿಯು ಕಡಿಮೆಯಾಗುವದೆಂದು ತೋರಿಸಿದ್ದಾನೆ. ಪಾಶವೀ ಸಂತಾನಫಲಶಕ್ತಿಗೇ ಬೆಲೆಕೊಡುತ್ತಾ ಎಷ್ಟುಕಾಲ

ನಾವು ಅಷ್ಟು ಕೀಳು ಮಟ್ಟದಲ್ಲಿಯೇ ಇರಬೇಕು ? ಬ್ರಹ್ಮಚರ್ಯದ ಮಹಿಮೆಯನ್ನು ಹೊಗಳುವದರಲ್ಲಿ ಎಂದೂ ದಣಿಯದಿರವ ನಮ್ಮ ಶಾಸ್ತ್ರಗಳ ಪ್ರಕಾರ ಪರಿಶುದ್ಧಿಯಲ್ಲಿ ಹೊರತು ಆಧ್ಯಾತ್ಮಿಕವಾಗಲೀ ಭೌತಿಕವಾಗಲೀ ಯಾವ ಶಕ್ತಿಯೂ ಇಲ್ಲ. ಲೈಂಗಿಕ ಕ್ರಿಯೆಗಳಲ್ಲಿಯೂ ಕಾಮಸಂಕಲ್ಪಗಳಲ್ಲಿಯೂ ಕಾಮಶಕ್ತಿಯಾಗಿ (ಲೈಂಗಿಕ ಶಕ್ತಿಯಾಗಿ) ತೋರಿಕೊಳ್ಳುವ ಮಾನವಶಕ್ತಿಯ ಆ ಅಂಶವನ್ನು ನಿರೋಧಮಾಡಿ ವಶದಲ್ಲಿಟ್ಟು ಕೊಂಡರೆ, ಅದು ಓಜಸ್ಸು ಎಂಬ ಅಕ್ಷಯವಾದ ಆಧ್ಯಾತ್ಮಿಕಶಕ್ತಿಯಾಗಿ, ಸುಲಭವಾಗಿ ಪರಿವರ್ತನೆ ಹೊಂದುತ್ತದೆ

ಲೈಂಗಿಕ ಪ್ರವೃತ್ತಿಗಳ ಮೇಲೆ ನೀವು ನಿಯಂತ್ರಣಶಕ್ತಿಯನ್ನು ಸಂಪಾದಿಸಬೇಕು. ತನ್ನಲ್ಲಿರುವ ಪಾಶವೀಕಾಮವೇಗವನ್ನು ಯಾವ ಅವಿವೇಕಿಯು ಸ್ವಾಧೀನದಲ್ಲಿಟ್ಟು ಕೊಳ್ಳಲಾರದೆ, ಪ್ರಕೃತಿಯ ಅತ್ಯಂತ ಗುರುತರ ಗಂಭೀರ ಸಂಬಂಧವಾದ ಲೈಂಗಿಕ ಸಂಬಂಧದೊಡನೆ ಹುಡುಗಾಟಿಕೆಯಾಡುತ್ತಾನೋ ಅವನು ವಾಸ್ತವವಾಗಿ ತನ್ನ ರಕ್ತವನ್ನೇ-ತನ್ನ ಸತ್ತ್ವರಚನಾಕಾರಿಯಾದ ಬಿಳಿಯ ರಕ್ತವನ್ನೇ—ಚೆಲ್ಲುತ್ತಿರುವದನ್ನು ತಿಳಿಯನು ತಪ್ಪಾದ ಸ್ಥಳದಲ್ಲಿರುವ ಸಿರಿ-ಸಂಪತ್ತೇ ಹೊಲಸುಕಸ, ಅಥವಾ ಹೊಲಸು ಕಸವೆಂದರೆ ತಪ್ಪಾದ ಸ್ಥಳದಲ್ಲಿರುವ ಸಿರಿ-ಸಂಪತ್ತು ಎಂದು ಹೇಳಿರುವಂತೆ, ತಪ್ಪು ಕಡೆಗೆ ತಿರುಗಿಸಲ್ಪಟ್ಟಿರುವ ಈ ದೈವೀಶಕ್ತಿಯೇ ಎಲ್ಲಾ ಪಾಪಗಳ ಮೂಲವಾಗಿದೆ ಪಾಶವೀ ಕಾಮೋದ್ರೇಕವೆನ್ನುವ ಮಾತಿನಲ್ಲಿ ಪಾಶವೀ ಎನ್ನುವ ವಿಶೇಷಣವು ಅದರ ಕೀಳುತನವನ್ನು ಅತಿಶಯ ತೀವ್ರಗೊಳಿಸಿ ತೋರಿಸುತ್ತದೆ. ಪಶುಗಳು ಗೊತ್ತು ಗುರಿಯಿಲ್ಲದ ಸಂತಾನೋತ್ಪತ್ತಿ ಕಾರ್ಯದಲ್ಲಿ ಖಂಡಿತವಾಗಿ ಕೀಳಾಗಿಯೂ ತಿಳಿಗೇಡಿಗಳಾಗಿಯೂ ಇವೆ. ರಕ್ತಮಯವಾದ ಕ್ರೂರ ಹೋರಾಟವಲ್ಲಿ ಪರಿಣಾಮಗೊಳ್ಳುವ ಅನುಚಿತವಾದ ಸಂತಾನ ವರ್ಧನವೇ ಆ ಪಶುಗಳ ವರ್ತನೆಯಲ್ಲಿರುವ ಹೇಯವಾದ-ಅಪಕೀರ್ತಿಕರವಾದ—ಕಳಂಕವು. ಆದರೂ ಅತ್ಯಾಸಕ್ತಿಗಾಗಿಯೇ ಆಸಕ್ತಿವಹಿಸುವದರಲ್ಲಿ ಪ್ರಾಣಿಗಳು ಸಂಪೂರ್ಣ ನಿರ್ದೋಷಿಗಳಾಗಿವೆ. ಮನುಷ್ಯನ ಭಾವನೆಗಳು ವಿವೇಕದ ವಶದಲ್ಲಿರುವದರಿಂದ ಪಶುಗಳಿಗಿಂತಲೂ ಅವನು ಹೆಚ್ಚು ಮೇಲಿನ ಅಂತಸ್ತಿನವನೆಂದು ಎಣಿಸಲ್ಪಟ್ಟಿದ್ದಾನೆ. ಯಾವ ಮನುಷ್ಯನು ವಿವೇಚನಾ ಶೂನ್ಯನಾಗಿ ಮಿತಿಮೀರಿದ ಸಂತಾನವನ್ನು ಉತ್ಪತ್ತಿಮಾಡಿ ಪಶುಗಳಿಗೆ ಸಮನಾಗುತ್ತಾನೋ ಮತ್ತು ನಿಷ್ಪ್ರಯೋಜಕವೂ ಮಲಿನವೂ ಆದ ಕಾಮಾಸಕ್ತಿಯಲ್ಲಿ ಪಶುಗಳಿಗಿಂತಲೂ ಎಷ್ಟೋ ಕೆಳಗೆ ಮುಳುಗುತ್ತಾನೋ ಅಂಥವನು ಯಾವ ಹೀನತೆಗೂ ಅವನತಿಗೂ ಇಳಿಯಲಾರ ?

ಪರಿಶುದ್ಧತೆ! ಪರಿಶುದ್ಧತೆ! ಬಂದೂಕಿನ ಸನೀನದ ಮೊನೆಚಿನಲ್ಲಿ ನೀವು ಪರಿಶುದ್ಧತೆಯನ್ನು ಸಂಪಾದಿಸಬೇಕಾಗಿದೆ. ನೀವು ಪರಿಶುದ್ಧಿಯನ್ನು ಗಳಿಸದಿದ್ದರೆ, ವಿಕಾಸ ಹೋರಾಟದ ನಿರ್ದಯವಾದ ಚಕ್ರವು ನಿಮ್ಮನ್ನು ಸಂಪೂರ್ಣವಾಗಿ ನಿರ್ನಾಮ ಮಾಡಿ ಹಾಕುತ್ತದೆ. ಇವತ್ತು ನಿಮ್ಮ ಒಂದೇ ಭರವಸೆಯು ಪರಿಶುದ್ಧಿಯಲ್ಲಿದೆ. ವಿಕಾಸ ಕಾರ್ಯ ವಿಧಾನದ ಶಕ್ತಿಯು–ಅನಾಗರಿಕ–ಕಾಡುಜನರ ಸಮೀಪ ಸಂಬಂಧಗಳಲ್ಲಿ ಬ್ರಹ್ಮಚರ್ಯ ಮತ್ತು ಪಾತಿವ್ರತ್ಯಗಳ ಭಾವನೆಗಳನ್ನು ಹೇಗೆ ಬಲವಂತವಾಗಿ ಹುಟ್ಟಿಸಿತೋ ಹಾಗೆ ಇವತ್ತು ನೀವು ಬದುಕಿರಬೇಕಾದರೆ, ನಿಮ್ಮಲ್ಲಿ ನಿರ್ಮಲವಾದ ಮನಸ್ಸೂ (ನ್ಯಾಯವಿರುದ್ಧವಾಗಿಯೂ ಧರ್ಮವಿರುದ್ಧವಾಗಿಯೂ ಸಂಭೋಗ ಮಾಡದಿರುವ) ಪರಿಶುದ್ಧ ನೈತಿಕ ವರ್ತನೆಯೂ ಅತ್ಯಗತ್ಯವಾಗಿ ಬೇಕಾಗಿವೆ. ಓ ಭಾರತೀಯರೆ, ಇದರಲ್ಲಿ ಕೊರತೆಯಾದರೆ ನೀವು ಬಾಳಲಾರಿರಿ. ಆ ಸಾಧನೆಯು ಸುಲಭವಾಗಲಿ, ಕಠಿಣವಾಗಲಿ ನೀವು ಅದನ್ನು ಗಳಿಸಲೇ ಬೇಕು. ಭಾರತದ ಸಲುವಾಗಿಯೂ ನಿಮ್ಮ ದೇಹದ ಸಲುವಾಗಿಯೂ ನಿಮ್ಮ ಮಿದುಳಿನ ಸಲುವಾಗಿಯೂ ಧರ್ಮದ ಸಲುವಾಗಿಯೂ ಇಹಲೋಕ ಅಥವಾ ಪರಲೋಕಗಳ ಸಲುವಾಗಿಯೂ ನೀವೂ ಒಳಹೊರಗೆಲ್ಲಾ ಸಂಪೂರ್ಣವಾಗಿ ಶುದ್ಧರಾಗಿರಬೇಕು. ಪರಿಶುದ್ಧಿಯಿಲ್ಲದೆ ವೀರ್ಯ–ಶೌರ್ಯ–ಪ್ರತಾಪಗಳಿಲ್ಲ; ಪರಿಶುದ್ಧಿಯಿಲ್ಲದೆ ಯೋಗವಿಲ್ಲ, ಸಂಯೋಗವಿಲ್ಲ, ಐಕ್ಯತೆಯಿಲ್ಲ; ಪರಿಶುದ್ಧಿಯಿಲ್ಲದೆ ಶಾಂತಿಯಿಲ್ಲ.

ವಿದ್ಯಾಭ್ಯಾಸ: ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಪಾಂಡಿತ್ಯ ಪದವಿಯನ್ನು ತೆಗೆದುಕೊಂಡಿರದೆ, ಪದವಿಯ ಅಭ್ಯರ್ಥಿಗಳಾಗಿ ಇರುವ ವಿದ್ಯಾರ್ಥಿಗಳಿಗಿಂತಲೂ (under graduates) ಅಮೆರಿಕಾ ಇಂಗ್ಲೆಂಡ್‌ಗಳಲ್ಲಿ ಶಾಲೆಗೇ ಹೋಗದಿರುವ ಜನರು ಹೆಚ್ಚು ಬುದ್ಧಿವಂತರಾಗಿದ್ದಾರೆ. ಅದು ಹೇಗೆ? ಅಗ್ಗವಾದ ದೈನಂದಿನ ಪತ್ರಿಕೆಗಳೇ ಅವರ ಸಂಸ್ಕೃತಿಗೆ ಮುಖ್ಯವಾದ ಮೂಲ ಸಾಧನ. ಇಂಗ್ಲೆಂಡ್, ಜಪಾನ್, ಅಮೆರಿಕಾಗಳಲ್ಲಿ ಕಾಲೇಜುಗಳಿಗಿಂತಲೂ ವರ್ತಮಾನ ಪತ್ರಿಕೆಗಳು ಜ್ಞಾನ ಪ್ರಸಾರವನ್ನು ಹೆಚ್ಚು ವಿಸ್ತಾರವಾಗಿ ಮಾಡುತ್ತಿವೆ. ನಮ್ಮ ದೇಶದಲ್ಲಿ ಸರ್ಕಾರವೂ ಇತರ ಸಂಸ್ಥೆಗಳೂ ಕೆಲವು ಮಟ್ಟಿಗೆ ವಿದ್ಯಾಭ್ಯಾಸವನ್ನು ಹರಡುವದಕ್ಕಾಗಿ ಅವುಗಳನ್ನು ನಾವು ಅಭಿನಂದಿಸುತ್ತೇವೆ; ಆದರೆ ಅದು ವಾಸ್ತವವಾಗಿ ಏನೂ ಅಲ್ಲ; ನಮ್ಮ ಜನಸಾಮಾನ್ಯರ ಅಜ್ಞಾನಕ್ಕೂ ನಮ್ಮ ಹೆಂಗಸರ ಭಯಂಕರ ಅಂಧಕಾರಮಯ ಸ್ಥಿತಿಗೂ ಸ್ಥಾನಮಾನಗಳಿಗೂ ನಮ್ಮನ್ನು ನಾವೇ ನಿಂದಿಸಿಕೊಳ್ಳಬೇಕು. ಅವನತಿಗೆ ಕಾರಣವಾದ ಕಾರ್ಯಗಳಿಗೂ ಅಕಾರ್ಯಗಳಿಗೂ ಈಗ ನಿರ್ಲಕ್ಷ್ಯವಾಗಿ ಪೋಲು ಮಾಡುತ್ತಿರುವ ಪ್ರಾಣಶಕ್ತಿಯನ್ನು ಸ್ತ್ರೀಯರನ್ನು ಉದ್ಧರಿಸುವ ಪ್ರಯತ್ನಗಳಲ್ಲಿಯೂ

ಜನಸಾಮಾನ್ಯರಿಗೆ ಶಿಕ್ಷಣ ಕೊಡುವದರಲ್ಲಿಯೂ ನಿಮ್ಮನ್ನು ನೀವು ಮೇಲಕ್ಕೆತ್ತಿ ಕೊಳ್ಳುವದರಲ್ಲಿಯೂ ರಾಷ್ಟ್ರವನ್ನು ಪುನರುಜ್ಜೀವನಗೊಳಿಸುವದರಲ್ಲಿಯೂ ವಿನಿಯೋಗಿಸಿರಿ

ಅದನ್ನು ಸಾಧಿಸುವದಕ್ಕೆ ಅತ್ಯಂತ ಸುಲಭವೂ ಅತ್ಯಂತ ನೇರವೂ ಆದ ದಾರಿಯೆಂದರೆ ಭಾರತದ ವೃತ್ತಪತ್ರಿಕೆಗಳ ಸ್ಥಿತಿಯನ್ನು ಉತ್ತಮಪಡಿಸುವದು, ಅಭಿವೃದ್ಧಿ ಮಾಡುವದು. ನಿಜವಾಗಿಯೂ ಉಪಯೋಗಕರವಾದ ಪತ್ರಿಕೆಗಳನ್ನು ಪ್ರಾರಂಭ ಮಾಡಿ; ಸ್ತ್ರೀಯರ ಮತ್ತು ಜನಸಾಮಾನ್ಯರ ತಾಯ್ನುಡಿಯಲ್ಲಿರುವ ಪತ್ರಿಕೆಗಳನ್ನೂ ಈಗಾಗಲೇ ಪ್ರಚಲಿತವಾಗಿರುವ ವೃತ್ತಪತ್ರಗಳನ್ನೂ ಉತ್ತಮಗೊಳಿಸಿರಿ. ಈ ದಿಶೆಯಲ್ಲಿ ಈಗಾಗಲೇ ಒಂದೆರಡು ಪ್ರಯತ್ನಗಳನ್ನು ಮಾಡಿರಬಹುದು; ಆದರೆ ಮುಂದುವರಿದ ವಿದ್ಯಾರ್ಥಿ ವರ್ಗವು ಸಾಮಾನ್ಯವಾಗಿ ದೇಶ ಭಾಷೆಯಲ್ಲಿರುವ ವಿಷಯವನ್ನು ಓದುವದು ತಮ್ಮ ಮರ್ಯಾದೆಗೂ ಯೋಗ್ಯತೆಗೂ ಕೀಳಾದುದೆಂದು ಭಾವಿಸುತ್ತದೆ. ನೀವು ನಿಮ್ಮ ತಾಯ್ನುಡಿಯನ್ನು ಗೌರವಿಸುವದಕ್ಕೆ ಕಲಿಯಬೇಕು. ಯುವಕರ ಭಾರತೀಯ ಸಂಸ್ಥೆಯು (Youngmen's Indian Association) ಸುಲಭವೂ ಸ್ಪಷ್ಟವೂ ಸರಳವೂ ಆದ ಹಿಂದಿಯಲ್ಲಿ—ಹೆಚ್ಚು ನಿಜವಾಗಿ-ಹಿಂದೀ ಲಿಪಿಯುಳ್ಳ ಪಂಜಾಬಿಯಲ್ಲಿ, ಸಾಧ್ಯವಾದಷ್ಟು ಪರ್ಷಿಯನ್ ಅಥವಾ ಸಂಸ್ಕೃತ ಶಬ್ದಗಳನ್ನು ಬಳಸದೆ, ನಿಮಗೆ ಹೆಚ್ಚು ರೂಢಿಯಿಲ್ಲದ ಶೈಲಿಯನ್ನು ಉಪಯೋಗಿಸಬೇಕೆಂಬ ವಕ್ರವಾದ ಅಭಿರುಚಿಯ ಚಾಪಲ್ಯಕ್ಕೆ ಬಲಿಯಾಗದೆ, ತನ್ನ ಪ್ರಚಾರಾಂಗವಾದ ಒಂದು ಪತ್ರಿಕೆಯನ್ನು ಪ್ರಾರಂಭಿಸಲಿ. ಶೈಲಿಯು ಸ್ವಾಭಾವಿಕವಾಗಿರಲಿ; ಯಾರನ್ನೂ ಅನುಕರಣ ಮಾಡದೆ ನೀವು ಆಲೋಚಿಸಿದಂತೆ ಬರೆಯಿರಿ. ಕಾಲೇಜ್ ವಿದ್ಯಾರ್ಥಿಗಳು ಸಣ್ಣ ಲೇಖನಗಳನ್ನು ಪತ್ರಿಕೆಗೆ ಒದಗಿಸಬಹುದು ನೀವು ಗ್ರಂಥಗಳನ್ನು ಓದುವಾಗ ಗ್ರಹಿಸಿರುವ ಅತ್ಯಂತ ಗಮನಾರ್ಹವಾದ ಭಾವನೆಗಳನ್ನೂ ರಸಭಾವಗಳನ್ನೂ ಪ್ರಬೋಧಕವಾದ ವಿಚಾರಗಳನ್ನೂ ನಿಮ್ಮ ತಾಯ್ನುಡಿಯಲ್ಲಿ ವ್ಯಕ್ತಮಾಡುವದಕ್ಕೆ ಆಗಾಗ ಪ್ರಯತ್ನ ಮಾಡುವದರಿಂದ ವಾಚಕರಿಗೆ ಹೆಚ್ಚು ಪ್ರಯೋಜನವಾಗುವದೆಂದು ಬೇರೆಯವರು ಭಾವಿಸಿದರೂ ಅದು ಲೇಖಕರಿಗೇ ಹೆಚ್ಚು ಉಪಕಾರವಾಗುತ್ತದೆ ಈ ಕಾರ್ಯಕ್ಕೆ ವಿಸ್ತಾರ—ವಿವರಗಳಲ್ಲಿ ನೀವು ದಣಿಯಬೇಕಾದುದಿಲ್ಲ. ಆ ಲೇಖನಮಾಲೆಯಲ್ಲಿ, ಮೊದಲನೆಯ ಲೇಖನವನ್ನು ಹಿಂದೀ ಅಕ್ಷರಮಾಲೆಯಿಂದಲೂ ಸುಲಭವಾದ ಅಕ್ಷರ ಸಂಯೋಜನೆಯಿಂದ ರಚಿಸುವ ಬಳಕೆಯ ಶಬ್ದಗಳಿಂದಲೂ ಪ್ರಾರಂಭಿಸಬೇಕು. ದೇಶದಲ್ಲಿ ಬೆಳಕಿಗೂ ವಿದ್ಯೆಗೂ ಮಾರ್ಗದರ್ಶಕರಾದ ಪುಣ್ಯವಂತ ಕಾಲೇಜ್ ವಿದ್ಯಾರ್ಥಿಗಳು, ಓದುಬರಹ ಬಾರದ ತಮ್ಮ ಅಕ್ಕತಂಗಿಯರಿಗೂ ತಾಯಿಯರಿಗೂ ಹೆಂಡರಿಗೂ

ಹೆಣ್ಣುಮಕ್ಕಳಿಗೂ ಅಥವಾ ಬೇರೆ ಸಂಬಂಧಿಗಳಾದ ಹೆಂಗಸರಿಗೂ ಓದುಬರೆಹಗಳನ್ನು ಕಲಿಸುವ ಸಂತೋಷವಾದ ಪವಿತ್ರ ಕರ್ತವ್ಯವನ್ನು ಕೈಗೊಳ್ಳಲಿ; ಸಾರ್ವಜನಿಕ ಶಾಲಾ ಸಂಸ್ಥೆಗಳಿಗಾಗಿ ಕಾಯಬೇಡಿ. ಈ ಪವಿತ್ರವಾದ ಹೊಣೆಗಾರಿಕೆಯು ನಿಮ್ಮ ಹೆಗಲುಗಳ ಮೇಲೆ ಬಿದ್ದಿದೆ. ಭಾರತವು ಬದುಕಬೇಕಾದರೆ, ಸ್ತ್ರೀ ವಿದ್ಯಾಭ್ಯಾಸ ಕಾರ್ಯವು ವಿಸ್ತಾರವಾಗಿ ಪ್ರಸಾರವಾಗಬೇಕು. ಹಾಗಾದರೆ, ಅದು ನಿಮ್ಮ ಕೈಯಿಂದಲೇ ಏಕೆ ಪ್ರಾರಂಭವಾಗಬಾರದು? ನಿಮ್ಮ ಪ್ರಾಂತ್ಯದಲ್ಲಿ ಅಕ್ಷರವನ್ನು ಕಲಿಯದ ಒಬ್ಬ ಹೆಂಗಸಾಗಲೀ ಒಬ್ಬ ಬಡ ಮನುಷ್ಯನಾಗಲೀ ಇರಬಾರದೆಂದು ಪ್ರಯತ್ನಮಾಡಿ ದೇಶದ ಮುಖದಿಂದ ಈ ಅಜ್ಞಾನದ ಕಳಂಕವನ್ನು ತೊಡೆದುಹಾಕಿ. ನಿಮ್ಮ ನೆರೆಯಲ್ಲಿರುವ ಝಾಡಮಾಲೀ ಹೆಂಗಸಿಗೆ ವಿದ್ಯೆಕಲಿಸುವದಕ್ಕೆ ನಿಮಗೆ ನಾಚಿಕೆಯೋ ಅಪಮಾನವೋ ಭಯವೋ, ಏನಾಗುವದು? ಹಾಗಾದರೆ, ನಿಮ್ಮ ವರ್ತನೆಗೂ ನೀತಿಗೂ ಧಿಕ್ಕಾರವೇ ಸರಿ! ಬಡ–ಮೂಢ ಜನರನ್ನು ತಾಯಿಯ ಸಹಾನುಭೂತಿಯಿಂದಲೂ ವಾತ್ಸಲ್ಯದಿಂದಲೂ ಸಮೀಪಿಸಿ ಪ್ರೀತಿಯಿಂದ ವಿದ್ಯೆ ಕಲಿಸಬೇಕು ಎಂಥಾ ದಿವ್ಯವಾದ ಕಾರ್ಯ! ಆ Y. M. I. A. ತರುಣರ ಭಾರತೀಯ ಸಂಸ್ಥೆಯ (ತ. ಭಾ. ಸಂ) ಆ ಕಾರ್ಯಾಂಗದಲ್ಲಿ ಕ್ರಮೇಣ ಪ್ರಾಥಮಿಕ (ಅಥವಾ ಪೀಠಿಕಾರೂಪ) ಭೌತವಿಜ್ಞಾನ, (Elementary Physics), ಜೀವಿಗಳ ಶರೀರ ವಿಜ್ಞಾನ (Physiology) ಖಗೋಳ ವಿಜ್ಞಾನ (Astronomy), ಚರಿತ್ರೆ (History) ರಾಜಕೀಯ ಅರ್ಥವಿಜ್ಞಾನ (Political Economy), ಮನಶ್ಶಾಸ್ತ್ರ, (Psychology), ಇವೇ ಮೊದಲಾದ ಶಾಸ್ತ್ರಗಳು ಸಾಧ್ಯವಾದಷ್ಟು-ಸುಲಭವೂ ಸ್ವಾರಸ್ಯವೂ ಆದ ಅಭ್ಯಾಸಕ್ರಮವನ್ನು ಸೇರಿಸಿಕೊಳ್ಳಬಹುದು. ಕಾಲಕ್ರಮೇಣ ಶಾಸ್ತ್ರಾಧ್ಯಯನದ ಶೈಲಿಯನ್ನು ಹೆಚ್ಚು ಶ್ರೇಷ್ಠವೂ ನಿಯಮಬದ್ಧವೂ ಪ್ರೌಢ - ಪ್ರಾಚೀನವೂ ಆಗಿ ಮಾಡಬಹುದು.

Rama recommends Hindi characters for the paper, for Hindi bids fair to become ere long the national language of India.

**"ವೃತ್ತಪತ್ರಿಕೆಗಳಿಗೆ ರಾಮನು ಹಿಂದೀ ಲಿಪಿಗಳು ಅರ್ಹವೆಂದು ಸಲಹೆ ಮಾಡುತ್ತಾನೆ (ಶಿಫಾರಸ್ಸು ಮಾಡುತ್ತಾನೆ); ಏಕೆಂದರೆ, ಹಿಂದೀ ಭಾಷೆಯು ಇಷ್ಟರಲ್ಲಿಯೇ–ಶೀಘ್ರದಲ್ಲಿಯೇ–ರಾಷ್ಟ್ರಭಾಷೆಯಾಗುವ ಶುಭ ಸೂಚನೆ ಇದೆ."**

ಸ್ತ್ರೀಯರಿಗೂ ಬಡ ಜನರಿಗೂ ವಿದ್ಯಾಭ್ಯಾಸ ಮಾಡಿಸುವದೇ ನಿಮ್ಮ ಎದುರಿಗಿರುವ ಸರ್ವಶ್ರೇಷ್ಠ ಸಾರ್ವಭೌಮ ಕರ್ತವ್ಯವಾಗಿದೆ ; ಈ ಕರ್ತವ್ಯವನ್ನು ನೆರವೇರಿಸಿದರೆ, ಅಂತಿಮವಾಗಿ ನಿಮ್ಮನ್ನೇ ಅದು ಮಹೋನ್ನತ ಘನತೆಗೇರಿಸುತ್ತದೆ. ಆದರೆ, ಹೆಚ್ಚು ಮುಂದುವರಿದ ದೇಶಗಳಲ್ಲಿರುವ ಭೂವ್ಯವಸಾಯವನ್ನೂ ಕಲೆಗಳನ್ನೂ ಕೈಗಾರಿಕೆಯ ವಿದ್ಯೆಗಳನ್ನೂ ಸಂಪಾದಿಸಿ, ಆ ಪ್ರಯೋಜನಕಾರಿಯಾದ ಜ್ಞಾನವನ್ನು ಭಾರತದಲ್ಲಿ ವಿಶಾಲವಾಗಿ ಪ್ರಸಾರ ಮಾಡುವ ಹೆಚ್ಚು ನೇರವಾದ, ಅದಕ್ಕಿಂತಲೂ ಹೆಚ್ಚು ಅತ್ಯಗತ್ಯವಾದ ಕಾರ್ಯವಿದೆಯೆಂಬದನ್ನು ಮರೆಯಬೇಡಿ.

ಧರ್ಮ :—ಪತ್ರಿಕೆಗಳ ವಿಷಯವೇ ನಿಮ್ಮ ಸಹನೆಯನ್ನು ಹೆಚ್ಚು ಕಾಲ ಪೀಡಿಸಿತೋ ? ಕೇಳಿ ಕೇಳಿ ದಣಿದಿದ್ದೀರೋ ? ದಣಿದಿರೋ ಇಲ್ಲವೋ ಸ್ವಲ್ಪ ತಡೆಯಿರಿ, ನಿಲ್ಲಿ, ಸಮಾಧಾನದಿಂದಿರಿ ! ರಾಮನು ತಿಳಿದಿರುವದನ್ನೆಲ್ಲಾ ನಿಮಗೆ ತಿಳಿಸಿದ ಹೊರತು ನಿಮ್ಮನ್ನು ಬಿಡುವದಿಲ್ಲ. ಓ ! ವಿವಾಹದ ಕರೆಗೆ ಓಗೊಟ್ಟು ಬಿಜಯ ಮಾಡಿರುವ ಅತಿಥಿ ದೇವತೆಗಳೆ ! ನಿಮಗೇನಾದರೂ ಬೇರೆ ಅತ್ಯಂತ ಮಹತ್ವದ ಕಾರ್ಯಗಳಿದ್ದವೋ ? ಪಾಪ, ಇದ್ದಿರಬಹುದು , ಆದರೆ, ಯಾವದೊಂದನ್ನು ಹೇಳುವದಕ್ಕಾಗಿಯೇ ಇವನು ಜನ್ಮವೆತ್ತಿದ್ದಾನೆಯೋ ಅದನ್ನು ಹೇಳಿದ ಹೊರತು ಈ 'ಪುರಾತನ ನಾವಿಕನು' (Ancient Mariner) ನಿಮ್ಮನ್ನು ಕೈ ಬಿಡುವದಿಲ್ಲ. ರಾಮನ ಸಂದೇಶವನ್ನು ಕೇಳುವದಕ್ಕಿಂತಲೂ ಹೆಚ್ಚು ಮಹತ್ವದ ಕರ್ತವ್ಯವು ಯಾವದೂ ಇರಲಾರದು

ಕೌಟುಂಬಿಕ, ಸಾಮಾಜಿಕ, ಮತ್ತು ರಾಷ್ಟ್ರೀಯ ಕರ್ತವ್ಯಗಳೇ ನಿಮ್ಮ 'ಕರ್ಮಕಾಂಡ' ; ಕತ್ತಲೆಯ ಕರ್ಮಗಳನ್ನು ಮಾತ್ರ ಕತ್ತಲೆಯಲ್ಲಿ ನಡೆಸಬಹುದೇ ಹೊರತು, ಉದಾತ್ತವಾದ ಯಾವ ಕರ್ಮವನ್ನೂ ಕತ್ತಲೆಯಲ್ಲಿ ನಡೆಸುವದು ಸಾಧ್ಯವಿಲ್ಲ. ಎದೆಯಲ್ಲಿ ಶ್ರದ್ಧಾಭಕ್ತಿಯ ಜ್ವಾಲೆಯನ್ನೂ, ಜ್ವಲಂತಜ್ಞಾನದ ದೀವಟಿಗೆಯನ್ನೂ ಜೀವಂತವಾಗಿ ಇಡದೆ, ನೀವು ಒಂದು ಹೆಜ್ಜೆಯನ್ನೂ ಮುಂದಿಡಲಾರಿರಿ ; ಯಾವದನ್ನೂ ಸಾಧಿಸಲಾರಿರಿ ನಿಮಗೆ ಬೇಸರ ಬರುವಂತೆ ನಿತ್ಯವೂ ಎಡೆಬಿಡದೆ ನಿಮ್ಮ ಕಿವಿಗಳಲ್ಲಿ ಹೇಳುತ್ತಿರುವ ಈ ಎಲ್ಲಾ ನಿರ್ದೇಶಗಳೂ ವಿವರಗಳೂ ಸುಮ್ಮನೆ ನಿಮ್ಮ ಜೀವಗಳ ದೇಹದಂತಿವೆ ; ಆದರೆ ಚೈತನ್ಯಶಕ್ತಿಯಿಲ್ಲದೆ ದೇಹವು ನಿಲ್ಲಲಾರದು. ಜೀವಂತವಾದ ಶ್ರದ್ಧಾದರವೂ ಜ್ವಲಂತಜ್ಞಾನವೂ ಯಶಸ್ವಿಯಾದ ಎಲ್ಲಾ ಪ್ರಯತ್ನ ಪರಂಪರೆಯ–ಚಳವಳಿಯ–ಚೈತನ್ಯವಾಗಿವೆ ಭೌತಿಕವಾದ (Materialism), ಸಂದೇಹವಾದ (Scepticism), ದೃಷ್ಟ–ಪ್ರತ್ಯಕ್ಷ-ಪ್ರಮಾಣವಾದ (Positivism)

ನಿರೀಶ್ವರವಾದ-ನಾಸ್ತಿಕವಾದ-(Atheism) ಅಜ್ಞೇಯತಾವಾದ (Agnosticism) ಇವೇ ಮೊದಲಾದ ವಾದಗಳ ಪ್ರತಿಜ್ಞಾಬದ್ಧರಾದ ವೀರನಾಯಕರ ಯಶಸ್ಸಿಗೆ ಕೂಡ ಅವರಲ್ಲಿರುವ ಧರ್ಮದ ಕ್ರಿಯಾಶೀಲ ಚೈತನ್ಯಶಕ್ತಿಯೇ ಕಾರಣವಾಗಿರುವದರಿಂದ, ಅವರು ಅರಿಯದೇ ಅದಕ್ಕೆ ಋಣಿಗಳಾಗಿದ್ದಾರೆ. ಕೆಲವು ನಿದರ್ಶನಗಳಲ್ಲಿ ಧರ್ಮದ ಅನುಯಾಯಿಗಳಿಗಿಂತಲೂ ಹೆಚ್ಚು ನಿಷ್ಠೆಯಿಂದ ಅವರು ತಮ್ಮ ಧರ್ಮದಂತೆ ಜೀವಿಸಿದರು. ಇಲ್ಲಿ ಸಹಸ್ರ ಸಹಸ್ರ ಕೆಲಸವಿಲ್ಲದ ಕೈಗಳಿಗೆ ಉದ್ಯೋಗವನ್ನು ಕೊಟ್ಟಿರುವ ರಬ್ಬರ್ ಕಾರ್ಖಾನೆಯಿದೆ ; ದೇಶದಲ್ಲಿರುವ ಬಂಡವಾಳವನ್ನು ಬೆಳೆಸುವ ದಕ್ಕೂ ಬಡ ಶ್ರಮಜೀವಿಗಳನ್ನು ಪ್ರೋತ್ಸಾಹಿಸುವದಕ್ಕೂ ರಾಷ್ಟ್ರದ ವ್ಯಾಪಾರ ಉದ್ಯೋಗಗಳನ್ನು ತೆರೆದಿದೆ, ಉಗಿ–ಹಡಗುಗಳ ಸಂಘಗಳಿಗೆ (Steamship Companies) ಹೇರಳವಾದ ಕೆಲಸಗಳನ್ನೂ ವರಮಾನವನ್ನೂ ತಂದಿದೆ ; ರೈಲ್ವೇ ನೌಕರರಿಗೂ ಪೋಸ್ಟಾಫೀಸುಗಳಿಗೂ ಇತರ ಉದ್ಯೋಗ ಸಂಸ್ಥೆಗಳಿಗೂ ಬೇಕಾದಷ್ಟು ಆದಾಯ ಬರುವಂತೆ ಮಾಡಿದೆ. ಆದರೆ,ಅದೃಶ್ಯವಾಗಿ ಮನುಷ್ಯನ ಮನಸ್ಸಿನಲ್ಲಿ ನಡೆಯುವ ಮಹತ್ ಪರಿವರ್ತನೆಯು, ಇವನ ಕೃತಿಗೆ, ಒಂದು ಗಾಂಭೀರ್ಯವನ್ನೂ ಸೌಂದರ್ಯವನ್ನೂ ಘನತೆಯನ್ನೂ ನೀಡದಿದ್ದರೆ, ಈ ಎಲ್ಲಾ ಮಹತ್ ಕಾರ್ಯಗಳೂ ಹೇಗೆ ಯಶಸ್ವಿಯಾಗಬೇಕು ? ನಿಮ್ಮೊಳಗೆ ನಡೆಯುವ ಉದಾತ್ತವಾದ ಪ್ರತಿಕ್ರಿಯೆ ಯಿಂದಲೂ ಹೃದಯ ಪರಿವರ್ತನೆಯಿಂದಲೂ ಮನಸ್ಸಿನ ಸುಧಾರಣೆಯಿಂದಲೂ ಆಧ್ಯಾತ್ಮಿಕ ಸಾಮ್ಯಸ್ಥಿತಿಯಿಂದಲೂ ಅಥವಾ ನಿಮ್ಮ ಆತ್ಮದಲ್ಲಿಯೇ ಬೆಳಗುವ ಪರಮಾತ್ಮಪ್ರಜ್ಞೆಯಿಂದಲೂ ಸೊಬಗನ್ನೂ ಮಹಿಮೆಯನ್ನೂ ಪ್ರಭೆಯನ್ನೂ ಪ್ರಭಾವವನ್ನೂ ಪಡೆದಲ್ಲದೆ, ನಿಮ್ಮ ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ ಅಥವಾ ರಾಜಕೀಯ ಯಾವದೇ ಕಾರ್ಯವೂ ಅಭಿವೃದ್ಧಿಪಡೆಯಲಾರದು. "ಶ್ರದ್ಧಾದರವೇ ಮಹಾ ಜೀವದಾನಮಾಡುವ ಸತ್ತ್ವ" ''Faith is great life-giving'' ಎಂದು ಕಾರ್ಲೈಲ್ ಹೇಳಿದ್ದಾನೆ. ರಾಷ್ಟ್ರದ ಶ್ರದ್ಧೆಯು–ನಂಬಿಕೆಯು–ಹೇಗಿದೆಯೋ ಹಾಗೆ ಅದರ ಚರಿತ್ರೆಯು ಸಾಫಲ್ಯ ಪೂರ್ಣವೂ ಆತ್ಮೋನ್ನತಿಕರವೂ ಮಹಿಮಾನ್ವಿತವೂ ಆಗುತ್ತದೆ. ಆ ಅರಬರು, ಆ ಮನುಷ್ಯ ಮುಹಮ್ಮದ್ ಮತ್ತು ಆ ಒಂದು ಶತಮಾನ, ನೋಡಲಾಗದ ಆ ಕಪ್ಪು ಮರುಭೂಮಿಯ ಜಗತ್ತಿನ ಮೇಲೆ ಒಂದು ಕಿಡಿ ಬಿದ್ದಂತೆ ಆಗಲಿಲ್ಲವೇ ? ಆದರೆ, ಆಹಾ ! ಆ ಮರಳು ಕಾಡೆಲ್ಲಾ ಮಹಾಸ್ಫೋಟಕ ದ್ರವ್ಯವಾದ ಮದ್ದಿನ ಪುಡಿಯ ಮಹಾರಾಶಿಯಂತಾಯಿತು. ಡೆಲ್ಲಿಯಿಂದ ಆ ಸಿಡಿಮದ್ದಿನ ಮಹಾರಣ್ಯದವರೆಗೂ ಧಗಧಗಿಸಿ ಉರಿದೆದ್ದು ಆಕಾಶೋನ್ನತವಾಗಿ ಚಢಾಳಿಸಿ ಅಲ್ಲಾ–ಹೋ–ಅಕ್ಬರ್ ! (ದೇವರ ಹೊರತು ಬೇರೆ ದೊಡ್ಡದಿಲ್ಲ) ಎಂಬ ಕೋಲಾ ಹಲವೆದ್ದಿತು!

ಯಾವದಾದರೂ ನಿಜವಾಗಿಯೂ ದೊಡ್ಡದೋ ಅದು ಒಳಗಿನ ಅನುಚ್ಚರಿತವಾದ ಅಥವಾ ಅಸ್ಪಷ್ಟೋಚ್ಚರಿತವಾದ ಆಳದಿಂದ ಚಿಮ್ಮಿದ್ದು ಮೇಲೆ ಬರುತ್ತದೆ. ಯಾರು ಬ್ರಹ್ಮಭಾವದಲ್ಲಿ ಪೂರ್ಣವಾಗಿ ಜೀವಿಸುವದಿಲ್ಲವೋ ಅಥವಾ ಕೆಲವು ಮಟ್ಟಿಗೆ ಅದರ ಚಿಂತನದಲ್ಲಿದ್ದು, ಬ್ರಹ್ಮ ಒಂದರಲ್ಲಿಯೇ ಪೂರ್ಣವಾಗಿ ಜೀವಿಸಿರುವದಕ್ಕೆ ಯಾರು ಕಳಕಳಿಯಿಂದ ಪ್ರಯತ್ನಮಾಡುವದಿಲ್ಲವೋ, ಅವರು ಬೇರೆ ಹೇಗೆ ಜೀವಿಸಿದರೂ ಅವರ ಇಷ್ಟಪ್ರಕಾರ ಐಶ್ವರ್ಯ ವೈಭವಗಳಲ್ಲಿ ಜೀವಿಸಿದರೂ ಅವರು ಅನಾಮಧೇಯರೂ ಶೂನ್ಯಪ್ರಾಯರೂ ನಿರ್ಜೀವರೂ ಮೃತರೂ ಎನಿಸುತ್ತಾರೆ.

ದೊಡ್ಡ ಮಿದುಳಿನ ಕಡಲ ಹಂದಿಯ ವಿಷಯದಲ್ಲಿ ಹಕ್ಸ್ಲೆ ಮಾಡಿದ ಪ್ರಯೋಗವನ್ನು ಕುರಿತು H. ಸ್ಪೆನ್ಸರ್ ತನ್ನ ಸಾಯುತ್ತಿರುವ ಹಂಸಗೀತೆಯೆಂದು ಕರೆಯಬಹುದಾದ ಕಟ್ಟಕಡೆಯ ಕೃತಿಯಲ್ಲಿ ಹೇಳಿರುವದೇನೆಂದರೆ, "ನಮ್ಮ ಆಲೋಚನಾ ಪ್ರಜ್ಞೆಯ ದೇಹವು ಭಾವನೆಯನ್ನು ಒಳಗೊಂಡಿದೆ; ನಾವು ಬುದ್ಧಿಶಕ್ತಿ ಎಂದು ವಿವೇಚಿಸುವದು ಅದರ ರೂಪರಚನೆ ಮಾತ್ರವಾಗಿದೆ. ನಾವು ಮನಸ್ಸಿನ ವಿಷಯವಾಗಿ ಮಾತನಾಡುವಾಗ ಯಾವ ಭಾಗವನ್ನು ಸಾಮಾನ್ಯವಾಗಿ ಕಡೆಗಾಣುತ್ತೇವೋ ಅದು 'ಭಾವನೆಗಳು' ಎಂಬ ಅದರ ಸಾರಭೂತವಾದ ಭಾಗವು. ಭಾವನೆಯೇ ಸ್ವಾಮಿ; ಬುದ್ಧಿಶಕ್ತಿಯೇ ಸೇವಕ." ಭಾವನೆಗಳನ್ನೇ ರೂಢಿಯ ಮಾತಿನಲ್ಲಿ ಹೃದಯ ಎನ್ನುತ್ತಾರೆ. ಶ್ರದ್ಧಾಭಕ್ತಿಯ ಧರ್ಮವಾದ (The religion of faith) ಭಾವನೆಗಳು ಕಾರ್ಯಗಳಿಗೆ ಪ್ರೇರಣೆ ಮಾಡುವವಲ್ಲದೇ, ಕಾರ್ಯಸಾಧನೆಗೆ ಅವಶ್ಯವಾದ ಶಕ್ತಿಯನ್ನೂ ಕೊಡುತ್ತವೆ. ಸ್ಪೆನ್ಸರ್ ಮುಂದುವರಿಯುತ್ತಾ "ಸ್ವಾಮಿಯನ್ನು (ಹೃದಯವನ್ನು) ಉತ್ತಮ ಗೊಳಿಸದೆ, ಸುಧಾರಿಸದೆ, ಪರಿಷ್ಕರಿಸದೆ, ಸೇವಕನನ್ನು (ತಲೆಯನ್ನು) ಉತ್ತಮ ಗೊಳಿಸುವದರಿಂದ ಅಲ್ಪಕಾರ್ಯವಾಗಬಹುದು." ಎಂದು ಹೇಳಿದ್ದಾನೆ. ಅಜ್ಞೇಯತಾವಾದಿಗಳಲ್ಲಿ ದ್ವಿಗುಣ ಅಗ್ರೇಸರನಾದ ಸ್ಪೆನ್ಸರನ ಈ ಸಿದ್ಧಾಂತವು ಆ ಶತಮಾನದ ಅತ್ಯಂತ ಸಮರ್ಥವಾದ ಮನಶ್ಶಾಸ್ತ್ರಜ್ಞನಾದ ಪ್ರೊಫೆಸರ್ ಜೇಮ್ಸ್‌ನ ತೀರ್ಮಾನಗಳಿಗೆ ಒಪ್ಪಾಗುತ್ತದೆ,

Religious experiences are as convincing as any direct sensible experince can be, and they are as a rule much more convincing than results established by logic ever are."

"ಪ್ರತ್ಯಕ್ಷ ವಿಷಯಗಳ ಇಂದ್ರಿಯಾನುಭವದಂತೆಯೇ ಧಾರ್ಮಿಕ ಅನುಭವಗಳೂ ಮನಸ್ಸಿಗೆ ಅಷ್ಟೇ ಒಪ್ಪಿಗೆಯಾಗಿರುತ್ತವೆ; ಮತ್ತು ಅವು ಸಾಮಾನ್ಯವಾಗಿ ಎಂದಾದರೂ ತರ್ಕವಿಚಾರಗಳಿಂದ ಸ್ಥಾಪಿಸಲ್ಪಡುವ ಫಲಿತಾಂಶಗಳಿಗಿಂತಲೂ ಹೆಚ್ಚು ಒಪ್ಪಿಗೆಯಾಗಿರುತ್ತವೆ."

ಎಡೆಬಿಡದೆ, ಯಾವಾಗಲೂ ಏನಾದರೂ ವಟಗುಟ್ಟುತ್ತಾ, ಕಟಕಟಿಸುತ್ತಾ ಕಿರುಗುಟ್ಟುತ್ತಾ ತನ್ನೊಳಗೇ ಆದರೂ ಹರಟುತ್ತಿರುವದೇ ಮನಸ್ಸಿನ ಸ್ವಭಾವ. ಅದಕ್ಕೆ ಏನಾದರೂ ಸಮಸ್ಯೆ, ಸಂಕಟ ಇದ್ದೇ ಇರುತ್ತದೆ. ಹೊರಗೆ ನಿಜವಾಗಿ, ವ್ಯವಹಾರ ದೃಷ್ಟಿಯಿಂದ ಕೆಲವು ಸಮಯ, ಅಂಥಾ ಯಾವ ಕಷ್ಟಗಳೂ ಇಲ್ಲವಾದರೂ ಮನಸ್ಸು ತಾನಾಗಿಯೇ ಏನನ್ನಾದರೂ ಕಲ್ಪಿಸಿಕೊಂಡು, ಅದರಲ್ಲಿಯೇ ಸಿಕ್ಕಿಕೊಂಡು, ಅದರಿಂದ ಬಿಡಿಸಿಕೊಂಡು ಹೊರಗೆ ಬರಲಾರದೆಂಬಂತೆ ಒದ್ದಾಡುತ್ತಿರುತ್ತದೆ. ಅಂತು, ಒಂದು ಸೆಕೆಂಡಾದರೂ ಅದು ನಿಶ್ಚಿಂತೆಯಿಂದ ಸುಮ್ಮನಿರುವದಿಲ್ಲ; ತನ್ನೊಳಗೆ ಗೊಣಗುಟ್ಟುತ್ತಲೇ ಶಬ್ದಮಾಡುತ್ತಲೇ ಹರಟುತ್ತಲೇ ಇರುತ್ತದೆ. ಅದರ ಕಲ್ಪನೆಗಳಿಗೆ ಬಿಡುವೂ ನಿಲುಗಡೆಯೂ ಇರುವದಿಲ್ಲ. ಇದು ನಮ್ಮ ಸ್ವಭಾವದ ಕೇವಲ ಮೇಲ್ಮೈ. ಶಾಂತಿಯಿಲ್ಲದ ಈ ಹೊರಗಿನ ಮೇಲ್ಮೈ ಮಟ್ಟದಿಂದ ಕೆಳಗಿಳಿದು, ಒಳಗೆ ಮುಳುಗಿ, ನಾವು ನಮ್ಮ ಸ್ವಭಾವದ ಹೆಚ್ಚು ಆಳದಲ್ಲಿ ಜೀವಿಸಬೇಕು. ಅಲ್ಲಿ ಮನಸ್ಸಿನ ತಳಮಳವಿಲ್ಲ, ಕಲಕಲವಿಲ್ಲ. ಚಲನವಲನವಿಲ್ಲ. ಅಲೆಯೇಳದಿರುವ ಆ ನಿರ್ಮಲವೂ ನಿಶ್ಚಲವೂ ಆದ ಪಾರದರ್ಶಕ ತಳದಲ್ಲಿರುವ ನೈಜವನ್ನು ತಿಳಿಯಬೇಕು; ಅಲ್ಲಿ ಸ್ವತಸ್ಸಿದ್ಧವಾಗಿರುವ ನಿಜತತ್ತ್ವವನ್ನು ಆಳವಾದ ಒಳಗಿನ ಅನುಭವದ ಕಣ್ಣಿನಿಂದ ನೇರಾಗಿ ನೋಡಬೇಕು. ನಿಮ್ಮೊಳಗೆ ನಿಜವಾದ, ನೀವೇ ಆಗಿರುವ ಆ ಚೈತನ್ಯವು ಅಖಂಡ ಪ್ರಕೃತಿಮಂಡಲದಲ್ಲಿರುವ ಸಾರಸರ್ವಸ್ವವಾದ ಚೈತನ್ಯವೇ ಆಗಿದೆಯೆಂಬದನ್ನು ನಿಸ್ಸಂದೇಹವಾಗಿ ಮನಗಂಡಾಗ, ಅನುಭವಪಡೆದಾಗ, ನೀವು "ತತ್ತ್ವಮಸಿ" ಯ ಮೂರ್ತೀಕೃತ ವ್ಯಕ್ತಿಯಾಗುತ್ತೀರಿ.

ಇದೇ, ಇದೇ ಜೀವನ; ಇದೇ ಜೀವನಾಮೃತ, ಅಮೃತತತ್ತ್ವ!

ಶಕ್ತಿಯಾಗಿ ಜೀವಿಸಿ, ಶಕ್ತಿಯಾಗಿ ಕ್ರಿಯೆ ನಡೆಸುವದೇ ಇದು, ಕುಡಿನೋಟದಲ್ಲಿ ಕಲ್ಲುಕಂಬಗಳ ಸಿಡಿದೊಡೆಯುವಂತೆ ಮೊಳು.ದಿದು;

ರವಿಚಂದ್ರತಾರೆಗಳ ಬ್ರಹ್ಮಾಂಡತಂಡಗಳ ಬುಗುರಿಮಾಡಿ ತಿರ್ರನೆ ತಿರುಗಿಪುದಿದು.

೧ ಲೋಕಗಳೆ ಸರಿದತ್ತ
ತೆರವು ಗೈಯಿರಿ ಎನಗೆ.
ಪ್ರಜ್ವಲಿಪ ಪರಂಜ್ಯೋತಿ, ನಾ, ಬರುವೆ,
ಓಡಿರೈ ಛಾಯೆಗಳೆ, ಮಾಯೆಗಳೆ, ನಿಮ್ಮ ಸುಡುವೆ !

೨ ಓ ಪರ್ವತರಾಜಿಗಳೆ, ಹುಷಾರ್, ಎಚ್ಚರ !
ಎನ್ನ ಮಾರ್ಗದಲಿ ನಿಲಬೇಡಿ ; ಜೋಕೆ !
ನಿಮ್ಮ ಪಕ್ಕೆಲುಬುಗಳ ಪುಡಿ ಪುಡಿಯ ಮಾಡುವೆನು ;
ಹೀರಿ ಶೋಷಿಸುವೆ ಸಾಗರವೆ ಅಡ್ಡ ಬರಬೇಡ.

೩ ಸಾರ್ವಭೌಮ ಚಕ್ರವರ್ತಿಗಳೆ, ಮಹಾ- ಸೇನಾಧಿಪತಿಗಳೆ,
ನೀವೆಲ್ಲ ಎನ್ನ ವಿನೋದ ವಸ್ತುಗಳು ಆಟದಾ ಗೊಂಬೆಗಳು,
ಪ್ರಳಯಾಗ್ನಿ ಪ್ರತಾಪದಲಿ ಮೆರೆದುರಿದು ಬರುತಿರುವೆ,
ಓ ಎನ್ನ ಪೋರರೆ, ಪರಾರಿಯಾಗಿ ! ದಾರಿಬಿಡಿ, ತೊಲಗಿ !

೪ ಭಾಗ್ಯ–ವಿಧಿ–ದೇವತೆಗಳ ಸ್ವರ್ಲೋಕ ದೇವತೆಗಳ,
ಹೂಡುವೆನು ನಾನೆನ್ನ ವಿಜಯರಥಕೆ ;
ಫಿರಂಗಿಯಬ್ಬರದಿ ತೋಫಿನಾ ಗರ್ಜನೆಯಿಂದೆ,
ಘೋಷಿಸುವೆನಿದ ದಿಶೆದಿಶೆಗೆ ಜಗದಿ

೫ ಜಾಡಿಸು ! ಝಾಡಿಸಾಚೆಗೆ ಒದರು ಭ್ರಮೆಯ,
ಓ, ಎಚ್ಚರ ! ಎಚ್ಚತ್ತೇಳು ! ನೀನಾಗು ಬಿಡು ಬಿಚ್ಚು, ಮೆಚ್ಚು
ಬಿಡು ಬಿಚ್ಚು ! ಬಿಡು ಬಿಚ್ಚು ! ಬಿಡು ಬಿಚ್ಚು, ಮೆಚ್ಚು !

ಈ ಜ್ಞಾನಕ್ಕೆ ಅಕ್ಷಯವಾದ ಶಕ್ತಿಯು ಒಂದು ಮುಖವಾದರೆ, ಅನಂತತೆಯು, ಅನಂತಶಾಂತಿಯು ಇನ್ನೊಂದು ಮುಖ

ಶಾಂತಿ, ಅಮೃತಮಯಶಾಂತಿ, ಮಳೆಹನಿಯಂತೆ ಬೀಳುತಿದೆ,
ದಿವ್ಯಾಮೃತವೆ ಸುರಿಯುತಿದೆ ಗಾನಮಯ ವರ್ಷಣದಿ,
ಸೋನೆ ಸುರಿ, ತುಂತುರು ತೂರು, ಜಿನುಗು ! ಜಿನುಗು !! ಜಿನುಗು !!'

ಎನ್ನ ವಿಜಯ ವೈಭವದ ಮೋಡಗಳು ಮುನ್ನಡೆಯುತಿವೆ ರೀವಿಯಲಿ,
ಅವುಗಳಿಂ ಲೋಕಗಳು ವಜ್ರಗಳ ತೆರದಿ ಉದುರುತಿಹವು.
ಸೋನೆ ಸುರಿ, ತುಂತುರು ತೂರು, ಜಿನುಗು ! ಜಿನುಗು !! ಜಿನುಗು !!!
ಎನ್ನ ವಿಶ್ವನಿಯಮಗಳ ಮಂದಾನಿಲವೆ ಬೀಸು ತಾಳಗತಿಯಿಂ,
ಆಗೋ ! ಸುಮದಳಗಳಂತೆ ಎಲೆಗಳಂತೆ ದೇಶಗಳು ಬೀಳುತಿಹವು ;
ಜಿನುಗು ! ಜಿನುಗು !! ಜಿನುಗು !!!

ಸುಗಂಧ ಶಾಮಕವಹ ಎನ್ನುಸಿರೆ, ನಿಯಮದಾ ನಸುಗಾಳಿ,
ಸೊಬಗಿನಲಿ ಬೀಸು ! ಸೊಗಸಿನಲಿ ಬೀಸು ! ಬೀಸು !
ಕೆಲವಸ್ತುಗಳು ತೂಗಿ ತೊನೆಯುವವು ಕಿರು ಕೊನೆಗಳಂತೆ,
ಇತರ ಕೆಲವು ಬೀಳುವವು ಮಂಜಿನಾ ಹನಿಗಳಂತೆ ;
ಜಿನುಗು ! ಜಿನುಗು !! ಜಿನುಗು !!!

ಎನ್ನ ಕಮನೀಯ ಬೆಳಕೆ, ಬಿಳುಪಿನಾ ಕಡಲೇ,
ಕ್ಷೀರಸಾಗರವೆ, ಅಲೆ ಅಲೆಯಾಡುತಿರುವೆ,
ಅಲೆದಲೆದು ಸುಳಿಯುತಿಹೆ ಮೃದು ಮೃದುವಾಗಿ, ಮೃದುವಾಗಿ,
ತುಂತುರಿನ ಮಾತುಗಳನಾಗ ತೆರೆಹೊಡೆದು ಸಿಡಿಸಿ ತೂರುತಿರುವೆ.
ತುಂತುರಿನ ತೆರದೆ ತಾರೆಗಳ ನಾ ಮುಂದೆ ಸುರಿಸುತಿರುವೆ
ಓ, ಸುಧೆಯ ಸೋನೆ ಸುರಿ ; ತುಂತುರು ತೂರು, ಜಿನುಗು ! ಜಿನುಗು ! ಜಿನುಗು!

ಓಂ ! ಓಂ ! ಓಂ !

## The Future of India

# ಭಾರತದ ಭವಿಷ್ಯ

### (ಒಂದು ಪುಸ್ತಕಕ್ಕೆ ಬರೆದಿರುವ ಪ್ರವೇಶಿಕೆ)

ಆಶಾಜನಕವಾಗಿಯೂ ಉಜ್ಜ್ವಲವಾಗಿಯೂ ಇರುವಂತೆ ಭರವಸೆನೀಡುತ್ತಿರುವ ಭಾರತದ ಭವಿಷ್ಯವನ್ನು ಕುರಿತು ರಾಮನು ಈಗ ಕೆಲವು ಮಾತುಗಳನ್ನು ಹೇಳುತ್ತಾನೆ.

ಈ ಜಗತ್ತಿನಲ್ಲಿ ಎಲ್ಲವೂ ತಾಳಗತಿಯಿಂದ ನಿಯಮಿತವಾಗಿ ಚಲಿಸುತ್ತಿವೆ, ಮತ್ತು ಎಲ್ಲಾ ಪ್ರಕೃತಿವಿಲಾಸವನ್ನೂ ನಿಯತಕಾಲಿಕತೆಯ ನಿಯಮವು (The Law of Periodicity) ಆಳುತ್ತಿದೆ. ಅಭ್ಯುದಯದ ಸೂರ್ಯನೂ ಅಥವಾ ತಾರೆಯೂ ಈ ನಿಯಮಕ್ಕೆ ಅನುಸಾರವಾಗಿಯೇ ಚಲಿಸಬೇಕು. ವಿಜ್ಞಾನ–ವಿಭೂತಿಗಳ (ಅಥವಾ ಜ್ಞಾನ–ಐಶ್ವರ್ಯಗಳ) ಭಾಸ್ಕರನು ಭಾರತದ ಮಹಿಮಾ ವೈಭವದ ಶಿಖರದಲ್ಲಿ ವಿರಾಜಿಸುತ್ತಿದ್ದ ಕಾಲ ಒಂದಿತ್ತು. ಇತಿಹಾಸದ ಕಣ್ಣುಗಳಿಂದ ನೋಡಿದರೆ ಮಿಕ್ಕ ಖಗೋಳ ಕಾಯಗಳಾದ ಗ್ರಹನಕ್ಷತ್ರಗಳಂತೆ ಈ ಪ್ರಭಾಕರನೂ ಕ್ರಮೇಣ ಪಶ್ಚಿಮ, ಪಶ್ಚಿಮದ ದಿಕ್ಕಿಗೆ ಮುನ್ನಡೆಯುವದಕ್ಕೆ ತೊಡಗಿದನು. ಆ ದಿವಾಕರನು ಪರ್ಷಿಯಾದ ಮೇಲೂ ಅಸಿರಿಯಾದ ಮೇಲೂ ಇನ್ನೂ ಮುಂದೆ ಮುಂದೆ ಪಶ್ಚಿಮಕ್ಕೆ ನಡೆದನು. ಈಜಿಪ್ಟಿನ ನೆತ್ತಿಯ ಮೇಲೆ ಬೆಳಗಿದನು. ಅನಂತರ ಗ್ರೀಸಿನ ಸರದಿ ಬಂದಿತು. ಅನಂತರ ರೋಂ, ಯಶೋವೈಭವದ ನಡುಹಗಲಿನ ಸುಖವನ್ನು ಅನುಭವಿಸಿತು. ಅನಂತರ ಆ ಪ್ರಕಾಶದಿಂದ ಜರ್ಮನಿ, ಫ್ರಾನ್ಸ್, ಸ್ಪೈಯಿನ್‌ಗಳು ಉಚಿತವಾಗಿ ಎಚ್ಚರಗೊಂಡವು.

ಕೊನೆಗೆ ಇಂಗ್ಲೆಂಡ್‌ದೇಶವು ಸಮೃದ್ಧಿಸೂರ್ಯನ ಕಣ್ಣುಕೋರೈಸುವ ಉಜ್ಜ್ವಲ ಪ್ರಭೆಯನ್ನು ಪಡೆಯುವದಕ್ಕೆ ತೊಡಗಿತು. ಓಹೋ ! ಆ ಆದಿತ್ಯನು ಮತ್ತೂ ಪಶ್ಚಿಮಕ್ಕೆ ಪ್ರಯಾಣಬೆಳೆಸಿ, ಈಗ ಅಮೆರಿಕಾದೇಶವನ್ನು

ಸುಖಸೌಭಾಗ್ಯದ ಅತ್ಯುನ್ನತ ಜೋಕಾಲಿಗೆ ತಂದಿದ್ದಾನೆ. ಅಮೆರಿಕಾದ ಸಂಯುಕ್ತ ಸಂಸ್ಥಾನಗಳಲ್ಲಿಯೂ ಆ ಬೆಳಕು ರೂಢಿಯಂತೆ ಪೂರ್ವದ ನ್ಯೂಯಾರ್ಕನಿಂದ ಅತ್ಯಂತ ಪಶ್ಚಿಮದಲ್ಲಿರುವ ಕ್ಯಾಲಿಫೋರ್ನಿಯಾ ನಗರವನ್ನು ಸೇರುವವರೆಗೂ ಪಶ್ಚಿಮ ಪಶ್ಚಿಮಕ್ಕೆ ನಡೆದು ಹರಡಿತು. ಭಾರತದಲ್ಲಿ ಹಗಲು ಬೆಳಗುತ್ತಿದ್ದಾಗ ಅಮೆರಿಕಾ ದೇಶವು ಪ್ರಪಂಚದಲ್ಲಿ ಇರುವದೇ ಯಾರಿಗೂ ತಿಳಿದಿರಲಿಲ್ಲ. ಈಗ ಅಮೆರಿಕಾದಲ್ಲಿ ಹಗಲು ಬೆಳಕಾಗಿರುವದರಿಂದ, ಭಾರತದ ಮೇಲೆ ದಾರಿದ್ರ್ಯದುಃಖಗಳ ರಾತ್ರಿಯು ಸುಳಿದಾಡುತ್ತಿರುವದು. ಆದರೆ, ಇಲ್ಲ; ಈಗಾಗಲೇ ಸೂರ್ಯನು ಪೆಸಿಫಿಕ್‌ಸಾಗರದ ಮೇಲೆ ಹಾಯ್ದು ಬರುತ್ತಿರುವಂತೆ ತೋರುತ್ತದೆ; ಜಪಾನು, ಜಗತ್ತಿನ ಅತ್ಯಂತ ಪ್ರಮುಖ ಶಕ್ತಿಗಳಲ್ಲಿ ಒಂದಾಗುವ ಶುಭಸೂಚನೆಗಳಿವೆ. ಪ್ರಕೃತಿಯ ನಿಯಮಗಳನ್ನು ನಂಬಬಹುದಾದರೆ, ವಿಜ್ಞಾನ–ವಿಭೂತಿಗಳ ವಿಭಾವಸುವು ತನ್ನ ಪರಿಭ್ರಮಣ ವೃತ್ತವನ್ನು ಪರಿಪೂರ್ತಿಗೊಳಿಸಿ, ಮತ್ತೊಮ್ಮೆ ಭಾರತದ ಮೇಲೆ ದ್ವಿಗುಣವಾದ ತೇಜಸ್ಸಿನಿಂದ ರಾರಾಜಿಸಬೇಕು. ತಥಾಸ್ತು ! ಓಂ !

ಭಾರತದ ಹಿಂದಿನ ಚರಿತ್ರೆಯನ್ನು ಸಿಂಹಾವಲೋಕನದಿಂದ ಪುನರ್ವಿಮರ್ಶೆ ಮಾಡಿದರೆ, ಇತರ ಯಾವದೊಂದು ದೇಶದಲ್ಲಿ ಇರುವಂತೆಯೇ, ಭಾರತದ ರಾತ್ರಿಯ ಅಂತಿಮವಾದ ಅಂತರಂಗ ಕಾರಣವು, ಇತರರನ್ನು ಸೇರಿಸಿಕೊಳ್ಳದೆ ಹೊರಹಾಕುವ–ಇತರರೊಡನೆ ಸೇರದಿರುವ–ಅದರ ಪ್ರತ್ಯೇಕತಾ ಮನೋಭಾವದ ಹೊರತು ಬೇರೆಯಲ್ಲವೆಂದು ಕಂಡುಬರುತ್ತದೆ "ಈ (ಭಾರತದ) ಕೋಣೆಯಲ್ಲಿ ವಿಶಾಲ–ಉಜ್ಜ್ವಲವಾದ ಹಗಲು ಬೆಳಕು ಎಷ್ಟು ಮನೋಹರವಾಗಿದೆ ! ಓ ! ಇದು ನಮ್ಮದು–ನಮ್ಮದು ! ಇದು ನಮ್ಮದೇ ಆಗಿರಲಿ." ಹೀಗೆ ಉದ್ಗಾರಮಾಡುತ್ತಾ ಸ್ವಾರ್ಥ ಪ್ರಶಂಸೆಯಿಂದ ಆತ್ಮತೃಪ್ತಿಯು ಮದವೇರಿ ವಾಸ್ತವವಾಗಿಯೂ ಸುತ್ತಲೂ ಪರದೆಗಳನ್ನು ಎಳೆದುಕೊಂಡು, ಬಾಗಿಲುಗಳನ್ನೂ ಕಿಟಕಿಗಳನ್ನೂ ಮುಚ್ಚಿಕೊಂಡು, ಭಾರತದ ಬೆಳಕನ್ನು ನಾವೊಬ್ಬರೇ ಅನುಭವಿಸಬೇಕೆಂಬ ಸಂಕುಚಿತವಾದ ಅತ್ಯುತ್ಸಾಹದಲ್ಲಿ ನಾವೇ ಕಗ್ಗತ್ತಲೆಯನ್ನು ಸೃಷ್ಟಿಸಿಕೊಂಡೆವು. ದೇವರಿಗೆ ವ್ಯಕ್ತಿಗಳ ಮೇಲೆ, ಪಕ್ಷಪಾತ ಅಥವಾ ಅಭಿಮಾನ ಗೌರವಗಳಿಲ್ಲ; ಅದೃಷ್ಟರೂಪ ಭಾಗ್ಯದೇವತೆಯನ್ನು ಯಾವದೊಂದೇ ದೇಶದಲ್ಲಿ ಬಂಧಿಸಿಡುವಕ್ಕೆ ಆಗುವದಿಲ್ಲ ; ಆ ಸೌಭಾಗ್ಯವು ಭೌಗೋಳಿಕವಲ್ಲ. ನಾವು ನಮ್ಮ ಜೀವನಗಳಲ್ಲಿ ದೈವಿಕ ಸತ್ಯವಾದ ಏಕತ್ವ (ತತ್–ತ್ವಂ–ಅಸಿ) ಭಾವನೆಯನ್ನು ಅಳವಡಿಸಿಕೊಳ್ಳಲಿಲ್ಲ. ನಾವು ವಿಭಕ್ತರಾಗಿ–ಒಡೆದೊಡೆದು–ದುರ್ಬಲರಾದೆವು. ನಿಮ್ನ ವರ್ಗದ ತಮ್ಮಮಕ್ಕಳ ವಿಷಯದಲ್ಲಿ ತಾವು ನಿರ್ವಹಿಸಬೇಕಾದ ಸ್ವಾರ್ಥ ನಿರಾಕರಣಪೂರ್ವಕವಾದ ಕರ್ತವ್ಯಗಳಿಗಿಂತಲೂ ಸ್ವಾರ್ಥಸಾಧಕವಾದ ಅಧಿಕಾರ–

ಹಕ್ಕುಗಳಿಗೆ ಹೆಚ್ಚು ಮಹತ್ವಕೊಟ್ಟಿದ್ದರಲ್ಲಿ ನಮ್ಮ ರಾಷ್ಟ್ರನಾಯಕರು ಬಹಳ ದೊಡ್ಡ ತಪ್ಪು ಮಾಡಿದರು. ಅದು ಹೇಗಾದರೂ ಇರಲಿ; ಪರಿಸ್ಥಿತಿಯು ಕೇವಲ ಅಗತ್ಯದ ಒತ್ತಡದಿಂದಲೇ ವಿದ್ಯಮಾನಗಳು ಅತ್ಯಂತ ಆಶಾಜನಕವಾದ ದಿಶೆಗೆ ತಿರುಗುತ್ತಿವೆ. ಚೆನ್ನಾಗಿ ನಿದ್ರಿಸಿದವರು ಚೆನ್ನಾಗಿ ಎಚ್ಚರಗೊಳ್ಳುತ್ತಾರೆ ; ಭಾರತವು ಸಾಕಷ್ಟು ದೀರ್ಘಕಾಲ ನಿದ್ರಿಸಿದ್ದಾಗಿದೆ ; ಸಾವಕಾಶವಾಗಿ ಆದರೂ ಅತ್ಯಂತ ನಿಶ್ಚಿತವಾಗಿ ನಮ್ಮ ಜನಾಂಗದಲ್ಲಿಯ ಜಡತ್ವವು ಒಡೆಯುತ್ತದೆ ; ಮತ್ತು ಸಾವಕಾಶವಾಗಿಯಾದರೂ ಅತ್ಯಂತ ಖಂಡಿತವಾಗಿ, ಬದಲಾವಣೆಹೊಂದಿರುವ ಹೊಸಪರಿಸ್ಥಿತಿಗೆ ಹೊಂದಿಕೊಳ್ಳುವದಕ್ಕಾಗಿ ಸಂಪ್ರದಾಯುಪ್ರಿಯತೆಯು ಸಡಿಲವಾಗಿ ಉದಾರಭಾವವು ಬೆಳೆಯುತ್ತಿದೆ.

ಪ್ರಗತಿ ತತ್ತ್ವವು ರೂಪ–ಕ್ರಿಯೆಗಳಲ್ಲಿ ತಾರತಮ್ಯ–ಭೇದಗಳನ್ನೂ ಚೈತನ್ಯ–ಭಾವಗಳಲ್ಲಿ ಅಖಂಡತೆ–ಸಮಗ್ರತೆಗಳನ್ನೂ ಬಯಸುತ್ತದೆ. ದುಡಿಮೆ ಮತ್ತು ಉದ್ಯೋಗಗಳ ವ್ಯವಸ್ಥಿತವಾದ ಭೇದದಲ್ಲಿಯೂ ಚೈತನ್ಯ ಮತ್ತು ಹೃದಯಗಳ ಐಕ್ಯತೆಯಲ್ಲಿಯೂ ಸುಂದರವಾಗಿ ಪ್ರಕಟವಾಗಿದ್ದ ರಾಷ್ಟ್ರೀಯ ಪ್ರಗತಿಯೇ ಹಿಂದೂಗಳ ಜಾತಿಮತಗಳ ಪದ್ಧತಿಗೆ ಕಾರಣವಾಗಿದ್ದಿತು. ಆದರೆ, ಕಾಲಕ್ರಮದಲ್ಲಿ ಚೇತನಕ್ಕಿಂತಲೂ ಆಕೃತಿಯನ್ನೇ ಹೆಚ್ಚು ಉನ್ನತವಾಗಿ ಎಣಿಸತೊಡಗಿದರು, ಸ್ವಾಭಾವಿಕ ಕ್ರಮವು ತಲೆಕೆಳಗಾಯಿತು ವಿಕಸನವು ವಿಲಯನಕ್ಕೂ ಸಂಘಟನೆಯು ವಿಘಟನೆಗೂ ಅವಕಾಶ ಕೊಟ್ಟಿತು. ಆಗ ಪ್ರೇಮದ (ಚೈತನ್ಯದ) ವಿಭಜನೆಯೂ ಉದ್ಯೋಗ–ದುಡಿಮೆಗಳ ಮಿಶ್ರಣವೂ ಉಂಟಾಯಿತು. ಒಂದು ಜಾತಿಯ ಜನರು ಇನ್ನೊಂದು ಜಾತಿಯ ಜನರ ಉದ್ಯೋಗಗಳನ್ನು ತೆಗೆದುಕೊಂಡರು ; ಆದರೂ ಪ್ರಾಚೀನ ಜಾತಿಮತ ಭಾವನೆಗಳು ಹೃದಯಗಳನ್ನು ಮೊದಲಿಗಿಂತಲೂ ಹೆಚ್ಚು ಅಗಲಿಸಿ ವಿಶ್ವಾಸ ಕಳೆದವು. ಚರ್ಮಪ್ರಜ್ಞೆಯ (ಸ್ಪರ್ಶಪ್ರಜ್ಞೆಯ)–ಮತೀಯ ಪಕ್ಷಪಾತಗಳ–ಬೆಳವಣಿಗೆಯ ಅತಿರೇಕವು ನಿಜವಾದ ಆತ್ಮನನ್ನು ಕ್ಷಣಿಕವಾದ ನಾಮರೂಪಗಳ ಮತ್ತು ಪರಿಮಿತಿಗಳ ರಾಶಿಯ ಕೆಳಗೆ ಗೋರಿ ಮಾಡಿತು. ಶ್ರುತಿಯು (ಅನಂತಾತ್ಮನ ವೈದಿಕ ವಿಜ್ಞಾನವು) ಆಚರಣೆಯಲ್ಲಿಲ್ಲದ ಕಟ್ಟಳೆಯಾಗಿ ಮಾಡಲ್ಪಟ್ಟಿತು ; ಸ್ಮೃತಿಯು (ಪ್ರಾಚೀನ ಪದ್ಧತಿಗಳನ್ನೂ ವ್ಯವಹಾರಗಳನ್ನೂ ಕುರಿತ ನಿಯಮ ನಿಬಂಧನೆಗಳು) ಕ್ರೂರ (ಪ್ರಜಾ) ಪೀಡಕನ ದಬ್ಬಾಳಿಕೆಯ ದಂಡವಾಯಿತು. ಚೈತನ್ಯದ ಮೇಲೆ ಕ್ಷಣಿಕವೂ ಮಿಥ್ಯೆಯೂ ಆದ ನಾಮ, ರೂಪ, ಕ್ರಿಯೆಗಳು ಆಧಿಪತ್ಯ ನಡೆಸಿದವು 'Grammar is the grave of language' ವ್ಯಾಕರಣವು ಭಾಷೆಯ ಸಮಾಧಿ ಎಂದು ಯಾರೋ ಹೇಳಿದ್ದಾರೆ ನಿಜ ; ಹೌದು, ವ್ಯಾಕರಣವನ್ನು ಬದಲಾಯಿಸದೆ, ಉಳಿಸುವದಕೆ ಹೋದರೆ ಭಾಷೆಯು ಸತ್ತು ಹೋಗುತ್ತದೆ. ಇದೇ ಪ್ರಕಾರ, ನಿಯಮಗಳ ಅತಿ

ನಿಷ್ಠೆಯು—ಕಟ್ಟುನಿಟ್ಟಿನ–ಕಾಠಿಣ್ಯವು, ಪದ್ಧತಿಗಳ ಹಾಗೂ ಕರ್ಮಕಾಂಡದ ಕಠೋರ ದಾಸ್ಯವು, ರಾಷ್ಟ್ರದ ಜೀವರಸವನ್ನು–ಸತ್ತ್ವವನ್ನು–ಹೀರಿಬಿಡುತ್ತದೆ. ಬೀಜದ ಸತ್ತ್ವವನ್ನು ರಕ್ಷಣೆ–ಪೋಷಣೆಮಾಡುವದಕ್ಕೆ ಹೊರಗಿನ ಹೊಟ್ಟು–ಸಿಪ್ಪೆಯೂ–ಸಹಾಯಕವಾದಂತೆ, ಕೆಲವು ಕಾಲದ ವರೆಗೆ ಕಟ್ಟುಕಟ್ಟಳೆಗಳೂ ಉಪಯೋಗವಾಗುತ್ತವೆ; ಆದರೆ ಒಳಗೆ ಸ್ವಲ್ಪ ಬೆಳೆದ ಮೇಲೆ–ಆತ್ಮವಿಕಾಸವಾದ ಮೇಲೆ–ಅವುಗಳನ್ನು ಸಡಿಲಿಸದೆ, ಬದಲಾಯಿಸದೆ ಇದ್ದರೆ ಎಲ್ಲಾ ಬೆಳವಣಿಗೆಯನ್ನೂ ತಡೆಗಟ್ಟುವ, ಉಸಿರುಕಟ್ಟಿಸುವ ಸೆರೆಯಾಗುತ್ತದೆ. ಪ್ರಿಯ ಜನರೇ ನೆನಪಿನಲ್ಲಿಡಿ; ನಿಯಮಗಳೂ ಸ್ಮೃತಿಗಳೂ ನಿಮಗಾಗಿವೆ; ಅವುಗಳಿಗಾಗಿ ನೀವಿಲ್ಲ. ಶಾಶ್ವತವಾದ ಶ್ರುತಿಯ ಬೋಧೆಗಳನ್ನು ವಿಶ್ವವ್ಯಾಪಕವಾಗಿ ಪ್ರಸಾರಮಾಡಿರಿ; ಆದರೆ ನಿಮ್ಮ ಸ್ಮೃತಿಗಳನ್ನು ಕಾಲದ ಅಗತ್ಯಕ್ಕೆ ಸರಿಯಾಗಿ ಹೊಂದಿಸಿಕೊಳ್ಳಿ. ಸ್ಮೃತಿಗಳ ಪಿತ್ರಾರ್ಜಿತ ಅಧಿಕಾರ ನಿಮಗೆ ಸೇರಿರಲಿ; ನೀವು ಅದಕ್ಕೆ ಸೇರಿದವರಾಗಬೇಡಿ. ಭಾರತದಲ್ಲಿ ನದಿಗಳು ತಮ್ಮ ಪಾತ್ರಗಳನ್ನು ಬದಲಾಯಿಸಿವೆ; ಹಿಮಪಂಕ್ತಿಗಳು ಸ್ಥಾನಾಂತರ ಹೊಂದಿವೆ; ಅರಣ್ಯಗಳಿದ್ದಲ್ಲಿ ವ್ಯವಸಾಯಮಾಡಿದ ಹೊಲಗದ್ದೆಗಳಾಗಿವೆ, ದೇಶದ ಮುಖವೇ ಪರಿತವರ್ತನೆಹೊಂದಿದೆ; ಸರ್ಕಾರವು ಬೇರೆಯಾಗಿದೆ; ಭಾಷೆಗಳು ಬದಲಾಗಿವೆ; ಭಾರತೀಯರ ಮೈಬಣ್ಣವೂ ಬದಲಾವಣೆಹೊಂದಿದೆ; ಆದರೂ ಈ ಅಸ್ಥಿರವೂ ನಶ್ವರವೂ ಕ್ಷಣಿಕವೂ ಆದ ಪ್ರಪಂಚದಲ್ಲಿ, ಈಗ ಉಪಯೋಗವಿಲ್ಲದ, ನಿಮ್ಮ ಹಿಂದಿನ ನಿಯಮಗಳನ್ನೂ ಪದ್ಧತಿಗಳನ್ನೂ ಮಾತ್ರ ಎಂದೆಂದಿಗೂ ಬದಲಾಗದೆ ಸ್ಥಿರವಾಗಿರುವಂತೆ ಮಾಡಬಯಸುತ್ತೀರಾ? ಮುಂದೆ ಮುಂದೆ ನಡೆಯಬೇಕಾಗಿರುವಾಗ ಯಾವಾಗಲೂ ತನ್ನ ಹಿಂದೆ ಹಿಂದೆಯೇ ನೋಡುತ್ತಿರುವವನ ಸ್ಥಿತಿಯು ಪರಿಶೋಚನೀಯವಾದುದು. ಅಂಥವನು ಹೆಚ್ಚೆಹೆಚ್ಚಿಗೂ ಮುಗ್ಗರಿಸಬೇಕಾಗುತ್ತದೆ.

ಜೀವಶಕ್ತಿಯು ಅನುವಂಶೀಯತೆ ಮತ್ತುಹೊಸ ಹೊಸ ಹೊಂದಿಕೆ ಈ ತತ್ತ್ವಗಳ ಮೇಲೆ ವಿಕಾಸವಾಗುತ್ತದೆ. ಹೆಚ್ಚು ಕೆಳಗಿನ ರಾಜ್ಯಗಳಲ್ಲಿ ವಂಶ ಪಾರಂಪರ್ಯದ ನಿಯಮವು ಪರಮಾಧಿಕಾರವನ್ನು ನಡೆಸುತ್ತದೆ. ಹೊಂದಿಕೊಳ್ಳುವ ಶಕ್ತಿಯ ಅಥವಾ ಶಿಕ್ಷಣತತ್ತ್ವದ ಹೆಚ್ಚಿನ ಪ್ರಾಬಲ್ಯವೇ ಮನುಷ್ಯನನ್ನು ಪ್ರಾಣಿವರ್ಗ–ಸಸ್ಯವರ್ಗಗಳಿಂದ ಬೇರ್ಪಡಿಸಿ ತೋರಿಸುವ ಸಾಧನವು. ಮುದ್ದಾದ ಒಂದು ಸಣ್ಣ ಮಗುವು ಒಂದು ಪುಟ್ಟ ನಾಯಿಯ ಕುನ್ನಿಯಷ್ಟೇ ಜಾಣತನವಿಲ್ಲದ್ದೂ ಪೆದ್ದೂ ಆಗಿರುತ್ತದೆ; ಹೀಗೂ ಅಲ್ಲ; ನಾಯಿಯ ಕುನ್ನಿಯೂ ಸಾಕಿದ ಗಿಳಿಮರಿಯೂ ಈ ಪುಟ್ಟ ಆದಿಮನುಜಗಿಂತಲೂ (Adam) ಈ ಅನಾಗರಿಕವಾದ ಮಗುವಿಗಿಂತಲೂ ಎಷ್ಟೋವೇಳೆ ಹೆಚ್ಚು ಜಾಣತನವನ್ನು ತೋರಿಸುತ್ತವೆ. ಆದರೆ, ವ್ಯತ್ಯಾಸವೇನೆಂದರೆ,

ನಾಯಿಮರಿಯೂ ಗಿಳಿಮರಿಯೂ ಹುಟ್ಟಿದಾಗ, ತನ್ನ ಪೂರ್ಣತೆಗೆ ಬೇಕಾದ —ಬಹಳ ಮಟ್ಟಿಗೆ—ಎಲ್ಲವನ್ನೂ ಪಿತ್ರಾರ್ಜಿತವಾಗಿ ಪಡೆದಿತ್ತು; ಆದರೆ ಮಗುವು ಹೊಂದಿಕೊಳ್ಳುವ ಅಥವಾ ಮಾರ್ಪಡುವ ಶಕ್ತಿಯ ಮೂಲಕ ಮತ್ತು ಶಿಕ್ಷಣದಿಂದ, ಇಡೀ ಜಗತ್ತನ್ನೇ ತನ್ನ ಸ್ವಾಧೀನದಲ್ಲಿ ತಂದುಕೊಳ್ಳಬಹುದು.

ನನ್ನ ಅತ್ಯಂತ ಪ್ರಿಯ ಭಾರತೀಯರೆ! ಬದಲಾವಣೆ ಅಥವಾ ಮಾರ್ಪಾಡಿಗೆ ನಿಮಗಿರುವ ವಿರೋಧದಿಂದಲೂ ಹಳೆಯ ಕಂದಾಚಾರ ಪದ್ಧತಿಗಳ ಮೇಲೂ ಆನುವಂಶೀಯತೆಯ ಮೇಲೂ ಅತಿಯಾದ ಅಭಿಮಾನವಿಡುವದರಿಂದಲೂ ದಯವಿಟ್ಟು ನಿಮ್ಮನ್ನು ನೀವು ಮನುಷ್ಯಜಾತಿಯ ಮಟ್ಟಕ್ಕಿಂತಲೂ ಕೆಳಗೆ ಇಳಿಸಿಕೊಳ್ಳಬೇಡಿ.

ನೀವು ಹೇಗೆ ದೇಶದಲ್ಲಿ ವಾಸಮಾಡತ್ತೀರೋ ಹಾಗೆ ಕಾಲದಲ್ಲಿಯೂ ವಾಸ ಮಾಡುತ್ತೀರಿ. ನೀವು ಭಾರತದ ಪ್ರಾಚೀನ ಋಷಿಗಳ ವಂಶದಲ್ಲಿ ಹುಟ್ಟಿ ಬಂದಿರುವದು ನಿಜ; ಆದರೆ ನೀವೀಗ ಅವರ ಕಾಲದಲ್ಲಿ ಜೀವಿಸುತ್ತಿಲ್ಲ; ಹಾಗೇನಾದರೂ ವಾಸಿಸುತ್ತಿದ್ದೀರಾ? ಈಗ ಸ್ಟೀಮ್ ಎನ್‌ಜಿನ್ (Steam Engine), ಸ್ಟೀಮ್ ಷಿಪ್ (Steam ship) ಟೆಲೆಗ್ರಾಫ್ ಮೊದಲಾದವುಗಳೆಲ್ಲಾ ನಿಮ್ಮ ಉಪಯೋಗಕ್ಕೆ ಬಂದಿವೆ ಆಧುನಿಕ ಜಗತ್ತಿನಿಂದ ನಿಮ್ಮನ್ನು ನೀವು ಪ್ರತ್ಯೇಕಿಸಿಕೊಳ್ಳುವದು ಸಾಧ್ಯವಿಲ್ಲ. ಯೂರೋಪ್ ಮತ್ತು ಅಮೆರಿಕಾಗಳ ಇಪ್ಪತ್ತನೆಯ ಶತಮಾನದ ವಿಜ್ಞಾನಿಗಳೊಡನೆಯೂ ಕಲಾವಿದರೊಡನೆಯೂ ಕೆಲಸಗಾರರೊಡನೆಯೂ ನಿಮ್ಮ ಹೋರಾಟವಿದೆ. ಇದರಿಂದ ನೀವು ತಪ್ಪಿಸಿಕೊಳ್ಳಲಾರಿರಿ. ನೀವು ಸೂಕ್ಷ್ಮವಾಗಿ, ಸಾವಧಾನವಾಗಿ ವಿಚಾರ ಮಾಡಿದರೆ, ಈ ಶತಮಾನದ ತೀರಾ ಬದಲಾವಣೆ ಹೊಂದಿರುವ ಸನ್ನಿವೇಶಗಳಿಗೆ ಹೊಂದಿಕೊಳ್ಳುವದಕ್ಕೆ ತಕ್ಕ ಅರ್ಹತೆಯನ್ನು ನೀವು ಪಡೆದ ಹೊರತು, ಬಾಳುವದು ಸಾಧ್ಯವಿಲ್ಲವೆನ್ನುವದನ್ನು ಮನಗಾಣಬಹುದು. ಯಾವದು ನಿಮ್ಮ ದೇಶದ ಹಳೆಯ ಬೆಳಕೇ ಆಗಿದೆಯೋ ಆ ಹೊಸ ಬೆಳಕನ್ನು ನೀವು ಹೀರಿಕೊಳ್ಳುವದಕ್ಕೆ ಇಚ್ಛಿಸದೆ, ಸಿದ್ಧವಾಗಿಲ್ಲದಿದ್ದರೆ, ಪಿತೃಲೋಕಕ್ಕೆ ಹೋಗಿ ನಿಮ್ಮ ಪೂರ್ವಜರ ಜೊತೆಗೆ ವಾಸ ಮಾಡಿ. ಇಲ್ಲಿ ಏಕೆ ವರದಾಡುತ್ತಿದ್ದೀರಿ? ನಮಸ್ತೇ! ಸ್ವಸ್ತಿ! ಶುಭಮಸ್ತು!! ಹೋಗಿಬನ್ನಿ!

ನೀವು ದೇಶಭ್ರಷ್ಟರಾಗಿ ಹೋಗಬೇಕೆಂದು ರಾಮನು ಬಯಸುವದಿಲ್ಲ. ಒಂದು ಗಿಡವು ಹೊರಗಿನ ಗಾಳಿಯನ್ನೂ ನೀರನ್ನೂ ಗೊಬ್ಬರವನ್ನೂ ಮಣ್ಣನ್ನೂ ಹೀರಿಕೊಂಡು ಜೀರ್ಣಿಸಿಕೊಳ್ಳುತ್ತದೆ; ಆದರೆ ಅದರಿಂದ ತಾನೇ ತಿರುಗಿ ಗಾಳಿ, ನೀರು,

ಗೊಬ್ಬರ; ಮಣ್ಣು ಆಗುವದೆ ? ಇಲ್ಲ : ಹಾಗೆಯೇ ನೀವೂ ಹೊರಗಿನ ವಸ್ತುಗಳನ್ನು ಹೀರಿ, ಜೀರ್ಣಿಸಿಕೊಳ್ಳುವದರಿಂದ, ಶ್ರುತಿಯ ಮೂಲ ಜೀವವು ನಿಮ್ಮ ಎದೆಯಲ್ಲಿಯೂ ಹೃದಯದಲ್ಲಿಯೂ ಇನ್ನೂ ಮಿಡಿಯುತ್ತಾ ಬೆಳೆದು ಉಚ್ಛ್ರಾಯ ಸ್ಥಿತಿಗೇರಬೇಕು.

ದೇಶದ ಸಂಪನ್ಮೂಲಗಳನ್ನು ಉಪಯೋಗಿಸುವದಕ್ಕೆ ನಮ್ಮನ್ನು ಶಕ್ತರನ್ನಾಗಿ ಮಾಡುವದೇ ವಿದ್ಯಾಭ್ಯಾಸದ ಉದ್ದೇಶವಾಗಬೇಕು. ಸರಿಯಾದ ವಿದ್ಯಾಭ್ಯಾಸವು ಭೂಮಿಯನ್ನು ಹೆಚ್ಚು ಫಲವತ್ತಾಗಿಯೂ ಗಣಿಗಳನ್ನು ಹೆಚ್ಚು ಉತ್ಪಾದಕವಾಗಿಯೂ ವ್ಯಾಪಾರವನ್ನು ಹೆಚ್ಚು ಅಭಿವರ್ಧಕವಾಗಿಯೂ ದೇಹಗಳನ್ನು ಹೆಚ್ಚು ಕ್ರಿಯಾಶೀಲವಾಗಿಯೂ ಮನಸ್ಸುಗಳನ್ನು ಹೆಚ್ಚು ಮೂಲಭೂತವಾಗಿಯೂ ಹೃದಯಗಳನ್ನು ಹೆಚ್ಚು ಪರಿಶುದ್ಧವಾಗಿಯೂ ಕೈಗಾರಿಕೆಗಳನ್ನು ಹೆಚ್ಚು ಬಗೆಬಗೆಯಾಗಿಯೂ ರಾಷ್ಟ್ರವನ್ನು ಹೆಚ್ಚು ಒಕ್ಕಟ್ಟಾಗಿಯೂ ಮಾಡುವಂತೆ ಜನರನ್ನು ಸಮರ್ಥರನ್ನಾಗಿ ಮಾಡಬೇಕು. ನಮ್ಮ ಪಾಂಡಿತ್ಯವನ್ನು ಪ್ರದರ್ಶನ ಮಾಡುವದಕ್ಕಾಗಿ ದೊಡ್ಡ ದೀರ್ಘವಾದ ಮೂಲಪಾಠಗಳನ್ನು ಉದಾಹರಿಸುವ ಶಕ್ತಿಯಾಗಲೀ ಪ್ರಾಚೀನ ವೇದಶಾಸ್ತ್ರಗಳಲ್ಲಿರುವ ಪ್ರಕರಣಗಳನ್ನೂ ವಾಕ್ಯಗಳನ್ನೂ ಚಿತ್ರಹಿಂಸೆಯಿಂದ ತಿರುಚು ಮುರುಚು ಮಾಡಿ ತೊಳಸಂಬಟ್ಟೆಯ ಅರ್ಥ ಹೊರಡಿಸುವದಕ್ಕಾಗಿ ಹುಚ್ಚು ಪಟ್ಟಿಯಾದ ಕೂದಲು ಸೀಳುವ ತರ್ಕಬಲವಾಗಲೀ, ನಮ್ಮ ಜೀವನದಲ್ಲಿ ಎಂದೂ ಉಪಯೋಗವಾಗದಿರುವ ವಿಷಯಗಳ ಅಭ್ಯಾಸವಾಗಲೀ ವಿದ್ಯಾಭ್ಯಾಸವಲ್ಲ. ಜೀವನದಲ್ಲಿ ಸಾಧಿಸಲಾಗದ ಜ್ಞಾನವನ್ನು ಒಳಗೆ ತುಂಬಿಕೊಳ್ಳುವದು ಆಧ್ಯಾತ್ಮಿಕ ಮಲಬದ್ಧತೆ ಅಥವಾ ಮನಸ್ಸಿನ ಅಜೀರ್ಣ ರೋಗ.

ಜನರಲ್ಲಿ ಮೇಲೆ ಮೇಲೆ, ಧೈರ್ಯಗೆಡಿಸುವ ಮತ್ತು ಉತ್ಸಾಸ ಭಂಗಮಾಡುವ ಎಲ್ಲಾ ಬಗೆಯ ವಾದಗಳಿದ್ದರೂ ಉಗ್ರವಾದ ಆದರೆ ನಿರ್ಜೀವವಾದ ವಿರೋಧವಿದ್ದರೂ ಸಹ, ಹಿಂದೂಗಳು ಅವಶ್ಯವಾದ ಹೊಂದಾಣಿಕೆಯನ್ನು ತೋರಿಸುತ್ತಾ ಸರಿಯಾದ ವಿದ್ಯೆಯನ್ನು ಸ್ಥಿಮಿತವಾಗಿಯೂ ನಿಶ್ಚಿತವಾಗಿಯೂ ಸಂಪಾದಿಸುತ್ತಿದ್ದಾರೆ. ಹಿಂದಿನ ಕಾಲದ ಸಾಮಾಜಿಕ ನಿಯಮಗಳ ಕಟ್ಟು ಕಾಠಿನ್ಯವೂ ಸಡಿಲವಾಗುತ್ತಿದೆ ; ಜಾತಿ ಪದ್ಧತಿಯು ಹೆಚ್ಚು ಸ್ವಾಭಾವಿಕವಾದ ಪರಿಣಾಮವನ್ನು ಪಡೆಯುತ್ತಿದೆ. ಪಾಶ್ಚಾತ್ಯ ವಿಜ್ಞಾನದಿಂದ ಗಾಬರಿಪಡುವದಕ್ಕೆ ಬದಲಾಗಿ, ಹಿಂದೂಗಳು, ತಮ್ಮ ಬ್ರಹ್ಮವಿದ್ಯೆಗೆ ಅದು ಅತ್ಯಂತ ಮಹತ್ವದ ಸಹಕಾರಿಯೆಂದು ಇವತ್ತು ಅದನ್ನು ಸ್ವಾಗತಿಸುತ್ತಾರೆ.

ಹಿಂದೂ ವಿವಾಹದ ವಿಷಯವೆಂದರೆ, ಅತ್ಯಂತ ಸಂಪ್ರದಾಯನಿಷ್ಠರೂ ವಿದ್ವಾಂಸರೂ ಆದ ಪಂಡಿತರ ಅಧ್ಯಕ್ಷತೆಯಲ್ಲಿ ಬೇರೆ ಬೇರೆ ಜಾತಿಯವರು, ಮದುವೆಯ ವಯಃಸ್ಸನ್ನು ಹೆಚ್ಚಿಸುವದಕ್ಕೆ ಸಾಮಾಜಿಕ ನಿಯಮಗಳನ್ನು ಶಾಸನ ಬದ್ಧವಾಗಿ ರೂಪಿಸುತ್ತಿದ್ದಾರೆ ; ಆಗಾಗ ಯೋಗ್ಯವಾದ ಅಂತರ್ಜಾತಿ ವಿವಾಹಗಳನ್ನೂ ಸಹನಮಾಡುತ್ತಿದ್ದಾರೆ.

ನಮ್ಮ ಧರ್ಮವು "ಪಾಕಶಾಲೆಯ ಧರ್ಮ" "Kitchen-religion" ಎಂದು ಕೆಲವರು ಅಡ್ಡ ಹೆಸರಿಟ್ಟು, ಅದಕ್ಕಿಂತಲೂ ಹೆಚ್ಚಿನದಲ್ಲವೆಂದು ಭಾವಿಸುವಷ್ಟು, ಹಿಂದೂಗಳಲ್ಲಿ ಆಹಾರದ ಪ್ರಶ್ನೆಯು ಎಲ್ಲರೂ ಕಾಣುವಂತೆ ಅತಿರೇಕವಾದ ಪ್ರಮಾಣಕ್ಕೆ ಬೆಳೆದಿದೆ. ಬಹಳ ಕಟ್ಟುನಿಟ್ಟಾದ ಇಷ್ಟೆಲ್ಲಾ ಆಡಂಬರದ ಕರ್ಮ ಕಟ್ಟಳೆಗಳಿದ್ದರೂ ಆ ವಿಷಯದಲ್ಲಿ ನಮ್ಮ ಶಕ್ತಿಯು ತಪ್ಪುದಾರಿಯನ್ನು ಹಿಡಿದು, ಭಯಂಕರವಾಗಿ ಪೋಲಾಗುತ್ತಿದೆ. ಏನನ್ನು ತಿನ್ನಬೇಕು, ಹೇಗೆ ತಿನ್ನಬೇಕು, ಎನ್ನುವದನ್ನು ನಾವು ಎಂದೂ ವೈಜ್ಞಾನಿಕವಾಗಿ ಪರೀಕ್ಷಿಸಿಲ್ಲ. ನಿಮ್ಮ ಭಾವನೆಗಳೂ ಕೃತಿಗಳೂ ನಿಮ್ಮ ಆಹಾರದಂತೆ ಇರುತ್ತವೆ. ನೀವು ಒಂದು ಯಂತ್ರದಲ್ಲಿ ಹಾಕದಿರುವದನ್ನು ಅದರಿಂದ ಹೊರಗೆ ತೆಗೆಯಲಾಗುವದಿಲ್ಲ, ಹಾಗೆ, ಮಾಂಸಖಂಡಗಳ ಮತ್ತು ಮಿದುಳಿನ ಶಕ್ತಿಯನ್ನು ಬೆಳೆಸುವ ಆಹಾರವನ್ನು ಎಂದೂ ತೆಗೆದುಕೊಳ್ಳದಿರುವ ಮನುಷ್ಯರಿಂದ ಮಾಂಸಖಂಡಗಳ ಮತ್ತು ಮಿದುಳಿನ ಕಾರ್ಯಗಳನ್ನು ನಿರೀಕ್ಷಿಸುವದು ಹುಚ್ಚುತನವೇ ಸರಿ ಉನ್ನತವಾದ ಮಾನಸಿಕ ಮತ್ತು ದೈಹಿಕ ಕ್ರಿಯಾಶಕ್ತಿಯನ್ನೂ ಚಟುವಟಿಕೆಯನ್ನೂ ಬೆಳೆಸಲು ನೈಟ್ರಿಕಾಮ್ಲದ ಲವಣ (Nitrates), ಮತ್ತು ಫಾಸ್‌ಫಾರಿಕ್ ಆಮ್ಲದ ಲವಣ (phosphates)–ಇವುಗಳ ಅಗತ್ಯ ಪ್ರಮಾಣವನ್ನು ಒದಗಿಸುವಂಥ ಸರಿಯಾದ ಆಯ್ಕೆಯನ್ನು ನಾವು ಧಾನ್ಯಗಳಿಂದಲೂ ತರಕಾರಿಗಳಿಂದಲೂ ಹಣ್ಣುಗಳಿಂದಲೂ ಸುಲಭವಾಗಿ ಮಾಡಿಕೊಳ್ಳಬಹುದು. ವಿದ್ಯಾರ್ಥಿಗಳಿಗೆ ಅತ್ಯಂತ ಉತ್ಕೃಷ್ಟ ಆಹಾರದ ಬಾರ್ಲಿ (Barley) ಯವೆ, ಜವೆ–ಧಾನ್ಯವನ್ನು ತಿರಸ್ಕಾರ ಮಾಡಿ, ಮಾಂಸಖಂಡಗಳಿಗೂ ಮಿದುಳಿಗೂ ಅವಶ್ಯ ಪೋಷಕವಾದ ಆಹಾರ ಸತ್ತ್ವದ ಒಂದು ಕಣವೂ ಇಲ್ಲದಿರುವ ತುಪ್ಪವನ್ನು ನಾವು ಬಹಳ ಹೆಚ್ಚಾಗಿ ಬೆಲೆಕಟ್ಟಿ ಹೊಗಳುವದು ಶೋಚನೀಯವಲ್ಲವೆ ? ಮೆಣಸಿನಕಾಯಿಯೂ ಮಸಾಲೆಗಳೂ ಔಷಧಗಳೂ ದೇಹಾರೋಗ್ಯವನ್ನು ಕೆಡಿಸಿ, ಪ್ರಕೃತಿಯ ಅಡಿಪಾಯವನ್ನು ಕೊರೆದುಹಾಕಿ, ಸ್ವಾಭಾವಿಕ ರುಚಿಯನ್ನು ವ್ಯತ್ಯಾಸ ಮಾಡಿ, ಎಲ್ಲಾ ಬಗೆಯ ದುರ್ಬಲತೆಗೂ ವ್ಯಾಧಿಗೂ ಸಾವಿಗೂ ಕಾರಣವಾಗುತ್ತವೆ. ಶ್ವಾಸಕೋಶಗಳಿಗೆ ಇಂಧನದಂತೆ (ಉರುವಲಿನಂತೆ) ಮಾತ್ರ ಉಪಯೋಗವಾಗಿ,

ಮಾಂಸಖಂಡಗಳಿಗೂ ಪೋಷಕ ದ್ರವ್ಯಗಳನ್ನು ಒದಗಿಸದಿರುವ ಇಂಗಾಲಾಮ್ಲ ಲವಣ ಗಳಾದ (Carbonates)–ಕಾರ್ಬೊನೇಟ್ಸ್–ಬೆಣ್ಣೆ, ಸಕ್ರೆ, ಹಿಟ್ಟು ಮೊದಲಾದವು ಗಳನ್ನು ಮಿತಿಮೀರಿ ಮೆಚ್ಚಿ ಬೆಲೆಕಟ್ಟುತ್ತೇವೆ. ಇದರ ಪರಿಣಾಮವಾಗಿ ಜಡತ್ವವೂ ತೂಕಡಿಕೆಯೂ ಬಳಲಿಕೆಯೂ ಸುಸ್ತೂ ಶಕ್ತಿಶೋಷಣೆಯೂ ಅನಿವಾರ್ಯ ವಾಗುತ್ತವೆ. ನಮ್ಮ ಆಹಾರವನ್ನು ಜ್ಞಾನ-ವಿಜ್ಞಾನಗಳು ನಿರ್ದೇಶಿಸಲಿ.

ಭಾರತದ ಸಾಧುಗಳು ಈ ದೇಶಕ್ಕೆ ವಿಲಕ್ಷಣವಾದ ಅಸದೃಶವೂ ಅಸಾ ಧಾರಣವೂ ಆದ ಒಂದು ದೃಶ್ಯವಿಲಾಸ. ಹರಿಯದೇ ನಿಂತಿರುವ ನೀರಿನ ಮೇಲೆ ಹಸರು ಪಾಚಿಯು ಕಟ್ಟಿಕೊಳ್ಳುವಂತೆ, ಇಷ್ಟರೊಳಗೆ ಪೂರಾ ೫೨ ಲಕ್ಷ ಜನರು ಭಾರತದ ಮಲಿತ ಜನಜೀವನದ ಮೇಲೆ ಕಲೆತಿದ್ದಾರೆ. ಅವರಲ್ಲಿ ಕೆಲವರು ಮಾತ್ರ ವಾಸ್ತವಾಗಿ ಭಾರತ ಜೀವನ ಸರೋವರದ ಮಹಿಮಾ ವೈಭವದ ಮನೋಹರ ಕಮಲಗಳಾಗಿದ್ದಾರೆ ! ಆದರೆ ಅವರಲ್ಲಿ ಅಪಾರ ಭಾಗವು ಕಲ್ಮಷವೂ ಕಳಪೆಯೂ ಆದ ನೊರೆ, ಬುರುಗು. ಸರೋವರದ ನೀರು ಹರಿಯುವದಕ್ಕೆ ತೊಡಗಲಿ ; ಜನರಲ್ಲಿ ಪ್ರಗತಿಪರವಾದ ಮುನ್ನಡೆಯುವ ಜೀವನವಾಗಲಿ ; ಆ ಕೊಳೆಯಾದ ಬುರುಗು ಕೊಚ್ಚಿಕೊಂಡು ಹೋಗುತ್ತದೆ. ಸಾಧುಗಳು, ಭಾರತದ ಇತಿಹಾಸದಲ್ಲಿ ಕಳೆದುಹೋದ ಅಂಧಕಾರಮಯ ಕಾಲದ ಸ್ವಾಭಾವಿಕ ಫಲವಾಗಿದ್ದಾರೆ. ಆದರೆ, ಇತ್ತೀಚೆಗೆ, ಸುಧಾರಣೆಯು ಸಾಮಾನ್ಯ ಮನೋಧರ್ಮವು, ಗೃಹಸ್ಥರ ಭಾವನೆಗಳನ್ನೂ ಅಭಿರುಚಿ ಗಳನ್ನೂ ಬದಲಾವಣೆಮಾಡುತ್ತಿರುವದಲ್ಲದೆ, ಸಾಧುಗಳ ಜೀವನದ ಮೇಲೂ ಪರಿಣಾಮ ವನ್ನು ಉಂಟುಮಾಡುತ್ತಿದೆ. ರಾಷ್ಟ್ರೀಯತೆಯೆಂಬ ವೃಕ್ಷಕ್ಕೆ ರಕ್ತಹೀರುವವರೂ ಪರ ಸತ್ತ್ವೋಪಜೀವಿಗಳೂ (ಬಂದಣಿಕೆ) ಆಗದೆ, ತನುಮನಗಳನ್ನು–ಹೆಚ್ಚು ಸೇವೆ ಆಗ ದಿದ್ದರೆ–ನವ್ಮುವಾದ ಪೋಷಕದ್ರುವ್ಯ (ಗೊಬ್ಬರ) ವಾಗಿ ಆದರೂ ಮಾಡಬೇಕೆಂಬ ಹಂಬಲವುಳ್ಳ ಸಾಧುಗಳು ಕೆಲವರು ತಲೆ ದೋರುತ್ತಿದ್ದಾರೆ.

ಇಷ್ಟು ದೀರ್ಘಕಾಲ ಲಕ್ಷಾಂತರ ಗೀತಾಭಕ್ತರು, ಕೇವಲ ಮಾತಿನಿಂದ ಮತ್ತೆ ಮತ್ತೆ ಉಚ್ಚರಿಸುತ್ತಿದ್ದ, ಕರ್ತವ್ಯಗೌರವದ ಭಾವನೆಯೂ ದುಡಿತದ ಘನತೆಯೂ ನಿಸ್ಸ್ವಾರ್ಥ–ನಿಷ್ಕಾಮ–ಕರ್ಮಗಳ ಮಹತ್ವವೂ ಅಗತ್ಯವೂ ಈಗ ಅಂತೂ ಅಂತಿಮ ವಾಗಿ, ಶ್ರೀಕೃಷ್ಣನ ನಾಡಿನ ಜೀವನದಲ್ಲಿ ಅಳವಟ್ಟು, ಹೆಚ್ಚುಕಡಿಮೆ ಸಾಧನೆಯಲ್ಲಿ ಬರುತ್ತಿರುವಂತೆ ತೋರುತ್ತದೆ.

ಕರ್ಮಗಳ ಮಾಡುತಲೆ ಕರ್ಮದಲೆ ಜೀವಿಸಿ ! ಸಂತತ ಶ್ರಮಿಸಿ !
ನಿಮ್ಮ ಕರ್ಮಗಳೆ ನಿಮಗೆ ಧರ್ಮವಾಗಲಿ !
ಲಾಭವನು, ಪುಣ್ಯವನು ಜರೆದು !
ಸ್ವಾರ್ಥವೆಲ್ಲವ ತೂರಿ ಎಸೆದು !
ಸಮವಿರುತೆ ಒಳಿತು, ಕೇಡಿನಲಿ ;
ಸಮತೆಯೇ ಯೋಗ, ಮತ್ತದೇ ಧರ್ಮ !

ಕೆಲವು ಲೌಕಿಕರಲ್ಲಿಯೂ ಹಾಗೆಯೇ ಕೆಲವು ಸಾಧುಗಳಲ್ಲಿಯೂ ಆಳವಾದ ಭಕ್ತಿಯನ್ನೂ ಚುರುಕಾದ ವಿವೇಚನಾ ಶಕ್ತಿಯನ್ನೂ ಕಾಣಬಹುದು. ಭಾರತದ ಒಳ ಹೊರಗಿನ, ಪ್ರಾಚೀನ ಮತ್ತು ಅರ್ವಾಚೀನ ಪರಿಸ್ಥಿತಿಗಳ ಯಥಾರ್ಥವಾದ ಪರಿಚಯವುಳ್ಳವರು ಯಾರಾದರೂ ಸುಶಿಕ್ಷಿತ ಭಾರತದ ಭಾವಿ ಧರ್ಮವು ಯಾವದಾಗಬಹುದೆಂಬುದನ್ನು ಕಷ್ಟವಿಲ್ಲದೇ ಸ್ಪಷ್ಟವಾಗಿ ಊಹಿಸಬಹುದು ; ಇದೇ.

ಕಾರ್ಯಶೀಲ ವೇದಾಂತ, ಕಾರ್ಯೋದ್ಯುಕ್ತ ವೇದಾಂತ, ಕಾರ್ಯನಿರತ ವೇದಾಂತ, ವ್ಯವಹಾರ್ಯ ವೇದಾಂತ (Practical Vedanta)

ಅಥವಾ

ಕಾರ್ಯಸಾಧನೆಯಲ್ಲಿ–ಪ್ರೇಮಪೂರ್ವಕವಾದ–ತ್ಯಾಗ.

Renunciation-Through Love-in Action.

ನಿಜವಾದ ಕ್ರಿಯೆಯನ್ನು ನಿಜವಾದ ಪ್ರೇಮದಿಂದಲೂ ಮತ್ತು ನಿಜವಾದ ಜ್ಞಾನ–ವಿಜ್ಞಾನದಿಂದಲೂ ಬೇರ್ಪಡಿಸಲು ಸಾಧ್ಯವಿಲ್ಲ, ಶ್ರುತಿಯ ಧರ್ಮವಾದ ಕಾರ್ಯನಿರತ ವೇದಾಂತವು (Practical Vedanta) ನಮ್ಮ ಜೀವನದ ಪ್ರತಿಯೊಂದು ಕ್ರಿಯೆಯನ್ನೂ ಭಾವನೆಯನ್ನೂ ಆಲೋಚನೆಯನ್ನೂ ದೇವತೆಗಳಿಗೆ ಸಮರ್ಪಣೆಯಾಗುವ ಯಜ್ಞವನ್ನಾಗಿ ಮಾಡುತ್ತದೆ.

ವೇದಾಂತ ಪರಿಭಾಷೆಯಲ್ಲಿ ದೇವ, ಎಂದರೆ, (ಆಧ್ಯಾತ್ಮಿಕ ಮತ್ತು ಆಧಿದೈವಿಕ) ಬೇರೆ ಬೇರೆ ಸ್ವಾಭಾವಿಕ ಸಾಮರ್ಥ್ಯಗಳಿಗೆ ಜೀವವನ್ನೂ ಬೆಳಕನ್ನೂ ಕೊಡುವ ಶಕ್ತಿ. ಒಂದು ಧೀಶಕ್ತಿಯ ಅಥವಾ ಇಂದ್ರಿಯ ಶಕ್ತಿಯ ಅಧಿದೇವತೆ ಎನ್ನುವಾಗ, ಅದನ್ನು ಸಮಷ್ಟಿರೂಪದಲ್ಲಿ ತೆಗೆದುಕೊಳ್ಳಬೇಕು. ಚಕ್ಷುವಿನ ಅಧಿದೇವತೆಯು, ಆದಿತ್ಯ

ಎನ್ನುವ ಹೆಸರಿನ ಎಲ್ಲಾ ಜೀವಿಗಳ ಕಣ್ಣಾಗಿದೆ. ಇದಕ್ಕೆ (ತಚ್ಚಕ್ಷುಃ ಜಗತಃ ತಸ್ಥುಷಶ್ಚ) ಚರಾಚರ ಜಗತ್ತಿನ ಕಣ್ಣಾದ ಭೌತಿಕ ಸೂರ್ಯನು ಪ್ರತೀಕವು ಮಾತ್ರ. ಕೈಗಳ ದೇವತೆಯು ಎಲ್ಲಾ ಕೈಗಳಲ್ಲಿರುವ ಶಕ್ತಿ; ಇದರ ಹೆಸರು ಇಂದ್ರ. ಕಾಲುಗಳ ದೇವತೆಯು ಎಲ್ಲಾ ಕಾಲುಗಳಲ್ಲಿರುವ ವಿಷ್ಣು ಎಂಬ ಹೆಸರಿನ ಶಕ್ತಿ; ಇತ್ಯಾದಿ. ಹೀಗೆ, ದೇವತೆಗಳಿಗೆ ಅರ್ಪಿಸುವ ನಿಜವಾದ ಯಜ್ಞವೆಂದರೆ, ತನ್ನ ವೈಯಕ್ತಿಕವಾದ ಧೀಶಕ್ತಿ ಇಂದ್ರಿಯ ಶಕ್ತಿಗಳನ್ನು ಅದಕ್ಕೆ ಸಂಬಂಧಪಟ್ಟಿರುವ ಸಮಷ್ಟಿ ಶಕ್ತಿಗಳಿಗೆ–ವಿಶ್ವಶಕ್ತಿಗಳಿಗೆ–ಅರ್ಪಿಸುವದು ಇಂದ್ರನಿಗೆ ಸಮರ್ಪಣೆ ಎಂದರೆ, ದೇಶದಲ್ಲಿರುವ ಎಲ್ಲಾ ಕೈಗಳ ಒಳಿತಿಗಾಗಿ, ಹಿತಕ್ಕಾಗಿ ಕಾರ್ಯ ಮಾಡುವದಾಗಿದೆ. ಆದಿತ್ಯನಿಗೆ ಸಮರ್ಪಣೆ ಎಂದರೆ, ಎಲ್ಲಾ ಕಣ್ಣುಗಳಲ್ಲಿರುವ ದೇವರ ಸಾನ್ನಿಧ್ಯವನ್ನರಿಯುವದು; ಅಯೋಗ್ಯವರ್ತನೆಯಿಂದ ಯಾರ ಕಣ್ಣುಗಳಿಗೂ ನೋವನ್ನುಂಟುಮಾಡದೆ, ನಿಮ್ಮನ್ನು ನೋಡಿದವರಿಗೆಲ್ಲಾ ಸಂತೋಷದ ನಗುವನ್ನೂ ಪ್ರೀತಿಯನ್ನೂ ದಯೆಯನ್ನೂ ತೋರಿಸುತ್ತಾ ಎಲ್ಲಾ ಕಣ್ಣುಗಳನ್ನೂ ಆದರಿಸಿ, ಗೌರವಿಸಬೇಕು. ಈ ಕಣ್ಣುಗಳೂ ಇವುಗಳ ಶಕ್ತಿಯೂ ತನ್ನದು ಎನ್ನುವ ಅಹಂಕಾರ ಭಾವನೆಯು ಪೂರಾ ಹೋಗುವಂತೆ ಉತ್ಕಟ ಭಕ್ತಿಯಿಂದ ತನ್ನ ಕಣ್ಣುಗಳನ್ನೂ ನೋಡುವ ಶಕ್ತಿಯನ್ನೂ ಲೋಕದ ಕಣ್ಣಾದ ಸೂರ್ಯದೇವನಿಗೆ ಅರ್ಪಿಸಬೇಕು ವ್ಯಷ್ಟಿಶಕ್ತಿಯು ಸಮಷ್ಟಿ ಶಕ್ತಿಯ ಒಂದು ಅಂಶವಾದ್ದರಿಂದ ಸಮಷ್ಟಿ (ವಿಶ್ವ) ಶಕ್ತಿಯೇ ವ್ಯಷ್ಟಿಯ ಉಪಾಧಿಯ ಮೂಲಕ ಕಾರ್ಯನಡೆಸುತ್ತಿದೆ; ವ್ಯಷ್ಟಿಗೆ ಪ್ರತ್ಯೇಕ ಸ್ವತಂತ್ರ ವ್ಯಕ್ತಿತ್ವವಿಲ್ಲ; ಇರುವದು ಅಖಂಡವಾದ ವಿಶ್ವಶಕ್ತಿ ಒಂದೇ, ಅದೇ ನಿಜವಾದ ತಾನು ಎಂದು ಅರಿಯಬೇಕು. ಭಾವಭೂಮಿಕೆಯಲ್ಲಿ ಸಮರ್ಪಣವೆನಿಸುವ ಭಕ್ತಿಯು ಜ್ಞಾನಭೂಮಿಕೆಯಲ್ಲಿ, ವಸ್ತುಸ್ಥಿತಿಯ ಅರಿವಾಗುತ್ತದೆ. ಎಲ್ಲವನ್ನೂ ಸಮರ್ಪಣೆಮಾಡುವ 'ನಾನು' ಕೂಡ ತೋರಿಕೆಯಾದ್ದರಿಂದ, 'ನಾನು' ಇಲ್ಲವೇ ಇಲ್ಲ, ಇರುವುದು ಅಖಂಡವಾದ ವಿಶ್ವಶಕ್ತಿ ಒಂದೇ; ಅಥವಾ ಅದಕ್ಕೆ ಆಧಾರವಾದ ಬ್ರಹ್ಮ ಒಂದೇ ಎಂಬ ನಿಜದ ಅರಿವಾಗುತ್ತದೆ.

ಆಗ, ಸಮಸ್ತವನ್ನೂ ಪ್ರಕಾಶಪಡಿಸುವ ಪರಂಜ್ಯೋತಿಯೇ-ಬ್ರಹ್ಮವೇ-ನಿಮ್ಮ ಕಣ್ಣುಗಳ ಮೂಲಕ ಹೊಳೆಯುತ್ತದೆ. ನಮ್ಮ ಬುದ್ಧಿವಿಚಾರಗಳನ್ನು ಬೃಹಸ್ಪತಿಗೆ ಸಮರ್ಪಣೆಮಾಡುವದೆಂದರೆ, ದೇಶದಲ್ಲಿರುವ ಎಲ್ಲ ಜನರೂ ನಾವೇ-ನಾನೇ–ಎಂದು ತಿಳಿದು ಎಲ್ಲರ ಕಲ್ಯಾಣಕ್ಕಾಗಿ ಆಲೋಚಿಸುವದು; ಅವರ ಹಿತಾಸಕ್ತಿ, ಹಿತಸಾಧನೆಗಳೇ ನಮ್ಮ ಹಿತಸಾಧನೆಗಳೆಂದು ತಿಳಿದು ಆನಂದ ಪಡಬೇಕು.

ಸಂಕ್ಷಿಪ್ತವಾಗಿ ಹೇಳುವದಾದರೆ, 'ನನ್ನ ನೆರೆಹೊರೆ ನಾನೇ' 'ಸರ್ವವೂ ನಾನೇ', ಎಲ್ಲರ ಆತ್ಮನಾಗುವದಕ್ಕಾಗಿ ನನ್ನ ಅಲ್ಪವಾದ ಆತ್ಮನನ್ನು ಕಳೆದುಕೊಳ್ಳುವದು; ಇದೇ ಸ್ವಾರ್ಥವನ್ನು (ಕ್ರಿಸ್ತನಂತೆ) ಬಲಿದಾನದ ಶಿಲುಬೆಗೇರಿಸಿ (Crucifixion) ಮೊಳೆಹೊಡೆದು ಸಾಯಿಸುವದು; ಮತ್ತು ಇದೇ ಸರ್ವಾತ್ಮನ (ಕ್ರಿಸ್ತನ) ಪುನರುಜ್ಜೀವನ; (ಗೋರಿಯಿಂದ ಅಗೆದು ತೆಗೆದ ಕ್ರಿಸ್ತನ ಪುನರುತ್ಥಾನ-Resurrection). ಇದರ ಒಂದು ಮುಖವನ್ನು ಮಾಡಿಕೆಯಲ್ಲಿ ಭಕ್ತಿಯೆಂದೂ ಇನ್ನೊಂದು ಮುಖವನ್ನು ಜ್ಞಾನವೆಂದೂ ಕರೆಯುತ್ತದೆ

ಓ ಸರ್ವ, (ಓಂ!)—

ತೆಗೆದುಕೋ ಎನ್ನ ಜೀವವ, ಇರಲದು ಒಸಗೆ,
ನಿನ್ನ ಪದದಿ ಸಮರ್ಪಿತವಾಗಲಿ ಓ ಸರ್ವ, ನಿನಗೆ.
ತೆಗೆದುಕೋ ಎನ್ನ ಕೈಗಳ ಇರಲವು ನಿನಗೆ,
ನಿನ್ನ ಸೇವಿಸುತೆ, ಕೆಲಸ ಗೈಯಲಿ; ಒಲಿದು ನಿನಗೆ.
ತೆಗೆದುಕೋ ಎನ್ನ ಹೃದಯುವ, ಇರಲದು ನಿನಗೆ,
ನಿನ್ನ ಪ್ರೇಮದಿ ತುಂಬಿ ತುಳುಕಲಿ, ಪ್ರಭುವೆ, ಒಲಿದು ನಿನಗೆ,
ತೆಗೆದುಕೋ ಎನ್ನ ಕಣ್ಣುಗಳ, ಇರಲವು ನಿನಗೆ,
ನಿನ್ನ ದರ್ಶನದಮಲೇರಿ ನಲಿಯಲಿ, ದೇವ, ಒಲಿದು ನಿನಗೆ,
ತೆಗೆದುಕೋ ಎನ್ನ ಮನವ, ಇರಲದು ನಿನಗೆ,
ನಿನ್ನ ಪವಿತ್ರ ಸಮಾಧಿಯಾಗಲಿ ಸತತ ನಿನಗೆ.

ಈ ಸಮರ್ಪಣಭಾವವು ಸಂಪೂರ್ಣವಾಗಿ ಪ್ರೇಮದಿಂದ ಸಾಧಿಸಿದರೆ, ತತ್ತ್ವಮಸಿ (ಅದೇ ನೀನಾಗಿದ್ದಿ) ಎಂಬ ಶ್ರುತಿವಾಕ್ಯದ ಆನಂದವು ಅನುಭವಕ್ಕೆ ಬರುತ್ತದೆ.

ದೇಶಭಕ್ತರಾಗಲು ನಿಮಗೆ ಇಚ್ಛೆಯಿದೆಯೆ? ಹಾಗಾದರೆ, ನಿಮ್ಮ ದೇಶದೊಡನೆಯೂ ಜನರೊಡನೆಯೂ ಪ್ರೇಮದಿಂದ ಒಂದಾಗುವಂತೆ ನಿಮ್ಮ ಹೃದಯ ವೀಣೆಯನ್ನು ಶ್ರುತಿಮಾಡಿ. ಅವರಲ್ಲಿ ಏಕತ್ವವನ್ನು ಭಾವಿಸಿರಿ. ನಿಮಗೂ ನಿಮ್ಮ ಜನರಿಗೂ ಮಧ್ಯದಲ್ಲಿ, ನಿಮ್ಮ ಈಗಿನ ವ್ಯಕ್ತಿತ್ವದ ನೆರಳು ಸಹ ತೆಳುವಾದ ಗಾಜಿನ ಪರದೆ ಆಗದಿರಲಿ ನಿಮ್ಮ ದೇಶದ ಹಿತಕ್ಕಾಗಿ, ನಿಮ್ಮ ವೈಯಕ್ತಿಕ ಜೀವನವನು

ಬಲಿಗೊಡುವದಕ್ಕೆ ಸಿದ್ಧರಾದ ನೈಜವಾದ ಆಧ್ಯಾತ್ಮಿಕ ಯೋಧರಾಗಿರಿ. ಅಲ್ಪವಾದ ಅಹಂಕಾರವನ್ನು ನಿರಾಕರಿಸಿ, ಇಡಿಯ ದೇಶವೇ ನೀವಾಗಿ, ನೀವು ಹೇಗೆ ಭಾವಿಸಿದರೆ ನಿಮ್ಮ ದೇಶವು ಹಾಗೆ ಭಾವಿಸುತ್ತದೆ. ನೀವು ಮುನ್ನಡೆದರೆ, ದೇಶವು ನಿಮ್ಮನ್ನು ಹಿಂಬಾಲಿಸುತ್ತದೆ. ನೀವು ಆರೋಗ್ಯವಾಗಿದ್ದೀರೆಂದು ಭಾವಿಸಿದರೆ, ನಿಮ್ಮ ಜನರೆಲ್ಲಾ ಆರೋಗ್ಯವಾಗಿರುತ್ತಾರೆ. ನಿಮ್ಮ ಶಕ್ತಿಯು ಅವರ ನರನಾಡಿಗಳಲ್ಲಿ ಮಿಡಿಯುವದಕ್ಕೆ ತೊಡಗುತ್ತದೆ. ನಾನು ಭಾರತವೆಂದು, ಸಂಪೂರ್ಣ ಭಾರತವೆಂದು ಭಾವಿಸುತ್ತೇನೆ. ಭಾರತ ಭೂಮಿಯು ನನ್ನ ಸ್ವಂತ ದೇಹವು. ಕನ್ಯಾಕುಮಾರಿಯು ನನ್ನ ಅಡಿ (ಪಾದ) ; ಹಿಮಾಲಯವು ನನ್ನ ಮುಡಿ (ಮಸ್ತಕ). ನನ್ನ ಕೇಶಗಳಿಂದ ಗಂಗೆಯು ಹರಿಯುತ್ತದೆ ; ನನ್ನ ಮಸ್ತಕದಿಂದ ಬ್ರಹ್ಮಪುತ್ರಾ–ಸಿಂಧು ನದಿಗಳು ಹರಿಯುತ್ತವೆ. ವಿಂಧ್ಯಾಚಲವು ನನ್ನ ಸೊಂಟದ ಸುತ್ತಳತೆ. ಕೊರ ಮಂಡಲವು ನನ್ನ ಬಲಗಾಲು, ಮಲೆಯಾಳವು ನನ್ನ ಎಡಗಾಲು ; ನಾನು ಸಮಗ್ರ ಭಾರತ ; ಅದರ ಪೂರ್ವಪಶ್ಚಿಮಗಳೇ ನನ್ನ ತೋಳುಗಳು. ನಾನು ಸರಳರೇಖೆಯಲ್ಲಿ ಅವನ್ನು ಚಾಚಿ ಮಾನವಕುಲವನ್ನೇ ಆಲಂಗಿಸುತ್ತೇನೆ. ನನ್ನ ಪ್ರೇಮ ವಿಶ್ವಪ್ರೇಮ. ಓ ! ನನ್ನ ಶರೀರದ ವಿನ್ಯಾಸ–ವಿದ್ಯಮಾನಗಳೇ ಹೀಗಿವೆ. ಅದು ನಿಂತ ನಿಲುವಿನಲ್ಲಿ ಅನಂತಾಕಾಶವನ್ನು–ಅನಂತ ದೇಶವನ್ನು–ನಿಟ್ಟಿಸುತ್ತಿದೆ ; ಆದರೆ ನನ್ನ ಒಳಗಿನ ಚೈತನ್ಯವು ಸಕಲರ ಆತ್ಮವಾಗಿದೆ. ನಾನು ನಡೆಯುವಾಗ ಭಾರತವೇ ನಡೆಯುತ್ತಿರುವಂತೆ ನನಗನಿಸುತ್ತದೆ, ನಾನು ಮಾತನಾಡುವಾಗ ಭಾರತವೇ ಮಾತಾಡಿದಂತೆ ನನಗೆ ಭಾವನೆಯಾಗುತ್ತದೆ. ನಾನು ಉಸಿರಾಡುವಾಗ ಭಾರತವೇ ಉಸಿರಾಡುತ್ತಿರುವಂತೆ ನನಗೆ ಅನುಭವವಾಗುತ್ತದೆ. ನಾನೇ ಭಾರತ, ನಾನೇ ಶಂಕರ, ನಾನೇ ಶಿವ ; ಇದು ದೇಶಭಕ್ತಿಯ ಅತ್ಯಂತ ಉನ್ನತವಾದ ಅನುಭವ ; ಮತ್ತು ಇದೇ ವ್ಯವಹಾರ್ಯ ವೇದಾಂತ, ಕಾರ್ಯಶೀಲ ವೇದಾಂತ (Practical Vedanta).

**Peace like a River flows to me**

ಎನ್ನಲ್ಲಿಗಾ ಶಾಂತಿ ಹೊಳೆಯಂತೆ ಹರಿಯುತಿದೆ.
ಶಾಂತಿಸುಖ ಹರಿಯುತಿದೆ ಹೊಳೆಯಂತೆ ಎನ್ನಲ್ಲಿಗೆ, ಕ್ಷಣವು ಬಿಡದೆ,
ಶಾಂತಿ, ಸಾಗರದಂತೆ ಉರುಳುತಿದೆ ಎನ್ನೊಳಗೆ, ಮೊರೆಯುತಿದೆ,
ಶಾಂತಿ, ಗಂಭೀರ ಭಾಗೀರಥಿಯ ತೆರದಿ ಹರಿಯುತಿಹಳು,
ನನ್ನೆಲ್ಲ ಕೇಶಗಳಿಂದ ಕಾಲ್ಬೆರಳ್ಗಳಿಂದಾಕೆ ಚಿಮ್ಮಿ ಪ್ರವಹಿಸಿಹಳು.

ಕಣ್ಣು ಹುಬ್ಬುಗಳ ಕಮಾನುಬಾಗಿಲಿಂದೆ,
ನಾ ಸುರಿವೆ ಸುಧಾ ಶಾಂತಿರಸವನಿಂದೆ,
ಹೃದಯದಾ ಸ್ವರ್ಗದಲಿ ಕುಳಿತು,
ವೈಭವದಿ ಪ್ರಭುತ್ವ ನಡೆಸಿ
ಪ್ರೇರಿಸುವೆನೆಲ್ಲರನು ತಿಳಿಯದಂತೆ,
ಎನ್ನನಾರೂ ಬಿಟ್ಟಗಲಿ ಬದುಕಲಾರರು ಪ್ರಾಣದಂತೆ ;

## The Ancient Spiritualism of India

## ಭಾರತದ ಪ್ರಾಚೀನ ಆಧ್ಯಾತ್ಮಿಕತೆ (ಪಾರಮಾರ್ಥಿಕತೆ)

### ಅಮೆರಿಕಾದಲ್ಲಿ ತಾ|| 28-7-1904ರಲ್ಲಿ ಮಾಡಿದ ಉಪನ್ಯಾಸ

ಸಂಪನ್ನ ಸ್ತ್ರೀಪುರುಷ ರೂಪದಲ್ಲಿರುವ ಪ್ರೇಮಾತ್ಮ !

ರಾಮನು ಮೊದಲು ಅಮೆರಿಕಕ್ಕೆ ಬಂದಾಗ, ಹಡಗಿನಿಂದ ಬಂದಿಳಿದು ನೆಲ ಮುಟ್ಟಿದುದು 'ಸೀಟ್ಲ್' (Seattle) ನಗರದಲ್ಲಿ. ಆ ನಗರದ 'ಸ್ಪಿರಿಚುಯಲಿಸ್ಟ್ಸ' ಅಧ್ಯಾತ್ಮವಾದಿಗಳು ರಾಮನನ್ನು ಬರಮಾಡಿಕೊಂಡರು. ಅವರು ರಾಮನಿಗೆ ಈ ಪುಣ್ಯಭೂಮಿಯಲ್ಲಿ ಮೊಟ್ಟ ಮೊದಲು ಸ್ವಾಗತವನ್ನು ಬಯಸಿದರು. ಸೀಟ್ಲ್ ನಲ್ಲಿರುವ ಈ ಅಧ್ಯಾತ್ಮಿಗಳಲ್ಲಿ ಕೆಲವರು, ರಾಮನಿಗೆ ಅತ್ಯಂತ ಪ್ರೇಮದ, ಅತ್ಯಂತ ಮಧುರ ಮಮತೆಯ ಮಿತ್ರರಿದ್ದಾರೆ. ಪೋರ್ಟ್‌ಲ್ಯಾಂಡ್‌ನಲ್ಲಿಯೂ ಓರ್‌ಗನ್ (Oregon) ಪಟ್ಟಣದಲ್ಲಿಯೂ ಅಧ್ಯಾತ್ಮಿಗಳು ಪುನಃ ರಾಮನ ಉಪನ್ಯಾಸಗಳಿಗೆ ವ್ಯವಸ್ಥೆಮಾಡಿದರು ; ಮತ್ತು ದಕ್ಷಿಣ ಅಮೆರಿಕಾದಲ್ಲಿ ಸಹ, ಈ ಅಧ್ಯಾತ್ಮಿಗಳಲ್ಲಿ, ರಾಮನು ತನ್ನ ಜೀವಮಾನದಲ್ಲಿ ಬಲ್ಲ ಜನರಲ್ಲೆಲ್ಲಾ ಅತ್ಯಂತ ಮಧುರ ಮೈತ್ರಿಯ ಚೇತನರನ್ನು ಪರಿಚಯ ಮಾಡಿಕೊಂಡಿದ್ದಾನೆ. ಅಮೆರಿಕಾದ ಅಧ್ಯಾತ್ಮಿಗಳ ವಿಷಯದಲ್ಲಿ ರಾಮನ ಅಭಿಪ್ರಾಯವೇನೆಂದರೆ, ಅವರು ಅತ್ಯಂತ ಉದಾರ ಭಾವನೆಯುಳ್ಳವರೂ ಮತ್ತು ವಿಶಾಲ ಮನಸ್ಸಿನವರೂ ಅತ್ಯಂತ ಅನುಕಂಪ-ಸಹಾನುಭೂತಿಗಳುಳ್ಳವರೂ ನಿಷ್ಕಪಟಿಗಳೂ ನಿಜವಾದ ಕ್ರೈಸ್ತ ಧರ್ಮಿಗಳೂ ಆಗಿದ್ದಾರೆ. ಮತ್ತೊಮ್ಮೆ ಇಲ್ಲಿ, ತನ್ನ ಅತ್ಯಂತ ಪ್ರಿಯ ಮಿತ್ರರ ಮಧ್ಯದಲ್ಲಿ ಬಂದಿರುವದಕ್ಕೆ ರಾಮನಿಗೆ ಸಂತೋಷವಾಗಿದೆ ರಾಮನು ಈಗ ಅಮೆರಿಕಾದೇಶವನ್ನು ಬಿಡುವದರಲ್ಲಿದ್ದಾನೆ, ಈ ಭೂಮಿಗೆ ರಾಮನನ್ನು ಸ್ವಾಗತಿಸಿದ ಜನರನ್ನು ಕುರಿತು ಮತ್ತೊಮ್ಮೆ ಮಾತನಾಡಲು ರಾಮನಿಗೆ ಈಗ ಅವಕಾಶ ಸಿಕ್ಕಿದೆ.

ಇಲ್ಲಿ ನಾವೆಲ್ಲರೂ ಸಹೋದರರು, ಪ್ರಿಯ ವಿಧರ್ಮಿಗಳು (Heathens) ಕುರುಚಲು ಬೆಳೆದಿರುವ ಸಮನಾದ ಬಂಜರು ಭೂಮಿಯ (Heath) ಮೇಲೆ

ಜೀವಿಸುವವರೆಲ್ಲಾ ಹೀದನ್ಸ್ ನಾವೀಗ ಅಂತರಿಕ್ಷದ ಸ್ವಚ್ಛಂದ ವಿತಾನದ (ಆವರಣದ) ಕೆಳಗೆ, ಮರಗಿಡಗಳ ಮೋಡಗಳ ದೇಶದಲ್ಲಿ ಜೀವಿಸಿರುವದರಿಂದ ನಾವು ಮತ್ತೊಮ್ಮೆ 'ಹೀದನ್' ಸಹೋದರರಾಗಿದ್ದೇವೆ. ತನ್ನ ಹೀದನ್ ಸಹೋದರರನ್ನು ಉದ್ದೇಶಿಸಿ ಭಾಷಣಮಾಡಲು ರಾಮನಿಗೆ ಸಂತೋಷವಾಗಿದೆ. ರಾಮನು ಮೊದಲು ನಿಮಗೆ "ಭಾರತದ ಪ್ರಾಚೀನ ಪಾರಮಾರ್ಥಿಕತೆ, ಅಧ್ಯಾತ್ಮಿಕತೆ" ಎಂಬ ವಿಷಯ ವನ್ನು ತಿಳಿಸಿ, ಅನಂತರ ಬೇರೆ ವಿಷಯಕ್ಕೆ ಮುಂದುವರಿಯುತ್ತಾನೆ.

ಭಾರತದ ಪ್ರಾಚೀನ ಆಧ್ಯಾತ್ಮಿಕತೆಯು, ವಾಸ್ತವವಾಗಿ, ಈ ದೇಶದಲ್ಲಿ ಸಂಘಟಿಸಿರುವ ಅಧ್ಯಾತ್ಮಸಂಸ್ಥೆಗಳಂತೆ ಏನೊಂದು ವ್ಯವಸ್ಥಿತ ಸಂಸ್ಥೆಯಲ್ಲ. ಆದರೂ ನಮ್ಮ ಪ್ರಾಚೀನ ಶಾಸ್ತ್ರಗಳಲ್ಲಿ ಮೇಲಿಂದ ಮೇಲೆ, ಅತೀಂದ್ರಿಯ ದೃಷ್ಟಿಶಕ್ತಿಗಳ (Clairvoyant Powers) ಅಸಾಧಾರಣ ಪ್ರಜ್ಞೆಯ-ವಿಷಯದಲ್ಲಿ ಪ್ರಸ್ತಾವಗಳೂ ಸಂಬಂಧಪರಾಮರ್ಶಗಳು, ಸೂಚನೆಗಳೂ ಆಗಾಗ ಬಂದಿರುವದನ್ನು ಓದುತ್ತೇವೆ.

ರಾಮನು ಕೆಲಸಮಾಡುವದೂ ಓದುವದೂ ಬರೆಯುವದೂ ಹೇಳಿ ಬರೆಸುವದೂ ಆದೇಶ-ಸಂದೇಶಗಳನ್ನು ನೀಡುವದೂ ಎಲ್ಲಾ ಭಾರತದಲ್ಲಿ ದಿವ್ಯದೃಷ್ಟಿಯೆಂದು, ಪ್ರಸಿದ್ಧವಾಗಿರುವ ಶಕ್ತಿಯ ಪ್ರಭಾವದಿಂದಲೇ ಆಗಿದೆ ದಿವ್ಯದೃಷ್ಟಿ ಎಂದರೆ ಜ್ಞಾನಪ್ರಕಾಶದ ದೃಷ್ಟಿ ಎಂದು ಅರ್ಥ. ನೀವು ಭಗವದ್ಗೀತೆಯ ವಿಷಯವಾಗಿ ಬಹಳ ವಿಚಾರಗಳನ್ನು ಕೇಳಿರಬೇಕು. ಗೀತೆಯನ್ನು ಸಂಜಯನು ಹೇಳಿದ್ದು, ಭಗವದ್ಗೀತೆಯ ಪ್ರಾರಂಭದಲ್ಲಿಯೇ ಸಂಜಯನ ಹೆಸರನ್ನು ಕೇಳುತ್ತೀರಿ. ಶ್ರೀ ಕೃಷ್ಣನು ಅರ್ಜುನನಿಗೆ ಭಗವದ್ಗೀತೆಯನ್ನು ಉಪದೇಶಮಾಡಿದ ಯುದ್ಧಕ್ಷೇತ್ರದಲ್ಲಿ ಸಂಜಯನಿರ ಲಿಲ್ಲ. ರಣರಂಗದಿಂದ ಸುಮಾರು ಇನ್ನೂರು ಮೈಲಿಗಳ ಮೇಲೆ ಸಂಜಯನಿದ್ದನು. ಆದ್ದ ರಿಂದ ಸಂಜಯನ ಗುರುವು ಸಂಜಯನಿಗೆ ದಿವ್ಯದೃಷ್ಟಿ ಎಂಬ ಶಕ್ತಿಯನ್ನು ಅನುಗ್ರಹಿಸು ತ್ತಾನೆ ಇದರಿಂದ ಸಂಜಯನು 200 ಮೈಲಿಗಳ ದೂರದಲ್ಲಿದ್ದರೂ ಯುದ್ಧರಂಗದಲ್ಲಿ ನಡೆಯುತ್ತಿದ್ದ ಪ್ರತಿಯೊಂದು ವಿದ್ಯಮಾನವನ್ನೂ ಪ್ರತ್ಯಕ್ಷವಾಗಿ ಕಂಡಂತೆ ನಿರೂಪಿ ಸುತ್ತಾ ಬರುತ್ತಾನೆ ಅದರಲ್ಲಿ ಭಗವದ್ಗೀತೆಯೂ ಸೇರಿದ್ದಾಗಿದೆ. ಈ ದೇಶದಲ್ಲಿ (ಅಮೆರಿಕಾದಲ್ಲಿ) 'ವಾಹಕ' (Mediums) ಎನಿಸುವವರ ಹೇಳಿಕೆಗಳನ್ನೂ ಕಾರ್ಯಗಳನ್ನೂ ಬರೆವಣಿಗೆಗಳನ್ನೂ ನೀವು ನೆನಪು ಮಾಡಿಕೊಳ್ಳಬಹುದು.

"One of the greatest books, the most wonderful according to me, ever written under the Sun, is 'yoga

vasishtha' of which no body on the earth can read without realizing God-consciousness, nobody can read it through without becoming one with the All"

" ಸೂರ್ಯನಿಂದ ಪೋಷಿತವಾದ ಈ ಜಗತ್ತಿನಲ್ಲಿ, ನನ್ನ ಅಭಿಪ್ರಾಯದಂತೆ, ಅತ್ಯಂತ ಶ್ರೇಷ್ಠವೂ ಅತ್ಯಂತ ಅದ್ಭುತವೂ ಆದ ಗ್ರಂಥವೆಂದರೆ, ಯೋಗವಾಸಿಷ್ಠವು, ಈ ಜಗತ್ತಿನಲ್ಲಿ ಅದನ್ನು ಯಾರೇ ಓದಲಿ, ಅವರಿಗೆ ಪರಮಾತ್ಮಜ್ಞಾನವಾಗದೇ ಇರುವದಿಲ್ಲ ; ಅವರಿಗೆ ' ಸರ್ವೋಹಂ ' ' ಸರ್ವವೂ ನಾನೇ ' ಎಂಬ ಅನುಭವವಾಗದೇ ಇರುವದಿಲ್ಲ".

ಈ ಗ್ರಂಥವು ಇಂಥಾ ಸಂದರ್ಭಗಳಲ್ಲಿಯೇ-ಆ ದಿವ್ಯದೃಷ್ಟಿಯ ಶಕ್ತಿಯಿಂದಲೇ– ಬರೆಯಲ್ಪಟ್ಟಿತು. ಮತ್ತೆ, ಭಾರತದ ಅತ್ಯಂತ ಮಹೋನ್ನತಗಳಲ್ಲಿ ಒಂದಾದ ರಾಮಾಯಣವು, ಅದರಲ್ಲಿ ವಿವರಿಸಿರುವ ಐತಿಹಾಸಿಕ ಘಟನೆಗಳು ವಾಸ್ತವವಾಗಿ ನಡೆಯುವದಕ್ಕೆ ಅನೇಕ ಶತಮಾನಗಳ ಮುಂಚೆಯೇ ವಾಲ್ಮೀಕಿ ಮಹರ್ಷಿಯಿಂದ ಬರೆಯಲ್ಪಟ್ಟಿತು. ಭಾರತದಲ್ಲಿರುವ ಕೆಲವು ಗ್ರಂಥಗಳ ಲೇಖನದ ವಿಷಯದಲ್ಲಿ ಇಂಥ ಅದ್ಭುತ ವಿಚಾರಗಳಿವೆ.

ಪುನಃ, ಜಗತ್ತಿನ ಅತ್ಯಂತ ಮಹದ್ಗ್ರಂಥವಾದ, ನಾಲ್ಕುಲಕ್ಷ ಶ್ಲೋಕಗಳಿರುವ ಮಹಾಭಾರತದಲ್ಲಿ ಒಬ್ಬ ರಾಣಿಯ ಕಥೆಯು ಬಂದಿದೆ. ಆಕೆಗಾದ ಒಂದು ದರ್ಶನದಲ್ಲಿ ಆಕೆ ಅತ್ಯಂತ ಸುಂದರನಾದ ರಾಜಕುಮಾರನೊಬ್ಬನನ್ನು ಕಂಡು, ಅವನ ಪ್ರೇಮದಲ್ಲಿ ಸಿಕ್ಕು ಬೀಳುತ್ತಾಳೆ. ಆಕೆಯ ಪ್ರೇಮವು ಅತ್ಯಂತ ಗಾಢವಾಗಿದ್ದುದರಿಂದ, ತೀವ್ರವಾದ ಪ್ರಣಯಜ್ವರದಿಂದ ದೇಹವು ಅಸ್ವಸ್ಥವಾಗುತ್ತದೆ. ಆಕೆಯ ತಂದೆಯು ಅನೇಕ ವೈದ್ಯರಿಂದ ಆಕೆಗೆ ಚಿಕಿತ್ಸೆಮಾಡಿಸಿದರೂ ಪ್ರಯೋಜನವಾಗಲಿಲ್ಲ. ಕೊನೆಗೆ, ಆಕೆಯ ಆ ವಿಲಕ್ಷಣ ಜ್ವರದ ತಾಪಕ್ಕೆ ಗುಪ್ತಪ್ರೇಮವೇ–ಕಾಮವೇ-ಕಾರಣವೆಂದು ಯಾರೋ ಒಬ್ಬರು ಕಂಡುಹಿಡಿಯುತ್ತಾರೆ. ಆಗ ಆ ರಾಜನ ಪ್ರಧಾನ ಮಂತ್ರಿಯೇ ಬಂದು, ರಾಜಕುಮಾರಿಯ ನಾಡಿಯನ್ನು ತಾನೇ ಸ್ವತಃ ಪರಿಕ್ಷಿಸುತ್ತಾನೆ. ಅವನು ತನ್ನ ರಾಜ್ಯದಲ್ಲಿದ್ದ ಅತ್ಯಂತ ನಿಪುಣನಾದ ಚಿತ್ರಕಾರನನ್ನು ಕರೆಸಿ, ಆಗ ಭಾರತದಲ್ಲಿ ಸುಂದರ ರೂಪವುಳ್ಳ ರಾಜರೆಲ್ಲರ ಚಿತ್ರಗಳನ್ನೂ ಬರೆಯಲು ಆಜ್ಞೆಮಾಡುತ್ತಾನೆ. ಆ ಚಿತ್ರಕಾರ ವ್ಯಕ್ತಿಯು ಹೆಂಗಸಾಗಿದ್ದಳು. ಈ ನಿದರ್ಶನವು, ಭಾರತದಲ್ಲಿಯ ಸ್ತ್ರೀಯರ ಸ್ಥಾನಮಾನಗಳನ್ನೂ ಸಾಮರ್ಥ್ಯಗಳನ್ನೂ ಕೆಲವು ಮಟ್ಟಿಗೆ ಸೂಚಿಸುತ್ತದೆ.

ಆ ಚಿತ್ರಕಾರಳು ಆ ಅಂತಃಪುರದಲ್ಲಿ ಬಂದು ಆ ರಾಜಕುಮಾರಿಯ ಎದುರಿಗೆ ಗೋಡೆಗೆ ಹಾಕಿದ್ದ ಒಂದು ಪರದೆಯ ಮೇಲೆ, ಆ ಕಾಲದಲ್ಲಿ ಭಾರತದಲ್ಲಿ ಜೀವಿಸಿದ್ದ ಪ್ರಸಿದ್ಧ ಮಹಾರಾಜರುಗಳ ಭಾವಚಿತ್ರಗಳನ್ನು ಒಂದಾದ ಮೇಲೆ ಒಂದನ್ನು ಬರೆಯುವದಕ್ಕೆ ತೊಡಗುತ್ತಾಳೆ. ರಾಜಕುಮಾರಿಯು ಆಸಕ್ತಿಯಿಂದ ಆ ಚಿತ್ರಗಳನ್ನು ನೋಡುತ್ತಿರುವಾಗ, ಪ್ರಧಾನಿಯು ಆಕೆಯ ನಾಡಿಯನ್ನು ಹಿಡಿದು ಅದರ ಮಿಡಿತದ ವೇಗವನ್ನು ಪರೀಕ್ಷಿಸುತ್ತಿದ್ದನು. ಚಿತ್ರಕಾರಳು ಕೆಲವು ರಾಜರ ಚಿತ್ರಗಳನ್ನು ಬರೆದು, ಅನಂತರ ಶ್ರೀ ಕೃಷ್ಣನ ಚಿತ್ರವನ್ನು ಬರೆದಳು. ಅದನ್ನು ನೋಡಿ ರಾಜಕುಮಾರಿಯ ನಾಡಿಯ ಸ್ಪಂದನವು ಹೆಚ್ಚು ವೇಗವಾಯಿತು ; ಪ್ರಧಾನಿಯು ಹೆಚ್ಚು ಗಮನವಿಟ್ಟು ಕುತೂಹಲದಿಂದ ಆಕೆಯ ನಾಡಿಯಲ್ಲಿಯೂ ಮುಖಭಾವದಲ್ಲಿಯೂ ದೃಷ್ಟಿಯಲ್ಲಿಯೂ ಆಗುವ ಬದಲಾವಣೆಯನ್ನು ನೋಡುತ್ತಿದ್ದನು. ಆಕೆಗೆ ಸೂಕ್ಷ್ಮರೂಪದಿಂದ ದರ್ಶನ ಕೊಟ್ಟು ಮನಸ್ಸನ್ನು ಸೆಳೆದಿರುವವನು ಕೃಷ್ಣನೇ ಇರಬಹುದೆ ?–ಎಂದು ಆಲೋಚಿಸುತ್ತಿದ್ದನು. ಆದರೆ ನಾಡಿಯು ಸಾಕಷ್ಟು ವೇಗವಾಗಿ ಹೊಡೆಯಲಿಲ್ಲ. ಆದ್ದರಿಂದ ಬೇರೆ ರಾಜಕುಮಾರರ ಚಿತ್ರಗಳನ್ನು ಬರೆಯಲು ಆ ಚಿತ್ರಕಾರಳಿಗೆ ಆಜ್ಞೆಮಾಡಿದನು. ಆಗ ಆಕೆಯು ಕೃಷ್ಣನ ಕೊನೆಯ ಮಗನ ಚಿತ್ರವನ್ನು ಬರೆದಳು. ಆಗ, ಓಹೋ, ನಾಡಿಯು ಹಾಗಿರಲಿ, ಆ ಚಿತ್ರವನ್ನು ನೋಡಿದೊಡನೆ, ರಾಜಕುಮಾರಿಯ ಇಡೀ ಹೃದಯವೇ, ಪೂರ್ಣವಕ್ಷಸ್ಥಲವೇ ಭಾವಾವೇಗದಿಂದ ತೀವ್ರವಾಗಿ ಉಬ್ಬೇರಿ ಬೀಳುವದಕ್ಕೆ ತೊಡಗಿತು. ಆಕೆಯ ಮುಖವು ಅರಳಿತು ; ತುಟಿಗಳಲ್ಲಿ ನಗುವು ಮಿನುಗಿತು ; ಕಣ್ಣುಗಳು ಪ್ರೀತಿ ಕಾತರತೆಯಿಂದ ಹೊಳೆದವು. ಆದರೂ ಪ್ರಿಯದರ್ಶನ ಸಂತೋಷದ ಭರದಲ್ಲಿ ವೈಮರೆತು ಅಷ್ಟಾದರೂ ಉಲ್ಲಾಸವನ್ನು ವ್ಯಕ್ತಪಡಿಸಿದ್ದಕ್ಕಾಗಿ ನಾಚಿದಳು. ಪ್ರಧಾನಿಯು ಬಹಳ ಎಚ್ಚರದಿಂದ ಸೂಕ್ಷ್ಮವಾಗಿ ಆಕೆಯಲ್ಲಿ ಮೂಡಿದ ಪ್ರತಿಕ್ರಿಯೆಗಳನ್ನೆಲ್ಲಾ ಪರಿಶೀಲಿಸಿ, ಆಕೆಯ ಕಾಲ್ಪನಿಕ ವಿರಹವ್ಯಥೆಯನ್ನು ಪರಿಹರಿಸುವ ಪ್ರಿಯಕರನು ಇವನೇ ಎಂದು ತೀರ್ಮಾನಿಸಿದನು. ಇದನ್ನು ನಾವು ಕಟ್ಟುಕತೆಯೆಂದು ಭಾವಿಸುವದಿಲ್ಲ ; ಇದನ್ನು ವಾಸ್ತವ ಐತಿಹಾಸಿಕ ಘಟನೆಯೆಂದೇ ತಿಳಿಯುತ್ತೇವೆ.

ಈಗ ನಮಗೆ ಬೇಕಾಗಿರುವುದು ಆ ಚಿತ್ರಕಾರಳ ವಿಷಯ. ಆಕೆಯು ಚಿತ್ರಿಸಿದ ರಾಜರನ್ನೆಲ್ಲಾ ನೋಡಿದ್ದಳೆ ? ಇಲ್ಲ. ಆಕೆಯು ದಿವ್ಯ ದೃಷ್ಟಿಯ ಪ್ರಭಾವಕ್ಕೆ ಒಳಗಾಗಿದ್ದಳು , ಹೆಚ್ಚು ಉನ್ನತವೂ ಸೂಕ್ಷ್ಮವೂ ಆದ ಚೈತನ್ಯಶಕ್ತಿಯ ಸ್ಪಂದನದಿಂದ ಸರ್ವಾತ್ಮದಲ್ಲಿ ಶ್ರುತಿಗೂಡಿದ್ದಳು. ಆದ್ದರಿಂದ ಪ್ರಕೃತಿಯ ಪುಸ್ತಕವು ಆಕೆಗೆ ಮೊಹರುಮಾಡಿದ್ದಾಗದೆ ತೆರೆದಿಟ್ಟದ್ದಾಗಿದ್ದಿತು. ಈ ಅಸಾಧಾರಣ ಶಕ್ತಿಗೆ

ನಿದರ್ಶನವಾಗಿ ರಾಮನು ಇಂಥಾ ಬೇಕಾದಷ್ಟು ಉದಾಹರಣೆಗಳನ್ನು ಕೊಡಬಲ್ಲನು. ಆದರೆ, ಇಷ್ಟು ಹೇಳಿದರೆ ಸಾಕು ; ಈ ಪ್ರಪಂಚದಲ್ಲಿ ನಿಮಗೆ ಎಲ್ಲಾ ಜ್ಞಾನವನ್ನೂ ಕೊಡತಕ್ಕಂಥ ದಿವ್ಯದೃಷ್ಟಿಯಿದೆ, ದಿವ್ಯದರ್ಶನವಿದೆ ; ಅಥವಾ ಒಳಗೆ ಹೆಚ್ಚಿನ ಬೆಳಕನ್ನು ಕೊಡತಕ್ಕಂಥ ಅಸಾಧಾರಣ ಪ್ರಜ್ಞೆ ಇದೆ.

ಬಹಳ ಸುಂದರವಾದ ನಿದರ್ಶನಗಳಿಂದ ವೇದಾಂತಶಾಸ್ತ್ರವು ಜನಪ್ರಿಯವಾಗಿದೆ. ನೀವು ಶಾಸ್ತ್ರಗ್ರಂಥಗಳ ವ್ಯಾಸಂಗದ ಮೂಲಕವೂ ವಿಶ್ವವಿದ್ಯಾನಿಲಯಗಳಲ್ಲಿ ಪ್ರೊಫೆಸರುಗಳ ಮೂಲಕವೂ ಪಡೆಯುವ ಬೆಳಕಿನ ಬಗೆಗಿಂತ ಒಳಗಿನ ಪರಮೋತ್ಕೃಷ್ಟವಾದ ಪರಮಾರ್ಥ ದೃಷ್ಟಿಯನ್ನು ಬೇರ್ಪಡಿಸಿ ತೋರಿಸುವದಕ್ಕಾಗಿ ರಾಮನು ಒಂದು ದೃಷ್ಟಾಂತವನ್ನು ಕೊಡುತ್ತಾನೆ.

ಒಂದಾನೊಂದು ಕಾಲದಲ್ಲಿ, ಒಬ್ಬ ರಾಜನು, ತನ್ನ ಅತ್ಯಂತ ಮನೋಹರವಾದ ಅರಮನೆಗಳಲ್ಲಿ ಒಂದು ಸುಂದರವಾದ ಅರಮನೆಯನ್ನು ಅದ್ಭುತವಾದ ಚಿತ್ರಗಳಿಂದ ಅಲಂಕರಿಸಬೇಕೆಂದು ಅನೇಕ ಉತ್ತಮ ಚಿತ್ರಕಾರರನ್ನು ಕರೆಸಿದನು. ಅವರಲ್ಲಿ ಸರ್ವೋತ್ತಮನಾದ ಚಿತ್ರಕಾರನನ್ನು ಕಂಡುಹಿಡಿಯುವದಕ್ಕಾಗಿ ಅವರಿಗೆ ಒಂದು ಪರೀಕ್ಷೆಯನ್ನು ಕೊಡುತ್ತಿದ್ದನು. ಅರಮನೆಯಲ್ಲಿ ಎರಡು ಗೋಡೆಗಳು ಒಂದರ ಪಕ್ಕದಲ್ಲಿ ಒಂದು ಕೆಲವು ಅಡಿಗಳ ಅಂತರದಲ್ಲಿ ಸಮದೂರದಲ್ಲಿದ್ದವು. ಈ ಎರಡು ಗೋಡೆಗಳನ್ನು ಚಿತ್ರಿಸುವದಕ್ಕಾಗಿ ಇಬ್ಬರು ಚಿತ್ರಕಾರರನ್ನು ನಿಯೋಜಿಸಿದನು. ಒಬ್ಬ ಚಿತ್ರಕಾರನ ಕೆಲಸವನ್ನು ಇನ್ನೊಬ್ಬನು ನೋಡದಂತೆ ಆ ಎರಡು ಗೋಡೆಗಳ ಮಧ್ಯದಲ್ಲಿ ದೊಡ್ಡ ಪರದೆಯನ್ನು ಹಾಕಿದ್ದರು. ಚಿತ್ರಗಳನ್ನು ಪೂರೈಸುವದಕ್ಕೆ ಅವರಿಗೆ ಎರಡು ವಾರಗಳ ಅವಧಿಯನ್ನು ಕೊಟ್ಟಿತ್ತು. ಅವರಲ್ಲಿ ಒಬ್ಬನು, ಜಗತ್ತಿನ ಅತ್ಯಂತ ಭವ್ಯವಾದ ಗ್ರಂಥವಾದ ಮಹಾಭಾರತದಲ್ಲಿಯ ಮಹತ್ವದ ದೃಶ್ಯಗಳನ್ನೆಲ್ಲಾ ಅತಿಸುಂದರವಾಗಿ ಚಿತ್ರಿಸಿದನು. ಅವನ ಕಾರ್ಯವು ನಿಜವಾಗಿಯೂ ಅತ್ಯಂತ ಮನೋಹರವಾಗಿಯೂ ಅದ್ಭುತವಾಗಿಯೂ ಇದ್ದಿತು. ಇನ್ನೊಬ್ಬ ಚಿತ್ರಕಾರನು ಏನು ಮಾಡಿದ್ದನೆಂಬದನ್ನು ರಾಮನು ಈಗಲೇ ಹೇಳುವದಿಲ್ಲ. ಎರಡು ವಾರಗಳಾಯಿತು ; ರಾಜನು ತನ್ನ ಪರಿವಾರದೊಂದಿಗೆ ಆ ದೃಶ್ಯವನ್ನು ನೋಡುವದಕ್ಕಾಗಿ ಬಂದನು. ಮೊದಲನೆಯ ಚಿತ್ರಕಾರನ ಗೋಡೆಯ ಮೇಲಿಂದ ಪರದೆಯನ್ನು ಎತ್ತಿದರು ; ಅದರಲ್ಲಿ ನೂರಾರು ಚಿತ್ರಗಳನ್ನು ಬರೆದಿದ್ದನು. ನೋಡಿದವರೆಲ್ಲಾ ಆಶ್ಚರ್ಯಸ್ತಂಭಿತರಾದರು ; ಆಹಾ ! ಅವನ ಕೆಲಸವು ಎಷ್ಟು ಆಕರ್ಷಕವಾಗಿತ್ತು ! ಇದಕ್ಕಿಂತಲೂ ಉತ್ತಮವಾಗಿ ಯಾರೂ ಚಿತ್ರಿಸುವದು ಸಾಧ್ಯವಿಲ್ಲವೆನ್ನಿಸಿತು.

ಪ್ರೇಕ್ಷಕರೆಲ್ಲಾ "ಮೊದಲನೆ ಬಹುಮಾನವನ್ನು ಇವನಿಗೇ ಕೊಡಿರಿ ; ಮುಂದೆ ಬರೆಸ ಬೇಕಾದ ಚಿತ್ರದ ಮಹಾಕಾರ್ಯಗಳನ್ನೆಲ್ಲಾ ಇವನಿಗೇ ವಹಿಸಿರಿ ಇವನೇ ವಿಜಯ ಶಾಲಿ ! ಇವನೇ ಚಿತ್ರಲೋಕದ ಚಕ್ರವರ್ತಿ !" ಎಂದು ಭಾವಾವೇಶದಿಂದ ಉದ್ಗಾರ ಮಾಡಿದರು.

ಆಗ ರಾಜನು ಇನ್ನೊಬ್ಬ ಚಿತ್ರಕಾರನಿಗೆ ಪರದೆಯನ್ನು ಎತ್ತಲು ಅಪ್ಪಣೆ ಮಾಡಿದನು. ಆ ಪರದೆಯನ್ನು ಎತ್ತಿದ ಕೂಡಲೇ ಎಲ್ಲಾ ಜನರೂ ಬೆರಗುಬಡಿದು, ಆಶ್ಚರ್ಯಸ್ತಬ್ಧರಾಗಿ ನಿಂತರು ; ಅವರ ಉಸಿರೇ ನಿಂತುಹೋಯಿತು ; ಅತ್ಯಂತ ವಿಸ್ಮಯದಿಂದ ಬಾಯಿ ಕಳೆದು, ಕಣ್ಣುಗಳನ್ನು ಅಗಲವಾಗಿ ಅರಳಿಸಿ ಅರಳಿಸಿ, "ಇದೇನು ಕೌತುಕ, ಇದೇನು ಅದ್ಭುತ ! ಪವಾಡ !" ಎನ್ನುವಂತೆ ಎಲ್ಲರ ಮನಸ್ಸಿಗೆ ಆಯಿತು ; ಆದರೆ ಆ ಉದ್ಗಾರ ಸಹ ಬಹಳ ಕಡಮೆ ಎನಿಸಿ, ಸಾಶ್ಚರ್ಯ ಮೂಕರಾದರು. ಎಲ್ಲರೂ ವಿಸ್ಮಯಚಕಿತ ದಿಗ್ಭ್ರಮೆಯ ಚಿತ್ರದಂತಾಗಿದ್ದರು, ಏಕೆ ? ಈ ವಿಚಿತ್ರ ಚಿತ್ರಕಾರ ಏನು ಮಾಡಿದ್ದ ? ಮೊದಲನೆಯ ಚಿತ್ರಕಾರನ ಎಲ್ಲಾ ಚಿತ್ರಗಳೂ ಹೇಗಿದ್ದವೋ ಸ್ವಲ್ಪವೂ ವತ್ಯಾಸವಿಲ್ಲದೆ, ಈ ಗೋಡೆಯ ಮೇಲೂ ಚಿತ್ರಿತವಾಗಿದ್ದವು. ಆದರೆ, ಮೊದಲನೆಯ ಚಿತ್ರವು ಎರಡನೆ ಯದರ ಹೋಲಿಕೆಯಿಂದ ಒರಟಾಗಿಯೂ ಸ್ವಲ್ಪ ಹಳ್ಳತಿಟ್ಟಾಗಿಯೂ ಒಡ್ಡೊಡ್ಡಾ ಗಿಯೂ ಇದ್ದಿತು. ಎರಡನೆಯದಾದರೋ ಬಹಳ ನಯವಾಗಿಯೂ ನಾಜೂ ಕಾಗಿಯೂ ನಿರ್ಮಲವಾಗಿಯೂ ಒಪ್ಪಾಗಿಯೂ ಓರಣವಾಗಿಯೂ ಅಂದವಾಗಿಯೂ ಇದ್ದಿತು. ಉಜ್ಜುಗಾರಿಕೆಯಿಂದಲೋ ಎನ್ನುವಂತೆ,/ಆ ಗೋಡೆಯ ಚಿತ್ರಗಳ ಮೇಲೆ ಒಂದು ನೊಣವು ಕೂತರೂ ಜಾರಿಬೀಳಬಹುದೆಂಬಷ್ಟು ಅದು ನಯವೂ ನುಣುಪೂ ಹೊಳಪೂ ಮೃದುವೂ ಆಗಿದ್ದಿತು. ಆ ಕೆಲಸವು ಅಷ್ಟು ಚಿತ್ತಾಕರ್ಷಕವಾಗಿದ್ದಿತು ! ಈ ಎರಡನೆಯ ಚಿತ್ರಣದಲ್ಲಿ ಇನ್ನೊಂದು ಅಪೂರ್ವವಾದ ವಿಲಕ್ಷಣ ಸೌಂದರ್ಯ ವಿದ್ದಿತು. ಆ ಚಿತ್ರಗಳು ಗೋಡೆಯ ಮೇಲ್ಮೈಯಲ್ಲಿ ಕಾಣುತ್ತಿರಲಿಲ್ಲ ; ಅವು ಆ ಗೋಡೆಯ ಒಳಗೆ ಹತ್ತು ಅಡಿ ಆಳದಲ್ಲಿ ಅಥವಾ ದೂರದಲ್ಲಿ ಕಾಣುತ್ತಿದ್ದವು. ಜನರಿಗೆ ಆಶ್ಚರ್ಯವೋ ಆಶ್ಚರ್ಯ ! ಪರಮಾಶ್ಚರ್ಯ ! ಆ ಚಿತ್ರಕಾರ ಇಂಥಾ ಅದ್ಭುತಕಾರ್ಯವನ್ನು ಹೇಗೆ ಸಾಧಿಸಿದ್ದ ? ಎರಡನೆಯ ಚಿತ್ರಕಾರನು, ತನ್ನ ಗೋಡೆ ಯನ್ನು ಉಜ್ಜಿ ಉಜ್ಜಿ, ಅತಿಶಯವಾಗಿ ನಯವೂ ನಿರ್ಮಲವೂ ನಣುಪೂಮಾಡಿ, ಮೆರುಗುಕೊಟ್ಟು, ಥಳ ಥಳ ಥಳ ಹೊಳೆಯುವಂತೆ ಮಾಡಿದ್ದ ; ಆದ್ದರಿಂದ ಅದು ಪಾರದರ್ಶಕವಾಗಿ, ಮುಖನೋಡಿಕೊಳ್ಳುವ ಕನ್ನಡಿಯೇ ಆಗಿದ್ದಿತು. ಅದು ಕನ್ನಡಿಯಂತೆ, ಮೊದಲನೆಯ ಚಿತ್ರಗಾರನು ಎದುರು ಗೋಡೆಯ ಮೇಲೆ ಬರೆದ

ಚಿತ್ರಗಳನ್ನೆಲ್ಲಾ ತನ್ನೊಳಗೆ ಪ್ರತಿಬಿಂಬಿಸಿತ್ತು. ಆ ಗೋಡೆಗಳು ಒಂದರಿಂದ ಇನ್ನೊಂದು ಹತ್ತು ಅಡಿಗಳ ದೂರದಲ್ಲಿದ್ದವು; ಮತ್ತು ನೆಲದಿಂದ ಐದು ಅಡಿಗಳ ಎತ್ತರದ ಮೇಲೆ ಚಿತ್ರಗಳಿದ್ದವು. ವಸ್ತುವು ಕನ್ನಡಿಯಿಂದ ಎಷ್ಟು ದೂರದಲ್ಲಿದ್ದರೆ, ಅಷ್ಟು ದೂರದಲ್ಲಿಯೇ ಕನ್ನಡಿಯೊಳಗೆ ಪ್ರತಿಬಿಂಬವು ಕಾಣುವಂತೆ, ಹತ್ತು ಅಡಿಗಳ ದೂರದಲ್ಲಿದ್ದ ಗೋಡೆಯ ಮೇಲಿನ ಚಿತ್ರಗಳು ಎದುರು ಗೋಡೆಯೊಳಗೆ ಹತ್ತು ಅಡಿ ದೂರದಲ್ಲಿ ಕಾಣುತ್ತಿದ್ದವು. ನೆಲದಿಂದ ಐದು ಅಡಿಗಳ ಮೇಲೆ ಆ ಎತ್ತರವಾದ ಗೋಡೆಗಳಲ್ಲಿ ಚಿತ್ರಗಳಿದ್ದುದರಿಂದ, ಆ ಎರಡು ಗೋಡೆಗಳ ನಡುವೆ, ಎಷ್ಟು ಜನಗಳಾದರೂ ನಿಂತು, ಓಡಾಡಿ, ಎರಡು ಕಡೆಯೂ ಚಿತ್ರಗಳನ್ನು ನೋಡಬಹುದಾಗಿತ್ತು.

ಹೀಗೆ, ಜ್ಞಾನ ಸಂಪಾದನೆಯಲ್ಲಿ ಎರಡು ರೀತಿಗಳಿವೆ. ಗೋಡೆಯ ಮೇಲೆ ಚಿತ್ರಗಳನ್ನು ಬರೆದಂತೆ ಕಂಠಪಾಠಮಾಡಿ, ಉರುಹಚ್ಚಿ, ತಲೆಯಲ್ಲಿ ವಿಷಯಗಳನ್ನು ತುಂಬಿಕೊಳ್ಳುವದು, ತುರುಕುವದು, ಗಿಡುಗುವದು ಇದು ಒಂದು ಬಗೆ. ಭೂವಿಜ್ಞಾನ ಶಾಸ್ತ್ರ, ಶ್ರುತಿಸಿದ್ಧ ದೇವತಾಶಾಸ್ತ್ರ, ಭಾಷಾಶಾಸ್ತ್ರ, ಜ್ಯೋತಿಷ್ಯ ಶಾಸ್ತ್ರ, ಮತ್ತು ಎಲ್ಲಾ ಬಗೆಯ ಅಧ್ಯಾತ್ಮ ಶಾಸ್ತ್ರ, ಮತ್ತು ಜೀವನಕ್ಕೆ ಸಂಬಂಧಪಡದ, ವ್ಯವಹಾರಕ್ಕೆ ಉಪಯೋಗವಿಲ್ಲದ (Non-practicologies) ಹಲವು ಶಾಸ್ತ್ರಗಳು—ಇವುಗಳ ವಿಚಾರಗಳನ್ನೂ ಭಾವನೆಗಳನ್ನೂ ಸಂಗತಿಗಳನ್ನೂ ಮಿದುಳಿನೊಳಗೆ 'ಪೋಂಪು'ಮಾಡಿ ತುಂಬಿಕೊಳ್ಳುವದು ಒಂದು ಬಗೆ. ಇದೊಂದು ರೀತಿಯ ಜ್ಞಾನ ಸಂಪಾದನೆ. ಈ ರೀತಿಯಿಂದ ಜ್ಞಾನ ಸಂಪಾದನೆಯು ಸಾಧ್ಯವಿಲ್ಲವೆಂದೇನೂ ರಾಮನು ಹೇಳುತ್ತಿಲ್ಲ. ಅದು ಸಾಧ್ಯ; ಆದರೆ, ಅದು ಮೊದಲನೆಯ ಚಿತ್ರಕಾರನು ಎಲ್ಲಾ ಬಗೆಯ ಬಣ್ಣಗಳನ್ನೂ ಉಪಯೋಗಿಸಿ, ಗೋಡೆಯ ಮೇಲು ಮೈಯಲ್ಲಿ ಚಿತ್ರ ಬರೆದಂತೆ ಇರುತ್ತದೆ. ಆದರೆ, ಪುಣ್ಯಾತ್ಮರೆ, ಜಗತ್ತಿನ ಜ್ಞಾನವನ್ನೆಲ್ಲಾ ಸ್ವಾಧೀನಪಡಿಸಿಕೊಳ್ಳುವ ಇನ್ನೊಂದು ಬಗೆಯಿದೆ. ಅದು ಶುದ್ಧೀಕರಣದ ಕ್ರಮ. ಅದು ಒಳಗೆ ತುಂಬಿ, ತುರುಕಿ, ಭರ್ತಿಮಾಡುವ ಕ್ರಮವಲ್ಲ; ಆದರೆ, ಅತ್ಯವಶ್ಯವಾದ ವಿಚಾರಗಳನ್ನು ಮಾತ್ರ ಉಪಯೋಗಿಸಿಕೊಂಡು ಮಿಕ್ಕವುಗಳನ್ನೆಲ್ಲಾ ಹೊರಹಾಕಿ, ಮನಸ್ಸನ್ನು ಖಾಲಿಮಾಡುವ ಕ್ರಮ ನಿಮ್ಮ ಎದೆಯನ್ನು ಸರ್ವವಸ್ತುಗಳಲ್ಲಿ ಒಂದಾಗಿ, ಸರ್ವಾತ್ಮನಲ್ಲಿ ಒಂದಾಗಿ, ಸಮರಸ ಪ್ರೇಮದಿಂದ ಮಿಡಿಯುವಂತೆ ಮಾಡಬೇಕು. ಎಮರಸ್‌ಸನ್ ಹೇಳಿರುವಂತೆ,—

Heave thine with nature's heaving breast,

And all is clear from east to west,

ಪ್ರಕೃತಿಯು ಏರಿಳಿಯುವ ಎದೆಯೊಡನೆ, ಸಿಮ್ಮೆದೆಯು ಮಿಡಿದಾಡಲಿ,
ಮೂಡಲಿಂದದು ಪಡುವಲವರೆಗೆ ಎಲ್ಲ ನಿರ್ಮಲ ತೋರ್ಪುದದ ಕಾಣಲಿ.

ಸರ್ವ ಪ್ರಪಂಚದಲ್ಲಿ ಏಕತ್ವವನ್ನು ಅನುಭವ ಪಡೆಯುವ ಸಾಧನ ವಿಧಾನವು ಒಂದಿದೆ. ವಾಲ್ಟ್ ವ್ಹಿಟ್‌ಮನ್ (Walt Whitman) ಹೇಳುವದೇನೆಂದರೆ,

" Unless you feel all, you cannot know all."

" ಎಲ್ಲವನ್ನೂ ಭಾವಿಸಿದ ಹೊರತು, ಎಲ್ಲವನ್ನೂ ಅರಿಯಲಾಗುವದಿಲ್ಲ."
—ಎಲ್ಲವನ್ನೂ ಭಾವಿಸುವ (ಅರಿಯುವ) ವಿಧಾನ ಅದು

ಎಲ್ಲಾ ಮೂಲಭೂತ ಕಾರ್ಯಕರ್ತರೂ ಎಲ್ಲಾ ಅಸಾಧಾರಣ ಪ್ರತಿಭಾಶಾಲಿಗಳೂ ಅವರವರ ಜ್ಞಾನವನ್ನು ಎಲ್ಲಿಂದ ಪಡೆದರು ? ದೊಡ್ಡ ದೊಡ್ಡ ಪುಸ್ತಕ ಭಂಡಾರಗಳಲ್ಲಿರುವ ಅನೇಕ ಮಹತ್ವಾದ ಗ್ರಂಥ ಸಂಪುಟಗಳನ್ನು ವ್ಯಾಸಂಗ ಮಾಡುವದಕ್ಕೆ ಜೀವಮಾನವನ್ನೆಲ್ಲಾ ವಿನಿಯೋಗಿಸಿರುವ ದೇವತಾಶಾಸ್ತ್ರದ ಪ್ರೊಫೆಸರ್‌ಗಳೂ (Professors of theology) ಆ ಶಾಸ್ತ್ರದಲ್ಲಿ ಡಾಕ್ಟರ್ ಗೌರವದ ಪದವಿಯನ್ನು (Doctors of Divinity) ಪಡೆದವರೂ ಪೂಜ್ಯ ಬಿಷಪ್ಪುಗಳೂ (Reverends), ಚರ್ಚ್‌ಗಳಲ್ಲಿ ಪುರೋಹಿತರೂ ಪಾದ್ರಿಗಳೂ ಬೇಕಾದಷ್ಟು ಜನರಿದ್ದಾರೆ. ಆದರೆ, ಮಧುರವಾದ ಯೇಸುಕ್ರಿಸ್ತನ ದಿವ್ಯಮುಖದಿಂದ ಬಂದಂಥ ಮಧುರವಾದ ಆ ಸಣ್ಣ ಧರ್ಮೋಪದೇಶವನ್ನು ಹೋಲುವ ಮೂಲಭೂತವೂ ನವೀನವೂ ಆದ ಧರ್ಮಬೋಧೆಯನ್ನು ಎಷ್ಟು ಜನ ಮಾಡಬಲ್ಲರು ? ದೇಶದಲ್ಲಿ ಎಷ್ಟೋ ಜನ ಲೇಖಕರೂ ಭಾಷಣಕಾರರೂ ಇದ್ದಾರೆ ಆದರೆ ಪ್ರೇಮಾತ್ಮರೇ, ಅಮೆರಿಕಾದಲ್ಲಿ ಇದುವರೆಗೆ ಸಹಸ್ರಾರು ವರ್ಷಗಳಲ್ಲಿ ನಡೆದಿರುವ ಎಲ್ಲಾ ಭಾಷಣಗಳಲ್ಲಿ ಆ ಏಳು ಶಬ್ದಗಳ ಭಾಷಣದಷ್ಟು ಶಕ್ತಿಭರಿತವಾದುದು ಬೇರೆ ಯಾವದೂ ಇರಲಾರದು.

'' Give me liberty or give me death ! ''

'' ನನಗೆ ಸ್ವಾತಂತ್ರ್ಯವನ್ನಾದರೂ ಕೊಡಿ, ಇಲ್ಲವೆ ನನಗೆ ಸಾವನ್ನಾದರೂ ಕೊಡಿ!

ಈ ಏಳುಶಬ್ದಗಳ ಭಾಷಣವನ್ನು ನೀವೆಲ್ಲರೂ ಬಲ್ಲಿರಿ. ಗಣಿತಶಾಸ್ತ್ರದ ಪ್ರೊಫೆಸರ್‌ಗಳೂ ತತ್ತ್ವಶಾಸ್ತ್ರ (ಡಾಕ್ಟರ್ಸ್) ಪ್ರವೀಣರೂ ಎಷ್ಟೋ ಜನರಿದ್ದಾರೆ; ಆದರೆ ನ್ಯೂಟನ್‌ನ ಸಣ್ಣದೊಂದು ಪ್ರಿನ್ಸಿಪಿಯ (Principia) ಗ್ರಂಥದಂಥ ಕೃತಿಯನ್ನು ಅವರಲ್ಲಿ ಎಷ್ಟು ಜನ ಬರೆದಿದ್ದಾರೆ? ಈ ಎಲ್ಲಾ ಜ್ಞಾನವನ್ನು ಅವನು ಎಲ್ಲಿಂದ ಪಡೆದ? ಅವನು ಜಗತ್ತಿನೊಳಗೆ ಸುರಿದಷ್ಟು ಜ್ಞಾನವನ್ನೇನೂ ಗಣಿತ ಶಾಸ್ತ್ರ ಪುಸ್ತಕಗಳಿಂದ ಪಡೆದಿರಲಿಲ್ಲ. ಅವನು ಅದನ್ನು ಹೆಚ್ಚು ಉನ್ನತವಾದ ಮೂಲದಿಂದ ಪಡೆದನು. ಇವತ್ತು ವಿಶ್ವವಿದ್ಯಾನಿಲಯಗಳಲ್ಲಿ ಎಂ.ಎ. ಪರೀಕ್ಷೆಗೆ ನಿಂತಿರುವ ವಿದ್ಯಾರ್ಥಿಗಳು ಷೇಕ್ಸ್‌ಪಿಯರ್‌ನ ಪುಸ್ತಕಗಳನ್ನು ವ್ಯಾಸಂಗಮಾಡುತ್ತಾರೆ. ಆದರೆ ಈ ಬಡಪಾಯಿ ಷೇಕ್ಸ್‌ಪಿಯರ್ ಯಾವ ವಿಶ್ವವಿದ್ಯಾನಿಲಯದಲ್ಲಿಯೂ ಪದವಿಯನ್ನು ಪಡೆದಿರಲಿಲ್ಲ; ಆದರೂ ಜನರು ವಿಶ್ವವಿದ್ಯಾನಿಲಯದಲ್ಲಿ ಪದವಿಯನ್ನು ಪಡೆಯುವದಕ್ಕಾಗಿ ಓದಬೇಕಾದ ಗ್ರಂಥಗಳನ್ನು ಅವನು ಬರೆದನು. ಇವತ್ತಿನ ಮಹಾವಿಜ್ಞಾನಿ ಹೆರ್‌ಬರ್ಟ್ ಸ್ಪೆನ್ಸರ್ ಯಾವ ವಿಶ್ವವಿದ್ಯಾನಿಲಯದ ಪದವೀಧರನೂ (ಗ್ರಾಜುಯೇಟ್) ಆಗಿರಲಿಲ್ಲ. "ಸಿಕ್ಕದ್ದನ್ನೆಲ್ಲಾ ತಿನ್ನುವ ಸರ್ವಭಕ್ಷಕನಂತೆ ನೀನು ಸಿಕ್ಕದ್ದನ್ನೆಲ್ಲಾ ಓದುವ ಸರ್ವಗ್ರಾಹಿಯೋ, ಸರ್ವವಾಚಕನೋ?" ಎಂದು ಯಾರೋ ಅವನನ್ನು ಕೇಳಿದರು. ಅದಕ್ಕೆ ಅವನು.

"No, Sir; if I were as big a reader as others, I would have been as big an ignoramus as others."

"ಇಲ್ಲ, ಸ್ವಾಮಿ; ಇತರರಷ್ಟು ನಾನು ದೊಡ್ಡ ವಾಚಕನಾಗಿದ್ದರೆ, ನಾನೂ ಇತರರಷ್ಟೇ ಮೂಢನಾಗಿರುತ್ತಿದ್ದೆ." ಎಂದನಂತೆ.

ಹೀಗೆ, ಇನ್ನೊಂದರಿಂದ ವ್ಯುತ್ಪನ್ನವಾಗದೆ, ಇನ್ನೊಂದರ ಅನುಕರಣವಾಗದೆ, ಮೂಲಭೂತವೂ ನವೀನವೂ ಆಗಿರುವ ಭಾವನೆಗಳನ್ನೂ ವಿಚಾರಗಳನ್ನೂ ಜ್ಞಾನವನ್ನೂ ಆ ಮೂಲ-ಭೂತ ಕೃತಿಕಾರರೂ ವಿಜ್ಞಾನದ ಮುನ್ನಡೆಯನ್ನು ಬೆಳೆಸಿದ ಮಹಾಶಯರೂ ಅವರಿಗಿಂತಲೂ ಮುಂಚಿನವರು ಬರೆದಿದ್ದ ಗ್ರಂಥಗಳಿಂದ ಪಡೆಯಲಿಲ್ಲ. ಬೇರೆ ಪುಸ್ತಕಗಳಿಂದ ಸಂಗ್ರಹಿಸಿದ್ದ ಜ್ಞಾನವಾಗಿದ್ದರೆ ಅದು ಎಂದೂ ನವೀನವಾಗಿರುತ್ತಿರಲಿಲ್ಲ. ಹಾಗಾದರೆ, ಈ ಜ್ಞಾನವು ಎಲ್ಲಿಂದ ಬರುತ್ತದೆ? — ಎಂಬದೇ ಇಲ್ಲಿಯ ಪ್ರಶ್ನೆ.

"Wherefrom does this originality derive its origin"?

" ಈ ಮೂಲಭೂತಜ್ಞಾನದ ಮೂಲ ಯಾವದು ?"

ಪ್ರಿಯ ದಿವ್ಯಾತ್ಮರೆ, ಪ್ರಿಯ ಮಧುರಾತ್ಮರೇ ಕೇಳಿ ; ಅರಿತೋ ಅರಿಯದೆಯೋ ಈ ಮಾತನ್ನು ಗಮನಿಸಿ—ಐಕ್ಯಭಾವವನ್ನು ಪಡೆಯುವದೇ ಆ ಮೂಲ ; ಒಳಗಿನ ಸ್ವರ್ಗವೆನ್ನುವೆದರಲ್ಲಿ ಒಂದಾಗುವದೇ ಆ ಮೂಲದ ಮೂಲ ; ಒಳಗಿನ ಎಲ್ಲಾ ಪ್ರಾಣಕ್ಕೂ ಎಲ್ಲಾ ಬೆಳಕಿಗೂ ಅದೇ ಮೂಲ ಮೂಲವಿರುವದು ಅಲ್ಲಿ. ಎಲ್ಲಾ ಬೆಳಕಿಗೂ ಎಲ್ಲಾ ಬಾಳಿಗೂ ಮೂಲವೂ, ಸ್ವರ್ಗಗಳ ಸ್ವರ್ಗವೂ ಆಗಿರುವದು ನಿಮ್ಮ ನಿಜಾತ್ಮವು. " ಎಲ್ಲಾ ಬೆಳಕೂ ಎಲ್ಲಾ ಬದುಕೂ ಎಲ್ಲಾ ಬಲವೂ ಎಲ್ಲಾ ಶಕ್ತಿಯೂ ಎಲ್ಲಾ ಜ್ಞಾನವೂ ಎಲ್ಲಾ ಸುಖವೂ ನನ್ನಲ್ಲಿಯೇ ಇವೆ " ಎನ್ನುವ ಈ ಭಾವನೆಯಿಂದ ನಾವು ಒಂದು ಸೆಕೆಂಡ್ ಮೌನದಲ್ಲಿ ನಿಲ್ಲೋಣ.

ಈ ಪರಮಾತ್ಮ ದೃಷ್ಟಿಯನ್ನು—ಪರಮಾತ್ಮದರ್ಶನವನ್ನು—ಪಡೆಯುವದಕ್ಕೆ ಭಾರತದ ಋಷಿಗಳು ಯಾವ ಕ್ರಮವನ್ನು ಅನುಸರಿಸಿದರು, ಎಂಬದನ್ನು ಈಗ ರಾಮನು ನಿಮಗೆ ಹೇಳುತ್ತಾನೆ. ಭಾರತದಲ್ಲಿ, ಎಲ್ಲಾ ವೇದಗಳನ್ನೂ ದೇವರೇ (ಋಷಿಗಳೇ) ಬರೆದನೆಂದು ಹೇಳುತ್ತಾರೆ. ಇದರ ಅರ್ಥವೇನೆಂದರೆ, ಈ ವೇದಗಳನ್ನು ಬರೆದವರು, ದೇಹ ಭಾವನೆಯು ಅಥವಾ ಅಹಂಕಾರ ಭಾವನೆಯು, ವ್ಯಕ್ತಿ ಭಾವನೆಯು ಪೂರಾ ಇಲ್ಲವಾದಾಗ ಇವುಗಳನ್ನು ಬರೆದರು, ಎಂದು ಇದರ ಅಭಿಪ್ರಾಯ. ಆದ್ದರಿಂದ ಈ ವೇದಗಳು ಯಾರಿಂದ ಹೊರಚಿಮ್ಮಿ ಬಂದವೋ ಅವರೇ ಋಷಿಗಳೆಂದು ಕರೆಯಲ್ಪಟ್ಟಿದ್ದಾರೆ. ಆದರೆ ಅವರು ಲೇಖಕರಲ್ಲ. ಋಷಿ ಎಂಬ ಶಬ್ದಕ್ಕೆ ದಿವ್ಯಪ್ರಕಾಶವನ್ನು ಕಂಡವನು, ದಿವ್ಯಸತ್ಯವನ್ನು ಕಂಡವನು, ದಿವ್ಯದೃಷ್ಟಿಯುಳ್ಳವನು, ದಿವ್ಯಜ್ಞಾನಿ, ಬ್ರಹ್ಮಜ್ಞ ಎಂದು ಮಾತ್ರ ಅರ್ಥ. ಹಿಂದೂಶಾಸ್ತ್ರಗಳ ಬೇರೆ ಭಾಗಗಳಲ್ಲಿ, ಎಲ್ಲಾ ವೇದಗಳೆಂಬ ವೃಕ್ಷವು ಓಂ, ಓಂ, ಓಂ ಎಂಬ ಬೀಜದಿಂದ ಉತ್ಪನ್ನವಾಗಿದೆ, ಎಂದು ಹೇಳಿದೆ ಈ ಅಭಿಪ್ರಾಯವನ್ನು, ದೀಪದಿಂದ ಬೆಳಕು ಪ್ರಸರಿಸುವಂತೆಯೂ ಗುಲಾಬಿಯಿಂದ ಪರಿಮಳವು ಹೊರಸೂಸುವಂತೆಯೂ ಅವುಗಳನ್ನು ಬರೆದಿರುವ ಋಷಿಗಳಿಂದ ವೇದಗಳು, ಅವರ ಬುದ್ಧಿಪೂರ್ವಕ ಸಂಕಲ್ಪವೂ ಪ್ರಯತ್ನವೂ ಇಲ್ಲದೆ, ಸ್ವಯಂ ಪ್ರೇರಿತವಾಗಿ, ಸ್ವಾಭಾವಿಕವಾಗಿ, ತಾವಾಗಿಯೇ ಹೊರಹೊಮ್ಮಿದವು,—ಎಂಬ ಅಭಿಪ್ರಾಯದೊಡನೆ ವಿರೋಧವಿಲ್ಲದಂತೆ ಸರಿಹೊಂದಿಸುವದು, ಸಮಂಜಸಮಾಡಿ ತೋರಿಸುವದು ಹೇಗೆ ? ಈ ಎರಡು ಅಭಿಪ್ರಾಯಗಳನ್ನೂ ಹೀಗೆ ಸಮನ್ವಯ ಮಾಡಬಹುದು ಯಾರು ಹೆಚ್ಚು ಉನ್ನತವಾದ ಸ್ಫೂರ್ತಿಯನ್ನೂ ಭಗವತ್ ಪ್ರೇರಣೆಯನ್ನೂ ಪರಮಾತ್ಮದರ್ಶನವನ್ನೂ ಬಯಸುತ್ತಾರೋ, ಯಾರು ಅಲ ವೂ

ಪರಿಮಿತವೂ ದೇಹನಿಷ್ಠವೂ ಆದ ಅಹಂ ಭಾವನೆಯನ್ನೂ ವ್ಯಕ್ತಿಭಾವನೆಯನ್ನೂ ಮೀರಬೇಕೆಂದು ಬಯಸುತ್ತಾರೋ, ಅವರು ಓಂ ! ಓಂ ! ಓಂ ! ಎಂಬ ಈ ಮಹಾ ಮಂತ್ರದ ಉಚ್ಚಾರಣೆಯಿಂದ ಸ್ಫೂರ್ತಿಯನ್ನೂ ಬೆಳಕನ್ನೂ ಪಡೆಯುತ್ತಾರೆ.

ಓಂಕಾರದ ಉಚ್ಚಾರಣೆಯೆಂದರೆ, ಬರೀ ಕಂಠದಿಂದ ಉಚ್ಚಾರಣೆಯಲ್ಲ; ಅದಕ್ಕಿಂತಲೂ ಹೆಚ್ಚಿನದಾಗಿದೆ. ದೈಹಿಕವಾಗಿ ತುಟಿಗಳಿಂದಲೂ ಕಂಠದಿಂದಲೂ ಉಚ್ಚರಿಸಿದರೂ ಅಂತಃಕರಣವು ಬೌದ್ಧಿಕವಾಗಿಯೂ ಹೃದಯವು ಹೆಚ್ಚು ಉನ್ನತ ಭಾವಗಳ ಭಾಷೆಯಲ್ಲಿಯೂ ಓಂಕಾರವನ್ನು ಉಚ್ಚರಿಸುತ್ತವೆ. ಪವಿತ್ರವಾದ ಈ ಓಂಕಾರ ಮಂತ್ರವನ್ನು ಹೀಗೆ, ತ್ರಿಕರಣಶುದ್ಧವಾಗಿ ಉಚ್ಚರಿಸುವದರಿಂದ ಸರ್ವಾತ್ಮವೂ ಸರ್ವಸಾಕ್ಷಿಯೂ ಆದ ದಿವ್ಯ ಪ್ರಕಾಶದಲ್ಲಿ ಐಕ್ಯಭಾವದ ಅನುಭವವುಂಟಾಗುತ್ತದೆ ಋಷಿಗಳು ಅವಲಂಬಿಸಿದ ಸಾಧನಕ್ರಮವೇ ಇದು. ಇದರಿಂದ ಓಂಕಾರ ಮಂತ್ರದ ಅರ್ಥವನ್ನೂ ಭಾವವನ್ನೂ ಮಹತ್ವವನ್ನೂ ರಾಮನು ನಿಮಗೆ ತಿಳಿಸುವದು ಅವಶ್ಯವೆಂದು ತೋರುತ್ತದೆ. ಆದರೆ; ರಾಮನು ಇದನ್ನು ಇನ್ನೊಂದು ದಿನ ತೆಗೆದುಕೊಳ್ಳಬಹುದು. ಓಂಕಾರಮಂತ್ರದ ಅರ್ಥವನ್ನೂ ಮಹತ್ವವನ್ನೂ ರಾಮನು ವಿವರಿಸುವದಕ್ಕೆ ಮೊದಲು, ಇದರಿಂದ ಸ್ಫೂರ್ತಿಯು ಏಕೆ ಉಂಟಾಗುತ್ತದೆ, ಅಥವಾ ಪರಮಾತ್ಮಪ್ರಜ್ಞೆಯು ಈ ಸಣ್ಣ ಶಬ್ದಗಳನ್ನು ಏಕೆ ಅವಲಂಬಿಸಿದೆ ಎನ್ನುವದನ್ನು ಹೇಳಬೇಕಾಗಿದೆ.

ಹಾಗಾದರೆ, ದೇವರು ಕೇವಲ ಶಬ್ದಗಳನ್ನು ಗೌರವಿಸತಕ್ಕವನೆ ? ಈ ಪ್ರಶ್ನೆಯು ಎಲ್ಲರ ಮನಸ್ಸಿನಲ್ಲಿಯೂ ಬರಬಹುದು. ಪವಿತ್ರಗಳಿಗೆಲ್ಲಾ ಪವಿತ್ರಕ್ಕೂ ಸರ್ವಕ್ಕೂ ಓಂಕಾರವೇ ಅತ್ಯಂತ ಸ್ವಾಭಾವಿಕವೂ ನೈಜವೂ ಆದ ನಾಮವೆಂದು ರಾಮನು ಈಗ ತೋರಿಸುತ್ತಾನೆ. ಈ ನಾಮವು ಯಾವದೊಂದು ವಿಶಿಷ್ಟಭಾಷೆಗೆ ಸೇರಿದ್ದಲ್ಲ. ಮೀಸಲಾದುದಲ್ಲ. ಹಿಂದೂಗಳು ಇದನ್ನು ಕಂಡುಹಿಡಿದು, ಉಪಯೋಗಿಸಿದ ಮಾತ್ರಕ್ಕೆ ಇದು ಸಂಸ್ಕೃತ ಭಾಷೆಗೆ ಸೇರಿದ್ದಲ್ಲ. ಇದು ಪ್ರಕೃತಿಯ ಹೆಸರು, ಪ್ರಕೃತಿಯ ಶಬ್ದ, ಪ್ರಕೃತಿಯ ಸ್ವರ, ಪ್ರಕೃತಿಯ ಮಂತ್ರ ; ಆದರೆ ಅದು ಹಿಂದೂಗಳಿಂದಲೂ ಸಂಸ್ಕೃತದಿಂದಲೂ ಬಂದಿದ್ದೆಂದು ಕೆಲವರು ಕಡೆಗಣಿಸಬಹುದು. ಸಂಪ್ರದಾಯ ಪ್ರಿಯತೆ (Orthodoxy) ಎಂದರೆ ನನಗೆ ಪ್ರಿಯವಾದ ಅಭಿಮತ-(My doxy) ಸಂಪ್ರದಾಯ ಎಂದೇ ಅರ್ಥ. ನಿಮ್ಮ ಅಭಿಮತ (Your doxy) ಸಂಪ್ರದಾಯ, ಅದು ಮಾತ್ರ ಶಾಸ್ತ್ರವಿರುದ್ಧವಾದುದು, ಅಸಂಪ್ರದಾಯ (Heterodoxy) ಆದ್ದರಿಂದ ಸಂಪ್ರದಾಯ ಶರಣರು ತಮ್ಮ ಮತದ ಹೆಸರು

ಪಟ್ಟಿಯ ತಲೆಚೀಟಿಯನ್ನು ಹಚ್ಚದಿರುವ ಎಲ್ಲವನ್ನೂ ತಿರಸ್ಕರಿಸುವ ಪ್ರವೃತ್ತಿಯುಳ್ಳವರು. ಇದರಿಂದ ಓಂಕಾರವು ಸಂಸ್ಕೃತ ಜನರಿಂದ ಬಂದುದೆಂದು ನೀವು ಅದನ್ನು ಬಿಡಬೇಕಾದುದಿಲ್ಲ. ಸಂಸ್ಕೃತದಲ್ಲಿ ಆದರೂ ಮಿಕ್ಕ ಎಲ್ಲಾ ಶಬ್ದಗಳೂ ವಶವಾಗಿರುವ ವ್ಯಾಕರಣ ನಿಯಮಗಳಿಗೆ ಈ ಶಬ್ದವು ಬದ್ಧವಾಗಿಲ್ಲ. ಇದಕ್ಕೆ ಧಾತು ನಿಷ್ಪತ್ತಿಯಾಗಲೀ ವಿಭಕ್ತಿ ಪ್ರತ್ಯಯಗಳಾಗಲೀ ಹಚ್ಚಿ ನಡೆಯುವದಿಲ್ಲ. ಆದ್ದರಿಂದ ಇದು ಸಂಸ್ಕೃತ ಶಬ್ದವಲ್ಲ ಇದೊಂದು ಸ್ವತಂತ್ರ ಪರಿಶುದ್ಧವಾದ ಶಬ್ದ, ಪ್ರಕೃತಿಯ ಶಬ್ದ. ಹಿಂದೂಗಳು ಇದನ್ನು ಕಂಡುಕೊಂಡು, ತೆಗೆದುಕೊಂಡಿದ್ದಾರೆ. ಪ್ರತಿಯೊಂದು ಶಿಶುವೂ ಈ ಶಬ್ದದೊಡನೆ ಹುಟ್ಟುತ್ತದೆ. ಶಿಶುವು ಹುಟ್ಟಿದೊಡನೆಯೇ ಸ್ವಾಭಾವಿಕವಾಗಿ ಉಚ್ಚರಿಸುವ ಮೊಟ್ಟ ಮೊದಲನೆಯ ಶಬ್ದ ಯಾವದು ? ಅದು ಆಂ, ಅಂ, ಓಂ, ಅಥವಾ ಮಾ. (am, um, om or ma) ಈಗ ಒಹ್-ಓಃ, ಆಹ್-ಆಃ, ಉಹಾ (oh, ah, uha) ಎಂಬೀ ಮೂರು ಮೂಲ ಸ್ವರಗಳು ಓಂ ಶಬ್ದವನ್ನು ರಚಿಸಿವೆ ಫ್ರೆಂಚ್ ಭಾಷೆಯಲ್ಲಿ ಓಃ ಮತ್ತು ಆಃ ಅಥವಾ ಅಃ (oh and ah) ಒಟ್ಟಿಗೆ ಬಂದರೆ, ಅವು ಒಟ್ಟು ಸೇರಿ ಅಃ (ah) ಆಗುತ್ತದೆ. ಹೀಗೆಯೇ ಸಂಸ್ಕೃತದಲ್ಲಿಯೂ ಈ ಸ್ವರಗಳು ಒಟ್ಟು ಗೂಡಿ ಬಂದ ಕೂಡಲೇ ಸೇರಿಕೊಳ್ಳುತ್ತವೆ. ಓಃ ಮತ್ತು ಅಃ (oh and ah) ಸ್ವರಗಳು ಓಂಕಾರವನ್ನು ರಚಿಸಿವೆ. ಪ್ರತಿಯೊಂದು ದೇಶದ ಪ್ರತಿಯೊಂದು ಶಿಶುವೂ ಪರಲೋಕದಿಂದ ತರುವ ಈ ಶಬ್ದದೊಡನೆ ಜನಿಸುತ್ತದೆ ಪುನಃ ಯಾವ ದೇಶದ ಯಾವ ಮನುಷ್ಯನಾದರೂ ಕಾಯಿಲೆಯಾದಾಗ ಯಾವ ಶಬ್ದದಲ್ಲಿ ಅವನು ಸಮಾಧಾನವನ್ನೂ ನೆಮ್ಮದಿಯನ್ನೂ ಪಡೆಯುತ್ತಾನೆ ? ಅವನು ಸ್ವಾಭಾವಿಕವಾಗಿ ಉಹ್ನ್, ಉಹ್ನ್, ಉಹ್ನ್ (uhn) ಎಂದು ನರಳಿ ನರಳಿ ಪರಿಹಾರವನ್ನೂ ಉಪಶಮನವನ್ನೂ ಪಡೆಯುತ್ತಾನೆ. ಅತಿಶಯವಾದ ಯಾತನೆಯನ್ನು ಅನುಭವಿಸುತ್ತಿರುವ ಕಾಹಿಲೆಯ ಮನುಷ್ಯನು ತನ್ನ ನರಳಿಕೆಯಲ್ಲಿ ಓಂಕಾರ ಶಬ್ದವನ್ನು ಕಾಣುತ್ತಾನೆ. ಈ ಪ್ರಪಂಚದಲ್ಲಿ ಎಲ್ಲಿಯಾದರೂ ಯಾವ ಮಕ್ಕಳಾದರೂ ಅತಿ ಸಂತೋಷವಾಗಿದ್ದರೆ, ಓಂಕಾರ ಶಬ್ದದ ಉದ್ಗಾರದಲ್ಲಿ ಅವರ ಆನಂದೋತ್ಸಾಹವು ವ್ಯಕ್ತವಾಗುತ್ತದೆ. ಈ ಅಲ್ಪವೂ ಪರಿಮಿತವೂ ಆದ ದೇಹಾಭಿಮಾನವನ್ನೂ ವ್ಯಕ್ತಿಯ ಅಭಿಮಾನವನ್ನೂ ಮೀರಿ ನಿಂತಿರುವ ಮನಸ್ಸಿನ ಸ್ಥಿತಿಗೆ ಸಂಕೇತವಾಗಿ ಓಂಕಾರವಿದೆ. ಐದಾರು ಅಡಿಗಳ ಎತ್ತರದ ಈ ದೇಹವೇ ನಾನೆಂಬ ಪರಿಮಿತವಾದ ಅರಿವನ್ನು ಮೀರಿದಾಗ, ಓಂಕಾರ ಮಂತ್ರದ ಸ್ವಾಭಾವಿಕ ಶಬ್ದವು ನಿಮ್ಮಿಂದ ತಾನಾಗಿಯೇ ಉಚ್ಚಾರವಾಗುತ್ತದೆ. ಮತ್ತೇನೆಂದರೆ, ಪ್ರಪಂಚದ ಎಲ್ಲಾ ಭಾಷೆಗಳಲ್ಲಿಯೂ ಓಂಕಾರವು ಬಹಳ ಪ್ರಧಾನವಾದ ಸ್ಥಾನದಲ್ಲಿದೆ Omniscient-

ಸರ್ವಜ್ಞ ಎಂಬ ಅರ್ಥದ ಇಂಗ್ಲಿಷ್ ಶಬ್ದವು om ಓಂ ಇಂದಲೇ ಪ್ರಾರಂಭವಾಗುತ್ತದೆ. Omniscient, Omnipotent-ಸರ್ವಶಕ್ತ, Omnipresent-ಸರ್ವವ್ಯಾಪಕ ಎಂಬೀ ಅತ್ಯಂತ ಮಧುರವೂ ಅತ್ಯಂತ ಉನ್ನತವೂ ಆದ ಪರಮಾತ್ಮವಾಚಕ ಶಬ್ದಗಳು om ಓಂ ಇಂದಲೇ ಪ್ರಾರಂಭವಾಗುತ್ತದೆ. ಓಂ ಎಂಬುದು ದೇವರ ಸ್ವಾಭಾವಿಕವಾದ ನಾಮ. ನಿಮ್ಮ ಪ್ರಾರ್ಥನೆಗಳಲ್ಲಿ ಎಲ್ಲಾ ಮಾತೂ ನಿಲ್ಲುವ ಸ್ಥಿತಿಗೆ ಬಂದಾಗ amen ಆಮೆನ್-ತಥಾಸ್ತು ' ಹಾಗೇ ಆಗಲಿ ! ಎಂಬ ಶಬ್ದವನ್ನು ಉಚ್ಚರಿಸುತ್ತೀರಿ. ಇದನ್ನೇ ಅರಾಬಿಕ್ ಮತ್ತು ಪರ್ಷಿಯನ್ ಭಾಷೆಗಳಲ್ಲಿ amin ಆಮಿನ್ ಎನ್ನುತ್ತಾರೆ ಹಿಂದೂಸ್ಥಾನೀ ಅಥವಾ ಇಂಗ್ಲಿಷ್‌ನಲ್ಲಿ ಅದು amen ಅಥವಾ amin ಆಮೆನ್-ಆಮಿನ್ ಆಗುತ್ತದೆ. ನಾಗರಿಕ ಜನಾಂಗದ ಪ್ರಧಾನ ಭಾಷೆಗಳ ಪ್ರಾರ್ಥನೆಗಳಲ್ಲಿ ಮನಸ್ಸು ಧ್ಯಾನಲೀನವಾಗಿ ಮೌನ ಸ್ಥಿತಿಯು ಬಂದಾಗ ಓಂ ಎಂಬ ಉದ್ಗಾರವು ತಾನಾಗಿಯೇ ಬರುತ್ತದೆ. ಹಿಂದೂಗಳು ಇದನ್ನು

" ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ "

" (ಗೋಡೆಗೆ ಹೊಡೆದ ಚೆಂಡು ಹಿಂದಕ್ಕೆ ಪುಟಿದು ಬಂದಂತೆ)
ಎಲ್ಲಿಂದ ಎಲ್ಲಾ ಮಾತೂ ಎಲ್ಲಾ ಭಾವನೆಯೂ ಸೇರದೇ
ಹಿಂದಿರುಗುವವೋ " ಎಂದು ಹೇಳುತ್ತಾರೆ.

ನೀವು ಆ ಸ್ಥಿತಿಯನ್ನು ಮುಟ್ಟಿದಾಗ ಆಮೆನ್ ಎಂಬ ಶಬ್ದವೇ ನಿಮ್ಮನ್ನು ಇಡೀ ಜಗತ್ತಿನಲ್ಲಿ ಪ್ರವೇಶ ಮಾಡಿಸುತ್ತದೆ. ಆಮೆನ್ ಎಂಬ ಶಬ್ದವು ಓಂ ಎಂಬುದರ ವಿಕೃತರೂಪವು. ಹೀಗೆ, ಓಂ ಎಂಬುದು ದೇವರ ಅತ್ಯಂತ ಸ್ವಾಭಾವಿಕವಾದ ಹೆಸರು. ಪವಿತ್ರಗಳಿಗೆಲ್ಲಾ ಪವಿತ್ರವೂ ಮಂಗಳಗಳಿಗೆಲ್ಲಾ ಮಂಗಳವೂ ಆದ ಭಗವಂತನಿಗೆ ಓಂ ಎಂಬುದೇ ಸ್ವಾಭಾವಿಕ ನಾಮ.

ಇನ್ನೊಂದು ಮುಖ್ಯವಾದ ವಿಷಯ. ನೀವು ಉಸಿರಾಡುವಾಗ ಹುಟ್ಟುವ ಶಬ್ದ ಏನೆಂಬುದನ್ನು ನೀವು ಎಂದಾದರೂ ಗಮನಿಸಿದ್ದೀರಾ ? ಈಗಲೇ ಅದನ್ನು ಕಂಡುಹಿಡಿಯಬಹುದು. ಅದು ಸೋಹಮ್, ಸೋಹಂ. ನೀವು ಒಬ್ಬರೇ ಉಸಿರಾಡಿ; ಸೋಹಂ ಎಂಬುದು ನಿಮ್ಮ ಉಸಿರಿನ ಶಬ್ದವೆಂಬುದನ್ನು ಅರಿಯುತ್ತೀರಿ ಸಂಸ್ಕೃತ ಭಾಷೆಯಲ್ಲಿ ಸೋಹಂ ಎಂಬುದಕ್ಕೆ ಒಂದು ಅರ್ಥವಿದೆ. ಅದಕ್ಕೆ ಸಂಸ್ಕೃತ ಭಾಷೆಯಲ್ಲಿ ಅರ್ಥವಿದ್ದರೆ, ಇಂಗ್ಲಿಷ್ ಭಾಷೆಯು ಅದನ್ನು ಸ್ವೀಕರಿಸಬೇಕು. ಇಂಗ್ಲಿಷ್, ಫ್ರೆಂಚ್, ಸ್ಕಾಂಡಿನೇವಿಯನ್, ರಷ್ಯನ್, ಗ್ರೀಕ್ ಮತ್ತು ಪರ್ಷಿಯನ್ ಭಾಷೆಗಳೆಲ್ಲಾ

ಸಂಸ್ಕೃತ ಭಾಷೆಯ ಪುತ್ರಿಯರೆಂದು ಭಾಷಾಶಾಸ್ತ್ರವು ಸಿದ್ಧಮಾಡಿ ತೋರಿಸುತ್ತದೆ ಆದ್ದರಿಂದ ದಿವ್ಯಾತ್ಮರೆ, ಸಂಸ್ಕೃತವು ನಿಮ್ಮ ಇಂಗ್ಲಿಷ್ ಭಾಷೆಯ ತಾಯಿಯು, ಜನನಿಯು. ತಾಯಿಗೆ ಸೇರಿದ್ದನ್ನು ಮಗಳೇಕೆ ತೆಗೆದುಕೊಳ್ಳಬಾರದು ? ಸಂಸ್ಕೃತ ಭಾಷೆಯಲ್ಲಿ ಸೋ–ಸಃ–ಎಂದರೆ ಅವನು, ಅದು ; ಅಹಂ ಎಂದರೆ ನಾನು. ಸೋಹಂ ಎಂದರೆ "ಅವನೇ ನಾನು" "ಅದೇ ನಾನು". ಇದಕ್ಕೆ ಸಂಬಂಧಪಟ್ಟ ಒಂದು ವಿಶಿಷ್ಟಬಗೆಯ ಉಸಿರಾಟವಿದೆ. ನಿಮ್ಮ ಉಸಿರಾಟದ ಶಬ್ದವಾದ ಸೋಹಂನಲ್ಲಿ ಎರಡು ವ್ಯಂಜನಗಳಿವೆ. ಮಿಕ್ಕದ್ದು ಸ್ವತಂತ್ರಸ್ವರಗಳು. ಮೊದಲನೆಯ ಸ್, ಎರಡನೆಯ ಹ್ ಇವೆರಡನ್ನೂ ಕೈಬಿಟ್ಟರೆ, ಉಳಿಯುವದು ಓಂ ಹೀಗೆ, ಮನುಷ್ಯನ ಉಸಿರಾಟದಲ್ಲಿ, ಅಥವಾ ಈ ಪ್ರಪಂಚದ ಅಂತರಂಗದ ಜೀವಿಕೆಯಲ್ಲಿ ಮಿಕ್ಕೆಲ್ಲಾ ಶಬ್ದಗಳೂ ಅವಲಂಬಿಸಿರುವ ಎರಡು ಸ್ವತಂತ್ರ ಸ್ವರಗಳಿವೆ ಅವಲಂಬಿಗಳಾದ ಶಬ್ದಗಳನ್ನು ಅಥವಾ ವ್ಯಂಜನಾಕ್ಷರಗಳನ್ನು ತೆಗೆದುಬಿಟ್ಟರೆ, ಆಗ ಉಳಿಯುವ ಆತ್ಮ ಅಥವಾ ನಿಮ್ಮ ಉಸಿರಿನಲ್ಲಿರುವ ಸ್ವತಂತ್ರಜೀವವು ಓಂ ಆಗಿದೆ. ಆದ್ದರಿಂದ ಓಂ ಇದೇ ನಿಮ್ಮ ಉಸಿರಿನಲ್ಲಿರುವ ಜೀವ. ನಿಮ್ಮ ಉಸಿರಿನ ಆತ್ಮವಾದ ಶಬ್ದವೇ ಓಂ ಎಲ್ಲಾ ಜೀವಗಳ ಜೀವಕ್ಕೆ, ಎಲ್ಲಾ ಆತ್ಮಗಳ ಆತ್ಮಕ್ಕೆ ಎಲ್ಲಾ ಚೇತನಗಳನ್ನೂ ಎಲ್ಲಾ ಆತ್ಮಗಳನ್ನೂ ಬೆಳಗುವ ಬೆಳಕಾದ ಪರಮಾತ್ಮನಿಗೆ, ಒಳಗಿನ ಸ್ವರ್ಗಸಾಮ್ರಾಜ್ಯಕ್ಕೆ, ಅತ್ಯಂತ ಸ್ವಾಭಾವಿಕವಾದ ನಾಮ, ಹೆಸರು, ಓಂ ಎನ್ನುವದೇ ಆಗಿದೆ

ಓಂಕಾರದ ಉಚ್ಚಾರಣೆಯಿಂದ ಉದ್ದೀಪಿತವಾಗುವ ಹೆಚ್ಚು ಉನ್ನತವಾದ ಸ್ಪಂದನಕ್ಕೂ ಉನ್ನತವಾದ ಸ್ಥಿತಿಗೂ ವೈಜ್ಞಾನಿಕ ಕಾರಣವನ್ನು ರಾಮನು ಮುಂದು ವರಿದು ನಿಮಗೆ ವಿವರಿಸಬಹುದು.

ಶಬ್ದಗಳು ಎರಡು ಬಗೆಯಾಗಿವೆಯೆಂದು, ನಿಮಗೆಲ್ಲರಿಗೂ ಗೊತ್ತಿದೆ. ನಿಮ್ಮ ವ್ಯಾಕರಣಗಳು ಅವನ್ನು ಸ್ಪಷ್ಟವಾಗಿ ಉಚ್ಚರಿತವಾಗುವ ಅಕ್ಷರಾತ್ಮಕ ಶಬ್ದವೆಂದೂ ಅಸ್ಪಷ್ಟವಾಗಿ ಉಚ್ಚರಿತವಾಗುವ ಧ್ವನ್ಯಾತ್ಮಕ ಶಬ್ದವೆಂದೂ (ಎರಡು ಬಗೆಯೆಂದು) ಹೇಳುತ್ತವೆ. ಸಂಸ್ಕೃತದಲ್ಲಿಯೂ ಅಕ್ಷರ ಮಾಲಿಕೆಯ ಅಕ್ಷರಗಳ ಮೂಲಕ ಉಚ್ಚಾರ ವಾಗುವ ಶಬ್ದವೆಂದೂ ಸ್ವರ, ಧ್ವನಿ, ರಾಗದ ಮೂಲಕ ವ್ಯಕ್ತವಾಗುವ ಶಬ್ದವೆಂದೂ ಎರಡು ಬಗೆಯೆಂದು ಹೇಳಿದೆ. ಆದ್ದರಿಂದ ಶಬ್ದಗಳಲ್ಲಿ ವರ್ಣಾತ್ಮಕ ಮತ್ತು ರಾಗಾತ್ಮಕ ಎಂದು ಎರಡು ಬಗೆ. ತಲೆಗೆ ಸಂಬಂಧಪಟ್ಟ ಜ್ಞಾನ ಬೋಧಕವಾದ ವಿಷಯಗಳನ್ನು ತಿಳಿಸತಕ್ಕವು ವರ್ಣಾತ್ಮಕ ಶಬ್ದಗಳು. ಆಧುನಿಕ ಮನಶ್ಶಾಸ್ತ್ರಜ್ಞರ ಭಾಷೆಯಲ್ಲಿ ಹೇಳಬಹುದಾದರೆ, ಜ್ಞಾತೃನಿಷ್ಠವಾದ ಮನಸ್ಸಿಗೆ

ಅಥವಾ ಹೃದಯಕ್ಕೆ—ಭಾವನೆಗಳಿಗೆ ಸಂಬಂಧಪಟ್ಟಿರುವದು ರಾಗಾತ್ಮಕ ಅಥವಾ ಧ್ವನ್ಯಾತ್ಮಕವಾದ ಶಬ್ದವು. ವರ್ಣಾತ್ಮಕ ಶಬ್ದಗಳ ಅರ್ಥವು ಪರಿಮಿತವಾದುದು. ಇಲ್ಲಿ ರಾಮನು ನಿಮ್ಮೊಡನೆ ಇಂಗ್ಲಿಷ್ ಭಾಷೆಯಲ್ಲಿ ಮಾತಾಡುತ್ತಿದ್ದಾನೆ. ಇಂಗ್ಲಿಷ್ ತಿಳಿಯದವರಿಗೆ ಈ ಮಾತೆಲ್ಲಾ ಗ್ರೀಕ್ ಭಾಷೆಯಾಗುತ್ತದೆ. ಒಂದು ವಿಶಿಷ್ಟ ಭಾಷೆಯನ್ನು ಕಲಿಯತಕ್ಕವರು, ಶಿಕ್ಷಣವನ್ನು ಪಡೆಯಬೇಕಾದ ಕೃತಕ ರೀತಿಯಲ್ಲಿಯೋ ಶಿಕ್ಷಣವನ್ನು ಪಡೆದವರು ಮಾತ್ರ ರಾಮನಾಡುವ ಇಂಗ್ಲಿಷ್ ಭಾಷೆಯನ್ನು ಅರ್ಥ ಮಾಡಿಕೊಳ್ಳಬಹುದು ಬೇರೆಯವರಿಗೆ ಅರ್ಥವಾಗುವದಿಲ್ಲ. ಯಾರಾದರೂ ಪರ್ಷಿಯನ್, ರಷ್ಯನ್, ಅಥವಾ ಸಂಸ್ಕೃತದಲ್ಲಿ ಮಾತಾಡಿದರೆ ನಿಮಗೂ ಅರ್ಥವಾಗುವದಿಲ್ಲ. ಅವನಿಗೆ ಇಂಗ್ಲಿಷ್ ಬಾರದಿರಬಹುದು; ಆದರೆ ಅವನು ಅತ್ತರೆ, ನಿಮಗೆ ತತ್‌ಕ್ಷಣವೇ, ಅವನು ದುಃಖಿಯಾಗಿದ್ದಾನೆಂದೂ ಸಹಾಯವನ್ನು ಬಯಸುವನೆಂದೂ ತಿಳಿಯುತ್ತದೆ. ಯಾರಾದರೂ ಬಂದು ಸಂಸ್ಕೃತದಲ್ಲಿಯೋ ಪರ್ಷಿಯನ್‌ನಲ್ಲಿಯೋ ಅಥವಾ ಜಪ್ನೀಸ್ ಭಾಷೆಯಲ್ಲಿಯೋ ಮಾತಾಡಿದರೆ ನಿಮಗೆ ತಿಳಿಯುವದಿಲ್ಲ. ಅವನು ನಗುವದಕ್ಕೆ ತೊಡಗಿದರೆ, ಸಂತೋಷವಾಗಿದ್ದಾನೆಂದು ಎಲ್ಲರಿಗೂ ತಿಳಿಯುತ್ತದೆ ಈ ಅಳುವದೂ ನಗುವದೂ ವರ್ಣಾತ್ಮಕ ಶಬ್ದವಲ್ಲ; ಇದು ಧ್ವನ್ಯಾತ್ಮಕ ಶಬ್ದವು ಆದರೆ ಅದರ ಉದ್ದಿಷ್ಟವಾದ ಪರಿಣಾಮವು ಎಲ್ಲರ ಮೇಲೂ ಒಂದೇ ಸಮನಾಗಿ ಆಯಿತು. ಮಗುವು ನಿಮ್ಮ ಭಾಷೆಯಲ್ಲಿ ಮಾತನಾಡಲಾರದಾದರೂ ಅದು ತನ್ನ ಧ್ವನಿಯಿಂದ ಇಂಗಿತವನ್ನು ತಿಳಿಸಬಲ್ಲುದು. ಪ್ರೇಮದ ಭಾಷೆಯನ್ನು ಎಲ್ಲಾ ದೇಶಗಳವರೂ ತಿಳಿಯುತ್ತಾರೆ. ನೀವು ಒಂದು ಬೆಕ್ಕನ್ನು ಓಡಿಸಬೇಕಾದರೆ, ನೀವು ಯಾವ ಭಾಷೆಯಲ್ಲಿ ಮಾತನಾಡಿದರೂ ಅದಕ್ಕೆ ತಿಳಿಯುವದಿಲ್ಲ; ಆದರೆ ಕೈಯಿಂದ ಚಪ್ಪಾಳೆ ತಟ್ಟಿದ ಕೂಡಲೇ ಅದು ಓಡಿ ಹೋಗುತ್ತದೆ. ಈ ಶಬ್ದವು ಧ್ವನ್ಯಾತ್ಮಕವೇ ಹೊರತು ವರ್ಣಾತ್ಮಕವಲ್ಲ. ಆದರೆ ಕೂಡಲೇ ಅದರಿಂದ ಉದ್ದಿಷ್ಟವಾದ ಪರಿಣಾಮ ಉಂಟಾಯಿತು. ಇದರಿಂದ ಧ್ವನ್ಯಾತ್ಮಕ ಭಾಷೆಯು ಸರ್ವರಿಗೂ ಅರ್ಥವಾಗುವದರಿಂದ ಅದು ಸರ್ವಸಾಮಾನ್ಯವೂ ಸರ್ವವ್ಯಾಪಕವೂ ಆದುದೆಂದು ಸ್ಪಷ್ಟವಾಗುತ್ತದೆ. ಈ ಭಾಷೆಯು ತಲೆಗೆ ಸಂಬಂಧಪಡದೆ, ಹೆಚ್ಚು ಕೆಳಗೆ, ಆಳವಾದ ಹೃದಯಕ್ಕೆ ಸಂಬಂಧಪಟ್ಟಿದೆ. ಏಳನೆಯ ಮತ್ತು ಒಂಬತ್ತನೆಯ ಶತಮಾನಗಳ ತತ್ತ್ವಜ್ಞಾನಿಗಳು, ಮನುಷ್ಯನ ಪ್ರಭುತ್ವ—ಪ್ರಭಾವಗಳ ಕೇಂದ್ರವು ಮಿದುಳಿನಲ್ಲಿ ಎಲ್ಲಿಯೋ ಇದೆಯೆಂದು ಹೇಳುತ್ತಾರೆ. ಈ ತತ್ತ್ವಶಾಸ್ತ್ರಜ್ಞರ ತಪ್ಪನ್ನು ಈಗ ಕಂಡುಹಿಡಿದಿದ್ದಾರೆ; ಶಕ್ತಿ, ಕಾರ್ಯಕಲಾಪ, ಆಸಕ್ತಿ ಮೊದಲಾದವುಗಳ ಕೇಂದ್ರವು ಹೃದಯದ ನರಗ್ರಂಥಿಯಲ್ಲಿ ಇದೆ ಎಂಬದನ್ನು ತತ್ತ್ವಶಾಸ್ತ್ರಜ್ಞರ ಪ್ರಪಂಚವು ಈಗ ಅರಿತಿದೆ. ಮನುಷ್ಯನ ಪ್ರಭುತ್ವಪೀಠವು ಅಲ್ಲಿದೆ. ಆದ್ದರಿಂದ ಧ್ವನ್ಯಾತ್ಮಕ ಭಾಷೆಯು

ತಲೆಗಿಂತಲೂ ಅಥವಾ ಬದ್ಧಿಗಿಂತಲೂ ಹೆಚ್ಚು ಕೆಳಗೆ ಆಳದಲ್ಲಿ ಎಲ್ಲಿಂದಲೋ ಚಿಮ್ಮಿ ಬರುತ್ತದೆಯೆಂದು ಹೇಳುತ್ತೇವೆ. "ನಿಮ್ಮ ಚರ್ಚ್ ದೇವಾಲಯಗಳಲ್ಲಿ ನೀವು ಉಪದೇಶ ಮಾಡಲಾರಿರಿ ; ಆದರೆ ಅಲ್ಲಿ ನನಗೆ ಗಾನಮಾಡಬಹುದು." ಎಂದು ಒಬ್ಬ ಹೆಂಗಸು ಹೇಳುವದನ್ನು ರಾಮನು ಕೇಳಿದನು.

ನಿಮ್ಮ ಚರ್ಚ್‌ಗಳಲ್ಲಿ ನಡೆಸುವ ಉಪದೇಶಕ್ಕಿಂತಲೂ ಅಲ್ಲಿ ಮಾಡುವ ಕೀರ್ತನೆಯನ್ನು ಹೆಚ್ಚಾಗಿ ಮೆಚ್ಚುತ್ತೀರೆಂಬದನ್ನು ನೀವೆಲ್ಲರೂ ಒಪ್ಪಬಹುದು. ಅದೇಕೆ ? ನೀವು ಶೋಕಗ್ರಸ್ತರಾಗಿರುವಾಗ ಯಾರಾದರೂ ಉತ್ತಮವಾದ ಒಂದು ವಾದ್ಯವನ್ನು ಬಾರಿಸಿ, ಮಧುರವಾದ ಸ್ವರಸ್ಪಂದನವನ್ನುಂಟುಮಾಡಿದರೆ, ಕೂಡಲೇ ನಿಮ್ಮ ಶೋಕವು ಶಮನವಾಗಿ ನಿಮ್ಮ ಮನಸ್ಸಿಗೆ ಹರ್ಷವೂ ಉಲ್ಲಾಸವೂ ಉಂಟಾಗುತ್ತವೆ. ಪೂರ್ವ ಅರೋರಾದಲ್ಲಿ (ಭೂಕಾಂತಧ್ರುವ ಪ್ರಭೆ) ರಾಮನಿಗೆ ಒಬ್ಬ ಮಿತ್ರನಿದ್ದಾನೆ. ಅವನ ಸಂಸ್ಥೆಯಲ್ಲಿ ಕೆಲಸಗಾರರು, ಮನಸ್ತಾಪ, ಸ್ನೇಹ ಸಹಕಾರಗಳ ಕೊರತೆ, ಇವುಗಳಿಂದ ಕೆಲಸಮಾಡದೆ, ವ್ಯವಸ್ಥೆ ಕೆಟ್ಟರೆ, ಅವನೇ ಕೂಡಲೇ ಕೆಲಸವನ್ನು ನಿಲ್ಲಿಸಿ, ಯಾರಿಂದಲಾದರೂ ಪಿಯಾನೋ ವಾದ್ಯವನ್ನು ಬಾರಿಸುತ್ತಾನೆ. ಅರ್ಧ ಗಂಟೆಯಲ್ಲಿ ಕೆಲಸಗಾರರ ಉದ್ವೇಗವೆಲ್ಲಾ ಕಡಿಮೆಯಾಗಿ, ಸಮಾಧಾನದಿಂದ ಕೆಲಸಕ್ಕೆ ಹೋಗುತ್ತಾರೆ. ಜನರ ಹೃದಯದ ಮೇಲೆ ಸಂಗೀತದ ಮೋಹಕವಾದ ಪ್ರಭಾವ ಎಷ್ಟಿದೆ ಎಂಬದನ್ನು ನೀವು ತಿಳಿಯಬಹುದು ಹಿಂದೆ ಫ್ರಾನ್ಸ್ ಮತ್ತು ಪ್ರಷ್ಯಾದೇಶಗಳ ನಡುವಿನ ಯುದ್ಧದಲ್ಲಿ, ಕೆಲವು ಫ್ರೆಂಚ್ ಸೈನಿಕರ ತಂಡದಲ್ಲಿ, ಮದುವೆಯಲ್ಲಿ ಬಾರಿಸುವ ಮಂಗಳ ವಾದ್ಯಗಳನ್ನೂ ವಿಶಿಷ್ಟರಾಗಗಳನ್ನೂ ನುಡಿಸಿ ವಿನೋದಗೊಳಿಸಿದಾಗ, ಮನೆಬಿಟ್ಟು ಬಹಳ ಕಾಲ ಹೊರಗಿರುವದರ ಫಲವಾಗಿ ತಲೆದೋರುವ ಮನಸಿನ ಖಿನ್ನತೆಯಿಂದ ಅವರೆಲ್ಲರಿಗೂ ಮನೆಗೆ ಹೋಗಬೇಕೆಂಬ ತೀವ್ರವಾದ ತವಕವೂ ಹಂಬಲವೂ ಹತ್ತಿತು. ಎಲ್ಲರೂ ತಮ್ಮ ಅಧಿಕಾರಿಗಳಲ್ಲಿ ರಜೆಯನ್ನು ಕೇಳುವದಕ್ಕೆ ತೊಡಗಿದರು. ಎಲ್ಲರಿಗೂ ಮನೆಯ ಗೀಳು, ರೋಗ ಹಿಡಿದು, ಯುದ್ಧಮಾಡುವುದು ಅವರಿಂದ ಸಾಧ್ಯವಾಗಲಿಲ್ಲ. ಇದಕ್ಕೆ ವಿರುದ್ಧವಾಗಿ ರಣವಾದ್ಯಗಳಿಂದ ವೀರರಸವನ್ನು ಚಿಮ್ಮಿಸುವ ರಾಗಗಳನ್ನು ಬಾರಿಸಿದರೆ, ಅದೇ ಗಾನ ಕಲೆಯು ಮೃತ್ಯುಭಯವಿಲ್ಲದೆ, ಮೈಮರೆತು ಯುದ್ಧಮಾಡುವದಕ್ಕೆ ಸೈನಿಕರಲ್ಲಿ ರಣೋತ್ಸಾಹವನ್ನೂ ಯಮರಾಜನ ಆವೇಶವನ್ನೂ ಉತ್ತೇಜಿಸುತ್ತದೆ. ಅಪೊಲೋ (Appollo) ಗಾನದಿಂದಲೇ ಟ್ರಾಯ್ (Troy) ನಗರವು ಹೊರಬಂದುದನ್ನು ಕೇಳಿದ್ದೀರಿ.

ಸಮುದ್ರ ಮಧ್ಯದ ಒಂದು ದ್ವೀಪದಲ್ಲಿ (ಗ್ರೀಕ್ ಪುರಾಣದ ಪ್ರಕಾರ) ವಾಸಮಾಡುತ್ತಿದ್ದ 'ಸೈರಾನ್' ಸ್ತ್ರೀಯರ ವಿಷಯವನ್ನು ನೀವು ಕೇಳಿರಬಹುದು. ಆ ಸ್ತ್ರೀಯರು ಅಥವಾ ಅರ್ಧಸ್ತ್ರೀ ಅರ್ಧ ಪಕ್ಷಿ ಆಕಾರದ ಆ ಅಮಾನುಷ ಮಾಯಾಂಗನೆಯರು ತಮ್ಮ ಮೋಹಕ ಗೀತೆಗಳಿಂದ ಅಜಾಗರೂಕ ನಾವಿಕರನ್ನು ಆಕರ್ಷಿಸಿ, ತಮ್ಮ ವಾಸಸ್ಥಾನವಾದ ಕಗ್ಗಲ್ಲು ದ್ವೀಪಕ್ಕೆ ಕೊಂಡೊಯ್ಯುತ್ತಿದ್ದರು. ಆ ಮೋಹಿನಿಯರು ಮೂರುದಿನಗಳು ಮಾತ್ರ ಆ ಪ್ರವಾಸಿಗಳೊಡನೆ ಸರಸವಾಗಿ ಸುಖದಿಂದಿದ್ದು, ನಾಲ್ಕನೆಯ ದಿನ ಅವರನ್ನು ಕತ್ತರಿಸಿ ತಿಂದುಬಿಡುತ್ತಿದ್ದರು. ಈ ಘೋರ ವರ್ತನೆಯು ಅನೇಕ ಸಮುದ್ರಯಾತ್ರಿಗಳಿಗೆ ತಿಳಿದಿದ್ದರೂ ಸಹ, ಆ ಮೋಹಿನಿಯರ ಮಾದಕವಾದ ಗಾನವನ್ನು ಕೇಳಿದೊಡನೆಯೇ ಅದರ ಮಾಂತ್ರಿಕ ಶಕ್ತಿಯನ್ನು ತಡೆದುಕೊಳ್ಳಲಾರದೆ, ಆ ಕ್ರೂರ ದ್ವೀಪಕ್ಕೆ ಅವರು ಆಕರ್ಷಿತರಾಗಿ ಆ ದುರಂತಕ್ಕೆ ಬಲಿಯಾಗುತ್ತಿದ್ದರು. ಗಾನ–ವಾದನಗಳ ಸಾಮರ್ಥ್ಯ ಅಂಥಾದ್ದು.

ಇದು, ಈ ಪ್ರಪಂಚದಲ್ಲಿರುವ ಮೋಹಕ ಶಕ್ತಿಯನ್ನೂ ಪ್ರಲೋಭನದ ಬಲವನ್ನೂ ದುಷ್ಪ್ರೇರಣೆಯ ಪ್ರಭಾವವನ್ನೂ ತೋರಿಸುತ್ತದೆ. ಚಾಪಲ್ಯದ ಪ್ರಭಾವವೇ ಪ್ರಬಲವಾದಾಗ, ಅದಕ್ಕೆ ವಶವಾದ ವಿನೋದ ಜೀವನದ ಸರಸಸುಖ ಗಳೆಲ್ಲಾ ಮೂರು ದಿನಗಳದು; ಅದರಿಂದ ಶಕ್ತಿಯ ಹರಣವಾಗಿ, ಮೃತ್ಯುವಿಗೆ ತುತ್ತಾಗಬೇಕಾಗುತ್ತದೆ–ಎಂಬ ನಿಶ್ಚಿತವಾದ ಫಲವು ತಿಳಿದಿದ್ದರೂ ಸಹ, ಜನರು ವಿಷಯಗಳ ಸೆಳೆತವನ್ನು ತಡೆಗಟ್ಟಲಾರರು.

ಆರ್ಫಿಯಸ್ (Orpheus) ಹಾಡಿದಾಗ, ಅದನ್ನು ಕೇಳಲು ಹರಿಯುವ ಹೊಳೆಯೂ ಹಳ್ಳಗಳೂ ಜಲಝರಿಗಳೂ ಪ್ರಾಣಿಗಳೂ ಸಹ ಗಾನಮುಗ್ಧವಾಗಿ ಸ್ತಬ್ಧವಾಗುತ್ತಿದ್ದವು, ಎಂದು ಕೇಳಿದ್ದೀರಿ. ಅವನ ಒಂದು ಕಡೆ ಸಿಂಹವೂ ಇನ್ನೊಂದು ಕಡೆ ಆಕಳೂ, ಒಂದು ಕಡೆ ಕುರಿಯೂ ಇನ್ನೊಂದು ಕಡೆ ತೋಳವೂ ಅವನ ದಿವ್ಯ ಮಧುರ ಗಾನವನ್ನು ಕೇಳುತ್ತಾ ತಮ್ಮ ನೈಸರ್ಗಿಕ ವೈರದ ಎಚ್ಚರವೇ ಇಲ್ಲದೆ, ತಮ್ಮನ್ನು ತಾವು ಮರೆಯುತ್ತಿದ್ದವು.

ದೇವತೆಯನ್ನು ಭೂಮಿಗೆ ಕರೆತಂದ ಸಂತೆ ಸಿಸಿಲಿಯಾ (St. Cecilia) ವಿಚಾರ ನಿಮಗೆ ಗೊತ್ತಿರಬೇಕು. "ಅಲೆಕ್ಸಾಂಡರ್‌ನ ಔತಣ" ದಲ್ಲಿ (Alexander's Feast) ಅಲೆಕ್ಸಾಂಡರ್‌ನನ್ನು ದೇವರಲ್ಲಿ ಕ್ಷಣಕಾಲ ಒಂದಾಗುವಂತೆ ಮಾಡಿದ ಗಾಯಕನ ವಿಷಯವಾಗಿ ಕೇಳಿ ಅವನು ಹೇಳಿದ್ದೇನೆಂದರೆ

" He raised the mortal to the skies,
And she (St Cecilia) brought an angel down.
" ಮರ್ತ್ಯನನು ಸ್ವರ್ಗಕ್ಕೇರಿಸಿದನವನು,
ಮತ್ತಾಕೆ (ಸಂತಳು ಸಿಸಿಲಿಯಾ) ಕೆಳತಂದಳು ದೇವತೆಯೊಬ್ಬನನು. "

ಆದ್ದರಿಂದ ಸಿಸಿಲಿಯಾ ಸಂತಳಿಗಿಂತಲೂ ಗಾಯಕನು ಶ್ರೇಷ್ಠನಾದನು· ಗಾಯನವೆಂದರೇನು ? ಅದು ವರ್ಣಾತ್ಮಕವೋ ಧ್ವನ್ಯಾತ್ಮಕವೋ ? ಅದು ಸ್ಪಷ್ಟವಾಗಿ ಧ್ವನ್ಯಾತ್ಮಕವೇ. ಅದರಲ್ಲಿ ಎಂಥಾ ಆಶ್ಚರ್ಯಕರವಾದ ಪರಿಣಾಮವಿದೆ ? ವಿಶಿಷ ಶಬ್ದಗಳಿಗೆ ವಿಶಿಷ್ಟ ಪರಿಣಾಮಗಳು ಏಕಿರಬೇಕೆಂಬದನ್ನು ವಿಜ್ಞಾನವು ತೋರಿಸಿಕೊಡ ಬಹುದು ; ಒಂದು ವೇಳೆ ವಿಜ್ಞಾನವು ಅದನ್ನು ಪ್ರಮಾಣೀಕರಿಸದಿದ್ದರೆ, ರಾಗಾ ಲಾಪನೆಯು ಆಶ್ಚರ್ಯಕರವಾದ ಫಲವನ್ನು ಉಂಟುಮಾಡುವದರಲ್ಲಿ ಅದ್ಭುತ ಪರಿಣಾಮವುಳ್ಳದ್ದೆಂಬ ವಿದ್ಯಮಾನವು ಸತ್ಯವಾಗಿಯೇ ಇರುತ್ತದೆ. ನಿಮ್ಮ ಮನಸ್ಸಿನಲ್ಲಿ ಅದು ವಾಸ್ತವ ಘಟನೆಯೆಂದೇ ಇರುತ್ತದೆ.

ಆದ್ದರಿಂದ ಗಾಯನವು ಅಥವಾ ಸಂಗೀತವು ಓಂಕಾರದ ಉಚ್ಚಾರಣೆಗೆ ಸಂಬಂಧಪಟ್ಟಿದೆ, ಎಂದು ರಾಮನು ಹೇಳುತ್ತಾನೆ ; ಮತ್ತು ನಿಮ್ಮ ಆತ್ಮನನ್ನು ಸರ್ವಾತ್ಮದೊಡನೆ ಒಂದು ಮಾಡುವದರಲ್ಲಿ ಓಂಕಾರದ ಉಚ್ಚಾರಣೆಯು ಅದ್ಭುತ ಪರಿಣಾಮವುಳ್ಳದ್ದಾಗಿದೆ, ಎಂಬುದನ್ನು ಅನುಭವವು ಸಿದ್ಧಮಾಡಿ ತೋರಿಸಿದೆ. ವಿಜ್ಞಾನವು ಒಂದು ವೇಳೆ ಇವತ್ತು ಇದನ್ನು ಪ್ರಯೋಗದಿಂದ ತೋರಿಸಲಾರದಾದರೆ, ವಿಜ್ಞಾನವು ಬೆಳೆಯಲಿ ; ಹಾಗಾದರೆ ಕೆಲವು ವರ್ಷಗಳ ಮೇಲೆ ಅದಕ್ಕೆ ವಿವರಿಸುವ ಶಕ್ತಿಯು ಬರಬಹುದು. ಅಷ್ಟರವರೆಗೆ (ಅನಂತರವೂ) ಸತ್ಯವು ಸತ್ಯವೇ ಆಗಿರುತ್ತದೆ. ಹೀಗೆ, ಅನೇಕ ಶತಮಾನಗಳ ವೈಯಕ್ತಿಕವಾದ ಅನುಭವಗಳ ಆಧಾರದ ಮೇಲೆ, ರಾಮನು ವೈದಿಕ ತತ್ತ್ವಶಾಸ್ತ್ರದ ಐಶ್ವರ್ಯವನ್ನು ನಿಮ್ಮೆದುರಿಗೆ ಇಡುತ್ತಾನೆ. ಹೀಗೆ ಹಿಂದೂಗಳು ಅಸಾಧಾರಣ ಪ್ರಜ್ಞೆಯ ಉನ್ನತವಾದ ಅತೀಂದ್ರಿಯದೃಷ್ಟಿಯನ್ನು, ಅಂತರಂಗದ ಅಧ್ಯಾತ್ಮಪ್ರಕಾಶವನ್ನು ಈ ಸಾಧನ ಕ್ರಮದಿಂದ ಸಂಪಾದಿಸಿದರು.

**Peace like a River flows to me**
ಎನ್ನಲ್ಲಿಗಾ ಶಾಂತಿ ಹೊಳೆಯಂತೆ ಹರಿಯುತಿದೆ.
ಶಾಂತಿ ಸುಖ ಹರಿಯುತಿದೆ ಹೊಳೆಯಂತೆ ಎನ್ನಲ್ಲಿಗೆ,
ಶಾಂತಿ, ಸಾಗರದಂತೆ ಎನ್ನೊಳಗೆ ಉರುಳುತಿದೆ, ಮೊರೆಯುತಿದೆ,

ಶಾಂತಿ, ಗಂಗೆಯೊಲು ಹರಿಯುತಿದೆ,
ಎನ್ನ ತಲೆಕೂದಲುಗಳಿಂ ಕಾಲ್ ಬೆರಳ್ಗಳಿಂದದು ಹರಿಯುತಿಹುದು.
ಬೆಳಕಿನ ಬಿಳಿವಸ್ತ್ರಗಳ ಬಂಗಾರದ ಹೊಳೆವ ಕಿರಣಗಳ
ಓ ! ಬೇಗ ತಾರೆನ್ನ ಆ ಮದುವೆಯುಡಿಗೆಗಳ
ಓ ! ಸರಿಯಾಗಿ ಹೊಂದುತಿದೆ, ಕಡೆಗೊಮ್ಮೆ ಮಸುಕನೆಸೆಯೆ,
ಓ ! ಪ್ರವಹಿಸಿ ಆನಂದಾಶ್ರುಗಳ ಮಾಲೆಗಳೆ, ಅಕೃತ್ರಿಮ ಯಥೇಚ್ಛೆಯಲಿ
ಹರಿಹರಿಯಿರಿ !

ವರ್ಷಿಸಿರಿ ಹರ್ಷ ಬಾಷ್ಪಗಳೆ! ನಿರಾತಂಕ ಸಮೃದ್ಧಿಯಲಿ ಸುರಿಸುರಿಯುತಿರಿ;
ದಿವ್ಯಪ್ರಭಾಮಂಡಲವದೇನು ! ವಿಚಿತ್ರ ವೃತ್ತ !
ಓ ! ಜೀವಾಮೃತವೇ ! ಐಂದ್ರಜಾಲಿಕ ದ್ರಾಕ್ಷಾರಸವೆ !
ಎನ್ನ ತನುಮನಂಗಳ ರಂಧ್ರ–ಶೂನ್ಯಗಳ ತುಂಬಲ್ಕೆ ಬಾ ಶಾಂತಿ !
ಬಾ ಮೀನೆ, ಬಾ ನಾಯೆ, ಯಾರೆಲ್ಲ ದಯಮಾಡಿ ಬನ್ನಿ.
ಪ್ರಕೃತಿ ಶಕ್ತಿಗಳೆ ಬನ್ನಿ ; ಮೃಗಪಕ್ಷಿಗಳೆ ಬನ್ನಿ.
ನನ್ನ ರಕ್ತವ ಹೀರಿ ಕುಡಿಯಿರಿ, ನನ್ನ ಮಾಂಸವ ತಿನ್ನಿ,
ಓ ! ಬನ್ನಿ ಮದುವೆಯೌತನಕೆ ನೀವ್ ಬನ್ನಿ, ಭುಂಜಿಸಿರಿ ಬನ್ನಿ.
ತಾರೆಗಳಲಿ, ಸೂರ್ಯರಲಿ, ಸಮುದ್ರಗಳಲ್ಲಿ ಸ್ವೇಚ್ಛೆಯಲಿ ಕುಣಿವೆ ನಾ,
ನಲಿವೆ ನಾ. ಹರ್ಷದಲಿ ;

ಚಂದ್ರರಲಿ, ಮೋಡಗಳಲಿ, ಮಾರುತಗಳಲಿ ನರ್ತಿಸುವೆ ;
ಸಂಕಲ್ಪದಲಿ, ರಾಗ–ಭಾವದಲಿ, ಮನಸಿನಲಿ ಕುಣಿವೆ,
ಪಾಡುವೆನು ನಾ, ಪಾಡುವೆನು ನಾ, ನಾ ಸುಸ್ವರದ ಮೇಳ
ಮಧುರ ಸಾಮರಸ್ಯದಪಾರ ಸಾಗರವು ನಾ ಚಿತ್‌ಸುಖದ ಸಮ್ಮೇಳ.
ಗ್ರಾಹಕನಹ ಜ್ಞಾತೃ–ವಿಷಯಿ.
ಗ್ರಾಹ್ಯವಹ ಜ್ಞೇಯ–ವಿಷಯ.
ಅನಂತ ತರಂಗಗಳಂತೆನ್ನೊಳೀ
ದ್ವಂದ್ವ ಭಾವಗಳು ನಿರಂತರ ಘರ್ಷಿಸಿಹವು ;
ಚಿತ್ ಸಾಗರವಾದೆನ್ನೊಳೀ ಪ್ರಪಂಚವಿಹುದು ಬುದ್ಬುದವು

ಓಂ ! ಓಂ ! ಓಂ !

## The Civilized World's Spiritual Debt to India

## ಭಾರತದ ವಿಷಯಕ್ಕೆ ನಾಗರಿಕ ಜಗತ್ತಿನ ಆಧ್ಯಾತ್ಮಿಕ ಋಣ.

### ಅಮೆರಿಕಾದಲ್ಲಿ ತಾ 29-7-1904ರಲ್ಲಿ ಮಾಡಿದ ಉಪನ್ಯಾಸ.

ಸಂಪನ್ನ ಸ್ತ್ರೀಪುರುಷರೂಪದಲ್ಲಿರುವ ನನ್ನ ಆತ್ಮವೆ,

ಇವತ್ತು ಬೆಳಿಗ್ಗೆ ವಿದ್ಯಾರ್ಥಿಗಳನ್ನು ಕುರಿತು ಮಾತನಾಡುವಾಗ ಈ ತುಟಿಗಳಿಂದ ಒಂದು ಗಮನಾರ್ಹವಾದ ಹೇಳಿಕೆ ಹೊರಟಿತು : ತಾನು ಎಂದಾದರೂ ಹುಟ್ಟಿದ್ದೆನೆಂದು ರಾಮನು ಎಂದೂ ಸ್ಮರಿಸುವದಿಲ್ಲ. ನಿಜವಾಗಿಯೂ, ರಾಮನು ಎಂದೂ ಹುಟ್ಟಿಲ್ಲ, ಮತ್ತು ರಾಮನು ಎಂದಾದರೂ ಸಾಯಬಹುದೆಂದು ಜಗತ್ತಿನಲ್ಲಿರುವ ಯಾವ ಶಕ್ತಿಯೂ ರಾಮನನ್ನು ಒಪ್ಪಿಸಲಾರದು ಒಮ್ಮೆ ಭಾರತದಲ್ಲಿ, ದೊಡ್ಡದೊಂದು ಸಭೆಯಲ್ಲಿ ಭಾಷಣಮಾಡುತ್ತಾ ರಾಮನು, ರಾಜಕೀಯ ಲಕ್ಷಣದ ಗಂಧವಿದ್ದ ಒಂದು ವಿಷಯದ ಮೇಲೆ ಮಾತನಾಡಿದನು. ಆ ದಿನದ ಆ ಸಭೆಯಲ್ಲಿ ನ್ಯಾಯಾಧಿಪತಿಗಳೂ ವಕೀಲರೂ ಸರ್ಕಾರದ ಬಹಳ ಉನ್ನತ ಅಧಿಕಾರಿಗಳೂ ಇದ್ದರು. ಭಾಷಣವು ಮುಗಿದ ಮೇಲೆ ಅವರು ಖಾಸಗಿಯಾಗಿ ಏಕಾಂತದಲ್ಲಿ ಬಂದು "ಸ್ವಾಮಿಗಳೆ, ಮುಂದೆಂದೂ ಇಂಥಾ ಭಾಷಣವನ್ನು ಮಾಡಬೇಡಿ. ನಿಮ್ಮನ್ನು ಸೆರೆಮನೆಯಲ್ಲಿ ಒಗೆಯಬಹುದು, ಅಥವಾ ಗಲ್ಲಿಗೇರಿಸಬಹುದೆಂಬ ಭಯವಿದೆ." ಎಂದು ಎಚ್ಚರಿಸಿದರು. ಇದಕ್ಕೆ ರಾಮನು,

"ದಿವ್ಯಾತ್ಮರೆ ರಾಮನು ಸತ್ಯದ ಕ್ರಿಸ್ತನನ್ನು ಮೂವತ್ತು ಬೆಳ್ಳಿಯ ಚೂರುಗಳಿಗೆ ಮಾರುವ ಜೂಡಾಸ್ ಇಸ್ಕಾರಿಯಟ್‌ನ ಪಾತ್ರವನ್ನು ಎಂದೂ ಅಭಿನಯಿಸಲಾರನು ; ಏಕೆಂದರೆ, ಈ ಪ್ರಪಂಚದಲ್ಲಿ ರಾಮನ ಆತ್ಮವನ್ನು ಕತ್ತರಿಸುವಷ್ಟು ಹರಿತವಾದ ಖಡ್ಗವಿದೆಯೆಂದು ಯಾರೂ ರಾಮನನ್ನು ಒಪ್ಪಿಸಲಾರರು ; ಅಥವಾ ಎಂದೂ ಹುಟ್ಟಿಲ್ಲದ, ಎಂದೂ ಕೊಲ್ಲಲ್ಪಡಲಾರದ, ಓಂದೂ ಇಂದೂ ಮುಂದೂ ಎಂದೆಂದೂ ಒಂದೇರೂಪವಾಗಿರುವ ಅಮೃತಾತ್ಮನಾದ ರಾಮನನ್ನು ಗಾಯಗೊಳಿಸುವಷ್ಟು

ಬಲವಾದ ಆಯುಧವಿದೆಯೆಂದು ಯಾರೂ ನಂಬಿಸಲಾರರು. ಇದೇ ನಿಜವಾದ ನಾನು. ಅಸತ್ಯದೊಡನೆಯೂ ಅಧರ್ಮದೊಡನೆಯೂ ಅನ್ಯಾಯದೊಡನೆಯೂ ರಾಮನೇಕೆ ರಾಜಿಮಾಡಿಕೊಳ್ಳಬೇಕು ?" ಎಂದು ಉತ್ತರಿಸಿದನು.

ಇಂಥಾ ಬೆಚ್ಚಿಬೀಳಿಸುವ ಹೇಳಿಕೆಯನ್ನು ನೀವು ಎಂದೂ ಕೇಳಿರಲಾರಿರಿ ; ಮತ್ತು ಇದು ನಿಮಗೆ ವಿಲಕ್ಷಣವಾಗಿಯೂ ತೋರಬಹುದು. ಆದರೆ ಸತ್ಯಧರ್ಮಕ್ಕೆ ತೆರ ಬೇಕಾದ ಋಣದಂತೆ ರಾಮನು ಇದನ್ನು ಸಾರಿಹೇಳುವದಕ್ಕೆ ಬದ್ಧನಾಗಿದ್ದಾನೆ.

ಭಾರತದ ವಿಷಯಕ್ಕೆ ಈ ದೇಶದಲ್ಲಿ ಅನೇಕ ಕಥೆಗಳು ಜನ ಜನನಿತವಾಗಿವೆ. ಹಿಂದೊಂದು ದಿನ ಮಿನ್ನೀಪಾಲಿಸ್‌ನಲ್ಲಿ (Minneapolis) ಉಪನ್ಯಾಸಮಾಡಿದ ಮೇಲೆ ಮಹಿಳೆಯೊಬ್ಬಳು ರಾಮನಲ್ಲಿಗೆ ಬಂದು, " ಮಿಸ್ಟರ್ ಸ್ವಾಮಿ ! ನಿಮ್ಮ ದೇಶದಲ್ಲಿ ಹೆಂಗಸರು ತಮ್ಮ ಮಕ್ಕಳನ್ನು ಗಂಗೆಯಲ್ಲಿ ಮೊಸಳೆಗಳಿಗೆ ಇನ್ನೂ ಹಾಕು ವದಿಲ್ಲವೆ " ? ಎಂದು ಕೇಳಿದಳು. ರಾಮನು ಆಕೆಗೆ ಹೇಳಿದ್ದೇನೆಂದರೆ, " ಪುಣ್ಯ ದೇವತೆಯೆ ! (Blessed Divinity) ರಾಮನನ್ನೂ ಗಂಗೆಯಲ್ಲಿ ಎಸೆದಿದ್ದರು ; ಆದರೆ ನಿಮ್ಮ ಕಲ್ಪನಾಕಥೆಯ ಜೋನಾ (Jonah) ರೀತಿಯಲ್ಲಿ, ರಾಮನು ಈಜಿ ಕೊಂಡು ಬಂದುಬಿಟ್ಟನು."

ವಾಸ್ತವವಾಗಿಯೂ ರಾಮನು ಗಂಗಾನದಿಯ ಮೂಲದಿಂದ ಅದು ಕೆಳಗೆ ಮೈದಾನದಲ್ಲಿ ಪ್ರವೇಶಿಸುವವರೆಗೂ ಕಾಲಿನಿಂದ ನಡೆದುಹೋಗಿದ್ದಾನೆ. ರಾಮ ನೊಡನೆ ನಡೆದಾಡುವ ಇಷ್ಟವಿದ್ದವರಿಗೆ, ಈ ಸಣ್ಣದೇಹವು ದಿನಕ್ಕೆ 40 ಮೈಲಿಗಳು ನಡೆಯಬಲ್ಲದೆಂಬದು ಗೊತ್ತಿದೆ. ಗಂಗಾನದಿಯ ದಂಡೆಯುದ್ದಕ್ಕೂ ಒಂದು ತುದಿ ಯಿಂದ ಇನ್ನೊಂದು ತುದಿಯವರೆಗೆ ರಾಮನು ಅಲೆದಾಡಿರುವದರಿಂದ, ಅಷ್ಟು ನಿರ್ಮಲವೂ ಪರಿಶುದ್ಧವೂ ಪರಮಾವಧಿಯ ರಭಸಪೂರ್ಣವೂ ಭಯಂಕರವೇಗ ಶಾಲಿಯೂ ಆಗಿರುವ ಆ ಪವಿತ್ರ ಗಂಗೆಯಲ್ಲಿ, ವಿಜ್ಞಾನದ ಹೆಸರಿನಲ್ಲಿ, (ಆಣೆಮಾಡಿ) ಹೇಳಬೇಕೆಂದರೆ, ಮೊಸಳೆಗಳು ಎಂದೂ ಜೀವಿಸಿರುವದೇ ಸಾಧ್ಯವಿಲ್ಲವೆಂದು ರಾಮನು ಹೇಳುತ್ತಾನೆ. ಮೊಸಳೆಗಳೂ ಆ ಜಾತಿಯ ಬೇರೆ ಪ್ರಾಣಿಗಳೂ ಕೆಸರಿನ ಮತ್ತು ರಾಡಿಯಾದ ಮಲೆತ ಮಡುಗಳಲ್ಲಿಯೂ ಹೆಚ್ಚು ಸೆಳವು ಇಲ್ಲದ ಹಳ್ಳ, ಹೊನಲು ಹೊಳೆಗಳಲ್ಲಿಯೂ ಜೀವಿಸಿರಬಲ್ಲವೇ ಹೊರತು, ಅತಿಶಯ ಪ್ರವಾಹದ ಗಂಗೆಯಲ್ಲಿ ಒಂದು ಮೊಸಳೆಯನ್ನೂ ತೋರಿಸಲು ಸಾಧ್ಯವಿಲ್ಲ. ನಿರಾಧಾರವಾದ ಕಥೆಯನ್ನು

ಸೃಷ್ಟಿಸುವ ಮಹನೀಯರ ಮಧುರಹೃದಯವನ್ನು ಭಗವಂತನು ಅನುಗ್ರಹಿಸಲಿ! ಭಾರತದ ವಿಷಯಕ್ಕೆ ಇಂಥಾ ದಂತಕಥೆಗಳು ಈ ದೇಶದಲ್ಲಿ ಪ್ರಚಲಿತವಾಗಿವೆ.

ವಾಷಿಂಗ್‌ಟನ್‌ನ ಸೀಟ್ಲ್‌ಪಟ್ಟಣದಿಂದ ಹಿಂದೊಂದು ದಿನ ರಾಮನಿಗೆ ಒಂದು ಪತ್ರವು ಬಂದಿತು. ಒಂದು ವಿಲಕ್ಷಣ ಮೊಕದ್ದಮೆಯಲ್ಲಿ ಸಿಕ್ಕಿಕೊಂಡಿದ್ದ ಒಬ್ಬ ಹಿಂದುವು ಅದನ್ನು ಬರೆದಿದ್ದನು. ಒಂದುರಾತ್ರಿ ಅವನು ಒಂದು ಅಧ್ಯಾತ್ಮಸಂಸ್ಥೆಯ ಮಂದಿರದಿಂದ ದೂರದ ತನ್ನ ಮನೆಗೆ ಹೋಗುವದಕ್ಕಾಗಿ ಒಂದು ಬಾಡಿಗೆಯ ಕಾರ್‌ನಲ್ಲಿ ಹೊರಟನು. ಇನ್ನೊಬ್ಬ ತರುಣಿಯೂ ಅದೇ ಕಾರ್‌ನಲ್ಲಿ ಬಂದು ಕುಳಿತಳು. ಅವರು ಸ್ವಲ್ಪದೂರ ಕೂಡಿ ಪ್ರಯಾಣಮಾಡಿ, ಒಂದು ಸ್ಥಳದಲ್ಲಿ ಇಳಿದು, ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು. ಒಂದು ಗಂಟೆಯ ಮೇಲೆ ಒಬ್ಬ ಪೋಲೀಸ್‌ದಳದವನು ಬಂದು ಆ ಹಿಂದೂವಿದ್ಯಾರ್ಥಿಯನ್ನು ದಸ್ತಗಿರಿಮಾಡಿ, ಆರು ಗಂಟೆಗಳ ಕಾಲ ಬಂದೀಖಾನೆಯಲ್ಲಿ ಇಟ್ಟಿದ್ದನು. ಮರುದಿನ ಬೆಳಿಗ್ಗೆ ಅವನ ವಿಚಾರಣೆ ನಡೆಸಿದರು. ಆ ತರುಣಿಯ ಆರೋಪವೇನೆಂದರೆ,

"He looked at me with those 'piercing, black, spiritualistic eyes' and I felt as if I was going to be hypnotized and I was scared"

"ಅವನು ತನ್ನ ಆ 'ಇರಿಯುವ, ಕಪ್ಪು ಮಾಂತ್ರಿಕ ಕಣ್ಣುಗಳಿಂದ' ನನ್ನನ್ನು ದುರುಗುಟ್ಟಿ ನೋಡಿದನು; ಅವನು ನನ್ನ ಮೇಲೆ ತನ್ನ ವಶೀಕರಣವಿದ್ಯೆಯನ್ನು ಪ್ರಯೋಗಿಸುತ್ತಾನೋ ಎನ್ನುವಂತೆ ನಾನು ಗಾಬರಿಗೊಂಡೆ."

ಅಯ್ಯೋ ದೇವರೆ, ಈ ಬಡಪಾಯಿ ಹಿಂದೂಗಳು ಅಮೆರಿಕಾಕ್ಕೆ ಬರುವ ಮುಂಚೆ ತಮ್ಮ ಕಣ್ಣುಗಳನ್ನು ಎಲ್ಲಿ ಇಟ್ಟುಬರಬೇಕು; ಈ ದೇಶದ ಕೆಲವು ಭಾಗಗಳಲ್ಲಿ ಹಿಂದೂಗಳ ವಿಷಯವಾಗಿ ಇಂಥ ಹುಚ್ಚು ಭಾವನೆಗಳಿವೆ.

ಗುಣದ ದೃಷ್ಟಿಯಿಂದ ನೋಡುವದಾದರೆ, ಪ್ರಾಚೀನ ಭಾರತದ ಮಹದೈಶ್ವರ್ಯದ ವಿಷಯವಾಗಿ, ವಸ್ತುಸ್ಥಿತಿಯ ಸತ್ಯಾಂಶವನ್ನು ಒಂದಾದ ಮೇಲೆ ಒಂದರಂತೆ ನಿಮ್ಮೆದುರಿಗೆ ಬೇಕಾದಷ್ಟು ಇಡಬಹುದು. ಭಾರತದಲ್ಲಿ ಮನೆಗಳೆಲ್ಲಾ ಬಂಗಾರದಿಂದ ಮಾಡಲ್ಪಟ್ಟಿವೆಯೆಂದೂ ಬೀದಿಗಳೆಲ್ಲಾ ಬೆಳ್ಳಿಯವುಗಳೆಂದೂ

ಯುರೋಪಿನಲ್ಲಿ ವದಂತಿ ಹಬ್ಬಿತ್ತು. ಭಾರತದ ವಿಷಯವಾದ ಇಂಥಾ ವರ್ತಮಾನವನ್ನು ಕೇಳಿ, ಸಮಸ್ತ ಯುರೋಪ್‌ದೇಶಗಳೂ ಸಮಾಧಾನವನ್ನು ಕಳೆದುಕೊಂಡು, ಭಾರತದ ಭಾಗ್ಯವನ್ನು ಬಾಚಿಕೊಂಡು, ದೋಚಿಕೊಂಡು ಬರುವದಕ್ಕಾಗಿ, ಧಾವಿಸುವಂತಾಯಿತು ಭಾರತದೇಶವನ್ನು ಗೆದ್ದು, ಸ್ವಾಧೀನಪಡಿಸಿಕೊಂಡು, ಸುಲಿಗೆಮಾಡುವದಕ್ಕಾಗಿ, ಯುರೋಪಿನ ನಾನಾಭಾಗಗಳಿಂದ ಜನರು ಭಾರತಕ್ಕೆ ಬರಲು ತೊಡಗಿದರು. ಆಗ ಪ್ರಾಯಶಃ ಹಿಂದೂದೇಶವೆಂದು ಅನಂತರ ಇಂಡಿಯಾ ದೇಶವೆಂದು ಪ್ರಸಿದ್ಧವಾಗಿದ್ದ ಭಾರತಕ್ಕೆ ಕೆಲವರು ವಾಯುವ್ಯಮಾರ್ಗದಿಂದ–ಖೈಬರ್ ಪಾಸ್ ಕಣಿವೆಯಿಂದ–ಬಂದರು. ನಿಮ್ಮ ಕೊಲಂಬಸ್‌ನು ಮೊದಲು, ಹಿಂದೂದೇಶಕ್ಕೆ ಹೊಸದೊಂದು ಮಾರ್ಗವನ್ನು ಕಂಡುಹಿಡಿಯುವ ಪ್ರಯತ್ನದಲ್ಲಿ, ತಿಳಿಯದೆ, ತಪ್ಪಿ, ಎಡವಿ, ಆಕಸ್ಮಾತ್ ಈ ಪುಣ್ಯದೇಶವಾದ ಅಮೆರಿಕಾದ ಮೇಲೆ ಬಿದ್ದನು. ಹೀಗೆ, ಭಾರತವು ತನ್ನ ಭೌತಿಕ ಸಂಪತ್ತಿನ ವಿಷಯದಲ್ಲಿ ಕೂಡ, ಒಂದಾನೊಂದು ಕಾಲದಲ್ಲಿ, ಲೋಕವನ್ನೆಲ್ಲಾ ಮೋಹಗೊಳಿಸುತ್ತಿತ್ತು. ಭಾರತದಲ್ಲಿರುವ ದೇವಾಲಯಗಳ ವಿಷಯದಲ್ಲಿ ಪರ್ಷಿಯನ್ ಮತ್ತು ಗ್ರೀಕ್ ಲೇಖಕರು ಏನು ಬರೆದಿದ್ದಾರೆಂಬುದನ್ನು ಸ್ವಲ್ಪ ನೋಡಿ, ಎಂದು ರಾಮನು ಸುಮ್ಮನೆ ನಿಮ್ಮ ಗಮನವನ್ನು ಅತ್ತ ಸೆಳೆಯುತ್ತಾನೆ. ಒಂದು ದೇವಾಲಯದಲ್ಲಿ ಹತ್ತು ಸಹಸ್ರ ಪರಿಚಾರಕರನ್ನು ಅಲ್ಲಿಯ ಸೇವೆಯ ಉದ್ಯೋಗದಲ್ಲಿ ನೇಮಿಸಿಕೊಂಡಿದ್ದರು: ಮಾಳಿಗೆಗಳ ಒಳಮೈಯೆಲ್ಲಾ ರತ್ನಖಚಿತವಾಗಿದ್ದವು; ಅವುಗಳನ್ನು ಅಮೂಲ್ಯವಾದ ವಜ್ರಗಳಿಂದಲೂ ಪದ್ಮರಾಗ ಮಾಣಿಕ್ಯಗಳಿಂದಲೂ ಅಲಂಕರಿಸಿದ್ದರು. ಭಾರತದ ಸಂಪತ್ತಿನ ಸಂಬಂಧದ ಈ ಹೇಳಿಕೆಗಳನ್ನು ಪ್ರಮಾಣಸಿದ್ಧವಾಗಿ ತೋರಿಸುವದಕ್ಕೆ ನಿಮಗೆ ಕೆಲವು ಐತಿಹಾಸಿಕ ದಾಖಲೆಗಳು ಬೇಕಾದರೆ, ವಾರನ್‌ಹೇಸ್ಟಿಂಗ್ಸ್ ಮತ್ತು ಲಾರ್ಡ್‌ಕ್ಲೈವ್ ವಿಷಯವಾಗಿ ಎಡ್‌ಮಂಡ್‌ಬರ್ಕ್ ಮಾಡಿರುವ ಭಾಷಣವನ್ನು ಓದಿ, ಎಂದು ಮಾತ್ರ ರಾಮನು ಹೇಳುತ್ತಾನೆ.

ಭಾರತದ ಬೌದ್ಧಿಕ ಸಂಪತ್ತಿನ ವಿಷಯವಾಗಿ ರಾಮನು ಯಥೇಚ್ಛವಾಗಿ ಹೇಳಬಹುದು. ಭಾರತದಲ್ಲಿ ರಾಮನು, ಸ್ಮರಣಶಕ್ತಿಯ ಅತ್ಯಂತ ಆಶ್ಚರ್ಯಕರವಾದ ಸಾಮರ್ಥ್ಯವನ್ನು ಒಬ್ಬ ಮನುಷ್ಯನು ಪ್ರದರ್ಶನಮಾಡುವದನ್ನು ನೋಡಿದನು. ಆ ವಿಚಿತ್ರ ಪುರುಷನ ಸುತ್ತಲೂ ಒಂದು ಕೋಣೆಯಲ್ಲಿ, ಐವತ್ತು ಅರುವತ್ತು ಜನರು ಅರ್ಧಚಂದ್ರಾಕೃತಿಯಲ್ಲಿ ಕೂರಿಸಲ್ಪಟ್ಟರು. ಪ್ರತಿಯೊಬ್ಬನೂ ಯಾವ ಪುಸ್ತಕದಿಂದಲಾದರೂ ತನತನಗೆ ಇಷ್ಟವಾದ ಯಾವ ಭಾಗವನ್ನಾದರೂ ಆರಿಸಿಕೊಳ್ಳಬಹುದೆಂದು ತಿಳಿಸಿದನು. ಅವರಲ್ಲಿ ಕೆಲವರು ಇಂಗ್ಲಿಷ್ ಪುಸ್ತಕದಿಂದ, ಕೆಲವರು

ಅರಾಬಿಕ್ ಪುಸ್ತಕದಿಂದ, ಕೆಲವರು ಹಿಂದುಸ್ಥಾನಿ ಪುಸ್ತಕದಿಂದ, ಹೀಗೆ ಅವರವರಿಗೆ ಮನಸ್ಸಿಗೆ ಬಂದ ಪುಸ್ತಕಗಳಿಂದ ಇಚ್ಛೆಬಂದ ಭಾಗಗಳನ್ನು ತೆಗೆದುಕೊಂಡರು. ಆ ಸಾಹಸಿಯಾದ ಮನುಷ್ಯನು ಕುರುಡನಾಗಿದ್ದನು. ಸುತ್ತಲಿದ್ದ ಪ್ರತಿಯೊಬ್ಬ ಪರೀಕ್ಷಕರೂ ತಮ್ಮ ತಮ್ಮ ಗ್ರಂಥಭಾಗಗಳಲ್ಲಿ ಎಷ್ಟು ಪಂಕ್ತಿಗಳಿವೆ ಎಂಬದನ್ನು ಅವನಿಗೆ ಹೇಳಿದರು ಅವರಲ್ಲಿ ಪ್ರತಿಯೊಬ್ಬನೂ ಕ್ರಮವಾಗಿ ತನ್ನ ಭಾಗದ ಒಂದು ಪಂಕ್ತಿಯನ್ನು ಅವನಿಗೆ ತಿಳಿಸಿದನು. ಮೊದಲನಯ ಮನುಷ್ಯನು ತನ್ನ ಭಾಗದ ೩೦ ಸಾಲುಗಳಲ್ಲಿ ಮೊದಲನೆಯ ಸಾಲನ್ನು ಹೇಳಿದನು ಎಂದಿಟ್ಟುಕೊಳ್ಳೋಣ. ಎರಡನೆಯ ಮನುಷ್ಯನು ೧೩ ಸಾಲುಗಳಿದ್ದ ತನ್ನ ಭಾಗದಲ್ಲಿ 5ನೇ ಸಾಲನ್ನು ಕೊಟ್ಟನು. ಹೀಗೆ ಎಲ್ಲರ ಸರದಿಯೂ ಬಂದಿತು; ಮೊದಲನೆಯ ಸರದಿಯಲ್ಲಿ ೬೦ ಜನರದೂ ಮುಗಿದ ಮೇಲೆ, ಎರಡನೆಯ ಸುತ್ತು ಎಲ್ಲರಿಗೂ ಬಂದಿತು. ಆಗ ಪುನಃ ಒಬ್ಬೊಬ್ಬನೂ ತನ್ನದು ಇಷ್ಟನೇ ಸಾಲೆಂದು, ಒಂದೊಂದು ಸಾಲನ್ನು ಪಠಿಸಿದನು. ಹೀಗೆ ಅವ್ಯವಸ್ಥೆಯಾಗಿಯೂ ಕ್ರಮವಿಲ್ಲದೆಯೂ ಆ ಅಂಧಪ್ರವಾದಿಗೆ ಸಾಲುಗಳನ್ನು ತಿಳಿಸಿದರು ೧೩ನೇ ಸುತ್ತಿನಲ್ಲಿ, ತನ್ನ ಭಾಗದಲ್ಲಿ ೧೩ ಪಂಕ್ತಿಗಳಿವೆಯೆಂದು ತಿಳಿಸಿದ್ದ ಮನುಷ್ಯನಿಗೆ, ಆ ಪ್ರವಾದಿಯೆ "ಸ್ವಾಮಿ, ನೀವು ಇಂಥವರು, ನಿಮ್ಮ ಭಾಗವು ಮುಗಿದು ಹೋಯಿತು." ಎಂದು ಕೂಡಲೇ ಹೇಳಿದನು. ಎಲ್ಲರೂ ಹೇಳಿ ಮುಗಿಸಿದ ಎಲ್ಲಾ ಸಾಲುಗಳನ್ನೂ ಅವನು ತನ್ನ ಮನಸ್ಸಿನಲ್ಲಿಯೇ ಕ್ರಮಪಡಿಸಿ ಕೊಂಡು, ಪ್ರತಿಯೊಬ್ಬರ ಭಾಗವನ್ನೂ ಸರಿಯಾದ ಕ್ರಮದಲ್ಲಿ ಒಂದೂ ತಪ್ಪಿಲ್ಲದಂತೆ ಹೇಳಿ ತೋರಿಸಿದನು. ಆ ಇಡೀ ಮಂಡಲಿಯಲ್ಲಿ ಆ ೬೦ ಜನರಿಗೂ ಅವರವರ ಭಾಗಗಳನ್ನು ಕ್ರಮದಿಂದ ಆದ್ಯಂತವಾಗಿ ಒಂದೂ ತಪ್ಪಿಲ್ಲದಂತೆ ನಿರೂಪಿಸಿದನು.

ಈಗ, ಮನಶ್ಶಾಸ್ತ್ರಸಂಶೋಧನೆಗಳಲ್ಲಿ ರಾಮನು ಕೆಲವನ್ನು ಹೇಳಬಹುದು. ಭಾರತಕ್ಕೆ ಭೇಟಿ ಕೊಟ್ಟ ಒಬ್ಬ ಸ್ವಾಮಿಗಳು, ಐದು ನಿಮಿಷ, ಪ್ರಜ್ಞೆಯನ್ನು ಸ್ತಬ್ಧ ಗೊಳಿಸಿದ ಸ್ಥಿತಿಯಲ್ಲಿ ತಮ್ಮ ಮನಸ್ಸನ್ನು ಇಡಬಲ್ಲವರಾಗಿದ್ದರು. ಆದರೆ ಹಿಮಾಲಯ ದಲ್ಲಿ ಆರು ತಿಂಗಳು ಸತ್ತಂತೆ ಬಿದ್ದಿರಬಲ್ಲ ಅನೇಕ ಸ್ವಾಮಿಗಳನ್ನು ರಾಮನು ನೋಡಿದ್ದಾನೆ. ಆರು ತಿಂಗಳು ಮೃತಪ್ರಾಯವಾಗಿದ್ದು ಅನಂತರ ಪುನರುಜ್ಜೀವನ (Resurrection) ಹೊಂದುವ ಸಂದರ್ಭ ಇದು. ಇವರಲ್ಲಿ ಒಬ್ಬ ಸ್ವಾಮಿಗಳನ್ನು ಪೆಟ್ಟಿಗೆಯಲ್ಲಿ ಹಾಕಿ, ಭೂಮಿಯಲ್ಲಿ ಹುಗಿದು, ಆರುತಿಂಗಳ ಅನಂತರ ಅಗೆದು ಹೊರ ತೆಗೆದರು. ಹಾಗೆ ತೆಗೆದಾಗ, ತಮ್ಮ ಶರೀರದ ಮೇಲೆ ನಡೆಸಬೇಕೆಂದು ಅವರು ಮೊದಲೇ ತಿಳಿಸಿದ್ದ ಸಾಧನಕ್ರಮವನ್ನು ಜನರು ಆಚರಿಸಿದ ಮೇಲೆ, ಅವರಿಗೆ ಪುನಃ ಜೀವ ಬಂದಿತು.

ಒಬ್ಬ ಮನುಷ್ಯನು (ಕ್ರಿಸ್ತ) ಮೂರುದಿನಗಳ ತೋರಿಕೆಯ ಸಾವಿನಿಂದ ಪುನಃ ಜೀವಕ್ಕೆ ಬಂದನು ; ಸತ್ತ ಮೂರುದಿನಗಳ ಮೇಲೆ ಪುನರುತ್ಥಾನ (Resurrection) ಹೊಂದಿದನೆಂಬ ಆ ಮಹಿಮೆಯ ಆಧಾರದ ಮೇಲೆ ಪ್ರಾಯಶಃ ಸಮಸ್ತ ಯೂರೋಪ್ ದೇಶಗಳೂ ಆ ಮನುಷ್ಯನ ವ್ಯಕ್ತಿತ್ವದಲ್ಲಿ ತಮ್ಮ ಹೆಸರನ್ನೂ ನಂಬಿಕೆಯನ್ನೂ ಶ್ರದ್ಧಾಭಕ್ತಿಗಳನ್ನೂ ಭದ್ರವಾಗಿ ಕೀಲಿಸಿದ್ದಾರೆ. ಭಾರತದಲ್ಲಿ ಜನರು ಆರುತಿಂಗಳು ಸ್ಪಷ್ಟವಾದ ಮರಣದಿಂದ ಪುನರುಜ್ಜೀವನಹೊಂದುತ್ತಾರೆ ; ಆದರೆ ಆ ಸಾಧನೆಗೆ ಎಷ್ಟು ಬೆಲೆಯನ್ನು ಕೊಡಬಹುದೋ ಅಷ್ಟೇ ಬೆಲೆಯನ್ನು ಅದಕ್ಕೆ ಕೊಡುತ್ತೇವೆ. ಅದು ಅಧ್ಯಾತ್ಮವಲ್ಲ ; ಅದರಲ್ಲಿ ಆಧ್ಯಾತ್ಮಿಕತೆ ಏನೂ ಇಲ್ಲ. ಆದರೆ ಅದು ನೈಜವಾದ ದೈಹಿಕ ಮತ್ತು ಮಾನಸಿಕ ಸಾಧನಕ್ರಮದ — ಕೇವಲ ವೈಜ್ಞಾನಿಕ ಸಾಧನವಿಧಾನದ — ಫಲ. ಈ ಕಾಲದ ವೈದ್ಯರಿಗೆ ಇದರ ತತ್ತ್ವವೂ ರಹಸ್ಯವೂ ಗೊತ್ತಿಲ್ಲವಾದರೆ, ಅವರ ವೈದ್ಯ ವಿಜ್ಞಾನ ಶಾಸ್ತ್ರದ ಜ್ಞಾನದಲ್ಲಿ ಅವರು ಬೆಳೆಯ ಬೇಕು. ಆದರೆ ನಾವು ಅದಕ್ಕೆ ಎಷ್ಟು ಉಚಿತವೋ ಅಷ್ಟೇ ಬೆಲೆಯನ್ನು ಕೊಡುತ್ತೇವೆ.

ಇಲ್ಲಿ ಪುನಃ, ಈ ಪ್ರಶ್ನೆಯ ವಿಧಿಮುಖವನ್ನು ತೆಗೆದುಕೊಳ್ಳುವದಕ್ಕೆ ಮೊದಲು ಇದರ ನಿಷೇಧ ಮುಖದ ವಿಷಯದಲ್ಲಿ ಕೆಲವು ಮಾತುಗಳನ್ನು ಹೇಳಬೇಕೆಂದು ರಾಮನು ಪ್ರೇರಿತನಾಗಿದ್ದಾನೆ. ಇದರ ನಿಷೇಧಮುಖ ಇದು : ಇನ್ನೊಂದು ದಿನ, ಒಬ್ಬ ಸಭ್ಯ ಮನುಷ್ಯನು ಬಂದು, " ಸ್ವಾಮಿ, ನಿಮ್ಮ ವೇದಾಂತವನ್ನೂ ಧರ್ಮವನ್ನೂ ಹೇಳಿ, ಕೊರೆದು ಕೊರೆದು ನಮ್ಮನ್ನು ಸುಮ್ಮನೆ ಪೀಡಿಸಬೇಡಿ ಇದೆಲ್ಲಾ ಓಬೀರಾಯನ ಕಾಲದ್ದಲ್ಲವೆ ? ಈಗ ಇದರಿಂದೇನು ಉಪಯೋಗ ? " ಎಂದು ಕೇಳಿದನು. ಸತ್ಯವು ಗತಕಾಲದ್ದೂ, ಪರಿವರ್ತನೆ ಹೊಂದುವದೂ ಆಗ ಬಲ್ಲದೇನೋ ಎಂಬಂತೆ ಆಕ್ಷೇಪಿಸಿದನು. ರಾಮನು ಅವನಿಗೆ ಹೇಳಿದ್ದೇನೆಂದರೆ, " ಸಹೋದರ, ನಿಮ್ಮ ಅಮೆರಿಕಾ ಯೂರೋಪುಗಳ ಅಭಿವೃದ್ಧಿ--ಸಮೃದ್ಧಿಗಳಿಗೆ ಏನು ಕಾರಣ ಗೊತ್ತಿದೆಯೆ ? ಪುಣ್ಯಾತ್ಮ ! ಈ ಕಾರಣವನ್ನೂ ಅಮೆರಿಕಾದ ಧರ್ಮವೇನು ? ಎನ್ನುವದನ್ನೂ ಪರಿಶೀಲಿಸೋಣ. "

ಅವನು 'ನಿಮ್ಮ ಧರ್ಮವು ಹಳೆಯಕಾಲದ್ದೂ ಪ್ರಯೋಜನವಿಲ್ಲದ್ದೂ ಆಗಿದೆ' ಎಂದು ಟೀಕಿಸಿದ್ದರಿಂದ, ರಾಮನಿಗೆ ಸುಮ್ಮನಿರಲಾಗಲಿಲ್ಲ. ಅದು ಅವನನ್ನು ಸ್ವಲ್ಪ ಕೆರಳಿಸಿತು. ನಮ್ಮ ಧರ್ಮವು ಜೀವಂತವಾಗಿದೆ. ನಿಮ್ಮ ಧರ್ಮವು " Thou shalt not " 'ನೀನು ಹೀಗೆ ಮಾಡಬೇಡ, ನೀನು ಇದನ್ನು ಮಾಡಬೇಡ' ಎಂದು

ನಿಷೇಧದ ಮೇಲೇ ಸ್ವರಭಾರವನ್ನು ಹೇರುತ್ತದೆ, ಆದರೆ ನಮ್ಮ ಧರ್ಮವು ವಿಧಿ ಮುಖದ ಮೇಲೇ ಒತ್ತಾಯ ಹಾಕುತ್ತದೆ, ಅದಕ್ಕೇ ಮಹತ್ವಕೊಡುತ್ತದೆ ಅವನು ಅವನ ಧರ್ಮವನ್ನು, ಕೊರಳಿಗೆ ಕಟ್ಟಿಕೊಳ್ಳುವ ತಾಯಿತಿಯಂತೆ, ರಕ್ಷೆಯಂತೆ ಧರಿಸಿದ್ದಾನೆಂದು, ರಾಮನು ಅವನಿಗೆ ಹೇಳಿದನು. ಬಾಲಕನು ಒಂದು ಯಂತ್ರವನ್ನು ಕುತ್ತಿಗೆಗೆ ಕಟ್ಟಿಕೊಂಡು ತನ್ನ ಯಶಸ್ಸನ್ನು ಅದರ ಮಂತ್ರಶಕ್ತಿಗೂ, ಸೋಲನ್ನೂ ಕೊರತೆಯನ್ನೂ ತನ್ನ ಪ್ರಯತ್ನದ ನ್ಯೂನತೆಗೂ ಫಲವಾಗಿ ಹೊಂದಿಸಿ ಹೇಳುತ್ತಾನೆ. ಆದರೆ, ದಿವ್ಯಾತ್ಮರೆ, ನಿಮ್ಮ ಅಭಿವೃದ್ಧಿಗೂ ಹೆಮ್ಮೆಪಡುವ ನಾಗರಿಕತೆಗೂ ನಿಜವಾದ ಕಾರಣವು ಬೇರೆಯೇ ಇದೆ. ಅದು ಕ್ರೈಸ್ತಮತವಲ್ಲ ಅಥವಾ ರಾಮನು ಹೇಳುವಂತೆ ಚರ್ಚ್ (Churchianity) ಮತವಲ್ಲ ಈ ವಿಷಯವನ್ನು ಚಾರಿತ್ರಿಕವಾಗಿ ಪರೀಕ್ಷಿಸೋಣ. ಈ ಕ್ರೈಸ್ತಮತವು ಅಥವಾ ಚರ್ಚ್‌ಮತವು ಯೂರೋಪಿನಲ್ಲಿ ಪ್ರವೇಶಮಾಡುವದಕ್ಕೆ ಮೊದಲು, ಅಮೆರಿಕಾ ಯೂರೋಪ್‌ಗಳು ಇವತ್ತು ಇರುವಷ್ಟಾದರೂ ಅಭಿವೃದ್ಧಿಪಡೆದು ನಾಗರಿಕವಾಗಿದ್ದ ಅಥವಾ ಇನ್ನೂ ಹೆಚ್ಚಿನ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಬೇರೆ ದೇಶಗಳಿದ್ದವು. ಎಂಬದು ಚರಿತ್ರೆಯಿಂದ ಸ್ಪಷ್ಟವಾಗುತ್ತದೆ. ಈಜಿಪ್ಟಿನಲ್ಲಿ ನಾಗರೀಕತೆ ಇತ್ತು ; ಚೀಣಾದಲ್ಲಿ ನಾಗರೀಕತೆಯಿತ್ತು ; ಕೆಲವು ಅಂಶಗಳಲ್ಲಿ ಯೂರೋಪಿನ ಕಲೆಯು ಪ್ರಾಚೀನ ಈಜಿಪ್ಟ್ ಚೀಣಾಗಳ ಕಲೆಗಳ ಮಟ್ಟಕ್ಕೆ ಏರಿಲ್ಲ. ಪರ್ಷಿಯಾದಲ್ಲಿಯೂ ಗ್ರೀಸ್‌ನಲ್ಲಿಯೂ ರೋಂನಲ್ಲಿಯೂ ನಾಗರಿಕತೆಯಿದ್ದಿತು. ಭಾರತದ ವಿಷಯವನ್ನು ಏನೂ ಹೇಳುವದು ಬೇಡ, ಹೋಗಲಿ. ಈ ಎಲ್ಲಾ ದೇಶಗಳೂ ನಾಗರಿಕವಾಗಿದ್ದವಲ್ಲದೆ, 'ಹೀದನ್' ಕೂಡ ಆಗಿದ್ದವು. ಹೀದನ್ ಎಂದರೆ, ಕ್ರೈಸ್ತ, ಯಹೂದ್ಯ, ಅಥವಾ ಮಹಮ್ಮದೀಯ ಅಲ್ಲದ ವಿಧರ್ಮಿ. ಕ್ರೈಸ್ತಮತದ ಜೊತೆ ಜೊತೆಗೇ ನಾಗರಿಕತೆಯೂ ಭೌತಿಕ ವೃದ್ಧಿ–ಸಮೃದ್ಧಿಗಳೂ ಎಡೆಬಿಡದೆ ಯಾವಾಗಲೂ ಇದ್ದಿದ್ದರೆ–ಇರುವದಾದರೆ, ಕ್ರೈಸ್ತಮತವು ಇನ್ನೂ ಜನ್ಮವೆತ್ತದಿದ್ದಾಗ ಕೂಡ ಈಜಿಪ್ಟ್ ಮೊದಲಾದ ದೇಶಗಳು ಹೇಗೆ ನಾಗರಿಕವಾಗಿ ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿದ್ದವು ?–ದಯವಿಟ್ಟು ನಮಗೆ ಹೇಳಿ. ಅದೂ ಇರಲಿ. ಒಂದಾನೊಂದು ಕಾಲದಲ್ಲಿ, ಜಗತ್ತಿನಲ್ಲಿಯೇ ಸರ್ವೋತ್ತಮ ದೇಶವೆಂದು ಪ್ರಸಿದ್ಧವಾಗಿ ಅತ್ಯಂತ ಉಚ್ಛ್ರಾಯಸ್ಥಿತಿಯಲ್ಲಿದ್ದ ರೋಮನ್ ಸಾಮ್ರಾಜ್ಯವು ಪತನಹೊಂದುವದಕ್ಕೆ ಕಾರಣವೇನು ? ಕ್ರೈಸ್ತಧರ್ಮದ ಆಗಮನವೂ ಪ್ರವೇಶವೂ ಆ ಮಹಾಸಾಮ್ರಾಜ್ಯದ ಪತನಕ್ಕೆ ಕಾರಣವಾಯಿತೆಂದು ಜಗತ್ ಪ್ರಸಿದ್ಧವಾಗಿದೆ. ಆ ವಿಷಯದ ಮೇಲೆ ಗಿಬ್ಬನ್ (Gibbon) ಬರೆದಿರುವ ಚರಿತ್ರೆಯನ್ನು ಓದಿ ಅಥವಾ ಆ ವಿಷಯದ ಮೇಲೆ ಬೇರೆ ಯಾವ ಪ್ರಮಾಣಭೂತವಾದ ಚರಿತ್ರೆಯನ್ನಾದರೂ ಓದಿರಿ. ಕ್ರೈಸ್ತ ಧರ್ಮವನ್ನು ಪ್ರವೇಶಮಾಡಿಸುವದಕ್ಕೆ ಮೊದಲು ಗ್ರೀಸ್ ದೇಶವು ಎಷ್ಟೋ ಸುಖ

ಸಮೃದ್ಧಿಯಿಂದ ನಲಿಯುತ್ತಿದ್ದಿತು. ಆ ಬಹಳ ಹಿಂದಿನ ಒಳ್ಳೆಯ ದಿನಗಳ ' ಹೀದನ್' ಗ್ರೀಸ್ ದೇಶಕ್ಕೆ ಹೋಲಿಸಿದರೆ, ಇವತ್ತಿನ ಕ್ರೈಸ್ತ ಮತದ ಗ್ರೀಸ್‌ದೇಶವು ಯಾವ ಮೂಲೆಯದು ? ಪುನಃ ನಾವು ಹೇಳುವದೇನೆಂದರೆ, "ಬನ್ನಿ, ದಯವಿಟ್ಟು ಚರಿತ್ರೆಯನ್ನು ಓದಿ". ವಾಸ್ತವ ವಿದ್ಯಮಾನಗಳ ಮತ್ತು ಅಂಕೆ ಸಂಖ್ಯೆಗಳ ಸಮ್ಮುಖದಲ್ಲಿ ಅಮೆರಿಕಾ ಯುರೋಪ್‌ಗಳ ಯಶೋವೈಭವಗಳ ಕಾರಣವನ್ನು ಕ್ರೈಸ್ತಮತಕ್ಕೆ ಅಥವಾ ಚರ್ಚ್‌ಮತಕ್ಕೆ (Churchianity) ಅನ್ವಯಿಸುವದಕ್ಕೆ ಯಾರಿಗೂ ಅಲ್ಪವಾದರೂ ಅಧಿಕಾರವಿಲ್ಲ. ಯುರೋಪಿನಲ್ಲಿ ಕ್ರೈಸ್ತಧರ್ಮವು ಪ್ರವೇಶಮಾಡಿದ ಮೇಲೆ, ಒಂದು ಸಹಸ್ರವರ್ಷಗಳಿಗಿಂತಲೂ ಹೆಚ್ಚುಕಾಲ ಅಂಧಕಾರ ಯುಗವೆನ್ನಿಸಿಕೊಂಡ ಗಾಢಾಂಧಕಾರದ ಛಾಯೆಯೊಳಗೆ ಯುರೋಪ್ ದೇಶವು ಮುಗ್ಧವಾಗಿ ಮಲಗಿತ್ತು. ಆ ಕಾಲವು ಯುರೋಪಿಗೆ,-ಜಗತ್ತಿನಲ್ಲಿ ಎಂದೂ ಇಲ್ಲದಿರಬಹುದಾದ-ಅವರ್ಣನೀಯವಾದ ಮಂಕುಬಡಿದ, ಮೂಢ ನಂಬಿಕೆಯ, ಅಜ್ಞಾನದಶೆಯ ಕಾಲವಾಗಿತ್ತು. ಇದು ಯುರೋಪಿಗೆ ಕ್ರೈಸ್ತಧರ್ಮವು ಪ್ರವೇಶ ಮಾಡಿದ ಫಲವಾಗಿತ್ತು.

ಕೆಲವರು, "ಇಲ್ಲಿ ನೋಡಿ, ಮಾನವ ಕುಲದ ಸರ್ವತೋಮುಖವಾದ ಅಭಿವೃದ್ಧಿಗೆ ಕ್ರೈಸ್ತಧರ್ಮವು ಸಹಾಯಮಾಡದೆ ಉಳಿಸಿರುವದೇನು ? ಪ್ರಪಂಚದಲ್ಲಿ ಕ್ರೈಸ್ತಧರ್ಮವೇ ಜನಾಂಗಗಳನ್ನು ನಾಗರಿಕರನ್ನಾಗಿ ಮಾಡುವದರಲ್ಲಿ ಅತ್ಯಂತ ಶ್ರೇಷ್ಠವಾದ ಸಾಧನವಾಗಿದೆ.'' ಎನ್ನಬಹುದು. ಹೌದು. ನಿಜ ; ಪಾಷಂಡವಾದವನ್ನು ಅಡಗಿಸಲು ರೋಮನ್ ಕ್ಯಾಥೊಲಿಕ್ ಕ್ರೈಸ್ತ ಮತದವರು ನಿಯಮಿಸಿದ್ದ ಇನ್‌ಕ್ವಿಸಿಷನ್ಸ್ (Inquisitions) ಎಂಬ ವಿಚಾರಣಾತಂತ್ರದ ಕ್ರೂರ ಶಿಕ್ಷೆಗಳು, ಮಾಟಗಾತಿಯರೆಂದು ಆರೋಪಿತರಾದವರನ್ನು ಜೀವಸಹಿತವಾಗಿ ಸುಡುವದು, ವೈಜ್ಞಾನಿಕ ವಿಚಾರಕರನ್ನು ಕ್ರೂರಹಿಂಸೆಗೆ ಒಳಪಡಿಸುವದು-ಇವೇ ಮೊದಲಾದ ಅತ್ಯಾಚಾರಗಳನ್ನು ಪ್ರಾರಂಭಿಸಿದ ಕ್ರೈಸ್ತಮತವು ನಾಗರಿಕತೆಗೆ ಪ್ರಬಲಸಾಧನವೇ ಸರಿ ! ಎಲ್ಲೆಲ್ಲಿ ವಿಜ್ಞಾನವು ಮುಂದುವರಿಯಲು ಬಯಸಿತೋ ಅಲ್ಲಲ್ಲಿ ಕ್ರೈಸ್ತಮತವು ಸದಾಸಿದ್ಧವಾಗಿ ಓಡಿಬಂದು, ಅದನ್ನು ಕುತ್ತಿಗೆ ಹಿಚುಕಿ, ಉಸಿರು ಕಟ್ಟಿಸಿ ಕೊಂದಿತು. ಅವನ ವೈಜ್ಞಾನಿಕ ಅಭಿಪ್ರಾಯಗಳೇ ಕಾರಣವಾಗಿ ಬ್ರುನೋ (Bruno) ಮಹಾಶಯನು ಕ್ರೈಸ್ತರಿಂದ ಸಜೀವವಾಗಿ ಸುಡಲ್ಪಟ್ಟನು. ಬೆನ್‌ಜಾನ್‌ಸನ್ (Benjohnson) ಮತ್ತು ಕಾರ್ಲೈಲ್‌ರ (Carlyle) ವಿಷಯದಲ್ಲಿ ಕ್ರೈಸ್ತಮತವು ಹೇಗೆ ನಡೆದುಕೊಂಡಿತು, ಎಂಬದು ನಿಮಗೆ ಗೊತ್ತೇ ಇದೆ. ಅಮೆರಿಕಾ-

ಯೂರೋಪ್‌ಗಳ ಏಳಿಗೆಗೆ ಸಹಾಯಕವಾದ ನಿಜವಾದ ಕಾರಣಗಳೇನು, ಎನ್ನುವದನ್ನು ಪರೀಕ್ಷಿಸೋಣ.

ಪವಿತ್ರಾತ್ಮರೆ, (Blessed ones,) ಕ್ರೈಸ್ತದೇವಾಲಯಗಳಲ್ಲಿ ಉಪದೇಶ ವೇದಿಕೆಗಳಿಂದ ಪಾದ್ರಿಗಳು ಉಪದೇಶಮಾಡಿದ ಘೋರ ನರಕದ ದಳ್ಳುರಿಯ ಭಯವು ನಿಮ್ಮನ್ನು ಉದ್ಧರಿಸಲಿಲ್ಲ ಮತ್ತೇನೆಂದರೆ ಸ್ಟೀಂಎಂಜಿನ್, ವಿದ್ಯುಚ್ಛಕ್ತಿ, ಪ್ರಿಂಟಿಂಗ್ ಪ್ರೆಸ್‌ಗಳು, ಸ್ಟೀಂಷಿಪ್‌ಗಳು(ಉಗಿನೌಕೆಗಳು)ರೈಲ್ವೇವ್ಯವಸ್ಥೆಗಳು, ಇವೇ ಮೊದಲಾದುವುಗಳಿಂದ ಉತ್ಪನ್ನವಾಗುವ ಬೆಂಕಿಯು ನಿಮ್ಮನ್ನು ಭೌತಿಕವಾಗಿ ಉದ್ಧಾರಮಾಡಿತು, ಮೇಲೆತ್ತಿತು. ನೀವು ಭೌತಿಕ ಅಭಿವೃದ್ಧಿಯಲ್ಲಿ ಯಂತ್ರ ತಂತ್ರಗಳಿಗೆ ಋಣಿಯಾಗಿದ್ದೀರಿ. ಇಂಗ್ಲೆಂಡಿನ ಡಾಕ್ಟರ್ ಜಾನ್‌ಸನ್ ಹೇಳಿರುವ ದೇನೆಂದರೆ,

"If a boy tells you that he peeped through this window while as a matter of fact, he peeped through the other, whip him!"

"ವಾಸ್ತವವಾಗಿಯೂ ಇನ್ನೊಂದು ಕಿಟಕಿಯಿಂದ ಇಣಿಕಿ ನೋಡಿ, ಈ ಕಿಟಕಿ ಯಿಂದ ಹಣಿಕಿ ನೋಡಿದೆ, ಎಂದು ಒಬ್ಬ ಹುಡುಗನು ನಿಮಗೆ ಹೇಳಿದರೆ, ಅವನನ್ನು ಚಾವುಟಿಯಿಂದ ಬಾರಿಸಿರಿ."

ಆದ್ದರಿಂದ ರಾಮನು ನಿಮಗೆ ಹೇಳುವದೇನೆಂದರೆ, ನಿಜವಾದ ಕಾರಣವನ್ನು ಕಡೆಗಂಡು ಬೇರೆ ಕಾರಣವನ್ನು ಹೇಳಿದರೆ, ನೀವು ಯಾವ ಸಂಭಾವನೆಗೆ ಅರ್ಹರು? (ಖಂಡನೆಯು) ಚಾವುಟಿಯು ಏಟಿಗಲ್ಲವೆ? ಹೀಗೆ ನಿಮ್ಮ ಭೌತಿಕಪ್ರಗತಿಗೆ, ರಾಮನು ಹೇಳಿರುವಂತೆ, ವೈಜ್ಞಾನಿಕ ಸಂಶೋಧನೆಗಳೂ ವೈಜ್ಞಾನಿಕ (ಯಂತ್ರ) ನಿರ್ಮಾಣಗಳೂ ನಿಜವಾದ ಕಾರಣಗಳೇ ಹೊರತು ನಿಮ್ಮ ಕ್ರೈಸ್ತ ಧರ್ಮವಲ್ಲ. ಈ ವೈಜ್ಞಾನಿಕ ಶೋಧಗಳಲ್ಲಿಯೂ ನಿರ್ಮಾಣಗಳಲ್ಲಿಯೂ ಯಾವದೊಂದನ್ನೂ ಯಾವನೊಬ್ಬ ಕ್ರೈಸ್ತ ಪುರೋಹಿತನಾಗಲಿ, ಪಾದ್ರಿಯಾಗಲಿ, ಬಿಷಪ್ ಆಗಲಿ, ಆರ್ಚ್ ಬಿಷಪ್ಪಾಗಲಿ, ರೆವರೆಂಡ್ ಡಾಕ್ಟರಾಗಲೀ ಮಾಡಲಿಲ್ಲ ಜೇಮ್ಸ್ ವಾಟ್ (James Watt), ಜಾರ್ಜ್ ಸ್ಟೀವನ್‌ಸನ್ (George Stephenson), ಬೆಂಜಾಮಿನ್ ಫ್ರ್ಯಾಂಕ್ಲಿನ್ (Benjamin Franklin), ಥಾಮಸ್

ಎಡಿಸನ್ (Thomas Edison) ಮೊದಲಾದ ಮಹನೀಯರಲ್ಲಿ ಯಾರೊಬ್ಬರು ಕ್ರೈಸ್ತ ವೇದದ (Gospel) ಉಪದೇಶಕನಾಗಿದ್ದರೆ, ಆಗ ನಿಮ್ಮ ಭೌತಿಕ ಅಭಿವೃದ್ಧಿಗೂ ಯಶಸ್ಸಿಗೂ ಕ್ರೈಸ್ತ ವೇದವು ಕಾರಣವಾಯಿತು, ಎನ್ನಬಹುದಾಗಿತ್ತು. ಆದರೆ, ಒಬ್ಬ ಕ್ರೈಸ್ತ ಪಾದ್ರಿಯಿಂದಾದ ಒಂದೇ ಒಂದು ಶೋಧವೆಂದರೆ, ಬಂದೂಕಿನ ಹಾರುಮದ್ದಿನ ಶೋಧವು. ಕ್ರೈಸ್ತ ವೇದದ ಉಪದೇಶಕರ ದಿವ್ಯವಾದ ವರದಹಸ್ತಗಳಿಂದ ಅಥವಾ ದಿವ್ಯವಾದ ಮಿದುಳುಗಳಿಂದ ಎಂದಾದರೂ ಅನುಗ್ರಹ ವಾಗಿ ಬಂದ ವೈಜ್ಞಾನಿಕ ಶೋಧವೆಂದರೆ, ಭವ್ಯವಾದ ಬಂದೂಕಿನ ಹಾರುಮದ್ದು !

ಹೀಗೆ, ನಿಮ್ಮ ಅಭಿವೃದ್ಧಿಗೆ ನಿಮ್ಮ ಚರ್ಚ್‌ಯಾನಿಟಿಯಾಗಲಿ, ಅಧಿಕಾರ ಯುತವಾದ ಸಿದ್ಧಾಂತವಾಗಲಿ ಕಾರಣವಲ್ಲವೆಂಬದನ್ನು ನೀವು ಚೆನ್ನಾಗಿ ಮನಗಾಣ ಬೇಕು. ಅಮೆರಿಕಾ ಯುೂರೋಪುಗಳ ಭೌತಿಕ ಅಭಿವೃದ್ಧಿಯು ಹೇಗೆ ಅಮೆರಿಕಾ ಯುೂರೋಪುಗಳ ದಿವ್ಯಧರ್ಮವಲ್ಲವೋ ಹಾಗೇ ಭಾರತದ ಭೌತಿಕ ಪತನಕ್ಕೆ ಹಿಂದೂ ಧರ್ಮ ಕಾರಣವಲ್ಲ. ಅಥವಾ ಭೌತಿಕಪತನವು ಭಾರತದ ಧರ್ಮವಲ್ಲ. ನಿಮ್ಮ ಅಭಿವೃದ್ಧಿಗಾಗಲಿ, ಅಥವಾ ಯಾವದೇಶದ ಅಭಿವೃದ್ಧಿಗಾಗಲಿ ನಿಜವಾದ ಕಾರಣವು ನಿಜವಾದ ಆಧ್ಯಾತ್ಮಿಕತೆಯೆಂದು ರಾಮನು ಸಮರ್ಥಿಸುತ್ತಾನೆ ; ಮತ್ತು ನಿಜವಾದ ಆಧ್ಯಾತ್ಮಿಕತೆಯನ್ನು ಅದು ರೂಪಿಸಲ್ಪಟ್ಟಿರುವ ಅಥವಾ ಪ್ರದರ್ಶಿಸಲ್ಪಟ್ಟಿ ರುವ ಆಕೃತಿಗಳು, ಕೃತಿಗಳು, ಸಿದ್ಧಾಂತಗಳು, ಮತಗಳು, ಪದ್ಧತಿಗಳು ಮೊದಲಾದ ಹೊರಗಿನ ಉಡಿಗೆ ತೊಡಿಗೆಗಳ ವೇಷದಿಂದ ರಾಮನು ಯಾವಾಗಲೂ ಬೇರ್ಪಡಿಸಿ ನೋಡುತ್ತಾನೆ ಆದ್ದರಿಂದ, ಕ್ರೈಸ್ತದೇವಾಲಯಗಳ ವೇದಿಕೆಯ ಉಪದೇಶಗಳೂ ಆ ಉಪದೇಶಗಳಿಂದ ಪ್ರೋತ್ಸಾಹಿಸಲ್ಪಡುತ್ತಿರುವ ಆಚಾರ ಸಂಪ್ರದಾಯದ ಪ್ರಭಾ ವಗಳೂ ಇದ್ದರೂ ಕೂಡ ಪ್ರಚಾರದಲ್ಲಿಯೂ ಪ್ರಯೋಗದಲ್ಲಿಯೂ ಇರುವ ಸ್ವಜವೂ ಶುದ್ಧವೂ ಆದ ಆಧ್ಯಾತ್ಮಿಕತೆಯೇ ಅಮೆರಿಕಾದ ಅಭಿವೃದ್ಧಿಗೆ ನಿಜವಾದ ಕಾರಣವೆಂದು ರಾಮನು ಹೇಳುತ್ತಾನೆ. 'Thou shalts' and 'Thou shalt nots' ಹೀಗೆ ಮಾಡು ' 'ಹೀಗೆ ಮಾಡಬೇಡ ' ಎಂಬ ವಿಧಿ-ನಿಷೇಧಗಳು ನಿಮ್ಮ ಬೆಳ ವಣಿಗೆಗೆ, ನಿಮ್ಮ ಆಧ್ಯಾತ್ಮಿಕ ಬೆಳವಣಿಗೆಗೆ ಸಹಾಯಮಾಡಿಲ್ಲ; ಅಡ್ಡಿಯನ್ನೇ ಮಾಡಿವೆ. ಕ್ಯಾಂಟ್ ಮಹಾಶಯನು ಅವುಗಳನ್ನು "Categorical imperatives" 'ಆತ್ಮಸಾಕ್ಷಿಯ ಆದೇಶವೇ ನೀತಿಯ ಪರಮಪ್ರಮಾಣ ಎಂಬ ತತ್ತ್ವ ; ನಿರುಪಾಧಿಕವಿಧಿ'. ಎಂದು ಕರೆದಿದ್ದಾನೆ. ಆಜ್ಞಾರ್ಥಕ ಕ್ರಿಯಾರ್ಥವನ್ನು ಸೂಚಿ ಸುವ ಧಾತುರೂಪ, ಮಧ್ಯಮ ಪುರುಷದಲ್ಲಿರುವ ಹೇಳಿಕೆ, ನಿರೂಪಣೆ ; ಇಂಥಾ

ಎಲ್ಲಾ ವಿಧಿ–ನಿಷೇಧಾತ್ಮಕ ನಿರೂಪಣೆಗಳೂ ನಿಮ್ಮ ಸ್ವಚ್ಛಂದತೆಯನ್ನು ನಿಯಮಿತ ಮಾಡಿ, ಸ್ವಾತಂತ್ರ್ಯವನ್ನು ಅಪಹರಿಸುತ್ತವೆ.

ಈ ನಿಜವಾದ ಆಧ್ಯಾತ್ಮಿಕತೆಯು ಎಲ್ಲಿಂದ ಉದಯವಾಯಿತು ? ಪ್ರಪಂಚದ ಇತಿಹಾಸದಲ್ಲಿ ನಿಜವಾದ ಅಧ್ಯಾತ್ಮವು ಎಲ್ಲಿಂದ ಹೊರಚಿಮ್ಮಿತು ? ಇದನ್ನೇ ರಾಮನು ನಿಮಗೆ ಹೇಳಬೇಕಾಗಿದೆ, ನಿಜವಾದ ಅಧ್ಯಾತ್ಮವನ್ನೇ ನಾವು ವೇದಾಂತವೆನ್ನುತ್ತೇವೆ. ಈ ಪ್ರಪಂಚದಲ್ಲಿರುವ ಎಲ್ಲಾ ಮತಧರ್ಮಗಳೂ ಒಂದೊಂದು ವ್ಯಕ್ತಿತ್ವದ ಆಧಾರದ ಮೇಲೆ ನಿಂತಿವೆ. ಕ್ರೈಸ್ತಮತವು ಕ್ರಿಸ್ತನ ಹೆಸರಿನ ಸುತ್ತಲೂ ಕನ್‌ಫ್ಯೂಷಿಯಾ ಧರ್ಮವು ಕನಫ್ಯೂಷಿಯಸ್‌ನ ಹೆಸರಿನ ಸುತ್ತಲೂ ಬೌದ್ಧಮತವು ಬುದ್ಧನ ಹೆಸರಿನ ಸುತ್ತಲೂ ಜೊರೋಸ್ಟ್ರಿಯಾ ಧರ್ಮವು ಜೊರೋಸ್ಟರ್ ಹೆಸರಿನ ಸುತ್ತಲೂ ಮುಹಮ್ಮದೀಯ ಧರ್ಮವು ಮುಹಮ್ಮದನ ಹೆಸರಿನ ಸುತ್ತಲೂ ಕೀಲಿಸಿ ತಿರುಗುತ್ತಿವೆ. ವೇದಾಂತ ಶಬ್ದಕ್ಕೆ ಅಂತಿಮ ವಿಜ್ಞಾನ ಎಂದು ಹೆಸರು ; ಅದು ಆತ್ಮವಿಜ್ಞಾನ ; ರಸಾಯನ ವಿಜ್ಞಾನ ಶಾಸ್ತ್ರವನ್ನು ಯಾವ ದೃಷ್ಟಿಯಿಂದ ವ್ಯಾಸಂಗಮಾಡುತ್ತೀರೋ ಅದೇ ಪರೀಕ್ಷಾ–ಪ್ರಯೋಗಾದಿ ಮನೋಧರ್ಮದಿಂದ ವೇದಾಂತವನ್ನೂ ಅಭ್ಯಾಸ ಮಾಡಬೇಕು. ರಸಾಯನ ವಿಜ್ಞಾನದ ಒಂದು ಕೃತಿಯನ್ನು, ರಸಾಯನಶಾಸ್ತ್ರಜ್ಞರಾದ ಲವಾಯ್‌ಸೀರ್ (Lavoisier), ಬಾಯ್ಲ್ (Boyle), ರೆನಾಲ್ಡ್ಸ್ (Reynolds) ಡೇವಿ (Davy) ಮೊದಲಾದವರ ಅಧಿಕಾರ–ಪ್ರಮಾಣಗಳ ಮೇಲೆ ಓದುವದಿಲ್ಲ, ರಸಾಯನ ಶಾಸ್ತ್ರದ ಒಂದು ಕೃತಿಯನ್ನು ತೆಗೆದುಕೊಂಡು, ಪ್ರತಿಯೊಂದನ್ನೂ ನೀವೇ ವಿಶ್ಲೇಷಣೆಮಾಡುತ್ತೀರಿ, ವಿಭಜಿಸಿ ನೋಡುತ್ತೀರಿ. ನೀರು, ಜಲಜನಕ, ಆಮ್ಲಜನಕ ಗಳಿಂದ ರಚನೆಯಾಗಿದೆಯೆಂದು ರಾಮನು ತನ್ನ ಸ್ವಂತ ಪ್ರಯೋಗಗಳ ಆಧಾರದ ಮೇಲೆ ಅರಿತಿದ್ದಾನೆ ; ಬೇರೆಯವರ ಅಧಿಕಾರ-ಆಧಾರಗಳ ಮೇಲೆ ನಂಬುವದಿಲ್ಲ, ನಂಬಿಲ್ಲ. ನೀರನ್ನು ವಿದ್ಯುತ್‌ಕಾರ್ಯದಿಂದ ವಿಘಟನೆಮಾಡಿದ್ದರಿಂದ ವಿದ್ಯುತ್‌ವಿಶ್ಲೇಷಣೆಯಿಂದ (Electrolysing) ಅವನದನ್ನು ಅರಿತಿದ್ದಾನೆ. ಇದರ ಪ್ರಕಾರ, ಒಂದು ಅಧಿಕಾರದ ಆಧಾರದ ಮೇಲೆ ನಿಂತಿರುವ ಧರ್ಮವು ಧರ್ಮವೇ ಅಲ್ಲ. ನಿಮ್ಮ ಸ್ವಂತ ಅನುಭವದ ಅಧಿಕಾರವನ್ನು ಆಧರಿಸಿರುವದು ಯಾವದೋ ಅದು ಮಾತ್ರ ಸತ್ಯ. ಈ ತಿಳಿವಳಿಕೆಯನ್ನು ಇಟ್ಟುಕೊಂಡು, ನೀವು ಓದುವದಕ್ಕಾಗಿ ರಾಮನು ಆ ವಿಷಯದ ಮೇಲೆ ಹಲವು ಪುಸ್ತಕಗಳನ್ನು ಸಲಹೆಮಾಡಬಹುದು ; ಅವನ್ನೇ ನೀವು ಓದುವದು ಮಾತ್ರವಲ್ಲ, ಆ ವಿಷಯವನ್ನು ನೀವು ಅಗಿದು. ನುಣ್ಣಗೆ ಅಗಿದು, ಹಲ್ಲಿನಿಂದ ಅರೆದರೆದು, ಅರಗಿಸಿಕೊಂಡು, ಮನಸ್ಸಿನಲ್ಲಿಯೇ ತಿರುವಿ ತಿರುವಿಹಾಕಿ, ಚಿಂತನಮಾಡಿ, ನಿದಿಧ್ಯಾಸನಮಾಡಿ, ಸಾರವನ್ನು ಹೀರಿಕೊಳ್ಳಬೇಕು, ವೇದಾಂತಶಬ್ದವನ್ನು ನೀವು

ಈ ಮನೋಧರ್ಮದಿಂದ ವೀಕ್ಷಿಸಬೇಕೆಂದು, ಸಮೀಕ್ಷಿಸಬೇಕೆಂದು, ಅಭ್ಯಾಸಮಾಡಬೇಕೆಂದು ರಾಮನು ಬಯಸುತ್ತಾನೆ. ವೇದಾಂತದಲ್ಲಿ ನೀವು ನಂಬಿಕೆಯನ್ನು ಭದ್ರವಾಗಿ ಇಡಬೇಕೆಂದು ರಾಮನು ಹೇಳುವದಿಲ್ಲ; ಯಾರನ್ನೂ ಮತಾಂತರಗೊಳಿಸುವದಕ್ಕೆ ರಾಮನು ಇಚ್ಛಿಸುವದಿಲ್ಲ. ಆದರೆ ಈ ಶಬ್ದದ ಅರ್ಥವನ್ನು ಸ್ಪಷ್ಟಗೊಳಿಸಿದ ಮೇಲೆ, ಈ ವೇದಾಂತವು, ನಿಜವಾದ ಅಧ್ಯಾತ್ಮವು, ಜಗತ್ತಿನ ಮಹೋನ್ನತ ಪರ್ವತಗಳಾದ ಹಿಮಾಲಯದಿಂದ ಹರಿದು ಬರುತ್ತಿದೆಯೆಂದು ರಾಮನು ಹೇಳುತ್ತಾನೆ. ಭವ್ಯವಾದ ಪ್ರವಾಹಗಳೂ ಸುಂದರವಾದ ನದಿಗಳೂ ಹಿಂಗಾರು ಮುಂಗಾರು ಮಳೆಗಾಳಿಗಳೂ ಆ ಉನ್ನತ ಪರ್ವತಗಳಿಂದ ಹರಿಯುವಂತೆ ನೈಜವಾದ ಅಧ್ಯಾತ್ಮವು ಭಾರತದಿಂದ ಪ್ರವಹಿಸಿದೆ. ಪೌರಸ್ತ್ಯ ಭಾಷಾ–ಸಾಹಿತ್ಯ ತತ್ತ್ವಶಾಸ್ತ್ರಾದಿಗಳ ಯೂರೋಪಿಯನ್ ಪಂಡಿತರು ಕ್ರಿಸ್ತಪೂರ್ವ ನಾಲ್ಕುಸಹಸ್ರ ವರ್ಷಗಳ ಹಿಂದೆ ವೇದಾಂತಗ್ರಂಥಗಳನ್ನು ಬರೆದಿದ್ದಾರೆಂದು ಹೇಳುತ್ತಾರೆ. ಈ ಗ್ರಂಥಗಳ ಮೂಲವನ್ನು ಕಂಡುಹಿಡಿಯುವ ಪ್ರಯತ್ನದಲ್ಲಿ, ಈ ಜನರು, ಕ್ರಿಸ್ತಪೂರ್ವ ನಾಲ್ಕು ಸಹಸ್ರ ವರ್ಷಗಳ ಹಿಂದೆ ಮಾತ್ರ ಈ ಜಗತ್ತು ಸೃಷ್ಟಿಯಾಗಿವೆಯೆಂಬ ಮೂಢನಂಬಿಕೆಯ ಭಾರವಾದ ತೂಕದ ಕೆಳಗೆ ಹೆಣಗಾಡುತ್ತಿದ್ದಾರೆ. ಆದರೆ ರಾಮನು ವೇದಗಳ ವಿದ್ಯಾರ್ಥಿಯಾಗಿ, ಈ ಜನರ ಹೇಳಿಕೆಗಳು ತಪ್ಪೆಂಬದಕ್ಕೆ ವೇದಗಳ ಒಳಗಿನ ಪ್ರಮಾಣಭೂತ ನಿದರ್ಶನಗಳನ್ನು ಕೊಡಬಹುದು. ರಾಮನು ಒಂದು ವಿಶ್ವವಿದ್ಯಾನಿಲಯದಲ್ಲಿ ಹೆಚ್ಚು ಪ್ರೌಢಗಣಿತಶಾಸ್ತ್ರದ (Higher Mathematics) ಪ್ರೊಫೆಸರಾಗಿದ್ದನು. ರಾಮನು ಗತಿವಿಜ್ಞಾನಶಾಸ್ತ್ರದಲ್ಲಿಯೂ (Dynamics) ವಿಭಜನಾತ್ಮಕ ಜಲಸಮಸ್ಥಿತಿ ವಿಜ್ಞಾನದಲ್ಲಿಯೂ (Analytical hydrostatics), ಖಗೋಳಶಾಸ್ತ್ರದಲ್ಲಿಯೂ (Astronomy) ತ್ರಿಕೋನ ಗಣಿತ ಶಾಸ್ತ್ರದಲ್ಲಿಯೂ (Trigonometry) ಉಪನ್ಯಾಸಮಾಡಿದ್ದಾನೆ, ವೇದಗಳನ್ನು ಓದುತ್ತಿರುವಾಗ ರಾಮನು, ಆಗಿನ ಕಾಲದಲ್ಲಿ ಅಂತರಿಕ್ಷದಲ್ಲಿದ್ದ ನಕ್ಷತ್ರಗಳ ಸ್ಥಿತಿಯು ಮತ್ತು ಸ್ಥಿರನಕ್ಷತ್ರಪುಂಜಗಳಾದ ಮೇಷಾದಿ ರಾಶಿಗಳ ವಿಚಾರಗಳು ಪದೇ ಪದೇ ಬಂದಿರುವದನ್ನು ಗಮನಿಸಿದ್ದಾನೆ. ವೇದಗಳಲ್ಲಿ, ಮೃಗಶಿರನಕ್ಷತ್ರವನ್ನೊಳಕೊಂಡ ಒರೈಅನ್ (Orion) ಎಂಬ ನಕ್ಷತ್ರಪುಂಜದ ಮತ್ತು ಇತರ ರಾಶಿಗಳ ಆಗಿನ ಕಾಲದಲ್ಲಿ ಗುರುತಿಸಿರುವ ಸ್ಥಿತಿಗಳನ್ನು ಕೊಟ್ಟಿದೆ. ಅದರ ಆಧಾರದ ಮೇಲೆ ಗಣಿತಶಾಸ್ತ್ರದ ಲೆಕ್ಕಾಚಾರವನ್ನು ಮಾಡಿ, ಕಂಡು ಹಿಡಿದು, ಈ ವೇದಗಳು, ಅವುಗಳಲ್ಲಿ ಕೊನೆಯ ಪಕ್ಷ ಕೆಲವುಭಾಗಗಳಾದರೂ ಕ್ರಿಸ್ತ ಪೂರ್ವ ಎಂಟು ಸಹಸ್ರ ವರ್ಷಗಳ ಹಿಂದೆ, ಬರೆಯಲ್ಪಟ್ಟಿವೆಯೆಂದು ರಾಮನು ವೇದಗಳೊಳಗಿನ ವೈಜ್ಞಾನಿಕವೂ ಗಣಿತಶಾಸ್ತ್ರದ ನಿಷ್ಕೃಷ್ಟತೆಯುಳ್ಳದೂ ಆದ ಆಧಾರಗಳನ್ನು ಕೊಡುತ್ತಾನೆ. ನಾವು ಒಂದು ಚೂರು

ನಾರಿನ ರಟ್ಟು ಬಟ್ಟೆಯ ಚಿತ್ರಪಟದಲ್ಲಿ (Canvas) ಕೊಟ್ಟಿರುವ ಆಧಾರವನ್ನು ನಂಬೋಣವೆ, ಅಥವಾ ನಕ್ಷತ್ರಗಳ ರೂಪವಾದ ಲಿಪಿಗಳ ಮೂಲಕವೂ ಗಣಿತಶಾಸ್ತ್ರದ ಸೂತ್ರಗಳ ಮೂಲಕವೂ ದೇವರೇ ನೇರವಾಗಿ ಕೊಟ್ಟಿರುವ ಪ್ರಮಾಣಗಳನ್ನು ನಂಬೋಣವೆ? ಇದೊಂದು ಮಹತ್ತಾದ ವಿಷಯ; ಆದರೆ ರಾಮನು ಈ ಅಲ್ಪ ಕಾಲದಲ್ಲಿ, ನಿಮ್ಮ ಎದುರಿಗೆ, ಆ ಸಮಗ್ರ ವ್ಯವಸ್ಥೆಯ ರೂಪರೇಖೆಗಳಲ್ಲಿ ಕೆಲವು ವಿಶಾಲವಾದ ಎಲ್ಲೆಗುರುತುಗಳ ಪ್ರಧಾನ ವಿಷಯಗಳನ್ನು ಮಾತ್ರ ಇಡಬಲ್ಲನು, ತಿಳಿಸಬಲ್ಲನು

ಪ್ರಾಚೀನ ಗ್ರೀಕರು ಬರೆದಿರುವ ಭಾರತದ ವಿಚಾರವನ್ನು ನಿಮ್ಮಲ್ಲಿ ಯಾರಾದರೂ ಓದಿದ್ದೀರಾ ? ಸುಮಾರು ಕ್ರಿಸ್ತಪೂರ್ವ 400 ವರ್ಷಗಳ ಹಿಂದೆ, ಗ್ರೀಕರು ಭಾರತಕ್ಕೆ ಬರಲು ತೊಡಗಿದರು ಚರಿತ್ರೆಯು ಇದನ್ನು ತೋರಿಸುತ್ತದೆ; ಮತ್ತು ಈ ಗ್ರೀಕರು ತಮ್ಮ ಭಾರತದರ್ಶನದ ಕಥನವನ್ನು ಬರೆದಿಟ್ಟಿದ್ದಾರೆ ರಾಮನು ಅವುಗಳಲ್ಲಿ ಕೆಲವನ್ನು ಓದಿದ್ದಾನೆ. ಆಗಿನ ಕಾಲದಲ್ಲಿ, ಭಾರತದ ಜನರು ಆದರ್ಶ ರೀತಿಯ ಜನರೆಂದು ಕರೆಯಲ್ಪಟ್ಟಿದ್ದರೆಂದು, ಆ ಗ್ರೀಕರ ಲೇಖನದಿಂದ ತಿಳಿಯ ಬರುತ್ತದೆ. ಹಿಂದೂಗಳು ಎಂದೂ ಸುಳ್ಳು ಹೇಳುತ್ತಿರಲಿಲ್ಲ, ಎಂದು ಗ್ರೀಕರು ಹೇಳಿದ್ದಾರೆ. ಸ್ತ್ರೀಯರು ಪುರುಷರೊಡನೆ ಪೂರ್ಣ ಸ್ವಾತಂತ್ರ್ಯವುಳ್ಳವರಾಗಿದ್ದರು. ಅವರು ಪುರುಷರೊಡನೆ ಸಮಾನತೆಯ ಸ್ಥಾನಮಾನಗಳನ್ನು ಪಡೆದು ಜೀವಿಸಿದ್ದರು. ಪರ್ವತಗಳಲ್ಲಿಯೂ ಅರಣ್ಯಗಳಲ್ಲಿಯೂ ಶ್ರೇಷ್ಠವೂ ಆಶ್ಚರ್ಯಕರವೂ ಆದ ವಿಶ್ವವಿದ್ಯಾನಿಲಯಗಳು ದೇಶದ ಮೇಲೆಲ್ಲಾ ಹರಡಿ ಉಚ್ಛ್ರಾಯ ಸ್ಥಿತಿಯಲ್ಲಿದ್ದವು. ಅವರು ಭಾರತದೇಶದ ಭೌತಿಕ ಸಂಪತ್ತನ್ನು ಉಜ್ಜ್ವಲರೀತಿಯಿಂದ ವರ್ಣಿಸುತ್ತ ಹೋಗಿದ್ದಾರೆ; ಈ ದೇಶದಲ್ಲಿ ಅಪನಂಬಿಕೆ, ಅಶ್ರದ್ಧೆ, ಅವಿಶ್ವಾಸ, ವಿಶ್ವಾಸಘಾತ, ವಂಚನೆ ಎನ್ನುವ ಗುಣಗಳೂ ಅಪವಿತ್ರತೆಯೂ ಜನರಿಗೆ ಸಂಪೂರ್ಣವಾಗಿ ಗೊತ್ತೇ ಇರಲಿಲ್ಲವೆಂದು ಅವರು ಹೇಳುತ್ತಾರೆ. ಅವರು ಜನರ ತತ್ತ್ವಶಾಸ್ತ್ರದ ವಿಚಾರವಾಗಿಯೂ ಕೆಲವು ವಿವರಗಳನ್ನು ಕೊಟ್ಟಿದ್ದಾರೆ. ಅವರು ಇವರಿಂದ ಬಹಳ ಆಕರ್ಷಿತರಾದರು. ಪ್ರಾಚೀನ ಭಾರತದ ಕೆಲವು ಮಹಾಗ್ರಂಥಗಳಲ್ಲಿ ಸ್ತ್ರೀಯರಿಂದ ಬರೆಯಲ್ಪಟ್ಟಿರುವ ಪುಸ್ತಕಗಳನ್ನು ಇವತ್ತಿಗೂ ಕಾಣುತ್ತೇವೆ. ಭಾರತದಲ್ಲಿ ನಡೆದ ಅತ್ಯಂತ ಮಹತ್ತಾದ ಸರ್ವಧರ್ಮಸಮ್ಮೇಳನಗಳ ಒಂದು ಸಭೆಯಲ್ಲಿ, ಜಗತ್ತಿನ ಅತ್ಯಂತ ಶ್ರೇಷ್ಠ ತತ್ತ್ವಜ್ಞಾನಿಗಳಲ್ಲಿ ಒಬ್ಬರಾದವರು ಮಾತನಾಡಿದಾಗ ಭಾರತದ ಮಹಿಳೆಯೊಬ್ಬರು ಅಧ್ಯಕ್ಷಿಣಿಯಾಗಿದ್ದರು. ಅತ್ಯಂತ ಭವ್ಯವೂ ಅತ್ಯಂತ ಶ್ರೇಷ್ಠವೂ ಅತ್ಯಂತ ಆಶ್ಚರ್ಯಕರವೂ ಆದ ಮಂತ್ರಗಳಲ್ಲಿ ಕೆಲವು, ಭಾರತ ಮಹಿಳೆಯರ ಪುಣ್ಯ ಹೃದಯಗಳಿಂದ ಹೊರಬಂದಿವೆ.

"Truth is first conceived of woman"
"ಸ್ತ್ರೀಯು (?) ಸತ್ಯವು ಮೊದಲು ಗ್ರಹಿಸಲ್ಪಟ್ಟಿತು"

ಎಂದು ವಾಲ್ಟ್ ವ್ಹಿಟ್‌ಮನ್ (Walt whitman) ಹೇಳಿರುವದನ್ನು ರಾಮನು ಒಪ್ಪುತ್ತಾನೆ.

ಭಾರತದಲ್ಲಿಯ ಎಲ್ಲಾ ಸಂಸ್ಥೆಗಳ ಪತನಕ್ಕೆ ಕಾರಣವೇನು ? ಭಾರತದಲ್ಲಿ ಮೂರ್ತಿಪೂಜೆಯನ್ನು ತಂದವರಾರು ? ಭಾರತದ ಭೂಮಿಯಲ್ಲಿ ಮೂರ್ತಿಪೂಜೆಯು ಸ್ವಾಭಾವಿಕವಲ್ಲ ; ಸ್ಥಳೀಯವೂ ದೇಶೀಯವೂ ಅಲ್ಲ, ಭಾರತೀಯರು ವಿಗ್ರಹಾರಾಧಕರೆಂದು ಇವತ್ತು ಕ್ರೈಸ್ತಜನಾಂಗವು ಹೇಳಬಹುದು. ಆದರೆ, ಭಾರತದಲ್ಲಿರುವ ವಿಪುಲವಾದ ವೈದಿಕ ಸಾಹಿತ್ಯದಲ್ಲಿಯಾಗಲಿ, ಪದ್ಯಕಾವ್ಯಗಳಲ್ಲಿ ಆಗಲಿ, ವ್ಯಾಕರಣಶಾಸ್ತ್ರ, ಗಣಿತಶಾಸ್ತ್ರ, ಶಿಲ್ಪಶಾಸ್ತ್ರ, ಸಂಗೀತಶಾಸ್ತ್ರ. ಮೊದಲಾದವುಗಳಲ್ಲಿ ಆಗಲಿ ಯಾವದೊಂದರಲ್ಲಿಯೂ ಮೂರ್ತಿಪೂಜೆಗೆ ರಾಮನು ಅತ್ಯಲ್ಪಸೂಚನೆಯನ್ನೂ ಕಂಡಿಲ್ಲ. ಹಾಗಾದರೆ, ಮೂರ್ತಿಪೂಜೆಯು ಭಾರತದೊಳಕ್ಕೆ ಎಲ್ಲಿಂದ–ಯಾರಿಂದ– ಬಂದಿತು ? ಅದು ಭಾರತಧರ್ಮದ ಭಾಗವೇನಲ್ಲ. ಈ ಮೂರ್ತಿಪೂಜೆಯು ಭಾರತದಲ್ಲಿ ಕ್ರೈಸ್ತರ ಮೂಲಕ ಬಂದಿತು. ಜನರು ಚರಿತ್ರೆಯ ಆ ಪುಟಗಳನ್ನು ಓದಿಲ್ಲ ; ಆದರೆ ರಾಮನ ಈ ಸಂಶೋಧನೆಯು ಮುದ್ರಿತ ಪುಸ್ತಕ ರೂಪದಲ್ಲಿ ಸಹ ಬರುತ್ತದೆ ಕ್ರಿಸ್ತಶಕ ನಾಲ್ಕನೆ ಮತ್ತು ಐದನೆ ಶತಮಾನಗಳ ಮಧ್ಯೆ ಭಾರತಕ್ಕೆ ಕೆಲವು ರೋಮನ್‌ಕ್ಯಾಥೊಲಿಕ್ ಕ್ರೈಸ್ತರು ಬಂದಿರುವದನ್ನೂ ಇವತ್ತಿಗೂ ಅವರ ಪರಂಪರೆಯವರು ಇಲ್ಲಿಯೇ ಇರುವದನ್ನೂ ರಾಮನು, ಹೊರಗಿನ ಮತ್ತು ಒಳಗಿನ ಸಾಕ್ಷ್ಯಾಧಾರಗಳಿಂದ ಸಿದ್ಧಮಾಡಿ ಕೊಡುತ್ತಾನೆ. ಅವರು ಸಂತಥಾಮಸ್ ಕ್ರೈಸ್ತರು (St. Thomas Christians) ಎಂಬ ಹೆಸರಿನಿಂದ ದಕ್ಷಿಣ ಭಾರತದಲ್ಲಿ ವಾಸ ಮಾಡುತ್ತಿದ್ದಾರೆ. ಈ ಕ್ರೈಸ್ತ ಜನರು ಮೂರ್ತಿಪೂಜೆಯನ್ನು ಭಾರತದಲ್ಲಿ ಪ್ರಾರಂಭಿಸಿದರು. ಅನಂತರ, ಇನ್ನು ಒಳಗಿನ ಸಾಕ್ಷ್ಯಾಧಾರವು ಬೇಕಾದರೆ, ವಿಗ್ರಹಾರಾಧನೆಯ ಅತ್ಯಂತ ಪ್ರಭಾವಶಾಲಿವಾದಿಗಳೂ ಪ್ರೋತ್ಸಾಹಕರೂ ಆದ ರಾಮಾನುಜರಿಗೆ, ಸಂತ ಥಾಮಸ್ ಕ್ರೈಸ್ತರಲ್ಲಿ ಒಬ್ಬನು ಗುರುವಾಗಿದ್ದನು, ಎಂಬದನ್ನು ರಾಮನು ಪ್ರಮಾಣ ಪೂರ್ವಕವಾಗಿ ತೋರಿಸಿಕೊಡುತ್ತಾನೆ. ಯಾವ ಮೊಟ್ಟಮೊದಲನೆಯ ವಿಗ್ರಹದ ಎದುರಿಗೆ ಈ ಜನರು ದೀರ್ಘದಂಡ ನಮಸ್ಕಾರ ಹಾಕಿದರೋ ಅಥವಾ ತಲೆಬಾಗಿದರೋ ಆ ವಿಗ್ರಹಕ್ಕೆ ಪೌರ್ವಾತ್ಯದೇಶದ ಜನರ ಮುಖಭಾವವೇ ಇಲ್ಲ ಎನ್ನುವದನ್ನು ರಾಮನು ಬಲ್ಲನು. ಪುಣ್ಯಾತ್ಮರೆ। ಮೂರ್ತಿ

ಪೂಜೆಯ ಮೂಲವು ಕ್ರೈಸ್ತಮತವೇ ಸರಿ, ಎನ್ನುವದನ್ನು ಇದು ತೋರಿಸುತ್ತದೆ. ನೀವೇ ಅಲ್ಲಿಗೆ ತೆಗೆದುಕೊಂಡು ಹೋದಿರಿ. ಕ್ರೈಸ್ತ (ಮಿಷನರಿ) ಮತ ಪ್ರಚಾರಕರು ಇವತ್ತು ಮೂರ್ತಿ ಪೂಜೆಯನ್ನು ದೂಷಿಸುತ್ತಾ ಭಾರತಕ್ಕೆ ಬರುತ್ತಾರೆ; ಅವರು ಒಂದು ಕಡೆ ನಿಂದಿಸುತ್ತಾ ಅದನ್ನು ಕೆಳಗೆಳೆಯುವಂತೆ ಮಾಡಿ, ಇನ್ನೊಂದು ಕಡೆ ಹಣ ಸಂಪಾದನೆಗಾಗಿ, ಅದೇ ವಿಗ್ರಹಗಳನ್ನು ಮಾಡಿ ಮಾರುತ್ತಾರೆ. ಈ ಜನರನ್ನು ನೀವು ಮತಾಂತರಗೊಳಿಸಬೇಕೆಂಬ ರೀತಿ ಇದು. ನೀವೇ ತಯಾರುಮಾಡಿ, ಜನರಿಗೆ ಮಾರುವ ಈ ವಿಗ್ರಹಗಳು, ನಿಮ್ಮ ಕ್ರೈಸ್ತವೇದವಾದ ಸುವಾರ್ತೆಯ ಉಪದೇಶಕ್ಕಿಂತಲೂ ಹೆಚ್ಚು ಪ್ರಭಾವಶಾಲಿಯಾದುವಲ್ಲವೆ? ಅದನ್ನು ನೀವೇ ತೀರ್ಮಾನಿಸಬೇಕು.

ಮತ್ತೆ ಆ ದೇಶದಲ್ಲಿ ಹೆಂಗಸರು ಮುಖದ ಮೇಲೆ ಮುಸುಕುಹಾಕಿಕೊಳ್ಳುವ ಪರದೆಯ ಪದ್ಧತಿಯನ್ನೂ ಅಲ್ಲಿಯ ಹೆಂಗಸರ ಗುಲಾಮಗಿರಿಯನ್ನೂ ಜನರು ನಿಮಗೆ ಬಹಳವಾಗಿ ಹೇಳುತ್ತಾರೆ. ಆ ಪದ್ಧತಿಯ ಮೂಲದ ವಿಷಯವಾಗಿಯೂ ಒಂದೆರಡು ಮಾತುಗಳನ್ನು ಹೇಳಬಹುದು. ಒಂದು ಕಾಲದಲ್ಲಿ ಭಾರತವನ್ನು ಆಳಿದ ಮಹಮ್ಮದೀಯರು ಬಹಳ ನೀತಿಗೆಟ್ಟವರೂ ದುರಾಚಾರಿಗಳೂ ಆಗಿದ್ದರು. ಮದುವೆಯಾಗದಿರುವ ಹಿಂದೂ ಕನ್ಯೆಯರನ್ನು ಕಂಡಾಗ, ಅವರ ಶೀಲವನ್ನು ಕೆಡಿಸುವದರಲ್ಲಿ ಮಹಮ್ಮದೀಯರು ಬಹಳ ಉತ್ಸಾಹಶಾಲಿಗಳಾಗಿದ್ದರು. ಇದರಿಂದ ಹಿಂದೂ ಹೆಂಗಸರು ಕ್ರೂರವಾದ ಪಾಶವೀ ಅತ್ಯಾಚಾರಗಳಿಗೆ ಬಲಿಯಾಗುತ್ತಿದ್ದರು. ಹಿಂದೂಗಳು ಈ ಪೈಶಾಚಿಕ ಪೀಡೆಯನ್ನು ತಪ್ಪಿಸಿಕೊಳ್ಳುವದಕ್ಕಾಗಿ, ಹೆಣ್ಣಿಗೆ ಪ್ರೌಢಾವಸ್ಥೆಯ ಆರಂಭಕಾಲದೊಳಗೇ – ಪ್ರೈನೆರೆಯುವದರೊಳಗೇ – ಮದುವೆ ಮಾಡಬೇಕೆಂಬ ಪದ್ಧತಿಯನ್ನು ಆಚರಣೆಗೆ ತಂದರು. ಆಗ ಪುನಃ, ವಿಜಯೋನ್ಮತ್ತರಾದ ಮಹಮ್ಮದೀಯರು ಹಿಂದೂಸ್ತ್ರೀಯರ ಮುಖವನ್ನು ನೋಡಿದೊಡನೆ ಅವರನ್ನು ಅಪಹಾರ ಮಾಡುತ್ತಿದ್ದುದರಿಂದ, ಅವರು ಮುಖ ತೋರಿಸಿ ಬೀದಿಯಲ್ಲಿ ನಡೆದಾಡುವಂತಿರಲಿಲ್ಲ. ಇದರ ದೆಸೆಯಿಂದ, ಮಹಮ್ಮದೀಯರು ಆಳುತ್ತಿರುವ ಎಲ್ಲಾ ದೇಶಗಳಲ್ಲಿಯೂ ರೂಢಿಯಲ್ಲಿರುವ ಮುಖಪರದೆಯ ಪದ್ಧತಿಯನ್ನು ಹಿಂದೂ ದೇಶದಲ್ಲಿಯೂ ಆಚರಣೆಗೆ ತಂದರು. ಅಲ್ಲಿ, ಹಿಂದೂ ರಾಜರ ಆಳಿಕೆಯ ಕಾಲದಲ್ಲಿ, ಈ ಪದ್ಧತಿಯು ಎಂದೂ ಇರಲಿಲ್ಲ.

ಪ್ರೇಮಾತ್ಮರೆ, ನಿಮ್ಮ ಶರೀರದಲ್ಲಿರುವ ರಕ್ತಮಾಂಸಗಳೇ ಹಿಂದೂ ಜನರ ಶರೀರಗಳಲ್ಲಿಯೂ ಇವೆ. ನಿಮ್ಮ ಭಾಷೆಗೆ ಅವರ ಭಾಷೆಯೇ

ಮೂಲವಾಗಿತ್ತು. ಅವರ ಮುಖವು ಮಾತ್ರ ಪೂರ್ವದೇಶೀಯ ಲಕ್ಷಣವುಳ್ಳದು. ನಿಮ್ಮ ಸ್ವಂತ ರಕ್ತಮಾಂಸದವರಾಗಿ, ನಿಮ್ಮೊಡನೆ ಅವರು ಒಂದಾಗಿದ್ದಾರೆ. ಈ ದೇಹದ ಬಣ್ಣವು ಕಪ್ಪಾಗಿದ್ದರೆ, ಇದರ ಚರ್ಮವು ಹದಮಾಡಲ್ಪಟ್ಟಿದೆ ಎಂದು ಮಾತ್ರ ಅರ್ಥ; ಆದರೆ ಈ ದೇಹದ ಮುಚ್ಚಲ್ಪಟ್ಟಿರುವ ಭಾಗಗಳು ನಿಮ್ಮ ದೇಹದಷ್ಟೇ ಬೆಳ್ಳಗಿವೆ.

ಯೂರೋಪಿನ ಜಗತ್ತು ತನ್ನ ಅಧ್ಯಾತ್ಮಕ್ಕೂ ನಾಗರಿಕತೆಗೂ ಗ್ರೀಸ್‌ದೇಶಕ್ಕೆ ಋಣಿಯಾಗಿದೆ ಎಂಬುದನ್ನು ವಿವೇಕವುಳ್ಳ ಯಾವ ಮನುಷ್ಯನೂ ನಿರಾಕರಿಸಲು ಪ್ರಯತ್ನಪಡಲಾರನು. ಆದರೆ, ದಿವ್ಯಾತ್ಮರೆ, ಗ್ರೀಕರ ವಿಷಯವೇನು ? ಭಾರತದ ತತ್ತ್ವಶಾಸ್ತ್ರದ ಜೊತೆ ಜೊತೆಗೆ ನೀವು ಎಂದಾದರೂ ಪ್ಲೇಟೋ, ಸಾಕ್ರೇಟಿಸ್, ಪೈಥಾಗೊರಸ್ (Plato, Socrates Pythagoras) ಇವರ ತತ್ತ್ವಶಾಸ್ತ್ರಗಳನ್ನು ಹೋಲಿಸಿ ಓದಿದ್ದೀರಾ ? ನೀವು ಓದಿದ್ದರೆ, "ಆತ್ಮದ ಅಮೃತತ್ವ, ಜೀವಾತ್ಮನ ಜನ್ಮಾಂತರಪ್ರಾಪ್ತಿ" ಮೊದಲಾದ ವಿಚಾರವಾದಗಳು ಹಿಂದೂ ತತ್ತ್ವಶಾಸ್ತ್ರದ ಸಂತಾನ–ಫಲಗಳು ಎಂಬುದನ್ನು ನೀವು ಎಂದೂ ಅಲ್ಲಗಳೆಯಲು ಸಾಧ್ಯವಿಲ್ಲ. ಗ್ರೀಕರು ಎಲ್ಲಾ ಸತ್ಯವನ್ನು ಹಿಂದೂಗಳಿಂದ ಪಡೆಯಲಿಲ್ಲ ಎಂಬುದನ್ನು ಮಾತ್ರ ಒಪ್ಪಿಕೊಳ್ಳಬೇಕು. ಇವತ್ತು ನಾವು ಅರಿಸ್ಟೋಟಲ್‌ನ ತರ್ಕಶಾಸ್ತ್ರವನ್ನು ಹಿಂದೂಗಳ ತರ್ಕಶಾಸ್ತ್ರದೊಡನೆ ಹೋಲಿಸಿದರೆ, ಅವನ ತರ್ಕವು ಬಹಳ ದೋಷಯುಕ್ತವಾದುದೆಂಬದನ್ನು ಕಾಣುತ್ತೇವೆ. ಗ್ರೀಕರು ಮಾಡುವ ನಿಗಮನ ತರ್ಕವಿಧಾನವನ್ನು (Syllogism) ಹಿಂದೂಗಳು ಮಾಡುವ ವಿಧಾನದ ಜೊತೆಗೆ ತುಲನೆ ಮಾಡಿ ನೋಡಿದರೆ, ಅರಿಸ್ಟೋಟಲ್‌ನ ತತ್ತ್ವಶಾಸ್ತ್ರದಲ್ಲಿ ದೋಷವಿರುವದನ್ನು ಕಾಣುತ್ತೀರಿ. ಹಿಂದೂಗಳ ನ್ಯಾಯಶಾಸ್ತ್ರ ಗ್ರಂಥಗಳಲ್ಲಿ ಅನುಮಾನದಿಂದ ಪಡೆಯುವ ಅನುಗಮನ ತರ್ಕ (Inductive logic), ಮತ್ತು ನಿಗಮನ ತರ್ಕ (Deductive logic), ಎಂಬ ತರ್ಕದ ಎರಡು ಬಗೆಗಳನ್ನು ಹೇಳಿದೆ ; ಆದರೆ ಗ್ರೀಕರೂ ಯೂರೋಪಿಯನರೂ ನಿಗಮನ ವಿಧಾನವನ್ನು (Deductive methods) ಮಾತ್ರ ಹೊರತರುತ್ತಾರೆ. ಈ ವಿಚಾರವನ್ನು ವಿಲಿಯಂ ಜೋನ್ಸ್ ಸತ್ಯವೆಂದು ತೋರಿಸುತ್ತಾನೆ. ಅವನು ಹೇಳುವದೇನೆಂದರೆ,

"When we compare the writings of the Greeks with the great,–clear, comprehensive system of the philosophy of the Hindus of India, we can not help thinking that the

Greeks derived their knowledge from the fountain head of Indian Philosophy."

"ನಾವು ಗ್ರೀಕರ ಗ್ರಂಥಗಳನ್ನು ಇಂಡಿಯಾದ ಹಿಂದೂಗಳ ಮಹತ್ತೂ ಸ್ಪಷ್ಟವೂ ವ್ಯಾಪಕವೂ ಆದ ತತ್ತ್ವಶಾಸ್ತ್ರದೊಡನೆ ಹೋಲಿಸಿದರೆ, ಗ್ರೀಕರು ತಮ್ಮ ತತ್ತ್ವಜ್ಞಾನವನ್ನು ಇಂಡಿಯಾದ ತತ್ತ್ವಶಾಸ್ತ್ರದ ಮೂಲ ಉಗಮ ಸ್ಥಾನದಿಂದ ಪಡೆದರೆಂದು ಭಾವಿಸದಿರಲು ಸಾಧ್ಯವಿಲ್ಲ".

ನಿಮ್ಮ ಹಳೆಯ ಒಡಂಬಡಿಕೆಯಿಂದ ಹೊಸ ಒಡಂಬಡಿಕೆಯನ್ನು ಬೇರ್ಪಡಿಸಿ ವ್ಯತ್ಯಾಸವನ್ನು ತೋರಿಸುವ ವೈಶಿಷ್ಟ್ಯವು ಯಾವದು? ಅದು ಈ ರೀತಿಯ ಹೇಳಿಕೆಗಳು :

"I and my Father are one"
"ನಾನು ಮತ್ತು ನನ್ನ ತಂದೇ ಒಂದೇ"
"I live and move and have my being in Him"
"ನಾನು ಜೀವಿಸಿರುವದೂ ಚರಿಸುವದೂ ಮತ್ತು ಇರುವಿಕೆಯನ್ನು ಹೊಂದಿರುವದೂ ಅವನಲ್ಲಿಯೇ"
"In the beginning was the Word and the Word was with God and the Word was God,"
"ಆರಂಭದಲ್ಲಿ ಶಬ್ದವಿತ್ತು ಮತ್ತು ಆ ಶಬ್ದವು ದೇವರಲ್ಲಿತ್ತು, ಮತ್ತು ಶಬ್ದವೇ ದೇವರಾಗಿತ್ತು."
"He who has seen the Son has seen the Father."
"ಮಗನನ್ನು ನೋಡಿದವನು ತಂದೆಯನ್ನು ನೋಡಿದ್ದಾನೆ."
"The kingdom of heaven is within you."
"ಸ್ವರ್ಗಸಾಮ್ರಾಜ್ಯವು ನಿನ್ನೊಳಗೇ ಇದೆ."
"Love your neighbour as yourself"
"ನಿನ್ನ ನೆರೆಯನ್ನು ನಿನ್ನಂತೆ ಪ್ರೀತಿಸು."
ಪುನಃ ಕ್ರಿಸ್ತನು ಹೇಳಿದ,
"Eat ye my flesh and drink ye my blood, and

unless ye eat my flesh and drink my blood, ye cannot be saved."

"ನೀವು ನನ್ನ ಮಾಂಸವನ್ನು ತಿನ್ನಿರಿ ಮತ್ತು ನೀವು ನನ್ನ ರಕ್ತವನ್ನು ಕುಡಿಯಿರಿ, ಮತ್ತು, ನೀವು ನನ್ನ ಮಾಂಸವನ್ನು ತಿನ್ನದ ಹೊರತು ಮತ್ತು ನನ್ನ ರಕ್ತವನ್ನು ಕುಡಿಯದ ಹೊರತು ನೀವು ಪಾರಾಗುವದಿಲ್ಲ. ನಿಮ್ಮನ್ನು ರಕ್ಷಿಸಲಾಗುವದಿಲ್ಲ."

ಎಂಬೀ ಮಾತನ್ನು ಜನರು ತಪ್ಪಾಗಿ ಅರ್ಥಮಾಡಿದ್ದಾರೆ.

ಮಾಂಸವನ್ನೂ ರಕ್ತವನ್ನೂ ತಿಂದು ಕುಡಿದು ಮುಗಿಸಿಬಿಡುವದಕ್ಕೆ ಬದಲಾಗಿ, ಅದನ್ನು ವಿವೇಚನೆಮಾಡದೆ, ಮೂಢ ಭಕ್ತಿಯಿಂದ ಅತಿಶಯ ಪೂಜ್ಯವೆಂದು ಭಾವಿಸುತ್ತಾರೆ. ಏಕೆ, ತತ್ತ್ವಶಾಸ್ತ್ರ, ನ್ಯಾಯಶಾಸ್ತ್ರ, ಯುಕ್ತಿ ವಿಚಾರ ಇವುಗಳ ಹೆಸರಿನಲ್ಲಿ ನಿಮಗೆ ಬೆಳಕು ಕಾಣುವದಿಲ್ಲವೆ? ವೇದಗಳನ್ನು ಓದಿರಿ, ಇಂಡಿಯಾದಲ್ಲಿ ಸಹಸ್ರಾರು ವರ್ಷಗಳ ಹಿಂದೆ ಉಪದೇಶ ಮಾಡಿರುವ ವೇದಗ್ರಂಥಗಳಲ್ಲಿ ಕ್ರಿಸ್ತನು ಹೇಳಿರುವ ಮೇಲಿನ ವಾಕ್ಯಗಳೆಲ್ಲಾ ಇರುವದನ್ನು ನೋಡುತ್ತೀರಿ. ಕ್ರಿಸ್ತನ ಪುನರುಜ್ಜೀವನ ಮತ್ತು ಉಪದೇಶಗಳು (Sermons) ಇವೂ ಸಹ ಹಿಂದೂಗಳ ಮತ್ತು ವೇದಾಂತ ವಿಷಯಗಳು. ಈ ಸಂದರ್ಭದಲ್ಲಿ, ರಷ್ಯದ ನಿಕೋಲಸ್ ನೊಟೋವಿಚ್ (Nicholas Notovitch) ಎಂಬಿವನು ಫ್ರೆಂಚ್ ಭಾಷೆಯಲ್ಲಿ ಬರೆದಿರುವ ಒಂದು ಗ್ರಂಥವನ್ನು—"The unknown life of Jesus" "ಯೇಸುಕ್ರಿಸ್ತನ ಅಜ್ಞಾತ ಜೀವನ" ಎಂಬ ಹೆಸರಿನಲ್ಲಿ ಇಂಗ್ಲಿಷ್ ಭಾಷೆಗೆ ಪರಿವರ್ತನವಾಗಿರುವದನ್ನು —ನಿಮಗೆ ರಾಮನು ಸೂಚಿಸುತ್ತಾನೆ

ಟಿಬೆಟ್‌ನಲ್ಲಿರುವ ಒಂದು ಸಂನ್ಯಾಸಿಯ ಮಠದಲ್ಲಿ ದೊರಕಿದ ಕೆಲವು ಕೈಬರೆಹದ ಲೇಖನಗಳನ್ನು ಆಧರಿಸಿ ಈ ಗ್ರಂಥವು ರಚನೆಯಾಗಿದೆ. ಲೇಖಕನೇ ಆ ಸ್ಥಳಕ್ಕೆ ಹೋಗಿದ್ದನು; ನೀವು ಆ ಗ್ರಂಥವನ್ನು ಓದಿದ ಮೇಲೆ, ಅದರಲ್ಲಿರುವ ವಿಚಾರಗಳ ಸತ್ಯತೆಯು ನಿಮಗೆ ಮನವರಿಕೆಯಾಗದೇ ಇರಲಾರದು. ಯೇಸುಕ್ರಿಸ್ತನ ಜೀವನದಲ್ಲಿ ಯಾವ ಭಾಗದ ವಿಷಯವಾಗಿ ಬೈಬಲ್ ಏನೂ ಹೇಳುವದಿಲ್ಲವೋ,—ಅವನು ಭಾರತದಲ್ಲಿ ಕಳೆದ, ಅವನ ಎಂಟನೇ ವಯಸ್ಸಿನಿಂದ ಮೂವತ್ತೆಂಟನೇ ವಯಸ್ಸಿನ ವರೆಗಿನ—ಆ ಭಾಗದ ವಿಷಯವಾಗಿಯೇ ಆ ಗ್ರಂಥದಲ್ಲಿ ನಿರೂಪಣೆಯಿದೆ. ಆ ವಿದ್ಯಮಾನಗಳಲ್ಲಿ ಸತ್ಯಾಂಶ ಇರಬಹುದು ಅಥವಾ ಇಲ್ಲದಿರಬಹುದು; ಆದರೆ ಭಾರತದಿಂದ ಜೆರೂಸಲೆಂಗೆ ತತ್ತ್ವಜ್ಞಾನವು ನೇರಾಗಿ ಹೋಗದಿದ್ದರೂ ಬೇರೆ

ಬಗೆಯಿಂದ ಹೋಗಿರಬಹುದು. ಹೇಗಾದರೂ ಇರಲಿ, ಯೇಸುಕ್ರಿಸ್ತನ ಉಪದೇಶಗಳೂ ಕಾರ್ಯಾಚರಣೆಗಳೂ ಭಾರತದ ತತ್ತ್ವಶಾಸ್ತ್ರವಾದ ವೇದಾಂತದ ಬಲಹೀನವೂ ಅಸ್ಪಷ್ಟವೂ ಆದ ಪ್ರತಿಧ್ವನಿ ಮಾತ್ರವಾಗಿದೆ ಎಂಬುದು ಮಾತ್ರ ಸತ್ಯಸಂಗತಿಯಾಗಿದೆ.

ನಿಮ್ಮ ಬೈಬಲ್ಲಿನಲ್ಲಿ 'love your neighbour as yourself.'

"ನಿಮ್ಮ ನೆರೆಯುವರನ್ನು ನಿಮ್ಮಂತೆಯೇ ಪ್ರೀತಿಸಿರಿ" ಎಂಬ ಉಪದೇಶವಿದೆ. ಆದರೆ ಅಲ್ಲಿ ಅದಕ್ಕೆ ಯಾವ ಕಾರಣವನ್ನೂ ಯುಕ್ತಿ ವಿಚಾರವನ್ನೂ ತತ್ತ್ವಾಧಾರ ವಿವೇಚನೆಯನ್ನೂ ಕೊಟ್ಟಿಲ್ಲ. ನಾವು ಒಂದು ಮಗುವಿಗೆ, ಯಾವ ಕಾರಣವನ್ನೂ ಯುಕ್ತಿಯನ್ನೂ ಹೇಳದೆ, ಸುಮ್ಮನೆ, 'ಹೀಗೆ ಮಾಡು, ಇದನ್ನು ಮಾಡು ; ಇದನ್ನು ಮಾಡ ಬೇಡ, ಹೀಗೆ ಮಾಡಬೇಡ' ಎಂದು ಇಷ್ಟೆ ಹೇಳಿದರೆ, ವಿವೇಚನಾಶಕ್ತಿಯುಳ್ಳ ಪ್ರಾಣಿಯಲ್ಲಿರುವ (Rational animal) ಹೆಚ್ಚು ಉನ್ನತವಾದ ಸ್ವಭಾವವನ್ನು ದಾಸ್ಯದಲ್ಲಿ ನೂಕುತ್ತೇವೆ, ಎಂದು ಪುಣ್ಯಾತ್ಮ ಹರ್ಬರ್ಟ್‌ಸ್ಪೆನ್ಸರ್ ಹೇಳಿದ್ದಾನೆ. ನ್ಯಾಯಶಾಸ್ತ್ರಜ್ಞರು ಮಾನವನನ್ನು ವಿವೇಚನಾಶಕ್ತಿಯುಳ್ಳ ಪ್ರಾಣಿ ಎಂದು ಕರೆದಿದ್ದಾರೆ. ಒಂದು ಕೆಲಸವನ್ನು ಮಾಡಬೇಕೆಂದು ಒಂದು ಮಗುವಿಗೆ ನಾವು ಅಧಿಕಾರಯುತವಾಗಿ ಹೇಳಿದರೆ, ಅದರಲ್ಲಿರುವ ಯುಕ್ತಾಯುಕ್ತ ಪರಿಜ್ಞಾನವನ್ನು ಹತ್ತಿಕ್ಕುತ್ತೇವೆ, ಅಡಿಯಾಳುಮಾಡುತ್ತೇವೆ. ನಿಮಗೆ ಇಷ್ಟವಾದುದನ್ನು ಒಂದು ಮಗುವು ಮಾಡಬೇಕೆಂದಿದ್ದರೆ, ಅದು ಸ್ವತಂತ್ರವಾಗಿ, ತನ್ನ ಸ್ವಂತ ಅಧಿಕಾರದ ಮೇಲೆ ತನ್ನ ಇಷ್ಟವೆಂಬಂತೆ ಅದು ಮಾಡುವಂತೆ ಮಾಡಬೇಕು. 'ಮಾಡು' 'ಬೇಡ' ಎಂದು ಹೇಳಿದ ಕ್ಷಣವೇ ಅದನ್ನು ಗುಲಾಮಗಿರಿಗೆ ಹಾಕುತ್ತೀರಿ. ಒಮ್ಮೆ ಒಂದು ಮಗುವನ್ನು 'ನಿನ್ನ ಹೆಸರೇನು ?' ಎಂದು ಯಾರೋ ಕೇಳಿದರು. ಅದು ಕೂಡಲೆ "ನನಗೆ ಗೊತ್ತಿಲ್ಲ ; ಆದರೆ ನನ್ನ ತಾಯಿ ನನ್ನನ್ನು ಯಾವಾಗಲು, 'ಬೇಡ' 'ಬೇಡ' ಎಂದು ಕರೆಯುತ್ತಾಳೆ," ಎಂದಿತು. ನೀವು "ನಿನ್ನ ನೆರೆಯುವನನ್ನು ನಿನ್ನಂತೆ ಪ್ರೀತಿಸು" ಎಂದು ಹೇಳವಾಗ ನೀವು ನಮಗೆ, ಹೇಗೆ ಪ್ರೀತಿಸಬೇಕು ? ಏಕೆ ಪ್ರೀತಿಸಬೇಕು ? ಎಂಬದನ್ನೂ ಹೇಳಬೇಕು. ಕ್ರಿಸ್ತನ ಈ ಉಪದೇಶವನ್ನು ಗಿಳಿಯಂತೆ ನುಡಿಯುತ್ತಿರುವ ಕ್ರೈಸ್ತ ಪಾದ್ರಿಗಳೂ ಪುರೋಹಿತರೂ 'ಡಾಕ್ಟರ್ಸ್ ಆಫ್ ಡಿವಿನಿಟಿ' ಪೂಜ್ಯಗುರುಗಳೂ ತಮ್ಮ ಹೃದಯದ ತಳದಿಂದಲೂ ಹಿಂದೂಗಳನ್ನು ದ್ವೇಷಿಸುವಾಗ, ಅವರ ಉಪದೇಶದಿಂದ ಇತರರು ತಮ್ಮ ನೆರೆಯುವರನ್ನು ತಮ್ಮಂತೆ ಪ್ರೀತಿಸುವದು ಹೇಗೆ ಸಾಧ್ಯ ? ಜಗತ್ತಿನಲ್ಲಿ ಈ ವಿಧಿ ನಿಷೇಧಗಳನ್ನು ಸಂದೇಹವಿಲ್ಲದಂತೆ ಅನವಚ್ಛಿನ್ನವಾಗಿ ಸಹಸ್ರಾರು ವರ್ಷಗಳಿಂದ ಬೋಧಿಸುತ್ತಲೇ ಇದೆ ;

ಆದರೂ ಈ ಪ್ರಪಂಚವು ಎಂದಿನಂತೆ ಒಂದೇ ರೀತಿಯಾಗಿದೆ. ಕೃಷ್ಣ, ಕನ್‌ಫ್ಯೂಷಿಯಸ್, ಜೊರೋಸ್ಟರ್ ಮೊದಲಾದವರೆಲ್ಲಾ ಉಪದೇಶಿಸಿದರು, ಆದರೂ ಜಗತ್ತಿನಲ್ಲಿ ಮೊದಲಿನಂತೆಯೇ ಪಾಪಗಳಿವೆ ಇವತ್ತು ಈ ಪ್ರಪಂಚವು ಹೆಚ್ಚು ಸುಖವಾಗಿದೆಯೆ? ಪ್ರಪಂಚವು ನಾಯಿಯ ಬಾಲದಂತೆ ಇದೆಯೆಂದು ಹೇಳಿದ್ದಾರೆ. ನಾಯಿಯ ಬಾಲನ್ನು ಒಂದು ನೇರವಾದ ನಳಿಕೆಯಲ್ಲಿ ಹನ್ನೆಡು ವರ್ಷಗಳು ಹಾಕಿಟ್ಟಿದ್ದರೂ ಸಹ ಅದನ್ನು ಹೊರಗೆ ತೆಗೆದ ಕೂಡಲೇ ಅದು ಹಿಂದಿನಂತೆಯೇ ಸುರುಳಿ ಸುತ್ತಿಕೊಳ್ಳುತ್ತದೆ. ಪ್ರಪಂಚ ಸ್ವಭಾವದ ಹಣೆಯಬರೆಹವೂ ಹೀಗೆಯೇ ಇದೆ ನಾಯಿಯ ಬಾಲವನ್ನು ನೆಟ್ಟಗೆ ಮಾಡುವದಕ್ಕೆ ಪ್ರಯತ್ನಮಾಡಿ; ಅದನ್ನು ಕೈಬಿಟ್ಟಕೂಡಲೇ ಅದು ಹಿಂದಿನಂತೆಯೇ ವಕ್ರವಾಗುತ್ತದೆ. ಪ್ರಪಂಚಸ್ಥಿತಿಯೂ ಹೀಗೆಯೇ. ಈ ಸಂದರ್ಭಕ್ಕೆ ಸರಿಯಾಗಿ ರಾಮನಿಗೆ ಒಂದು ಕಥೆಯು ನೆನಪಾಗಿದೆ: ಒಬ್ಬ ಕಾಮುಕ ತರುಣನು ಒಮ್ಮೆ ಒಬ್ಬ ಕಪಟ ಸಾಧುವಿನಲ್ಲಿ ಹೋಗಿ, ತರುಣಿಯೊಬ್ಬಳ ಪ್ರೇಮವನ್ನು ತನ್ನ ಕಡೆಗೆ ಸೆಳೆಯುವಂಥ (ಶಕ್ತಿಯುಳ್ಳ) ಸಾಧನೆಯನ್ನು ತನಗೆ ಉಪದೇಶಮಾಡಬೇಕೆಂದು ಬೇಡಿದನು. ಆ ಆಭಾಸ ಸಾಧುವು ಹೇಳಿದ್ದೇನೆಂದರೆ, "ನಿನಗೊಂದು ಮಂತ್ರವನ್ನು ಉಪದೇಶಿಸುತ್ತೇನೆ. ಅದನ್ನು ನಿರಂತರವಾಗಿ ಜಪಿಸುತ್ತಿರು; ಆ ಹುಡುಗಿಯು ನಿನ್ನ ಕಡೆಗೆ ಆಕರ್ಷಿತಳಾಗುತ್ತಾಳೆ. ಆದರೆ, ನೀನು ಜಪಮಾಡುವಾಗ ಕಪಿಯ ನೆನಪು ನಿನ್ನ ಮನಸ್ಸಿನಲ್ಲಿ ಬರಬಾರದು." ಆ ತರುಣನು ಬಹಳ ಸಂತೋಷ–ಉತ್ಸಾಹಗಳಿಂದ ಆ ಮಂತ್ರವನ್ನು ಜಪಿಸುವದಕ್ಕೆ ತೊಡಗಿದನು. ಆದರೆ, ಆಹಾ! ದುರ್ದೈವದಿಂದಲೋ ಎನ್ನುವಂತೆ ಜಪಮಾಡುವಾಗಲೆಲ್ಲಾ ಕಪಿಯ ನೆನಪು ಮನಸ್ಸಿನಲ್ಲಿ ಎಡೆಬಿಡದೆ ಬರುತ್ತಿತ್ತು. ಏನು ಮಾಡಿದರೂ ಅದನ್ನು ತಪ್ಪಿಸುವದು ಸಾಧ್ಯವಿಲ್ಲದೆ, ಪುನಃ ಆ ಗುರುಗಳಲ್ಲಿ ಬಂದು ಹೇಳಿಕೊಂಡನು; " ಸ್ವಾಮಿ, ನೀವು ನನಗೆ, " ಮಂಗನನ್ನು ನೆನೆಯಬೇಡ, ಎಂದು ಹೇಳದೇ ಇದ್ದಿದ್ದರೆ, ನನ್ನ ಜೀವಮಾನದಲ್ಲಿಯೇ ಎಂದೂ ನಾನದನ್ನು ನೆನೆಸುತ್ತಿರಲಿಲ್ಲ. ನೀನಾಗಿಯೇ ನಿಷೇಧಾಜ್ಞೆಯಿಂದ ಒಂದು ವಿಷಯವನ್ನು ನನ್ನ ಮನಸ್ಸಿನಲ್ಲಿ ಚುಚ್ಚಿಹೊಗಿಸಿದಂತಾಯಿತು."

ಓ, ಪವಿತ್ರಾತ್ಮರೆ, ಹೀಗೆ, 'ಮಾಡು, ಬೇಡ' 'ನೀನು ಮಾಡಿಯೇ ತೀರಬೇಕು, ನೀನು ಎಂದೂ ಇದನ್ನು ಮಾಡಲೇಬಾರದು' ಎನ್ನುವ ನೈತಿಕ ಆಜ್ಞೆಗಳು ಸ್ವತಂತ್ರಸ್ವಭಾವದ ಜೀವರನ್ನು ಕೆರಳಿಸಿ ವಿರೋಧವಾಗಿಯೇ ಪ್ರೇರಿಸುತ್ತವೆ. ಇವು ಎಂದೂ ದೇವರ ಆಜ್ಞೆಗಳಲ್ಲ. ಆದ್ದರಿಂದಲೇ ದನಗಳೂ ಎಮ್ಮೆಗಳೂ ಕೋಣಗಳೂ ಹುಲಿಗಳೂ ಸಿಂಹಗಳೂ ಮನುಷ್ಯರಿಗಿಂತಲೂ ಹೆಚ್ಚು ನೀತಿವಂತವಾಗಿ, ಶುಚಿಯಾಗಿವೆ.

ಪಾಶವೀ ಕಾಮ ಎನಿಸಿರುವುದನ್ನು ದಮನಮಾಡಬೇಕೆಂಬ ನಿಷೇಧಾಜ್ಞೆಯು ಪಶುಗಳಲ್ಲಿಲ್ಲವಾದ್ದರಿಂದ ಮನುಷ್ಯರಿಗಿಂತಲೂ ಅವು ಶುದ್ಧವಾಗಿವೆ. "ನಿನ್ನ ನೆರೆಯನ್ನು ನಿನ್ನಂತೆ ಪ್ರೀತಿಸು" ಎಂಬ ಈ ದೈವಾಜ್ಞೆಯಲ್ಲಿ ಗುರಿ ತಪ್ಪಿರುವದನ್ನು ಕಾಣಬಹುದು. ಮನುಷ್ಯನು ಸ್ವತಂತ್ರ ಸ್ವಭಾವದವನಾದುದರಿಂದ ಇನ್ನೊಬ್ಬರ ಅಧಿಕಾರದಿಂದ ಬಂದ ಯಾವದನ್ನೂ ಅವನು ಪ್ರೀತಿಯಿಂದ ಅಂಗೀಕರಿಸುವದಿಲ್ಲ. "ನೆರೆಯವನನ್ನು ನಾನೇಕೆ ನನ್ನಂತೆ ಪ್ರೀತಿಸಬೇಕು ?" ಎಂದು ಅವನು ಸಹಜವಾಗಿ ಪ್ರಶ್ನಿಸುತ್ತಾನೆ.

ಈ ನೈತಿಕ ವಿಧಿಗೆ ಆಧಾರವಾಗಿರುವ ತತ್ತ್ವಜ್ಞಾನವನ್ನು ವೇದಾಂತ ಶಾಸ್ತ್ರದಲ್ಲಿ, ಹೃದಯಂಗಮವಾಗುವಂತೆ ಒಂಬತ್ತು ಬಗೆಯಿಂದ ಅತ್ಯಂತ ರಮ್ಯವಾಗಿಯೂ ಅತ್ಯಂತ ಆಶ್ಚರ್ಯಕರವಾಗಿಯೂ ಅತ್ಯಂತ ದಿವ್ಯವಾಗಿಯೂ ವರ್ಣಿಸಿದೆ. "ನಿಮ್ಮಲ್ಲಿರುವ ನಿಜವಾದ ಆತ್ಮನು ಎಲ್ಲರಲ್ಲಿರುವ ಆತ್ಮನೇ" ಆದ್ದರಿಂದ ನೆರೆಯವನಲ್ಲಿರುವ ಆತ್ಮನು ನೀನೇ ಎಂದು ಅದರಲ್ಲಿ ಹೇಳಿದೆ 'ನನ್ನ ನೆರೆಯವನು ನಾನೇ' ಎಂದು ನಾನು ತಿಳಿದಾಗ ಅವನನ್ನು ಸ್ವಾಭಾವಿಕವಾಗಿ ನಾನು ನನ್ನಂತೆಯೇ ಪ್ರೀತಿಸುತ್ತೇನೆ. ಬೈಬಲ್‌ನಲ್ಲಿರುವದಕ್ಕಿಂತಲೂ ವೇದಾಂತದಲ್ಲಿ ಈ ತತ್ತ್ವವನ್ನು ಹೆಚ್ಚು ಸ್ಪಷ್ಟವಾಗಿ ತಿಳಿಸಿದೆ. ನಾವು ಮನಶ್ಶಾಸ್ತ್ರದ ನಿಯಮಗಳನ್ನು ತಿಳಿಯಬೇಕು ; ಏಕೆಂದರೆ ಮಾನವ ಮನಸ್ಸಿನ ಸ್ವಭಾವವೇ ಅಂತಹುದು. 'ಬೆಂಕಿಯನ್ನು ಮುಟ್ಟಬೇಡ' ಎಂದು ಒಂದು ಮಗುವಿಗೆ ಹೇಳಿದರೆ, ಅದು ಮೊದಲು ಓಡಿಹೋಗಿ ಬೆಂಕಿಯನ್ನು ಮುಟ್ಟುತ್ತದೆ ಆದರೆ, ಬೆಂಕಿಯನ್ನು ಮುಟ್ಟಿದರೆ, ಸುಡುವದೆಂದು ಅದಕ್ಕೆ ಹೇಳಿದರೆ, ಅದು ತನ್ನ ಸ್ವಂತ ಅಧಿಕಾರದ ಮೇಲೆ, ಬೆಂಕಿಯನ್ನು ಎಂದೂ ಮುಟ್ಟುವದಿಲ್ಲ. ಆದ್ದರಿಂದ, "ಬೆಂಕಿಯನ್ನು ಮುಟ್ಟಬೇಡ" ಎಂದು ಇಷ್ಟೇ ಹೇಳಬಾರದು. ನೆರೆಯವನನ್ನು ನನ್ನಂತೆಯೇ ನಾನು ಪ್ರೀತಿಸಬೇಕೆಂದು, ಇಷ್ಟೇ ಸುಮ್ಮನೆ ಹೇಳಿದರೆ, ನಾನು ಹಾಗೆ ಮಾಡುವದಿಲ್ಲ. ಆದರೆ ನೆರೆಯವನೂ ಇನ್ನೊಂದು ರೂಪದಲ್ಲಿರುವ ನಾನೇ ಎಂದು ನೀವು ನನಗೆ ಹೇಳಿದರೆ, ಆಗ ಅವನನ್ನೂ ನಾನು, ನನ್ನಂತೆಯೇ ಕಾಣದೇ ನಡೆದುಕೊಳ್ಳದೆ ಬೇರೆ ಗತಿಯಿಲ್ಲ.

ಯೂರೋಪ್ ಜಗತ್ತಿನಲ್ಲಿರುವ ಮಹಾ ಆಧ್ಯಾತ್ಮಿಕ ವ್ಯವಸ್ಥೆಯ ಮೂಲ ಯಾವದೆಂಬದನ್ನು ರಾಮನು ನಿಮಗೆ ಹೇಳಿದ್ದಾನೆ. ರಾಮನು ಹಾಗೇ ಇನ್ನು ಸ್ವಲ್ಪ ಮುಂದುವರಿಯಲಿ.

ಕ್ರೈಸ್ತ ವೇದವಾದ ಸುವಾರ್ತೆಯಿಂದಲೇ ಉಪದೇಶಿಸಲ್ಪಟ್ಟ ಮಹತ್ತಾದ

ಈ ತತ್ತ್ವಗಳು ಯುೂರೋಪಿನ ಅಂಧಕಾರ ಯುಗದಲ್ಲಿ ಅಡಗಿ ಹೋದವು; ಆದ್ದರಿಂದ ಆ ಪ್ರಪಂಚಕ್ಕೆ ಹೊಸದೊಂದು ಪ್ರೇರಣೆಯು, ಚಾಲಕಬಲವು ಬೇಕಾಯಿತು. ಆ ಅಂಧಕಾರಯುಗವನ್ನು ಕಳೆದು, ಅನಂತರ ಮಧ್ಯಯುಗವನ್ನೂ ಬೀಸಿ ಕೊಚ್ಚಿಕೊಂಡು ಹೋದ ಆ ಹೊಸ ಶಕ್ತಿಯ ರಭಸವು ಎಲ್ಲಿಂದ ಬಂದಿತು ? ಸರ್ವತ್ರ ಅಂಗೀಕೃತ ವಾಗಿದ್ದ ಕ್ರೈಸ್ತಮತದ ವಿಷಯವನ್ನು ಅಷ್ಟೇ ವಿಚಾರಮಾಡಿದರೆ, ಆ ಮತವು ಪ್ರಚಾರದಲ್ಲಿದ್ದರೂ ಸಹ, ಯುೂರೋಪಿನ ಅಂಧಕಾರಯುಗವೆನ್ನಿಸಿಕೊಂಡ ಕಾಲದಲ್ಲಿ, ಅಂಧಕಾರವೇ ಎಲ್ಲೆಲ್ಲಿಯೂ ತುಂಬಿ ವಿಜೃಂಭಿಸುತ್ತಿದ್ದಿತು. ಆದರೆ ಆ ಅಂಧಕಾರ ಯುಗವೂ ಅನಂತರದ ಮಧ್ಯಯುಗವೂ ಕೂಡ ಸಾಹಿತ್ಯ ಮತ್ತು ಕಲೆಗಳ ಅಭ್ಯಾಸದ ಪುನರುಜ್ಜೀವನದಿಂದ (Renaissance) ರಭಸವಾಗಿ ಕೊಚ್ಚಿಕೊಂಡು ಹೋಯಿತು. ಆ ಪುನರುಜ್ಜೀವನವು 14–16 ನೆಯ ಶತಮಾನಗಳಲ್ಲಿ ಹಿಂದಿನ ರೋಮನ್ ಮತ್ತು ಗ್ರೀಕ್ ಪ್ರೌಢ ಆದರ್ಶಗಳ ಪ್ರಭಾವದಿಂದ ಯುೂರೋಪಿನಲ್ಲಾದ ಸಾಹಿತ್ಯ ಮತ್ತು ಕಲೆಗಳ ಪುನರುಜ್ಜೀವನವು, ಹೊಸಹುಟ್ಟು. ಈ ಪುನರುಜ್ಜೀವನಕ್ಕೆ, ವಿಧರ್ಮಿ ಗಳೆನಿಸಿಕೊಂಡ 'ಹೀದನ್' ಗ್ರೀಸ್ ಮತ್ತು ರೋಂಗಳ ಸಾಹಿತ್ಯ ಕಲೆಗಳ ಅಭ್ಯಾಸ ದಿಂದಲೇ ಜೀವಂತ ಸ್ಫೂರ್ತಿಯು ಬರಬೇಕಾಯಿತು. ಅಂಧಕಾರಯುಗವನ್ನೂ ಮಧ್ಯಯುಗದ ಕಾವಳವನ್ನೂ ನಿರ್ಮೂಲಮಾಡಲು, ಪುನಃ 'ಹೀದನ್' ಸಾಹಿತ್ಯವೇ ಬೇಕಾಯಿತು. ಆ 'ಹೀದನ್' ಸಾಹಿತ್ಯಕ್ಕೆ ಮೂಲವು ಭಾರತವೇ ಎಂಬುದನ್ನು ಹಿಂದೆಯೇ ಹೇಳಿದೆ. ಅಲ್ಲಿ ಪುನಃ ಯುೂರೋಪ್ ಜಗತ್ತನ್ನು ಪರಿಶುದ್ಧಮಾಡಲು ನೂತನ ಸ್ಫೂರ್ತಿಯು ಭಾರತದಿಂದ ಬಂದಿತು. ನೀವು ಚರಿತ್ರೆಯನ್ನು ಓದಿದ್ದರೆ ರಾಮನ ಈ ಅಭಿಪ್ರಾಯವನ್ನು ಒಪ್ಪಿಕೊಳ್ಳುತ್ತೀರಿ. ಈಗ ರಾಮನು, ಪ್ರಪಂಚದ ವರ್ತಮಾನ ಯುಗದ ವಿಚಾರಕ್ಕೆ ಬರುತ್ತಾನೆ.

ಮಧುರಾತ್ಮರೆ, ಅಮೆರಿಕಾದ ನವೀನವಿಚಾರವೇನು ? ಅಮೆರಿಕಾದ ಈ ಕ್ರೈಸ್ತ ವಿಜ್ಞಾನವೂ ತಿಯಾಸೊಫಿ ಅಥವಾ ಬ್ರಹ್ಮವಿದ್ಯೆಯೂ (ಅತೀಂದ್ರಿಯ ಯೋಗವೂ ನೇರವಾದ ಅಂತರ್ಬೋಧೆಯೂ) ಮತ್ತು (ಸತ್ತವರ ಪ್ರೇತಗಳು ಮನುಷ್ಯರಿಗೆ ಕಾಣಿಸಿಕೊಳ್ಳುತ್ತವೆ. ಮತ್ತು ಮೇಜಿನ ಮೇಲೆ ತಟ್ಟುವದು, ಬರೆವಣಿಗೆ ಮೊದಲಾ ದವುಗಳ ಮೂಲಕ ಮನುಷ್ಯರೊಡನೆ ವ್ಯವಹರಿಸುತ್ತವೆ ಎಂಬ ನಂಬಿಕೆ) ಪ್ರೇತ (ಸವ್ಯವಹಾರ) ವಾದವೂ–Spiritualism,–ಇವೆಲ್ಲಾ ಏನು ? ವಿದೇಹಿಗಳಾಗಿ ಅಥವಾ ಸದೇಹಿಗಳಾಗಿ ಬಂದ ಹಿಂದೂ ಗುರುಗಳಿಂದಾಗಲಿ, ನೇರವಲ್ಲದೆ ಪರೋಕ್ಷವಾಗಿ ಬಂದ ಷೋಪೆನ್‌ಹೇರ್ (Schopen hauer) ಮಹಾಶಯನ ಲೇಖನಗಳಿಂದಾಗಲೀ ಅಮೆರಿಕಾದ ನೂತನ ವಿಚಾರದ ನೇರವಾದ ನಾಲೆಗಳಿಂದಾಗಲೀ ಹೇಗೆ

ಬಗೆಬಗೆಯಿಂದ ಬಂದಂತೆ ಕಂಡರೂ ಆ ಎಲ್ಲಾ ಆಧುನಿಕ ವಿಚಾರಗಳೂ ಅಮೆರಿಕೆಗೆ ಬಂದಿರುವದು ಭಾರತದಿಂದಲೇ. ನೀವು, ಆಮೂಲಾಗ್ರ ತೀವ್ರ ಸುಧಾರಣಾ ಪ್ರಜಾಪ್ರಭುತ್ವ (Radical democracy) ಅಥವಾ ಸಮಾಜಸ್ವಾಮ್ಯವಾದ (Socialism) ಎಂದು ಕರೆಯುವ, ಜಗತ್ತಿನ ರಾಜಕೀಯ ಚರಿತ್ರೆಯಲ್ಲಿಯ ನೂತನ ವಿಚಾರವು ಕೂಡ ವೇದಾಂತ ಲಕ್ಷಣವುಳ್ಳದಾಗಿದೆ, ಎಂದು ರಾಮನು ಸಮಂಜಸವಾಗಿ ತೋರಿಸಿಕೊಡಬಲ್ಲನು 'Socialism and Vedanta' 'ಸಮಾಜ ಸ್ವಾಮ್ಯವಾದ ಮತ್ತು ವೇದಾಂತ' ಎನ್ನುವ ಪ್ರಬಂಧವನ್ನೂ 'The Rise and Fall of Nations' 'ರಾಷ್ಟ್ರಗಳ ಉದಯ ಮತ್ತು ಪತನ' ಎನ್ನುವ ಗ್ರಂಥವನ್ನೂ ರಾಮನು ಬರೆದಿದ್ದಾನೆ. ರಾಮನು ಈಗ ಮಾಡುವ ದೃಢವಾದ ಪ್ರತಿಪಾದನೆಗೆ ಆಧಾರವಾದ ಪ್ರಮಾಣಗಳನ್ನೂ ವಾಸ್ತವಾಂಶಗಳನ್ನೂ ಈ ಕೃತಿಗಳಲ್ಲಿ ಮಂಡಿಸಿದ್ದಾನೆ.

ಅಮೆರಿಕಾದಲ್ಲಿ ಉದಯವಾಗಿರುವ ಹೊಸ ವಿಚಾರ ಧುರಿಯ ಜನಕನೂ ಪ್ರವಾದಿಯೂ ಎಮರ್‌ಸನ್ (Emerson) ಆಗಿದ್ದಾನೆ. ಅವನು ಸತ್ಯವನ್ನು, ಅಧ್ಯಾತ್ಮವನ್ನು ಉಪದೇಶಿಸಿ, ಪ್ರಚಾರಮಾಡಿದನು , ಆದರೆ ಅವನು ಧನಸಂಪಾದನೆಗಾಗಿ ಅದನ್ನು ಉಪಯೋಗಿಸಲಿಲ್ಲ. ಅವನು ಸತ್ಯವನ್ನು ಜನಪ್ರಿಯವಾಗುವಂತೆ ಮಾಡಿದನು. ಆ ಎಮರ್‌ಸನ್‌ನ ಆಧ್ಯಾತ್ಮಿಕ ಜನಕನೂ ಸ್ಫೂರ್ತಿದಾತನೂ ಹೆನ್ರಿ, ಡಿ. ಥೋರೋ (Henry D Thoreau) ಆಗಿದ್ದನು. ಅವನು ಎಮರ್‌ಸನ್‌ಗಿಂತಲೂ ಹೆಚ್ಚು ಮೂಲಗಾಮಿಯು, ನವೀನನು. ಎಮರ್‌ಸನ್‌ಗೆ ಸ್ಫೂರ್ತಿಯನ್ನು ಕೊಟ್ಟ ಇನ್ನೊಬ್ಬ ಮಹಾಶಯನು ಕಾರ್ಲೈಲ್ (Carlyle). ಹಾಗಾದರೆ, ಈ ಕಾರ್ಲೈಲ್, ಎಮರ್‌ಸನ್, ಥೋರೋ ಮತ್ತು ವಾಲ್ಟ್‌ವ್ಹಿಟ್‌ಮನ್ ಇವರೆಲ್ಲರೂ ಎಲ್ಲಿಂದ ಸ್ಫೂರ್ತಿಯನ್ನು ಪಡೆದರು ? ಅದು ಅನೇಕ ಮೂಲಗಳಿಂದ ಬಂದಿರಬಹುದು. ಕ್ಯಾಂಟ್ ಮತ್ತು ಷೋಪೆನ್‌ಹೇರ್ ಇವರಂಥ ಜನರ ಲೇಖನಗಳಿಗೆ ಮೂಲ ಯಾವದು ? ವೇದಾಂತ ಸಾಹಿತ್ಯದ ನೇರವಾದ ಅಭ್ಯಾಸದ ಹೊರತು ಬೇರೆ ಯಾವದೂ ಅಲ್ಲ. ಕಾರ್ಲೈಲ್ ಮತ್ತು ರಸ್ಕಿನ್‌ರಿಂದ ಜಗತ್ತಿಗೆ ಕೊಡಲ್ಪಟ್ಟ ಹೊಸ ವಿಚಾರದ ರಭಸವು, ಕ್ಯಾಂಟ್, ಷೋಪೆನ್‌ಹೇರ್ ಮತ್ತು ಫಿಕ್ಟೇ (Fichte) ಇವರ ತಾತ್ತ್ವಿಕ ಲೇಖನಗಳಿಂದ ಉದಯವಾದುದೆಂದು ರಾಮನು ಪ್ರಮಾಣಪೂರ್ವಕವಾಗಿ ತೋರಿಸಿಕೊಡಬಲ್ಲನು. ಕ್ಯಾಂಟ್, ಷೋಪೆನ್‌ಹೇರ್, ಫಿಕ್ಟೇ ಕೆಲವು ಮಟ್ಟಿಗೆ ಸ್ವೀಡನ್‌ಬರ್ಗ್ (Swedenburg) ಇವರ ಲೇಖನಗಳು ಹಿಂದೂ ವೇದಾಂತದಿಂದ ಪ್ರತ್ಯಕ್ಷವಾಗಿ ಸ್ಫೂರ್ತಿಯನ್ನು ಪಡೆದು ಉತ್ಪನ್ನವಾದವುಗಳಾದ್ದರಿಂದ ಈ ಅಮೆರಿಕಾ

ದೇಶದ ನೂತನ ವಿಚಾರಗಳು ಭಾರತದಿಂದ ಬಂದವುಗಳೆಂದು ರಾಮನು ನಿಮಗೆ ಒಡಂಬಡಿಕೆಯಾಗುವಂತೆ ತೋರಿಸುತ್ತಾನೆ. ಷೋಪೆನ್‌ಹಾವರನು ತನ್ನ "The World is will and Idea" "ಪ್ರಪಂಚವು ಸಂಕಲ್ಪ ಮತ್ತು ಭಾವನೆ ಆಗಿದೆ" ಎಂಬ ಗ್ರಂಥದಲ್ಲಿ ಹೇಳಿರುವದೇನೆಂದರೆ,

"In the whole world there is no religion or philosophy so sublime and elevating as the Vedanta (Upanishads). This Vedanta (Upanishads) has been the solace of my life, and it will be the solace of my death".

"ಇಡೀ ಜಗತ್ತಿನಲ್ಲಿ ವೇದಾಂತದಷ್ಟು ಮಹೋನ್ನತವೂ ಭವ್ಯವೂ ಉನ್ನತಿಕರವೂ ಆದ ಧರ್ಮವು ಅಥವಾ ತತ್ತ್ವಶಾಸ್ತ್ರವು ಇನ್ನೊಂದಿಲ್ಲ. ಈ ವೇದಾಂತವು (ಉಪನಿಷತ್ತುಗಳು) ನನ್ನ ಜೀವನದ ಸಾಂತ್ವನವಾಗಿದೆ ; ನನ್ನ ಮರಣದಲ್ಲಿಯೂ ಅದೇ ಸಮಾಧಾನವಾಗುತ್ತದೆ." ವೇದಾಂತಶಾಸ್ತ್ರಕ್ಕೆ ಇದಕ್ಕಿಂತಲೂ ಹೆಚ್ಚಿನ ಗೌರವ ಕಾಣಿಕೆಯನ್ನು, ಶ್ಲಾಘನೆಯನ್ನು ಕೊಡುವದು ಸಾಧ್ಯವೆ? ಅವನ ಲೇಖನಗಳಲ್ಲಿ ಕೂಡ ವೇದಾಂತ ತತ್ತ್ವಶಾಸ್ತ್ರಕ್ಕೂ ಸಾಹಿತ್ಯಕ್ಕೂ ಸಂಬಂಧಸೂಚನೆಗಳೂ ಉಲ್ಲೇಖಗಳೂ ಇವೆ.

ಪುನಃ ಫ್ರಾನ್ಸ್‌ನಲ್ಲಿ ತತ್ತ್ವಶಾಸ್ತ್ರದ ಚರಿತ್ರಕಾರನಾದ ವಿಕ್ಟರ್ ಕಸಿನ್ (Victor Cousin) ಹೇಳುವದೇನೆಂದರೆ,

"ನಿಜವಾದ ದೇವರ ಜ್ಞಾನವನ್ನು ಪ್ರಾಚೀನ ಹಿಂದೂಗಳು ಪಡೆದಿದ್ದುದನ್ನು ಅಲ್ಲಗಳೆಯುವದು ಸಾಧ್ಯವಿಲ್ಲ. ಅವರ ತತ್ತ್ವಶಾಸ್ತ್ರವೂ ಅವರ ವಿಚಾರ-ಭಾವನೆಗಳೂ ಎಷ್ಟು ದಿವ್ಯವೂ ಭವ್ಯವೂ ಉನ್ನತಿಕರವೂ ನಿಷ್ಕೃಷ್ಟವೂ ನೈಜವೂ ಆಗಿದೆಯೆಂದರೆ ಯುರೋಪಿಯನ್‌ರ ಲೇಖನಗಳೊಂದಿಗೆ ಅವನ್ನು ಹೋಲಿಸುವದೆಂದರೆ ನಡುಹಗಲಿನ ತುಂಬಿದ ಬೆಳಕಿನಲ್ಲಿ ಸ್ವರ್ಗದಿಂದ ಕದ್ದು ತಂದ ಪ್ರೊಮೀತಿಯೂಸಿನ ಬೆಂಕಿಯಂತೆ ಕಾಣುತ್ತದೆ." (ಇದಕ್ಕೆ ಆಧಾರವಾದ ಗ್ರೀಕ್ ಪುರಾಣದ ಕಥೆಯೇನೆಂದರೆ, ಪ್ರೊಮೀತಿಯೂಸ್‌ನು ಮಣ್ಣಿನಿಂದ ಮನುಷ್ಯನನ್ನು ಕಲ್ಪಿಸಿ, ದೇವಲೋಕದಿಂದ ಬೆಂಕಿಯನ್ನು ಕದ್ದು ತಂದು, ಮನುಷ್ಯರಿಗೆ ಅದರ ಉಪಯೋಗವನ್ನೂ ಹಲವು ಕಲೆಗಳನ್ನೂ ಹೇಳಿಕೊಟ್ಟು, ಈ ಅಪರಾಧಗಳಿಗಾಗಿ ಜ್ಯೂಸ್ ದೇವನಿಂದ

ದಂಡನಾರ್ಥವಾಗಿ ಕಾಕ್ಸಸ್ ಪರ್ವತದ ಒಂದು ದೊಡ್ಡ ಬಂಡೆಗೆ ಬಂಧಿಸಲ್ಪಟ್ಟನು.) ಅದೇ ವಿಕ್ಟರ್ ಕಸಿನ್ ಇನ್ನೊಂದು ಕಡೆಯಲ್ಲಿ ಹೇಳಿರುವದೇನೆಂದರೆ,

"When we read with attention the poetical and philosophical monuments of the east, above all, those of India which are beginning to spread in Europe, we discover there, many a truth and truths so profound, and which make such a contrast with the meanness of the result at which the European genius has sometimes stopped that we are constrained to bend the knee before the philosophy of the east, and see in this cradle of human race the native land of the highest philosophy."

"ಯೂರೋಪ್ ದೇಶಗಳಲ್ಲಿ ಪ್ರಸಾರವಾಗುವದಕ್ಕೆ ತೊಡಗಿರುವ ಪ್ರಾಚ್ಯ ದೇಶಗಳ, ಎಲ್ಲಕ್ಕಿಂತಲೂ ಮಿಗಿಲಾಗಿ, ಭಾರತ ದೇಶದ (ಇಂಡಿಯಾ ದೇಶದ) ಪದ್ಯ ಕಾವ್ಯಾತ್ಮಕವೂ ಮತ್ತು ತತ್ತ್ವಶಾಸ್ತ್ರಾತ್ಮಕವೂ ಆದ ಶಾಶ್ವತ ಮಹತ್ವದ ಸ್ಮಾರಕ ಗಳನ್ನು ಲಕ್ಷ್ಯಪೂರ್ವಕವಾಗಿ ಪರಿಶೀಲಿಸಿದಾಗ, ಎಲ್ಲಿ ಯೂರೋಪಿಯನ್‌ರ ಅಸಾಧಾರಣ ಪ್ರತಿಭೆಯು ಕೂಡ, ಕೆಲವು ಸಮಯ, (ಕುಂಠಿತವಾಗಿ) ನಿಂತು ಹೋಗಿದೆಯೋ ಅಲ್ಲಿಯ ಫಲಿತಾಂಶದ ಕ್ಷುಲ್ಲಕತೆಗೆ ಹೋಲಿಸಿದರೆ, ಅಷ್ಟೊಂದು ವಿರುದ್ಧ ಲಕ್ಷಣವನ್ನು ತೋರಿಸುವ ಹಲವೊಂದು ಸತ್ಯವನ್ನು—ಅದರಲ್ಲಿಯೂ—ಪ್ರಗಾಢ ಪ್ರಜ್ಞೆಯ ಸತ್ಯಗಳನ್ನು ಅದರಲ್ಲಿ ಕಂಡುಕೊಳ್ಳುವದರಿಂದ, ಪ್ರಾಚ್ಯತತ್ತ್ವ ಶಾಸ್ತ್ರದ ಎದುರಿಗೆ, ನಾವು ಶಿರಬಾಗಿ, ಕೈಮುಗಿದು, ಮಂಡಿಯೂರಿ ಮಣಿಯುವದಕ್ಕೂ ಮಾನವಕುಲದ ಈ ತೊಟ್ಟಿಲಿನಲ್ಲಿ (ಶೈಶವದಲ್ಲಿ) ಪರಮೋಚ್ಚ ತತ್ತ್ವಜ್ಞಾನದ ಮಾತೃಸ್ಥಾನವನ್ನು (ತೌರನ್ನು) ಕಾಣುವದಕ್ಕೂ ಬಲಾತ್ಕರಿಸಲ್ಪಡುತ್ತೇವೆ."

ಹಿಂದೂಗಳ ತತ್ತ್ವವಿಚಾರದ ಜೊತೆಗೆ ಹೋಲಿಸಿದರೆ, ಯೂರೋಪಿಯನ್ ತತ್ತ್ವಜ್ಞಾನದ ಪರಮೋಚ್ಚ ವಿಸ್ತರಣಗಳು ಕೂಡ ಭವ್ಯವಾದ ರಾಜತೇಜಸ್ಸಿನ ಮಹೋನ್ನತ ದೈತ್ಯರ ಸನ್ನಿಧಿಯಲ್ಲಿ ನಿಂತಿರುವ ಅತಿಕುಬ್ಜವಾದ ಗಿಡ್ಡ ಗುಜ್ಜಾರಿ ಗಳಂತೆ ಕಾಣುತ್ತವೆ, ಎಂದು ಸ್ಕ್ಲೆಗೆಲ್ (Schlegel) ಹೇಳಿದ್ದಾನೆ. ಭಾರತದ

ಭಾಷೆ, ಸಾಹಿತ್ಯ ಮತ್ತು ತತ್ತ್ವಶಾಸ್ತ್ರ, ಇವುಗಳನ್ನು ಕುರಿತು ಬರೆದಿರುವ ಅವನ ಗ್ರಂಥದಲ್ಲಿ, ಅವನು ಹೇಳಿರುವದೇನೆಂದರೆ,

"It cannot be denied that the early Indians possessed a knowledge of the true God, all their writings are replete with sentiments and expressions, noble, clear, and severely grand, as deeply conceived and reverentially expressed as in any human language in which men have spoken of their God."

"ಪೂರ್ವಕಾಲದ ಭಾರತೀಯರು (ಇಂಡಿಯನ್ಸ್) ನಿಜವಾದ ದೇವರ ಜ್ಞಾನವನ್ನು ಪಡೆದಿದ್ದರೆಂಬದನ್ನು ನಿರಾಕರಿಸಲಾಗುವದಿಲ್ಲ; ಅವರ ಎಲ್ಲಾ ಲೇಖನಗಳೂ (ಗ್ರಂಥಗಳೂ) ಉದಾತ್ತವೂ ಸ್ಪಷ್ಟವೂ ಪ್ರಸನ್ನವೂ ಮತ್ತು ತೀವ್ರ ಭವ್ಯವೂ ಆದ ರಸಭಾವಗಳಿಂದಲೂ ನಿರೂಪಣೆಗಳಿಂದಲೂ ತುಂಬಿ ತುಳುಕುತ್ತಿವೆ; ಮತ್ತು ತಮ್ಮ ದೇವರ ವಿಷಯದಲ್ಲಿ ಮನುಷ್ಯರು ನಿರ್ವಚಿಸಿರುವ ಯಾವದೊಂದು ಮಾನವ ಭಾಷೆಯಲ್ಲಿ ಆದರೂ ಇರಬಹುದಾದಷ್ಟು ಆಳವಾದ ವಿಚಾರ-ಪರಿಭಾವನೆಯಿಂದಲೂ ಮತ್ತು ಭಯಭಕ್ತಿಪೂರ್ಣ ಪೂಜ್ಯ ಭಾವನೆಯಿಂದಲೂ ಅವು ನಿರೂಪಿಸಲ್ಪಟ್ಟಿವೆ."

ಪುನಃ ಅವನೇ ವೇದಾಂತ ತತ್ತ್ವಶಾಸ್ತ್ರದ ವಿಷಯದಲ್ಲಿ ವಿಶೇಷವಾಗಿ ಹೇಳಿರುವದೇನೆಂದರೆ,

"ಮನುಷ್ಯನ ಪ್ರತಿಯೊಂದು ಕರ್ಮದ ಮತ್ತು ಪ್ರಯಾಸದ ಪ್ರಾಥಮಿಕ ಉದ್ದೇಶವಾಗಿ, ದೇವತ್ವದೊಡನೆ ಅವನ ಪುನಸ್ಸಂಸ್ಥಾಪನೆಯ ಮತ್ತು ಪುನರೈಕ್ಯದ ಪರ್ಯಾಲೋಚನೆಯನ್ನು ಪ್ರಚೋದಿಸುವದಕ್ಕಾಗಿಯೂ ಅವನ ಹೋರಾಟದಲ್ಲಿ ಅವನನ್ನು ಚೇತನಗೊಳಿಸುವದಕ್ಕಾಗಿಯೂ ಮೂಲ ಉಗಮಕ್ಕೆ ಹಿಂದಿರುಗುವ ಅವನ ಪ್ರಯತ್ನಗಳನ್ನು ಉತ್ತೇಜಿಸುವದಕ್ಕಾಗಿಯೂ ಮನುಷ್ಯನ ದೈವೀ ಮೂಲವನ್ನು (ವೇದಾಂತದಲ್ಲಿ) ನಿರಂತರವಾಗಿ ಮತ್ತೆ ಮತ್ತೆ ಮನಸ್ಸಿಗೆ ಹತ್ತುವಂತೆ ಒತ್ತಿ ಒತ್ತಿ ಬೋಧಿಸುತ್ತದೆ."

ಮ್ಯಾಕ್ಸ್‌ಮುಲ್ಲರ್ ಮಹಾಶಯ ಹೇಳುವದೇನೆಂದರೆ,

"If the judgement or the opinion of such a grand philosopher as Schopenhaur requires endorsement, I on the basis of my long life, devoted to the study of almost all religions and philosophies, must humbly endorse."

"ಷೋಪೆನ್‌ಹಾವರ್ ಮಹಾಶಯನಂಥ ಮಹೋನ್ನತ ತತ್ತ್ವಜ್ಞಾನಿಯ ವಿವೇಚನೆಗೆ ಅಥವಾ ಅಭಿಪ್ರಾಯಕ್ಕೆ ಅನುಮೋದನವು ಬೇಕೆಂದಾದರೆ, ನಾನು ಬಹಳ ಮಟ್ಟಿಗೆ ಎಲ್ಲಾ ಧರ್ಮಗಳನ್ನೂ ಮತ್ತು ತತ್ತ್ವಶಾಸ್ತ್ರಗಳನ್ನೂ ವ್ಯಾಸಂಗಮಾಡುವ ದಕ್ಕಾಗಿಯೇ ವಿನಿಯೋಗಿಸಿರುವ ನನ್ನ ದೀರ್ಘ ಜೀವನಾನುಭವದ ಆಧಾರದ ಮೇಲೆ, ವಿನಯದಿಂದ ಸಮ್ಮತಿಕೊಡುತ್ತೇನೆ."

ಮ್ಯಾಕ್ಸ್‌ಮುಲ್ಲರನೇ ಪುನಃ ಹೇಳಿರುವದೇನೆಂದರೆ,

"If philosophy or religion is meant to be a preparation for the after-life, a happy life and happy death, I know of no better preparation for it than vedanta."

ತತ್ತ್ವಜ್ಞಾನವು ಅಥವಾ ಧರ್ಮವು ಜೀವನಾನಂತರದ ಸ್ಥಿತಿಗೂ ಸುಖ ಜೀವನಕ್ಕೂ ಮತ್ತು ಸುಖ ಮರಣಕ್ಕೂ ಸಜ್ಜೀಕರಣವೆಂದು ಉದ್ದಿಷ್ಟವಾಗಿದ್ದರೆ, ಅದಕ್ಕೆ ವೇದಾಂತಕ್ಕಿಂತಲೂ ಹೆಚ್ಚು ಉತ್ತಮವಾದ ಸಿದ್ಧತೆಯನ್ನು ನಾನು ತಿಳಿದಿಲ್ಲ."

ಪುನಃ ಅವನೇ ಹೇಳುವದೇನೆಂದರೆ,

"I am neither ashamed, nor afraid to say that I share his (Schopenhauer's) enthusiasm for vedanta and feel indebted to it for much that has been helpful to me in my passage through life.

"ವೇದಾಂತದ ವಿಷಯದಲ್ಲಿ ಷೋಪೆನ್‌ಹಾವರನಿಗಿರುವ ಉತ್ಸಾಹದಲ್ಲಿ ನಾನು ಭಾಗಿಯಾಗಿದ್ದೇನೆಂದು ಹೇಳಲು ಮತ್ತು ನನ್ನ ಜೀವನಯಾತ್ರೆಯಲ್ಲಿ ಅದು ನನಗೆ

ಬಹಳ ಸಹಾಯವಾಗಿರುವದಕ್ಕಾಗಿ, ಅದಕ್ಕೆ ನಾನು ಋಣಿಯಾಗಿದ್ದೇನೆಂದು ಭಾವಿಸಲು, ನನಗೆ ನಾಚಿಕೆಯೂ ಇಲ್ಲ ಭಯವೂ ಇಲ್ಲ."

ರಾಮನು ನಿಮಗೆ ಸೂಚಿಸಿರುವ ವಿಷಯಕ್ಕೆ ಸಂಬಂಧಪಟ್ಟ ವಿಚಾರಗಳು, ಸರ್ ಎಡ್ವಿನ್ ಆರ್ನಾಲ್ಡ್‌ರ (Sir Edvin Arnold) 'India Revisited' 'ಭಾರತದ ಪುನರ್ದರ್ಶನ'; 'Song celestial' 'ಸ್ವರ್ಗೀಯ ಗೀತಾ'; 'Light of Asia' 'ಏಷ್ಯದ ಜ್ಯೋತಿ'; 'Song of Songs' 'ಗೀತೆಗಳ ಗೀತಾ' ಇವೆಲ್ಲವುಗಳಲ್ಲಿ ಇವೆ.

ಥೋರೋ ಮಹಾಶಯನು ತನ್ನ 'walden letters' 'ವಾಲ್ಡನ್ ಪತ್ರಗಳು' ಎಂಬದರಲ್ಲಿ ಮೇಲಿಂದ ಮೇಲೆ ವೇದಾಂತ ಗ್ರಂಥಗಳಿಗೆ ನಿರ್ದೇಶಿಸುತ್ತಾನೆ; ಮತ್ತು ಅವನ 'Excursion' 'ಸಂತೋಷ ಪ್ರವಾಸ' ಲೇಖನದಲ್ಲಿ ಇಂಡಿಯಾದ ಗ್ರಂಥಗಳನ್ನು ಸೂಚಿಸುತ್ತಾನೆ. ತನ್ನ ವಿಚಾರಗಳನ್ನೆಲ್ಲಾ ಓಂದೂಗಳಿಂದ ಪಡೆದ ನೆಂದು ಒಪ್ಪಿಕೊಂಡಿರುವ ಥೋರೋ ಮಹಾಶಯನಿಂದ ಅಮೆರಿಕಾದ ನೂತನ ವಿಚಾರಗಳೆಲ್ಲದರ ಮೂಲವು ಚಿಮ್ಮಿ ಬಂದಿದೆ.

ಇಂಗ್ಲೆಂಡ್ ಪ್ರವಾಸದ ಅನಂತರ, ಎಮರ್‌ಸನ್ ಅಮೆರಿಕಾಕ್ಕೆ ಹಿಂದಿರುಗುವದ ರಲ್ಲಿದ್ದಾಗ, ರೈಲ್ವೇಸ್ಟೇಷನ್ನಿಗೆ ಕಾರ್ಲೈಲ್ ಅವನ ಜೊತೆಗೂಡಿ ನಡೆದಿದ್ದನು. ಆಗ, ಭಗವದ್ಗೀತೆಯ ಬಹಳ ಮುಂಚಿನ ಭಾಷಾಂತರಗಳಲ್ಲಿ ಒಂದಾದ ಎಡ್ವಿನ್ ಜೋನ್ಸ್‌ನ ಗೀತಾ ಪುಸ್ತಕವನ್ನು ಕಾರ್ಲೈಲ್‌ನು ಎಮರ್‌ಸನ್‌ಗೆ ಬಹುಮಾನವಾಗಿ ಕೊಟ್ಟನು. ಕ್ಯಾಂಟ್ ಮಹಾಶಯನ ಕಾಲಕ್ಕೆ ಮುಂಚೆ ಸಹ, ಈ ಕೃತಿಯು ಲ್ಯಾಟಿನ್, ಫ್ರೆಂಚ್ ಮತ್ತು ಜರ್ಮನ್ ಭಾಷೆಗಳಿಗೆ ಪರಿವರ್ತನೆ ಮಾಡಲ್ಪಟ್ಟಿತ್ತು. ಕ್ಯಾಂಟನು ಯೂರೋಪಿನ ತತ್ತ್ವಶಾಸ್ತ್ರ ವಿಚಾರವನ್ನು ಪುನರುಜ್ಜೀವನಗೊಳಿಸಿದನು; ಅವನು ಪ್ರತಿಪಾದಿಸಿರುವ ಮೂ ಲ ಭೂ ತ ಲಕ್ಷಣವುಳ್ಳ ದೇಶ–ಕಾಲ–ನಿಮಿತ್ತಗಳ ವಿವೇಚನೆಯ ಆಧಾರಕ್ಕೆ ಇಂಡಿಯಾಕ್ಕೆ ಋಣಿಯಾಗಿದ್ದಾನೆ.

ಶ್ರೀಮತಿ ಎಡ್ಡಿಯವರ (Mrs. Eddy) ಕೃತಿಯ ಪ್ರಥಮ ಪ್ರಕಟಣೆಯಲ್ಲಿ ಭಗವದ್ಗೀತೆಯಿಂದ ಉದ್ಧೃತವಾದ ಭಾಗಗಳಿವೆ; ಆದರೆ ಅನಂತರದ ಪ್ರಕಟಣೆ ಗಳಲ್ಲಿ ಅವುಗಳೆಲ್ಲಾ ತೊಡೆದುಹಾಕಲ್ಪಟ್ಟವು. ದೇವರ ಮಾತು, ಅದು ದೇವರ

ಮಾತೇ ಆಗಿದ್ದರೆ, ಅದು ಸ್ಪಷ್ಟವಾಗಿಯೂ ಸರಳವಾಗಿಯೂ ಹೆಚ್ಚಿನ ಮಟ್ಟದ ಅರಿವಾಗಿಯೂ ಇರಬೇಕು.

ಇಲ್ಲಿಯ ಜನರು–ಮತ್ತೊಬ್ಬನ ಭಾವ, ಬರಹ, ಕಲ್ಪನೆ ಮೊದಲಾದವನ್ನು ತಮ್ಮದನ್ನಾಗಿ ಉಪಯೋಗಿಸಿಕೊಳ್ಳುವ–ಕೃತಿ ಚೌರ್ಯ ಮಾಡುವವರೆಂದೂ ಅಥವಾ ಅನುಕರಣ ಮಾಡುವವರೆಂದೂ ರಾಮನು ಹೇಳುವ ಅಭಿಪ್ರಾಯವುಳ್ಳವನಾಗಿಲ್ಲ. ಇಂಡಿಯಾದಿಂದ ತತ್ತ್ವವಿಚಾರಗಳನ್ನು ಪಡೆಯುವದು ಹೇಗೋ ಹಾಗೆ, ಅಮೆರಿಕಾದ ಜನರು ತಾವೇ ಅವುಗಳನ್ನು ಪುನಃ ತಮ್ಮಲ್ಲಿಯೇ ಕಂಡುಹಿಡಿದುಕೊಳ್ಳುವದು ಒಳ್ಳೆಯದೆಂದು ರಾಮನು ಪ್ರತಿಪಾದಿಸುತ್ತಾನೆ.

" There is nothing new under the sun "

" ಲೋಕದಲ್ಲಿ ಯಾವದೂ ಹೊಸದಿಲ್ಲ."

ಆದರೆ ಇಲ್ಲಿಯ ಹೊಸದೆನ್ನುವ ವಿಚಾರಗಳೆಲ್ಲಾ ಹಿಂದೂಗಳಿಂದ ಬಂದಿವೆ, ಎಂದು ಚರಿತ್ರೆಯು ತೋರಿಸುತ್ತದೆ.

ನಿಜವಾದ ಸಮಾಜವಾದವು, ನಿಷ್ಕಪಟವಾದ ಸಮಾಜವಾದವು, ಇವತ್ತು ಹಿಮಾಲಯದ ಸ್ವಾಮಿಗಳಲ್ಲಿ ವಾಸ್ತವವಾಗಿ ಬಳಕೆಯಲ್ಲಿದೆ. ಇಂಗ್ಲೆಂಡಿನ ಎಡ್ವರ್ಡ್ ಕಾರ್ಪೆಂಟರ್ ಸಮಾಜವಾದವನ್ನು ಹಿಂದೂಗಳಿಂದ ಪಡೆದನು. ಆದ್ದರಿಂದ ನಿಮ್ಮ ಹೊಸ ವಿಚಾರವೆನ್ನುವದೆಲ್ಲಾ ಹಳೆಯದು, ಹಿಂದೂಗಳ ಓಬೀರಾಯನ ಕಾಲದ ವಿಚಾರಗಳು. ನೈಜವಾದ ಕೇಂದ್ರವು, ಸಮಗ್ರ ಸತ್ಯವು, ಎಲ್ಲಾ ಹೊಸ ವಿಚಾರವೂ ದಿವ್ಯಾತ್ಮರೆ, ಹಿಂದೂಗಳಲ್ಲಿವೆ ; ಅವುಗಳನ್ನು ಪಡೆಯುವದಕ್ಕೆ ನೀವು ಇನ್ನೂ ಸ್ವಲ್ಪ ಕಾಯಬೇಕಾಗಿದೆ ; ಇಂಡಿಯಾದಿಂದ ನೀವು ಇನ್ನೂ ಹೆಚ್ಚು ಜ್ಞಾನವನ್ನು ಪಡೆಯಬೇಕು, ಅಮೆರಿಕಾದ ಎಲ್ಲಾ ಹೊಸ ವಿಚಾರಗಳನ್ನೂ ನಿರೂಪಿಸುವ ಯೋಗವಾಸಿಷ್ಠದಂಥ ಅನೇಕ ಅದ್ಭುತ ಗ್ರಂಥಗಳು ನಿಮ್ಮ ಭಾಷೆಗೆ ಇನ್ನೂ ಪರಿವರ್ತನೆಯನ್ನು ಪಡೆದಿಲ್ಲ. ಯೋಗವಾಸಿಷ್ಠವು ಸ್ಪಷ್ಟವಾಗಿಯೂ ವ್ಯಾಪಕವಾಗಿಯೂ ತರ್ಕಬದ್ಧವಾಗಿಯೂ ಇದೆಯಲ್ಲದೆ, ನೈಜವೂ ಶುದ್ಧವೂ ಆದ ಪದ್ಯಕಾವ್ಯದಲ್ಲಿ ಬರೆಯಲ್ಪಟ್ಟಿದೆ. ನಮ್ಮ ಗಣಿತ ಶಾಸ್ತ್ರ ಗ್ರಂಥಗಳೂ ಕೂಡ ಈ ರೀತಿಯಲ್ಲಿಯೇ ಬರೆಯಲ್ಪಟ್ಟಿವೆ. ಅನೇಕ ವಿದ್ಯಾರ್ಥಿಗಳಿಗೆ ಆಗಿರುವ ಕಲ್ಪಿತವಾದ

ಭಯಂಕರ ಭೂತಕ್ಕೆ ಬದಲಾಗಿ, ಗಣಿತ ಶಾಸ್ತ್ರದಂತೆ ವೇದಾಂತವು ಸಂತೋಷದ ವ್ಯಾಸಂಗವಾಗಿ ಮಾಡಲ್ಪಟ್ಟಿದೆ.

ಈ ಪ್ರಪಂಚದಲ್ಲಿ ಯಾವ ಕಾರ್ಯವನ್ನಾದರೂ ಸಂತೋಷದಿಂದ ಮಾಡಬೇಕು. ರಾಮನಿಗೆ ಈ ಸಂದರ್ಭದಲ್ಲಿ ಒಂದು ದೃಶ್ಯದ ನೆನಪು ಬರುತ್ತದೆ. ಒಂದು ತೋಟದಲ್ಲಿ ಬಡ ಜೀತದ ಕೂಲಿಗಳು ಪಕ್ಕದ ಹಾದಿಗಳಲ್ಲಿ ಕಲ್ಲುಗಳನ್ನು ಒಡೆಯುತ್ತಿದ್ದಾರೆ. ಅವರು ರಾತ್ರಿ ಹಗಲೂ ಶ್ರಮಪಟ್ಟು ದುಡಿಯುತ್ತಿದ್ದಾರೆ. ತಮ್ಮದು ಗುಲಾಮಗಿರಿಯ ಚಾಕರಿಯೆಂಬ ಭಾವನೆಯಿಂದ ಅವರ ಹೃದಯಗಳು ದುಃಖ ಭರಿತವಾಗಿ ಭಾರವಾಗಿವೆ. ಅದೇ ತೋಟದಲ್ಲಿ ಆ ಕೂಲಿಗಳ ಕಾರ್ಯ ಕ್ಷೇತ್ರಕ್ಕೆ ಸ್ವಲ್ಪ ದೂರದಲ್ಲಿ, ಬಯಲಿನ ಪ್ರದೇಶದ ಕ್ರೀಡಾಂಗಣದಲ್ಲಿ, ಅದೇ ಸಮಯದಲ್ಲಿ, ಕೆಲವರು ರಾಜಕುಮಾರರು ಟೆನ್ನಿಸ್ ಆಟವನ್ನು ಆಡುತ್ತಿದ್ದಾರೆ. ಅವರ ಅತ್ಯುತ್ಸಾಹದ ಬಿರುಸಿನ ಆಟದ ಭರದಲ್ಲಿ ಆ ಕೂಲಿಗಳಿಗಿಂತಲೂ ಹೆಚ್ಚಾಗಿ ಅವರು–ಚಾಕಚಕ್ಯದ ಓಟದ, ಆಟದ ಚಕಮಕಿಯ ಶ್ರಮದಿಂದ–ಬೆವರುತ್ತಿದ್ದಾರೆ. ಆದರೆ ಅವರು ಆ ಶ್ರಮವನ್ನು ವ್ಯಾಯಾಮವೆಂದೂ ಆಟದ, ಓಟದ, ಏಟುಗಳನ್ನು ವಿನೋದವೆಂದೂ ಬೆವರುತ್ತಿರುವದನ್ನು ಹಿತಕರವೆಂದೂ ಎಲ್ಲವನ್ನೂ ಸಂತೋಷೋಲ್ಲಾಸಗಳ ಕೋಲಾಹಲವೆಂದು ನಲಿದಾಡುತ್ತಾರೆ. ಹಾಗೆ ಈ ಪ್ರಪಂಚದ ಕಾರ್ಯಗಳಲ್ಲಿ ನಿಮ್ಮ ಮನೋಭಾವವು ಕ್ರೀಡಾಸಕ್ತರಾದ ರಾಜಕುಮಾರರಂತೆ ಇರಲಿ. ನಿಮ್ಮ ಶ್ರಮವು ನಿಮಗೆ ವ್ಯಾಯಾಮವೂ ವಿನೋದವೂ ಆಗಿರಲಿ. ನೀವು ಕರ್ಮವನ್ನೂ ದುಡಿಮೆಯನ್ನೂ ಬಿಡಬೇಕೆಂದಲ್ಲ ; ಆದರೆ ಅವುಗಳಲ್ಲಿರುವ, ಅವುಗಳ ವಿಷಯಕ್ಕಿರುವ, ನಿಮ್ಮ ಮನೋಭಾವವು ಬದಲಾಯಿಸಬೇಕು. ಕೆಲಸವೂ ಸಂತೋಷವೂ ಯಾವಾಗಲೂ ಜೊತೆ ಜೊತೆಗೆ ಇರಬೇಕು. ನಿಮ್ಮ ದೇವತ್ವದಲ್ಲಿ ಕೇಂದ್ರೀಕರಿಸಿರುವ ನೈಜವಾದ ಇನ್ನೊಂದು ಆನಂದದಿಂದ ನೀವು ತುಂಬಿರುತ್ತೀರಿ. ನಿಮ್ಮ ದೈವಿಕ ಸ್ವಭಾವದ ನೇರವಾದ ಉನ್ನತ ದೇವದಾರು ವೃಕ್ಷದ ತುದಿಯಲ್ಲಿ ನೀವು ಕುಳಿತಿರುವಾಗ, ಸುಂದರ ಆಧ್ಯಾತ್ಮಿಕ ವಿಚಾರದ ದೈವಿಕ ಸ್ವಭಾವದ ಶಿಖರದಲ್ಲಿದ್ದಾಗ, ನಿಮ್ಮ ದಿವ್ಯಾತ್ಮದಿಂದ ದೈವೀಗಾನವೂ ಆಶ್ಚರ್ಯಕರ ಕಾರ್ಯವೂ ಹೊರಹೊಮ್ಮುತ್ತಿರುತ್ತವೆ. ಯಾವದು ಬಲಾತ್ಕಾರದಿಂದ ಬರುತ್ತದೋ ಅದು ಬಲಶಾಲಿಯಾಗಿರುವದಿಲ್ಲ.

ಸೂರ್ಯನಿಂದ ಪ್ರಕಾಶವು ಹೇಗೆ ಉದ್ಗಮಿಸುತ್ತದೆಯೋ ಗುಲಾಬಿಯಿಂದ ಪರಿಮಳವು ಹೇಗೆ ಪ್ರಸರಿಸುತ್ತದೆಯೋ ಹಿಮಾಲಯದ ಸುಂದರ ಹಿಮಶಿಖರಗಳಿಂದಲೂ ಪರ್ವತ ಝರಿಗಳಿಂದಲೂ ಚಿಲುಮೆಗಳಿಂದಲೂ ಹಿತಶೀತಲ ಮಾರುತವು

ಹೇಗೆ ಬೀಸುತ್ತದೆಯೋ ಹಾಗೆ, ಓ ಪ್ರಕಾಶಗಳ ದಿವ್ಯ ಪ್ರಕಾಶವೇ, ನಿಮ್ಮಿಂದ ಶಾಂತಿಯೂ ಸಂತೋಷವೂ ಪ್ರೀತಿಯೂ ಜ್ಯೋತಿಯೂ ಹೊರಚಿಮ್ಮಲಿ! ಓಂ, ನಿಮ್ಮಲ್ಲಿ ಶಾಂತಿಯಿರಲಿ!

ಓಂ! ಓಂ! ಓಂ!

# An Appeal to Americans on behalf of India

# ಇಂಡಿಯಾದ ಪರವಾಗಿ ಅಮೇರಿಕಾ ಜನರಲ್ಲಿ ಒಂದು ಮನವಿ

## ತಾ॥ 28–1–1903 ರಲ್ಲಿ ಸ್ಯಾನ್‌ಫ್ರ್ಯಾನ್‌ಸಿಸ್ಕೋ 'ಗೋಲ್ಡನ್ ಗೇಟ್ ಹಾಲ್' ನಲ್ಲಿ ಮಾಡಿದ ಉಪನ್ಯಾಸ

ಸಂಪನ್ನ ಸ್ತ್ರೀಪುರುಷರ ರೂಪದಲ್ಲಿರುವ ನನ್ನ ಆತ್ಮವೆ,

ಈ ರಾತ್ರಿಯ ಪ್ರವಚನದ ವಿಷಯವು "ಅಮೇರಿಕಾ ಜನರಲ್ಲಿ ಒಂದು ಮನವಿ ಅಥವಾ ಬೇಡಿಕೆ." ಏಕೆ, ಬಹಳ ಕೆಲವೇ ಅಮೇರಿಕನ್‌ರು ಮಾತ್ರ ಇವತ್ತು ಬಂದಿದ್ದಾರೋ ತಿಳಿಯದು. ಒಳ್ಳೆಯದು, ಪರವಾಯಿಲ್ಲ; ರಾಮನ ದೃಷ್ಟಿಯಲ್ಲಿ, ಇವತ್ತು ಬಂದಿರುವಷ್ಟೇ ಜನರು ಸಹ, ಅಮೇರಿಕಾ ದೇಶವನ್ನು ಮಾತ್ರವಲ್ಲ, ಯೂರೋಪ್ ದೇಶವನ್ನೂ ಸಮಗ್ರ ವಿಶ್ವವನ್ನೇ ಪ್ರತಿನಿಧಿಸುತ್ತಾರೆ. ಇವತ್ತು ರಾತ್ರಿ ಆಡುವ ಈ ಮಾತುಗಳ ಮೊರೆ ಈ ಸಣ್ಣ ಶ್ರೋತೃವೃಂದದ ಹೃದಯಗಳಿಗೆ ಮುಟ್ಟಿದರೆ, ಈ ಮಾತುಗಳು ನಿಮ್ಮಲ್ಲಿ ಒಬ್ಬರ ಹೃದಯದಲ್ಲಿ ಆದರೂ ಪ್ರವೇಶಿಸಿದರೆ, ನಿಮ್ಮಲ್ಲಿ ಐದು, ಆರು, ಏಳು ಜನರಾದರೂ ಈ ಕೆಲಸವನ್ನು ಕೈಗೊಂಡರೆ, ಅಥವಾ ಈ ಅರಣ್ಯರೋದನವನ್ನು ಕೇಳಿದರೆ, ಈ ಮಾತುಗಳು ಸಾರ್ಥಕವಾದವೆಂದು ರಾಮನು ಪರಿಗಣಿಸುತ್ತಾನೆ.

ರಾಮನು ನಿಮ್ಮೊಳಗಿರುವ ದೇವತ್ವಕ್ಕೂ ಅನಂತತೆಗೂ ಈ ಬೇಡಿಕೆಯನ್ನು ಸಲ್ಲಿಸುತ್ತಾನೆ; ಒಬ್ಬನಲ್ಲಿ ಆದರೂ ಸಹ, ಒಳಗಿರುವ ಅನಂತವು ಅದ್ಭುತ ಪವಾಡಗಳನ್ನು ಮಾಡಬಲ್ಲದೆಂದು ರಾಮನು ನಿಶ್ಚಿತವಾಗಿ ನಂಬುತ್ತಾನೆ. ನಿಮ್ಮ ನಿಜಾತ್ಮನ ಅಥವಾ ಅನಂತತೆಯ ಎದುರಿಗೆ ಜನಾಂಗಾಭಿಮಾನ ಮತ್ತು ಮತಪಂಥಾಭಿಮಾನವೆಂಬ ಪರದೆಯನ್ನು ದಯವಿಟ್ಟು ಎಳೆದುಕೊಳ್ಳಬೇಡಿ; ಒಂದು ಗಂಟೆಯ ಕಾಲವಾದರೂ ನೀವು ಎಲ್ಲಾ ತೆರೆಮರೆಗಳನ್ನೂ ದಯವಿಟ್ಟು ಅತ್ತ ಸರಿಸಿ, ಕಿತ್ತೆಸೆದು, ಪರಕೀಯನ

ಮಾತನ್ನು ಪ್ರೀತಿಪೂರ್ವಕವಾಗಿ ಗಮನವಿಟ್ಟು ಕೇಳುವದಕ್ಕೆ ಅವಕಾಶ ಕೊಡದಿರುವ ವರ್ಣ (ಬಣ್ಣ), ಜಾತಿ, ಮತ ಮೊದಲಾದ ಎಲ್ಲಾ ಭೇದಭಾವಗಳನ್ನೂ ತೊಡೆದು ಹಾಕಿ, ಆಲಿಸಿರಿ.

## ಹಿಂದೆ (ಇಂಡಿಯಾ) ಭಾರತವು ಮಾಡಿದ ಕಾರ್ಯ

ರಾಮನು ಬಹಳ ಮಟ್ಟಿಗೆ ಈಗ ಎರಡು ತಿಂಗಳಕಾಲ ಭಾರತದ ಜ್ಞಾನ-ವಿಜ್ಞಾನಗಳ ಶಿರೋರತ್ನರಾಜಿಯ ವಿಷಯವಾಗಿ ಮಾತನಾಡುತ್ತಿದ್ದಾನೆ; ಅವನು ನಿಮಗೆ ಪೋಷಕವಾದ ಅಮೃತವನ್ನೂ ಇಂಡಿಯಾದ ವೇದಶಾಸ್ತ್ರಗಳ ವೀರ್ಯ ಭರಿತವಾದ ಹಾಲನ್ನೂ ಎರೆದಿದ್ದಾನೆ. ಇವತ್ತು ರಾಮನು ಆ ರತ್ನಗಳನ್ನು ನೀಡಿದ ಗಣಿಯ ವಿಷಯವಾಗಿಯೂ ಆ ಹಾಲನ್ನು ಕರೆದ ಕಾಮಧೇನುವಿನ ವಿಷಯವಾಗಿಯೂ ಈ ಸತ್ಯವನ್ನು ಮೊದಲು ಪ್ರಸಾರಮಾಡಿದ ದೇಶದ ವಿಷಯವಾಗಿಯೂ ಪ್ರಪಂಚಕ್ಕೇ ತನ್ನ ಧರ್ಮಗಳನ್ನು ದಾನಮಾಡಿದ ಪುಣ್ಯಭೂಮಿಯ ವಿಷಯವಾಗಿಯೂ ಕೆಲವು ವಿಚಾರಗಳನ್ನು ಹೇಳಬಯಸುತ್ತಾನೆ. ಹೌದು, ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪ್ರಪಂಚಕ್ಕೆಲ್ಲಾ ಭಾರತವೇ ಧರ್ಮಗಳನ್ನು ಕೊಟ್ಟಿದೆ. ಪ್ರತಿನಿತ್ಯವೂ ಯೂರೋಪ್ ಅಮೆರಿಕಾದೇಶಗಳಲ್ಲಿ ಪುಟಿದು ತಲೆದೋರುತ್ತಿರುವಂಥ ನಿಮ್ಮ ಎಲ್ಲಾ ನೂತನ ಧರ್ಮಗಳನ್ನೂ ಆರಾಧನಾ ಪಂಥ-ಪದ್ಧತಿಗಳನ್ನೂ ಇನ್ನೂ ಕೊಡುತ್ತಿರುವ ನಾಡಿನ ವಿಷಯವಾಗಿ ನಿಮಗೆ ರಾಮನು ಹೇಳಬೇಕೆಂದಿದ್ದಾನೆ.

ಇವತ್ತು ನೀವು ಯಾವದಕ್ಕಾಗಿ ಹೆಮ್ಮೆಪಡುತ್ತೀರೋ ಆ ನಿಮ್ಮ ಎಲ್ಲಾ ಹೊಸ ವಿಚಾರಗಳೂ ಬ್ರಹ್ಮವಿದ್ಯೆಯೂ (Theosophy) ಪ್ರೇತ (ಸವ್ಯವಹಾರ) ವಿಜ್ಞಾನ (Spiritualism), ಕ್ರೈಸ್ತ ವಿಜ್ಞಾನ, ಮಾನಸ ಚಿಕಿತ್ಸೆ (Mental healing) ಇವೆಲ್ಲವೂ ಒಂದೂ, ಹೊರತಾಗದಂತೆ, ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಇಂಡಿಯಾದಿಂದ ಉದಿಸಿಬಂದಿವೆ. ಹಿಂದಿನ ಕಾಲದಲ್ಲಿಯೋ ಇಂದಿನ ಕಾಲದಲ್ಲಿಯೋ ಎಲ್ಲಾ ಬಗೆಯ ತತ್ತ್ವಶಾಸ್ತ್ರ ಪದ್ಧತಿಗಳನ್ನೂ ಜಗತ್ತಿಗೆ ಕೊಟ್ಟಂಥ ಧರ್ಮ ಭೂಮಿಯ ವಿಚಾರವನ್ನು ರಾಮನು ನಿಮಗೆ ಹೇಳುತ್ತಿದ್ದಾನೆ. ನಿಮ್ಮ ಗ್ರೀಸ್ ದೇಶದ ತತ್ತ್ವಜ್ಞಾನಿಗಳಾದ ಸಾಕ್ರೇತಿಸ್, ಪ್ಲೇಟೋ, ಅರಿಸ್ಟೋಟಲ್, ಪೈಥಾಗೊರಸ್, ಪ್ಲೋಟಿನಸ್, ಇವರೆಲ್ಲರೂ ತಮ್ಮ ಸ್ಫೂರ್ತಿಗೆ ಇಂಡಿಯಾಕ್ಕೆ ಋಣಿಗಳಾಗಿದ್ದಾರೆ. ತತ್ತ್ವಶಾಸ್ತ್ರದ ಚರಿತ್ರೆಯು ನಿಮಗೆ ಅದನ್ನು ತೋರಿಸುತ್ತದೆ.

ಷೋಪೆನ್ ಹಾವರ್, ಸ್ಕ್ಲೆಗೆಲ್ (Schlegel), ಷೆಲ್ಲಿಂಗ್ (Schelling) ಎಂ. ಕಸಿನ್ ಎಲ್ಲರೂ ತಾವು ಇಂಡಿಯಾದ ವೇದಾಂತದಿಂದಲೂ ಸಾಂಖ್ಯಶಾಸ್ತ್ರದಿಂದಲೂ ಬೌದ್ಧಮತದಿಂದಲೂ ಉಪನಿಷತ್ತುಗಳಿಂದಲೂ ಗೀತೆಯಿಂದಲೂ ತಮ್ಮ ಸ್ಫೂರ್ತಿಯನ್ನು ಪಡಿದಿರುವದಾಗಿ ಮನಬಿಚ್ಚಿ ಒಪ್ಪಿಕೊಂಡಿದ್ದಾರೆ. ನಿಮ್ಮ ಅಮೇರಿಕಾದ, ಇಂಗ್ಲೆಂಡಿನ, ಅಥವಾ ಜರ್ಮನಿಯ ಆಧುನಿಕ, ಒಂದೇ ಒಂದು ಸತ್ತ್ವದ ಅಸ್ತಿತ್ವವನ್ನು ಪ್ರತಿಪಾದಿಸುವ (ಭೌತದ್ರವ್ಯ ಮತ್ತು ಮಾನಸಿಕ ದ್ರವ್ಯ ಬೇರೆ ಬೇರೆ ಎಂಬ ಭಾವನೆಯನ್ನು ನಿರಾಕರಿಸುವ) ಏಕತತ್ತ್ವವಾದವು (Monism) ಇಂಡಿಯಾದಿಂದ ಬೆಳಕನ್ನು ಪಡೆದಿದೆ. ಶಂಕರ, ಕೃಷ್ಣರ, ನಾಡಿನ ವಿಷಯವಾಗಿ ರಾಮನು ನಿಮಗೆ ಹೇಳುತ್ತಾನೆ. ಮಾನ್ಯರಾದ ನಿಮ್ಮ ಎಮರ್‌ಸನ್, ವಾಲ್ಟ್‌ವ್ಹಿಟ್‌ಮನ್, ಎಡ್ವಿನ್‌ಆರ್ನಾಲ್ಡ್ ಮತ್ತು ಮ್ಯಾಕ್ಸ್ ಮುಲ್ಲರ್ ಮೊದಲಾದವರಿಗೆ ಸ್ಫೂರ್ತಿಯನ್ನಿತ್ತು ಉತ್ಸಾಹವನ್ನು ತುಂಬಿದಂಥ ಉದಾತ್ತ ವಿಚಾರಗಳನ್ನೂ ಉನ್ನತ ಭಾವನೆಗಳನ್ನೂ ಹೊರತಂದಿರುವ ಆ ನಾಡು, ಪದ್ಯ ಕಾವ್ಯ ಮತ್ತು ತತ್ತ್ವಶಾಸ್ತ್ರಗಳಿಗೆ ಮಾತ್ರವೇ ಅಲ್ಲ. ದೈಹಿಕವಾದ ಶಕ್ತಿ, ವೀರ್ಯ, ಶೌರ್ಯ, ಪ್ರತಾಪಗಳಿಗೂ ಪ್ರಸಿದ್ಧವಾಗಿದೆ. “ದೈಹಿಕ ಶಕ್ತಿ–ಶೌರ್ಯಗಳಿಗೂ ಕಡಿಮೆಯಿಲ್ಲದ ನಾಡು” ಎಂದೊಡನೆ ನಿಮಗೆ ಆಶ್ಚರ್ಯವಾಗಬಹುದು. ಈ ಕಾಲದಲ್ಲಿ ಸಹ, ಬ್ರಿಟಿಷ್ ಸರ್ಕಾರಕ್ಕೆ ಅತ್ಯಂತ ಮಹತ್ತಾದ ಸಹಾಯವನ್ನೂ, ಸಂರಕ್ಷಣೆಯನ್ನೂ ಕಲ್ಪಿಸಿರುವ ಜನರು, ಯೋಧರು ಯಾರೆಂದು ತಿಳಿದಿದ್ದೀರಿ ? ಅವರು ಇಂಡಿಯಾದ ಸಿಖ್ಖರು, ಘೂರ್ಕರು, ಮಹಾರಾಷ್ಟ್ರರು, ಮತ್ತು ರಾಜಪುತ್ರರು (ರಜಪೂತರು). ಬ್ರಿಟಿಷರು ತಮ್ಮ ಅತ್ಯಂತ ಪ್ರಬಲ ದುಷ್ಟ ಶತ್ರುಗಳನ್ನು ಎದುರಿಸಬೇಕಾದ ಎಲ್ಲಾ ಸಂದರ್ಭಗಳಲ್ಲಿಯೂ ಯುದ್ಧ ಕಾರ್ಯದ ಭರವನ್ನೂ ಬಿರುಸನ್ನೂ ತಡೆಯಬಲ್ಲವರು ಇಂಡಿಯಾದ ವೀರಯೋಧರೇ ಎನ್ನುವದನ್ನು ಮರೆಯಬಾರದು. ಒಂದಾನೊಂದು ಕಾಲದಲ್ಲಿ ಅತ್ಯಂತ ಸಂಪದ್ ಭರಿತವಾಗಿದ್ದ ದೇಶದ ವಿಷಯವಾಗಿ ರಾಮನು ನಿಮಗೆ ತಿಳಿಸುತ್ತಿದ್ದಾನೆ. ಇಂಡಿಯಾ ದೇಶವನ್ನು ಸುಲಿದು, ಕಿತ್ತುತಿನ್ನುವುದರಿಂದ ದೇಶಗಳ ಮೇಲೆ ದೇಶಗಳು ಅಭಿವೃದ್ಧಿಯನ್ನು ಪಡೆದವು. ಅತ್ಯಂತ ಮಹದಾಶೆಗೆ ವಿಷಯವಾಗಿದ್ದ ಇಂಡಿಯಾದೇಶವನ್ನು ಹುಡುಕಿ ಪಡೆಯುವ ಸಾಹಸದಲ್ಲಿ ಕೊಲಂಬಸ್ಸನು ಅಮೆರಿಕೆಯನ್ನು ಕಂಡುಹಿಡಿದನು. ಮೊಟ್ಟಮೊದಲು ಅಮೆರಿಕೆಯನ್ನು ಇಂಡಿಯಾ ಎಂದೇ ಕರೆಯುತ್ತಿದ್ದರು. ಏಕೆಂದರೆ, ಒಂದು ಕಾಲದಲ್ಲಿ ಇಂಡಿಯಾದೇಶವು ಜಗತ್ತಿಗೇ ಮಸ್ತಕಪ್ರಾಯವಾಗಿತ್ತು. ಅತ್ಯಂತ ಉತ್ಕೃಷ್ಟವಾದ ಅರಣ್ಯಗಳಿಂದಲೂ ಫಲವತ್ತಾದ ಭೂಮಿಗಳಿಂದಲೂ ಮುಸುಕಿರುವ ಮಹತ್ತಾದ ಹಿಮಾಲಯ ಪರ್ವತವುಳ್ಳ ಇಂಡಿಯಾದೇಶವು ಪ್ರಪಂಚದಲ್ಲಿ ಘನತೆ ಗೌರವಗಳಿಂದಲೂ ಯೋಗ್ಯತೆಯಿಂದಲೂ ಅತ್ಯಂತ ಉತ್ಕರ್ಷವನ್ನೂ ಔನ್ನತ್ಯವನ್ನೂ

ಪಡೆದಿದ್ದಿತು. ಭಾರತವು ಪ್ರಪಂಚದ ಮಸ್ತಕವಾಗಿತ್ತೆನ್ನುವಾಗ ಭೌತಿಕವಾಗಿಯೇ ಅಲ್ಲ ; ಅದು ಬೌದ್ಧಿಕವಾಗಿಯೂ ನೈತಿಕವಾಗಿಯೂ ಆಧ್ಯಾತ್ಮಿಕವಾಗಿಯೂ ಲೋಕದ ಶಿಖರವಾಗಿತ್ತು, ಕೀರ್ತಿಯ ಕಲಶವಾಗಿತ್ತು. ಹೀಗೆ ಲೋಕದ ಮುಡಿಯಲ್ಲಿದ್ದ ಆ ದೇಶವು ಇವತ್ತು ಲೋಕದ ಅಡಿಯಲ್ಲಿದೆ. ಓ, ಅಮೆರಿಕದ ಜನರೆ, ಇವತ್ತು ನೀವು ಪ್ರಪಂಚದ ಮಸ್ತಕದಲ್ಲಿದ್ದೀರಿ ; ಇಂಡಿಯಾ ನಿಮ್ಮ ಅಭಿಪಾದಿಯಾಗಿದೆ, ನಿಮ್ಮ ಪಾದವಾಗಿದೆ. ಅಮೆರಿಕಾ ಮತ್ತು ಇಂಡಿಯಾ ಈ ಎರಡೂ ಭೂಮಂಡಲದ ವ್ಯಾಸದ ಎರಡು ಕೊನೆಗಳಲ್ಲಿ ಎದುರುಬದುರಿಗಿರುವ ದೇಶಗಳು ; ಆದ್ದರಿಂದ ಈ ಎರಡೂ ಪರಸ್ಪರ ಪೂರ್ಣ ವಿರುದ್ಧದಿಶೆಯಲ್ಲಿರುವ ಅಭಿಪಾದಿಗಳು. ರಾಮನು ನಿಮ್ಮಲ್ಲಿ ಒಂದು ಬೇಡಿಕೆಯಿಂದ ಬಂದಿದ್ದಾನೆ. ಓ ಮಸ್ತಕವೆ ; ನೀನು ಬಲಿಷ್ಠವಾಗಿಯೂ ಆರೋಗ್ಯವಾಗಿಯೂ ಇರಬೇಕಾದರೆ, ನೀನು ನಿನ್ನ ಪಾದದ ಆರೋಗ್ಯವನ್ನೂ ಶಕ್ತಿಯನ್ನೂ ರಕ್ಷಿಸಬೇಕು. ಕಾಲುಗಳಿಗೆ ಏನಾದರೂ ಕೇಡಾದರೆ ನೋವಾದರೆ, ತಲೆಯೂ ಕಷ್ಟಪಡಬೇಕಾಗುತ್ತದೆ. ಕಾಲಿಗೆ ಅಪಾಯವಾದರೆ, ಅದು ತಲೆಗೂ ಅಪಾಯವಲ್ಲವೆ ? ಓ ತಲೆಯೆ, ನಿನ್ನ ಅಭಿಪಾದಿಗಳ (Antipodes) ಪರವಾಗಿ ರಾಮನು ನಿನ್ನಲ್ಲಿ ನಿವೇದಿಸುತ್ತಾನೆ, ಅಥವಾ ಬೇಡಿಕೊಳ್ಳುತ್ತಾನೆ.

ತನ್ನ ತತ್ತ್ವಶಾಸ್ತ್ರಗಳಿಂದಲೂ ಮತ್ತು ಪದ್ಯಕಾವ್ಯಗಳಿಂದಲೂ ತನ್ನ ಉನ್ನತ ಭಾವನೆಗಳಿಂದಲೂ ವಿಚಾರಗಳಿಂದಲೂ ಮತ್ತು ಧರ್ಮದಿಂದಲೂ ಇಡೀ ಜಗತ್ತನ್ನು ಪೋಷಣೆಮಾಡಿದ ಆ ಪ್ರಾಚೀನ ವಿಶ್ವಮಾತೆಯು, ಜಗಜ್ಜನನಿಯು ಇವತ್ತು ರೋಗ ಗ್ರಸ್ತಳಾಗಿದ್ದಾಳೆ. ಇವತ್ತು ನಿಮ್ಮ ತಾಯಿಯು ವ್ಯಾಧಿಯಿಂದ ನರಳುತ್ತಿದ್ದಾಳೆ. ಆರ್ಯಕುಲದ ಜ್ಯೇಷ್ಠ–ಶ್ರೇಷ್ಠ ಸಹೋದರಿಯಾದ ಭಾರತಿಯು (ಇಂಡಿಯಾ) ಇವತ್ತು ಅಪಾಯದಲ್ಲಿದ್ದಾಳೆ, ಕಷ್ಟದಲ್ಲಿದ್ದಾಳೆ. ನೀವು ಆಕೆಯ ಯೋಗಕ್ಷೇಮವನ್ನು ನೋಡಲಾರಿರಾ ? ಸಮೃದ್ಧಿಯ ಗೋಮಾತೆಯು, ಕಾಮಧೇನುವು ಈಗ ಕ್ಷೀಣವಾಗಿದ್ದಾಳೆ ; ಅವಳಿನ್ನೂ ಸತ್ತಿಲ್ಲ. ಆದ್ದರಿಂದ ನೀವು ಆಕೆಗೆ ಸಹಾಯಮಾಡಬಹುದು. ಆಕೆಯ ಬಾಧಾ ಪರಿಹಾರ ಕಾರ್ಯದಲ್ಲಿ ನೀವು ಸಹಾಯ ನೀಡಬಹುದು. ಭಾರತಿಯು ಕಾಮಧೇನುವಿನಂತೆ ಜಗತ್ತಿಗೆ ಪೋಷಕವಾದ ಆಹಾರವೂ ಶಕ್ತಿವರ್ಧಕವಾದ ತ್ರಾಣಿಕವೂ (Tonic) ಸ್ಫೂರ್ತಿಪ್ರದವಾದ ಸುಜ್ಞಾನವೂ ಆದ ಕ್ಷೀರಾಮೃತವನ್ನು ಅನಾದಿ ಕಾಲದಿಂದಲೂ ಕೊಡುತ್ತಿದೆ. ಹಾಲನ್ನು ಕೊಡುವ ಆಕಳನ್ನು ನಾವು ಸೇವಿಸುವಂತೆ ಭಾರತಿಯನ್ನು ಉಪಚರಿಸಿ ಕಾಪಾಡಬೇಕು. ಈಗ ಅದು ಹೊಟ್ಟೆಗಿಲ್ಲದೆ ಹಸಿವಿನಿಂದ ತಪಿಸಿ, ಕೃಶವಾಗಿ ಸಾಯುತ್ತಿದೆ ; ತೀವ್ರವಾಗಿ ನೋಯುತ್ತಿದೆ. ಆಕೆಗೆ ಹುಲ್ಲ ಮೇವನ್ನು ಮಾತ್ರ ಹಾಕಿ ಸಾಕಬೇಕು. ಪ್ರಪಂಚವು ಆಕೆಯಿಂದ ಪುಷ್ಟಿಯಾದ

ಹಾಲನ್ನು ಹೀರುತ್ತಿದೆ ; ಅದಕ್ಕೆ ಪ್ರತಿಯಾಗಿ ಆಕೆಯು ಜೀವಮಾತ್ರ ಉಳಿಯುವದಕ್ಕೆ ಅಗ್ಗವಾದ ಹುಲ್ಲನ್ನು ಅಥವಾ ಏನನ್ನಾದರೂ ಆಕೆಗೆ ನೀಡಿದರೆ ಸಾಕು. ಆದರೆ, ಗೋಮಾಂಸ ಭಕ್ಷಕರಾದ ಇಂಗ್ಲೆಂಡಿನವರೂ ಮಾಂಸಾಹಾರಿಗಳಾದ ಯುರೋಪಿನವರೂ " ಈ ಹಸುವನ್ನು ನಾವು, ಮೇವುಹಾಕಿ ಸಾಕಲಾರೆವು ; ಆದರೆ ನಾವು ಅದನ್ನು ಕೊಂದು ತಿನ್ನಬೇಕು." ಎನ್ನುತ್ತಾರೆ. ಒಳ್ಳೆಯದು ; ನಿಮ್ಮ ಇಷ್ಟಬಂದಂತೆ ನೀವು ಮಾಡಬಹುದು ; ಆದರೆ ಒಂದು ವಿಷಯವನ್ನು ನೆನಪಿನಲ್ಲಿಡಿ ; ನೀವು ಒಂದುವೇಳೆ ಹಸುವನ್ನು ಕೊಂದು ತಿನ್ನಬೇಕಾದರೂ ನೀವು ಅದರ ಆರೋಗ್ಯವನ್ನು ರಕ್ಷಿಸಬೇಕು. ಅನಾರೋಗ್ಯವಾದ ಹಸುವಿನಿಂದ ಬಂದಂಥ ಮಾಂಸವೂ ನಿಮ್ಮ ಆರೋಗ್ಯವನ್ನು ಕೆಡಿಸುತ್ತದೆ ; ನಿಮಗೆ ಅಪಾಯಕರವಾಗುತ್ತದೆ.

ಓ, ಇಂಗ್ಲೆಂಡ್ ಮತ್ತು ಯುರೋಪಿನ ರಾಜಕೀಯ ಶಕ್ತಿಗಳೆ, ಭಾರತೀಯ ಆರೋಗ್ಯವನ್ನಾದರೂ ನೀವು ರಕ್ಷಿಸಬೇಕು.

## Hopes from America

## ಅಮೆರಿಕಾದ ಭರವಸೆ

ಇವತ್ತಿನ ವೀರಪುರುಷರೂ ಉದಾತ್ತ ಭಾವನೆಯುಳ್ಳ ಶ್ರೇಷ್ಠ ಜನರೂ ಬಲಿದಾನಕ್ಕೆ ಸಿದ್ಧರಾಗಿರತಕ್ಕವರೂ ವೈಜ್ಞಾನಿಕ–ವೈದ್ಯಕೀಯ ಪ್ರಯೋಗಗಳಿಗಾಗಿ ಜೀವಂತ ದೇಹಚ್ಛೇದನಕ್ಕೆ ಸಹ ತಮ್ಮ ದೇಹವನ್ನು ಸಂತೋಷದಿಂದ ಸಮರ್ಪಣೆ ಮಾಡಲು ಉತ್ಸುಕರಾದವರೂ ಆದ, ಅಮೇರಿಕಾದ ಮಹಾಜನರೆ, ರಾಮನು ಇಂಡಿಯಾದ ಪರವಾಗಿ, ನಿಮ್ಮ ಸಮ್ಮುಖದಲ್ಲಿ, ಈ ಬೇಡಿಕೆಯನ್ನು ಮುಂದಿಡುತ್ತಾನೆ. ಸತ್ಯಶೋಧನೆಯ ಉದ್ದೇಶವನ್ನು ಮುಂದುವರಿಸುವದಕ್ಕಾಗಿ, ಮೊನ್ನೆ ತಾನೇ, ಒಬ್ಬ ಉದಾತ್ತ ಸ್ವಭಾವದ ಅಮೆರಿಕನ್ ತ್ಯಾಗಿಯು, ತನ್ನ ದೇಹವನ್ನು ಜೀವಂತವಿರುವಾಗಲೇ ಕತ್ತರಿಸಲು (vivisection) ವೈದ್ಯ ವಿಜ್ಞಾನಿಗಳಿಗೆ ಒಪ್ಪಿಸಿದನು. ವೈಜ್ಞಾನಿಕ ಸಂಶೋಧನೆಯ ಮಹೋದ್ದೇಶಕ್ಕಾಗಿ ಮರಣವನ್ನೋ ಚಿತ್ರಹಿಂಸೆಯನ್ನೋ ಅನುಭವಿಸಲು ಸಿದ್ಧರಾದ ಅಮೆರಿಕನ್ ಆಹುತಾತ್ಮರೇ, (Martyrs of Science) ರಾಮನು ನಿಮ್ಮಲ್ಲಿ ನಿವೇದಿಸುವನು. ಓ ಅಮೆರಿಕರೆ, ಹೇಳಿ ನೀವು ಕೇಳುವದಿಲ್ಲವೆ ? ಅಮೇರಿಕನ್ ವೃತ್ತಪತ್ರಿಕಾ ಲೋಕವೆ, ನೀವು

ಅನುಕೂಲವಾದ ಅಥವಾ ವಿಹಿತವಾದ ಪ್ರತಿಕ್ರಿಯೆ ತೋರುವದಿಲ್ಲವೆ ? ರಾಮನ ದೇಹವನ್ನು ಬಿಟ್ಟುಬಿಡಿ ; ತುಳಿದುಬಿಡಿ, ಅಥವಾ ಸದೆಬಡಿಯಿರಿ, ಕೊಚ್ಚಿ ಕೊಚ್ಚಿ ಹಾಕಿ, ಕತ್ತರಿಸಿ, ತುಂಡು ತುಂಡು ಮಾಡಿ ; ನಿಮಗೆ ಇಚ್ಛೆಬಂದಂತೆ ಈ ದೇಹವನ್ನು ಧ್ವಂಸ ಮಾಡಿ ; ಆದರೆ ಇಂಡಿಯಾದ ಪಕ್ಷವನ್ನು, ವಾದವನ್ನು ತೆಗೆದುಕೊಳ್ಳಿರಿ. ಅಥವಾ ಸತ್ಯದ ಪಕ್ಷವನ್ನು ಕೈಗೊಳ್ಳಿರಿ. ಗುಲಾಮಗಿರಿಯನ್ನು ತೊಡೆದುಹಾಕಿದ ಅಮೆರಿಕನ್‌ರಿಗೆ, ಈ ದೇಶದಲ್ಲಿ ಜಾತಿ ಪದ್ಧತಿಯನ್ನು ಕಡಿದುಹಾಕುತ್ತಿರುವ ಅಮೆರಿಕನ್‌ರಿಗೆ, ಇಂಥಾ ದಿವ್ಯಾತ್ಮರಾದ ಅಮೆರಿಕನ್‌ರಿಗೆ ಇಂಡಿಯಾ ದೇಶವು ತನ್ನ ಕಡೆಗೆ ಗಮನಕೊಡುವದಕ್ಕಾಗಿ ಕೂಗಿಡುತ್ತಿದೆ , ಮೊರೆಯಿಡುತ್ತಿದೆ.

ಒಂದು ಪಕ್ಷ ಇಂಡಿಯಾ ಬಹಳ ಕೆಟ್ಟದ್ದೆಂದೂ ಅಯೋಗ್ಯವೆಂದೂ ಭಾವಿಸೋಣ ; ಅದರಿಂದ ಪ್ರಪಂಚಕ್ಕೆ ಯಾವ ಪ್ರಯೋಜನವೂ ಇಲ್ಲವೆಂದೂ ಕಲ್ಪಿಸೋಣ ; ಇವತ್ತು ಹಿಂದೂಗಳು ಪ್ರಪಂಚದಲ್ಲಿ ಅಧಮಾಧಮ ಜನರೆಂದೂ ಇಟ್ಟುಕೊಳ್ಳೋಣ ; ಹಾಗಾದರೆ ನಿಮ್ಮ ಲಕ್ಷ್ಯವನ್ನು ಸೆಳೆಯುವದಕ್ಕೆ ಅವರು ಹೆಚ್ಚಿನ ಹಕ್ಕನ್ನು ಪಡೆದಿದ್ದಾರೆ ; ಆಕೆಯ ಯೋಗಕ್ಷೇಮವನ್ನು ನೀವು ಮೊದಲು ವಹಿಸಬೇಕೆನ್ನುವದಕ್ಕೆ ಅದು ಅತ್ಯಂತ ಪ್ರಬಲವಾದ ಕಾರಣವಾಗುತ್ತದೆ.

ಒಬ್ಬ ಮನುಷ್ಯನು ಕಾಯಿಲೆಯಾದರೆ, ಅವನು ತನಗೆ ತಾನೇ ಹಾನಿ ಮಾಡಿಕೊಳ್ಳುವದಲ್ಲದೆ, ಇಡೀ ಜಗತ್ತಿನಲ್ಲಿ ಅವನು ಆ ರೋಗವನ್ನು ಹರಡುತ್ತಾನೆ. ಒಬ್ಬನು ನೆಗಡಿಯಿಂದ ನರಳುತ್ತಿದ್ದರೆ, ಆ ಅಂಟುರೋಗವು ಇತರರಿಗೆ ತಗಲುತ್ತದೆ ; ಹಾಗೆ ಇಂಡಿಯಾ ಈಗ ಶೀತದಿಂದ ನರಳುತ್ತಿದೆ. ಉಷ್ಣವಲಯದಲ್ಲಿರುವ ದೇಶಕ್ಕೆ ಶೀತದ ಬಾಧೆ ಎಲ್ಲಿಯದು ? ಎಂದು ನೀವು ಕೇಳಬಹುದು. ಮಾಗಿಯ–ಶೀತ ಕಾಲದ_ಚಳಿಯಿಂದ ಅವರು ನರಳುತ್ತಿಲ್ಲ ; ಆದರೆ, ಕ್ಷಾಮದ, ದಟ್ಟದಾರಿದ್ರ್ಯದ, ನಿರ್ಗತಿಕ ಸ್ಥಿತಿಯ ಕೊರೆಯುವ ಚಳಿಯಿಂದ ನಡಗುತ್ತಿದ್ದಾರೆ ನೆಗಡಿಯುಳ್ಳವನ ನೆರೆಯವರೂ ನೆಗಡಿ ಹಿಡಿಯುವರೆಂದು ನಿಮಗೆ ಗೊತ್ತಿದೆ. ಒಬ್ಬನಿಗೆ ಕಾಲರಾ ಬಂದರೆ ಇತರರಿಗೂ ಅದು ಹರಡುತ್ತದೆ. ಒಬ್ಬನಿಗೆ ಸಿಡುಬು ಎದ್ದರೆ, ಸುತ್ತಲಿದ್ದವರಿಗೂ ಏಳುತ್ತದೆ. ಬಹಳ ಮಟ್ಟಿಗೆ ರೋಗಗಳು ಸಾಂಕ್ರಾಮಿಕ. ರೋಗಿಗೆ ಸಹಾಯ ಮಾಡಬೇಕಾದುದು ಪ್ರತಿಯೊಬ್ಬರ ಕರ್ತವ್ಯ , ಒಂದು ವೇಳೆ ರೋಗಿಗಾಗಿ ಅಲ್ಲವಾದರೂ ತನಗಾಗಿಯೂ ಇಡೀ ಜಗತ್ತಿಗಾಗಿಯೂ ಸಹಾಯ ಮಾಡಬೇಕು. ಅವರು ಹಾಗೇ ನರಳುತ್ತಿರಲೆಂದು ನೀವು ಬಿಡುವದಾದರೆ, ಆ ದೌರ್ಬಲ್ಯವು ಇಡೀ ಜಗತ್ತಿನ ಮೇಲೆಲ್ಲಾ ಪ್ರಸರಿಸುವದಕ್ಕೆ ಅವಕಾಶ ಕೊಡುತ್ತೀರಿ. ಸಮಸ್ತ ವಿಶ್ವದ

ಹಿತಸಾಧನೆಗಾಗಿ ಭಾರತವನ್ನು ಬಲಪಡಿಸಿರೆಂದು ರಾಮನು ಹೇಳುತ್ತಾನೆ. ಸತ್ಯ ಮತ್ತು ನ್ಯಾಯಗಳ ಹೆಸರಿನಲ್ಲಿ, ಭಾರತದ ಉದ್ಧಾರ ಕಾರ್ಯವನ್ನು ತೀವ್ರಶ್ರದ್ಧೆಯಿಂದ ಕೈಕೊಳ್ಳಿರೆಂದು ರಾಮನು ನಿಮಗೆ ಕರೆಕೊಡುತ್ತಾನೆ.

ಇಂಡಿಯಾಕ್ಕೆ ಬಂದಿರುವ ಕಷ್ಟವೇನು ? ಏನು ಕೇಡು ಬಂದಿದೆ ?—ಎಂದು ನೀವು ಕೇಳಬಹುದು. ಅದರ ರೋಗವು ರಾಜಕೀಯ ಸಾಮಾಜಿಕ ಮತ್ತು ಧಾರ್ಮಿಕ.

## The political plight of India

## ಇಂಡಿಯಾದ ರಾಜಕೀಯ ದುಸ್ಸ್ಥಿತಿ

ಆ ಕತ್ತಲು ಕವಿದ ದೇಶದ ರಾಜಕೀಯ ದುಸ್ಸ್ಥಿತಿಯ ವಿಷಯವಾಗಿ ರಾಮನು ದೀರ್ಘಕಾಲ ವಿಸ್ತಾರವಾಗಿ ಲಂಬಿಸಿ ಹೇಳುವದಿಲ್ಲ. ಯಾವ ದೇಶದಲ್ಲಿ ದುರ್ಭಿಕ್ಷದಿಂದ ಲಕ್ಷಾಂತರ ಜನರು ಸಾಯುತ್ತಿದ್ದಾರೋ ; ಎಲ್ಲಿ ಹಸಿವಿನಿಂದಲೂ ಉಪವಾಸದಿಂದಲೂ ಹೊಚ್ಚ ಹೊಸ ಬಾಲಕ ಬಾಲಕಿಯರ ಸಾವಿನ ಸುಗ್ಗಿ ನಡೆದಿದೆಯೋ ; ಎಲ್ಲಿ, ಬಡತನವೂ ಪ್ಲೇಗಿನ ಪಿಡುಗೂ ತುಂಬು ಭರವಸೆಯ ತರುಣರನ್ನು ಮೊಗ್ಗಿನಲ್ಲೇ ಚಿವುಟಿ ಒಗೆಯುವವೋ ; ಎಲ್ಲಿ, ಹೊಟ್ಟೆಗಿಲ್ಲದೆ ಕೃಶವಾಗಿರುವ ತಾಯಿಗೆ ಸ್ತನ್ಯಪಾನ ಮಾಡಿಸುವದಕ್ಕೆ ಹಾಲಿಲ್ಲದಿರುವದರಿಂದ, ಸಣ್ಣ ಕೋಮಲ ಶಿಶುಗಳು ಒಣಗಿದ ತುಟಿಗಳನ್ನು ಹೊರಚಾಚಿ ಅಳುತ್ತಿರುವವೋ ; ಎಲ್ಲಿ ಅನಿವಾರ್ಯವಾದ ವೆಚ್ಚಕ್ಕೆ ಅವಶ್ಯವಾದ ಆರ್ಜನೆಯಿರುವ ಒಬ್ಬನನ್ನಾದರೂ ಕಾಣುವದು ಕಷ್ಟವೋ ; ಎಲ್ಲಿ ಅಹನ್ಯಹನಿ ಕಾಲಕ್ಷೇಪ ಮಾಡುವವನೇ ಮಹಾ ಶ್ರೀಮಂತನೆಂದು ಎಣಿಸಲ್ಪಡುತ್ತಾನೋ ; ಎಲ್ಲಿ ರಾಜ ಮಹಾರಾಜರುಗಳೂ ಪದೇ ಪದೇ ಶೋಚನೀಯವಾದ ಆರ್ಥಿಕ ಸಂಕಟಗಳಲ್ಲಿ ಸಿಕ್ಕಿಹಾಕಿಕೊಳ್ಳದೇ ಇರುವದಿಲ್ಲವೋ ; ತನ್ನ ಕಷ್ಟ ಕಾರ್ಪಣ್ಯಗಳೂ ದುಃಖ ದುರವಸ್ಥೆಗಳೂ ಎಷ್ಟಿದ್ದರೂ ಯಾವ ದೇಶವು ಸಹನಶೀಲವೂ ವಿಶ್ವಾಸಪಾತ್ರವೂ ಸ್ವಾಮಿಸಿಷ್ಠವೂ ಆಗಿದೆಯೋ ; ಭಯಂಕರ ದಾರಿದ್ರ್ಯದಿಂದ ತಪಿಸುತ್ತಿರುವ ಅಂಥಾ ದೇಶದಲ್ಲಿ ದಯಾಳುವಾದ ಸರ್ಕಾರವು, ಬಡತನದ ಬವಣೆಯನ್ನು ಬೆಳೆಸುತ್ತಿರುವ ದಾರುಣವಾದ ತೆರಿಗೆಗಳ ಜೊತೆಗೆ, ಬರಿ ಉಸಿರಿಗಾಗಿ ಬಾಯಿ ಬಾಯಿ

ಬಿಡುತ್ತಿರುವ ಕೂಲಿಕಾರರ ಹೆಪ್ಪುಕಟ್ಟಿದ ರಕ್ತದಿಂದಲೂ ಒಣಗಿ ಬತ್ತಿದ ಚರ್ಮದಿಂದಲೂ ಲಕ್ಷಾಂತರ ಡಾಲರುಗಳನ್ನು ತಿರುಚಿ, ಹಿಂಡಿ ಹಿಸುಕಿ ತೆಗೆಯುವದು ಅನಿವಾರ್ಯವಾಗಿ ಅತ್ಯವಶ್ಯವೆಂದು ಎಣಿಸುತ್ತದೆ.

ಈ ಮಹತ್ವಾದ ಅಥವಾ ಘೋರವಾದ ತಮಾಷೆ ಮತ್ತು ಪ್ರದರ್ಶನಗಳ ಜೊತೆಗೆ, ಇದಕ್ಕಿಂತಲೂ ಕಡಿಮೆ ರೀತಿಯ ಅತಿರೇಕದ ಹುಚ್ಚಾಟಿಕೆಗಳು ದೇಶವನ್ನು ಶೋಷಿಸುತ್ತಾ, ಅದರ ಜೀವರಸವನ್ನೂ ಜೀವರಕ್ತವನ್ನೂ ಹೀರುತ್ತಿವೆ. ಲಾಭಕರವೂ ಉನ್ನತವೂ ಆದ ಎಲ್ಲಾ ಅಧಿಕಾರಗಳೂ ಬ್ರಿಟಿಷರ ಪ್ರತ್ಯೇಕ ಸ್ವಾಧೀನದಲ್ಲಿವೆ. ಬ್ರಿಟಿಷ್ ರಾಜ್ಯದ ಪರಮಾಧಿಕಾರದ ಶಾಸನ ಮಂಡಲಿಯಾದ ಪಾರ್ಲಿಮೆಂಟ್‌ನಲ್ಲಿ ತುಂಬಿ ತುಳುಕುವ ದೇಶದ ಮೂವತ್ತು ಕೋಟಿ ಪ್ರಜೆಗಳಿಂದ ಒಬ್ಬ ಪ್ರತಿನಿಧಿಯೂ ಇಲ್ಲ. ಸ್ವದೇಶೀಯವಾದ ಸಮಸ್ತ ಉದ್ಯಮಗಳಿಗೂ ಬ್ರಿಟಿಷರಿಂದ ಪ್ರತಿಬಂಧವಿದೆ.

ಎಲ್ಲಾ ದೇಶೀಯ ಕಲೆಗಳೂ ದೊಡ್ಡ ಕೈಗಾರಿಕೆಗಳೂ ಯಂತ್ರ ಕಾರ್ಖಾನೆಗಳೂ ಕ್ಷೀಣವಾಗಿವೆ. ಜನರು ಅನಭವಿಸುತ್ತಿರುವ ಒಂದೇ ಒಂದು ಸ್ವಾತಂತ್ರ್ಯವೆಂದರೆ, ಅಥವಾ ಹೆಚ್ಚು ಸರಿಯಾಗಿ ಹೇಳುವದಾದರೆ, ಜನರ ಆರೋಗ್ಯವನ್ನೂ ಸಂಪತ್ತನ್ನೂ ನೀತಿಯನ್ನೂ ಅನುಭವಿಸಿ ತಿಂದುಬಿಡುತ್ತಿರುವ ಅಥವಾ ಸುಟ್ಟುಹಾಕುತ್ತಿರುವ ಒಂದೇ ಒಂದು ಭ್ರಮಾತ್ಮಕ ಸ್ವಾತಂತ್ರ್ಯವು, ಹಿತಮಿತ ಸ್ವಭಾವದ ಇಂಡಿಯಾದ ಜನರಲ್ಲಿ ಮಹತ್ವಾಗಿ ಪ್ರೋತ್ಸಾಹಿಸಲ್ಪಡುತ್ತಿರುವ ತೀಕ್ಷ್ಣವಾದ ಇಂಗ್ಲಿಷ್ ಮದ್ಯಗಳಿಂದಲೂ ಮತ್ತು ಬ್ರಿಟಿಷ್ ಸಾರಾಯಿಗಳಿಂದಲೂ ಕಡವಾಗಿ ಪಡೆಯುವ ಮಿಥ್ಯಾ ಸ್ವಾತಂತ್ರ್ಯದ ಆಸುರೀ ಮನೋಧರ್ಮವಾಗಿದೆ. ಇಂಗ್ಲಿಷ್ ಜನರೇ ಈ ತೀಕ್ಷ್ಣವಾದ ಮದ್ಯಗಳನ್ನು ಜನರಲ್ಲಿ ಸ್ವೇಚ್ಛೆಯಾಗಿ ಬಳಕೆಗೆ ತಂದಿದ್ದಾರೆ. ಇದು ಇಂಡಿಯಾದ ರಾಜಕೀಯ ದುಸ್ಥಿತಿಯ ಕಲ್ಪನೆಯನ್ನು ಕೊಡಬಹುದು. ಇದರಿಂದ ಅವರ ಹೊರಗಿನ ಸ್ಥಿತಿಯ ಸ್ವಲ್ಪ ವಿಷಯವು ಮಾತ್ರ ತಿಳಿಯಬಹುದು.

ಭಾರತೀಯರ ಸಂಕಷ್ಟಗಳಿಗೆ ಕಾರಣವಾದ ದೇಶದ ಒಳಗಿನ ತೊಂದರೆಗಳೇನು,

ದೋಷಗಳೇನು, ಎನ್ನುವದನ್ನು ಈಗ ರಾಮನು ನಿಮಗೆ ಪರಿಚಯ ಮಾಡಿಕೊಡುತ್ತಾನೆ. ಅವರ ಪತನಕ್ಕೂ ಕಷ್ಟಗಳಿಗೂ ನಿರುತ್ಸಾಹ–ನೈರಾಶ್ಯಗಳಿಗೂ ನೈಜವೂ ಅಂತರ್ಗತವೂ ಆದ ಕೇಂದ್ರ ಕಾರಣವೇನೆಂಬದು ಈಗ ತಿಳಿಸಲ್ಪಡುತ್ತದೆ. ಈ ವಿಷಯದ ಮೇಲೆ ಬೇಕಾದಷ್ಟು ಮಾತನಾಡಬಹುದು ; ಆದರೆ ಪೂರ್ಣ ವಿಷಯವನ್ನು ವಿಸ್ತಾರವಾಗಿ ಕೇಳುವದಕ್ಕೆ ಜನರಿಗೆ ಸಾಕಷ್ಟು ಕಾಲಾವಕಾಶವಿಲ್ಲ ; ಆದ್ದರಿಂದ ರಾಮನು ಎಲ್ಲವನ್ನೂ ಸಂಕ್ಷಿಪ್ತವಾಗಿ ಸಂಗ್ರಹಿಸಬೇಕಾಗಿದೆ.

ಭಾರತದ ಶಕ್ತಿಕ್ಷೀಣತೆಯನ್ನೂ ಪತನವನ್ನೂ ವೇದಾಂತ ಶಾಸ್ತ್ರವು ಸಕಾರಣವಾಗಿ ವಿವರಿಸುತ್ತದೆ. ಅದು ಕರ್ಮವೇ ಕಾರಣ, ಎನ್ನುತ್ತದೆ. ಕರ್ಮವೆಂದರೆ, ನಮ್ಮ ಸ್ವಂತ ಕಾರ್ಯಗಳಿಂದಲೇ ತಂದುಕೊಂಡ ಏನೋ ಒಂದು ಪರಿಣಾಮ. ಕರ್ಮ ಎನ್ನುವದರ ಶಬ್ದಾರ್ಥ, ಕ್ರಿಯೆ, ಕಾರ್ಯ, ನಮ್ಮ ಸ್ವಂತ ಮಾಡುವಿಕೆ. ಹಿಂದೊಂದು ದಿನ ಅವರು ತಾವೇ ಬಿತ್ತಿದ್ದನ್ನು ಈಗ ತಾವೇ ಉಣ್ಣುತ್ತಾರೆ ;" "ಮಾಡಿದ್ದುಣ್ಣೋ ಮಹಾರಾಯ."–ಇದೇ ಕರ್ಮವೆನ್ನುವದರ ಅರ್ಥ. ಬಹಳ ಹಿಂದೆ, ಪ್ರಾರಂಭದಲ್ಲಿ ಹಿಂದೂಗಳು ಇಂಡಿಯಾದಲ್ಲಿದ್ದ ಮೂಲನಿವಾಸಿಗಳನ್ನು ಹಿಂಸಿಸಿದ್ದರಿಂದ, ಈಗ ಹಿಂದೂಗಳನ್ನು ಗೆದ್ದ ರಾಷ್ಟ್ರಗಳಿಂದ ಹಿಂದೂಗಳು ಹಿಂಸೆಯನ್ನು ಅನುಭವಿಸುವ ಸರದಿ ಬಂದಿದೆ. ಅಜ್ಞಾನದಿಂದಲೂ ಅತ್ಯಾಹಾರದಿಂದಲೂ ಆರೋಗ್ಯ ನಿಯಮಗಳನ್ನು ಮುರಿಯುವದರಿಂದಲೂ ಕಾಹಿಲೆ ಬಿದ್ದ ಪ್ರತಿಯೊಬ್ಬರೂ ತಮ್ಮ ಕಾಹಿಲೆಗೆ ತಾವೇ ಹೊಣೆಗಾರರಾಗಿರುವಂತೆ, ಅಜ್ಞಾನದ ಮೂಲಕ ಮಾಡಿದ ತಮ್ಮ ಕರ್ಮದ ಫಲವಾಗಿಯೇ ಇಂಡಿಯಾ ಜನರು ಈಗ ವ್ಯಾಧಿಗ್ರಸ್ತರಾಗಿ ಬಾಧೆ ಪಡುತ್ತಿದ್ದಾರೆ.

ಆದರೆ, ಕಾಹಿಲೆ ಹೇಗಾದರೂ ಬಂದಿರಲಿ, ಅದಕ್ಕೆ ಕಾರಣ ಏನಾದರೂ ಇರಲಿ, ವೈದ್ಯರು ರೋಗಿಯ ಹತ್ತಿರ ಬಂದು ಅವನನ್ನು ನಿಂದಿಸಬೇಕಾದುದೂ ಇಲ್ಲ ; ದಂಡಿಸಬೇಕಾದುದೂ ಇಲ್ಲ ; ವೈದ್ಯರು ರೋಗಿಯ ಮನಸ್ಸನ್ನು ಹರ್ಷಗೊಳಿಸಬೇಕು, ಉಲ್ಲಾಸ ಪಡಿಸಬೇಕು, ಧೈರ್ಯಕೊಡಬೇಕು, ಅವನಿಗೆ ಸಹಾಯ ಮಾಡಬೇಕು, ಚಿಕಿತ್ಸೆ ಮಾಡಬೇಕು. ಅವನ ತಪ್ಪಿಗಾಗಿ ಅವನನ್ನು ಆಕ್ಷೇಪಿಸಿ, ಛೀಮಾರಿ ಹಾಕಿದರೆ, ಅವನ ರೋಗವು ಇನ್ನಷ್ಟು ವೆಗ್ಗಳವಾಗುತ್ತದೆ, ಕೆಡಂತ್ತದೆ. ಅವನ ತಪ್ಪುಗಳನ್ನು ಹುಡುಕಿ ತೆಗೆದು, ಅವನ ದುರ್ವರ್ತನೆಗಾಗಿ ಅವನನ್ನು ಖಂಡಿಸುವ ಸಮಯವಲ್ಲ ಅದು. ನಮ್ಮ ಕರ್ತವ್ಯ, ನಿಮ್ಮ ಕರ್ತವ್ಯ, ಕಷ್ಟದಲ್ಲಿರುವವರಿಗೆ ಸಹಾಯಮಾಡಿ ಅವರ ಕಷ್ಟವನ್ನು ಪರಿಹರಿಸಬೇಕಾದುದು, ಇಷ್ಟೆ.

## The Origin of Indian Caste

# ಇಂಡಿಯಾದಲ್ಲಿ ಜಾತಿವರ್ಣಗಳ ಮೂಲ

ರಾಜಕೀಯ ಅರ್ಥನೀತಿಯು ಕೆಲಸದ ಹಂಚಿಕೆಯನ್ನು, ಕಾರ್ಯವಿಭಾಗವನ್ನು ಹೇಳುತ್ತದೆ. ಒಂದು ಕಾರ್ಖಾನೆಯಲ್ಲಿ ಅಥವಾ ಯಂತ್ರಸಜ್ಜಿತ ಕಾರಖಾನೆಯಲ್ಲಿ, ಅದರ ಇಡೀ ವ್ಯವಹಾರವು ಅಭಿವೃದ್ಧಿಯಾಗಲು ಕೆಲಸವನ್ನು ಹಂಚುವದು ಅವಶ್ಯವಾಗುತ್ತದೆ. ನಿಮ್ಮ ಸ್ವಂತ ದೇಹದಲ್ಲಿಯೇ ಶ್ರಮ ಮತ್ತು ಕಾರ್ಯಗಳ ವಿಭಾಗವಿದೆ. ಕಣ್ಣುಗಳು ನೋಡುತ್ತವೆ ಮಾತ್ರ; ಕಣ್ಣುಗಳು ಕೇಳುವದಿಲ್ಲ; ಕಿವಿಗಳು ಕೇಳುತ್ತವೆ ಮಾತ್ರ; ಆದರೆ ಅವು ಕಣ್ಣುಗಳ ಕೆಲಸವನ್ನು ಮಾಡುವದಿಲ್ಲ. ಕೈಗಳು, ಕಾಲುಗಳ ಕೆಲಸವನ್ನು ಮಾಡುವದಿಲ್ಲ; ಕಾಲುಗಳು ತಮ್ಮ ಕೆಲಸವನ್ನು ತಾವು ಮಾಡಬೇಕು; ಕೈಗಳಿಗೆ ವಿಶಿಷ್ಟವಾದ ಕೆಲಸವನ್ನು ಕೈಗಳು ಮಾಡಬೇಕು. ಕಣ್ಣುಗಳಿಂದ ಕೇಳಬೇಕೆಂದೂ ಮೂಗಿನಿಂದ ನಡೆಯಬೇಕೆಂದೂ ಕೈಗಳಿಂದ ಮೂಸಿನೋಡಬೇಕೆಂದೂ ಕಿವಿಗಳಿಂದ ತಿನ್ನಬೇಕೆಂದೂ ಇಚ್ಛಿಸಿದರೆ ಸಾಧ್ಯವಾಗಬಹುದೆ ? ಸಾಧ್ಯವಲ್ಲ ಮತ್ತು ಇಷ್ಟವೂ ಅಲ್ಲ; ಏಕೆಂದರೆ, ಅದು ಅಸಂಸ್ಕೃತವೂ ವಿಕಾಸಶೂನ್ಯವೂ ಆದ ಜೀವದ್ರವ್ಯದ (Protoplasm) ಮೂಲರೂಪಕ್ಕೆ ಹಿಂದಿರುಗಿ ಒಗೆಯುತ್ತದೆ. (ಜೀವದ್ರವ್ಯವೆಂದರೆ, ಆಮ್ಲಜನಕ, ಜಲಜನಕ, ಇಂಗಾಲ ಮತ್ತು ಸಾರಜನಕಗಳನ್ನೊಳಗೊಂಡ, ಸಸ್ಯಗಳ ಮತ್ತು ಪ್ರಾಣಿಗಳ ಜೀವನಕ್ಕೆ ಆಧಾರವಾದ, ಅರ್ಧದ್ರವವೂ ಅರ್ಧ ಪಾರದರ್ಶಕವೂ ನಿರ್ವರ್ಣವೂ ಆದ ವಸ್ತು.) ನಾವು ಹೊಟ್ಟೆಯೊಂದೇ ಇರುವ ಜೀವದ್ರವ್ಯದ ಅತ್ಯಂತ ಸರಳರೂಪವಾದ 'ಮೊನೀರಾ' (Monera) ಎಂಬ ಅತ್ಯಂತ ಕ್ಷುದ್ರಪ್ರಾಣಿಯಾಗುತ್ತೇವೆ. ಪ್ರಾಣಿಗಳ ಈ ಮೂಲ ರೂಪದಲ್ಲಿ ಹೊಟ್ಟೆಯೊಂದೇ ಕಣ್ಣು, ಕಿವಿ, ಮೂಗು ಮತ್ತು ಕಾಲು, ಈ ಎಲ್ಲವುಗಳ ಕಾರ್ಯಗಳನ್ನು ಮಾಡುತ್ತದೆ. ವಿವೇಕಿಯಾದವನು ಯಾವನೂ ಹೀಗಾಗುವದಕ್ಕೆ ಇಷ್ಟಪಡುವದಿಲ್ಲ. ಕೆಲಸಗಳ ಹಂಚಿಕೆಯು ನ್ಯಾಯವೂ ಅವಶ್ಯವೂ ಆಗಿದೆ. ಉದ್ಯೋಗ ಮತ್ತು ಶ್ರಮ ಇವುಗಳ ವಿಭಾಗದ ತತ್ತ್ವದ ಮೇಲೆ ಒಂದಾನೊಂದು ಕಾಲದಲ್ಲಿ, ಇಂಡಿಯಾದಲ್ಲಿ ವರ್ಣ ವಿಭಾಗದ ಪದ್ಧತಿಯು ವ್ಯವಸ್ಥಿತವಾಗಿ ಸ್ಥಾಪನೆಯಾಯಿತು. ಅದು ಕೇವಲ ದುಡಿಮೆಯ ಕೆಲಸಗಳ ವಿಭಾಗವಾಗಿತ್ತೇ ಹೊರತು ಬೇರೇನೂ ಅಲ್ಲ.

ಒಬ್ಬ ಮನುಷ್ಯನು ಪುರೋಹಿತನ ಕರ್ತವ್ಯವನ್ನೂ ಇನ್ನೊಬ್ಬನು ಯೋಧನ ಕರ್ತವ್ಯವನ್ನೂ ನಿರ್ವಹಿಸಬೇಕಾಯಿತು. ಎರಡನೆಯವನಲ್ಲಿ ಹೆಚ್ಚು ಪಶುಬಲವೂ ಯುದ್ಧೋತ್ಸಾಹವೂ ಹೋರಾಟದ ಸ್ವಭಾವವೂ ತುಂಬಿತ್ತು. ಅವನು ಶೌರ್ಯವುಳ್ಳವನೂ ರಣಕುತೂಹಲಿಯೂ ಶಸ್ತ್ರಾಸ್ತ್ರ ಪ್ರಯೋಗಕುಶಲಿಯೂ ಆಗಿದ್ದುದರಿಂದ ಅವನು ಉಪದೇಶಕನ ಸೌಮ್ಯವಾದ ಕಾರ್ಯವನ್ನು ಕೈಗೊಳ್ಳುವಂತಿರಲಿಲ್ಲ. ಇದೇ ಕಾರ್ಯಗಳ ಹಂಚಿಕೆಯಾಗಿತ್ತು. ಇನ್ನು ಕೆಲವರು, ಹೆಚ್ಚುಕುಳಿತಲ್ಲಿಯೇ ಕೆಲಸಮಾಡುವ ಅಂಗಡಿಕಾರನ ವೃತ್ತಿಯನ್ನು ನಡೆಸುವದಕ್ಕೆ ತಕ್ಕನಾದ ಸ್ವಭಾವದವರಾಗಿದ್ದರು. ಇವರು ಪೌರೋಹಿತ್ಯ ಕರ್ಮವನ್ನಾಗಲೀ ಯುದ್ಧಕಾರ್ಯವನ್ನಾಗಲೀ ಮಾಡುವಂತಿರಲಿಲ್ಲ. ಅತ್ಯಲ್ಪವಾದ ಸಂಸ್ಕೃತಿಯೂ ಇಲ್ಲದೆ, ವಿದ್ಯಾಭ್ಯಾಸಮಾಡದೇ, ಬಾಲ್ಯ–ಕೌಮಾರಗಳನ್ನು ಕೇವಲ ಸೋಮಾರಿತನದಿಂದ ಕಳೆದವರಾದ–ಮುಖ್ಯವಾಗಿ–ಮೂಲನಿವಾಸಿಗಳಿದ್ದರು. ಇವರು ಉಪದೇಶಕರಾಗುವಷ್ಟು ಜಾಣರಾಗಿರಲಿಲ್ಲ; ಯೋಧರಾಗುವದಕ್ಕೆ ಬೇಕಾದ ಶಿಸ್ತನ್ನಾಗಲೀ ಸೈನಿಕಶಿಕ್ಷಣ–ಕವಾಯಿತುಗಳನ್ನಾಗಲೀ ಪಡೆದವರಾಗಿರಲಿಲ್ಲ. ಚಾತುರ್ಯ-ವ್ಯವಹಾರ ಜ್ಞಾನವಿಲ್ಲದವರಾಗಿದ್ದುದರಿಂದ ಅವರಿಗೆ ವ್ಯಾಪಾರ ಮಾಡುವ ಯೋಗ್ಯತೆಯೂ ಇರಲಿಲ್ಲ. ಆದ್ದರಿಂದ ಇವರು ಸಾಮಾನ್ಯ ಕೂಲಿಯ ಕೆಲಸಗಳನ್ನು ಮಾಡುವದಕ್ಕೂ ಬೀದಿಗಳನ್ನು ಗುಡಿಸುವದಕ್ಕೂ ಕಲ್ಲು ಒಡೆಯುವದಕ್ಕೂ ಇಷ್ಟವುಳ್ಳವರಾಗಿದ್ದರು. ಹೀಗೆ ವ್ಯವಹಾರದ ಸಾಧನಸೌಕರ್ಯಗಳಿಗಾಗಿ ಇಂಡಿಯಾದಲ್ಲಿ ನಾಲ್ಕು ಜಾತಿಯ ಜನರ ವಿಭಾಗವಾಯಿತು. ಪುರೋಹಿತ ವರ್ಗದ ಜನರು ಬ್ರಾಹ್ಮಣರೆನಿಸಿಕೊಂಡರು; ಯುದ್ಧಕಾರ್ಯಗಳನ್ನು ಮಾಡತಕ್ಕವರು ಕ್ಷತ್ರಿಯರೆನಿಸಿಕೊಂಡರು; ವ್ಯಾಪಾರಮಾಡತಕ್ಕವರು ವೈಶ್ಯರೆಂದು ಕರೆಸಿಕೊಂಡರು; ಸಾಮಾನ್ಯ ಶರೀರ ಶ್ರಮದ ಕೆಲಸಮಾಡತಕ್ಕವರು ಶೂದ್ರರೆನಿಸಿಕೊಂಡರು. ಒಬ್ಬ ಮನುಷ್ಯನು ತನಗೆ ಇಷ್ಟವಾದ ಕೆಲಸವನ್ನು ಮಾಡುವದಕ್ಕೆ ಅವಕಾಶಕೊಡದಿರುವ ನಿಷೇಧವಾಗಲಿ, ಕಠೋರ ನಿಯಮವಾಗಲಿ ಇರಲಿಲ್ಲ. ಈ ಬಗೆಯಾದ ಕಾರ್ಯ ವಿಭಾಗವು ಎಲ್ಲಾದೇಶಗಳಲ್ಲಿಯೂ ಸ್ವಾಭಾವಿಕವಾಗಿಲ್ಲವೆ? ಈ ಅಮೆರಿಕಾ ದೇಶದಲ್ಲಿಯೂ ಸಹ ಕೆಲಸಗಳ ಹಂಚಿಕೆಯಿಲ್ಲವೆ? ಅದು ಇಲ್ಲಿಯೂ ಇದೆ; ಇಂಗ್ಲೆಂಡಿನಲ್ಲಿಯೂ ಇದೆ; ಮಿಕ್ಕ ಎಲ್ಲೆಡೆಗಳಲ್ಲಿಯೂ ಇದೆ. ಅಮೆರಿಕಾದಲ್ಲಿ ಇದಕ್ಕೆ ವಿಶಿಷ್ಟವಾದ ಜಾತಿಗಳಿಲ್ಲವೆ? ಇಲ್ಲಿ ಅಮೆರಿಕಾದಲ್ಲಿ ನಿಮ್ಮ ಮೇಲಿನ ಹತ್ತು ವರ್ಗಗಳ ಜನರು; ಮತ್ತು ಕೆಳದರ್ಜೆಯ ಸಾಮಾನ್ಯ ಜನರು ಇಲ್ಲವೆ? ಹೀಗೆ ಎಲ್ಲೆಲ್ಲಿಯೂ ಸ್ವಾಭಾವಿಕವಾದ ಈ ಜಾತಿಭೇದಗಳು ಇದ್ದೇ ಇವೆ. ಹಾಗಾದರೆ ಇಂಡಿಯಾದ ಜಾತಿಪದ್ಧತಿಯಲ್ಲಿ ವಿಶೇಷವಾಗಿರುವ ದೋಷವೇನು?

ಇಂಡಿಯಾದಲ್ಲಿ ಹಿಂದೂ ಶಾಸನಗಳ ಮೇಲೆ ಬರೆದಿರುವ ಮನುಸ್ಮೃತಿ ಎಂಬ ಗ್ರಂಥವಿದೆ. ಆಗಿನ ಕಾಲದಲ್ಲಿ ಆ ಗ್ರಂಥವು ಎಲ್ಲಾ ವರ್ಗಗಳ ಜನರಿಗೂ ಸಹಾಯವಾಗಿತ್ತು. ವ್ಯವಹಾರವನ್ನು ನಡೆಸುವದಕ್ಕೆ ಅದು ಪ್ರತಿಯೊಂದು ವರ್ಗದ ಜನರಿಗೂ ಅವಶ್ಯವಾದ ಬೇರೆ ಬೇರೆ ಸೂಚನೆಗಳನ್ನೂ ನಿರ್ದೇಶಗಳನ್ನೂ ವಿಧಾನಗಳನ್ನೂ ನಿಯಮಗಳನ್ನೂ ನಿರೂಪಿಸಿತು ; ಆ ಧರ್ಮಶಾಸ್ತ್ರವು ಬ್ರಾಹ್ಮಣರಿಗೆ ಅನುಕೂಲವಾದ ನಿಯಮ ನಿಬಂಧನೆಗಳನ್ನೂ ಮಾರ್ಗಗಳನ್ನೂ ಕ್ಷತ್ರಿಯರಿಗೂ ವೈಶ್ಯರಿಗೂ ಅಗತ್ಯವಾದ ಮಾರ್ಗದರ್ಶನವನ್ನೂ ರೂಪಿಸಿ ಬೋಧಿಸಿದ್ದರಿಂದ ಆಗಿನ ಕಾಲದ ಎಲ್ಲಾ ವರ್ಗಗಳಿಗೂ ಅದು ಸಹಾಯಕವಾಯಿತು. ಕಾಲ ಕ್ರಮೇಣ ಈ ಶಾಸ್ತ್ರವನ್ನು ತಪ್ಪಾಗಿ ವ್ಯಾಖ್ಯಾನ ಮಾಡಿದರು ; ಹೇಗೋ ಎಲ್ಲಾ ವ್ಯವಸ್ಥೆಯೂ ತಲೆಕೆಳಗಾಯಿತು. ಈ ಎಲ್ಲಾ ವರ್ಣವ್ಯವಸ್ಥೆಯ-ಕಾರ್ಯ-ಕ್ರಮ ವಿಭಾಗದ ವ್ಯವಸ್ಥೆಯು-ಅಸಂಬದ್ಧವಾಗಿಯೂ ಹಾಸ್ಯಾಸ್ಪದವಾಗಿಯೂ ಅಸ್ಥಿಪಂಜರವಾಗಿಯೂ ರಕ್ಷಿತ ಶವವಾಗಿಯೂ ಕಲ್ಲಾಗಿಯೂ ಮಾಡಲ್ಪಟ್ಟಿತು. ಅದಕ್ಕೆ ಕಾಠಿನ್ಯವನ್ನು ಕೊಟ್ಟರು ; ಅದನ್ನು ಘನೀಭೂತವಾಗಿ ಮಾಡಿದರು ; ಇದರಿಂದ ರಾಷ್ಟ್ರದ ಜೀವವು ಹಾರಿಹೋಯಿತು. ಪ್ರತಿಯೊಂದೂ ಯಾಂತ್ರಿಕವೂ ಕೃತಕವೂ ಆಯಿತು. ಮನುಸ್ಮೃತಿಯು ಜನರ ಹಿತವನ್ನು ಸೇವಿಸುವದಕ್ಕೆ ಬದಲಾಗಿ ಪ್ರಜಾಪೀಡಕನಾದ ನಿರಂಕುಶ ಪ್ರಭುವಿನಂತೆ ಹಿಂಸಾಕರವಾಯಿತು.

## Degeneration of Indian Castes

# ಇಂಡಿಯಾದೇಶದ ಜಾತಿಪದ್ಧತಿಯ ಅವನತಿ

ವಿಶ್ವವಿದ್ಯಾನಿಲಯದಲ್ಲಿ ಸಾಮಾನ್ಯವಾಗಿ ನಾಲ್ಕು ತರಗತಿಗಳಿರುತ್ತವೆ; (1) ಹೊಸ ವಿದ್ಯಾರ್ಥಿಗಳು (Freshman) (2) ಎರಡನೆ ತರಗತಿ (Sophomore) (3) ಕೆಳದರ್ಜೆಯ ವಿದ್ಯಾರ್ಥಿ (Junior) (4) ಮೇಲಿನ ದರ್ಜೆಯ ವಿದ್ಯಾರ್ಥಿ (Senior class), ಈ ತರಗತಿಗಳಲ್ಲಿರುವದು ಒಳ್ಳೆಯದೇ ಸರಿ, ಇದು ಸ್ವಾಭಾವಿಕವೂ. ಆದರೆ ಅತ್ಯಂತ ಕೆಳದರ್ಜೆಯ ಒಂದನೆಯ ತರಗತಿಯ ವಿದ್ಯಾರ್ಥಿಯು ಅಭ್ಯಾಸದಲ್ಲಿ ಅಭಿವೃದ್ಧಿಹೊಂದಿ ಪಕ್ಕದ ಮೇಲಿನ ಎರಡನೇ ತರಗತಿಗೂ, ಎರಡನೆಯ ತರಗತಿಯವರು ಮೂರನೆಯ ತರಗತಿಗೂ ಮೂರನೆ ತರಗತಿಯ ವಿದ್ಯಾರ್ಥಿಗಳು ನಾಲ್ಕನೆಯ ತರಗತಿಗೂ ಮುಂದುವರಿಯ ಬಾರದೆಂದು ಪ್ರೊಫೆಸರ್‌ಗಳು ಇಚ್ಛಿಸುವದಿಲ್ಲ. ವಿಭಾಗಗಳೂ ತರಗತಿಗಳೂ ಅವಶ್ಯವಾದುದರಿಂದ ಒಳ್ಳೆಯದೇ ಸರಿ. ಆದರೆ, ಇವತ್ತು ಇಂಡಿಯಾದ ಪತನಕ್ಕೆ ಅಲ್ಲಿ ಈ ವಿಭಾಗಗಳನ್ನು ಶಕ್ತಿಹೀನಗೊಳಿಸಿ, ಘನೀಕರಿಸಿ, ನಿರರ್ಥಕಪಡಿಸಿದ್ದೇ ಭಯಂಕರ ಪ್ರಮಾದವೂ ತಿಳಿಗೇಡಿತನವೂ ಆದ ಕಾರಣವಾಯಿತು. ಇಂಡಿಯಾದಲ್ಲಿ ವರ್ತಮಾನಕಾಲದಲ್ಲಿರುವ ಜಾತಿಪದ್ಧತಿಯ ಉದಯಕ್ಕೆ ಇದೇ ಕಾರಣವಾಯಿತು; ಇದೇ ಈಗ ಇಂಡಿಯಾದಲ್ಲಿರುವ ಅತ್ಯಂತ ವಿನಾಶಕರವಾದ ಕೇಡು, ದೋಷ.

ಆ ಕಾಲದ, ತಾತ್ಕಾಲಿಕ ವಿದ್ಯಮಾನಗಳಿಗೆ ಸಂಬಂಧಪಟ್ಟ ವ್ಯವಹಾರವನ್ನು ಕುರಿತು ಮನುಸ್ಮೃತಿಯಲ್ಲಿ ರೂಪಿಸಲ್ಪಟ್ಟ ಕ್ಷಣಿಕವಾದ ನಿಯಮ ನಿಬಂಧನೆಗಳು, ಶ್ರುತಿಗೆ ವಿಹಿತವಾದ ಅಥವಾ ಉಪನಿಷತ್ತುಗಳಿಂದ ಉಪದೇಶಿಸಲ್ಪಟ್ಟಿರುವ ಅವಿನಾಶಿಯಾದ ಸತ್ಯಕ್ಕೆ ಉಚಿತವಾದ ಗೌರವ—ಮರ್ಯಾದೆಗಳನ್ನು, ಕಾಲಕ್ರಮೇಣ ದುರಾಕ್ರಮಣಮಾಡಿ, ಏಕಸ್ವಾಮ್ಯವನ್ನು ಸ್ಥಾಪಿಸಿದವು. ಕಾಯಿದೆಗಳೂ ಕಟ್ಟಳೆಗಳೂ ಇರುವದು ತಮಗಾಗಿ ಎಂದು ಜನರು ಅರಿಯುವದಕ್ಕೆ ಬದಲು, ಅವುಗಳಿಗಾಗಿ ಜನರು ಜೀವಿಸುವದಕ್ಕೆ ತೊಡಗಿದರು. ಒಳಗಿರುವ ಜೀವಂತ ಆತ್ಮದೇವನ ಆದೇಶಕ್ಕಿಂತಲೂ ಮೃತವಾದ ಹಿಂದಿನ ಶಾಸ್ತ್ರಾಧಾರದ ಅಧಿಕಾರಕ್ಕೆ ಹೆಚ್ಚಿನ ಬೆಲೆಯನ್ನೂ ಗೌರವವನ್ನೂ

ಕೊಟ್ಟು ಹೆಚ್ಚು ಉನ್ನತಸ್ಥಾನದಲ್ಲಿ ಇಡಲಾಯಿತು. ಮನುಷ್ಯನು ಕೇವಲ ರಕ್ತಮಾಂಸಗಳ ಬ್ರಾಹ್ಮಣ ಅಥವಾ ಕ್ಷತ್ರಿಯನಾಗಿ ಮಾಡಲ್ಪಟ್ಟನು ; ಶಾಶ್ವತ ಸತ್ಯವಾದ ನಿಜಾತ್ಮನು, ಎಲ್ಲಾರೀತಿಯಿಂದಲೂ ಪೂರ್ಣವಾಗಿ ಅಲಕ್ಷ್ಯಮಾಡಲ್ಪಟ್ಟನು. ಜಾತಿನಿಯಮಗಳ ಭಯದಿಂದಲೂ ಪದ್ಧತಿ-ಸಂಪ್ರದಾಯಗಳ ಕಲ್ಪಿತ ಭೂತದ ಕ್ರೂರಬಾಧೆಯಿಂದಲೂ ಜನರು ಇತರ ಜನಾಂಗಗಳೊಡನೆ ಒಂದಾಗಿ ಭಾವಿಸುವದಕ್ಕೆ ಅವಕಾಶವಾಗುವದಿಲ್ಲ. ತಾನು ಬ್ರಾಹ್ಮಣನೆಂದೋ ಕ್ಷತ್ರಿಯನೆಂದೋ ವೈಶ್ಯನೆಂದೋ ರೂಢಿಯಾಗಿರುವ ಭಾವನೆಯು ಪ್ರಬಲವಾಗಿ, ತಾನು ಮನುಷ್ಯನೆಂಬ ಭಾವನೆಯು ಹೃದಯದಲ್ಲಿ ಪ್ರವೇಶಮಾಡುವದೇ ಕಠಿಣವಾಗುತ್ತದೆ.

ಮನುವಿನ ಕಾಲದಿಂದ ಈಚೆಗೆ ಸಾವಿರಾರು ವರ್ಷಗಳಲ್ಲಿ ಭೂಮಿಯ ಮುಖವೇ ಎಷ್ಟೋಸಲ ಬದಲಾವಣೆ ಹೊಂದಿದೆ ; ನದಿಗಳ ಪಾತ್ರಗಳೇ ಪಲ್ಲಟವಾಗಿವೆ ; ಗೊಂಡಾರಣ್ಯಗಳೆಲ್ಲಾ ಕತ್ತರಿಸಲ್ಪಟ್ಟಿವೆ, ಅಥವಾ ಸುಟ್ಟುಹೋಗಿವೆ ; ಸಸ್ಯವರ್ಗ, ಪ್ರಾಣಿವರ್ಗಗಳು ವ್ಯತ್ಯಾಸಹೊಂದಿವೆ ; ಕ್ಷತ್ರಿಯರ ಉದ್ಯೋಗವು ಒಂದು ರೀತಿಯಲ್ಲಿ ಇಂಡಿಯಾದಿಂದಲೇ ಪೂರ್ಣವಾಗಿ ತೊಡೆದು ಹೋಗಿದೆ. ದೇಶದ ಭಾಷೆಯು ನಾಡಿನಿಂದ ತೊಳೆದು ಹೋಗಿದೆ ; ಅದು ಆಧುನಿಕ ಹಿಂದೂಗಳಿಗೆ ಲ್ಯಾಟಿನ್ ಅಥವಾ ಗ್ರೀಕ್ ಭಾಷೆಯಷ್ಟು ಪರಕೀಯವೂ ಅಜ್ಞಾತವೂ ಆಗಿದೆ ; ಆದರೂ ಇಂಡಿಯಾದ ಆಧ್ಯಾತ್ಮಿಕ ಆತ್ಮಘಾತಕರು, ತನ್ನ ಸಮಕಾಲೀನರಿಗಾಗಿ ಮನುವು ಹಾಕಿಟ್ಟಿರುವ ಜಾತಿ ಮತ ಸಂಪ್ರದಾಯಗಳಿಗೂ ಸಂಸ್ಕಾರ ವಿಧಿಗಳಿಗೂ ಮತಾಚರಣೆಗಳಿಗೂ ನಿಯಮ ನಿಬಂಧನೆಗಳಿಗೂ ತಪ್ಪದೆ, ಇವತ್ತಿಗೂ ನೀಚ ಗುಲಾಮರಾಗಿ ಉಳಿದಿದ್ದಾರೆ. ಸ್ವತಂತ್ರ ವಿಚಾರವನ್ನು ಪಾಷಂಡವಾದವೆಂದು ತಿಳಿಯುತ್ತಾರೆ ; ಅಲ್ಲ, ಅಧಮಾಧಮ ಅಪರಾಧವಾಗಿ ಎಣಿಸುತ್ತಾರೆ. ಮೃತಭಾಷೆಯ ಮೂಲಕ ಏನು ಬಂದರೂ ಅದು ಪವಿತ್ರವೆಂದು ಭಾವಿಸುತ್ತಾರೆ. ಸತ್ತವರ ಹುಚ್ಚಾಟಿಕೆಗಳನ್ನೂ ಹುಚ್ಚು ಕಲ್ಪನೆಗಳನ್ನೂ ಭ್ರಮಾತ್ಮಕವಾದ ಹೇಳಿಕೆಗಳನ್ನೂ ದಾಸ್ಯ ಭಾವದಿಂದ ಶ್ರೇಷ್ಠವಾದವುಗಳೆಂದೂ ಸಾಧುವಾದವುಗಳೆಂದೂ ನಿಮ್ಮ ವಿಚಾರ ಸರಣಿಯು ಶ್ಲಾಘನೆಮಾಡದಿದ್ದರೆ ಕೊಂಡಾಡದಿದ್ದರೆ-ನಿಮ್ಮ ದೋಷವನ್ನು ಬಹಿರಂಗವಾಗಿ ಉಗ್ಗಡಿಸಿ ನೀವು ತಲೆಯೆತ್ತದಂತೆ ತಪ್ಪುಹೊರಿಸುತ್ತಾರೆ ; ಪ್ರತಿಯೊಬ್ಬರೂ ನಿಮ್ಮ ವಿರುದ್ಧವಾಗಿ ತಿರುಗಿ ಧಾಳಿಮಾಡುತ್ತಾರೆ. ನೀವು ಹೊಸ ಮದ್ಯವನ್ನು ಹಳೆಯ ಬುದ್ದಲಿಗಳಲ್ಲಿ ತುಂಬಬೇಕು; ಅದರಂತೆ ಹೊಸ ತತ್ತ್ವಗಳು ವಿಕಾರ ಹೊಂದಿದರೂ ಹಳೆಯರೂಪಗಳಲ್ಲಿಯೂ ಆಚರಣೆಗಳಲ್ಲಿಯೂ ಹೊಂದಿಸಿ ತೋರಿಸಬೇಕು. ಎಲ್ಲಾ ಕಾರ್ಯಗಳಲ್ಲಿಯೂ ಉದಾತ್ತತೆಯೂ ಘನತೆಯೂ ಇವೆ ; ಎಲ್ಲಾ ಶ್ರಮವೂ ದುಡಿಮೆಯೂ ಪವಿತ್ರವಾಗಿವೆ ;.

ಆದರೆ ಮತಭ್ರಾಂತಿಯು ದುರಭಿಮಾನದಿಂದಲೂ ವಕ್ರಬುದ್ಧಿಯಿಂದಲೂ ಮೂರ್ಖ ತನದಿಂದಲೂ ಹೊರಗಿನ ಉದ್ಯೋಗಗಳಲ್ಲಿ ಕೆಲವನ್ನು ಗೌರವವೆಂದೂ ಕೆಲವನ್ನು ಅಗೌರವವೆಂದೂ ಕಲ್ಪನೆ ಮಾಡಿಕೊಂಡಿದ್ದಾರೆ. ಪೂರ್ವ ವಯಸ್ಸನ್ನು ವಿದ್ಯಾಭ್ಯಾಸದ ಶ್ರಮಕ್ಕೆ ಉಪಯೋಗಿಸದಿದ್ದವರು ಅನಂತರದ ಯೌವನವನ್ನೂ ಮಧ್ಯ ವಯಸ್ಸನ್ನೂ-ಹಿಂದಿನ ಸೋಮಾರಿತನದ ಪ್ರಾಯಶ್ಚಿತ್ತಾರ್ಥವಾಗಿ-ಶರೀರ ಶ್ರಮದ ಉದ್ಯೋಗಗಳಲ್ಲಿ ವಿನಿಯೋಗಿಸಬೇಕಾಗುತ್ತದೆ. ಹಿಂದಿನ ತಮ್ಮ ಮೈಗಳ್ಳತನಕ್ಕೆ ಮೈಬೆವರಿನಿಂದ ದಂಡವನ್ನು ತೆರಬೇಕಾಗುತ್ತದೆ. ಅವರ ಶ್ರಮಜೀವನವನ್ನು ದಾಸ್ಯವೃತ್ತಿಯು ಕೀಳು ಕೆಲಸವೆಂದು ಹಳಿಯುವದಕ್ಕೂ ಶೂದ್ರ ಕರ್ಮವೆಂದು ತಿರಸ್ಕರಿಸುವದಕ್ಕೂ ನೀವು ಯಾರು ? ಅಥವಾ ನಾನು ಯಾರು ? ಆ ಶ್ರಮಕಾರ್ಯವಾದರೂ ಉಪದೇಶಕನ ಕಾರ್ಯದಷ್ಟೇ ಯೋಧನ ಕರ್ಮದಷ್ಟೇ ವೈಶ್ಯನ ವೃತ್ತಿಯಷ್ಟೇ ಅವಶ್ಯವಲ್ಲವೆ ? ಶ್ರೇಷ್ಠಕುಲದವರೆನಿಸಿಕೊಂಡ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಹಾದುಹೋಗುವ ಬೀದಿ ಯಲ್ಲಿ ಸಹ ಕೀಳು ಕುಲದವರೆನಿಸಿಕೊಂಡವರು ನಡೆದಾಡುವದಕ್ಕೆ ಅವಕಾಶವಿಲ್ಲದಷ್ಟು ಹೀನಸ್ಥಿತಿಗೆ ದೇಶದ ಪರಿಸ್ಥಿತಿಯು ಇಳಿದಿದೆ. ಶ್ರೇಷ್ಠಜಾತಿಯವರು ವಾಸಮಾಡುವ ಗೌರವಾಸ್ಪದವಾದ ಹಳ್ಳಿಗಳ ಅಥವಾ ಪಟ್ಟಣಗಳ ಹೊರಗೆ ಬಡಗುಡಿಸಿಲುಗಳಲ್ಲಿ-ಜೋಪಡಿಗಳಲ್ಲಿ-ಕೀಳು ಜಾತಿಯವರು ವಾಸಮಾಡಬೇಕು. ಉತ್ತಮ ಜಾತಿಯವನ ಮೇಲೆ ಕೀಳು ಜಾತಿಯವನ ನೆರಳು ಬಿದ್ದರೆ ಆ ಉತ್ತಮ ಜಾತಿಯವನು ಶುದ್ಧ ನಾಗಲು ತನ್ನ ಬಟ್ಟೆಗಳನ್ನೆಲ್ಲಾ ತೊಳೆದುಕೊಂಡು ಸ್ನಾನ ಮಾಡಬೇಕು. ಕೀಳು ಜಾತಿಯವನು ಮುಟ್ಟಿದ ಒಂದು ವಸ್ತುವು ಅಪವಿತ್ರವೂ ಕಳಂಕಿತವೂ ಆಗುವದರಿಂದ ಉತ್ತಮ ಜಾತಿಯವನು ಉಪಯೋಗಿಸುವದಕ್ಕೆ ಅದು ಅನರ್ಹವಾಗುತ್ತದೆ. ಕೀಳು ಜಾತಿಯ ಜನರು ಮಾಡುವ ಅತ್ಯಂತ ಕಷ್ಟವೂ ಕೀಳೂ ಆದ ಕೆಲಸಗಳಿಗೆ ಮೇಲು ಜಾತಿಯ ಜನರು ಬಹುಮಾನವಾಗಿ ಕೊಡುವ ಒಣಕಲು ರೊಟ್ಟಿಯ ಚೂರುಗಳನ್ನು ತಿಂದು ಆ ಕೀಳು ಜನರು ಜೀವಿಸಬೇಕು. ನಿಮ್ಮ ಎದುರಿನಲ್ಲಿ ನೈಜವಾದ ವಾಸ್ತ ವಾಂಶಗಳನ್ನು ಇಡುವದಕ್ಕಾಗಿ ನೀವು ಕೇಳುವ ಅಭ್ಯಾಸವಿಲ್ಲದ ಶಬ್ದಗಳನ್ನು ರಾಮನು ಉಪಯೋಗಿಸುವ ಆವಶ್ಯಕತೆಯು ಬಂದರೆ, ನೀವು ದಯಮಾಡಿ ರಾಮನನ್ನು ಕ್ಷಮಿಸ ಬೇಕು. ಈ ಕೀಳು ಜಾತಿಯ ಬಡ ಶೂದ್ರರು ಅಥವಾ ಪರೆಯರು-ಹೊಲೆಯರು-ಬೀದಿಗಳನ್ನು ಗುಡಿಸಬೇಕು ; ಚರಂಡಿಗಳ ಕೊಚ್ಚೆರೊಚ್ಚುಗಳನ್ನು ಕೈಗಳಿಂದ ಉಜ್ಜಿ ತೊಳೆಯಬೇಕು ; ಇಷ್ಟೇ ಅಲ್ಲ. ಅವರು ಹರಿನೀರು ಕಕ್ಕಸುಗಳನ್ನು ತೊಳೆದು ಚೊಕ್ಕಟಮಾಡಬೇಕು ; ಈ ಸೇವೆಗಳಿಗೆ ಪ್ರತಿಫಲವಾಗಿ ತಂಗಳಾದ ಒಣಕಲು ರೊಟ್ಟಿಯ ಚೂರುಗಳು ಅವರಿಗೆ ಕೊಡಲ್ಪಡುತ್ತವೆ. ಅವರು ಅತ್ಯಂತ ದರಿದ್ರ ರಾಗಿದ್ದಾರೆ ; ಅವರೆಂದೂ ಧನಿಕರಾಗುವಂತೆಯೇ ಇಲ್ಲ. ಅವರ ಸ್ಥಿತಿಯನ್ನು

ಯೋಚಿಸಿದರೆ ರಾಮನ ಹೃದಯವು ನೋಯುತ್ತದೆ, ತಲ್ಲಣಿಸುತ್ತದೆ. ವಿದ್ಯಾಶಾಲೆಗಳಲ್ಲಿ ಒಂದೇ ತರಗತಿಯ ವಿದ್ಯಾರ್ಥಿಗಳ ಪಕ್ಕದಲ್ಲಿ ಕೀಳುಜಾತಿಯ ವಿದ್ಯಾರ್ಥಿಗಳು ಕುಳಿತುಕೊಳ್ಳುವದರಿಂದ ಮೇಲು ಜಾತಿಯ ವಿದ್ಯಾರ್ಥಿಗಳಿಗೆ ಮೈಲಿಗೆಯಾಗುವದೆಂಬ ಭಾವನೆಯಿಂದ ಉತ್ತಮ ಜಾತಿಯವರು ಶಿಕ್ಷಣಪಡೆಯುವ ಶಾಲೆಗಳಿಗೆ ಕೀಳುಜಾತಿಯವರನ್ನು ಸೇರಿಸುವದಿಲ್ಲ. ಆದ್ದರಿಂದ ಕೆಳಗೆ ತುಳಿದಿಡಲ್ಪಟ್ಟಿರುವ ಕೀಳು ಜಾತಿಯವರು ಹೇಗೆ ಶಿಕ್ಷಣ ಪಡೆಯಬೇಕು ? ಈ ಜನರು ಹೊಟ್ಟೆಗಿಲ್ಲದೆ ಅಹನ್ಯಹನಿ ಕಾಲಕ್ಷೇಪ ಮಾಡುತ್ತಿದ್ದಾರೆ ; ದಿನ ದಿನವೂ ಅವರು ಸಾಯುತ್ತಿದ್ದಾರೆ. ಎಲ್ಲಾ ಬಗೆಯ ಪ್ಲೇಗುಗಳೂ ರೋಗಗಳೂ ಸದಾ–ಮೇಲಿಂದ ಮೇಲೆ–ತುಕ್ಕುತ್ತಿರುವ ಅಚ್ಚುಮೆಚ್ಚಿನ ದೇಶ. ಅನಾರೋಗ್ಯವಾದ ಸ್ಥಳಗಳಲ್ಲಿ ವಾಸ ಮಾಡುತ್ತಿರುವ ಈ ಬಡ ಶೂದ್ರರು, ಎಲ್ಲಾ ಬಗೆಯ ರೋಗಗಳಿಗೂ ಸಾಂಕ್ರಾಮಿಕ ಜಾಡ್ಯಗಳಿಗೂ ಉದಾರವಾದ ಆಶ್ರಯ ಕೊಟ್ಟು ಆದರಿಸಿ ಸತ್ಕರಿಸುವ ಆತಿಥೇಯರು. ತಮ್ಮ ಶರೀರಗಳ ಮೇಲೆ ಲಾಲಸೆಯಿಂದ ತಿಂದು ಭೋಗಿಸುವದಕ್ಕಾಗಿ ಅವರು ಕಾಲರಾ ಪ್ಲೇಗು ಮೊದಲಾದ ರೋಗಗಳನ್ನೂ ಕ್ಷಾಮಗಳನ್ನೂ ಉದಾರವಾಗಿ ಸ್ವಾಗತಿಸುತ್ತಾರೆ. ಕೀಳಾದವರೂ ಬಡವರಾದವರೂ ಯಾವಾಗಲೂ ಸಮಾಜದ ಪಾದವೂ ಆಧಾರವೂ ಆಗಿದ್ದಾರೆ. ಯಾವ ಸಮಾಜವು ದರ್ಪಿತವೂ ಉದ್ಧತವೂ ಆಗಿ ಕೀಳು ಜಾತಿಯವರ ಬೆಳವಣಿಗೆಯನ್ನು ಅಡ್ಡಿಪಡಿಸಿ ಕುಗ್ಗಿಸುವದೋ, ಅವರನ್ನು ಕ್ರೂರವಾಗಿ ನಡೆಸಿಕೊಂಡು, ಅಜ್ಞಾನಿಗಳಾದ ಆ ಬಡ ಪಾಪಿಗಳಿಗೆ ವಿದ್ಯಾಭ್ಯಾಸ ಮಾಡಿಸುವದಿಲ್ಲವೋ ಅಂಥಾ ಸಮಾಜವು ತನ್ನ ಪಾದವನ್ನು ತಾನೇ ಕತ್ತರಿಸಿಕೊಂಡಂತೆ ಆಗಿ ಪುಡಿಪುಡಿಯಾಗಿ ಉದುರುತ್ತದೆ.

ಕೀಳು ಜಾತಿಯವರಲ್ಲಿ ಅನೇಕರು ಇಂಡಿಯಾದಲ್ಲಿ ಮೂಲ ನಿವಾಸಿಗಳಾಗಿದ್ದರು. ನೀವು ಇವತ್ತು ಹಿಂದೂಗಳೆಂದು ಕರೆಯುವ ಆರ್ಯರು ಇಂಡಿಯಾದ ಆ ಮೂಲ ನಿವಾಸಿಗಳನ್ನು ಆಕ್ರಮಣಮಾಡಿ, ಜಯಿಸಿ, ಅತ್ಯಂತ ನೀಚವಾದ ಈ ದಾಸ್ಯವೃತ್ತಿಯ ಅವನತಿಗೆ ಗುರಿಪಡಿಸಿದರು. ಅವರೇ ಇವರನ್ನು ಈ ದುರವಸ್ಥೆಗೆ ನೂಕಿದರು. ಆರ್ಯರು ಅಥವಾ ಉತ್ತಮಜಾತಿಯ ಹಿಂದೂಗಳು ಆಗ ಈ ಅಪರಾಧವನ್ನು ಮಾಡಿದ್ದರಿಂದ, ಆ ಮೂಲದಲ್ಲಿ ಬಿತ್ತಿದ ಪಾಪಕರ್ಮದ ಫಲವನ್ನೇ ಈಗ ಭೋಗಿಸುತ್ತಿದ್ದಾರೆ. ಇವತ್ತು ಮಹಮ್ಮದೀಯರ ಮತ್ತು ಬ್ರಿಟಿಷರ ದುರ್ವರ್ತನೆಯ ದಬ್ಬಾಳಿಕೆಯಿಂದ ಹಿಂದೂಗಳು ಅನುಭವಿಸುತ್ತಿರುವ ದುಃಖ-ದುರವಸ್ಥೆಗಳ ಫಲದ ಬೀಜವನ್ನು ಹಿಂದೆ ಇದೇ ಹಿಂದೂಗಳೇ ಅಥವಾ ಆರ್ಯರೇ ಇಂಡಿಯಾದ ಮೂಲ ನಿವಾಸಿಗಳನ್ನು ಆಕ್ರಮಿಸಿ ದಮನಮಾಡಿ ತುಳಿದಿಡುವದರಲ್ಲಿ ಬಿತ್ತಿಕೊಂಡರು.

ಇದೇ ಕರ್ಮ-ಫಲ-ಭೋಗದ ನಿಯಮವು ; ತನ್ನಿಂದ ಹಿಂದಾದ ಕಷ್ಟನಷ್ಟಗಳಿಗೆ ಇಂದು ಪರಿಹಾರವಾಗಿ ಭರ್ತಿಹಾಕಿ, ಸರಿದೂಗಿಸಿ, ಸಮಗಟ್ಟುವ ನಿಯಮವೇ (Law of Karma or Compensation) ಇದು.

ರಾಮನು ಹಿಂದೂ ಆಗಿ ಇಂಡಿಯಾದವನಾಗಿ, ಅಥವಾ ಯಾವುದೇ ರಾಷ್ಟ್ರದ ವ್ಯಕ್ತಿಯಾಗಿ, ನಿರ್ದಿಷ್ಟನಾಮವುಳ್ಳ ದೇಶ, ಜನಾಂಗ, ಜಾತಿ, ಪಂಗಡ, ಪಂಥ, ಸಂಪ್ರದಾಯ ಮೊದಲಾದ ಉಪಾಧಿಯುಳ್ಳವನಾಗಿ ನಿಮ್ಮಲ್ಲಿ ಮಾತನಾಡುತ್ತಿಲ್ಲ. ರಾಮನ ನಿಲುವು ಇರುವದು ಸತ್ಯದಲ್ಲಿ, ಸಂಪೂರ್ಣಸತ್ಯದ ಮೇಲೆ ಹೊರತು ಬೇರೆ ಅಲ್ಲ. ರಾಮನ ದೇಹವು ಇಂಡಿಯಾದಲ್ಲಿರುವ ಅತ್ಯಂತ ಶ್ರೇಷ್ಠ ಜಾತಿಗೆ ಸೇರಿದೆ ; ಆದರೆ ರಾಮನು ಜಗತ್ತಿನಲ್ಲಿ ಅತ್ಯಂತ ಕನಿಷ್ಠವಾದ, ಮೆಟ್ಟಿಡಲ್ಪಟ್ಟಿರುವ ಜಾತಿಯವರ ಪರವಾಗಿ ನಿಮ್ಮಲ್ಲಿ ಮೊರೆಯಿಡುತ್ತಿದ್ದಾನೆ. ಸತ್ಯ–ಧರ್ಮ–ನ್ಯಾಯಗಳ ಹೆಸರಿನಲ್ಲಿ, ಇಂಡಿಯಾದ ಪರೆಯರ (ಹೊಲೆಯರ) ಆತ್ಮವೂ ಆದ ನಿಜಾತ್ಮನ ಹೆಸರಿನಲ್ಲಿ ಜಾತಿಮತಾಭಿಮಾನವೆಂಬ ಎಲ್ಲಾ ಪರದೆಗಳನ್ನೂ ಹರಿದುಹಾಕಿ, ಭಾರತದ ಕಷ್ಟ ಜೀವಿಗಳ, ದುಃಖಪರಿಹಾರವೆಂಬ ಧರ್ಮೋದ್ದೇಶವನ್ನು ಸಾಧಿಸಿರಿ.

ಜಾತಿಮತಭೇದಗಳು ಇಂಡಿಯಾದೇಶದ ಪತನಕ್ಕೆ ಹೇಗೆ ಕಾರಣವಾಗಿವೆ ? ಮೂಲತಃ, ಅದರ ಉದ್ದೇಶವೂ ಕಾರ್ಯವಿಭಾಗವೂ ಪ್ರೇಮದ ರಕ್ಷಣೆಯೂ ಆಗಿತ್ತು. ಆದರೆ ಇಂಡಿಯಾದಲ್ಲಿ ಕಾಲಕ್ರಮೇಣ ಈ ಉದ್ದೇಶವು ತಲೆಕೆಳಗಾಯಿತು. ಕುದುರೆಯ ಹಿಂದೆ ಗಾಡಿಯನ್ನು ಕಟ್ಟುವದಕ್ಕೆ ಬದಲಾಗಿ, ಕುದುರೆಯ ಮುಂದೆ ಗಾಡಿಯನ್ನು ನಿಲ್ಲಿಸಿದಂತಾಗಿದೆ. ಈಗ ಪ್ರೇಮ ಮತ್ತು ಮೈತ್ರಿಯ ಸಮರಸ ಭಾವದಲ್ಲಿ ವಿಭಾಗವಾಗಿದೆ ; ಮತ್ತು ಪ್ರಾಚೀನ ಕಾರ್ಯಗಳ ಮತ್ತು ಭೇದಗಳ ರಕ್ಷಣೆಯಾಗಿದೆ ; ಇದಕ್ಕೆ ವ್ಯತಿರೇಕವಾಗಬೇಕಾಗಿತ್ತು. ಅನೇಕ ವರ್ಷಗಳ ಹಿಂದೆ ಬಾಲ್ಯದಲ್ಲಿ ಮೈಗೆ ಸರಿಹೋಗುತ್ತಿದ್ದ ಉಡುಗೆಯನ್ನೇ ಶರೀರದ ಮಾಂಸಖಂಡಗಳೂ ಮೂಳೆಗಳೂ ಚೆನ್ನಾಗಿ ಬೆಳೆದ ಮೇಲೂ ಆ ವ್ಯಕ್ತಿಯು ಹಾಕಿಕೊಳ್ಳಲು ಒತ್ತಾಯ ಪಡಿಸಿದಂತೆ ಆಗಿದೆ. ಹೀಗೆ–ಬಾಲ್ಯದಲ್ಲಿಯೇ ಉಕ್ಕಿನ ಜೋಡುಗಳನ್ನು ಹಾಕಿ, ತೆಗೆಯದೆ, ಪಾದಗಳು ಬೆಳೆಯದಂತೆ ಮಾಡಿರುವ-ಚೀನಾ ಹೆಂಗಸರ ಪುಟ್ಟ ಪಾದಗಳಂತೆ, ಹಿಂದೂಗಳ ಬುದ್ಧಿಯು ಬೆಳೆಯದೆ ಒಂದೇ ರೂಪದಲ್ಲಿರುವಂತೆ, ಬಲಾತ್ಕಾರದಿಂದ ಬಂಧಿಸುವ ಎರಕದ ಅಚ್ಚುಗಳಿಂದಲೂ ಹಿಚುಕಿ ಒತ್ತಿಡುವ ಪಾದರಕ್ಷೆಗಳಿಂದಲೂ ಜಾಕೆಟ್ಟುಗಳಿಂದಲೂ ನಿರ್ಬಂಧಿಸಲ್ಪಟ್ಟು ಭಂಗಪಡಿಸಲ್ಪಟ್ಟಂತಾಗಿದೆ. ಸಂಪ್ರದಾಯ ಶರಣನಾದ ಹಿಂದೂವಿನ ವಿದ್ಯಾಭ್ಯಾಸವು ಗೋಡೆಗಳ ಮಧ್ಯದಲ್ಲಿ ಓಡಿದಂತಿದೆ.

ಒಬ್ಬ ಮನುಷ್ಯನು ಎರಡು ರೋಗಗಳಿಂದ ಒಂದೇ ಕಾಲದಲ್ಲಿ ನರಳುತ್ತಿದ್ದನು. ಅವನಿಗೆ ಹೊಟ್ಟೆನೋವೂ ಇತ್ತು, ಕಣ್ಣುನೋವೂ ಇತ್ತು. ಅವನು ವೈದ್ಯರಿಗೆ ತನ್ನ ನೋವನ್ನು ಹೇಳಿಕೊಂಡಾಗ, ವೈದ್ಯರು ಅವನಿಗೆ ಎರಡು ಔಷಧಗಳನ್ನು ಕೊಟ್ಟರು. ಒಂದನ್ನು ಕಣ್ಣಿಗೆ ಹಚ್ಚಬೇಕಾಗಿತ್ತು ; ಇನ್ನೊಂದನ್ನು ಹೊಟ್ಟೆಗೆ ಕುಡಿಯಬೇಕಾಗಿತ್ತು. ಆದರೆ, ಈ ಮನುಷ್ಯನು ಇವೆರಡನ್ನು ಮಿಶ್ರಮಾಡಿದನು. ಹೊಟ್ಟೆಗೆ ತೆಗೆದುಕೊಳ್ಳ ಬೇಕಾದ ಔಷಧಿಯಲ್ಲಿ ಮೆಣಸು ಉಪ್ಪು, ಮತ್ತು ತೀಕ್ಷ್ಣ ದ್ರವ್ಯಗಳನ್ನು—ಉದರದ ಜಡತೆಯನ್ನು ಕಳೆಯುವದಕ್ಕಾಗಿ—ಸೇರಿಸಿತ್ತು. ಕಣ್ಣಿನ ಔಷಧಿಯಲ್ಲಿ ಆಂಟಿಮನಿ, ಜಿಂಕ್ (ಸತುವು) ಮೊದಲಾದ ವಸ್ತುಗಳಿದ್ದವು. ಇವುಗಳಲ್ಲಿ ಆಂಟಿಮನಿಯು ಹೊಟ್ಟೆಗೆ ವಿಷವಾಗುತ್ತದೆ ; ಹೊಟ್ಟೆಗೆ ಮೆಣಸು ಮೊದಲಾದವುಗಳು ಒಳ್ಳೆಯವು ; ಆದರೆ ಅವುಗಳನ್ನು ಕಣ್ಣಿಗೆ ಹಚ್ಚಬಾರದು. ಈ ಮನುಷ್ಯನು ತಿಳಿಯದೆ, ಆ ಎರಡು ಔಷಧಿಗಳನ್ನೂ ಅದಲು ಬದಲು ಮಾಡಿಕೊಂಡು ಹೊಟೆ ಯ ಔಷಧಿಯನ್ನು ಕಣ್ಣಿಗೂ ಕಣ್ಣಿನ ಔಷಧಿಯನ್ನು ಹೊಟ್ಟೆಗೂ ಉಪಯೋಗಿಸಿದನು. ಇದರಿಂದ ಹೊಟ್ಟೆಯೂ ಹಾಳಾಯಿತು ; ಕಣ್ಣೂ ಕೆಟ್ಟಿತು. ಇಂಡಿಯಾದಲ್ಲಿ ಇದೇ ವಿಷಮಸ್ಥಿತಿ ಉಂಟಾಗಿದೆ. ಕೆಲಸಗಳಲ್ಲಿ ವಿಭಾಗವೂ ಹಂಚಿಕೆಯೂ ಮನೋಭಾವದಲ್ಲಿ ಐಕ್ಯವೂ ಮೈತ್ರಿಯೂ ಸಾಮರಸ್ಯವೂ ಅವಶ್ಯವಾಗಿತ್ತು. ಆದರೆ, ದುರ್ದೈವದಿಂದ ಅಥವಾ ಅಜ್ಞಾನದಿಂದ ಪ್ರೇಮವೂ ಮನೋಧರ್ಮವೂ ಒಡೆದು ವಿಭಾಗವಾಗಿದೆ ; ಹೊರಗಿನ ಕರ್ತವ್ಯಗಳನ್ನು ರಕ್ಷಿಸಲು ಪ್ರಯತ್ನ ನಡೆದಿದೆ.

ಪದ್ಧತಿ–ಸಂಪ್ರದಾಯ ಬದ್ಧತೆಯ ಘೋರರೂಪವು, ಆರ್ಯಕುಲದ ಮೂಲಭೂತ–ನೂತನ ಆಲೋಚನಾ–ಆವಿಷ್ಕಾರಗಳ ಸಾಮರ್ಥ್ಯವನ್ನೂ ಸಕಲ ಸತ್ತ್ವವನ್ನೂ ಅಭಿವೃದ್ಧಿಹೊಂದದಂತೆ ಸ್ತಬ್ಧಗೊಳಿಸಿ, ಜನಮೇಜಯರಾಯನ ಕಾಲದ ಜನತೆಯನ್ನಾಗಿ ಮಾಡಿದೆ. ಸಂಪ್ರದಾಯಪ್ರಿಯತೆಯೆಂದರೆ ಪ್ರತ್ಯೇಕತೆ ಯೆಂದೂ ಮೂಕ ಸಂಪ್ರದಾಯ ಪಾಲನೆಯೆಂದೂ ಅರ್ಥವಾಗಿದೆ. ವ್ಯವಹಾರ ಜೀವನದಲ್ಲಿ ಉತ್ತಮವರ್ಣದವರು ಒಳಗಿನ ಸ್ವರ್ಗದ, ನಿಜಾತ್ಮನ ಮಹಿಮೆಯನ್ನೂ ಭವ್ಯತೆಯನ್ನೂ ದಿವ್ಯತೆಯನ್ನೂ ಪಾವಿತ್ರ್ಯತೆಯನ್ನೂ ಮರೆತು, ವೇದಾಂತವೇದ್ಯನಾದ ಆತ್ಮನ ಮೇಲೇ ನೇರವಾಗಿ ಪಾದವನ್ನಿಟ್ಟು ಮೆಟ್ಟಿ ಮೂರ್ಖತನದಿಂದ ತನ್ನ ಪ್ರಾಪಂಚಿಕ ವಾದ ಸ್ಥಾನಮಾನ ಗೌರವಗಳಿಗಾಗಿಯೂ ವೈಯಕ್ತಿಕವಾದ ಸಾಧನ ಸಂಪತ್ತುಗಳಿ ಗಾಗಿಯೂ ಗರ್ವಪಡುವದಕ್ಕೆ ತೊಡಗಿದರು. ಇದರಿಂದ ತನ್ನ ವೈಯಕ್ತಿಕವಾದ ಘನತೆ ಗೌರವಗಳನ್ನು ರಕ್ಷಿಸಿಕೊಳ್ಳಬೇಕೆಂದೂ ಬೆಳೆಸಿಕೊಳ್ಳಬೇಕೆಂದೂ ವ್ಯಕ್ತಿವೈಶಿಷ್ಟ್ಯ

ಸಾಧನೆಯ ಹಂಬಲವೂ ಸ್ವಾರ್ಥಸಂಗ್ರಹದ ಕಾತರತೆಯೂ ಹೆಚ್ಚಿತು. ಶ್ರೇಷ್ಠ ವರ್ಣದವರ "ಕಾಸಿಗೆ ಜಾಣ, ಕೋಟಿಗೆ ಕೋಣ" ಎನ್ನುವ ನೀತಿಯು ಪರಿಣಾಮ ದಲ್ಲಿ ಅವರ ಸ್ವಂತ ಅವನತಿಯನ್ನೂ ಪತನವನ್ನೂ ತಂದುದಲ್ಲದೆ, ಅವರ ನಿಷ್ಪ್ರಯೋಜಕತೆಗೂ ಅಜ್ಞಾನಕ್ಕೂ ಸೇವೆಸಲ್ಲಿಸಿ, ಸುಳ್ಳು ಹೊಗಳಿಕೆಯಿಂದ ಅವರ ಡಂಭಾಚಾರವನ್ನೂ ಡಬಡ್ಡಾಳಿಕೆಯನ್ನೂ ಬೆಳೆಸಿದ ಕೀಳುಜಾತಿಯ ಜನಜಂಗುಳಿಯ ನಾಶಕ್ಕೂ ಕಾರಣವಾಯಿತು.

ಇದಕ್ಕೆ ಚಿಕಿತ್ಸೆ ಏನು ? ಇದನ್ನು ಪರಿಹರಿಸುವದು ಹೇಗೆ ? ಹಾಗಾದರೆ, ಶೂದ್ರರನ್ನು ಇಷ್ಟು ಕ್ರೂರವಾಗಿ ನಡೆಸಿಕೊಂಡರೆಂದು ಈ ಹಿಂದೂಗಳನ್ನು ಅಥವಾ ಆರ್ಯರನ್ನು ಬಗ್ಗು ಬಡಿಯುವ ಚಳವಳಿಯನ್ನು ಹೂಡೋಣವೆ ? ಇದರಿಂದ ಈಗಿನ ಸ್ಥಿತಿಯು ಸುಧಾರಿಸುವದೆ ? ಇಲ್ಲ ಇಲ್ಲ ! ಅಪಸ್ವರದಿಂದ ಹಾಡುತ್ತಿರುವ ಒಬ್ಬ ಸಂಗೀತಗಾರನಿಗೆ ಕೊಡಬಹುದಾದ ಶಿಕ್ಷೆಯೆಂದರೆ, ಅವನನ್ನು ತಿದ್ದಿ ಸರಿಪಡಿಸುವದು. ಒಬ್ಬ ಅಪರಾಧಿಗೆ ಅಥವಾ ಒಬ್ಬ ಪಾಪಿಗೆ ವಿಧಿಸಬಹುದಾದ ಅತ್ಯಂತ ಮಹತ್ವಾದ ಶಿಕ್ಷೆ ಯೆಂದರೆ, ಅವನನ್ನು ವಿದ್ಯಾವಂತನನ್ನಾಗಿ ಮಾಡಿ, ಅವನಲ್ಲಿರುವ ಅಜ್ಞಾನವನ್ನು ಕೊಲ್ಲುವದು. ಪಾಪಕರ್ಮಿಯಾದ ಮನುಷ್ಯನಲ್ಲಿರುವ ಪಾಪಿಯನ್ನು ಕೊಲ್ಲಬೇಕಾದರೆ, ಆ ಮನುಷ್ಯನನ್ನು ಕೊಲ್ಲಬೇಕಾಗಿಲ್ಲ ; ಅಜ್ಞಾನವೇ ಅವನಲ್ಲಿರುವ ಪಾಪಿ, ಆದ್ದರಿಂದ ಅವನಿಗೆ ವಿದ್ಯಾಭ್ಯಾಸ ಮಾಡಿಸಿ ಅಜ್ಞಾನವನ್ನು ಕೊಲ್ಲಬೇಕು. ಆಗ ನೀವು ಪರಿಸ್ಥಿತಿಯನ್ನು ಸರಿಪಡಿಸಿದಂತಾಗುತ್ತದೆ. ರೋಗದ ಕ್ರಿಮಿಯಾದ ಅಜ್ಞಾನವನ್ನು ನಾಶಮಾಡುವದೇ ಆ ದುಸ್ಸ್ಥಿತಿಯನ್ನು ಪರಿಹರಿಸುವದಕ್ಕೆ ಸರಿಯಾದ ಕ್ರಮವಾಗಿದೆ.

ಆರ್ಯರೂ ಮತ್ತು ಹಿಂದೂಗಳೂ ಈಗಾಗಲೇ ಸಾಕಷ್ಟು ಕಷ್ಟವನ್ನು ಅನುಭವಿಸಿದ್ದಾರೆ. ಅವರು ಮೂಲನಿವಾಸಿಗಳಿಗೆ ತೋರಿಸಿದ ಕ್ರೌರ್ಯಕ್ಕಾಗಿ ಕೋಪದಿಂದ ಶಿಕ್ಷೆಮಾಡಿ, ಸೇಡು ತೀಸಿರಿಕೊಳ್ಳಲು ಅಮೆರಿಕಾ ಮತ್ತು ಯುರೋಪು ಗಳಿಂದ ನೀವು ಹೋಗಬೇಕಾಗಿಲ್ಲ. ಈಗಾಗಲೇ ಅವರು ಬೇಕಾದಷ್ಟು ಶಿಕ್ಷೆಯನ್ನು ಅನುಭವಿಸಿದ್ದಾರೆ. ನೂರಾರು ವರ್ಷಗಳಿಂದ ಅವರು ವಿದೇಶೀಯರ ಪ್ರಭುತ್ವದಲ್ಲಿ, ಗುಲಾಮಗಿರಿಯಿಂದ ಜೀವಿಸಿದ್ದಾರೆ. ಆಫ್ಘನರು ದೇಶವನ್ನು ಆಕ್ರಮಿಸಿ ಅವರನ್ನು ಗೆದ್ದರು ; ಗ್ರೀಕರು ಬಂದು ಅವರನ್ನು ಆಳಿದರು. ಪರ್ಷಿಯಾದ ಜನರು ಬಂದು ಅವರ ಮೇಲೆ ಪ್ರಭುತ್ವ ನಡೆಸಿದರು. ಜಗತ್ತಿನ ಎಲ್ಲಾ ದಿಕ್ಕುಗಳಿಂದಲೂ ಜನರು ಬಂದು ಅವರನ್ನು ಗೋಳುಹೊಯ್ದುಕೊಂಡರು. ಅವರ ಅಪರಾಧಕ್ಕಾಗಿ ಅವರು ಬೇಕಾದಷ್ಟು ಪ್ರಾಯಶ್ಚಿತ್ತವನ್ನು ಪಡೆದಿದ್ದಾರೆ. ನಿಮಗೀಗ ಅವರನ್ನು ಸಂತೈಸುವ

ಕಾಲ ಬಂದಿದೆ ; ನೀವು ಹೋಗಿ ಅವರನ್ನು ಸಂತೋಷಪಡಿಸಬೇಕು ಉಲ್ಲಾಸ ಪಡಿಸಬೇಕು ; ಜಾತಿಯ ಅಭಿಮಾನಕ್ಕೆ ಜೋತು ಬೀಳುವ ವೇದಾಂತ ವಿರೋಧಿಯಾದ ಅಜ್ಞಾನವನ್ನು ನಾಶಮಾಡಬೇಕು.

ಜಾತಿಭೇದದ ಭಾವನೆಯಿಂದ ಅವರ ಶಕ್ತಿಗಳೆಲ್ಲಾ ಹರಿದು ಹಂಚಿ ಶೋಚನೀಯ ವಾಗಿ ಅಪವ್ಯಯವಾಗುತ್ತಿದೆ. ಇಂಡಿಯಾದಲ್ಲಿ ಮತಾಭಿಮಾನದಿಂದ ಹುಟ್ಟಿರುವ ಪಕ್ಷಾಭಿಮಾನ, ರೂಢ ವೈರ, ಜನಾಂಗದ್ವೇಷ, ಇವುಗಳಿಂದ ಎಲ್ಲಾ ರಾಜಕೀಯ, ಸಾಮಾಜಿಕ, ನೈತಿಕ, ಆಧ್ಯಾತ್ಮಿಕ ಸಂಬಂಧಗಳೂ ಸಂಸ್ಥೆಗಳೂ ವ್ಯವಹಾರಗಳೂ ಹೊಲೆಗೆಟ್ಟು ಹಾಳಾಗಿವೆ.

ಒಬ್ಬ ವಿದ್ಯಾರ್ಥಿಯು ತತ್ತ್ವಶಾಸ್ತ್ರವನ್ನೋ ಚರಿತ್ರೆಯನ್ನೋ ವಿಜ್ಞಾನ ವನ್ನೋ ಓದಬೇಕಾಗಿದೆ. ಅವನ ಮನಸ್ಸು ಕಲಕಿ ಕ್ಷುಬ್ಧವಾಗಿದ್ದರೆ, ಅವನು ವಿದ್ಯಾಭ್ಯಾಸದಲ್ಲಿ ಮುಂದುವರಿಯುವದಕ್ಕೆ ಆಗುವದಿಲ್ಲ. ವಿದ್ಯಾಭ್ಯಾಸವು ಯಶಸ್ವಿಯಾಗಬೇಕಾದರೆ ಮನಸ್ಸು ಯಾವಾಗಲೂ ಸ್ವಸ್ಥವಾಗಿರಬೇಕು. ಈಗ ಮನಸ್ಸಿನ ಸಮತೋಲನೆಯನ್ನು ಕೆಡಿಸಿ ಏರು ಪೇರು ಮಾಡುವದು ಯಾವದು ? ಕ್ಷುಬ್ಧ ಮಾಡುವದು ಯಾವದು ? ಭೇದಭಾವನೆಯೇ ಅದು ನೀವು ಸಮಾನಗುಣ ಶೀಲಸ್ವಭಾವದ ಬಂಧುಗಳ ಜೊತೆಗಿದ್ದರೆ, ಅಲ್ಲಿ ಭೇದವೂ ವಿರೋಧವೂ ಇಲ್ಲದಿರುವದರಿಂದ ನಿಮ್ಮ ಓದು ಯಶಸ್ವಿಯಾಗಿ ಸಾಗುತ್ತದೆ. ಆದರೆ ನಿಮ್ಮ ಸುತ್ತಲೂ ಇರುವವರಲ್ಲಿ ವಿರೋಧ ಭಾವವೂ ವೈರಭಾವವೂ ಇದ್ದರೆ, ನೀವು ವ್ಯಾಸಂಗಮಾಡುವದಕ್ಕೂ ಏನು ಮಾಡುವದಕ್ಕೂ ಆಗುವದಿಲ್ಲ. ಗಮನವಿಟ್ಟು ಕೇಳಿ ; ನನ್ನ ಸುತ್ತಲೂ ನನ್ನ ಕುಟುಂಬದ ಅಣ್ಣ ತಮ್ಮಂದಿರೇ ಅಕ್ಕ ತಂಗಿಯರೇ ಬಳಗವೇ ಇದ್ದರೆ, ನೆಮ್ಮದಿಯಿಂದ ವಿದ್ಯಾಭ್ಯಾಸಮಾಡಬಹುದು. ನನ್ನ ಮನಸ್ಸಿಗೆ ಇದು ಹೊರಗಿನದು ಎನ್ನಿಸುವ ಯಾವದಾದರೂ ವ್ಯಕ್ತಿಯು ಬಂದು ಸೇರಿದರೆ ಮಾತ್ರ ನನ್ನ ಸಮಾಧಾನವು ಕದಲುತ್ತದೆ. ಇಂಡಿಯಾದಲ್ಲಿರುವ ಈ ಜಾತಿಪದ್ಧತಿಯು ಅಹಿತಕರವಾದ ಸನ್ನಿವೇಶವನ್ನು ಉಂಟುಮಾಡುವದರಿಂದಲೂ ತನ್ನ ಸುತ್ತಲಿರು ವವರು ಪರಕೀಯರು, ವಿಜಾತೀಯರು, ಬೇರೆಯವರು ಎಂಬ ನಂಬಿಕೆಯನ್ನುಂಟು ಮಾಡಿ, ಮನಸ್ಸಿನಲ್ಲಿ ಅಸಮಾಧಾನವನ್ನು ಹುಟ್ಟಿಸುವದರಿಂದಲೂ ದ್ವೇಷಾಸೂಯೆ ಗಳನ್ನೂ ವೈಮನಸ್ಯವನ್ನೂ ಪ್ರೇರಿಸುವದರಿಂದಲೂ ಜನರ ಬುದ್ಧಿಶಕ್ತಿಯನ್ನು ದುರ್ಬಲಗೊಳಿಸುತ್ತದೆ. ಅಲ್ಲಿರುವ ನಾಲ್ಕು ದೊಡ್ಡ ಜಾತಿಗಳಲ್ಲಿ ಅಥವಾ ವರ್ಣಗಳಲ್ಲಿ ಒಂದೊಂದೂ ನೂರಾರು ಪಂಗಡಗಳಾಗಿ ವಿಭಾಗಿಸಲ್ಪಟ್ಟಿವೆ ; ಅವುಗಳಲ್ಲಿ

ಪುನಃ ಒಂದೊಂದೂ ಒಡೆದೊಡೆದು, ಒಟ್ಟಿನಲ್ಲಿ ಅಸಂಖ್ಯಾತ ಜಾತಿಗಳಾಗಿವೆ. ಸಾಕು ಸಾಕಾಗಿ ಮಿಕ್ಕು ಮೀರಿರುವ ಸಹಸ್ರ ಸಹಸ್ರಗಳಾದ ಈ ಹಿಂದೂ ಜಾತಿಗಳಲ್ಲದೆ, ಮಹಮ್ಮದೀಯ ಜಾತಿ ಕ್ರೈಸ್ತ ಜಾತಿಗಳೂ ಇಂಡಿಯಾದಲ್ಲಿ ಬೆಳೆಯುತ್ತಿವೆ. ಇಷ್ಟೂ ಸಾಲದೆ, ಥಿಯಾಸೊಫಿ, ಆರ್ಯಸಮಾಜ, ಬ್ರಹ್ಮಸಮಾಜ, ಮೊದಲಾದ ಥಟ್ಟನೆ ಬೆಳೆದು ಮಾಯವಾಗುವ ಅಣಬೆಗಳ ರೂಪದ ಸಹಸ್ರಾರು ಸಂಸ್ಥೆಗಳು ಹೊಸದಾಗಿ ಪ್ರವೇಶವಾಗಿರುವ ಜಾತಿಗಳು. ತನ್ನ ತರಗತಿಯಲ್ಲಿ ಓದಲು ಒಬ್ಬ ಮಹಮ್ಮದೀಯ ವಿದ್ಯಾರ್ಥಿಯು ಬಂದರೆ, ಹಿಂದೂ ವಿದ್ಯಾರ್ಥಿಗೆ ಮನಸ್ಸು ಸಮತೆ–ಸಮಾಧಾನಗಳನ್ನು ಕಳೆದುಕೊಳ್ಳುತ್ತದೆ. ಒಬ್ಬ ಕ್ರೈಸ್ತ ವಿದ್ಯಾರ್ಥಿಯು ತರಗತಿಗೆ ಬಂದರೆ, ಕ್ರೈಸ್ತರಲ್ಲದ ಬೇರೆ ವಿದ್ಯಾರ್ಥಿಗಳಿಗೆ ಮನಸ್ಸು ಏರುಪೇರಾಗುತ್ತದೆ, ಹಿಂದೂಗಳಲ್ಲಿಯೇ ಬೇರೆ ಜಾತಿಯವರು ಬಂದರೆ ಸಂಪ್ರದಾಯಪ್ರಿಯರಾದ ವಿದ್ಯಾರ್ಥಿಗಳಿಗೆ ಅಸಮಾಧಾನವಾಗುತ್ತದೆ.

ಇಂಡಿಯಾದಲ್ಲಿ ಈ ಜಾತಿಗಳ ಅಭಿಮಾನವನ್ನೂ ಭೇದಭಾವವನ್ನೂ ಅತಿಯಾಗಿ ಬೆಳೆಸಿದ್ದರಿಂದ, ಅವರ ಬುದ್ಧಿಶಕ್ತಿಯು ಬೆಳವಣಿಗೆಗೆ ಸರಿಯಾದ ಅವಕಾಶವಾಗುವದಿಲ್ಲ. ಅವರ ವಿದ್ಯಾಭ್ಯಾಸವೂ ನಿರಾತಂಕವಾಗಿ ನಡೆಯುವದಿಲ್ಲ. ಇಂಡಿಯಾದಲ್ಲಿ ನಮ್ಮ ವಿದ್ಯಾಭ್ಯಾಸಕಾರ್ಯವು ಅಭಿವೃದ್ಧಿಯಾಗಬೇಕಾದರೆ, ಜನರ ಮನಸ್ಸು ನೆಮ್ಮದಿಯಾಗಿರುವಂಥ ಸನ್ನಿವೇಶವನ್ನು ರೂಪಿಸಬೇಕು ; ಈ ಅಸ್ವಾಭಾವಿಕವಾದ ಭೇದ ಭಾವವನ್ನೂ ಜಾತಿಮತಗಳ ದುರಭಿಮಾನವನ್ನೂ ತೊಡೆದುಹಾಕಿದ ಹೊರತು, ಜನರ ಮನಸ್ಸಿಗೆ ಸ್ವಸ್ಥತೆ ಬರುವದಿಲ್ಲ.

ಅಮೆರಿಕಾದ ಜನರಾದ ನೀವಾದರೂ ಜಾತಿಭಾವನೆಯಿಂದ ಪೂರ್ಣ ಬಿಡುಗಡೆ ಹೊಂದಿದ್ದೀರೆಂದು ರಾಮನು ಹೇಳುವದಿಲ್ಲ. ನೀವೂ ಬಿಡುಗಡೆಹೊಂದಿಲ್ಲ. ನೀವು ಕ್ರೈಸ್ತರಾದರೆ, ನಿಮ್ಮ ಮಧ್ಯದಲ್ಲಿ ಒಬ್ಬ ಹಿಂದೂವೋ ಬೌದ್ಧನೋ ಬಂದಿರುವದನ್ನು ಕಂಡರೆ ನೀವು ಸಹಿಸುವದಿಲ್ಲ. ಅದೇನು ? ಅದೇ ಜಾತಿಯ ಅಭಿಮಾನ ಅಥವಾ ದುರಭಿಮಾನ ಎನ್ನುವದು. 'ನಾನು ಅಮೆರಿಕನ್' ಎಂದು ನೀವು ತಿಳಿದುಕೊಂಡಿರುವದರಿಂದ ಸ್ಪ್ಯಾನಿಯರ್ಡ್ ಅಥವಾ ಇಂಗ್ಲಿಷ್ ಜನರ ದರ್ಶನವನ್ನು ನೀವು ಸಹಿಸುವದಿಲ್ಲ. ನಿಮ್ಮ ರೋಗವು ರಾಜಕೀಯವಾದ ಜಾತಿಭಾವನೆ. ಅದರಿಂದ ನೀವು ಬಾಧೆಪಡುತ್ತಿದ್ದೀರಿ. ನೀವು ಶ್ವೇತವರ್ಣದವರಾಗಿ ಕಪ್ಪು ನೀಗ್ರೋಗಳ ಜೊತೆಗೆ ಕೆಲಸ ಮಾಡಲು ನಿಮಗೆ ಸಾಧ್ಯವಿಲ್ಲವಾದ್ದರಿಂದ ಸಾಮಾಜಿಕ ಜಾತಿ ಎನ್ನುವ ಪಿಶಾಚಿ ನಿಮಗೆ ಹಿಡಿದಿದೆ. ನಿಮ್ಮ ನೆರೆಯವನ ವಿಷಯದಲ್ಲಿ ಅಥವಾ

ನಿಮ್ಮ ವಿರೋಧಿಯ ವಿಷಯದಲ್ಲಿ ನಿಮಗೆ ಅಸೂಯೆ ಇದ್ದರೆ, ನೀವು ಜಾತಿ ಭಾವನೆಯಿಂದ ಪೂರ್ಣಬಿಡುಗಡೆ ಹೊಂದಿದವರಲ್ಲ. ಅಸೂಯೆಗೆ ಕಾರಣವೇನು? ಅಸೂಯೆಗೆ ಜಾತಿ ಕಾರಣವೇ ಹೊರತು ಬೇರೇನೂ ಅಲ್ಲ. ನಿಮ್ಮ ಎದುರಿಗೆ ನಿಮ್ಮ ಸಹೋದ್ಯೋಗಿಯನ್ನು ಯಾರಾದರೂ ಮೆಚ್ಚಿ ಶ್ಲಾಘಿಸುವದನ್ನು ಕಂಡು ನೀವು ಸಹಿಸದಿದ್ದರೆ, ನೀವು ಜಾತಿಯ ರೋಗದಿಂದ ನರಳುತ್ತಿದ್ದೀರಿ. ಅಮೆರಿಕಾದಲ್ಲಿ ಜಾತಿಯು ಬಹಳ ಮಟ್ಟಿಗೆ ಡಾಲರ್ ಸಾರ್ವಭೌಮನಿಂದ ನಿರ್ಣಯವಾಗುತ್ತದೆ. ಅಮೆರಿಕಾದಲ್ಲಿ ಸಾಮಾಜಿಕವಾದ ಅನೇಕ ಕೇಡುಗಳಿವೆ. ಅಮೆರಿಕಾ ತನ್ನ ಕಣ್ಣಿನಲ್ಲಿರುವ ದೋಷವನ್ನು—ಕಸರನ್ನು—ಮೊದಲು ತೆಗೆದುಹಾಕಿಕೊಳ್ಳಬೇಕು. ಅಮೆರಿಕಾದಲ್ಲಿ ಬಹಳ ಸುಧಾರಣೆಯಾಗಬೇಕು. ಅಮೆರಿಕಾದ ಸಮಾಜ ರಚನೆಯು ನಿರ್ದೋಷವೂ ಪರಿಪೂರ್ಣಗುಣವುಳ್ಳದೂ ಏನಲ್ಲ. ಅಮೆರಿಕಾದಲ್ಲ ವೇದಾಂತಮನೋಧರ್ಮದ ಆವಶ್ಯಕತೆಯು ತೀವ್ರವಾಗಿದೆ. ಆದರೆ ಇಂಡಿಯಾದ ಪರಿಸ್ಥಿತಿಯು ಇನ್ನೂ ಹೆಚ್ಚು ಕೀಳಾಗಿದೆ; ಕೇಡಾಗಿದೆ, ದಾರುಣವಾಗಿದೆ. ಪ್ರಪಂಚದಲ್ಲಿ ಜೀವಂತವಾಗಿರುವ ಪ್ರತಿಯೊಂದು ಇರುವಂತೆ—ಇರಬೇಕಾದಂತೆ—, ಅಮೆರಿಕಾದ ಜಾತಿಯು ಕಾಠಿನ್ಯವಿಲ್ಲದ್ದರಿಂದ ಮುರಿಯದಂತೆ ಮಣಿಯುವ ಸ್ವಭಾವದ್ದು, ಮೃದು, ಬಗ್ಗಿಸಬಹುದಾದುದು, ಅನುವರ್ತನಶೀಲವಾದುದು. ಆದರೆ ಇಂಡಿಯಾದ ಸಮಾಜವು ಕಠಿಣವಾಗಿ, ಸ್ಥಿರವಾಗಿ, ಕೆಟ್ಟುಹೋದ ಗಡಿಯಾರವಂತೆ ಇದೆ; ಅಮೆರಿಕಾದ ನಗರಗಳಲ್ಲಿ ಶುಷ್ಕ ಸಾಮಗ್ರಿಗಳ ಸಂಗ್ರಹದಲ್ಲಿರುವ ಮೇಣದ ಗೊಂಬೆಗಳಂತೆ ಇಂಡಿಯಾದ ಸಮಾಜವಿದೆ.

Life evolves on the principles of heredity and adaptation or education.

**"ಜೀವಶಕ್ತಿಯು ಅನುವಂಶೀಯತೆ ಮತ್ತು ಹೊಂದಿಕೊಳ್ಳುವ ಮಾರ್ಪಾಡು ಅಥವಾ ವಿದ್ಯಾಶಿಕ್ಷಣ, ಈ ತತ್ತ್ವಗಳ ಮೇಲೆ ವಿಕಾಸವಾಗುತ್ತದೆ."**

ಮನುಷ್ಯೇತರ ಪ್ರಾಣಿಗಳ ರಾಜ್ಯದಲ್ಲಿ ಅನುವಂಶೀಯತೆಯ ನಿಯಮವು ಪರಮಾಧಿಕಾರದಿಂದ ಆಳುತ್ತದೆ. ಮಾನವ ಲೋಕದಲ್ಲಿ ಕೂಡ ಅವನ ದೇಹೇಂದ್ರಿಯಗಳ ರಚನೆ—ಶಕ್ತಿ—ವ್ಯಾಪಾರಾದಿಗಳಿಗೂ ಭೌತಿಕಶಕ್ತಿಗಳಿಗೂ ಅವನು ಅನುವಂಶೀಯತೆಯ ನಿಯಮಕ್ಕೇ ಋಣಿಯಾಗಿದ್ದಾನೆ. ಆದರೆ ಮನುಷ್ಯನು

ಹೆಚ್ಚು ವಿಶೇಷವಾಗಿ, ಆಗಾಗ ಅಲ್ಲಲ್ಲಿ, ಬದಲಾವಣೆಹೊಂದುತ್ತಿರುವ ಹೊಸ ಹೊಸ ಪರಿಸ್ಥಿತಿಗಳಿಗೆ ವಿರೋಧವೂ ವಿರಸವೂ ಇಲ್ಲದಂತೆ ಹೊಂದಿಕೊಳ್ಳುವ ಸ್ವಭಾವ ದಿಂದಲೂ ವಿದ್ಯಾಶಿಕ್ಷಣದಿಂದಲೂ ತನ್ನ ಅತ್ಯಂತ ಪರಿಷ್ಕೃತವೂ ಸುಸಂಸ್ಕೃತವೂ ಪೂರ್ಣವಿಕಸಿತವೂ ಆದ ಪರಿಪೂರ್ಣಸ್ಥಿತಿಗೆ ಮುಂದುವರಿದು ಏರುತ್ತಾನೆ. ಕೋಳಿಯ ಮರಿಗಳು ಮೊಟ್ಟೆಯೊಡೆದು ಹೊರಗೆ ಬಂದಾಗ ಅವುಗಳ ತಂದೆತಾಯಿಗಳಲ್ಲಿರುವ ಎಲ್ಲಾ ಚುರುಕು ಬುದ್ಧಿಯೂ ಅವುಗಳಲ್ಲಿರುವದು ಕಂಡುಬರುತ್ತದೆ. ಕೆಲವು ಹಕ್ಕಿಗಳು ಹುಟ್ಟಿದ ಕ್ಷಣವೇ ಅವುಗಳ ಪೂರ್ವಜರಂತೆ ನೊಣಗಳನ್ನು ಕೊಕ್ಕಿನಿಂದ ಗುರಿಯಿಟ್ಟು ಕುಕ್ಕಿ ತಿನ್ನಲು ತೊಡಗುತ್ತವೆ. ಅವುಗಳು–ಪ್ರಾಣಿಗಳು-ಬಹಳ ಮಟ್ಟಿಗೆ ತಮ್ಮ ಎಲ್ಲಾ ಶಕ್ತಿಗಳನ್ನೂ ತಮ್ಮ ತಂದೆ ತಾಯಿಗಳಿಂದ ಪಡೆಯುತ್ತವೆ. ವಾಸ್ತವವಾಗಿ ಅಷ್ಟರಲ್ಲಿಯೇ ಅವುಗಳ ಬೆಳವಣಿಗೆಯೂ ಪ್ರಗತಿಯೂ ಮುಗಿಯುತ್ತದೆ. ಇದಕ್ಕೆ ಪ್ರತ್ಯೇಕವಾಗಿ, ಮನುಷ್ಯನು, ಮುಖ್ಯವಾಗಿ ವಿದ್ಯಾಶಿಕ್ಷಣದಿಂದಲೂ ಹೊಂದಿಕೊಳ್ಳುವಿಕೆಯಿಂದಲೂ ಉತ್ಕರ್ಷವನ್ನು ಪಡೆಯುವದರಿಂದ ಗುರುತಿಸಲ್ಪಡು ತ್ತಾನೆ. ಮುದ್ದಾದ ಪುಟ್ಟಮಗುವು ನಾಯಿಯ ಕುನ್ನಿಯಷ್ಟೇ ಮದ್ದುಪೆದ್ದಾ ಆಗಿರುತ್ತದೆ ; ಇಲ್ಲ, ಕೆಲವು ವಿಷಯಗಳಲ್ಲಿ ಈ ಆದಿಮನುಜ (Adam) ಗಿಂತಲೂ ನಾಯಿಯ ಕುನ್ನಿಯೇ ಹೆಚ್ಚು ಚತುರವಾಗಿ ಕಾಣುತ್ತದೆ. ಆದರೆ ಮನುಷ್ಯರಿಗೂ ಮನುಷ್ಯೇತರ ಪ್ರಾಣಿಗಳಿಗೂ ಇರುವ ಮಹತ್ತಾದ ವ್ಯತ್ಯಾಸವೆಂದರೆ,–ನಾಯಿಯ ಕುನ್ನಿಯಲ್ಲಿ ಅಥವಾ ಗಿಳಿಯಲ್ಲಿ (puppy or polly) ಅದರ ಪೂರ್ಣತೆಗೆ ಬೇಕಾದ ಎಲ್ಲಾ ಶಕ್ತಿಗಳನ್ನೂ ಅನುವಂಶೀಯತೆಯ ನಿಯಮದಿಂದ ಅದು ಪಡೆದಿದೆ ; ಆದರೆ ಮಗುವು ಇಡೀ ಜಗತ್ತನ್ನು ತನ್ನ ಸ್ವಾಧೀನದಲ್ಲಿ ತಂದುಕೊಳ್ಳುವಷ್ಟು ತನ್ನ ಆನುವಂಶಿಕ ಶಕ್ತಿಗಳನ್ನು ವಿದ್ಯಾಶಿಕ್ಷಣದಿಂದಲೂ ಹೊಂದಿಕೊಳ್ಳುವ ಶಕ್ತಿಯಿಂದಲೂ ಅರಳಿಸಿ ಬೆಳೆಸಿಕೊಳ್ಳಬಹುದು.

The blunder made by the Hindus consists in practically denying the virtue or education and the law of adaptation for man, and enforcing the principle of heredity on Hindu Society to such an extent as to reduce human beings to the level of trees and animals.

ಹಿಂದೂಗಳು ಮಾಡಿರುವ ಮಹಾಪರಾಧವೇನೆಂದರೆ, ಮನುಷ್ಯನಿಗೆ ವಾಸ್ತವ ವಾಗಿ, ವಿದ್ಯಾಶಿಕ್ಷಣದ ಸದ್ಗುಣ ಸಹಾಯವನ್ನು ನಿರಾಕರಿಸುವದೂ ಹೊಂದಿಕೊಳ್ಳುವ

ನಿಯಮವನ್ನು ಅಲ್ಲಗಳೆಯುವದೂ ಮನುಷ್ಯರನ್ನು ಪ್ರಾಣಿಗಳ ಮತ್ತು ಮರಗಳ ಮಟ್ಟಕ್ಕೆ ಇಳಿಸುವಷ್ಟು ದೂರದವರೆಗೆ ಅನುವಂಶೀಯ ತತ್ತ್ವವನ್ನು ಹಿಂದೂ ಸಮಾಜದ ಮೇಲೆ ಬಲಾತ್ಕಾರದಿಂದ ಹೇರುವದೂ ಆಗಿದೆ.

ಅವರು ಇದರಿಂದ, ಆತ್ಮನ ಅನಂತಶಕ್ತಿಯ ಸಾಧ್ಯತೆಯಲ್ಲಿ ವಾಸ್ತವವಾಗಿಯೂ ನಂಬಿಕೆ ಇಲ್ಲದವರೆಂದು ಅರ್ಥವಾಗುತ್ತದೆ. ಶೂದ್ರನಿಗೆ ಸರಿಯಾದ ಶಿಕ್ಷಣವನ್ನು ಕೊಟ್ಟು ಬ್ರಾಹ್ಮಣ್ಯ ಸಂಪಾದನೆಯವರೆಗೆ ಅವನನ್ನು ಏರಿಸಬಹುದೆಂದು ಅವರು ನಂಬುವದಿಲ್ಲ. ಅವರು ಶೂದ್ರನ ಮಗನನ್ನು ಶೂದ್ರನಾಗಿಯೇ ವೈಶ್ಯರ ಮಗನನ್ನು ವೈಶ್ಯನಾಗಿಯೇ ಇಟ್ಟಿರುತ್ತಾರೆ. ಏಕೆಂದರೆ, ಅಂಜೂರದ ಮರದಿಂದ ಅಂಜೂರದ ಬೀಜಗಳೇ ಉತ್ಪನ್ನವಾಗುತ್ತವೆ; ಮತ್ತು ನಾಯಿಯಲ್ಲಿ ಹುಟ್ಟುವುದು ನಾಯಿಯೇ ಸರಿ,— ಎಂದು ಹೇಳುತ್ತಾರೆ. ನಿತ್ಯವೂ ಪ್ರತ್ಯಕ್ಷ ಘಟನೆಗಳು ಅವರ ಈ ಮಾತನ್ನು ಸರಳವಾಗಿಯೂ ಸ್ಪಷ್ಟವಾಗಿಯೂ ಸುಳ್ಳು ಮಾಡುತ್ತಿದ್ದರೂ ಅವರು ತಮ್ಮ ಮಾತೇ ಸರಿಯೆಂದು ವಾದಿಸಿ ಸಾಧಿಸುತ್ತಾರೆ. ಒಂದಾನೊಂದು ಕಾಲದಲ್ಲಿ ಅತ್ಯಂತ ಸುಸಂಸ್ಕೃತ–ಉನ್ನತ ವಿಚಾರಕರೂ ಅದ್ಭುತ ತತ್ತ್ವಜ್ಞಾನಿಗಳೂ ಮಹಾತ್ಮರೂ ಆಗಿದ್ದ ಪೂಜ್ಯಋಷಿಗಳ (ನಿಸ್ಸಂದೇಹವಾಗಿಯೂ) ವಂಶಜರೇ–ಗೋತ್ರಜರೇ–ಆಗಿರುವ ಈಗಿನ ಬ್ರಾಹ್ಮಣರಲ್ಲಿ ಅನೇಕರು, ಸಂಸ್ಕೃತಿಯೂ ವಿದ್ಯೆಯೂ ಇಲ್ಲದೆ, ಮೂಢರೂ ಅವಿವೇಕಿಗಳೂ ಅಥವಾ ಮತಿಹೀನರೂ ತಿಳಿಗೇಡಿಗಳೂ ಆಗಿ ತಮ್ಮ ವರ್ಣದ ಔನ್ನತ್ಯದಿಂದ ಹಿಂದಕ್ಕೆ ಕೆಳಗೆ ಬಿದ್ದಿಲ್ಲವೆ? ಹೋಲಿಕೆಯಿಂದ ನೋಡಿದರೆ, ಹೆಚ್ಚು ಅನಾಗರಿಕರೂ ಸಂಸ್ಕೃತಿಹೀನರೂ ಆಗಿದ್ದ ಕಾಡು ಜನಾಂಗದ ವಂಶಜರೆನ್ನಬಹುದಾದ ಆಧುನಿಕ ಇಂಗ್ಲಿಷ್ ಜನರೂ ಅನೇಕ ಯೂರೋಪಿಯನ್ನರೂ ವಿದ್ಯಾಶಿಕ್ಷಣದ ಪ್ರಭಾವದಿಂದಲೂ ಸ್ವತಂತ್ರ ಸಾಹಸಕಾರ್ಯಗಳಿಂದಲೂ ಭೌತಿಕ–ಬೌದ್ಧಿಕ–ರಾಜಕೀಯ ಶಕ್ತಿಗಳ ಶಿಖರಕ್ಕೆ ಏರಿಲ್ಲವೆ? ದೇವರು ವ್ಯಕ್ತಿಗಳ, ದೇಶಗಳ, ಜಾತಿಗಳ ಅಭಿಮಾನ ಗೌರವಗಳುಳ್ಳವನಲ್ಲ; ಅವನಿಗೆ ಪಕ್ಷಪಾತವಿಲ್ಲ ಯಾರು ದುಡಿಯ ತಕ್ಕವರೋ ಕಾರ್ಯತತ್ಪರರೋ, ಕರ್ತವ್ಯದಕ್ಷರೋ ಸಾಹಸ ಕರ್ಮಿಗಳೋ ಅವರು ಯಶಸ್ಸನ್ನು ಸಂಪಾದಿಸುತ್ತಾರೆ; ವಿಜಯಶಾಲಿಗಳೂ ಸುಖಿಗಳೂ ಆಗುತ್ತಾರೆ. ಯಾರು ಸುಶಿಕ್ಷಿತರಾಗಿ ಜ್ಞಾನವನ್ನು ಸಂಪಾದಿಸುತ್ತಾರೋ ಅವರು ಮಹತ್ತನ್ನು ಪಡೆಯುತ್ತಾರೆ.

ನೀವು ಜಾತಿಯ ಅಭಿಮಾನದಿಂದ ಪೂರ್ಣ ಬಿಡುಗಡೆಹೊಂದಿದ್ದೀರೆಂದು ರಾಮನು ಹೇಳುವದಿಲ್ಲ; ಆದರೂ ಭಾರತೀಯರು ನಿಮಗಿಂತಲೂ ಹೆಚ್ಚಾಗಿ ಜಾತಿ

ಭಾವನೆಯಿಂದ ಸಂಕಟಪಡುತ್ತಿದ್ದಾರೆ. ಆದ್ದರಿಂದ ಅವರಲ್ಲಿ ಅನೇಕರಿಗಿಂತಲೂ ಹೆಚ್ಚು ಸುಲಭವಾಗಿ ನೀವು ಆ ಬಾಧೆಯಿಂದ ಬಿಡುಗಡೆ ಹೊಂದಬಹುದು. ನೀವು ಕೆಲವು ವಿಷಯಗಳಲ್ಲಿ, ರಾಮನಿಗೆ, ಭಾರತೀಯರಿಗಿಂತಲೂ ಹೆಚ್ಚು ಸಮೀಪವಾಗಿದ್ದೀರಿ. ನಿಮ್ಮಲ್ಲಿರುವ ಈ ಬಿಡುಬಿಚ್ಚಾಗಿರುವ (ವಿಮುಕ್ತತೆಯ) ಮನೋಧರ್ಮವನ್ನು ಬಲಪಡಿಸಿಕೊಳ್ಳಬೇಕೆಂದು ರಾಮನು ಆಶಿಸುತ್ತಾನೆ. ನೀವು ಈ ಮನೋಭಾವದ ಉಜ್ಜ್ವಲತೆಯನ್ನು ತೀವ್ರಗೊಳಿಸಿ, ಹೆಚ್ಚು ಹೆಚ್ಚು ವಿಶಾಲವಾಗಿ ಬೆಳೆಸಿಕೊಂಡು, ಭಾರತೀಯರಲ್ಲಿಯೂ ಈ ವಿಮೋಚನಾ ಕಾಮನೆಯು ಜ್ವಾಲೆಯನ್ನೆಬ್ಬಿಸಿ, ನಿಮ್ಮ ಸುಖ-ಸೌಭಾಗ್ಯ-ಸಮೃದ್ಧಿಗಳಲ್ಲಿ ಅವರೂ ಭಾಗಿಗಳಾಗುವಂತೆ ಮಾಡಬೇಕು. ಅಲ್ಲಿರುವ ಕೇಡಿನ ಬೇರನ್ನು ಈ ರೀತಿಯಲ್ಲಿ ಕಡಿಯಬಹುದು. ಆದರೆ ಜನರು ವೇದಾಂತಕ್ಕೆ ವಿರುದ್ಧ ಧ್ರುವದಲ್ಲಿರುವ, ವೈರಿಯಾದ, ಭೇದಭಾವಗಳಿಂದಲೂ ದ್ವೈತಭಾವ ದಿಂದಲೂ ದೈಹಿಕ, ಮಾನಸಿಕ, ಆಧ್ಯಾತ್ಮಿಕ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾರೆ.

ಇದೇ ರೋಗದ ವಿಷಯವಾಗಿ ಇನ್ನು ಕೆಲವು ಮಾತುಗಳನ್ನು ಹೇಳಬೇಕಾಗಿದೆ. ಉತ್ತಮ ವರ್ಗದವರಾದ ಬ್ರಾಹ್ಮಣವರ್ಣದವರು ದೇಹಶ್ರಮದ, ಕೈದುಡಿಮೆಯ ಕೆಲಸಗಳನ್ನು ಮಾಡುವದು ತಮ್ಮ ಘನತೆಗೆ ಕೀಳಾದುದೆಂದು ಭಾವಿಸುತ್ತಾರೆ. ತಮ್ಮ ಘನತೆಗೆ ಉಚಿತವಾದುದೆಂದು ರೂಢಿಯಿಂದಲೋ ಪದ್ಧತಿಯಿಂದಲೋ ಅನುಮತಿಯಿಲ್ಲ ದಿರುವ ಯಾವ ಕೆಲಸಕ್ಕೂ ಕೈ ಚಾಚಲು ಶ್ರೇಷ್ಠವರ್ಣದ ಜನರು ಮುಂದಾಗುವದಿಲ್ಲ. ಉದಾಹರಣೆಗೆ, ಮೂರು ಮೇಲಿನ ವರ್ಣದವರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಚಪ್ಪಲಿ ಮಾಡುವವನ ಕೆಲಸವನ್ನಾಗಲೀ ಕ್ಷೌರಕನ ಉದ್ಯೋಗವನ್ನಾಗಲೀ ಕಮ್ಮಾರನ ಕಸುಬನ್ನಾಗಲೀ ಬಡಗಿ, ಚಿಪ್ಪಿಗ, ಕುಂಬಾರ, ಕಲ್ಲುಕುಟಿಗ, ಬಣ್ಣಗಾರ, ಚಿತ್ರಗಾರ, ನೆಯ್ಗೆಕಾರ, ನಾವಿಕ.......ಮೊದಲಾದ ಯಾರ ವೃತ್ತಿಯನ್ನೂ ಕಾರ್ಯವನ್ನೂ (ರಸ್ತೆ ಗುಡಿಸುವ ಮಾಲಿಯ ಕೆಲಸವಂತೂ ಇರಲಿ) ಮಾಡುವದಕ್ಕೆ ಎಂದೆಂದಿಗೂ ಇಷ್ಟ ಪಡುವದಿಲ್ಲ. ಅವರು ಸಾಯುವದಕ್ಕಾದರೂ ಇಷ್ಟಪಡಬಹುದೇ ಹೊರತು ಇಂಥಾ ಬಗೆಯ ಕೆಲಸಗಳನ್ನು ಕೈಯಿಂದಲೂ ಮುಟ್ಟುವದಿಲ್ಲ. ಅವರೆಂದೆಂದೂ ಚರ್ಮದ ವ್ಯಾಪಾರವನ್ನು ಮಾಡುವದಿಲ್ಲ. ಈಗ ಸ್ವಲ್ಪ ಮಟ್ಟಿಗೆ ಬಂಡವಾಳವಿರುವ ಉತ್ತಮ ಜಾತಿಯವರು ಈ ಬಗೆಯ ಉದ್ದಿಮೆಗಳನ್ನು ನಡೆಸದೆ, ಹಣವಿಲ್ಲದಿರುವ ಕೀಳು ಜಾತಿಯ ಜನರಿಗೇ ಅವನ್ನು ಪೂರ್ಣವಾಗಿ ಬಿಟ್ಟುಬಿಟ್ಟರೆ ಇಂಡಿಯಾ ದೇಶದಲ್ಲಿ ಕಾರ್ಖಾನೆಗಳಲ್ಲಿ ಯಂತ್ರಶಕ್ತಿಯಿಂದ ನಡೆಯುವ ಕೈಗಾರಿಕೆಗಳೂ ಕಸುಬುಗಳೂ ಉದ್ಯೋಗಗಳೂ ಹೇಗೆ ಅಭಿವೃದ್ಧಿಯನ್ನು ಪಡೆಯಬೇಕು ? ಉಪಯುಕ್ತವಾದ ಕಲೆಗಳಲ್ಲಿ ಅವರು ಹೇಗೆ ತಾನೇ ಮುಂದುವರಿದಾರು ? ಬಂಡವಾಳವುಳ್ಳ ಶ್ರೀಮಂತ

ಜನರು ಕೈಗಾರಿಕೆಗಳನ್ನೂ ಉದ್ದಿಮೆಗಳನ್ನೂ ನಡೆಸುತ್ತಿರುವದರಿಂದ ಅಮೆರಿಕಾ, ಇಂಗ್ಲೆಂಡ್ ಮತ್ತು ಯುರೋಪಿನ ಇತರ ಶಕ್ತಿಗಳೂ ಇವತ್ತು ಐಶ್ವರ್ಯವಂತರಾಗಿದ್ದಾರೆ. ಒಂದು ದೇಶದ ಮುಕ್ಕಾಲುಭಾಗದ ಜನರು ಕೈಗಾರಿಕೆಗಳನ್ನು ತಮ್ಮ ಮರ್ಯಾದೆಗೂ ಯೋಗ್ಯತೆಗೂ ಕೀಳಾದುದೆಂದು ತಿರಸ್ಕರಿಸಿ, ಉನ್ನತ ಕಾರ್ಯಗಳನ್ನು ತುಚ್ಛವೆಣಿಸಿ, ಪದ್ಧತಿಯ ಮೃತ ಸಾಮಗ್ರಿಗಳಿಗೂ ಹಳೆಯ ಉದ್ಯೋಗಗಳಿಗೂ ಜೋತುಬಿದ್ದು ಅದನ್ನೇ ಧರ್ಮವೆಂದು ಭ್ರಮೆಯಿಂದ ಕರೆಯುತ್ತಿದ್ದರೆ, ಆ ಜನಾಂಗಕ್ಕೆಯಾವ ಪ್ರಗತಿಯ ಭರವಸೆಯಿದೆ ?

ಗತಕಾಲದ ಮೃತಪದ್ಧತಿಗಳಿಗೆ ದಾಸ್ಯಭಾವದಿಂದ ಅಂಟಿಕೊಳ್ಳುವ ಸತ್ತ್ವಹೀನತೆಯ ಸ್ವಾಭಾವಿಕ ಪರಿಣಾಮವಾಗಿಯೂ ಸತ್ತವರ ಕಣ್ಣಿನಿಂದಲೇ ನೋಡುವ ಪ್ರೇತಸಂಸ್ಕಾರದಿಂದಲೂ ಇಲ್ಲಿ ಈಗ ವಿವರಿಸುವ ಅಗತ್ಯವಿಲ್ಲದ ಇತರ ಹಲವು ಸಾಮಾಜಿಕ ದೋಷಗಳು ಇಂಡಿಯಾದಲ್ಲಿ ಹುಚ್ಚಾಬಟ್ಟೆ ಉಗ್ರವಾಗಿ ಆಳುತ್ತಿವೆ. ತಮ್ಮ ತಲೆಯ ಮೇಲೆ ಭೂತಕಾಲದ ಸಂಪ್ರದಾಯಗಳ ಹೊರೆಯ ಮೃತ ಭಾರವನ್ನು ಹೊತ್ತವರಿಂದ ಯಾವ ಮಹಾಸಾಧನೆಯನ್ನು ನಿರೀಕ್ಷಿಸಬಹುದು ? ಅವರು ತಮ್ಮ ಪೂರ್ವಜರ ಪಾದಗಳ ಅಡಿಯಲ್ಲಿ-ಅಲ್ಲ-ಕೇವಲ ಅವರ ಹೆಸರಿನ ಕೆಳಗೆ ನಿಂತು, ಅವರ ಭಾರದಿಂದ ಕುಸಿಯುವದಕ್ಕೆ ಬದಲಾಗಿ, ಓ, ಅಮೆರಿಕನ್‌ರೆ, ಆ ಪೂರ್ವಜರ ಹೆಗಲುಗಳ ಮೇಲೆ ಏರಿ ನಿಲ್ಲಲು ಅವರಿಗೆ ಸಹಾಯಮಾಡಿ. ಆನುವಂಶೀಯತೆಯ ಭೂತವು ಅವರನ್ನು ಬಡಿದುಕೊಳ್ಳುವದಕ್ಕೆ ಬದಲಾಗಿ, ಆನುವಂಶೀಯತೆಯ ಸಂಪತ್ತನ್ನು ಅವರು ಪಡೆದಿಟ್ಟುಕೊಳ್ಳುವದಕ್ಕೆ ಸಹಾಯಮಾಡಿ. ಅವರ ಸಾಮಾಜಿಕ ಪದ್ಧತಿಗಳೂ ಕೌಟುಂಬಿಕ ರೀತಿಗಳೂ—ಸಂಶಯವಿಲ್ಲದೆ—ಕೆಲವು ಶ್ಲಾಘ್ಯವಾದ ಗುಣಾಂಶಗಳನ್ನೂ ವಿಮೋಚಕವಾದ ಲಕ್ಷಣಗಳನ್ನೂ ಕೂಡ ಹೊಂದಿವೆ ; ಆದರೆ ಆ ರೀತಿನೀತಿಗಳಿಗೆ ಅಜ್ಞಾನಪೂರ್ವಕವಾದ ಅಂಥ ವಿಧೇಯತೆಯು ಅವುಗಳನ್ನು ನಿಸ್ಸಾರವಾಗಿಯೂ ನಿರ್ಜೀವವಾಗಿಯೂ ಮಾಡಿದೆ,

ಅಮೆರಿಕಾ ಸಂಯುಕ್ತ ಸಂಸ್ಥಾನದ ಒಟ್ಟಿನ ಪ್ರಜಾಸಂಖ್ಯೆಗೆ ಎರಡರಷ್ಟಿರುವ ಇಂಡಿಯಾದಲ್ಲಿಯ ಒಂದುನೂರಾಐವತ್ತು ದಶಲಕ್ಷ ಸ್ತ್ರೀಯರಲ್ಲಿ ಶೇಕಡ ಒಂದರಷ್ಟು ಜನ ಕೂಡ ತಮ್ಮ ಸ್ವಂತ ಹೆಸರನ್ನು ಸಹ ಬರೆಯಲಾರರು. ಎಂಥಾ ತೀರಾ ಕೆಟ್ಟ ಮೌಢ್ಯ, ಮೂಢ ನಂಬಿಕೆ, ಮೂಢಾಚರಣೆ, ಮತ್ತು ಅಂಜುಬುರಕತನ ; ಇಂಥಾ ದುಸ್ಸ್ಥಿತಿಯು ಮುಂದಿನ ಸಂತತಿಗೂ—ತಲೆಮೊರೆಗೂ—ಪ್ರವಹಿಸುವದಿಲ್ಲವೆ ?

ಉಪನಿಷತ್ತುಗಳ ದಿವ್ಯವಾದ ಬೋಧೆಯು ಮತ್ತು ಮಹಿಮಾಯುಕ್ತವಾದ ವೇದಾಂತದ ಸ್ಥಾನವನ್ನು ಆಹಾರ–ಭೋಜನಾದಿಗಳ ರೀತಿಗಳಿಗೆ ಅತಿರೇಕದ ವಿಚಿತ್ರ ಮಹತ್ವಕೊಡುವ ಒಂದು ಬಗೆಯ ಪಾಕಶಾಲೆಯ ಧರ್ಮವು ಆಕ್ರಮಿಸಿದೆ. ಕೆಲವು ಅತ್ಯಂತ ಶ್ರೇಷ್ಠ ಸಂಪ್ರದಾಯಬದ್ಧ ಪಂಡಿತರುಗಳ ಜ್ಞಾನದ ವ್ಯಾಪ್ತಿಯು ಎಲ್ಲಿಯೂ ಇನ್ನೀಗ ಮಾತನಾಡದಿರುವ ಹಳೆಯ ಸಂಸ್ಕೃತವ್ಯಾಕರಣನಿಯಮಗಳ ಯಾಂತ್ರಿಕ ಪ್ರಭುತ್ವವನ್ನು ಮೀರಿ ಆಚೆಗೆ ಬೆಳೆದಿಲ್ಲ. ಬಾಯಿಗೆ ಗಟ್ಟಿಮಾಡಿ, ಸ್ಮರಣೆಯಲ್ಲಿ ತುಂಬಿ ಕೊಂಡು, ಪ್ರಾಚೀನ ಶಾಸ್ತ್ರಗಳ ಆಧಾರವಾಕ್ಯಗಳನ್ನು ಉದಾಹರಿಸುವ ಶಕ್ತಿಯು ಎಲ್ಲಾ ಮೂಲಭೂತ–ನೂತನ ವಿಚಾರಕರ ಮೇಲೂ ಸ್ವತಂತ್ರವಿಚಾರಕರ ಮೇಲೂ ಅವರಿಗೆ ಹೆಚ್ಚಿನ ಶ್ರೇಷ್ಠತೆಯನ್ನೂ ಅಧಿಕಾರವನ್ನೂ ಗೌರವವನ್ನೂ ಕೊಡುತ್ತದೆ. ತನ್ನ ಮತೀಯರ ಹುಚ್ಚು ವಿನೋದಭಾವವನ್ನು ಪ್ರಚೋದಿಸುವಂತೆ–ಹುಚ್ಚುಖಯಾಲನ್ನು ಖುಷಿ ಮಾಡುವಂತೆ–ವೇದಶಾಸ್ತ್ರಗಳ ವಾಕ್ಯಗಳನ್ನು ತಿರುಚಿ, ಹಿಂಡಿ, ಚಿತ್ರಹಿಂಸೆ ಮಾಡಿ, ತನಗೂ ತನ್ನವರಿಗೂ ಇಷ್ಟವಾದ ಅರ್ಥವನ್ನು ಹೊರಡಿಸಿ ತೋರಿಸಬಲ್ಲವನು ಪ್ರಸಿದ್ಧ ವಿದ್ವಾಂಸನೆನಿಸುತ್ತಾನೆ. ''ಶಾಸ್ತ್ರಸ್ನಾನಕಾಲದಲ್ಲಿ ಒಬ್ಬ ಮನುಷ್ಯನು ಶುಚಿರ್ಭೂತನಾಗುವದಕ್ಕೆ ಎಷ್ಟುಸಲ ಗುಳುಗುಳು ಬಾಯಿಮುಕ್ಕಳಿಸಿ ಉಗುಳಬೇಕು?" ಎನ್ನುವಂಥ ಕಗ್ಗಂಟು ಪ್ರಶ್ನೆಗಳನ್ನೂ ಮಹಾಸಮಸ್ಯೆಗಳನ್ನೂ ಬಿಡಿಸುವದಕ್ಕಾಗಿ ಚರ್ಚಿಸುವದರಲ್ಲಿಯೂ ವಾದಿಸುವದರಲ್ಲಿಯೂ ಅನೇಕ ತರುಣ ಮಹಾಪಂಡಿತರ ಬುದ್ಧಿಶಕ್ತಿಗಳೆಲ್ಲಾ ಧಾರಾಳವಾಗಿ ಅಥವಾ ವ್ಯರ್ಥವಾಗಿ ವ್ಯಯವಾಗುತ್ತಿವೆ. ಸಂಕುಚಿತ ಮತಾಭಿಮಾನದ ವೃತ್ತಗಳ ಇಕ್ಕಟ್ಟಿನಲ್ಲಿ ಸೆರೆಸಿಕ್ಕಿರುವದೂ ಮತ್ತು ಶಾಸ್ತ್ರ ಪ್ರಮಾಣದ ಅಧಿಕಾರದಲ್ಲಿ ಪರಮಾವಧಿಯ ವಿಶ್ವಾಸವಿಟ್ಟಿರುವದೂ ಅವರನ್ನು ಅತ್ಯಂತ ಕ್ಷುದ್ರವಿಷಯಗಳೂ ಮತ್ತು ಅರ್ಥಹೀನ ಪ್ರತೀಕಗಳೂ ಆಳವಾಗಿ ಬೇರುಬಿಟ್ಟ ಭಾವನೆಯ ಕೇಂದ್ರಗಳಾಗುವಷ್ಟು ಆಳವಾದ ಅಜ್ಞಾನ ಪಕ್ಷಪಾತದಲ್ಲಿ ಮುಳುಗಿಸಿಬಿಟ್ಟಿವೆ. ಗೋವಿನಲ್ಲಿರುವ ಪರಮಾವಧಿಯ ಪೂಜ್ಯಭಾವವೇ ಇವತ್ತು ಭಾರತದ ಜನಪ್ರಿಯಧರ್ಮದ ಅತ್ಯಂತ ಪವಿತ್ರಗಂಭೀರವೂ ಪರಮಾವಧಿಯ ಶ್ರದ್ಧಾಪೂರ್ಣವಿಷಯವೂ ಆಗಿದೆ. ಹಿಂದೂಗಳಲ್ಲಿರುವ ಕೆಲವು ಮತಗಳು ಒಂದರಿಂದ ಒಂದು ದಕ್ಷಿಣೋತ್ತರ ಧ್ರುವಗಳಷ್ಟು ಅಗಲುವ ಅಭಿಪ್ರಾಯಗಳನ್ನು ಪಡೆದಿವೆ ; ಆದರೆ, ಗೋವಿನ ವಿಷಯದಲ್ಲಿರುವ ಅತಿರೇಕದ ಗೌರವಭಾವನೆಯಲ್ಲಿ ಪ್ರತಿಯೊಂದು ಜಾತಿಯೂ ಎಲ್ಲಾ ಜಾತಿಗಳೂ ಭಾಗಿಗಳಾಗಿವೆ. ಸಾಮಾನ್ಯವಾಗಿ ಹಿಂದೂಗಳಿಗೆ ಅಭಿಮಾನಾಸ್ಪದವಾದ ವಿಚಿತ್ರಕಲ್ಪನೆಯೂ ಅತ್ಯಂತ ಪ್ರಿಯವೂ ಅತ್ಯಂತ ಸಮೀಪವೂ ಆದ ಭಾವನೆಯೂ ಗೋವಿನ ದೇಹದ ಪಾವಿತ್ರ್ಯತೆಯಾಗಿದೆ. ಈ ಸೂಕ್ಷ್ಮವಿಷಯವನ್ನು ಸೋಂಕಿದರೆ ಸಾಕು, ಹಿಂದೂಗಳ ಅತ್ಯಂತ ಆಳವಾದ ಭಾವೋದ್ವೇಗಗಳನ್ನೂ

ಅತ್ಯಂತ ತೀಕ್ಷ್ಣವಾದ ಕೋಪವನ್ನೂ ಕೂಡಲೇ ಕೆರಳಿಸುತ್ತೀರಿ. ಅತಿಯಾಗಿ ಮನಸ್ಸಿಗೆ ಹಚ್ಚಿಕೊಂಡು, ಬೇಗ ತಪ್ಪು ತಿಳಿಯುವ, ಈ ಅತ್ಯಂತ ಸೂಕ್ಷ್ಮಪ್ರಶ್ನೆಯಿಂದ ಲೆಕ್ಕವಿಲ್ಲದಷ್ಟು, ಅನ್ಯಾಯಕ್ಕೆ ಹೇಸದ, ಗಲಾಟೆಮಾಡುವ-ಪಂಗಡಗಳೂ ವಿವಾದಗಳೂ ವ್ಯಾಜ್ಯಗಳೂ ಹೋರಾಟಗಳೂ ನಿತ್ಯವೂ ನಡೆಯುತ್ತವೆ. ಕ್ರಿ. ಶ. 1857ನೇ ಇಸವಿಯ ಪ್ರಸಿದ್ಧವಾದ ಸಿಪಾಯಿದಂಗೆಯು ಗೋವಿನ ಹೆಸರಿನಲ್ಲಿಯೇ ತರಲ್ಪಟ್ಟಿತು. ಮೊಟ್ಟ ಮೊದಲು ಮಹಮ್ಮದೀಯರು ಇಂಡಿಯಾದೇಶವನ್ನು ಗೆದ್ದುದು, ಹಿಂದೂಗಳ ಈ ಅಚ್ಚು ಮೆಚ್ಚಿನ ಮೂಢನಂಬಿಕೆಯ ಲಾಭಪಡೆದುಕೊಂಡದ್ದರಿಂದಲೇ ಎಂದು ಹೇಳುತ್ತಾರೆ ಮಹಮ್ಮದ್‌ಘೋರಿಯು ಮೊದಲಸಲ ಇಂಡಿಯಾ ದೇಶದ ಮೇಲೆ ದಂಡೆತ್ತಿಬಂದಾಗ ಹಿಂದೂ ರಾಜಪೂತ ವೀರರು ಅವನನ್ನು ಹಿಂದಕ್ಕೆ ಓಡಿಸಿದರು. ಆದರೆ ಅವನು ಹಿಂದಿರುಗಿ ಬಂದು ಪುನಃ ಇಂಡಿಯಾ ದೇಶವನ್ನು ಆಕ್ರಮಣಮಾಡಿದನು, ಈ ಸಲ ಅವನು ಹಿಂದೂಗಳ ಹೃದಯಕ್ಕೆ ಅತ್ಯಂತ ಸಮೀಪವಾಗಿದ್ದ ವಿಚಿತ್ರ ಭಾವನೆಗಳ ಮತ್ತು ಹುಚ್ಚು ಕಲ್ಪನೆಗಳ, ಭ್ರಮಾಚಾಪಲ್ಯಗಳ ಹೆಚ್ಚು ವಿಶಾಲ ಜ್ಞಾನದಿಂದ ಬಂದಿದ್ದನು. ಮಹಮ್ಮದನು ತನ್ನ ಸೈನ್ಯಗಳ ಸುತ್ತಲೆಲ್ಲಾ ಸಾವಿರಾರು ಗೋವುಗಳ ಸಾಲುಗಳನ್ನು ನಿಲ್ಲಿಸಿ ಗೋವುಗಳ ಬೇಲಿಯನ್ನು ಕಟ್ಟಿದ್ದನೆಂದು ಹೇಳುತ್ತಾರೆ. ಅವನು ತನ್ನ ಸೈನ್ಯರಕ್ಷಣೆಗಾಗಿ ಇದೆಂಥ ವಿಲಕ್ಷಣವಾದ ಕೋಟೆ, ಕೊತ್ತಲ, ಬುರುಜು, ರಕ್ಷಕ ಬೆಂಬಲ ಮಾಡಿಕೊಂಡಿದ್ದನು! ಹಿಂದೂಗಳು ಅವನಾ ಸೈನ್ಯದ ಮೇಲೆ ಬೀಳುವದಕ್ಕೆ ಸಾಧ್ಯವಾಗಲಿಲ್ಲ. ಆ ಪವಿತ್ರ ಗೋಮಾತೆಗಳ ಮೇಲೆ ಹಿಂದೂ ಸೈನಿಕರು ತಮ್ಮ ಖಡ್ಗವನ್ನೆತ್ತುವದು ಹೇಗೆ ಸಾಧ್ಯ ? ಅಜ್ಞಾನಿಗಳೂ ದಯಾಮಯರೂ ಆದ ಹಿಂದೂಗಳು ಪವಿತ್ರಗೋವುಗಳ ದರ್ಶನದಿಂದ ದಾಳಿ ಮಾಡಲು ಹಿಂಜರಿದು, ಹಿಮ್ಮೆಟ್ಟಿದರು ; ಆ ಬಡಹಸುಗಳನ್ನು ಉಳಿಸಿ 'ಬಡಾ' ದೇಶವನ್ನು ಕಳೆದುಕೊಂಡರು ; ಆದರೆ, ಅಂದಿನಿಂದ ಇಂದಿನವರೆಗೂ ಶತಮಾನಗಳು, ವಿಜಯಶಾಲಿಗಳಾದ ನಿರ್ದಯ ಶತ್ರುಗಳು ಸಹಸ್ರ ಸಹಸ್ರ–ಅಲ್ಲ–ಲಕ್ಷ ಲಕ್ಷ ಗೋವುಗಳನ್ನು ಕಡಿದು ಕಗ್ಗೊಲೆಮಾಡಿ ತಿನ್ನುವದಕ್ಕೆ ಅವಕಾಶಕೊಟ್ಟರು. ಈ ಕಥೆಯು ನಿಜವಿರಲಾರದು ; ಆದರೆ ಈ ಬಗೆಯ ವಿಲಕ್ಷಣ ಘಟನೆಯು ಇವತ್ತಿಗೂ ಸಾಧ್ಯವಿದೆ. ಇಂಥಾ ಘೋರ ಅಜ್ಞಾನವು ಸನಾತನಧರ್ಮದ ಹೆಸರಿನಲ್ಲಿ ಹಿಂದೂಗಳಲ್ಲಿ ಮೇಲುಗೈಯಾಗಿದೆ. ಈ ಅಸಂಬದ್ಧತೆಯನ್ನೂ ವೈಪರೀತ್ಯವನ್ನೂ ಗಮನಿಸಿ.

The most sacred scriptures, the revered vedas, instead of prohibiting the use of beef enjoin cowsacrifice time and

again. (yajurveda shatpath Brahmana, Brihat Aranyaka upanishad Adhyaya vi, 4th Brahmana 18th verse)

> ಅತ್ಯಂತ ಪವಿತ್ರವಾದ ಶಾಸ್ತ್ರಗಳು, ಪೂಜ್ಯ ವೇದಗಳು, ಗೋಮಾಂಸದ ಉಪಯೋಗವನ್ನು ನಿಷೇಧಿಸುವದಕ್ಕೆ ಬದಲು, ಪುನಃ ಪುನಃ ಗೋಮೇಧ ಯಜ್ಞವನ್ನು ವಿಧಿಸುತ್ತವೆ. (ಯಜುರ್ವೇದ ಶತಪಥ ಬ್ರಾಹ್ಮಣ, ಬೃಹದಾರಣ್ಯಕ ಉಪ. ಅ. 6. ಬ್ರಾ4, ಶ್ಲೋ18)

"ವಿದ್ವಾಂಸನೂ ಪ್ರಸಿದ್ಧನೂ ಜನಸೇವಾ ತತ್ಪರನೂ ಜನಪ್ರಿಯ ಭಾಷಣಕಾರನೂ ಸಕಲ ವೇದಜ್ಞನೂ (ಶತಮಾನ) ಪೂರ್ಣಾಯುಷಿಯೂ ಆದ ಒಬ್ಬ ಪುತ್ರನನ್ನು ಒಬ್ಬ ಮನುಷ್ಯನು ಇಚ್ಛಿಸುವದಾದರೆ, ಮಾಂಸ ಮತ್ತು ಬೆಣ್ಣೆಯ ಜೊತೆಗೆ ಅನ್ನವನ್ನು ಮಾಡಿ, ಪುರುಷನೂ ಗರ್ಭಧಾರಣೆಗೆ ಅರ್ಹಳಾದ ಸ್ತ್ರೀಯೂ ಇಬ್ಬರೂ ಭುಂಜಿಸಬೇಕು. ಮಾಂಸವು ಎಳೆಯ ಹೋರಿಯದು (ಉಕ್ಷಾನ) ಅಥವಾ ಮುದಿ ಹೋರಿಯದು (ವೃಷಭ) ಆಗಬೇಕು. ಗೋವುಗಳು, ಇರುವೆಗಳು, ಅತ್ತಿ ಮರಗಳು ಅಶ್ವತ್ಥವೃಕ್ಷಗಳು ಮೊದಲಾದವುಗಳ ಮೇಲೆ ನಿಮ್ಮ ಪವಿತ್ರಭಾವನೆಗಳನ್ನು ವ್ಯರ್ಥ ವ್ಯಯ ಮಾಡುವದಕ್ಕೆ ಬದಲಾಗಿ, "ನನ್ನದು" ಎನ್ನುವ ಈ ಸಣ್ಣ ದೇಹದ ಅಂಜುಬುರುಕು ಅಭಿಮಾನದಿಂದ ಮಾತ್ರವಲ್ಲ, ತಂದೆ, ಚಿಕ್ಕಪ್ಪ, ದೊಡ್ಡಪ್ಪ, ಅಜ್ಜ, ಗುರು, ಆಚಾರ್ಯ, ಈ ಎಲ್ಲಾ ಬಂಧುಗಳ ದೇಹಗಳಿಗೆ ಅನುಚಿತವಾದ ಮಹತ್ವವನ್ನು ಕೊಡುವ ಎಲ್ಲಾ ದುರ್ಬಲ ಭ್ರಮೆಗಳಿಂದಲೂ ಬಿಡುಗಡೆಮಾಡುವ, —ಒಂದಾನೊಂದು ಕಾಲದಲ್ಲಿ ಕೃಷ್ಣನಿಂದ ಉಪದಿಷ್ಟವಾದ,–ಓ, ಆ ವೇದಾಂತದ ಅಳುಕದ ಧೈರ್ಯವೆಲ್ಲಿದೆ ? ಎಲ್ಲಾ ಸೂರ್ಯ ಚಂದ್ರರುಗಳೂ ಮಹಾಶೂನ್ಯದಲ್ಲಿ ಬೀಸಿ ಎಸೆಯಲ್ಪಟ್ಟರೂ ಮತ್ತು ಲಕ್ಷಾಂತರ ಲೋಕಗಳು ಕರಗಿ ನಿರ್ನಾಮವಾದರೂ ಈ ಎಲ್ಲಾ ದೃಶ್ಯವಿಲಾಸವನ್ನೂ ನೋಡುತ್ತಿರುವ ಸಾಕ್ಷಿ ಚೈತನ್ಯಸ್ವರೂಪನಾದ ತನಗೆ (ತನ್ನ ಆತ್ಮಕ್ಕೆ) ಯಾವ ಕಾಲಕ್ಕೂ ಚ್ಯುತಿಯಿಲ್ಲ, ತಾನು ಅವಿನಾಶಿಯಾದ ಸತ್ಯಸ್ವರೂಪ, ಎಂಬಷ್ಟು ಧೃಡವಾದ ಪ್ರಜ್ಞೆಯನ್ನು ಹುಟ್ಟಿಸುವ, ಹೃದಯದ ಆಳಕ್ಕೆ ತೀವ್ರವಾಗಿ ಮುಟ್ಟಿಸುವ, ನಿಜಸುಖಪ್ರದವಾದ ವೇದಾಂತವು ಎಲ್ಲರಿಗೂ ಅತ್ಯಗತ್ಯವಾಗಿದೆ.

ಇಂಡಿಯಾ ದೇಶದ ಜನರು ದೈಹಿಕವಾಗಿಯೂ ಬೌದ್ಧಿಕವಾಗಿಯೂ ಆಧ್ಯಾತ್ಮಿಕವಾಗಿಯೂ ಬಲಿಷ್ಠವಾಗಿದ್ದಾರೆ. ಜಲಸಮುಸ್ಥಿತಿ ವಿಜ್ಞಾನಶಾಸ್ತ್ರದಲ್ಲಿ

(Hydrostatics) (ಹೆಚ್ಚುಕಡಮೆ ಪರಸ್ಪರ ಪ್ರತಿರೋಧ ಬಲಗಳ) ಸಂಘಟಿತ ಫಲವಾದ ಒತ್ತಡ (Resultant pressure) ಮತ್ತು ಸಂಪೂರ್ಣ ಒತ್ತಡ, ಇಡಿಯ ಒತ್ತಡ (Whole pressure, Total pressure) ಎಂಬ ವಿಷಯವನ್ನು ಓದಿದ್ದೀರಿ, ಒಂದು ವಸ್ತುವಿನ ಮೇಲೆ ಅಥವಾ ಒಂದು ಕಾರ್ಯದ ಮೇಲೆ, ಇಡಿಯ ಒತ್ತಡವು ಮಹತ್ತಾಗಿರಬಹುದು, ಅಪಾರವಾಗಿರಬಹುದು, ಅದ್ಭುತವಾಗಿರ ಬಹುದು. ಆದರೆ ಸಂಘಟಿತ ಫಲವಾದ (ಫಲಿತವಾದ) ಅಥವಾ ಒಟ್ಟಿನ ಪರಿಣಾಮ ವಾದ (Resultant pressure) ಒತ್ತಡವು ಏನೂ ಇಲ್ಲದಿರಬಹುದು ; ಶೂನ್ಯ ವಾಗಿರಬಹುದು ಇಂಡಿಯಾ ದೇಶದಲ್ಲಿ ಸಮೃದ್ಧವಾಗಿರುವ ಕೋಟ್ಯಂತರ ಜನರ ದೈತ್ಯಶಕ್ತಿಗಳು ಒಂದರೊಡನೊಂದು ಸಹಕರಿಸಿ, ಸಂಯುಕ್ತವಾಗಿ ಕೆಲಸಮಾಡುವುದಿಲ್ಲ. ಒಂದು ಶಕ್ತಿಯು ಇನ್ನೊಂದು ಶಕ್ತಿಯನ್ನು ತೊಡೆದುಹಾಕಿ ಇಲ್ಲದಂತೆ ಮಾಡುತ್ತದೆ ; ಒಂದುಶಕ್ತಿಯು ಇನ್ನೊಂದು ಶಕ್ತಿಗೆ ವಿರುದ್ಧವಾಗಿ ಸಮವಾದ ತೀವ್ರತೆಯಿಂದ ಕೆಲಸಮಾಡುವದರಿಂದ ಇದರ ಪರಿಣಾಮವಾದ ರಾಷ್ಟ್ರ ಶಕ್ತಿಯು ಶೂನ್ಯವೇ ಆಗುತ್ತದೆ. ಹೊರಗಿನ ರೂಪಗಳಲ್ಲಿ, ಮತ್ತು ಮತಾಚರಣೆಯ ಕರ್ಮಗಳಲ್ಲಿ ಜನರ ಪ್ರೇಮವು ಮೂಢಭಕ್ತಿಯಿಂದ ಕೇಂದ್ರೀಕೃತವಾಗಿರುವದರಿಂದಲೂ ಸಂಪ್ರದಾಯ ನಿಯಮಾಚರಣೆ—ಉತ್ಸವವೈಭವಗಳಲ್ಲಿ, ಮತ್ತು ಬಾಹ್ಯವಸ್ತುಗಳಲ್ಲಿ ಭಾವನೆಗಳು ಅಂಧಶ್ರದ್ಧೆಯಿಂದ ಒಂದುಗೂಡುವದರಿಂದಲೂ ದೃಶ್ಯಗಳ ಸತ್ಯತೆಯಲ್ಲಿ ಮತ್ತು ಸಂದರ್ಭಸನ್ನಿವೇಶಗಳ ಕಾಠಿನ್ಯದಲ್ಲಿ ತಿಳಿವಳಿಕೆಯಿಲ್ಲದೆ ದೃಢವಾದ ನಂಬಿಕೆಯಿಟ್ಟಿರು ವದರಿಂದಲೂ ಜನರಲ್ಲಿ ಜನಾಂಗದ್ವೇಷವೂ ಪಂಥಾಭಿಮಾನವೂ ಪಕ್ಷಾಭಿಮಾನವೂ ಜಾತಿಭಾವನೆಗಳೂ ಅತಿರೇಕವಾಗಿ ಬೆಳೆದು, ಪ್ರಕೃತಿಯಲ್ಲಿ ವ್ಯಾವಹಾರಿಕ ಭೇದ ಗಳಿದ್ದರೂ ಕೂಡ ಎಲ್ಲರಲ್ಲಿಯೂ ಇರುವ ಆತ್ಮಚೈತನ್ಯವೊಂದೇ ಎನ್ನುವ ಕಾರ್ಯತಃ ನಿದರ್ಶಿಸಲಾಗುವ ಅನುಭವದಿಂದ (ಅರಿವಿನಿಂದ) ಒಂದು ರಾಷ್ಟ್ರಕ್ಕೆ ಬೆಳೆದುಬರುವ ಅದ್ಭುತಚಾಲಕಶಕ್ತಿಯನ್ನು ಉತ್ಪನ್ನಮಾಡುವದಕ್ಕೆ—ಎಲ್ಲಾ ಜನರೂ ತಮ್ಮ ಬುದ್ಧಿ ಶಕ್ತಿಯನ್ನೂ ಸಂಕಲ್ಪಶಕ್ತಿಯನ್ನೂ ಒಟ್ಟುಗೂಡಿಸುವದಕ್ಕೆ ಸಾಧ್ಯವೇ ಇಲ್ಲವಾಗಿದೆ. ಕಾರ್ಯಾಚರಣೆಯಲ್ಲಿ ತರಬೇಕಾದ ವೇದಾಂತದ ಈ ಪ್ರಯೋಗಶೀಲತೆಯೇ ಹಿಂದೂ ಜನಸಾಮಾನ್ಯರಲ್ಲಿ ಅಭಾವವಾಗಿರುವದರಿಂದ ಇಂಡಿಯಾದೇಶವು ಒಂದು ಕುಟುಂಬ ದಲ್ಲಿಯ ಜನರ ಪರಸ್ಪರ ವಿರೋಧಗಳಿಂದ ತನ್ನಲ್ಲಿಯೇ ಒಡೆದು ನುಚ್ಚುನೂರಾಗಿರುವ ಒಂದು ಮನೆಯಂತಾಗಿದೆ. ದೇಶದಲ್ಲಿರುವ ಅಸಂಖ್ಯಾತಪಕ್ಷಗಳ ಪರಸ್ಪರ ಸಂಬಂಧಗಳು ಬಹಳ ವಿರಸವಾಗಿವೆ, ಹದಗೆಟ್ಟಿವೆ. ಇಂಡಿಯಾದಲ್ಲಿರುವ ಮಹಾವಿಪತ್ತು ಇದೇ , ಮತ್ತು ಬ್ರಿಟಿಷ್ ಸರಕಾರವು ಈ ಭೇದಭಾವವನ್ನು ಪ್ರೋತ್ಸಾಹಿಸಿ ಬೆಳೆಸುತ್ತಿದೆ ಎಂಬದನ್ನು ರಾಮನು ಗುಟ್ಟುಮಾಡುವದಿಲ್ಲ "ಆಳುವ ಬ್ರಿಟಿಷರ ''Divide

and conquer" " ವಿಭಾಗಮಾಡಿ ನಿಗ್ರಹಿಸು, ಜಯಿಸು " ಎನ್ನುವ ಭೇದನೀತಿಯು ಹಿಂದೂಗಳಲ್ಲಿರುವ ಜಾತಿ–ಮತ–ಪಂಥ–ಪಕ್ಷಗಳಲ್ಲಿರುವ ಪರಸ್ಪರ ದೂರದ ಖಾರಿಯನ್ನೂ ಹಿಂದೂ ಮತ್ತು ಮಹಮ್ಮದೀಯರಿಗಿರುವ ಅನ್ಯೋನ್ಯ ವೈಷಮ್ಯವನ್ನೂ ಹೆಚ್ಚಿಸುತ್ತಿದೆ. ಇಂಡಿಯಾದೇಶವನ್ನು ವಿಪತ್ತಿನಿಂದ ಪಾರುಮಾಡಬೇಕಾದರೆ, ಆಧ್ಯಾತ್ಮಿಕವಾಗಿಯಾಗಲೀ ರಾಜಕೀಯವಾಗಿ ಆಗಲಿ, ಸಾಮಾಜಿಕವಾಗಿ ಆಗಲಿ, ಅಥವಾ ಯಾವದೇ ರೀತಿಯಿಂದಾಗಲೀ ರಕ್ಷಿಸಬೇಕಾದರೆ, ಭೇದ ವಿರೋಧಭಾವಗಳನ್ನು ಕಳೆಯುತಕ್ಕಂಥ ಜಾತಿಭೇದದ ತಲೆಯನ್ನು ಒಡೆಯುತಕ್ಕಂಥ, ಅಸೂಯೆಯನ್ನೂ ಸೋಮಾರಿತನವನ್ನೂ ನಾಶಗೊಳಿಸತಕ್ಕಂಥ ಸಂಸ್ಕೃತಿಯು ಬೇಕಾಗಿದೆ. ಭಾರತವು ಪುನಃ ಬದುಕಿ, ಎದ್ದುನಿಂತು, ಇತರ ದೇಶಗಳಿಗೆ ಎದುರಾಗಿ, ತನ್ನ ಸ್ವಾತಂತ್ರ್ಯವನ್ನು ರಕ್ಷಿಸಿಕೊಂಡು, ತನ್ನತನವನ್ನು ಬಿಡದೆ, ಇಂಗ್ಲೆಂಡಿಗೂ ಅಮೆರಿಕಾ ದೇಶಕ್ಕೂ ಇಡೀ ಜಗತ್ತಿಗೂ ದೈವಾನುಗ್ರಹದ ಮೂಲಭಂಡಾರವಾಗಬೇಕೆಂದು ಅಪೇಕ್ಷಿಸುವದಾದರೆ, ಜನರಲ್ಲಿರುವ ಭೇದ-ವಿರೋಧ ಭಾವಗಳನ್ನೂ ಅದನ್ನು ಬೆಳೆಸುತ್ತಿರುವ ಬ್ರಿಟಿಷರ ಭೇದನೀತಿಯನ್ನೂ ನಿರ್ಮೂಲಮಾಡಬೇಕು. ಒಬ್ಬ ಮನುಷ್ಯನು ರೋಗಗ್ರಸ್ತನಾದರೆ, ಅವನೊಳಗಿರುವ ಪ್ರಕೃತಿಗೆ ಸಹಾಯಮಾಡುವಂಥ ಔಷಧಗಳನ್ನು ಕೊಡುವದರಿಂದ ಮಾತ್ರ ಆ ರೋಗವನ್ನು ಗುಣಪಡಿಸಬಹುದು. ನಮ್ಮನ್ನು ಗುಣಪಡಿಸುವದು ನಮ್ಮ ಒಳಗಿನ ಪ್ರಕೃತಿ; ಔಷಧಗಳು ಕೇವಲ ಹೊರಗಿನ ಸಹಾಯಗಳು. ಅವು ಪ್ರಕೃತಿಗೆ ಸಹಾಯಮಾಡುತ್ತವೆ; ಪ್ರಕೃತಿಯು ಗುಣಪಡಿಸುತ್ತದೆ. ಇದೇ ಪ್ರಕಾರ, ಭಾರತವನ್ನು ಪುನಃ ಅದರ ಪೂರ್ಣದ ಮಹಿಮಾ ವೈಭವದ ಸ್ಥಿತಿಗೆ ತರಬೇಕಾದರೆ, ಆಕೆಯ ಒಳಗಿನ ಜೀವತತ್ತ್ವವನ್ನು ಬಲಗೊಳಿಸಿ, ಅಂತಃ ಪ್ರಕೃತಿಯನ್ನು ವೀರ್ಯವತ್ತರವಾಗಿಯೂ ಸ್ಫೂರ್ತಿಯುಕ್ತವಾಗಿಯೂ ಮಾಡಬೇಕು.

ಭಾರತದ ವ್ಯಾಧಿಗಳನ್ನೂ ಬಾಧೆಗಳನ್ನೂ ಸಂಕಷ್ಟಗಳನ್ನೂ ನಿಮ್ಮೆದುರಿಗೆ ಬಿಚ್ಚಿಟ್ಟಿದೆ. ಈಗ ರಾಮನು ಇವುಗಳನ್ನೆಲ್ಲಾ ಗುಣಪಡಿಸುವದಕ್ಕೆ ಅವಶ್ಯವಾದ ಬೇರೆ ಬೇರೆ ಚಿಕಿತ್ಸೆಗಳನ್ನೂ ಔಷಧಗಳನ್ನೂ ವಿಚಾರಮಾಡುತ್ತಾನೆ.

ತತ್ತ್ವೋಪದೇಶಗಳೂ ನೀತಿ ನಿಯಮಗಳೂ ಧಾರ್ಮಿಕ ವಿಧಿ ನಿಷೇಧಗಳೂ ಲೋಕದಲ್ಲಿರುವ ಎಲ್ಲಾ ಬಾಧೆಗಳನ್ನೂ ಪರಿಹಾರ ಮಾಡುವವೆಂದು ಪ್ರಾಪಂಚಿಕ ಜನರು ಭಾವಿಸುತ್ತಾರೆ. ಅನೇಕ ಮತಧರ್ಮಗಳೂ ನಂಬುತ್ತವೆ, ಹಲವರು ನೀತಿವಿದರೂ ವಾಸ್ತವವಾಗಿ ವಾದಿಸುತ್ತಾರೆ. ಅನೇಕ ಮತಧರ್ಮಗಳೂ ನಂಬುತ್ತವೆ,

ಹಲವರು ನೀತಿವಿದರೂ ವಾಸ್ತವವಾಗಿ ವಾದಿಸುತ್ತಾರೆ. ಎಂದೂ ಇಲ್ಲ! ಎಂದೆಂದಿಗೂ ಇಲ್ಲ. ಇದು ಎಂದೆಂದಿಗೂ ಸುಳ್ಳು! ನೀತಿ ಬೋಧೆಗಳೂ ನಿಯಮ ನಿರ್ಬಂಧಗಳೂ ಆಚರಣೆಯ ಕೃತಕವಾದ ನಿಬಂಧನೆಗಳೂ ಮತ್ತು ಅಸ್ವಾಭಾವಿಕ ನೀತಿ ಪದ್ಧತಿ ಇವುಗಳು ಎಂದಿಗೂ ಬಾಧೆಗಳನ್ನು ಪರಿಹರಿಸುವದಿಲ್ಲ. ಇದನ್ನು ಚೆನ್ನಾಗಿ ನೆನಪಿನಲ್ಲಿಡಿ. ‘‘ಇದನ್ನು ನೀನು ಮಾಡಬಾರದು” “ಇದನ್ನು ನೀನು ಮಾಡಬೇಕು” ಈ ವಿಧಿನಿಷೇಧ ಗಳು ಎಂದೂ ಸುಧಾರಣೆಯನ್ನು ಉಂಟುಮಾಡಲಾರವು. ಈ ನಿಯಮಗಳೂ ಆದೇಶಗಳೂ ಸಂದೇಶಗಳೂ ಉಪದೇಶಗಳೂ ಈ ಪ್ರಪಂಚದ ದೋಷಗಳನ್ನೂ ದುಃಖಗಳನ್ನೂ ಕಳೆಯುವದಾಗಿದ್ದರೆ, ಹಿಂದೆ ವಾಗ್ದಾನವಾಗಿದ್ದ ಸ್ವರ್ಗ ಸಾಮ್ರಾಜ್ಯವು, ಭಗವಂತನ ರಾಜ್ಯವು, ಭೂವೈಕುಂಠವು ಈ ಪ್ರಪಂಚದಲ್ಲಿ ಎಂದೋ ಸ್ಥಾಪನೆಯಾಗಿರುತ್ತಿತ್ತು; ಈ ಪ್ರಪಂಚವೇ ಸ್ವರ್ಗವಾಗಿರುತ್ತಿತ್ತೇ ಹೊರತು ಈಗಿದ್ದಂತೆ ಎಂದೂ (ನರಕ ಸಮಾನವಾಗಿ) ಇರುತ್ತಿರಲಿಲ್ಲ. ಇವುಗಳೆಲ್ಲಾ ಪರಿಸ್ಥಿತಿಯನ್ನು ಎಂದೂ ಸುಧಾರಿಸುವದಿಲ್ಲ; ಬಾಧೆಯನ್ನು ಪರಿಹರಿಸುವದಿಲ್ಲ. ನಿಮ್ಮ ಶಿಕ್ಷೆಗಳೂ ನಿಮ್ಮ ಬಂದೀ ಖಾನೆಗಳೂ ಸೆರೆಮನೆಗಳೂ ಪರಿಸ್ಥಿತಿಯನ್ನು ಉತ್ತಮಗೊಳಿಸುವದಿಲ್ಲ. ಜೈಲು ಶಿಕ್ಷೆಗಳಿಂದ ಜನರನ್ನು ಸುಧಾರಿಸಬಹುದು, ಅಪರಾಧಗಳು ಕಡಮೆಯಾಗುವಂತೆ ಮಾಡಬಹುದು, ಎಂಬ ನಂಬಿಕೆಯು ಬಹಳ ತಪ್ಪಾದುದು, ದೊಡ್ಡ ತಿಳಿಗೇಡಿತನ, ಮಹಾ ಅವಿವೇಕ ಎಂಬಿದನ್ನು ಪ್ರಪಂಚವು ಇಂದಾಗಲಿ, ನಾಳೆಯಾಗಲಿ ಅರಿತು, ಒಪ್ಪಿಕೊಳ್ಳಲೇ ಬೇಕು. ಬೆದರಿಕೆ— ಭಯಸೂಚನೆಗಳೂ ಶಿಕ್ಷೆಗಳೂ ಪಾಪವನ್ನು ಎಂದೂ ತಪ್ಪಿಸಲಿಲ್ಲ. ಪರಿಣಾಮ ಕಾರಿಯಾಗಿ ಸ್ಥಿತಿಗತಿಗಳನ್ನು ಉತ್ತಮಗೊಳಿಸಬೇಕಾದರೆ ಜೀವಂತ ಜ್ಞಾನವನ್ನೂ ಸಂಸ್ಕೃತಿಯನ್ನೂ ಜನರಲ್ಲಿ ತುಂಬಬೇಕು ಇದೇ ಬೇಕಾದುದು. ‘‘ಅತಿಗೂಢ ವಿಷಯಗಳಿಂದಲೂ ಅತಿಸೂಕ್ಷ್ಮ ತರ್ಕ ವಾದಗಳಿಂದಲೂ ನಮ್ಮನ್ನು ಗೋಳುಗುಟ್ಟಿಸ ಬೇಡಿ; ಕೇವಲ ಭಾವನೆಗಳನ್ನೂ ಆಲೋಚನೆಗಳನ್ನೂ ಕಲ್ಪನೆಗಳನ್ನೂ ನಮಗೆ ಕೊಡ ಬೇಡಿ.’’ ಎಂದು ಜನರು ಹೇಳುತ್ತಾರೆ.

ಓ, ಜನರೆ, ನಿಮ್ಮನ್ನು ಆಳುತ್ತಿರುವದು ಯಾವದು? ಇಡೀ ಜಗತ್ತಿನ ಮೇಲೇ ಪ್ರಭುತ್ವ ನಡೆಸುತ್ತಿರುವದು ಯಾವದು? ಅದು ಮನೋ ಭಾವನೆ, ಆಲೋಚನೆ, ಕಲ್ಪನೆ, ಅಭಿಪ್ರಾಯ, ಉದ್ದೇಶ—ಇವುಗಳೇ ಮಾತ್ರ; ಅದು ನಿಮ್ಮ ಒಳಗಿನ ಬೆಳಕು, ನಿಮ್ಮ ಒಳಗಿನ ಜ್ಞಾನ, ಅದು ನಿಜವಾಗಿಯೂ ನಿಮ್ಮಿಂದ ದಾರಿ ನಡೆಸುವದೇ ಹೊರತು ಬೇರೆ ಇಲ್ಲ. ಬಂದೀಖಾನೆಗಳನ್ನು ನಡೆಸುವದಕ್ಕೆ ಬದಲಾಗಿ, ಅಪರಾಧಿಗಳಿಗೆ ನೀವು ವಿದ್ಯೆ ಕಲಿಸಬೇಕು, ಬದ್ಧಿಕಲಿಸಬೇಕು, ಶಿಕ್ಷಣಕೊಡಬೇಕು;

ಜಗತ್ತನ್ನೆಲ್ಲಾ ಆಳುತ್ತಿರುವ ದೈವೀ ನಿಯಮಗಳ ಪರಿಚಯವನ್ನು ಅವರಿಗೆ ಮಾಡಿ ಕೊಡಬೇಕು. "Knowledge is virtue" "ಜ್ಞಾನವೇ ಸದ್ಗುಣ, ಸೌಶೀಲ್ಯ" ಎಂದು ಹೇಳಿದೆ. ಎಷ್ಟು ಸತ್ಯ ! ಇಲ್ಲಿ ಒಂದು ಮಗು ಇದೆ ; ಇದು ಬೆಂಕಿಯನ್ನು ಮುಟ್ಟಿ ಕೈಯನ್ನು ಸುಟ್ಟುಕೊಳ್ಳುತ್ತದೆ. ಏಕೆ ? ಏಕೆಂದರೆ, ಬೆಂಕಿ ಸುಡುತ್ತದೆಯೆಂದು ಮಗುವಿಗೆ ತಿಳಿಯದಿರುವದಕ್ಕಾಗಿ ಬೆಂಕಿ ಸುಡುವದೆಂಬ ಸತ್ಯವನ್ನು ಆ ಮಗುವಿಗೆ ತಿಳಿಸಿ ಪರಿಚಯಮಾಡಿಕೊಡಿ ; ಆ ಮಗುವು ಪುನಃ ಎಂದೂ ಬೆಂಕಿ ಯನ್ನು ಮುಟ್ಟುವದಿಲ್ಲ. ಜನರಿಗೆ ಆಧ್ಯಾತ್ಮಿಕ ನಿಯಮಗಳನ್ನು ತಿಳಿಸಿ, ಪರಿಚಯ ಮಾಡಿಕೊಡಿ ; ಮಾನವ ಕುಲಕ್ಕೆ ಬೆಳಕನ್ನು ತನ್ನಿ. ಇದೇ ಚಿಕಿತ್ಸೆ, ಇದೇ ಮದ್ದು, ಇದೇ ಪರಿಹಾರ. ಈ ಕ್ರಮ ನಿಧಾನವಾಗಬಹುದು, ಬಸವನ ಹುಳುವಿನಂತೆ ಅತಿ ನಿಧಾನವಾಗಬಹುದು, ಧಾನಸವಾಗಬಹುದು. ಆದರೆ ಅದರ ಪರಿಣಾಮ ಖಂಡಿತ. ಅದು ಅತಿ ಸಾವಕಾಶದ ಕ್ರಮವಾದರೂ ತಾಮಸದ ಮಂದಗತಿಯ ಕ್ರಮವಾದರೂ ಇದೊಂದೇ ನಿಜವಾದ ಚಿಕಿತ್ಸೆ, ಇದೊಂದೇ ಪರಿಣಾಮಕಾರಿಯಾದ ಪರಿಹಾರ.

ಇದಕ್ಕೆ ಬೇರೆ ಮಾರ್ಗವೇ ಇಲ್ಲ, ಗತಿಯೇ ಇಲ್ಲ. ಹೀಗೆ ಕ್ರೈಸ್ತ ನೀತಿ ಗಳಿಂದಲೂ ನಿಯಮ ನಿಬಂಧನೆಗಳಿಂದಲೂ ಅವುಗಳನ್ನು ತಪ್ಪಿದವರಿಗೆ ಶಿಕ್ಷೆ ವಿಧಿಸುವ ದರಿಂದಲೂ ಭಾರತವನ್ನು ಎಂದಿಗೂ ಉದ್ಧರಿಸುವದಕ್ಕೆ—ಮೇಲೆತ್ತುವದಕ್ಕೆ—ಆಗುವ ದಿಲ್ಲ. ಸತ್ಯದ ಜೀವಂತ ಜ್ಞಾನ ಒಂದೇ ಅವಶ್ಯವಾಗಿರುವದು.

ಅಮೆರಿಕನ್‌ರಿಗೂ ಇಂಗ್ಲಿಷ್‌ಜನರಿಗೂ ಅತಿಸುಂದರವಾದ ಮನೆಗಳಿವೆ. ಇಂಡಿಯನ್‌ರಿಗೆ ಬಹಳ ಬಡ ಮನೆಗಳಿವೆ, ನಿಜ. ಆದರೆ ಇಂಡಿಯಾದಲ್ಲಿ ಒಳ್ಳೇ ಸುಂದರ ಭವ್ಯ ಭವನಗಳನ್ನು ಕಟ್ಟಿ, ಯುರೋಪಿಯನ್‌ರಂತೆಯೇ ಇಂಡಿಯನ್‌ರನ್ನು ಕೃತಕಶಾಖದ ಮನೆಯ ಗಿಡಗಳನ್ನಾಗಿ ಮಾಡಿದರೆ, ವಸ್ತುಸ್ಥಿತಿಯನ್ನೂ ಪರಿಸ್ಥಿತಿ ಯನ್ನೂ ಸುಧಾರಿಸಿದಂತಾಗುವದಿಲ್ಲ. ಮನೆಯು ಅರಮನೆಯಂತೆಯೂ ಮಹಾ ಸೌಧದಂತೆಯೂ ಇರುವ ಹಲವು ಸಂದರ್ಭಗಳಲ್ಲಿ ಜನರು ಸುಖಿವಾಗಿಲ್ಲ. ಎಷ್ಟೋ ವೇಳೆ ಹುಳುಗಳೂ ಕ್ರಿಮಿಗಳೂ ಹಾವೂ ಚೇಳುಗಳೂ ಸುಂದರವಾದ ಸಮಾಧಿ ಮಂದಿರ ಗಳಲ್ಲಿಯೂ ಸೊಗಸಾದ ಗೋರಿಗಳಲ್ಲಿಯೂ ವಾಸಮಾಡುತ್ತವೆ. ಸಾಮಾನ್ಯವಾಗಿ ಸಾರ್ವತ್ರಿಕ ನಿಯಮವಲ್ಲವಾದರೂ ಹೊರಗಿನ ಶೋಭೆಯೂ ಭವ್ಯತೆಯೂ ಸುಖಕ್ಕೆ ಕಾರಣವಲ್ಲವೆಂಬದಕ್ಕೆ ಸಾಕ್ಷಿಗಳಿವೆ, ನಿದರ್ಶನಗಳಿವೆ. ಇದು ವಾಸ್ತವ. ಪ್ರಪಂಚವು ಇದನ್ನು ಅರಿಯದಿದ್ದರೆ, ಪ್ರಪಂಚವನ್ನು ಅದಕ್ಕಾಗಿ ದೂಷಿಸಬೇಕು. ಆದ್ದರಿಂದ ಕೇವಲ ಐಶ್ವರ್ಯಗಳು ಸುಧಾರಣೆಮಾಡಲಾರವು. ರಾಮನು ಇಲ್ಲಿ ವೇದಾಂತವನ್ನು

ತಂದರೆ, ಅದು ಎಲ್ಲರ ಬಯಕೆಯನ್ನೂ ಹರ್ಷಪಡಿಸುವದಿಲ್ಲ, ಎಲ್ಲರ ನಿರೀಕ್ಷೆಯನ್ನೂ ತೃಪ್ತಿಗೊಳಿಸುವದಿಲ್ಲ ; ಆದರೆ ಐಶ್ವರ್ಯವು ಸುಖವನ್ನು ತರುವದಿಲ್ಲ ವೆಂಬದು ವಾಸ್ತವ. ಯುರೋಪಿನವರೂ ಅಮೆರಿಕಾದವರೂ ಸುಖದ ಸಾಧನವೆಂದು ಮೂಲವೆಂದು-ಐಶ್ವರ್ಯವನ್ನು ಬೆನ್ನುಹತ್ತುವದಾದರೆ, ಅವರು ದೊಡ್ಡ ತಪ್ಪು ಮಾಡುತ್ತಿದ್ದಾರೆ. ಅವರ ತಪ್ಪುಗಳನ್ನೇ ಭಾರತೀಯರೂ ಅನುಕರಣಮಾಡಿ ಮುಂದುವರಿಯಬೇಕೆಂದು ರಾಮನು ಎಂದೂ ಸೂಚಿಸುವದಿಲ್ಲ, ಸಲಹೆಮಾಡುವದಿಲ್ಲ ಭೌತಿಕ ವೃದ್ಧಿ ಸಮೃದ್ಧಿಗಳನ್ನು ಕೇವಲ ಅಷ್ಟಕ್ಕಾಗಿಯೇ ಬೆನ್ನುಹತ್ತಿದವರು ಯಾರೂ ಎಂದೂ ಅವುಗಳನ್ನು ಸಾಧಿಸಿಲ್ಲ. ಈ ಭೂಲೋಕದ ಸಮಸ್ತ ಭಾಗ್ಯವೂ ತನಗೇ ಇರಲೆಂದು ಬಯಸದ ಮನುಷ್ಯನು ಯಾರು ? ಅಥವಾ ದೇಶವು ಯಾವದು ? ಆದರೂ ಎಷ್ಟು ಜನರಿಗೆ ಇದು ಸಾಧ್ಯವಾಗಿದೆ ? ಅಭಿವೃದ್ಧಿಯೂ ಯಶಸ್ಸೂ ಎಚ್ಚೆತ್ತ ಕಾರ್ಯಶ್ರಮವನ್ನೂ ಪ್ರೇಮವನ್ನೂ ಅಥವಾ ಪ್ರೇಮದ ದುಡಿಮೆಯನ್ನೂ ಹಿಂಬಾಲಿಸುತ್ತವೆ. ಯಶಸ್ಸಿಗೆ ನಾಯಕ ಬೀಗದ ಕೈಯಾದ–ಗುರುಕೀಲಿಯಾದ– ಪ್ರಯೋಗಶೀಲ ವೇದಾಂತ ಮನೋಭಾವವನ್ನು ಯಾವ ದೇಶಗಳು ತಿಳಿದೋ ತಿಳಿಯದೆಯೋ ಹೆಚ್ಚು ಹೆಚ್ಚಾಗಿ ಪಡೆದಿವೆಯೋ ಅವು ಮುಂದುವರಿಯುತ್ತವೆ. ತಿಳಿಯದ ಮೂರ್ಖರು ಮರವನ್ನು ಬೆಳೆಸದೆ, ಅದರ ಫಲವನ್ನು ಸವಿಯಲು ಕಾತರ ಪಡುತ್ತಾರೆ. ಶಕ್ತಿಯ ಜೀವಸ್ವರವಾದ ಸ್ವಾತಂತ್ರ್ಯ ಮತ್ತು ಪ್ರೇಮಗಳ ಚೇತನವನ್ನು ಮಿಡಿಯದೆ, ಕಪಟರಾಜಕಾರಣಗಳು ರಾಷ್ಟ್ರೋನ್ನತಿಯನ್ನು ಸಾಧಿಸಬೇಕೆಂದು ಯೋಚಿಸುತ್ತಾರೆ. ಈಗ, ಪ್ರತಿಯೊಂದು ದೇಶದ ಜೀವತತ್ತ್ವವೂ–ಅವರಿಗೆ ತಿಳಿಯದಿದ್ದರೂ-ಭಾರತದ ಜೀವಶಕ್ತಿಯು-ತಿಳಿದೂ-ಸ್ವಾತಂತ್ರ್ಯ ಮನೋಭಾವ-ನ್ಯಾಯ-ಪ್ರೇಮ ಈ ತತ್ತ್ವಗಳ ಕಾರ್ಯಶೀಲ ವೇದಾಂತವೇ ಆಗಿದೆ. ಭಾರತದ ಈ ಅಂತರಂಗದ ಪ್ರಕೃತಿಯನ್ನು ಬಲಪಡಿಸಬೇಕು.

Domestic, social, political, or religious salvation of every country lies in vedanta carried into effect.

**"ಪ್ರತಿಯೊಂದು ದೇಶದ ಕೌಟುಂಬಿಕ, ಸಾಮಾಜಿಕ, ರಾಜಕೀಯ ಅಥವಾ ಧಾರ್ಮಿಕ ಉದ್ಧಾರವು ಅಥವಾ ವಿಮೋಚನೆಯು ಪರಿಣಾಮ ಕಾರಿಯಾಗಿ ಕಾರ್ಯಗತಮಾಡಿದ ವೇದಾಂತದಲ್ಲಿದೆ."**

ಭಾರತದಲ್ಲಿ ಒಂದು ವಿಲಕ್ಷಣವಾದ ವೈಶಿಷ್ಟ್ಯವಿದೆ. ಧರ್ಮ ಎಂಬ ಶಬ್ದದ

ನಿಜಾರ್ಥದಲ್ಲಿ, ಹಿಂದೂಗಳು ಅಷ್ಟೇನೂ ಅತಿಯಾದ ಧಾರ್ಮಿಕರಲ್ಲವಾದರೂ, ಸಾಮಾಜಿಕ, ರಾಜಕೀಯ ಮೊದಲಾದ ಯಾವ ಬಗೆಯ ತತ್ತ್ವವನ್ನಾಗಲೀ ಕಾರ್ಯಕ್ರಮ ವನ್ನಾಗಲೀ ಧರ್ಮದ ಹೆಸರಿನಿಂದಲ್ಲದೆ ಬೇರೆಯಾವ ರೀತಿಯಿಂದಲೂ ಅವರಲ್ಲಿ ಜನಪ್ರಿಯಗೊಳಿಸುವದಾಗಲೀ ಪ್ರಚಾರಮಾಡುವದಾಗಲೀ ಸಾಧ್ಯವಿಲ್ಲದಷ್ಟು ಅವರ ಧರ್ಮ ಗೌರವವೂ ಧರ್ಮದಲ್ಲಿ ಶ್ರದ್ಧಾದರಗಳೂ ಮಿಕ್ಕ ಎಲ್ಲವನ್ನೂ ಮುಳುಗಿಸಿ ಬಿಡುವಷ್ಟು ಪ್ರಬಲವಾಗಿವೆ. ಸಾಮಾಜಿಕ ಅಥವಾ ರಾಜಕೀಯ ಸುಧಾರಣೆಯೇ ಧ್ಯೇಯವಾಗಿ ಉಳ್ಳ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್–ಭಾರತದ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆ-ಅಥವಾ ಬೇರೆ ಯಾವ ಸಂಸ್ಥೆಯಾದರೂ ಧರ್ಮದ ಕಾಲುವೆಯಲ್ಲಿ ಬಂದಿಲ್ಲವಾದ್ದರಿಂದ ಅವು ಜನಸಾಮಾನ್ಯರನ್ನು ಮುಟ್ಟಿ, ಅವರ ಆತ್ಮಗಳಿಗೆ ನಿವೇದನಮಾಡಿ, ಸೆಳೆಯುವದು ಸಾಧ್ಯವಿಲ್ಲ. ಹೀಗಿರುವಾಗ, ಭಾರತದಲ್ಲಿ ಎಲ್ಲಾ ಬಗೆಯ ಸುಧಾರಣೆಗಳನ್ನೂ ಕಾರ್ಯಗತಮಾಡಲು ರಾಜಕೀಯ, ಕೌಟುಂಬಿಕ, ಬೌದ್ಧಿಕ, ನೈತಿಕ ಸ್ವಾತಂತ್ರ್ಯವನ್ನೂ ಮತ್ತು ಪ್ರೇಮವನ್ನೂ ಒಳಗೊಂಡಿರುವ ವ್ಯವಹಾರ ಸಾಧ್ಯ ವೇದಾಂತವನ್ನು ಉಪದೇಶಿಸುವದಕ್ಕಿಂತಲೂ ಬೇರೆ ಯಾವ ಪದ್ಧತಿಯೂ ಹೆಚ್ಚು ಪರಿಣಾಮಕಾರಿಯಾಗಲಾರದು ; ಯಾವದು ಪ್ರತಿಯೊಬ್ಬ ಹಿಂದೂವಿನ ಹೃದಯಕ್ಕೂ ಅತ್ಯಂತ ಸಮೀಪವಾಗಿದೆಯೋ, ಯಾವದಕ್ಕಿಂತಲೂ ಹಿಂದೂವಿಗೆ ಹೆಚ್ಚು ಪೂಜ್ಯವಾದುದಿಲ್ಲವೋ ಯಾವದಕ್ಕಾಗಿ ಪ್ರತಿ ಯೊಬ್ಬ ಹಿಂದೂವೂ ಪ್ರಾಣಾರ್ಪಣೆ ಮಾಡಲು ಅತ್ಯಂತ ಶ್ರದ್ಧೆಯಿಂದ ಸಿದ್ಧವಾಗಿರು ತ್ತಾನೋ ಅಂಥಾ ವೇದೋಪನಿಷತ್ತುಗಳ ಹೆಸರಿನಲ್ಲಿಯೂ ಸನಾತನ ಧರ್ಮದ ಹೆಸರಿ ನಲ್ಲಿಯೂ ಪ್ರಯೋಗಸಾಧ್ಯ. ವೇದಾಂತವನ್ನು ಉಪದೇಶಿಸುವದರಿಂದ ಸ್ವಾತಂತ್ರ್ಯ ಮತ್ತು ಶಾಂತಿ, ಶಕ್ತಿ ಮತ್ತು ಸಮಾಧಾನ, ಶೌರ್ಯ ಮತ್ತು ಪ್ರೇಮ ಇವುಗಳ ತೋರಿಕೆಯ ವೈಷಮ್ಯವನ್ನು ಕಳೆದು ಮಧುರವಾದ ಮೈತ್ರಿಯನ್ನು ಸಾಧಿಸಿ ಜನರಲ್ಲಿ ಪ್ರಸಾರಮಾಡಬಹುದು. ಮತ್ತೇನೆಂದರೆ, ಈ ಸ್ವಾತಂತ್ರ್ಯ ಮನೋಭಾವವನ್ನೂ ಪ್ರೇಮವನ್ನೂ ಪಡೆಯಲು ವೇದಶಾಸ್ತ್ರಗಳನ್ನು ಪಾಂಡಿತ್ಯದಿಂದ ತಿರುಚಿ, ಚಿತ್ರಹಿಂಸೆ ಮಾಡಿ, ಬಲಾತ್ಕಾರದಿಂದ ಅವುಗಳಲ್ಲಿ ಆ ಅರ್ಥವನ್ನು ಹೊರಡಿಸಬೇಕಾಗಿಲ್ಲ ; ಉಪ ನಿಷತ್ತುಗಳಲ್ಲಿ ಆ ಭಾವಗಳು ಅತ್ಯಂತ ಸರಳವಾಗಿಯೂ ಸ್ಪಷ್ಟವಾಗಿಯೂ ಇವೆ. ಜನಸಾಮಾನ್ಯರಿಗೆ ವೇದಾಂತವು ಏಕೆ ಮೆಚ್ಚಿಗೆಯಾಗಿದೆ ಎಂದರೆ, ಅದು ಅವರ ಪೂಜ್ಯವಾದ ಶಾಸ್ತ್ರ ; ಸುಶಿಕ್ಷಿತ ಹಿಂದೂಗಳಿಗೆ ಏಕೆ ಅಚ್ಚುಮೆಚ್ಚಾಗಿದೆ ಎಂದರೆ ಅದು ಪ್ರತಿಪಾದಿಸುವ ಏಕತತ್ತ್ವವಾದವನ್ನು ಎತ್ತಿಹಿಡಿಯದಿರುವ ತತ್ತ್ವಶಾಸ್ತ್ರವೇ ಪ್ರಪಂಚ ದಲ್ಲಿ ಇಲ್ಲ ; ಮತ್ತು ವೇದಾಂತ ತತ್ತ್ವವನ್ನು ಸಮರ್ಥನಮಾಡಿ ಮುಂದುವರಿಸದಿರುವ ವಿಜ್ಞಾನಶಾಸ್ತ್ರವೇ ಇಲ್ಲ.

ಬಹಳ ಆಶ್ಚರ್ಯವೇನೆಂದರೆ, ಅವರ ಶಾಸ್ತ್ರಗಳಲ್ಲಿ ವೇದಾಂತದ ಅಕ್ಷಯವಾದ ಚಿಲುಮೆಯಿದ್ದರೂ ಗ್ರೀಕ್ ಪುರಾಣದ ಟ್ಯಾಂಟಲಸ್‌ನಂತೆ ಅದರ ಉಪಯೋಗವನ್ನು ಹೊಂದದೆ ಸಂಕಟಪಡುತ್ತಿದ್ದಾರೆ ; ಆ ಅಮೃತ ಚಿಲುಮೆಯನ್ನು ಅವರು ಸೇವಿಸುತ್ತಲೇ ಇಲ್ಲ. (ಗ್ರೀಕ್ ಪುರಾಣದ ಪ್ರಕಾರ, ಸ್ಯೂಸ್‌ದೇವನ ಒಬ್ಬ ಮಗ ಟ್ಯಾಂಟಲಸ್‌ನು ತನ್ನ ಮಗನಾದ ಪೀಲಪ್ಸ್‌ನನ್ನು ಅಡಿಗೆ ಮಾಡಿ ದೇವತೆಗಳಿಗೆ ಬಡಿಸಿದನೆಂಬ ಅಥವಾ ದೇವರಹಸ್ಯವನ್ನು ಬಯಲುಮಾಡಿದನೆಂಬ ಪಾಪಕ್ಕಾಗಿ, ಅಧೋಲೋಕದಲ್ಲಿ ಒಂದು ಸರೋವರದ ನಡುವೆ ನಿಲ್ಲಿಸಲ್ಪಟ್ಟು, ಅವನ ಗಲ್ಲದ ಮಟ್ಟಕ್ಕೆ ಇದ್ದ ನೀರು ಅವನು ಬಾಯಾರಿಕೆಯಿಂದ ಕುಡಿಯಬಯಸಿ ಬಾಯಿ ಚಾಚಿದಾಗ ಸಿಕ್ಕದೆ ಕೆಳಗಿಳಿದುಹೋಗುತ್ತಿದ್ದ, ಮತ್ತು ತಲೆಯ ಮೇಲುಗಡೆ ತೊಂಗುವ ಹಣ್ಣು ಜೊಂಪಲು ಕೈ ಚಾಚಿದಾಗ ಸಿಕ್ಕದೆ ಮೇಲಕ್ಕೆ ಹೋಗಿ ಬಿಡುತ್ತಿದ್ದ ಒಂದು ವಿಚಿತ್ರಶಿಕ್ಷೆಗೆ ಗುರಿಯಾದವನು.) ಹೇಗೆ, ರೋಮನ್ ಕ್ಯಾಥೊಲಿಕ್ ಕ್ರೈಸ್ತರು, ಪ್ರಪಂಚದಲ್ಲಿ ಅವರಿಗೆ ಎಲ್ಲಕ್ಕಿಂತಲೂ ಹೆಚ್ಚು ಅತ್ಯಂತ ಪ್ರಿಯವಾದ ಬೈಬಲ್ಲಿನ ಭಯಂಕರವಾದ ಅಜ್ಞಾನದಿಂದ ಬಹಳ ದೀರ್ಘಕಾಲಕಷ್ಟಪಟ್ಟರೋ ಹಾಗೆ ಅನೇಕ ಭಾರತೀಯರ ಗತಿಯೂ ಆಗಿದೆ, ವೇದಾಂತದ ಸಂಪೂರ್ಣ ಜ್ಞಾನವುಳ್ಳವರು ಹೆಚ್ಚು ಜನರಿಲ್ಲವಾದರೂ ಇಂಡಿಯಾದಲ್ಲಿ ಕೆಲವರಿದ್ದಾರೆ ; ಆದರೆ, ಅವರ ಜ್ಞಾನವು ಕೇವಲ ತತ್ತ್ವಪ್ರತಿಪಾದನೆಗಾಗಿ ಇರುವದೇ ಹೊರತು, ಪ್ರಯೋಗಾತ್ಮಕವಾದುದಲ್ಲ. ಗುಣಾಕಾರ, ಭಾಗಾಕಾರಗಳ ಗಣಿತ ಶಾಸ್ತ್ರದ ನಿಯಮಗಳನ್ನೆಲ್ಲಾ ಕಂಠಪಾಠಮಾಡಿದ್ದರೂ ಅವುಗಳನ್ನು ಉಪಯೋಗಿಸಿ ಒಂದು ಲೆಕ್ಕವನ್ನೂ ಮಾಡದಿರುವ ವಿದ್ಯಾರ್ಥಿಯಂತೆ ಆ ವೇದಾಂತಿಗಳಿದ್ದಾರೆ. ಒಂದು ವೈಜ್ಞಾನಿಕ ಪ್ರಯೋಗವನ್ನು ಮಾಡದಿದ್ದರೂ ರಸಾಯನ ವಿಜ್ಞಾನಶಾಸ್ತ್ರದ ವಿದ್ಯಾರ್ಥಿ ಎನಿಸಿಕೊಂಡಂತೆ ಅನೇಕ ವೇದಾಂತ ಪಂಡಿತರಿದ್ದಾರೆ. ಸನ್ಯಾಸಿಗಳಲ್ಲಿಯೂ ಬಹುಜನರು ಸ್ವಾಮಿಗಳಾಗಿರುವದಕ್ಕೆ-ಅಂದರೆ ಪ್ರಭುಗಳಾಗಿರುವದಕ್ಕೆ–ಬದಲು ದಾಸರಾಗಿದ್ದಾರೆ. ಇಂಡಿಯಾದಲ್ಲಿ ನೀವು ವೇದಾಂತದ ಪ್ರೊಫೆಸರುಗಳನ್ನೂ ಸಂದೇಹವಿಲ್ಲದೆ ಹೇರಳವಾಗಿ ಕಾಣಬಹುದು. ಕಾಲುಹೊಳೆಯಲ್ಲಿ ಸಹ ಎಂದೂ ನಡೆದು ಹಾಯದಿದ್ದರೂ ನೀರಿನಲ್ಲಿ ಈಜುವ ತತ್ತ್ವಗಳನ್ನೂ ನೌಕೆಗಳ ಯಾನವನ್ನೂ ಆಕಾಶಬುಟ್ಟಿಗಳನ್ನು (ಬೆಲೂನ್ಸ್) ಮೇಲಕ್ಕೇರಿಸುವದನ್ನೂ ಬೋಧಿಸುವ ಹೈಡ್ರೋಡೈನಮಿಕ್ಸ್‌ನ (ದ್ರವ, ಜಲಬಲ ವಿಜ್ಞಾನಶಾಸ್ತ್ರದ) ಯೂನಿವರ್ಸಿಟಿಯ ಪ್ರೊಫೆಸರ್‌ನಂತೆ ಅನೇಕ ವೇದಾಂತ ಪ್ರೊಫೆಸರುಗಳಿದ್ದಾರೆ. ನೀವು, ಅಮೆರಿಕಾದ ಜನರು, ಹೈಡ್ರೋಸ್ಟ್ಯಾಟಿಕ್ಸ್‌ನ ಪ್ರೊಫೆಸರ್ಸ್ ಅಲ್ಲದಿರಬಹುದು ; ಆದರೆ ಹೈಡ್ರೋಸ್ಟ್ಯಾಟಿಕ್ಸ್‌ನ ತತ್ತ್ವಗಳ ಶಾಸ್ತ್ರಜ್ಞಾನವನ್ನು ಪಡೆದಿರುವಂತೆ ನೀವು ಹೇಳಿಕೊಳ್ಳದಿದ್ದರೂ ಅಥವಾ

ನಟಿಸದಿದ್ದರೂ,ಆ ಪ್ರೊಫೆಸರುಗಳಿಗಿಂತಲೂ ಉತ್ತಮವಾಗಿ, ಆ ತತ್ತ್ವಗಳನ್ನು ಅರಿಯದಿದ್ದರೂ ಅವನ್ನು-ಆಚರಣೆಯಲ್ಲಿ ಚೆನ್ನಾಗಿ ತರುವ ಯೋಗ್ಯತೆಯುಳ್ಳ ಅನುಭವ ಸಂಪನ್ನ ಪ್ರಯೋಗಶೀಲ ನಾವಿಕರಂತೆ ಇದ್ದೀರಿ. ಹೀಗೆ, ಓ, ಅಮೆರಿಕನ್‌ರೆ, ನಿಮ್ಮ ಕಾರ್ಯೋದ್ಯುಕ್ತ ಶಕ್ತಿಗಳನ್ನು ವೇದಾಂತದ ಆಧ್ಯಾತ್ಮಿಕ ವೀರ್ಯದೊಡನೆ ಸೇರಿಸಿ, ಈ ಸಂಯುಕ್ತ ಸಂಸ್ಕೃತಿಯನ್ನು ಭಾರತಕ್ಕೆ ಒಯ್ದು, ಭಾರತದ ಉತ್ಕರ್ಷವನ್ನು ಸೇವಿಸುವದರ ಮೂಲಕ ಇಡಿಯ ಜಗತ್ತಿನ ಉನ್ನತಿಯನ್ನು ಸಾಧಿಸಲಾರಿರಾ? ಈಗಿರುವ ಪರಿಸ್ಥಿತಿಯಲ್ಲಿ, ಇಂಡಿಯಾದಲ್ಲಿರುವ ಸ್ವಾಮಿಗಳೂ ಪಂಡಿತರೂ ತಮ್ಮ ಭಾರತ ಜನಾಂಗದ ಆಲಸ್ಯ-ನಿರುತ್ಸಾಹಗಳ ನಿದ್ರೆಯನ್ನು ಬೆಳೆಸುವದಕ್ಕೆ ಬೇಕಾದ ಜೋಗುಳಗಳನ್ನು ಹಾಡುತ್ತಿದ್ದಾರೆ.

ಕಸಬು—ಕೈಗಾರಿಕೆಗಳ ಕಾಲೇಜುಗಳನ್ನೂ ಸಂಸ್ಥೆಗಳನ್ನೂ ಪ್ರಾರಂಭಿಸುವದರಿಂದ ಈಗಿರುವ ಸ್ಥಿತಿಯನ್ನು ಉತ್ತಮಪಡಿಸಬಹುದೆಂದು ಹೇಳುತ್ತಾರೆ, ಅದರಿಂದ ಉತ್ತಮಗೊಳ್ಳುವದೆ ? ಇಲ್ಲ ; ಅಂಥ ಸಂಸ್ಥೆಗಳು ಕೆಲವು ಮಟ್ಟಿಗೆ ತಾತ್ಕಾಲಿಕವಾದ ಪರಿಹಾರ—ಅಥವಾ ಉಪಶಮನವನ್ನು ಒದಗಿಸಬಹುದು ; ಆದರೆ, ನಿಜವಾದ ತೊಂದರೆಯೂ ಮುಖ್ಯವಾದ ಕಷ್ಟವೂ ಮತ್ತು ಮಹತ್ತಾದ ವ್ಯಥೆಯೂ ಇಂಡಿಯಾದಲ್ಲಿ ಕೇವಲ ಕೈಗಾರಿಕೆಗಳ ಕಾಲೇಜುಗಳನ್ನು ಸ್ಥಾಪಿಸುವದರಿಂದ ನಿವಾರಣೆಯಾಗುವದು ಸಾಧ್ಯವಿಲ್ಲ. ಈಗ ಇಂಡಿಯಾದಲ್ಲಿ ಶ್ರಮಜೀವಿಗಳು ತಮ್ಮ ಕೆಲಸಕ್ಕೆ ಎಷ್ಟು ಪ್ರತಿಫಲವನ್ನು ಪಡೆಯುತ್ತಿದ್ದಾರೆ ? ಉದಾಹರಣೆಗೆ ಒಬ್ಬ ಕುಂಬಾರನನ್ನು ತೆಗೆದುಕೊಳ್ಳಿ. ಅವನು ಇಪ್ಪತ್ತು ಗಡಿಗೆಗಳನ್ನೂ ತಟ್ಟೆಗಳನ್ನೂ ಮಾಡಬಹುದು ; ಬಹಳ ಕಾಲ ಶ್ರಮಪಟ್ಟು ಅವುಗಳನ್ನು ಮಾಡಿದರೆ, ಅವನಿಗೆ ಸಿಕ್ಕುವದು ಒಂದು ಸೆಂಟು—(One cent) 20 ಗಡಿಗೆಗಳಿಗೆ ! 20 ಮಡಿಕೆಗಳಿಗೆ ಒಂದೇ ಸೆಂಟು ! ಬೇರೆ ಕೆಲಸಗಾರರು ಅವರ ಇಡೀ ದಿನದ ದೀರ್ಘಶ್ರಮಕ್ಕೆ 5 ಸೆಂಟುಗಳನ್ನು ಪಡೆಯಬಹುದು. ಕೆಲವರು ಉತ್ತಮ ಜಾತಿಯ ಜನರು, ಕಾಲೇಜುಗಳಲ್ಲಿಯೂ ವಿಶ್ವವಿದ್ಯಾನಿಲಯಗಳಲ್ಲಿಯೂ ವ್ಯಾಸಂಗಮಾಡಿ, ಪದವಿಗಳನ್ನು ಪಡೆದುಕೊಂಡು ಎಂ. ಎ. ಗಳಾಗಿ, ಜಯಭೇರಿ ಹೊಡೆಯುತ್ತ ಹೊರಗೆ ಬರುತ್ತಾರೆ. ಅವರಿಗೆ ತಿಂಗಳಿಗೆ ವೇತನವೇನು ? ಸಾಮಾನ್ಯವಾಗಿ 60 ರೂಪಾಯಿಗಳಿಗೆ ಅಥವಾ ತಿಂಗಳಿಗೆ 20 ಡಾಲರುಗಳಿಗೆ ಹೆಚ್ಚಿಲ್ಲ. ಇದು ಒಂದು ದಿನಕ್ಕೆ 2/3 ಡಾಲರ್ ಅಥವಾ ಸುಮಾರು 66 ಸೆಂಟ್ ಆಗುತ್ತದೆ. ಸಾಮಾನ್ಯ ಎಂ. ಎ. ಗಳಿಗೆ ದಿನಕ್ಕೆ 45 ಸೆಂಟ್ ಬರುತ್ತದೆ. ಇದು ಇಂಡಿಯಾದಲ್ಲಿರುವ ಪರಿಸ್ಥಿತಿಯು.

ಇಲ್ಲಿ ಅಮೆರಿಕಾದಲ್ಲಿ ನಿಮ್ಮ ಸಾಮಾನ್ಯ ಕೂಲಿಯವನಿಗೆ ಏನು ಸಿಕ್ಕುತ್ತದೆ ? ಒಂದು ದಿನಕ್ಕೆ 2 ಡಾಲರು. ಇಂಡಿಯಾದಲ್ಲಿ ಅದೇಕೆ ಇಷ್ಟು ಅಲ್ಪವಾದ ವೇತನ, ಕೂಲಿ ? ಅವರ ಊಟ, ಉಡಿಗೆ, ವಸತಿ, ಭೋಗಗಳು ಎಲ್ಲಾ ಬಹಳ ಬಡತನದವು. ನಿಕೃಷ್ಟವಾದುವು, ಅತ್ಯಂತ ಕೀಳಾದುವು. ಅದೇಕೆ ? ಏಕೆಂದರೆ ದೇಶದಲ್ಲಿರುವ ಬಂಡವಾಳವು ಅತ್ಯಲ್ಪವಾದುದು. ಬಂಡವಾಳವು ಶೋಷಣೆಯಾಗುತ್ತಿದೆ. ಇಲ್ಲಿ ಅಮೆರಿಕನ್ ಇಂಡಿಯನ್‌ರಿಗಾಗಿ ಇರುವ ಕಾರ್ಲಿಸ್ಲೇ ಇನ್ಸ್ಟಿಟ್ಯೂಟ್ (Carlisle Institute) ಮತ್ತು ನಿಗ್ರೋಗಳಿಗಾಗಿ ಇರುವ ಟಸ್ಕೆಜೀ ಇನ್ಸ್ಟಿಟ್ಯೂಟ್ (Tuskegee Institute), ಇವುಗಳಂಥಾ ಕೈಗಾರಿಕೆಯ-ಔದ್ಯೋಗಿಕ-ಕಾಲೇಜುಗಳನ್ನು (Industrial Colleges) ಇಂಡಿಯಾದಲ್ಲಿ ಪ್ರಾರಂಭಿಸಿದರೆ, ನಿಜವಾಗಿಯೂ ಸ್ವಲ್ಪ ಸಹಾಯವಾಗಬಹುದು ; ಅದರಿಂದ ಜನರು ಶ್ರಮಪಟ್ಟು ಕೆಲಸಮಾಡುವದನ್ನು ಕಲಿಯಬಹುದು. ಆದರೆ ಈ ಶ್ರಮದ ದುಡಿಮೆಯನ್ನು ಯಾರ ವೈಭವಕ್ಕಾಗಿ, ಯಾರ ಪ್ರಗತಿಗಾಗಿ, ಯಾರ ಪ್ರಯೋಜನಕ್ಕಾಗಿ ಕೈಗೊಳ್ಳಬೇಕು ? ದಯವಿಟ್ಟು ಹೇಳಿ. ಅದು ಮುಖ್ಯವಾಗಿ ಇಂಗ್ಲೆಂಡ್ ಬಂಡವಾಳಗಾರರ ಭೋಗಭಾಗ್ಯಗಳನ್ನು ಬೆಳಸುವದಕ್ಕೆ ಸಾಧನವಾಗುತ್ತದೆ. ಇಂಡಿಯಾದಲ್ಲಿರುವ ಎಲ್ಲಾ ವಾಣಿಜ್ಯ ಸಂಸ್ಥೆಗಳೂ ಇಂಗ್ಲೀಷ್ ವರ್ತಕರ ಕೈಯಲ್ಲಿವೆ. ಇಂಡಿಯಾದ ವರ್ತಕರು ಹೆಸರಿಗೆ ಮಾತ್ರ ಬಂಡವಾಳಗಾರರು ; ಯೂರೋಪ್-ಅಮೆರಿಕಾದ ಬಂಡವಾಳಗಾರರು ಇಂಡಿಯಾದ ಬಂಡವಾಳಗಾರರನ್ನು ಕೈಗೊಂಬೆಗಳಾಗಿ ಮಾಡಿಕೊಳ್ಳುತ್ತಾರೆ. ಇಂಡಸ್ಟ್ರಿಯಲ್ ಕಾಲೇಜುಗಳನ್ನು ಸ್ಥಾಪಿಸಿ ಶಿಕ್ಷಣವನ್ನು ಕೊಟ್ಟರೂ ಇಂಡಿಯಾದ ಜನರಿಗೆ ಬರುವ ಸಂಪಾದನೆ ಏನು ? ಜನರಿಗೆ ಅದರಿಂದ ಸಹಾಯವಾಗುವದೆ ? ಅವರಿಗೆ ಕಷ್ಟ ತಪ್ಪುವದೇ ಇಲ್ಲ. ಅದರಿಂದ ಅವರ ಉಪವಾಸವಾಗಲೀ ಕ್ಷಾಮವಾಗಲೀ ಪರಿಹಾರವಾಗುವದಿಲ್ಲ. ಇಂಡಸ್ಟ್ರಿಯಲ್ ಕಾಲೇಜುಗಳಿಂದ ಸ್ಥಿರವಾದ ಪರಿಹಾರವು ದೊರಕುವದಿಲ್ಲ. ಹಾಗಾದರೆ ನಮ್ಮ ಆವಶ್ಯಕತೆಯೇನು ? ನಮಗೆ ಅನೇಕ ವಸ್ತುಗಳು ಬೇಕಾಗಿವೆ ; ಆದರೆ, ಈಗ ಅತ್ಯಂತ ಸಮೀಪದ ಅಗತ್ಯವೆಂದರೆ, ಮೇಲಿನ ಜಾತಿಯವರಿಗೂ ಕೀಳು ಜಾತಿಯವರಿಗೂ ವಿದ್ಯಾಭ್ಯಾಸ ಮಾಡಿಸಿ, ಶಿಕ್ಷಣ ಕೊಟ್ಟು, ಅವರಲ್ಲಿ ಸ್ವಾತಂತ್ರ್ಯ ಮನೋಧರ್ಮವನ್ನೂ ಸತ್ಯದ ನಿಸ್ಸ್ವಾರ್ಥ ಶಕ್ತಿಯನ್ನೂ ಬೈರಿಗೆ ಹಚ್ಚಿ ಕೊರೆದು ತುಂಬಬೇಕು, ಅಗತ್ಯವಾಗಿರುವದು ಇದು. ಈ ಪರಿಪೂರ್ಣ ಸಂಸ್ಕೃತಿಯು ಯಂತ್ರಕಲಾವಿದ್ಯಾಭ್ಯಾಸವನ್ನೂ ಒಳಗೊಳ್ಳುತ್ತದೆ; ಆದರೆ ಕೇವಲ ಕೈಗಾರಿಕೆಗಳು ಸಾಲದು. ಕೈಗಾರಿಕೆಗಳ, ಕಲೆಗಳ, ಔದ್ಯೋಗಿಕ (Industries) ಶಿಕ್ಷಣವು ಗೌಣವಾದುದು ; ಅದಕ್ಕಿಂತಲೂ ಉತ್ತಮವಾದುದು ಹೆಚ್ಚು ತುರ್ತಾಗಿ ಬೇಕಾಗಿದೆ.

ಇಂಡಿಯಾದಲ್ಲಿ ಈಗಾಗಲೇ ಹೆಚ್ಚು ಕಡಿಮೆ ಇಷ್ಟವಾದ ರೀತಿಯಲ್ಲಿ ಕೆಲಸ ಮಾಡುವ ಶಕ್ತಿಗಳು ತಮ್ಮ ಕಾರ್ಯದಲ್ಲಿ ತೊಡಗಿವೆ. ಅವುಗಳ ಕಾರ್ಯವನ್ನು ಪರಿಶೀಲಿಸೋಣ. ಕ್ರೈಸ್ತಮತ ಪ್ರಚಾರಕರಾದ ಮಿಷನರಿಗಳು ಅಮೆರಿಕಾದಿಂದ ಇಂಡಿಯಾಕ್ಕೆ ಹೋಗಿ, ಅಲ್ಲಿ ಬಹಳ ಶ್ರಮಪಟ್ಟು ಕೆಲಸಮಾಡಿ, ಜಾತಿಪದ್ಧತಿಯನ್ನು ಮುರಿಯುವದಕ್ಕೆ ಪ್ರಯತ್ನ ಮಾಡುತ್ತಿರುವದಾಗಿ ಹೇಳಿಕೊಳ್ಳುತ್ತಾರೆ; ಅವರು ಜನರಿಗೆ ವಿದ್ಯಾಭ್ಯಾಸ ಮಾಡಿಸುವದಕ್ಕೂ ಅತ್ಯಂತ ಕೀಳುಜಾತಿಯಾದ ಪರಯರಿಗೆ (ಹೊಲೆಯರಿಗೆ) ಸಹಾಯಮಾಡುವದಕ್ಕೂ ಪ್ರಯತ್ನಪಡುತ್ತಿದ್ದಾರೆ. ಆದರೆ, ಅವರು ಹೇಳಿಕೊಳ್ಳುವದು ಎಷ್ಟರಮಟ್ಟಿಗೆ ಸರಿಯೆನ್ನುವದನ್ನು ಪರೀಕ್ಷಿಸೋಣ. ಅತ್ಯಂತ ಕನಿಷ್ಠಜಾತಿಗೆ ಅವರು ಸ್ವಲ್ಪ ಸಹಾಯಮಾಡುತ್ತಿರುವದಕ್ಕಾಗಿ ಇಂಡಿಯಾ ದೇಶದವರು ಅವರಿಗೆ ಕೃತಜ್ಞರಾಗಿದ್ದಾರೆ. ಬೇರೆ ಯಾವ ಸಂದರ್ಭದಲ್ಲಿಯೂ ಓದುವದನ್ನೂ ಬರೆಯುವದನ್ನೂ ಕಲಿಸುವದಕ್ಕೆ ಎಂದಿಗೂ ಸಾಧ್ಯವಿಲ್ಲದಿದ್ದ ಅತ್ಯಂತ ನಿಮ್ನಜಾತಿಯ ಜನರಿಗೆ ಕೆಲವು ಮಟ್ಟಗೆ ವಿದ್ಯಾಭ್ಯಾಸಮಾಡಿಸುತ್ತಿದ್ದಾರೆ. ಇದು ಬಹಳ ಉದಾತ್ತವೂ ಶ್ಲಾಘ್ಯವೂ ಆದ ಕಾರ್ಯವೇ ಸರಿ. ಮಿಷನ್ ಕಾಲೇಜುಗಳೂ ಸ್ಕೂಲುಗಳೂ ಉತ್ತಮಜಾತಿಯ ಜನರಿಗೂ ಸಹ ಪ್ರೌಢವಿದ್ಯೆಯನ್ನೂ ನೀಡುತ್ತಿವೆ. ಭಾರತೀಯರಿಗೆ ವಿದ್ಯಾದಾನಮಾಡುವ ವಿಷಯದಲ್ಲಿ ಈಗಾಗಲೇ ಮಹತ್ತಾದ ಸಹಾಯಮಾಡಿರುವದಕ್ಕಾಗಿ ನಾವು ಅಮೆರಿಕಾದ ಕ್ರೈಸ್ತಮತ ಪ್ರಚಾರಕ ಸಂಸ್ಥೆಗಳಿಗೆ (American Missions) ಬಹಳ ಕೃತಜ್ಞರಾಗಿದ್ದೇವೆ; ಆದರೆ ಈ ವಿಷಯದ ಕತ್ತಲು ಕಡೆಯನ್ನು-ದೋಷವನ್ನು-ನಾವು ಕಡೆಗಾಣುವಂತಿಲ್ಲ. ಇಂಡಿಯಾಕ್ಕೆಹೋಗುವ ಈ ಕ್ರೈಸ್ತ ಮಿಷನರಿಗಳು ಕೊನೆಯಪಕ್ಷ ತಿಂಗಳಿಗೆ 300 ರೂಪಾಯಿ ಸಂಬಳವನ್ನು ತೆಗೆದುಕೊಳ್ಳುತ್ತಾರೆ; ಇದು ಇಂಡಿಯಾದ 300 ಡಾಲರುಗಳು. ಅವರು ನಮ್ಮ ದೇಶದಲ್ಲಿ "ನವಾಬ"ರಂತೆ ರಾಜಭೋಗದಿಂದ ಜೀವಿಸುತ್ತಾರೆ; ಅವರು ಜನರ ಮೇಲೆ (ನವಾಬರಂತೆಯೇ) ದರ್ಬಾರ್ ನಡೆಸುತ್ತಾರೆ, ಅವರು ಹಿಂದೂ ಕುಟುಂಬ ಗಳಲ್ಲಿ ವೈಮನಸ್ಯವನ್ನೂ ವ್ಯಾಜ್ಯವನ್ನೂ ಉಂಟುಮಾಡಿ, ಇಂಡಿಯಾದಲ್ಲಿ ಈಗಾಗಲೇ ಇರುವ ಅಸಂಖ್ಯಾತ ಜಾತಿಗಳಿಗೆ ಹೊಸದೊಂದು ಜಾತಿಯನ್ನೂ ಸೇರಿಸುತ್ತಾರೆ. ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದಂಥ ಇಂಡಿಯಾ ಜನರು ಇತರ ಹಿಂದೂಗಳ ವಿಷಯದಲ್ಲಿ ಸಾಮಾನ್ಯವಾಗಿ ಕಠೋರವಾಗಿ ವರ್ತಿಸುತ್ತಾರೆ, ಅವರು ಹಿಂದೂಗಳಲ್ಲಿ ಸೇರುವದಿಲ್ಲ, ಹಿಂದೂಗಳೂ ಅವರಲ್ಲಿ ಮಿಶ್ರವಾಗುವದಿಲ್ಲ. ಅವರ ಸಂಬಂಧಗಳು ಹದಗೆಡುತ್ತವೆ, ಅವರ ಮಧ್ಯದಲ್ಲಿದ್ದ ಕಂದರವು ಬಹಳ ಅಗಲವಾಗುತ್ತದೆ; ಅವರಲ್ಲಿರುವ ಒಡಕೂ ವಿರೋಧವೂ ಬೆಳೆದು, ದಿನದಿನವೂ

ಹೆಚ್ಚು ಹೆಚ್ಚು ವಿಷಮವಾಗುತ್ತಾ ಹೋಗುತ್ತದೆ. ಬಾಲಕಿಯರು ತಂದೆ ತಾಯಿಗಳಿಂದಲೂ ಹೆಂಡತಿಯರು ಗಂಡಂದಿರಿಂದಲೂ ಬೇರ್ಪಡಿಸಲ್ಪಡುತ್ತಾರೆ. ವಿದ್ಯಾವಂತರಲ್ಲದ ಹಿಂದೂ ಜನಜಂಗುಳಿಯ ಮತ ಸಿದ್ಧಾಂತಗಳನ್ನು ಕಿತ್ತುಹಾಕಿ, ಅವುಗಳಿಗಿಂತಲೂ ಎಷ್ಟೋ ಹೆಚ್ಚು ಕೆಡುಕಾಗಿರುವ ತಮ್ಮ ಚರ್ಚ್ ಮರಾಧಿಕಾರದ ಸಿದ್ಧಾಂತಗಳನ್ನು ಕ್ರೈಸ್ತ ಮಿಷನರಿಗಳು ಆ ಮೂಢಜನರ ಮೇಲೆ ಹೇರುತ್ತಾರೆ. ಕ್ರೈಸ್ತ ದಾನಧರ್ಮಗಳು ತೀವ್ರ ವ್ಯಥೆಯನ್ನುಂಟುಮಾಡುವ ದೋಷಾರೋಪಣೆಯಾಗಿ ಪರಿವರ್ತನೆ ಹೊಂದುತ್ತವೆ; ಅಥವಾ ಕ್ರೈಸ್ತ-ಅಲ್ಲ-ಚರ್ಚ್ ಮಠದ ಮೂಢ ನಂಬಿಕೆ-ಮೂಢಾಚರಣೆಗಳ ನೊಗದ ಕೆಳಗೆ ಕೋಮಲವಾದ ಕೊರಳುಗಳನ್ನು ಇರಿಸುವದಕ್ಕಾಗಿ ಸಣ್ಣ ಮಕ್ಕಳಿಗೆ ಲಂಚಕೊಟ್ಟು ತಂದೆ ತಾಯಿಗಳನ್ನು ಬಿಡಿಸುವದರಲ್ಲಿ ಪರಿಣಾಮ ಹೊಂದುತ್ತವೆ. ಅಂಥಾ ಸಂದರ್ಭಗಳಲ್ಲಿ ಸದುದ್ದೇಶವುಳ್ಳ ನಿಮ್ಮ ಕ್ರೈಸ್ತಮತವು, ಉಗ್ರವಾದ ಮತಾಭಿಮಾನ ಪಕ್ಷಾಭಿಮಾನಗಳ ಹಾವಳಿಗಳಿಂದ ಹಿಂದೂಗಳ ಹೃದಯದಲ್ಲಿ ಬದುಕಿ ಉಳಿದಿರಬಹುದಾದ ಮಾನವೀಯತೆ, ಸಹಾನುಭೂತಿ, ಅಥವಾ ಪ್ರೇಮ—ಇವುಗಳ ಒಂದು ಹನಿಯನ್ನು ಕೂಡ ಹಾರಿಸಿ, ಬತ್ತಿಸಿಬಿಡುವ ಪ್ರವೃತ್ತಿಯುಳ್ಳದ್ದಾಗಿರುತ್ತದೆ. ಇದೇ ಅದರ ಕತ್ತಲ ಮುಖ. ಹೀಗೆ ನೋಡಿದರೆ ಇವೆಲ್ಲಾ ಪರಿಸ್ಥಿತಿಯನ್ನು ಉತ್ತಮಗೊಳಿಸುವದಿಲ್ಲ. ಆದರೆ ಅತ್ಯಂತ ಉದಾತ್ತವಾದ ಉದ್ದೇಶದಿಂದ ಅಮೆರಿಕನ್‌ರು ಇಂಡಿಯಾದಲ್ಲಿ ಲಕ್ಷ ಲಕ್ಷ ಡಾಲರುಗಳನ್ನು ಖರ್ಚುಮಾಡುತ್ತಿರುವದಕ್ಕಾಗಿ ಅವರನ್ನು ಕೃತಜ್ಞತೆಯಿಂದ ಅಭಿನಂದಿಸುತ್ತೇವೆ. ಈ ಪರಿಹಾರ ಯೋಜನೆಯು ಇಟ್ಟಗುರಿಯನ್ನು ಸಾಧಿಸದೆ ಅಲ್ಲಿಯ ಪರಿಸ್ಥಿತಿಯನ್ನು ಇನ್ನಷ್ಟು ಹದಗೆಡಿಸುತ್ತಿದೆ ಎನ್ನುವ ವಸ್ತುಸ್ಥಿತಿಗೆ ರಾಮನು ನಿಮ್ಮ ಲಕ್ಷ್ಯವನ್ನು ಎಳೆಯುತ್ತಾನೆ.

ಅನೇಕ ಕಾರಣಗಳಿಗಾಗಿ ನಾವು ಇಂಗ್ಲಿಷ್ ಸರ್ಕಾರಕ್ಕೆ ಕೃತಜ್ಞರಾಗಿದ್ದೇವೆ. ಇಂಡಿಯಾದಲ್ಲಿ ಮೂಲತಃ ಇದ್ದ ಜಾತಿಗಳನ್ನು ಮುರಿದೊಟ್ಟಲು, ಬ್ರಿಟಿಷ್ ಸರ್ಕಾರವು ಬಹಳ ಪ್ರಯತ್ನಮಾಡಿದೆ; ಅದು ಇಂಡಿಯಾದಲ್ಲಿ ವಿದ್ಯಾಭ್ಯಾಸಕ್ಕೂ ಪ್ರೋತ್ಸಾಹಕೊಟ್ಟಿದೆ; ಬ್ರಿಟಿಷ್ ಸರ್ಕಾರವು ಕಾಲೇಜುಗಳನ್ನೂ ಯೂನಿವರ್ಸಿಟಿಗಳನ್ನೂ ಸಹ ಪ್ರಾರಂಭಿಸಿದೆ. ಅದರ ಆಳಿಕೆಯ ದೆಸೆಯಿಂದಲೇ ಹಿಂದೂಗಳು ತಮ್ಮ ಪ್ರಾಚೀನ ವೇದಶಾಸ್ತ್ರಗಳನ್ನು ಕ್ರಮವಾಗಿ ಅಭ್ಯಾಸಮಾಡಲು ಅವಕಾಶವಾಯಿತು. ಇಷ್ಟು ಅದರ ಬೆಳಕಿನ ಕಡೆಯ ಗುಣಾಂಶಗಳು. ಈಗ ಅದರ ಕತ್ತಲ ಕಡೆಗೆ ತಿರುಗೋಣ. ಬ್ರಿಟಿಷ್ ಗೌರ್ನಮೆಂಟ್ ಇಂಡಿಯಾದೇಶದಲ್ಲಿರುವ ಎಲ್ಲಾ ಸಂಪತ್ತುಗಳನ್ನೂ ಹೀರಿಹಾಕಿದೆ. ಅದು ಭಾರತೀಯರಿಗೆ ಮೇಲು ಮೇಲಿನ ಹರಕು

ಮುರುಕು ವಿದ್ಯೆಯನ್ನು ಕಲಿಸಿದೆ; ಆದರೆ ಅದು ಇಂಡಿಯಾ ದೇಶವನ್ನು ಎಲ್ಲಾ ರೀತಿಯಿಂದಲೂ ಬಡತನಕ್ಕೆ ತಂದಿದೆ. ಮತ್ತು ಅದು ತನ್ನ ಆಡಳಿತ ನೀತಿಯನ್ನು ಅತ್ಯಲ್ಪ ಕಾಲದಲ್ಲಿಯೇ ಬದಲಾಯಿಸದಿದ್ದರೆ ಅಥವಾ ತಡೆಗಟ್ಟದಿದ್ದರೆ, ಹಿಂದೂಗಳನ್ನು ಬಡತನದ ಭೂತವು ನುಂಗಿಹಾಕುತ್ತದೆ; ಮತ್ತು ಭೂಲೋಕ ದಿಂದಲೇ ಅವರು ತೊಡೆದು ಹಾಕಲ್ಪಡುತ್ತಾರೆ. ದೇಶೀಯ ರಾಜ-ಮಹಾರಾಜರು ಗಳೂ ಶ್ರೀಮಂತರೂ ತಮ್ಮ ಅಮೂಲ್ಯವಾದ ರತ್ನಗಳನ್ನೂ ರತ್ನಾಭರಣಗಳನ್ನೂ ಶಕ್ತಿಗಳನ್ನೂ ಕಳೆದುಕೊಂಡು, ರಟರಟನೆ ಸದ್ದುಮಾಡುವ ಪೊಳ್ಳು ಬಿರುದುಗಳಿಂದಲೂ ನಿರರ್ಥಕವಾದ ಖಾಲಿ ಹೆಸರುಗಳಿಂದಲೂ ಮೆರೆಯುವ ಕೇವಲ ವಿಷಯಲಂಪಟರೂ ಅಂತಃಪುರಲಾಲಸಿಗಳೂ ಅದ ಉತ್ತರ ಕುಮಾರರಾಗಿದ್ದಾರೆ, ಮತ್ತೇನೆಂದರೆ, ಇಂಡಿಯಾದಲ್ಲಿ ನೀಡುತ್ತಿರುವ ವಿದ್ಯಾಭ್ಯಾಸವೆಂದರೆ: ಈ ಕಾಲದಲ್ಲಿ, ಭಾರತೀಯರ ಬೌದ್ಧಿಕ ಉನ್ನತಿಯನ್ನು ಕಂಡು ಬ್ರಿಟಿಷ್ ಸರ್ಕಾರವು ಅಸೂಯೆಪಡುತ್ತಿದೆ. ರಾಮನು ಇಂಡಿಯಾದಲ್ಲಿರುವಾಗ, ಜನಸಾಮಾನ್ಯರಿಗೆ ಕೊಡುತ್ತಿದ್ದ ಎಲ್ಲಾ ಪ್ರೌಢ ವಿದ್ಯೆಯನ್ನೂ ನಿಲ್ಲಿಸುವದಕ್ಕೆ ಬೇಕಾದ ಕ್ರಮಗಳನ್ನು ಕೈಗೊಳ್ಳುತ್ತಿದ್ದರು. ಈಗ, ಈ ವಿಶ್ವವಿದ್ಯಾನಿಲಯಗಳಲ್ಲಿ ಏನನ್ನು ಕಲಿಸುತ್ತಿದ್ದಾರೆ? ಸತ್ತ ಭಾಷೆಗಳು, ಊಹಾಪೋಹಾತ್ಮಕ ತತ್ತ್ವಶಾಸ್ತ್ರ, ಗಣಿತಶಾಸ್ತ್ರ, ಗತಕಾಲದ ಚರಿತ್ರೆ, ಅನ್ವಯವಿಲ್ಲದ, ಪ್ರಯೋಗ ಮಾಡದಿರುವ ರಸಾಯನ ಶಾಸ್ತ್ರ ಮತ್ತು ಇದೇ ಬಗೆಯ ವ್ಯಾಸಂಗಗಳು. ಯಾವ ಯುನಿವರ್ಸಿಟಿಯಲ್ಲಿಯೂ ಕಾಲೇಜಿನಲ್ಲಿಯೂ ಇಂಗ್ಲಿಷ್ ಭಾಷೆಯ ಹೊರತು ಬೇರೆ ಯಾವ ಜೀವಂತವೂ ಉಪಯುಕ್ತವೂ ಆದ ಭಾಷೆಯನ್ನೂ ಹೇಳಿಕೊಡುತ್ತಿಲ್ಲ. ಇಂಗ್ಲಿಷ್ ಆಫೀಸರುಗಳ ಹತ್ತಿರ ಜನರು ಕೆಲಸಮಾಡ ಬೇಕಾಗಿರುವದರಿಂದ ಅವರಿಗೆ ಇಗ್ಲಿಷ್ ಭಾಷೆಯನ್ನು ಕಲಿಸುತ್ತಿದ್ದಾರೆ. ಜನರ ಭಾಷೆಯನ್ನು ಕಲಿಯುವ ಶ್ರಮವನ್ನು ವಹಿಸುವದು ಇಂಗ್ಲಿಷ್‌ರಿಗೆ ಬೇಕಾಗಿಲ್ಲ. ತಮ್ಮ ಸೇವೆಯನ್ನು ಮಾಡುವದಕ್ಕಾಗಿ ಜನರು ತಮ್ಮ ಭಾಷೆಯನ್ನು ಕಲಿಯಬೇಕೆಂದು ಅವರ ಉಪಾಯ. ಗಣಿತ ಶಾಸ್ತ್ರವನ್ನು ಕಲಿಸುತ್ತಾರೆ; ಆದರೆ ಇಂಡಿಯಾದ ಯುನಿವರ್ಸಿಟಿಗಳಲ್ಲಿರುವ ಗಣಿತ ಶಾಸ್ತ್ರದ ಕೊನೆಯ ಮಟ್ಟವು ಅಮೆರಿಕಾದಲ್ಲಿರುವದ ಕ್ಕಿಂತಲೂ ಹೆಚ್ಚಿನದಾಗಿದೆ. ಅವರಿಗೆ ಅಧ್ಯಾತ್ಮ ಶಾಸ್ತ್ರವನ್ನೂ ವಿಚಾರಪರ ತತ್ತ್ವ ಶಾಸ್ತ್ರವನ್ನೂ ಮತ್ತು ಇತರ ಕೇವಲ ಭಾವನಾತ್ಮಕ ವಿಜ್ಞಾನ ಶಾಸ್ತ್ರಗಳನ್ನೂ ಕಲಿಸುತ್ತಾರೆ; ಆದರೆ ಆರ್ಟ್ಸ್ ಕಾಲೇಜ್ ಎಂದು ಹೆಸರಿಟ್ಟುಕೊಂಡಿರುವ ಕಾಲೇಜು ಗಳಲ್ಲಿ ಕೂಡ ಯಾವ ಕಾರ್ಯೋಪಯುಕ್ತ ವಿಜ್ಞಾನವನ್ನಾಗಲೀ ಪ್ರಯೋಜನ ಕರವಾದ ಕಲೆಯನ್ನಾಗಲಿ ಕುಶಲ ಕಲೆಯನ್ನಾಗಲೀ ಕಲಿಸುವದಿಲ್ಲ. ಉಪಯೋಗ್ಯವಾದ ರಸಾಯನ ಶಾಸ್ತ್ರವನ್ನಾಗಲಿ (Applied chemistry) ನೆಯ್ಗೆಯನ್ನಾಗಲಿ,

ಗಣಿಯ ವಿಜ್ಞಾನವನ್ನಾಗಲಿ (Mining) ವಿಶ್ವವಿದ್ಯಾನಿಲಯಗಳಲ್ಲಿ ಕಲಿಸುವದಿಲ್ಲ. ವರ್ಣಕರ್ಮವನ್ನು ದರ್ಣ ಚಿತ್ರಕಲೆಯನ್ನು, ಕುಂಬಾರ ಕಸುಬನ್ನು ಯಂತ್ರಶಿಲ್ಪವನ್ನು (Mechanical Engineering) ಕಲಿಸುವದಿಲ್ಲ. ಜೀವನದಲ್ಲಿ ಉಪಯೋಗ ವಾಗುವ ಈ ಕಲೆಗಳನ್ನೇ ಹೇಳಿಕೊಡದಮೇಲೆ, ಶಸ್ತ್ರಾಸ್ತ್ರ ಪ್ರಯೋಗದ ಯುದ್ಧ ವಿದ್ಯೆಯ ವಿಷಯವನ್ನೇನು ಹೇಳುವದು ! ಮನೆಗಳಲ್ಲಿ ಯಾವ ಆಯುಧವನ್ನು ಇಟ್ಟುಕೊಳ್ಳುವದಕ್ಕೂ ಜನರಿಗೆ ಅವಕಾಶಕೊಟ್ಟಿಲ್ಲ ; ತನ್ನ ಮನೆಯಲ್ಲಿ ಯಾವನೂ ಒಂದು ದೊಡ್ಡ ಚಾಕನ್ನು ಚೂರಿಯನ್ನು ಕತ್ತಿಯನ್ನು ಇಟ್ಟುಕೊಳ್ಳುವಂತಿಲ್ಲ. ದೊಡ್ಡ ಚಾಕನ್ನು ಇಟ್ಟುಕೊಂಡವನನ್ನು ಶಿಕ್ಷಿಸಿ ಜೈಲಿನಲ್ಲಿ ಹಾಕುತ್ತಾರೆ ; ಸೈನಿಕ ಕವಾಯಿತಿಗೂ ಆಯುಧ ವಿದ್ಯೆಗೂ ಜನರಿಗೆ ಅಧಿಕಾರವಿಲ್ಲ. ಇದರಿಂದ ಎಂಥ ಸತ್ತ್ವವೂ ಸಾರವೂ ಇಲ್ಲದ ವಿದ್ಯೆಯನ್ನು, ಇಂಡಿಯನ್ ಕಾಲೇಜುಗಳಲ್ಲಿ, ಮಿತಿ ಮೀರಿದ ದುಬಾರಿಯ ಪಾರಸಂಭಾವನೆಯನ್ನು (Exorbitant tuition fees) ಕೊಡವುದಕ್ಕೆ ಹಣವನ್ನು ಉಳಿಸಬಲ್ಲ ಧನಿಕರಾದ ಹಿಂದೂ ಅಥವಾ ಮಹಮ್ಮದೀಯ ವಿದ್ಯಾರ್ಥಿಗಳು ಪಡೆಯುತ್ತಿದ್ದಾರೆ ಎನ್ನುವದನ್ನು ನೀವು ತಿಳಿಯಬಹುದು.

ಇಂಡಿಯಾದಲ್ಲಿ ಸುಧಾರಣೆಯ ಉಜ್ಜ್ವಲ ಕಾರ್ಯವನ್ನು ಮಾಡುತ್ತಿರುವ, ಹೊಸದಾಗಿ ಪ್ರಾರಂಭವಾಗಿರುವ, ಉದಾತ್ತ ಧ್ಯೇಯಗಳುಳ್ಳ ಕೆಲವು ಪಂಧಗಳಿವೆ ; ಆದರೆ ಅವರಲ್ಲಿ ಆಳವಾಗಿ ಬೇರುಬಿಟ್ಟುಕೊಂಡಿರುವ ವೀರಪೂಜಾ ಮನೋಭಾವವೂ ಶಾಸ್ತ್ರ-ಗುರು-ನಾಯಕರ ಅಧಿಕಾರಕ್ಕೆ ತಲೆಬಾಗುವ ವಿಧೇಯತೆಯೂ ಅಥವಾ ಶರಣಾಗತಿಯೂ ತಮ್ಮ ನಾಯಕರ ಹೆಸರಿನಲ್ಲಿ ಬಾರದ ಎಲ್ಲವನ್ನೂ ಹೇವರಿಸು ವಂತೆಯೂ ಧ್ವೇಷಿಸುವಂತೆಯೂ ಮಾಡುತ್ತದೆ. ಪ್ರತಿಯೊಂದು ಪಂಥವೂ ಸಂಸ್ಥೆಯೂ ಚಳವಳಿಯೂ ತನ್ನ ಸುತ್ತಲೂ ಹೆಸರುಗಳ ಮತ್ತು ವ್ಯಕ್ತಿಗಳ ಬೇಲಿಗಳನ್ನು ಕಟ್ಟಿ ಕೊಳ್ಳುತ್ತದೆ. ಸತ್ತುಹೋಗಿರುವ ತಮ್ಮ ನಾಯಕರ ಕೃತಿಗಳನ್ನೂ ವಚನಗಳನ್ನೂ ಮುಂದಿನ ಪ್ರಗತಿಗೆ ಪ್ರಾರಂಭದ ಬಿಂದುಗಳನ್ನಾಗಿ ಮಾಡಿ ಕೊಳ್ಳುವದಕ್ಕೆ ಬದಲು, ಅವರು ಅವುಗಳನ್ನು ಗಡಿಯ ಗೆರೆಗಳನ್ನಾಗಿ ಅಥವಾ ಮೇಲ್ಹಾಯ್ದು ಹೋಗಲಾರದ ಗಡಿದುರ್ಗಗಳನ್ನಾಗಿ, ಅಡ್ಡ ಕಟ್ಟುಗಳನ್ನಾಗಿ ಮಾಡಿಕೊಳ್ಳುತ್ತಾರೆ. ಹೀಗೆ ಇಂಡಿಯಾದಲ್ಲಿ ಹುಟ್ಟಿಕೊಳ್ಳುವ ದೇಶೀಯ ಸುಧಾರಣಾ ಸಂಸ್ಥೆಗಳು ಮುಂದುವರಿಯದೆ ನಿಂತಲ್ಲಿ ನಿಂತು ನಾರುವದಕ್ಕೆ ತೊಡಗುತ್ತವೆ.

ಈಗ, ಇದುವರೆಗೆ ಇಂಡಿಯಾ ದೇಶದಲ್ಲಿರುವ ವ್ಯಾಧಿಯ ವಿಷಯವನ್ನೂ

ಮತ್ತು ಯಾವ ಯಾವ ಕ್ರಮಗಳಿಂದ ಅದನ್ನು ಪರಿಹರಿಸಬಹುದೆಂಬ ವಿಚಾರ ಗಳನ್ನೂ ನಿಮಗೆ ತಿಳಿಸಿರುವದರಿಂದ, ಈಗ ನೀವು ಇಂಡಿಯಾದೇಶದ ಕ್ಷೇಮಾಭ್ಯುದಯ ಗಳನ್ನು ಪ್ರೇಮದಿಂದ ಇಚ್ಛಿಸಿ, ಭಾವಿಸಿರಿ, ಭಾವಿಸಿರಿ ಎಂದು ರಾಮನು ನಿಮ್ಮನ್ನು ಕೇಳಿ ಕೊಳ್ಳುತ್ತಾನೆ. ಮೊದಲು ಮುಖ್ಯವಾಗಿ ಬೇಕಾದುದು ಇದು. ಭಾರತದ ಹಿತಕ್ಕಾಗಿ ನೀವು ಪ್ರೇಮಭಾವನೆಯುಳ್ಳವರಾಗಿ ತೀವ್ರಶ್ರದ್ಧೆಯಿಂದ ಪ್ರಯತ್ನಮಾಡುವದಾದರೆ, ಏನನ್ನಾದರೂ ಸಾಧಿಸಬಹುದು. "ಇಚ್ಛೆಯಿದ್ದಲ್ಲಿ ಮಾರ್ಗವಿದ್ದೇ ಇದೆ." ಭಾರತಕ್ಕಾಗಿ ಏನನ್ನಾದರೂ ಮಾಡಬೇಕು, ಎಂಬ ಇಚ್ಛೆಯೊಂದು ನಿಮಗಿರಲಿ. ಭಾರತಕ್ಕಾಗಿ ಅದರ ಮೂಲಕ ಮಾನವ ಜನಾಂಗದ ಕಲ್ಯಾಣಕ್ಕಾಗಿ ಏನನ್ನಾದರೂ ಮಾಡುವದಕ್ಕೆ ನಿಮಗೆ ಇಚ್ಛೆಯಿದೆಯೆ ? ಪೂರ್ಣ ಹೃದಯದಿಂದ ಭಾರತವನ್ನು ನೀವು ಪ್ರೀತಿಸುತ್ತೀರಾ ? ಕೆಳಗೆ ತುಳಿಯಲ್ಪಟ್ಟಿರುವ ಒಂದು ಜನಾಂಗದ ವಿಮೋಚನೆಗಾಗಿ ನಿಮ್ಮ ಪ್ರಾಣವನ್ನು ಬಲಿಗೊಡುವದಕ್ಕೆ ನಿಮಗೆ ಇಷ್ಟವಿದೆಯೆ ? ಭಾರತದ ಹಿತಕ್ಕಾಗಿ ನಿಮ್ಮ ಕಾಲವನ್ನೂ ಜೀವನವನ್ನೂ ವಿನಿಯೋಗಿಸುವದಕ್ಕೆ ನಿಮಗೆ ಇಚ್ಛೆ ಇದೆಯೆ? ಭಾರತದ ಮೂವತ್ತುಕೋಟಿ ಜನರು, ಜಗತ್ತಿನ ಒಟ್ಟು ಜನಸಂಖ್ಯೆಯಲ್ಲಿ ಬಹಳ ದೊಡ್ಡಭಾಗವೇ ಆಗುತ್ತಾರೆ. ಮುನ್ನೂರು ದಶಲಕ್ಷ ಜನಸಂಖ್ಯೆ ! ಮೂವತ್ತು ಕೋಟಿ ಜನರು !* ಅವರಿಗೆ ನಾವು ಶಿಕ್ಷಣಕೊಟ್ಟು, ವಿದ್ಯಾಭ್ಯಾಸಮಾಡಿಸಿ, ಅವರ ಶಕ್ತಿಗಳನ್ನು ಉತ್ತಮವಾದ ಲೋಕಹಿತ ಕಾರ್ಯಗಳಿಗಾಗಿ ಉಪಯೋಗಿಸಿಕೊಳ್ಳ ಬಹುದು. ಈ ಮೂವತ್ತು ಕೋಟಿ ಜನರು ನಿಮ್ಮ ಜೊತೆಗೂಡಿ ಕೆಲಸಮಾಡುವದಕ್ಕೆ ತೊಡಗಿದರೆ, ನಿಮ್ಮ ರೀತಿಯಲ್ಲಿಯೇ ಅವರೂ ಭಾವಿಸುವದಕ್ಕೂ ಆಲೋಚಿಸುವದಕ್ಕೂ ತೊಡಗಿದರೆ, ಮತ್ತು ನೀವು ಚಿಂತಿಸುವ ವಿಷಯಗಳ ಮೇಲೆಯೇ ಅವರೂ ತಮ್ಮ ಮಿದುಳುಗಳನ್ನು ಉಪಯೋಗಿಸತೊಡಗಿದರೆ, ನಿಮಗೂ ಸಹಾಯವಾಗುವದಿಲ್ಲವೆ ? ಭಾರತೀಯರ ಶಕ್ತಿಗಳೂ ಮಿದುಳುಗಳೂ ಕ್ಷುದ್ರವಾದ ತಿಕ್ಕಾಟಗಳಲ್ಲಿಯೂ ಚಿಂತೆಗಳಲ್ಲಿಯೂ ವ್ಯರ್ಥವಾಗುತ್ತಿರುವದನ್ನು ತಪ್ಪಿಸಿ, ಅವುಗಳನ್ನು ಉನ್ನತ ವಿಚಾರಗಳಲ್ಲಿಯೂ ಉದಾತ್ತ ಭಾವನೆಗಳಲ್ಲಿಯೂ ನಿಯೋಜಿಸಿದರೆ, ಭಾರತದ ಅಪಾರವಾದ ಜನಸಂಖ್ಯೆಯು, ಅಮೆರಿಕಾಕ್ಕಿಂತಲೂ ಹೆಚ್ಚು ಫ್ರ್ಯಾಂಕ್ಲಿನ್‌ರನ್ನೂ (Franklins) ಮತ್ತು ಎಡಿಸನ್‌ರನ್ನೂ (Edisons) ಉತ್ಪತ್ತಿಮಾಡುತ್ತದೆ. ಹೀಗೆ ಇಂಡಿಯಾ ದೇಶದ ಶಕ್ತಿಗಳನ್ನು ಉಪಯೋಗಿಸಿಕೊಳ್ಳುವದರಿಂದ, ಜಗತ್ತು ಹೆಚ್ಚು ಸಂಪದ್ಭರಿತವಾಗುವದಿಲ್ಲವೆ ? ಜಗತ್ತನ್ನು ಹೆಚ್ಚು ಶ್ರೀಮಂತಮಾಡುವ ದಕ್ಕಾಗಿಯೂ ನಿಮ್ಮ ಮಾನವ ಬಂಧುಗಳಿಗೆ ಸಹಾಯಮಾಡುವದಕ್ಕಾಗಿಯೂ

---

*ಕ್ರಿ. ಶ. 1903ರಲ್ಲಿ ಮೂವತ್ತು ಕೋಟಿಯೇ ಹೆಚ್ಚು ಅದ್ಭುತವೆನಿಸಿತು ! ಈಗ 1968ರಲ್ಲಿ ಐವತ್ತು ಕೋಟಿಗೆ ಸಮೀಪವಿರಬೇಕು !!

ನಿಮಗೆ ನೀವೇ ಸಹಾಯಮಾಡಿಕೊಳ್ಳುವುದಕ್ಕಾಗಿಯೂ ಭಾರತದ ಹಿತಕ್ಕಾಗಿ ಸಹಾನುಭೂತಿಯುಳ್ಳವರಾಗಿ, ನಿಮ್ಮ ಮಟ್ಟದಲ್ಲಿ ನಿಮ್ಮ ಜೊತೆಗೇ ಅವರನ್ನೂ ತಂದುಕೊಳ್ಳುವದಕ್ಕೆ ಪ್ರಯತ್ನಮಾಡಿ. ಇದನ್ನೇ ತಪ್ಪದೆ, ಖಂಡಿತ ಮಾಡಬೇಕು.

## Suggestions for Elevating India

## ಭಾರತದ ಉತ್ಕರ್ಷವನ್ನು ಸಾಧಿಸುವದಕ್ಕೆ ಸೂಚನೆಗಳು

ಈಗ, ಭಾರತದ ಉನ್ನತಿಯನ್ನು ಹೇಗೆ ಸಾಧಿಸಬೇಕು ? ರಾಮನು ಎರಡು ಸೂಚನೆಗಳನ್ನು ಮಾಡುತ್ತಾನೆ. ಒಂದನೆಯದು, ಅತ್ಯಂತ ಶ್ರದ್ಧಾವಂತರೂ ಸತ್ಯಕ್ಕಾಗಿ ಪ್ರಾಣಾರ್ಪಣ ಮಾಡತಕ್ಕವರೂ ಆದ ಅಮೆರಿಕನ್‌ರನ್ನು ಇಂಡಿಯಾ ದೇಶಕ್ಕೆ ಕಳಿಸಬೇಕು. ಅಮೆರಿಕಾದಲ್ಲಿ ಕೆಲಸಕ್ಕೆ ಬಾರದ್ದೆಂದೂ ಕೈಬಿಟ್ಟ ಕಳಪೆಯನ್ನು ನಮಗೆ ಕಳಿಸಬೇಡಿ. ಅಮೆರಿಕಾದಲ್ಲಿ ನಿರುದ್ಯೋಗಿಗಳಾಗಿರುವವರನ್ನು ಕಳಿಸಿ, ಇಂಡಿಯಾದಲ್ಲಿ ಮೇಲಕ್ಕೆತ್ತಿ ಹಾರಿಸಬೇಡಿ. ನಿಮ್ಮ ಸಮಾಜದ ಕೆನೆಯನ್ನು, ಅಮೆರಿಕಾದ ಸತ್ತ್ವಸಂಪನ್ನವಾದ ಕೆನೆಯನ್ನು ಇಂಡಿಯಾದೇಶಕ್ಕೆ ಕಳಿಸಿ ; ಅಲ್ಲಿ ಅತ್ಯವಶ್ಯವಾಗಿರುವದು ಅದು. ಕೃತಜ್ಞತೆಯನ್ನು ಸಹ ಬಯಸದೆ, ಅತ್ಯಂತ ಕನಿಷ್ಠಜಾತಿಯ ಹೊಲೆಯರಲ್ಲಿ ಹೋಗಿ ಕೆಲಸಮಾಡತಕ್ಕ ಜನರು ನಮಗೆ ಬೇಕು. ಈ ಶೂದ್ರರು ನಿಮಗೆ ಯಾವ ಸಂಭಾವನೆಯನ್ನೂ ಕೊಡಲಾರರು ; ನಿಮ್ಮ ಶ್ರಮಕ್ಕಾಗಿ ತಮ್ಮ ಕೃತಜ್ಞತೆಯನ್ನು ತೋರಿಸುವದು ಸಹ ಅವರಿಗೆ ತಿಳಿಯದು ; ಏಕೆಂದರೆ, ಈ ಜನರು ಬಹಳ ಬಡವರು, ಅಕ್ಷರಜ್ಞಾನವಿಲ್ಲದವರು, ಅಜ್ಞರು, ನೀವು ಅವರಿಗೆ ಮಾಡುವ ಉಪಕಾರಕ್ಕೆ ಬಹುಮಾನವಾಗಿ ಅವರು ಅನ್ನವಸ್ತ್ರವನ್ನು ಸಹ ನಿಮಗೆ ಕೊಡಲಾರರು. ಏಕೆ ? ಏಕೆಂದರೆ ಅವರಿಗೇ ಊಟವಿಲ್ಲ, ಬಟ್ಟೆಯಿಲ್ಲ. ತಾವು ಉಪವಾಸವಿದ್ದಾದರೂ ಈ ಬಡಜನರಿಗೆ ಸಹಾಯಮಾಡಬಲ್ಲವರೂ ಅವರ ಮಧ್ಯದಲ್ಲಿದ್ದು ಕೆಲಸಮಾಡಬಲ್ಲವರೂ ಆದ ಜನರು ನಮಗೆ ಬೇಕು. ಅಮೆರಿಕಾದ ಜನರು ಈ ಕೆಲಸಮಾಡಲಾರರೆ ? ಉದಾತ್ತವಾದ ಅಮೆರಿಕಾದಿಂದಲೂ ತ್ಯಾಗಶೀಲವಾದ ಅಮೆರಿಕಾದಿಂದಲೂ ಅಂಥವರು ಬರಬೇಕು. ಈ ಕಾರ್ಯವನ್ನು ಕೈಗೊಳ್ಳತಕ್ಕ ಉತ್ಸಾಹಿಗಳೂ ಸಂತೋಷಚಿತ್ತರೂ ಆದ ಜನರ ಒಳ್ಳೆಯ ತಂಡವನ್ನು ರಾಮನು ನಿರೀಕ್ಷಿಸುತ್ತಾನೆ. ಯಾರು ಇಂಡಿಯಾಕ್ಕೆ ಹೋಗಿ, ಭವ್ಯವಾದ ಬಂಗಲೆಗಳಲ್ಲಿ ವಾಸಮಾಡುತ್ತಾ ಸಾರೋಟು ಗಾಡಿಗಳಲ್ಲಿಯೂ ಕಾರುಗಳಲ್ಲಿಯೂ

ಓಲಾಡುತ್ತಿದ್ದು, ಪ್ರಾಪಂಚಿಕ ಭೋಗ ಭಾಗ್ಯಗಳಲ್ಲಿಯೂ ಗೌರವ-ಕೀರ್ತಿಗಳಲ್ಲಿಯೂ ಉರುಳಾಡುತ್ತಾ ಜನರ ಮೇಲೆ ಪ್ರಭುತ್ವ ನಡೆಸುವ ಕ್ರೈಸ್ತಧರ್ಮಪ್ರಚಾರಕರಾದ ಮಿಷನರಿಗಳಂಥಾ ಜನರು ರಾಮನಿಗೆ ಬೇಕಾಗಿಲ್ಲ. ಇಂಥಾ ಜನರು ಭಾರತದ ವಿಮೋಚನೆಯನ್ನಾಗಲೀ ಉದ್ಧಾರವನ್ನಾಗಲೀ ಸಾಧಿಸಲಾರರು. ಯಾರು ಪರೆಯರ ಜೊತೆಯಲ್ಲಿ ಉಪವಾಸವಿರುವದಕ್ಕೆ ತೃಪ್ತರಾಗಿದ್ದಾರೋ ಯಾರು ಅವರೊಡನೆ ಅವರ ಒಣಕಲ ರೊಟ್ಟಿಯ ಚೂರುಗಳನ್ನು ಕಡಿಯುವದಕ್ಕೆ ಅಥವಾ ಅರ್ಧಬೆಂದ ರೊಟ್ಟಿಯನ್ನು ತಿನ್ನುವದಕ್ಕೆ ಸಂತೋಷಪಡುತ್ತಾರೋ, ಯಾರು ಅವರೊಡನೆ ಹರಕಲು ಬಟ್ಟೆಗಳನ್ನು ಹಾಕಿಕೊಂಡು, ಆ ಹೊಲೆಯರೊಡನೆ ನೆಲದ ಮೇಲೆ ಮಲಗುವದಕ್ಕೂ ಇಷ್ಟಪಟ್ಟು ಸಿದ್ಧರಾಗಿರುತ್ತಾರೋ ಅಂಥಾ ತ್ಯಾಗಶೀಲರಾದ, ಸತ್ಯ-ಧರ್ಮಗಳಿಗಾಗಿ ತಮ್ಮ ಜೀವನವನ್ನೇ ಅರ್ಪಣಮಾಡಬಲ್ಲ, ನಿತ್ಯೋತ್ಸಾಹಿಗಳಾದ ನಿಜವಾದ ಕಾರ್ಯಕರ್ತರು ನಮಗೆ ಬೇಕು. ಯಾರು ತಮ್ಮ ವೈಷಯಿಕ ಸುಖಸೌಕರ್ಯಗಳನ್ನು ತೊರೆಯಬಲ್ಲರೋ ಮತ್ತು ಸ್ವಾರ್ಥಪರ ಸೌಖ್ಯಗಳನ್ನು ಪರಿತ್ಯಜಿಸುವದಕ್ಕೆ ಯಾರು ಸಂತೋಷಪಡುವರೋ ಆ ಬಗೆಯ ಜನರು ನಮಗೆ ಬೇಕು. ಈಗ ನೀವು, "ಓ, ಇದು ಬಹಳ ಕಠಿಣವಾದ ಕಾರ್ಯ; ಇದನ್ನು ನಡೆಸುವಗು, ಅತ್ಯಂತ ಕಷ್ಟವಾದುದು; ಅಥವಾ ಅಸಾಧ್ಯವಾದುದು." ಎಂದು ಹೇಳಬಹುದು. ದಯವಿಟ್ಟು ಹಾಗೆ ಹೇಳಬೇಡಿ; ಅದು ನಿಷ್ಫಲವಾದ-ಅದರೆ ಅಗ್ನಿಪರೀಕ್ಷೆಯ-ಅತ್ಯಂತ ಕಷ್ಟಕರವಾದ ಕಾರ್ಯವೆಂದು ತಿಳಿಯಬೇಡಿ, ಅದಕ್ಕೆ ಸಾಕಷ್ಟು ನಿಶ್ಚಿತವಾದ ಪ್ರತಿಫಲವಿದೆ. ನಾವು ಒಬ್ಬ ಮನುಷ್ಯನನ್ನು ಮೇಲೆತ್ತುವದಕ್ಕೆ ಪ್ರಯತ್ನಪಟ್ಟರೆ, ಆ ಮನುಷ್ಯನು ಉನ್ನತಿಯನ್ನು ಪಡೆಯಬಹುದು ಅಥವಾ ಪಡೆಯದಿರಬಹುದು, ಆದರೆ ನಾವಂತೂ ನಿಶ್ಚಿತವಾಗಿಯೂ ಉತ್ಕರ್ಷವನ್ನು ಹೊಂದುತ್ತೇವೆ, ಇದು ಸ್ವಂತ ಅನುಭವ. "ಕ್ರಿಯೆ ಮತ್ತು ಪ್ರತಿಕ್ರಿಯೆ-ಇವುಗಳು ಒಂದಕ್ಕೊಂದು-ಸರಿಸಮವೂ ವಿರುದ್ಧವೂ ಆಗಿವೆ". ಇತರರ ಉಪಕಾರಕ್ಕಾಗಿ ಎಂಬ ಭಾವನೆಯಿಂದ ಒಂದು ಕಾರ್ಯವನ್ನು ಕೈಗೊಳ್ಳುವದು ಜನರ ಭ್ರಮೆ, ತಪ್ಪು ತಿಳಿವಳಿಕೆ ಮತ್ತು ಹುಚ್ಚು ಕಲ್ಪನೆ. ಓ, ಅಮೆರಿಕನ್‌ರೆ, ರಾಮನ ಉಪನ್ಯಾಸಗಳಿಂದ ನೀವು ಪ್ರಯೋಜನಪಡೆದಿರಬಹುದು ಅಥವಾ ಪಡೆಯದಿರಬಹುದು; ಆದರೆ ಅವುಗಳಿಂದ ರಾಮನಿಗೇನೋ ಖಂಡಿತವಾಗಿಯೂ ಲಾಭವಾಗಿದೆ; ಅದು ಸಾಕಷ್ಟು ಸಂಭಾವನೆಯಲ್ಲವೆ? ಪ್ರತಿಯೊಬ್ಬರ ಅನುಭವವು ಇದನ್ನು ತೋರಿಸುತ್ತದೆ. ಆದ್ದರಿಂದ ಈ ಕಾರ್ಯವನ್ನು ಪ್ರತಿಫಲದಲ್ಲಿ ದೃಷ್ಟಿಯಿಲ್ಲದೆ ತೆಗೆದುಕೊಳ್ಳಿ. ನಿಮ್ಮ ಕಾರ್ಯವು ತನಗೆ ತಾನೇ ಪ್ರತಿಫಲವಾಗುತ್ತದೆ. ನಿಸ್ವಾರ್ಥವಾದ ಕಾರ್ಯಕ್ಕೆ ದೇವರೇ ಋಣಿಯಾಗುತ್ತಾನೆ; ಆದ್ದರಿಂದ ಬಡ್ಡಿಯ ಸಹಿತ ಪ್ರತಿಫಲ ಕೊಟ್ಟು

ದೇವರು ಆ ಸಾಲವನ್ನು ತೀರಿಸುತ್ತಾನೆ ; ಈ ಅಬಾಧಿತ ನಿಯಮಕ್ಕೆ ಅವನು ಸ್ವೇಚ್ಛೆಯಾಗಿಯೇ ಬದ್ಧನಾಗಿದ್ದಾನೆ, ಅಮೆರಿಕನ್‌ರೆ, ಭಾರತಕ್ಕೆ ಹೋಗಿ ಆತ್ಮ ಜ್ಞಾನವನ್ನೂ ಸ್ವಾವಲಂಬನೆಯನ್ನೂ ಆತ್ಮಗೌರವವನ್ನೂ ಅಥವಾ ವೇದಾಂತವನ್ನು ಅವರಿಗೆ ಉಪದೇಶಮಾಡಿ, ಪ್ರಸಾರಮಾಡಿ. ಹಿಂದೊಂದು ದಿನ ನೀವು, "Secret of success" "ಯಶಸ್ಸಿನ ರಹಸ್ಯ, ಗೆಲವಿನ ಗುಟ್ಟು, ಸಿದ್ಧಿ-ಸಾಫಲ್ಯಗಳ ಮರ್ಮ" ಎಂಬ ರಾಮನ ಉಪನ್ಯಾಸವನ್ನು ಕೇಳಿದಿರಿ ; ಈ ಜಗತ್ತಿನಲ್ಲಿ ಪ್ರಯೋಗ ಶೀಲ ವೇದಾಂತ ಒಂದೇ ಯಶಸ್ಸಿನ ಸಾಧನ. ಅದೇ ಯಶಸ್ಸಿನ ರಹಸ್ಯ, ಎಂದು ಆ ವಿಚಾರಸರಣಿಯಲ್ಲಿ ಸಿದ್ಧಮಾಡಿ ತೋರಿಸಿದೆ, ಎಲ್ಲಾ ವಿಜಯದ, ಕೃತಕೃತ್ಯತೆಯ ರಹಸ್ಯವೇ ಅದು, ಅದೊಂದೇ ಗುರುಕೀಲಿ. ಆ ಕಾರ್ಯೋದ್ಯುಕ್ತ ವೇದಾಂತವನ್ನು ನೀವು ಮೊದಲು ಚೆನ್ನಾಗಿ ಅರಿತು, ಅದನ್ನು ನಿಮ್ಮ ಜೀವನದಲ್ಲಿ ಅಳವಡಿಸಿಕೊಂಡು, ಭಾರತಕ್ಕೆ ಹೋಗಿರಿ ; ನೀವು ಬಾಯಿಬಿಚ್ಚಿ ಏನನ್ನು ಉಪದೇಶಿಸದಿದ್ದರೂ ನಿಮ್ಮ ಗುಣ ಶೀಲಗಳೂ ನಡೆವಳಿಕೆಗಳೂ ನಿಮ್ಮ ವರ್ತನೆಗಳೂ ಅವರಿಗೆ ಉತ್ತಮವಾದ ಶಿಕ್ಷಣವಾಗುತ್ತವೆ.

ಭಾರತದ ಸಂದರ್ಶನಕ್ಕಾಗಿ ಬರುವ ಪ್ರವಾಸಿಗಳ ಗಮನದ ಮೇಲೆ ಅಚ್ಚೊತ್ತಿದಂತೆ ಮನಸ್ಸಿಗೆ ಹಿಡಿಸಲು ಯೋಗ್ಯವಾದ ಅತ್ಯಂತ ಮಹತ್ವದ ಕರ್ತವ್ಯ ವೆಂದರೆ, ಭಾರತೀಯರಲ್ಲಿ ಸಾಹಸದ ಭಾವಾವೇಗವನ್ನು ಚಿಮ್ಮಿಸಬೇಕೆಂಬದೇ ಆಗಿದೆ. ಆ ಬಡಪಾಯಿಗಳು ಅಥವಾ ದುರ್ದೈವಿಗಳು ವಿಶಾಲ ವಿಶ್ವದಲ್ಲಿ ಜೀವಿಸುತ್ತಿಲ್ಲ ; ಅವರು ತಮ್ಮ ತಮ್ಮ ಸ್ವಂತ ಜೀವಸೃಷ್ಟಿಯ ದುರದೃಷ್ಟಕರವಾದ ಅಲ್ಪ ಜಗತ್ತಿನಲ್ಲಿ ಜೀವಿಸುತ್ತಾರೆ. ಪ್ರತಿಬಂಧಕವಾದ ಜಾತಿಪದ್ಧತಿಯು ಭಾರತದಿಂದ ಹೊರಗೆ ಕಾಲಿಡದಂತೆ ಹಿಂದೂಗಳನ್ನು ನಿಷೇಧಿಸುತ್ತದೆ. ಪರದೇಶಗಳ ಪ್ರವಾಸವೂ ಸಮುದ್ರ ಯಾನವೂ ಕಠೋರವಾದ ಸಂಪ್ರದಾಯಬದ್ಧತೆಗೆ ವಿರುದ್ಧವಾದುವು. ವರ್ತಮಾನ ಸಮಯದಲ್ಲಿ, ಸಂಪ್ರದಾಯ ಶರಣತೆಗೆ ಒಪ್ಪದಿರುವಷ್ಟು ಧೈರ್ಯವನ್ನೂ ಪಾಷಂಡತನವನ್ನೂ ಬೆಳೆಸಿಕೊಂಡ ಶ್ರೀಮಂತರಾದ ಹಿಂದೂಗಳು. ವಿದ್ಯಾಭ್ಯಾಸಕ್ಕಾಗಿ ವಿದೇಶಗಳಿಗೆ ಅದರಲ್ಲಿಯಂ‌ತೂ ವಿಶೇಷವಾಗಿ ಇಂಗ್ಲೆಂಡಿಗೆ-ಹೋಗತಕ್ಕವರು ಸಹಸ್ರಾರು ಇಂಡಿಯಾದ ಡಾಲರುಗಳನ್ನು ಖರ್ಚುಮಾಡುತ್ತಾರೆ ಅವರು ಸಾಮಾನ್ಯವಾಗಿ ಗರಿಕಟ್ಟಿದಂತೆ, ಸರ್ವಾಂಗ ಪೂರ್ಣ ಬ್ಯಾರಿಸ್ಟರ್ ಅಥವಾ ಲಾಯರ್‌ಗಳಾಗಿ ಇಂಡಿಯಾಕ್ಕೆ ಹಿಂದಿರುಗುತ್ತಾರೆ. ಅವರು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ನ್ಯಾಯಸ್ಥಾನಗಳ ಮೊಕದ್ದಮೆಗಳನ್ನು ಪ್ರೋತ್ಸಾಹಿಸಿ, ಅವರ ಕಕ್ಷಿಗಾರರಾದ ಬಡ ರೈತರನ್ನು ಹಿಂಸಿಸಿ ಸಂಪಾದಿಸಿದ ಹಣವನ್ನು, ಒಡೆದು ಚೂರಾಗುವ ಗಾಜಿನ

ಸಾಮಾನುಗಳನ್ನೂ ಚೂರಿ–ಕತ್ತರಿಗಳನ್ನೂ (ಪೀಠೋಪಸ್ಕರಗಳನ್ನೂ ಬಾಗಿಲು–ಗೋಡೆಗಳನ್ನೂ ಮುಚ್ಚುವ) ಚಿತ್ರನೆಯ್ದ ವಸ್ತ್ರಗಳನ್ನೂ ಇಂಗ್ಲಿಷ್‌ರಿಂದ ತಯಾರಾದ ಚಿತ್ರಗಳನ್ನೂ ವಿನಾಶಕರವಾದ ಇಂಗ್ಲೀಷ್ ಮದ್ಯಸಾರಗಳನ್ನೂ ಸಾರಾಯಿಗಳನ್ನೂ ಪಾನೀಯಗಳನ್ನೂ ಕೊಳ್ಳುವದರಲ್ಲಿ ಖರ್ಚುಮಾಡುತ್ತಾರೆ. ಬಡತನವೂ ಹಸಿವೆಯೂ ಬೆಳೆದಂತೆ, ಯಾರ ರೇಗಾಟವೂ ವ್ಯಾಜ್ಯವೂ ಕೋರ್ಟ್‌ವ್ಯವಹಾರ ಪ್ರಿಯತೆಯೂ ಬೆಳೆಯುವದೋ ಅಂಥಾ ಉಪವಾಸ ಸಾಯುತ್ತಿರುವ ಬಡಜೀತಗಾರರ ರಕ್ತಹೀರಿ ಸಂಪಾದಿಸಿದ ಬಂಡವಾಳದ ಅನುತ್ಪಾದಕ ಅನುಭೋಗವು ಎಷ್ಟು ಭಯಂಕರವಾಗಿದೆ !

ಜಪಾನ್ ಜನಾಂಗದ ಸಾಹಸೋತ್ಸಾಹವು ಇಂಡಿಯಾದ ಬಡಜಾತಿಯವರಲ್ಲಿ ಪ್ರವೇಶವಾಗುವಂತೆ ಮಾಡುವದು ತೀವ್ರ ಅಗತ್ಯವಾಗಿದೆ. ಹಡಗಿನಲ್ಲಿ ಅಗ್ಗದ ಪ್ರಯಾಣಕ್ಕೆ ಅವಶ್ಯವಾದಷ್ಟು ಮಾತ್ರ ಹಣದಿಂದ ಜಪಾನಿನ ಬಾಲಕರು ಅಮೆರಿಕಾಕ್ಕೆ ಬರುತ್ತಾರೆ. ಅವರು ಅಮೆರಿಕದ ಗೃಹಸ್ಥರ ಕೆಲಸಮಾಡಿ, ಬಗೆ ಬಗೆಯ ಶಾಲೆಗಳಲ್ಲಿ ಕಲಿಯುವದಕ್ಕೂ ಸಾಹಸಮಾಡುತ್ತಾರೆ. ಈ ರೀತಿಯಲ್ಲಿ ಕೆಲವು ವರ್ಷಗಳು ಅಮೆರಿಕಾದಲ್ಲಿ ಕಳೆದು, ಜೇಬುಗಳ ತುಂಬ–ಬಿರಿಯುವಂತೆ–ಹಣವನ್ನೂ ಮಿದುಳುಗಳ ತುಂಬ ಜ್ಞಾನವನ್ನೂ ತುಂಬಿಕೊಂಡು ಅವರು ಜಪಾನಿಗೆ ಹಿಂದಿರುಗುತ್ತಾರೆ.

ಜಾತಿ ಪದ್ಧತಿಯಿಂದ ಗುಲಾಮಗಿರಿ ಮಾಡುತ್ತಾ, ಮಣ್ಣಿನ ಜೀತಗಾರರಾಗಿರುವ ಭಾರತೀಯರು, ಮಣ್ಣಿಗೇ ಅಂಟಿಕೊಂಡು ಜೋತುಬಿದ್ದು, ದುಡಿತದ ತೊತ್ತಾಗಿರುವದನ್ನು ಬಿಟ್ಟುಬಿಡುವದಕ್ಕೆ ಕಲಿಸುವದು ಬಹಳ ಅಗತ್ಯವಾದುದು. ತಮಗೆ ಪೂರ್ವಜರಿಂದ ಬಂದಿರುವ ಜಮೀನಿನ ಜೀತಗಾರಿಕೆಯನ್ನು ಬಿಡುವದು, ಕೊಂಚಮಟ್ಟಿಗೆ ದೈವದ್ರೋಹವಾಗುವದೆಂದು ಅವರು ಎಣಿಸುತ್ತಾರೆ. ಈ ಕಾಲದ ಪರಿಸ್ಥಿತಿಗೆ, ಹಿಂದು ಬೀಳದೆ ಹೊಂದಿಕೊಳ್ಳಬೇಕಾದರೆ, ಮತ್ತೊಂದು ದೇಶದಲ್ಲಿ ನೆಲೆಸುವದಕ್ಕಾಗಿ ಅವರು ವಲಸೆಹೋಗಬೇಕೆಂದು ಅವರಿಗೆ ಕಲಿಸಬೇಕು. ಜನರು ಯೂರೋಪಿನಿಂದ ವಲಸೆ ಹೋಗಿ ಈ ಅಮೆರಿಕಾಕ್ಕೆ ಬಂದು, ಯೂರೋಪೇ ನೆರಳಲ್ಲಿ ಬೀಳುವಷ್ಟು ಉನ್ನತವಾಗಿ ಇದನ್ನು ಮೇಲೆತ್ತಿದರು. ಇಂಡಿಯಾ ಜನರು ವಲಸೆ ಹೋಗಿ, ಅಮೆರಿಕಾಕ್ಕೂ ಇತರ ಸ್ಥಳಗಳಿಗೂ ಹೊರಟು ಬಂದರೆ, ಭಾರತದಲ್ಲಿ ಭುಜಿಸುವವರ ಸಂಖ್ಯೆಯು ಕಡಿಮೆಯಾಗಿ, ಅಲ್ಲಿ ಮಿಕ್ಕ ಜನರೂ ಹೊರಗೆ ಬಂದ ಜನರೂ ಕೂಡ, ಉತ್ತಮ ಸ್ಥಿತಿಯನ್ನು ಪಡೆಯುತ್ತಾರೆ. ನಮ್ಮ ಸ್ಥೂಲ ಭೌತಿಕ ಪ್ರಕೃತಿಯು ಆರೋಗ್ಯವಾಗಿರಬೇಕಾದರೆ, ರಕ್ತವು ಪರಿಚಲನೆಯಾಗುತ್ತಿರಬೇಕು ; ಹಾಗೆ, ಪ್ರಪಂಚದ ಆರೋಗ್ಯವಾಗಲೀ ಯಾವ ದೇಶದ ಆರೋಗ್ಯವಾಗಲಿ ರಕ್ಷಣೆ

ಯಾಗಬೇಕಾದರೆ, ಜನರು ಸಂಚರಿಸುತ್ತಿರಬೇಕು. ಪರಿಚಲಿಸುತ್ತ, ಪ್ರಸರಿಸುತ್ತ ಜನರು ಆಗಾಗ ಪದೇಪದೇ ಪರಸ್ಪರ ಮಿಶ್ರವಾಗುತ್ತ ಇರಬೇಕು; ಇಲ್ಲದೆ, ನಿಂತಲ್ಲಿ ನಿಂತಿದ್ದರೆ, ಕೆಟ್ಟು ನೋಯುತ್ತದೆ; ಇಲ್ಲವೆ, ಸಾಯುತ್ತದೆ. ನಾವು ಇಂಗ್ಲೆಂಡಿನಿಂದಲೋ ಅಮೆರಿಕಾದಿಂದಲೋ ಇಂಡಿಯಾಕ್ಕೆ ಹೋಗಿ ಹಿಂದೂಗಳಿಗೆ ಶಿಕ್ಷಣಕೊಡುವದಕ್ಕೆ ಎಷ್ಟೇ ಪ್ರಯತ್ನಪಟ್ಟರೂ ನಿಜವಾದ ಸ್ವಾತಂತ್ರ್ಯದ ಮನೋಭಾವವನ್ನು ಅವರಲ್ಲಿ ಚಿಮ್ಮಿಸಲಾರೆವು; ಏಕೆಂದರೆ ಜನರ ಸಾಮಾನ್ಯ ಸನ್ನಿವೇಶ ಸಂದರ್ಭಗಳು ಅವರನ್ನು ನಿಸ್ಸತ್ತ್ವಗೊಳಿಸುತ್ತಿವೆ; ಸುತ್ತಲೆಲ್ಲ ಕಡೆಗಳಿಂದಲೂ ಅವರಿಗೆ ಬರುತ್ತಿರುವ ಸೂಚನೆಗಳು ತಾವು ದುರ್ಬಲರೆಂಬ ಮೋಹವನ್ನು ಹುಟ್ಟಿಸುತ್ತಿವೆ. ಸ್ವತಂತ್ರವಾಗಿ ತಾವೇ ವಿಚಾರಮಾಡುವ ಶಕ್ತಿಯಿಲ್ಲದೆ, ಬಾಹ್ಯಪ್ರಚೋದನೆಗೆ–ಸೂಚನೆಗೆ–ಮಾತ್ರ ಗಮನ ಕೊಡುವ ಗಾಢ ನಿದ್ರೆಯಂಥ ಈ ವಶ್ಯಸುಪ್ತಿಯ ಸ್ಥಿತಿಯನ್ನು (Hypnotism) ಕದಲಿಸಿ, ಜಾಡಿಸಲ್ಪಡಬೇಕಾದರೆ, ಅವರು ದೇಶವನ್ನು ಬಿಡಬೇಕು; ಅವರು ಅಮೆರಿಕಾಕ್ಕೂ ಇತರ ದೇಶಗಳಿಗೂ ಹೋಗಿ ಅವರು ಅಲ್ಲಿ ವಿದ್ಯೆಯನ್ನೂ ವ್ಯಾಪಾರವನ್ನೂ ಕಲಿಯದಿದ್ದರೂ ಅವರು ಸುಮ್ಮನೆ ವಿದೇಶೀ ನಾಗರಿಕ ಜನರೊಡನೆ ಮಿಶ್ರವಾಗುವದರಿಂದ, ಅವರು ತಮಗೆ ಅರಿವಿಲ್ಲದೆ, ಇಚ್ಛೆಯಿದ್ದರೂ ಇಚ್ಛೆಯಿಲ್ಲವಾದರೂ ಸ್ವಾತಂತ್ರ್ಯ ಭಾವನೆಯನ್ನು ಪಡೆಯುತ್ತಾರೆ. ಅವರ ಪರಿಜ್ಞಾನದ ಕ್ಷಿತಿಜವು ದೊಡ್ಡದಾಗುತ್ತದೆ, ವಿಸ್ತರಿಸುತ್ತದೆ, ಅವರ ಪರಿಚಯ ಕ್ಷೇತ್ರವು ವಿಶಾಲವಾಗುತ್ತದೆ; ಅವರ ಭಾವನೆಗಳೂ ವಿಚಾರಗಳೂ ವ್ಯಾಪಕವಾಗುತ್ತವೆ; ಅನುಭವವು ಆಳವಾಗುತ್ತದೆ. ಇದು ತನಗೆ ತಾನೇ ಶಿಕ್ಷಣ. ಬೇರೆ ದೇಶಗಳನ್ನು ನೋಡುವದೇ ಒಂದು ಬಗೆಯ ವಿದ್ಯಾಭ್ಯಾಸ.

ಇಂಡಿಯಾದಲ್ಲಿ ಒಬ್ಬ ಹಿಂದೂ ಆಗಲಿ, ಒಬ್ಬ ಮಹಮ್ಮದೀಯನಾಗಲಿ, ಒಬ್ಬ ಸಾಮಾನ್ಯ ನಾಡಾಡಿ ಆಗಲಿ, ಅಲ್ಲಿರುವ ಒಬ್ಬ ಇಂಗ್ಲಿಷ್ ಮನುಷ್ಯನನ್ನು, ಅಥವಾ ಅಮೆರಿಕನ್ ಜನವನ್ನು ತಾನಾಗಿಯೇ ಸಮೀಪಿಸಲು ಧೈರ್ಯಮಾಡಲಾರ. ಬಿಳಿಯ ಜನರನ್ನು ನೋಡಿದರೆ ಅವನಿಗೆ ಭಯ; ಅವರಿಂದ ಇಪ್ಪತ್ತು ಮೂವತ್ತು ಅಡಿಗಳ ಗೌರವದ ದೂರದಲ್ಲಿ ಅವನು ನಿಲ್ಲುತ್ತಾನೆ. ಅವನು ಪ್ಯಾಂಟ್-ಹ್ಯಾಟ್-ಬೂಟ್‌ಗಳನ್ನು ಕಂಡ ಕೂಡಲೇ ನಡಗುತ್ತಾನೆ. ಒಂದು ರೈಲ್ವೇ ಗಾಡಿಯಲ್ಲಿ ಒಬ್ಬ ಯುೂರೋಪಿಯನ್ ಕುಳಿತಿದ್ದರೆ, ಅವನ ಜೊತೆಗೆ ಕುಳಿತುಕೊಳ್ಳುವದಕ್ಕೆ ಒಬ್ಬ ದೇಶೀಯನಿಗೆ ಅವಕಾಶ ಕೊಡುವದು ಅಪರೂಪ. ರೈಲ್ವೇಸ್ಟೇಷನ್‌ಗಳಲ್ಲಿ ಇಂಗ್ಲಿಷ್ ಜನರು ದೇಶೀಯ ಜನರನ್ನು ಒದೆದ್ದೊದ್ದು ಓಡಿಸಿದುದನ್ನು ರಾಮನು ನೋಡಿದನು. ಒಬ್ಬ ದೇಶೀಯನು ತನ್ನ ಮನೆಯ ಕಡೆಗೆ ಬರುತ್ತಿರುವದನ್ನು ಒಬ್ಬ ಯುೂರೋಪಿಯನ್‌ನು ನೋಡಿದರೆ,

ಅವನನ್ನು ಒದ್ದು ತನ್ನ ಆವರಣದಿಂದ ಹೊರಗೋಡಿಸಲು ಆ ಯುರೋಪಿಯನ್‌ನಂ ತನ್ನ ಸೇವಕನಿಗೆ ಹೇಳುತ್ತಾನೆ. ಈ ರೀತಿಯಲ್ಲಿ ವಿದೇಶೀಯರ ದರ್ಪದೌರ್ಜನ್ಯಗಳ ನಡೆವಳಿಕೆಯಿಂದ ಭಾರತೀಯರು ತಾವು ದುರ್ಬಲರು, ಅತಿ ದುರ್ಬಲರು ಅತ್ಯಂತ ದುರ್ಬಲರು, ಸರ್ವದಾ ಪರತಂತ್ರರು ಎಂಬ ಭಾವನೆಯಿಂದ ಸಮ್ಮೋಹಿತರಾಗಿದ್ದಾರೆ. ಮತ್ತೆ ಪುನಃ, ಅವರು ತಮ್ಮ ಜಾತಿಯ ಜನರಿಂದಲೇ ತಮ್ಮ ಜನಾಂಗದ ಜನರಿಂದಲೇ ಅಸೂಯೆ, ದ್ವೇಷ, ಕ್ರೋಧ, ಭೇದ. ಪರಿತಾಪ—ಈ ಭಾವಗಳಲ್ಲಿ ಎಸೆಯಲ್ಪಟ್ಟು ಸಮ್ಮೋಹಿತರಾಗುತ್ತಾರೆ:–ನಾನು ಬೇರೆ. ಅವನು ಬೇರೆ; ಅವನು ನನ್ನ ವಿರೋಧಿ, ಅವನು ನನ್ನ ವೈರಿ; ಅವರು ಹೀಗೆ ಭಾವಿಸುತ್ತಿರುತ್ತಾರೆ. ಎಲ್ಲಾ ಗೌರ್ನಮೆಂಟ್ ಆಫೀಸುಗಳಲ್ಲಿಯೂ ಸರ್ಕಾರವು, ಯೋಗ್ಯತೆಯುಳ್ಳ ಹಲವರು ಆಶೆಪಡಬಹುದಾದ ಕೆಲವೇ ಉನ್ನತ ಅಧಿಕಾರಸ್ಥಾನ ಗಳನ್ನು ಜಾತಿ ಅಥವಾ ಜನಾಂಗದ ಗಣನೆಯ ಮೇಲೆ ನಿಯಾಮಕವಮಾಡಿ, ಪಕ್ಷಾಭಿ ಮಾನವನ್ನು ಪ್ರೋತ್ಸಾಹಿಸಿ, ಪ್ರತಿಯೊಬ್ಬ ನೌಕರನೂ ತನ್ನ ಸಹೋದ್ಯೋಗಿಯನ್ನು ದ್ವೇಷಿಸುವಂತೆಯೂ ಅವನನ್ನು ತನ್ನ ಕಡುವೈರಿಯಾಗಿ ಎಣಿಸುವಂತೆಯೂ ಆ ಅಧಿಕಾರ ಷಾಹಿಯ ಆಡಳಿತವನ್ನು ನಿರ್ವಹಿಸುತ್ತಾರೆ. ಇಂಡಿಯಾದಲ್ಲಿ ವರ್ತಮಾನ ಕಾಲದ ರಾಜಕೀಯ ಮತ್ತು ಸಾಮಾಜಿಕ ಸ್ಥಿತಿಗತಿಗಳು ಜನರಲ್ಲಿ ಸ್ವಾತಂತ್ರ್ಯ ಮನೋ ಭಾವನೆಯು ಬೇರುಬಿಟ್ಟುಕೊಳ್ಳುವದಕ್ಕೆ ಅವಕಾಶಕೊಡುವದಿಲ್ಲ. ವಿದ್ಯಾಭ್ಯಾಸ ವೆಂದರೇನು? ವಿದ್ಯಾಭ್ಯಾಸದ ಗುರಿಯು ವಿಮೋಚನೆ, ಸ್ವಾತಂತ್ರ್ಯ; ಇದರ ಹೊರತು ಬೇರೆಯಲ್ಲ. ವಿದ್ಯೆಯು ನನಗೆ ಸ್ವಾತಂತ್ರ್ಯವನ್ನೂ ಮೋಕ್ಷವನೂ ಕೊಡದಿದ್ದರೆ, ಅದಕ್ಕೆ ಧಿಕ್ಕಾರ, ಅದು ತೊಲಗಲಿ, ಹಾಳಾಗಲಿ; ನನಗೆ ಅದು ಬೇಡ. ವಿದ್ಯೆಯು ನನ್ನನ್ನು ಬಂಧನದಲ್ಲಿಯೇ ಇಡುವದಾದರೆ, ನನಗೆ ಅದರ ಉಪಯೋಗ ವಿಲ್ಲ. ಹೀಗೆ, ಅವರಲ್ಲಿ ನಿಜವಾದ ವಿದ್ಯೆಯನ್ನು ಅಥವಾ ಸ್ವಾತಂತ್ರ್ಯವನ್ನು ಎಚ್ಚರಿಸಬೇಕಾದರೆ, ಅವರ ಸುತ್ತಲ ಪರಿಸರಗಳನ್ನು ಬದಲಾಯಿಸುವದಕ್ಕೆ ಸಹಾಯ ಮಾಡಬೇಕು. ಇದನ್ನು ಹೇಗೆ ಸಾಧಿಸುವದು? ಇದನ್ನು ಸಾಧಿಸುವ ಒಂದು ಬಗೆಯೆಂದರೆ, ಅವರಲ್ಲಿಗೇ ಹೋಗಿ ಅವರಿಗೆ ಬೋಧಿಸುವದು.

## The urgent need and Immediate Relief

### ತುರ್ತಿನ ಅಗತ್ಯ ಮತ್ತು ತತ್‌ಕ್ಷಣದ ಪರಿಹಾರ

ಹೆಚ್ಚು ನೇರವಾದ, ಅತ್ಯಂತ ಸಮೀಪದ ಮಾರ್ಗ ಒಂದಿದೆ. ಓ ಅಮೆರಿಕನ್‌ರೆ,

ಇಂಡಿಯಾದ ಯೂನಿವರ್ಸಿಟಿಗಳ ಕೆಲವು ಪದವೀಧರರನ್ನು ಇಲ್ಲಿಗೆ ಕರೆಸಿ, ನಿಮ್ಮ ಕೈಗಾರಿಕೆಗಳ, ಯಂತ್ರಶಿಲ್ಪಗಳ, ಸಾಹಿತ್ಯ–ಕಲೆಗಳ, ವಿಜ್ಞಾನಶಾಸ್ತ್ರಗಳ, ಯುದ್ಧ ವಿದ್ಯೆಯ ಮತ್ತು ಪ್ರಯೋಜನಕರವಾದ ಇತರ ಎಲ್ಲಾ ಉದ್ಯೋಗಗಳ ಕಾಲೇಜು ಗಳಲ್ಲಿ ಅವರಿಗೆ ಹೆಚ್ಚಿನ ಉನ್ನತವಾದ ಶಿಕ್ಷಣವನ್ನು ಕೊಡಿಸುವದಕ್ಕಾಗಿ, ಸತ್ಯ ಮತ್ತು ನ್ಯಾಯಗಳ ಹೆಸರಿನಲ್ಲಿಯೂ ಧರ್ಮ ಮತ್ತು ತತ್ತ್ವಶಾಸ್ತ್ರಗಳ ಹೆಸರಿನಲ್ಲಿಯೂ ವಿಜ್ಞಾನ ಮತ್ತು ಕಲೆಗಳ ಹೆಸರಿನಲ್ಲಿಯೂ ಸಾಕಷ್ಟು ಸಹಾಯಧನವನ್ನು ಸಂಗ್ರಹಿಸ ಲಾರಿರಾ ? ಅವರಿಗೆ ಸರಿಯಾದ ಶಿಕ್ಷಣವನ್ನು ಕೊಟ್ಟು, ನೆಯ್ಗೆಯನ್ನೂ ಗಣಿಯ ಕೆಲಸಗಳನ್ನೂ ಮತ್ತು ಇತರ ಉಪಯುಕ್ತ ಕಲೆಗಳನ್ನೂ ಕಲಿಸಬೇಕು. ಭಾರತದ ಉನ್ನತಿಯನ್ನು ಸಾಧಿಸುವದಕ್ಕೆ ಇದು ಅತ್ಯಂತ ನೇರವಾದ ಮಾರ್ಗ. ಇಲ್ಲಿ ನಿಧಿಗಳನ್ನು ಎತ್ತಿ, ಭಾರತೀಯರನ್ನು ಈ ದೇಶಕ್ಕೆ ಕರೆತರಬೇಕು. ಅಮೆರಿಕಾದಲ್ಲಿ ಶಿಕ್ಷಣಪಡೆದ ಭಾರತೀಯರು ಭಾರತಕ್ಕೆ ಹಿಂದಿರುಗಿ ಕೈಗಾರಿಕೆಗಳ ಔದ್ಯೋಗಿಕ ವಿಶ್ವವಿದ್ಯಾನಿಲಯಗಳನ್ನು ಪ್ರಾರಂಭಿಸಬಹುದು. ಅವರಿಗೆ ತಮ್ಮ ದೇಶದ ಹೆಚ್ಚು ಬಡವರ್ಗದ ಜನಗಳ ರೀತಿ ನೀತಿಗಳು ಗೊತ್ತಿರುವದರಿಂದಲೂ ಅಲ್ಲಿಯ ಬೇರೆ ಬೇರೆ ಭಾಷೆಗಳೂ ಪದ್ಧತಿಗಳೂ ಸಂಪ್ರದಾಯಗಳೂ ರೂಢಿಗಳೂ ತಿಳಿದಿರುವದರಿಂದಲೂ ಆ ತಮ್ಮ ಜನರ ಮಧ್ಯದಲ್ಲಿ ಪ್ರೊಫೆಸರುಗಳಾಗಿ, ನಿಮ್ಮ ಅಮೆರಿಕನ್ ಜನರಿಗಿಂತಲೂ ಆ ಭಾರತೀಯರು ಹೆಚ್ಚು ಉತ್ತಮವಾಗಿ ಕೆಲಸಮಾಡಬಲ್ಲರು. ಅಮೆರಿಕನ್ ಪ್ರೊಫೆಸರುಗಳಾದರೆ, ಶ್ರೇಷ್ಠಜಾತಿಯವರಿಗೂ ಮೊದಲೇ ಇಂಗ್ಲಿಷ್ ಭಾಷೆಯನ್ನು ಕಲಿತಿರುವ ಶ್ರೀಮಂತರಿಗೂ ಮಾತ್ರ ಕಲಿಸಬಹುದು ; ಆದರೆ ಹೆಚ್ಚು ಬಡವರ್ಗದ ಜನರು ಇಂಗ್ಲಿಷ್ ಭಾಷೆಯನ್ನು ತಿಳಿಯರು. ಬಡವರಿಗೆ ಕಲಿಸುವದಕ್ಕಾಗಿ ಅವರ ಭಾಷೆಯನ್ನೂ ರೀತಿಗಳನ್ನೂ ತಿಳಿದಿರುವ ಜನರೇ ಬೇಕಾಗುತ್ತದೆ. ಭಾರತೀಯರನ್ನು ಉದ್ಧಾರಮಾಡಲು ಇದು ಅತ್ಯಂತ ಸಮರ್ಥವೂ ಸಮೀಪವೂ ಆದ ಹಾದಿ ; ಇದು ಬಹಳ ಸರಿಯಾದ, ಸಾಧುವಾದ ಕ್ರಮ.

ಇಂಡಿಯಾ ಜನರು ಸ್ವಚ್ಛಂದವಾದ ಅಮೆರಿಕಾದ ಸಮುದ್ರದ ದಂಡೆಯ ಮೇಲೆ ಕಾಲಿಟ್ಟ ಕೂಡಲೇ ಶ್ವೇತ ಸ್ತ್ರೀ ಪುರುಷರು ಪ್ರೀತಿ ವಿಶ್ವಾಸಗಳಿಂದ ತಮ್ಮ ಕೈಕುಲುಕು ವದಕ್ಕೆ ಸಿದ್ಧರಾಗಿ ಯಾವಾಗ ಸಮಾನತೆಯ ಭಾವದಿಂದ ಸ್ವಾಗತಿಸುವದನ್ನು ಕಾಣುತ್ತಾರೋ ಆಗ ಅವರ ಭಯಗಳೆಲ್ಲಾ ಹಾರಿಹೋಗುತ್ತವೆ ; ಬಿಳಿಯ ಮನುಷ್ಯನು ಅಲ್ಲಿಂದ ಮುಂದೆ ಭಯಂಕರ ಕಲ್ಪಿತ ಭೂತವಾಗಿ ಉಳಿಯುವದಿಲ್ಲ. ಭಾರತೀಯರಿಗೆ ಆತ್ಮ ವಿಶ್ವಾಸವುಂಟಾಗಿ, ಮಾಯಾ ಪಟಲವು ಹರಿದು ಹೋಗಿ,

ಸ್ವಾತಂತ್ರ್ಯ ಮನೋಭಾವವು ವಾಸ್ತವವಾಗಿಯೂ ಪ್ರಾಪ್ತಿಯಾಗುತ್ತದೆ. ಇಂಡಿಯಾದ ವಿಶ್ವವಿದ್ಯಾನಿಲಯಗಳ ಪದವೀಧರರು ಅಮೆರಿಕಾದಲ್ಲಿ ಶಿಕ್ಷಣವನ್ನು ಪಡೆದು, ಹಿಂದಿರುಗಿ ಕರ್ಮ ಸ್ವಾತಂತ್ರ್ಯಗಳ ಧರ್ಮವನ್ನು ತಮ್ಮ ಮಾತೃ ಭೂಮಿಯಲ್ಲಿ ಪ್ರಸಾರಮಾಡಬೇಕು. ಇಂಡಿಯಾದಲ್ಲಿ ಅವರು ವಿಜ್ಞಾನ ಮತ್ತು ಕಲೆಗಳ ವೇದವನ್ನು ಉಪದೇಶಮಾಡಲಿ. ಇಂಡಿಯಾದ ಜನರು ತಮ್ಮ ದೇಶದಲ್ಲಿಯೇ ವ್ಯವಹಾರಸಾಧ್ಯ ವೇದಾಂತವನ್ನು ಪ್ರಸಾರಮಾಡಲು ಸಹಾಯ ಹೊಂದಲಿ. ಹೀಗೆ, ಗಾಯವು ಮಾಯುವಲ್ಲಿ ಅದರ ಮೇಲೆ ಕಟ್ಟುವ ಒರಟು ಒಣಕಲು ಹಕ್ಕಳೆ ತಾನಾಗಿಯೇ ಉದುರಿಹೋಗುತ್ತದೆ. ಜನರು ಸರಿಯಾದ ರೀತಿಯ ಶಿಕ್ಷಣ ಪಡೆದಾಗ, ಇತರ ಕಷ್ಟಗಳು ತಾವಾಗಿಯೇ ಕಣ್ಮರೆಯಾಗುತ್ತವೆ ನೀವು ಇಂಡಿಯಾದ ಕೆಲವು ಪದವೀಧರರನ್ನು ಇಲ್ಲಿಗೆ ಕರೆದುಕೊಂಡು ಬಂದು, ಎರಡು ಮೂರು ವರ್ಷಗಳು ಅವರಿಗೆ ಶಿಕ್ಷಣಕೊಟ್ಟರೆ, ಅವರು ಭಾರತಕ್ಕೆ ಹಿಂದಿರುಗಿದ ಕೂಡಲೇ ತಮ್ಮ ಕಾರ್ಯವನ್ನೂ ವ್ಯವಹಾರವನ್ನೂ (Business) ಪ್ರಾರಂಭಿಸಿ ತಮಗೂ ಮತ್ತು ಅತ್ಯಂತ ಬಡತನದ ವರ್ಗದ ಜನರಿಗೂ ಪ್ರಯೋಜನವಾಗುವಂತೆ ಪ್ರಯತ್ನ ಮಾಡಬಹುದು.

ಅಮೆರಿಕಾದ ಒಬ್ಬನೇ ಒಬ್ಬ ಬಂಡವಾಳಗಾರನು ಈ ಉದಾತ್ತ ಕಾರ್ಯವನ್ನು ಕೈಗೊಂಡರೆ, ಅವನು ಎದ್ದು ನಿಂತು, "ಇಂಡಿಯಾದ ಯೂನಿವರ್ಸಿಟಿಗಳ ಪದವೀಧರರಿಗೆ ಅಮೆರಿಕಾದಲ್ಲಿ ಹೆಚ್ಚಿನ ಶಿಕ್ಷಣವನ್ನು ಕೊಡುವದಕ್ಕಾಗಿ 10,00,000 ಡಾಲರುಗಳನ್ನು ಪುದುವಟ್ಟಾಗಿ–ಸ್ಥಿರನಿಧಿಯಾಗಿ–ಇಡುತ್ತೇನೆ" ಎಂದು ಹೇಳುವದಾದರೆ; ಇಲ್ಲಿ ಸೇರಿರುವ ನಿಮ್ಮಗಳಲ್ಲಿ ಯಾರಾದರೊಬ್ಬರು, ಇವತ್ತು, ಈ ಧರ್ಮಕಾರ್ಯಕ್ಕೆ ಒಪ್ಪಿಕೊಂಡು, ಕೊನೆಯಪಕ್ಷ 10,00,000 ಡಾಲರುಗಳನ್ನಾದರೂ ಆ ಸ್ಥಿರನಿಧಿಯ ರೇವಣಿಯಾಗಿ ಭದ್ರವಾಗಿಡುವದಾದರೆ, ಬಡ ಭಾರತೀಯರಿಗೆ ಅಮೆರಿಕಾದಲ್ಲಿ ಶಿಕ್ಷಣಕೊಡುವದಕ್ಕಾಗಿ ಗೌರವದ ವಿದ್ಯಾರ್ಥಿವೇತನಗಳನ್ನು ನಾವು ಸ್ಥಾಪಿಸಬಹುದು. ರಾಮನು ಅಮೆರಿಕಾದ ವೃತ್ತ ಪತ್ರಿಕೆಗಳಿಗೆ ಮೊರೆಯಿಡುತ್ತಾನೆ.

ಅಮೆರಿಕಾದ ಪ್ರತಿಯೊಬ್ಬ ಪ್ರಜೆಯಲ್ಲಿಯೂ ರಾಮನು ಮನವಿ ಮಾಡಿಕೊಳ್ಳುತ್ತಾನೆ ನಿಮ್ಮಗಳಲ್ಲಿ ಯಾರೊಬ್ಬರಾದರೂ ಮುಂದೆಬಂದು, ಈ ಧರ್ಮಕಾರ್ಯವನ್ನು ಕೈಗೊಂಡರೆ, ಇಡೀ ಜಗತ್ತಿನ ಹಿತಕ್ಕಾಗಿಯೇ ನೀವು ಸಹಾಯಮಾಡಿದಂತಾಗುತ್ತದೆ. ಈ ಸಭೆಗೆ ಬಂದಿರುವ ಜನರಲ್ಲಿ ಒಂದು ವೇಳೆ ಅಷ್ಟು ಧನಿಕರಾದವರು ಯಾರೂ ಇಲ್ಲವಾದರೆ, ಈ ಮಹತ್ವದ ವಿಷಯವನ್ನು ನಿಮ್ಮ ಶ್ರೀಮಂತ ಮಿತ್ರರ ಮತು

ಶ್ರೀಮಂತರಾದ ನೆರೆಹೊರೆಯವರ ಎದುರಿಗೆ ಇಡಲಾರಿರ ? ರಾಮನಲ್ಲಿಗೆ ಬಂದು ಮುಖತಃ ಪರಿಚಯಮಾಡಿಕೊಂಡು ಆಲೋಚಿಸುವದಕ್ಕೆ ನಿಮ್ಮ ಧನಿಕ ಮಿತ್ರರನ್ನು ಪ್ರೀತಿಯಿಂದ ಪ್ರೇರಿಸಲಾರಿರ? ಸಹಸ್ರಾರು ಪೌಂಡುಗಳನ್ನು ಒಬ್ಬೊಬ್ಬರೇ ಕೊಡಲು ಶಕ್ತಿಯಿಲ್ಲವಾದರೆ, ನೀವೆಲ್ಲರೂ ಯಥಾಶಕ್ತಿ ಸಹಾಯಮಾಡಲಾರಿರ ? ಅಷ್ಟಾದರೂ ನೀವು ಮಾಡಬಹುದು. ರಾಮನು ನಿಮ್ಮನ್ನು ತನಗೆ ಅನ್ನವಸ್ತ್ರಗಳನ್ನು ಕೊಡಿರೆಂದು ಕೇಳುವದಿಲ್ಲ. ತನ್ನ ವೈಯಕ್ತಿಕ ಸುಖಕ್ಕಾಗಿ ಈ ತುಟಿಗಳು ಏನನ್ನಾದರೂ ಬೇಡಿದರೆ ಇವು ನಾಶವಾಗಿ ಹೋಗಲಿ! ಭಾರತದ ಹಿತವನ್ನು ಸೇವಿಸುವ ಮಹೋದ್ದೇಶವು ಎಷ್ಟರ ಮಟ್ಟಿಗೆ ರಾಮನದಾಗಿದೆಯೋ ಅಷ್ಟರ ಮಟ್ಟಿಗೆ ನಿಮ್ಮದೂ ಆಗಿದೆ. ರಾಮನು ಎಷ್ಟು ಭಾರತೀಯನೋ ಅಷ್ಟು ಅವನು ಅಮೆರಿಕನ್‌ನೂ ಆಗಿದ್ದಾನೆ.

The wide world is my home, and to do good is my religion.

**"ವಿಶಾಲ ಜಗತ್ತೇ ನನ್ನ ಮನೆ, ಒಳ್ಳೆಯದನ್ನು ಮಾಡುವದೇ ನನ್ನ ಧರ್ಮ."**

ರಾಮನ ಹೃದಯಕ್ಕೆ ಕೃಷ್ಣನು ಎಷ್ಟು ಸಮೀಪನೋ ಪ್ರಿಯನೋ ಕ್ರಿಸ್ತನೂ ಹಾಗೆಯೇ. ರಾಮನಿಗೆ ಶಂಕರನು ಎಷ್ಟು ತನ್ನವನೋ ಬುದ್ಧನೂ ಅಷ್ಟೇ. ರಾಮನು ಯಾವ ಮತಕ್ಕೂ ಸೇರಿದವನಲ್ಲ. ರಾಮ ನಿಮ್ಮವನು ; ಸತ್ಯವು ನಿಮ್ಮದು, ಸತ್ಯದ ಹೆಸರಿನಲ್ಲಿಯೂ ನ್ಯಾಯದ ಹೆಸರಿನಲ್ಲಿಯೂ ಮಾನವಕುಲದ ಹೆಸರಿನಲ್ಲಿಯೂ ಮತ್ತು ಅಮೆರಿಕದ ವಿಮೋಚನೆಯ ಹೆಸರಿನಲ್ಲಿಯೂ ಭಾರತಕ್ಕಾಗಿ ಪ್ರೇಮ ಭಾವನೆಯನ್ನು ಹೊಂದಿ ಮುಂದೆ ಹೆಜ್ಜೆಯಿಡಬೇಕೆಂದು ರಾಮನು ನಿಮ್ಮನ್ನು ಪ್ರಾರ್ಥಿಸುತ್ತಾನೆ. ಏನು ಮಾಡುವದಕ್ಕೆ ನೀವು ಇಚ್ಛಿಸುತ್ತೀರಿ ? ಕೆಲವರು ಲೇಖನಿಯಿಂದ ಸೇವಿಸಬಹುದು ; ಕೆಲವರು ಮಾತಿನಿಂದ ಸಹಾಯ ಮಾಡಬಹುದು ; ಸ್ನೇಹಿತರಿಗೆ ತಿಳಿಸಬಹುದು ; ಮತ್ತು ಆ ವಿಷಯದ ಮೇಲೆ ಭಾಷಣ ಮಾಡಬಹುದು. ಕೆಲವರು ಕೈದುಡಿಮೆಯಿಂದ ಸಹಾಯ ಮಾಡಬಹುದು ; ಇನ್ನು ಕೆಲವರು ಧನದಿಂದ ಸಹಾಯ ಮಾಡಬಹುದು. ಓ ಅಮೆರಿಕನ್‌ರೆ, ಈಗ ಹೇಳಿ, ನಿಮ್ಮಲ್ಲಿ ಯಾರು ಯಾರು ಯಾವ ಯಾವ ಬಗೆಯಿಂದ ಈ ಮಹೋದ್ದೇಶಕ್ಕೆ ಸಹಾಯ ಮಾಡುವದು

ಸಾಧ್ಯವೆನ್ನುವದನ್ನು ಪ್ರತಿಯೊಬ್ಬರೂ ಎಲ್ಲರೂ ದಯವಿಟ್ಟು ಹೇಳಿ. ನೀವು ಹೇಗೆ ಸಹಾಯ ಮಾಡುವಿರಿ ? ಧನಿಕರು ಧನವನ್ನು ದಾನಮಾಡಬೇಕು ; ವೀರರು ಮುಂದೆ ಬಂದು, ಭಾರತಕ್ಕೆ ಬೋಧಕರಾಗಿ ಹೋಗಿ, ಅಲ್ಲಿಯ ಜನರಲ್ಲಿ, ನಿಮ್ಮ ಜಾತಿಯ ಹೊಲೆಯರಲ್ಲಿಯೂ ಕೆಲಸ ಮಾಡಬೇಕು. ದೈವದತ್ತವಾದ ಭಾಷಣಕಲೆ ಉಳ್ಳವರು ತಮ್ಮ ಧನಿಕರಾದ ಮಿತ್ರರಿಗೆ ಈ ಮಹಾಕಾರ್ಯದ ವಿಷಯವಾಗಿ ಹೇಳಬೇಕು ವೃತ್ತಪತ್ರಿಕೆಗಳು ಇದನ್ನು ಪ್ರಸಾರ ಮಾಡಬೇಕು. ಯಾರಿಗೆ ಸತ್ಯ–ಧರ್ಮಗಳಲ್ಲಿ ಶ್ರದ್ಧೆ ಇದೆಯೋ, ಯಾರು ತಮ್ಮ ಆತ್ಮನನ್ನು ತಾವು ಪ್ರೇಮಿಸುತ್ತಾರೋ ಸಹಾಯ ಮಾಡಬೇಕೆಂಬ ಅಪೇಕ್ಷೆ ಯಾರಿಗಿದೆಯೋ ಅವರೆಲ್ಲರೂ ರಾಮನಲ್ಲಿಗೆ ಬಂದು, ತಾವು ಯಾವ ಬಗೆಯಿಂದ ಸಹಾಯ ಮಾಡಲು ಇಚ್ಛಿಸುವರೆಂಬುದನ್ನು ತಮ್ಮ ಹೆಸರುಗಳ–ವಿಳಾಸಗಳ ಸಹಿತ ತಮ್ಮ ಕೈಯಿಂದಲೇ ಬರೆದು ಕೊಡಬೇಕೆಂದು ರಾಮನು ಕೇಳಿ ಕೊಳ್ಳುತ್ತಾನೆ. ಯಾರಾದರೂ ಹಣವನ್ನು ನಿಧಿರೂಪದಲ್ಲಿ ಇಡುವದಾದರೆ, ಅದನ್ನು ವಿಶ್ವಸ್ತ ಮಂಡಳಿಯ (Trust) ಅಮೆರಿಕನ್ ಸದಸ್ಯರ ಕೈಯಲ್ಲಿಯೋ ಇಡುತ್ತದೆ ; ನಿಮ್ಮ ಅಮೆರಿಕಾ ಸದಸ್ಯರೇ ಆ ನಿಧಿಯನ್ನು ಇಟ್ಟುಕೊಳ್ಳುತ್ತಾರೆ. ಇತರ ಮಾರ್ಗ ಗಳಿಂದ ನಿಮ್ಮ ಸೇವೆಗಳನ್ನು ಸಲ್ಲಿಸಬೇಕೆಂದು ಬಯಸಿದರೆ, ನೀವು ಹಾಗೆಯೇ ಮಾಡ ಬಹುದು. ಅದನ್ನು ತಿಳಿದರೆ, ಕಾರ್ಯವನ್ನು ವ್ಯವಸ್ಥಿತವಾಗಿ ಉಪಕ್ರಮಮಾಡಲು ನಾವು ನಿಶ್ಚಿತವಾದ ಏರ್ಪಾಡು ಮಾಡಬಹುದು. ಏನು ಮಾಡಬೇಕೆಂದು ನೀವು ಇಚ್ಛಿಸುತ್ತೀರಿ ? ಭಾರತದ ಪರವಾಗಿ ಅಮೆರಿಕನ್ ಜನರಿಗೆ ರಾಮನು ಸಲ್ಲಿಸುವ ಬೇಡಿಕೆ ಇದೇ ! ರಾಮನ ಪ್ರಾರ್ಥನೆ ವೈಯಕ್ತಿಕವಾದುದಲ್ಲ ; ವ್ಯಕ್ತಿಶಃ ರಾಮನಿಗೆ ಅದರ ಸಂಬಂಧವಿಲ್ಲ. ಎಲ್ಲಿದ್ದರೂ ರಾಮನು, ಯಾವ ಸಂಬಂಧವೂ ಯಾರ ಸಂಬಂಧವೂ ಚಿಂತೆಯೂ ಇಲ್ಲದೆ, ವಿಮುಕ್ತನಾಗಿ ಬಿಡುಬೀಸಾಗಿದ್ದಾನೆ. ಯಾವ ರೀತಿಯಿಂದಲೂ ರಾಮನು ಬದ್ಧನಲ್ಲ. ಎಲ್ಲಾ ಲೋಕಗಳೂ ರಾಮನವೇ. ರಾಮನು ಎಲ್ಲೆಡೆಯಲ್ಲಿಯೂ ವಾಸಿಸಬಹುದು. ಆದರೆ, ನೋಡಿ, ನೆನಪಿರಲಿ, ಭಾರತವು ನಿಮ್ಮ ಪಾದ, ನೀವೇ ತಲೆ. ನಿಮ್ಮ ಪಾದವನ್ನು ನೀವು ಅಲಕ್ಷ್ಯ ಮಾಡಬೇಡಿ ; ಪಾದಗಳಲ್ಲಿ ಹುಣ್ಣಾಗಿ ನೋಯುತ್ತಿದ್ದರೆ, ನೀವು ತತ್ತರಿಸಿ ಬೀಳುತ್ತೀರಿ. ಭಾರತೀಯ ಜನರ ದೇಹಗಳಲ್ಲಿ ದೇವರೇ ನಿಮ್ಮಲ್ಲಿಗೆ ಹಸಿದು ಬರುತ್ತಾನೆ ; ಅವನಿಗೆ ಊಟ ಮಾಡಿಸಿ ; ಹಿಂದೂಗಳ ದೇಹಗಳಲ್ಲಿ ದೇವರು ನಿಮ್ಮಲ್ಲಿಗೆ ಬೆತ್ತಲೆಯಾಗಿ ಬರುತ್ತಾನೆ, ಅವನಿಗೆ ಬಟ್ಟೆ ಹೊದಿಸಿ : ಭಾರತೀಯರ ರೂಪದಲ್ಲಿ, ದೇವರು ದಾರಿದ್ರ್ಯ–ದುಃಖ ಗಳಿಂದ ನಿಮ್ಮಲ್ಲಿಗೆ ಬರುತ್ತಾನೆ ; ಅವನನ್ನು ಸೇವಿಸಿ, ಸಂತೈಸಿ ಕಳಿಸಿರಿ. ಭೂತದಯೆ, ಉದಾರತೆ, ದಾನಶೀಲತೆ, ಪ್ರೇಮ ಈ ಮೊದಲಾದ ಉದಾತ್ತ ಗುಣಗಳಿಂದ ನೀವು ಅನುಗ್ರಹ ಪಡೆಯಬೇಕೆಂದು ಅವರು ಅಜ್ಞಾನ

ಕತ್ತಲೆಯಲ್ಲಿ ಸಿಕ್ಕು ಸಂಕಟಪಡುತ್ತಿದ್ದಾರೆ. ನೀವು ಉದ್ಧಾರವಾಗಬೇಕೆಂದು ಅವರು ಬಿದ್ದಿದ್ದಾರೆ. ನೀವು ನಿಮ್ಮ ಉನ್ನತತರವಾದ ಭಾವನೆಗಳನ್ನೂ ಉದಾತ್ತವಾದ ಪ್ರಯತ್ನಗಳನ್ನೂ ಪ್ರಯೋಗಿಸುವದಕ್ಕೆ ನಿಮಗೊಂದು ಸದವಕಾಶ ಸಿಕ್ಕಿದ್ದಕ್ಕಾ ನಿಮ್ಮ ಅದೃಷ್ಟವನ್ನು ನೀವು ಕೊಂಡಾಡಬೇಕು. ಈ ಸುದೈವದ ಅವಕಾಶವನ್ನು ನೀವು ಸಂತೋಷವಾಗಿಯೂ ಉಲ್ಲಸಿತವಾಗಿಯೂ ಪ್ರೇಮವಾಗಿಯೂ ಉಪಯೋಗಿಸಿ ಕೊಂಡು, ಭಾರತೀಯರಿಗೆ ಸಹಾಯಮಾಡಿ.

ಅಮೆರಿಕವು ಚೀಣೀಯರಿಗೂ ಜಪಾನೀಯರಿಗೂ ರೆಡ್ ಇಂಡಿಯನ್‌ರಿಗೂ ನೀಗ್ರೋಗಳಿಗೂ ವಿದ್ಯಾದಾನಮಾಡುತ್ತಿದೆ; ಪ್ರಾಣಿಹಿಂಸೆಯನ್ನು ತಪ್ಪಿಸುವದಕ್ಕೂ ಕಷ್ಟಪಡದೇ ಇಲ್ಲ. ಓ ಅಮೆರಿಕನ್‌ರೆ, ಅತ್ಯಂತ ಕೃತಜ್ಞರೂ ಪ್ರೇಮಳಸ್ವಭಾವ ದವರೂ ನಿಷ್ಠಾವಂತರೂ ನಿಷ್ಕಪಟಿಗಳೂ ಶ್ರದ್ಧಾಭಕ್ತಿಯುಳ್ಳವರೂ ಆದ ಆರ್ಯರೇ ಹಿಂದೂಗಳಾಗಿರುವದರಿಂದ, ಅವರು ನಿಮ್ಮವರೇ, ನಿಮ್ಮ ರಕ್ತಮಾಂಸದ ಬಾಂಧವರೇ ಆಗಿದ್ದಾರೆ; ಅವರನ್ನು ಅಲಕ್ಷ್ಯಮಾಡಬೇಡಿ, ಉದಾಸೀನ ಮಾಡಬೇಡಿ.

**ಕೆಳಗೆ ಗಮನಿಸಿ—** ಈ ವಿಷಯದಲ್ಲಿ ಹೆಚ್ಚು ತಿಳಿಯಬೇಕೆಂದು ಬಯಸುವವರು,

ರಾಮಸ್ವಾಮಿ
ಕೇರ್ ಆಫ್, ಡಿ. ಆಲ್ಬರ್ಟ್ ಹಿಲ್ಲರ್, ಎಂ. ಡಿ
10/11 ಸುಟ್ಟರ್ ಸ್ಟ್ರೀಟ್, ಸ್ಯಾನ್‌ಫ್ರ್ಯಾನ್‌ಸಿಸ್ಕೋ, ಅಮೆರಿಕಾ
Cal. U.S.A.

ಈ ವಿಳಾಸಕ್ಕೆ ಪತ್ರವ್ಯವಹಾರ ಮಾಡಬಹುದು.

ಓಂ! ಓಂ! ಓಂ!

ಗಮನಿಸಿ —ಈ ಉಪನ್ಯಾಸವು ಮೂಲತಃ ಅಮೆರಿಕಾದಲ್ಲಿ ಮುದ್ರಣವಾಯಿತು. 1903ರ ಕೊನೆಯಲ್ಲಿ ಕಲ್ಕತ್ತಾದ 'ಇಂಡಿಯನ್ ಮಿರರ್' ಪತ್ರಿಕೆಯ ಒಂದು ಸಂಚಿಕೆಯಲ್ಲಿ ಪ್ರಕಟವಾಯಿತು ಪುನಃ 1905ರ ಏಪ್ರಿಲ್‌ನಲ್ಲಿ ಎಡ್ವರ್ಡ್‌ಪ್ರೆಸ್, ಸುಕ್ಕೂರ್ ಇದರಿಂದ ಕಿರುಹೊತ್ತಿಗೆ ರೂಪದಲ್ಲಿ ಪ್ರಕಾಶವಾಯಿತು. ಅಂದಿನಿಂದ ಇಂಡಿಯಾದ ರಾಜಕೀಯ ಪರಿಸ್ಥಿತಿಯು ಕೆಲವು ವಿಷಯಗಳಲ್ಲಿ ಬದಲಾವಣೆಯಾಗಿದೆ.

## Facts and Figures about India

## ಇಂಡಿಯಾ ದೇಶದ ಸಂಬಂಧವಾದ ವಾಸ್ತವ ಸಂಗತಿಗಳು ಮತ್ತು ಅಂಕಿಗಳು

ಇಂಡಿಯಾ ದೇಶದ ಮೇಲ್ಮೈಯ ವಿಸ್ತಾರವು ಸುಮಾರು 20,00,000 ಚದರ ಮೈಲುಗಳಿವೆ ; ಅಥವಾ ಅಲಾಸ್ಕ, ಓರ್ಗಾನ್, ಮತ್ತು ಕ್ಯಾಲಿಫೋರ್ನಿಯಾ ಇವುಗಳ ವಿಸ್ತಾರವನ್ನು ಕಳೆದುಳಿದ ಅಮೆರಿಕಾದ ಸಂಯುಕ್ತ ಸಂಸ್ಥಾನದ ವಿಸ್ತಾರಕ್ಕೆ ಸರಿ ಸಮವಾಗಿದೆ.

ಜನಸಂಖ್ಯೆಯು ಸುಮಾರು 300,000,000 ಅಥವಾ ಇಡೀ ಮಾನವ ಜನಾಂಗದ ಐದರಲ್ಲಿ ಒಂದು ಭಾಗವಿದೆ. ಪರ್ವತಗಳನ್ನೂ ಅರಣ್ಯಗಳನ್ನೂ ಮರುಭೂಮಿಗಳನ್ನೂ ಸೇರಿಸಿಕೊಂಡರೆ ಸಮಗ್ರ ಭಾರತ ರಾಜ್ಯದಲ್ಲಿ ಒಂದು ಚದರ ಮೈಲಿಗೆ 167 ಜನಸಂಖ್ಯೆ ಇದೆ ; ಅಮೆರಿಕಾದ ಸಂಯುಕ್ತ ಸಂಸ್ಥಾನದಲ್ಲಿ ಇದು ಒಂದು ಚದರ ಮೈಲಿಗೆ 21.4 ಇದೆ. ಬಂಗಾಳ ಪ್ರಾಂತ್ಯದಲ್ಲಿ ಒಂದು ಚದರ ಮೈಲಿಗೆ 588 ಜನಸಂಖ್ಯೆ ಇದೆ. ಪ್ರಪಂಚದ ಇತರ ಭಾಗಗಳಿಗಿಂತಲೂ ಇಂಡಿಯಾದ ಕೆಲವು ಭಾಗಗಳಲ್ಲಿ ಹೆಚ್ಚಾದ ಜನಸಂಖ್ಯೆ ಇದೆ.

ಇಂಡಿಯಾದಲ್ಲಿ ಎಲ್ಲಾ ಬಗೆಯ ವಾಯುಗುಣಗಳಿವೆ. ಆ ದೇಶದ ಒಂದು ಭಾಗದಲ್ಲಿ ಪ್ರಪಂಚದಲ್ಲಿಯೇ ಅತ್ಯಂತ ಭಾರಿಯಾದ ಮಳೆ ಸುರಿತವಿದೆಯೆಂದು ದಾಖಲೆಯಿದೆ. ಇನ್ನೊಂದು ಭಾಗದಲ್ಲಿ ಅನೇಕ ಶತಸಹಸ್ರ ಚದರ ಮೈಲುಗಳ ಪ್ರದೇಶದಲ್ಲಿ ಒಂದು ಹನಿ ಮಳೆ ಬೀಳುವದೂ ಬಹಳ ಅಪರೂಪ.

ಇಂಡಿಯಾದೇಶದಲ್ಲಿ 118 ಪ್ರತ್ಯೇಕ ಭಾಷೆಗಳಿವೆ ; ಇವುಗಳಲ್ಲಿ 59 ಭಾಷೆಗಳಲ್ಲಿ ಪ್ರತಿಯೊಂದನ್ನೂ ಒಂದು ಲಕ್ಷಕ್ಕಿಂತಲೂ ಹೆಚ್ಚು ಜನರು ಮಾತನಾಡುತ್ತಾರೆ.

ಇಪ್ಪತ್ತು ಲಕ್ಷಕ್ಕೂ ಹೆಚ್ಚು ಜನರು ಕ್ರೈಸ್ತರಿದ್ದಾರೆ. ಇವರಲ್ಲಿ ರೋಮನ್

ಕ್ಯಾಥೋಲಿಕ್ಸ್ ಜನರು ಹತ್ತುಲಕ್ಷಕ್ಕೂ ಹೆಚ್ಚು ; ಚರ್ಚ್ ಆಫ್ ಇಂಗ್ಲೆಂಡ್ · 453, 612 ; ಆರ್ಥೋಡಾಕ್ಸ್ ಗ್ರೀಕ್ ಚರ್ಚ್ · 220, 863 ; ಬ್ಯಾಪ್ಟಿಸ್ಟ್ಃ 220,863: ಲುಥೆರನ್ಸ್ : 155,455 , ಪ್ರೆಸ್ಬಿಟೇರಿಯನ್ಸ್ ಮತ್ತು ಇತರ ಕ್ರೈಸ್ತರು; 157,847. ಈ ಕ್ರೈಸ್ತರಲ್ಲಿ ವಿದೇಶೀಯ ಜನ, ಬ್ರಿಟಿಷ್ ಸೈನ್ಯ, ವಿದೇಶೀ ಮಿಷನರಿ ಮತಪ್ರಚಾರಕರು, ಮೊದಲಾದವರೆಲ್ಲಾ ಸೇರಿದ್ದಾರೆ. ಹೀಗೆ ಈ ದೇಶದಲ್ಲಿ ಮತಾಂತರಹೊಂದಿ ಕ್ರೈಸ್ತರಾದವರು ಹೆಚ್ಚು ಸಂಖ್ಯೆ ಇಲ್ಲ . ಮತ್ತು ಇಂಡಿಯಾದಲ್ಲಿ ಮತಾಂತರಹೊಂದಿ ಕ್ರೈಸ್ತರಾದವರು ಅತ್ಯಂತ ನಿಕೃಷ್ಟ ಜಾತಿಯಿಂದ ಬಂದವರು ; ಉತ್ತಮ ಜಾತಿಯವರು ಇದಕ್ಕೆ ಸೇರಿಯೇ ಇಲ್ಲ. ಬ್ರಿಟಿಷ್ ಸರ್ಕಾರವು ಪ್ರತಿ ವರ್ಷವೂ ಕ್ರೈಸ್ತ ಧರ್ಮಕ್ಕಾಗಿ ಇಂಡಿಯಾದ ಖಜಾನೆಯಿಂದ 45,00,000 ರುಪಾಯಿಗಳನ್ನು ಖರ್ಚುಮಾಡುತ್ತಿದೆ.

ಕಳೆದ ಜನಗಣತಿಯಂತೆ, 546,224.964 ಎಕರೆಗಳ ಅಪರಿಮಿತ ಭೂಮಿಯು ಸಾಗುವಳಿಯಲ್ಲಿದೆ ; ಇದು ಜನಸಂಖ್ಯೆಯಲ್ಲಿ ಒಬ್ಬನಿಗೆ (ಸಮೀಪ) 2 ಎಕರೆಗಳು, 22,000,000 ಎಕರೆಗಳಲ್ಲಿ ವರ್ಷಕ್ಕೆ ಎರಡು ಬೆಳೆಗಳನ್ನು ತೆಗೆಯುತ್ತಾರೆ. ವ್ಯವಸಾಯದಲ್ಲಿ 175,735,000 ಜನರು ಪೂರ್ಣವಾಗಿ ನಿರತರಾಗಿದ್ದಾರೆ. ಜಮೀನಿನ ಕೃಷಿಕರ್ಮದಲ್ಲಿ ಹೆಚ್ಚು ಕಡಿಮೆ 25,468,000 ಜನರು ತೊಡಗಿದ್ದಾರೆ. ಜಾನುವಾರುಗಳಲ್ಲಿ 3,646,000 ಜನರು, ಆಹಾರೋತ್ಪತ್ತಿಯಲ್ಲಿ 14,576,000 ಜನರು ಉದ್ಯುಕ್ತರಾಗಿದ್ದಾರೆ. ಮನೆಗೆಲಸಗಳಲ್ಲಿ, ಸೇವಿಸುವವರು ; 11,220,000, ನೆಯ್ಗೆಯ ಕಾರಖಾನೆಗಳಲ್ಲಿ 12,611,000 ಜನರು. ಗಾಜಿನ ಕಾರಖಾನೆಗಳಲ್ಲಿ, ಮಣ್ಣಿನ ಪಾತ್ರೆಗಳ, ಕಲ್ಲು ಗಡಿಗೆ ಮೊದಲಾದ ಕೆಲಸಗಳಲ್ಲಿ 2,361,000 ಜನರು ; ಚರ್ಮದ ಕಾರ್ಖಾನೆಯಲ್ಲಿ 3,285,000 ಜನರು, (ಎಲ್ಲಾ ಮುಹಮ್ಮದೀಯರು). ಲಕ್ಷಾಂತರ ಹಿಂದೂಗಳು ಯಾವ ಕೆಲಸವನ್ನೂ ಎಳ್ಳಷ್ಟೂ ಮಾಡದೆ, ಜನಗಣತಿಯು (ಸೆನ್‌ಸಸ್) ಹೆಸರಿಟ್ಟಿರುವಂತೆ, "disreputable occupations" "ಅಪಖ್ಯಾತಿಯ ವೃತ್ತಿಗಳಲ್ಲಿ" ನಿರರ್ಥಕವಾಗಿ ಬಾಳನ್ನು ಹಾಳುಮಾಡಿಕೊಳ್ಳುತ್ತಿದ್ದಾರೆ. ತಮ್ಮ ಹಿಂದಿನವರಿಂದ ಬಂದ ಕಸಬುಗಳನ್ನು ಮಾಡಲಾರದಿದ್ದರೆ, ಅಂಥಾ ಜನರು ಬೇರೆ ಯಾವ ಕೆಲಸಕ್ಕೂ ಪ್ರಯತ್ನಪಡದೆ, ವ್ಯರ್ಥವಾಗಿ ಕಾಲಕಳೆದು, ಕೂಳಿಗೆ ಮಾತ್ರ ಹೊರೆಯಾಗುತ್ತಾರೆ.

ಇಂಡಿಯಾದಲ್ಲಿರುವ ಒಟ್ಟು 140,496,135 ಸ್ತ್ರೀಯರಲ್ಲಿ 543,495 ಜನರು ಮಾತ್ರ ಓದ–ಬರೆಯ ಬಲ್ಲರು ;—ಇದು ಒಂದು ಸಾವಿರ ಸ್ತ್ರೀಯರಲ್ಲಿ ಒಂದು

ವ್ಯಕ್ತಿಗೂ ಕಡಮೆ ಆಗುತ್ತದೆ. ಒಟ್ಟು 300,000, 000 ಜನ ಸಂಖ್ಯೆಯಲ್ಲಿ ಓದು ಬರಹ ಬಾರದವರು 246,546,175 ಜನರು.

ಕ್ರಿ. ಶ. 1900ರಲ್ಲಿ ದುರ್ಭಿಕ್ಷದಿಂದ 54,000,000 ಜನರು ಬಾಧೆಪಟ್ಟರು. ದೆಹಲಿಯ ದರ್ಬಾರಿನ ವರ್ಷದಲ್ಲಿ ಹೊಟ್ಟೆಗಿಲ್ಲದೆ ಹಸಿವಿನಿಂದ ಸತ್ತವರು 5,000,000 ಜನರು. ಪ್ರತಿ ವರ್ಷವೂ ಕೇವಲ ಜೀವನಕ್ಕೆ ಮಾಡಬೇಕಾಗಿರುವ ಹೋರಾಟವು ಹೆಚ್ಚು ಹೆಚ್ಚು ದಾರುಣವಾಗುತ್ತಿದೆ. ಕೈಗಾರಿಕೆಗಳು ಹೆಚ್ಚಾಗುತ್ತಿದ್ದರೂ ರೈಲ್ವೇ ವ್ಯವಸ್ಥೆಗಳು ಹೆಚ್ಚುತ್ತಿದ್ದರೂ ಸಂಪತ್ತಿನ ಮೂಲಗಳೂ ಉದ್ಯೋಗಗಳೂ ವೇಗವಾಗಿ ಅಭಿವೃದ್ಧಿ ಹೊಂದುತ್ತಿದ್ದರೂ ಕೂಲಿಗಳೂ ಮಜೂರಿಗಳೂ ಸಂಬಳಗಳೂ ಏರುವದಕ್ಕೆ ಬದಲು ಇಳಿಯುತ್ತಿವೆ.

ಇಂಡಿಯಾದಲ್ಲಿ 200,000,000, ಸಂಖ್ಯೆಗಿಂತಲೂ ಹೆಚ್ಚು ಜನರು ಒಂದು ದಿನಕ್ಕೆ ' 5 ಸೆಂಟ್ ' ಗಿಂತಲೂ ಕಡಮೆ ವೆಚ್ಚದಿಂದಲೂ 100,000,000 ಗಿಂತಲೂ ಹೆಚ್ಚು ಜನರು 3 ' ಸೆಂಟ್ ' ಗಿಂತಲೂ ಕಡಮೆ ವೆಚ್ಚದಿಂದಲೂ 50,000,000 ಗಿಂತಲೂ ಹೆಚ್ಚು ಜನರು ದಿನಕ್ಕೆ 1 ಸೆಂಟ್ ಗಿಂತಲೂ ಅಲ್ಪ ವೆಚ್ಚದಿಂದಲೂ ಬದುಕುತ್ತಿದ್ದಾರೆ. ದೇಶದ ಸಮಗ್ರ ಜನ ಸಂಖ್ಯೆಯಲ್ಲಿ ಕೊನೆಯ ಪಕ್ಷ ಮೂರನೇ ಎರಡು ಭಾಗವಾದರೂ ಅವರ ಜೀವಮಾನದಲ್ಲಿ ಯಾವ ವರ್ಷವೂ ಮಾನವ ಶರೀರಕ್ಕೆ ಅವಶ್ಯವಾದಷ್ಟು ಪೋಷಕದ್ರವ್ಯವನ್ನು ಒದಗಿಸಬಲ್ಲ ಸಾಕಷ್ಟು ಆಹಾರ ಉಳ್ಳವ ರಾಗಿಲ್ಲ. ನಾಡಿನ ಅನೇಕ ಭಾಗಗಳಲ್ಲಿ ಅನೇಕ ಕುಟುಂಬಗಳು ಸರಾಸರಿ ಕಾಲು ಎಕರೆ ಜಮೀನಿನ ಮೇಲೂ ಇದಕ್ಕಿಂತಲೂ ಹೆಚ್ಚು, ಲಕ್ಷಾಂತರ ಜನರು ಅರ್ಧ ಎಕರೆ ಜಮೀನಿನ ಮೇಲೂ ಜೀವಿಸುವದಕ್ಕೆ ಒತ್ತಾಯಿಸಲ್ಪಟ್ಟಿದ್ದಾರೆ.

ಇಂಡಿಯಾದ ಹತ್ತಿಯ ಹೊಲಗಳಲ್ಲಿ ಕೆಲಸಮಾಡುವ ಹೆಣ್ಣಾಳು–ಗಂಡಾಳು ಗಳಿಗೆ ತಿಂಗಳಿಗೆ ಒಂದೂವರೆ ಡಾಲರಿಗಿಂತಲೂ ಹೆಚ್ಚುಕೊಡುವದಿಲ್ಲ. ಒಂದು ಕ್ಷೌರಕ್ಕೆ ಒಂದು ಸೆಂಟ್ ಕೊಡುತ್ತಾರೆ. ಕಾಗದ ಪತ್ರಗಳನ್ನು ಹೊತ್ತೊಯ್ದು ಹಂಚುವ ಸರ್ಕಾರಿ ಪೋಸ್ಟ್‌ಮೆನ್‌ಗಳು ತಿಂಗಳಿಗೆ ಪರಮಾವಧಿ 12 ರೂಪಾಯಿಗಳು ಅಥವಾ 3 ಡಾಲರ್ ಸಂಬಳ ಪಡೆಯುತ್ತಾರೆ. ಸಶಕ್ತ ಶರೀರವುಳ್ಳ ಕುಶಲಿಗಳಾದ ಯಂತ್ರ ಕರ್ಮಿಗಳೂ ಕಲ್ಲು ಕೆಲಸದವರೂ ಬಡಗಿಗಳೂ ಕಮ್ಮಾರರೂ ತಿಂಗಳಿಗೆ 2 ಅಥವಾ 3 ಡಾಲರಿಗಿಂತಲೂ ಹೆಚ್ಚು ಮಜೂರಿಯನ್ನು ಪಡೆಯುವದಿಲ್ಲ. ಮನೆಯೊಳಗಿನ ಉದ್ಯೋಗಗಳುಳ್ಳ ಲೆಕ್ಕಪತ್ರಗಳನ್ನಿಡುವ ಗುಮಾಸ್ತೆಗಳೂ ತಿಂಗಳಿಗೆ

4ರಿಂದ 5 ಡಾಲರ್ ವರೆಗೆ ಸಂಬಳ ತೆಗೆದುಕೊಳ್ಳುತ್ತಾರೆ. ಇಂಡಿಯಾದಲ್ಲಿ ಎಲ್ಲಾ ಕೂಲಿಕಾರರ ಒಟ್ಟು ಸಂಪಾದನೆಯನ್ನು ತೆಗೆದುಕೊಂಡರೆ ಅವರ ತಿಂಗಳ ಪ್ರತಿಫಲವು, ಅಮೆರಿಕಾದ ಸಂಯುಕ್ತ ಸಂಸ್ಥಾನದಲ್ಲಿ ಅದೇ ವರ್ಗದ ಜನರು ಗಳಿಸುವ ಒಂದು ದಿನದ ವೇತನಕ್ಕೆ ಸಮನಾಗಬಹುದು.

ಪೂರ್ಣ ಜನಸಂಖ್ಯೆಯ ಮೂರನೇ ಎರಡು ಭಾಗದ ಜನರು ತಮ್ಮ ಅಭ್ಯುದಯಕ್ಕೆ ಅಥವಾ ಜೀವನಕ್ಕೆ ಮಳೆಯನ್ನೇ, ಅವಲಂಬಿಸಿದ್ದಾರೆ. ಮಳೆ ಬಾರದಿದ್ದರೆ ಕ್ಷಾಮ ನಿಶ್ಚಿತವಾದುದು. ಕ್ಷಾಮ ಬಂದಾಗ ಹಸಿವಿನಿಂದ ಉಪವಾಸ ಸಾಯದಿರುವದಕ್ಕೆ ಆ ಜನರು ಸಾಕಷ್ಟು ಆಹಾರವನ್ನು ಸಂಗ್ರಹಿಸಿಟ್ಟುಕೊಳ್ಳುವಷ್ಟು ಸಂಪಾದಿಸಲಾರರು. ಬರಗಾಲದಲ್ಲಿ ಸಂಕಟಪಡುವದಕ್ಕೆ ಆಹಾರದ ಕೊರತೆಗಿಂತಲೂ ಹೆಚ್ಚಾಗಿ ಹಣದ ಕೊರತೆ ಕಾರಣವಾಗುತ್ತದೆ. ಏಕೆಂದರೆ ಸಾಮಾನ್ಯವಾಗಿ ಇಂಡಿಯಾದ ಒಂದುಭಾಗದಲ್ಲಿ ದುರ್ಭಿಕ್ಷವಿದ್ದಾಗ ಬೇರೆ ಭಾಗಗಳಲ್ಲಿ ಸಾಕಷ್ಟು ಅಥವಾ ಅಗತ್ಯಕ್ಕಿಂತಲೂ ಹೆಚ್ಚಾಗಿ ಆಹಾರವು ಬೆಳೆಯುತ್ತದೆ.

ಬ್ರಿಟಿಷ್ ಸರ್ಕಾರವು ತಾ 24–3–1904 ಈ ಒಂದು ವಾರದಲ್ಲಿ ರೈಲ್ವೇ ಇಲಾಖೆಯಿಂದ ಖರ್ಚು ಕಳೆದು 7,600,000 ಡಾಲರುಗಳ ಲಾಭವನ್ನು ಪಡೆಯಿತು. ಇದು ತಪ ದೆ ಸಂತತವಾಗಿ ಹೆಚ್ಚುತ್ತಲೇ ಇದೆ.

ಇಂಡಿಯಾದಲ್ಲಿ, ಸರ್ಕಾರಿ ನೌಕರರಲ್ಲಿ ಸೇಕಡ 95 ಜನರು ದೇಶೀಯರು. ಸಮಸ್ತ ಸರ್ಕಾರಿ ನೌಕರರಿಗೆ ಸಲ್ಲುವ ಒಟ್ಟು ಸಂಬಳದಲ್ಲಿ ಶೇಕಡ 35 ಮಾತ್ರ ಪಡೆಯುತ್ತಾರೆ ; ಉಳಿದ ಸೇಕಡ 65, ಇಂಗ್ಲಿಷ್ ಜನಾಂಗದ ನೌಕರರಿಗೆ ಸಲ್ಲುತ್ತದೆ. ಆದರೆ ಇವರ ಸಂಖ್ಯೆ, ಸೇಕಡ 5 ಮಾತ್ರ.

1903ನೇ ವರ್ಷ ಎಲ್ಲಾ ವಿದೇಶೀಯ ಮಿಷನರಿ ಸಂಸ್ಥೆಗಳ ಉತ್ಪತ್ತಿಯು 20,298,057 ಡಾಲರುಗಳಾಗಿತ್ತು. ಇದರಲ್ಲಿ ಬಹು ಭಾಗ ಇಂಡಿಯಾದಲ್ಲಿಯೇ ವಿನಿಯೋಗವಾಯಿತು.

ಇಂಡಿಯಾದಲ್ಲಿ ಬ್ರಿಟಿಷ್ ಬಂಡವಾಳಷಾಹಿಯು ಕ್ರಿ. ಶ. 1600ರಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ಸ್ಥಾಪನೆಯಿಂದ, 70,000 ಪೌಂಡುಗಳ ಬಂಡವಾಳದಲ್ಲಿ ಪ್ರಾರಂಭವಾಯಿತು. ಈಸ್ಟ್ ಇಂಡಿಯಾ ಕಂಪೆನಿಯ ವ್ಯಾಪಾರವು 1833ರಲ್ಲಿ

ರದ್ದಾಯಿತು , ಅಂದಿನಿಂದ 1858ರ ವರೆಗೆ ಕಂಪೆನಿಯೇ ಇಂಡಿಯಾದೇಶವನ್ನು ಸುಮ್ಮನೆ ಆಳುತ್ತಿದ್ದಿತು ; 1857ರ ಪ್ರಸಿದ್ಧ ಸಿಪಾಯಿದಂಗೆಯ ತರುವಾಯ 1858ರಲ್ಲಿ ಆ ಕಂಪೆನಿಯೇ ವಜಾ ಮಾಡಲ್ಪಟ್ಟಿತು ; ಆದರೆ ಅದರ ಆಡಳಿತ ನೀತಿಯು ಮಾತ್ರ ಇನ್ನೂ ಉಳಿದಿದೆ. ಕಂಪೆನಿಯು ಬಂಡವಾಳವನ್ನು, ಇಂಡಿಯಾ ದೇಶವು ಅವರಿಂದ ತೆಗೆದುಕೊಂಡ ಸಾಲವನ್ನಾಗಿ ಪರಿಗಣಿಸಿ, ಇಂಡಿಯಾದ ತೆರಿಗೆಗಳಿಂದ ಬಡ್ಡಿಯನ್ನೂ ಸೇರಿಸಿ, ಅವರು ಕೊಟ್ಟ ಸಾಲದ ರೂಪದಿಂದ ಕಂಪೆನಿಯವರಿಗೆ ವಾಪಸು ಪಾವತಿ ಮಾಡಿತು. ಚಕ್ರವರ್ತಿಯು ಈಸ್ಟ್ ಇಂಡಿಯಾ ಕಂಪೆನಿಯಿಂದ ಇಂಡಿಯಾ ಸಾಮ್ರಾಜ್ಯವನ್ನು ಕೊಂಡುಕೊಂಡನು ; ಆದರೆ ಇಂಡಿಯಾದ ಬಡ ಜನರು ಆ ಮೌಲ್ಯದ ಹಣವನ್ನು ತೆತ್ತರು. ಇಂಡಿಯಾ ತೆರಬೇಕಾಗಿದ್ದ ಸಾಲವು 1857ರಲ್ಲಿ 51,000,000 ಪೌಂಡುಗಳು ಇದ್ದುದು 1862ರಲ್ಲಿ 97,000,000 ಪೌಂಡು ಗಳಿಗೆ ಏರಿತು. ಅಂದಿನಿಂದ ಈಚೆಗೆ 40 ವರ್ಷಗಳ ಶಾಂತಿ ಕಾಲದಲ್ಲಿ ಇಂಡಿಯಾ ಕೊಡಬೇಕಾದ ಸಾಲವು ಎಡೆಬಿಡದೆ ಬೆಳೆದಿದೆ 1901ರಲ್ಲಿ ಅದು 200,000,000 ಪೌಂಡುಗಳಾಯಿತು. ಇದರ ಮೇಲೆ ಭಾರತದ ಬಡ ಜನರು ಪ್ರತಿವರ್ಷವೂ 3ರಿಂದ 4 ದಶಲಕ್ಷ ಪೌಂಡುಗಳ ಸ್ಟೆರ್ಲಿಂಗ್ ಅಥವಾ 15ರಿಂದ 20 ದಶಲಕ್ಷ ಡಾಲರುಗಳ ಬಡ್ಡಿಯ ದರವನ್ನು ತೆರಬೇಕಾಗಿದೆ. ಇದು ಪ್ರತಿವರ್ಷವೂ ಬಡ್ಡಿಯನ್ನು ತೆರ ಬೇಕಾಗಿರುವ ಒಂದು ಸಹಸ್ರ ದಶಲಕ್ಷ ಡಾಲರುಗಳ ಸಾಲಕ್ಕೆ ಸಮವಾಗುತ್ತದೆ. ಇಷ್ಟು ಭಯಂಕರ ಸಾಲದ ಭಾರವನ್ನು ಹೊತ್ತ ಯಾವ ದೇಶವು ತಾನೇ ಈ ಪ್ರಪಂಚ ದಲ್ಲಿ ತಲೆಯೆತ್ತ ಬಲ್ಲದು ? ಗ್ರೇಟ್ ಬ್ರಿಟನ್ನಿಗೆ ಇಂಡಿಯಾದ ರಾಜ್ಯಾದಾಯದಿಂದ ಪ್ರತಿ ವರ್ಷವೂ—ಸ್ವಂತ ಮನೆಯಾದ ಸ್ವದೇಶದ ವೆಚ್ಚಕ್ಕೆ- ತೆರಬೇಕಾದ ಕಾಣಿಕೆಯು 16,000,000 ಪೌಂಡುಗಳಿಗೆ ಏರಿದೆ. ಎಲ್ಲಾ ಉನ್ನತ ಅಧಿಕಾರ ಸ್ಥಾನಗಳ ಮೇಲೂ ವಾಸ್ತವವಾಗಿ ಏಕಸ್ವಾಮ್ಯವನ್ನು ಸ್ಥಾಪಿಸಿರುವ ಯೂರೋಪಿಯನ್ ಆಫೀಸರುಗಳ ವೇತನವು 10,000,000, ಪೌಂಡುಗಳು ಅಥವಾ 50,000,000 ಡಾಲರುಗಳಾಗುತ್ತವೆ.

ಈಗ ಇಂಡಿಯಾ ದೇಶದ ನಿವ್ವಳ ರಾಜ್ಯಾದಾಯವಾಗಿರುವ 44,000,000, ಪೌಂಡುಗಳು ಪ್ರತಿವರ್ಷವೂ ಇಂಡಿಯಾ ದೇಶದ ಹೊರಗೆ ಹರಿದು ಹೋಗುತ್ತದೆ.

(ಸರ್ ರೊಮೇಶ್ ದತ್ ಸಿ. ಐ. ಇ. ಬರೆದಿರುವ "The Economic History of British India" by Sir Romesh Dutt C.I.E. "ಬ್ರಿಟೀಷ್ ಇಂಡಿಯಾದ ಆರ್ಥಿಕ ಇತಿಹಾಸ" ಎನ್ನುವ ಮತ್ತು ಇಂಗ್ಲೆಂಡ್‌ನಲ್ಲಿ

ಪ್ರಕಟವಾಗಿರುವ ಪುಸ್ತಕದ ಅಧಿಕಾರಯುಕ್ತ ಆಧಾರದ ಮೇಲೆ, ಮೇಲಿನ ವಿಷಯಗಳನ್ನು ಕೊಟ್ಟಿದೆ.

ಇಂಡಿಯಾದಲ್ಲಿ ಕ್ರಿ.ಶ. 1901ರಲ್ಲಿ ವಿಧವೆಯರ ಸಂಖ್ಯೆ 5,439,360 ಇತ್ತು. ಬಂಗಾಳ ಪ್ರಾಂತ್ಯದಲ್ಲಿಯೇ 265,292 ಬಾಲ ವಿಧವೆಯರು ಇದ್ದಾರೆ.

## Indian Charity

## ಭಾರತದ ದಾನಶೀಲತೆ

ಭಾರತದ ಒಂದು ವೃತ್ತಪತ್ರಿಕೆಯಲ್ಲಿ ಮುದ್ರಣವಾದ, ಲಂಡನ್ನಿನಲ್ಲಿ ಒಬ್ಬ ಇಂಗ್ಲಿಷ್ ಮಹಿಳೆಯು ಮಾಡಿದ ಉಪನ್ಯಾಸದಿಂದ ರಾಮನು ಈಗ ಸ್ವಲ್ಪ ಓದುತ್ತಾನೆ. ಭಾರತದಲ್ಲಿಯ ಜೀವನ ರೀತಿಯ ವಿಷಯಕ್ಕೆ ಈ ದೇಶದಲ್ಲಿ ಹರಡಿರುವ ತಪ್ಪು ಅಭಿಪ್ರಾಯಗಳ ಮತ್ತು ಸುಳ್ಳು ಭಾವನೆಗಳ ವಿಚಾರವನ್ನು ತಿಳಿಸುವದಕ್ಕಾಗಿ ರಾಮನು ಈ ಉಪನ್ಯಾಸದಿಂದ ಓದುತ್ತಾನೆ. ಭಾರತಕ್ಕೆ ಭೇಟಿಯನ್ನು ಕೊಟ್ಟ ಜನರು ಯಾವ ಕೆಲಸವನ್ನು ಮಾಡುವದಕ್ಕೂ ಅಸಮರ್ಥ ರಾಗುತ್ತಾರೆ ಎಂಬ ಭಾವನೆಯು ಕೆಲವರಿಗಿದೆ. ಅವರ ಜೊತೆಗೆ ಯಾವ ಅಮೆರಿಕನ್‌ನೂ ಬೆರೆಯುವದಕ್ಕೆ ಸಾಧ್ಯವಿಲ್ಲದಷ್ಟು ಉಗ್ರವಾಗಿ ಜಾತಿಪದ್ಧತಿಯು ಹಾವಳಿ ಮಾಡುತ್ತಿದೆಯೆಂದೂ ಅವರ ಅಭಿಪ್ರಾಯವಿದೆ. ಭಾರತೀಯರ ಜೊತೆಗೆ ಎಂದೂ ಸಂಪರ್ಕ ಹೊಂದದಿರುವ ಕೆಲವು ಜನರಿಂದ ಇಂಥಾ ಹಲವು ಕಲ್ಪನೆಗಳು ಪ್ರಸಾರವಾಗಿವೆ.

ನಾವು ಪ್ರೀತಿಸುವ ಯಾರಿಗಾಗಿ ಆದರೂ ಸಾಯುವದಾದರೆ ಎಂಥಾ ಶ್ಲಾಘ್ಯವಾದ ಕಾರ್ಯವಾದೀತು ! ಓ ಅದೆಂಥಾ ಪರಮಸುಖವು ! ದಿವ್ಯಾನಂದವು !

He alone loves, who is willing to lay down his life for the object of his love.

" ತನ್ನ ಪ್ರೇಮದ ವಸ್ತುವಿಗಾಗಿ, ಯಾವನು ತನ್ನ ಪ್ರಾಣವನ್ನು ಪಣವೊಡ್ಡಲು ಇಚ್ಛಿಸುತ್ತಾನೋ–ಬಲಿಗೊಡುವದಕ್ಕೆ ಇಷ್ಟಪಡುತ್ತಾನೋ–ಅವನೊಬ್ಬನೇ ಪ್ರೇಮಿಸುತ್ತಾನೆ. " ಅದು ಇಂಥಾ ಪ್ರೇಮವೇ ಒಬ್ಬನು ಸಾರ್ಥಕವಾಗಿ ಬಾಳುವುದಕ್ಕೂ ಮಹತ್ತಾದ ಸೇವೆಗಳನ್ನು ಮಾಡುವದಕ್ಕೂ ಪ್ರೇರಿಸುತ್ತದೆ. ಇಂಥಾ ಪ್ರೇಮವೇ ಈಗ ಭಾರತಕ್ಕೆ ಅಗತ್ಯವಾಗಿದೆ. ಭಾರತಕ್ಕೆ ಹೋಗಿ, ಅಲ್ಲಿ ಕೆಲಸಮಾಡಬಲ್ಲ, ಅಂಥ ಸ್ತ್ರೀಪುರುಷರ ಪ್ರೇಮವೇ ಈಗ ಭಾರತಕ್ಕೆ ಅವಶ್ಯವಾಗಿದೆ.

ಭಾರತದಲ್ಲಿ ಜೀವನಕ್ರಮವನ್ನು ಕಣ್ಣಿಟ್ಟು ನೋಡದಿದ್ದರೂ ಅಲ್ಲಿಯೇ ಜೀವಿಸಿರುವ ಜನರಿಂದ ಅನೇಕ ತಪ್ಪಾದ ವರ್ತಮಾನಗಳು ಹರಡುತ್ತವೆ. ಮೇಣಗ ಪಟದಿಂದ ಸುತ್ತಲ್ಪಟ್ಟಿರುವ ಪುಸ್ತಕವನ್ನು ನೀರಿನಲ್ಲಿ ಮುಳುಗಿಸಿಟ್ಟರೆ ಸುತ್ತಲೂ ನೀರಿದ್ದರೂ ಹೇಗೆ ಅದು ನೀರಿನಿಂದ ತೊಯ್ಯುವದಿಲ್ಲವೋ ಹಾಗೆ ಭಾರತದಲ್ಲಿ ಜೀವಿಸುವ ಕೆಲವು ಜನರು, ತಮ್ಮ ಸುತ್ತಲೂ ಇರುವ ಜನರೊಡನೆ ಸೇರಿ, ಬೆರೆದು, ಒಂದಾಗುವದಿಲ್ಲ ಭಾರತದಲ್ಲಿ ಭಾರತೀಯಳಂತೆಯೇ—ಆ ಪದ್ಧತಿಯಲ್ಲಿಯೇ—ಜೀವಿಸಿದ್ದ ಒಬ್ಬ ಹೆಂಗಸು ಅವಕ್ಕೆ ನಿದರ್ಶನವಾಗಿ ಇಲ್ಲಿದ್ದಾಳೆ. ಈ ಹೆಂಗಸಿನಂತೆ ಅಮೆರಿಕನ್‌ರು ಭಾರತಕ್ಕೆ ಹೋಗಿ ಬಾಳಬೇಕೆಂದು ರಾಮನು ಇಚ್ಛಿಸುತ್ತಾನೆ. ನೀವು ಅಲ್ಲಿ ನಿಜವಾದ ಕಾರ್ಯಕರ್ತರಾದರೆ ನಿಮ್ಮ ಜೇಬಿನಿಂದ ಯಾವ ಹಣವನ್ನೂ ಖರ್ಚು ಮಾಡಬೇಕಾದ ಪ್ರಸಂಗ ಬರುವದಿಲ್ಲ. ಅಲ್ಲಿಯ ಜನರು ಲಕ್ಷಾಂತರ ಜನರನ್ನು ಪೋಷಿಸುತ್ತಿದ್ದಾರೆ. ಅಲ್ಲಿಯ ಜನರು ಬಹಳ ಬಡವರು, ಆದರೆ ಅವರು ಬಹಳ ಉದಾರಿಗಳು.

ಭಾರತದಲ್ಲಿ ಸಂನ್ಯಾಸಿಗಳು ಹಣವನ್ನಿಟ್ಟುಕೊಂಡಿರುವದನ್ನು ರಾಮನು ಎಂದೂ ನೋಡಿಲ್ಲ. ಅವರು ಬೀದಿಗಳ ಮೇಲೆ ಬಂದರೆ, ಅವರು ತಮ್ಮ ಹಸಿವನ್ನು ಶಮನಮಾಡಿಕೊಳ್ಳುವದಕ್ಕಾಗಿ ಭಿಕ್ಷೆ ಬೇಡುವದಕ್ಕಾಗಿಯೇ ಬರುವರೆಂದು ಜನರಿಗೆಲ್ಲಾ ಗೊತ್ತಿದೆ. ಹಸಿವಿನಿಂದ ಬಂದವರಿಗೆ ಉಣಿಸುವದೂ ತನ್ನ ಮನೆಯ ಮುಂದೆ ಹಾದು ಹೋಗುವ ಬಡವರಿಗೂ ಬೇಡುವವರಿಗೂ ಸಹಾಯಮಾಡುವದೂ ಅಥವಾ ಸೇವಿಸುವದೂ ದೇವರು ತನಗೆ ನೇಮಿಸಿರುವ ಕರ್ತವ್ಯವೆಂದು ಪ್ರತಿಯೊಬ್ಬ ಭಾರತೀಯ ಗೃಹಿಣಿಯೂ ಭಾವಿಸುತ್ತಾಳೆ. ಹಸಿದು ಬಂದವರಿಗೆ ಉಣಿಸುವದಕ್ಕೆ ಏನೂ ಇಲ್ಲದ ಮನೆಯ ಮುಂದೆ ಒಬ್ಬ ಸಂನ್ಯಾಸಿಯು ಹಾದು ಹೋಗುತ್ತಿದ್ದರೆ, ಆ ಮನೆಯ ಗೃಹಿಣಿಯ ಮನಸ್ಸಿನಲ್ಲಿ ಎಷ್ಟು ವೇದನೆಯಾಗುತ್ತದೆ ಎಂಬದನ್ನು ರಾಮನು ಬಲ್ಲನು. ಒಬ್ಬ ಬಡ ಯತಿಗೆ ನೀಡುವದಕ್ಕೆ ಆಹಾರವಿಲ್ಲವಾದರೆ ಆಕೆಯ ಕಣ್ಣುಗಳಿಂದ ಕನಿಕರದ ಕಂಬನಿಗಳು ಧಾರಾಕಾರವಾಗಿ ಹರಿಯುತ್ತವೆ. ಹಸಿದ, ನಿರ್ಗತಿಕ ವೇಷದಲ್ಲಿರುವ ಯಾರನ್ನಾದರೂ ಭಾರತದಲ್ಲಿ ಭಿಕ್ಷುವೆಂದರೆ ಸಂನ್ಯಾಸಿಯೆಂದೇ ಸ್ವಾಮಿಯೆಂದೇ ಅರ್ಥವಲ್ಲ. ನೀವು ಭಾರತದಲ್ಲಿರುವಾಗ ಯಾರ ಮನೆಗಾದರೂ ಹಸಿದು ಬಂದರೆ, ನಿಮ್ಮನ್ನು ಭಿಕ್ಷುವಿನಂತೆ ಭಾವಿಸಿ, ನಿಮಗೆ ಭಕ್ತಿಗೌರವಗಳಿಂದ ಊಟಕ್ಕೆ ಬಡಿಸುತ್ತಾರೆ. ಯಾರಲ್ಲಿ ಹಣವಿಲ್ಲವೋ ವಸ್ತ್ರವಿಲ್ಲವೋ ಅವನನ್ನು ಭಿಕ್ಷುಕನೆಂದು—ಭಿಕ್ಷುವೆಂದು, ಸಾಧುವೆಂದು, ಯತಿಯೆಂದು—ಗೌರವಿಸುತ್ತಾರೆ.

## Indian Wifehood

## ಭಾರತೀಯ ಪತ್ನೀತ್ವ

ಭಾರತದಲ್ಲಿ ಪತ್ನಿಯನ್ನು ಗೌರವಿಸುವದಿಲ್ಲವೆಂದೂ ಪ್ರೀತಿಸುವದಿಲ್ಲವೆಂದೂ ಅಮೆರಿಕಾದಲ್ಲಿಯೂ ಇಂಗ್ಲೆಂಡಿನಲ್ಲಿಯೂ ಅತಿಸಾಮಾನ್ಯವಾಗಿ ಆರೋಪಿಸುತ್ತಾರೆ. ಇದು ಬಹಳ ತಪ್ಪು ಅಭಿಪ್ರಾಯ; ಏಕೆಂದರೆ ಈ ದೇಶಕ್ಕಿಂತಲೂ ಭಾರತದಲ್ಲಿ ಹೆಂಡತಿಯನ್ನು ಹೆಚ್ಚಾಗಿ ಪ್ರೀತಿಸಿ ಗೌರವಿಸುತ್ತಾರೆ. ಈ ದೇಶದಲ್ಲಿ (ಅಮೆರಿಕಾದಲ್ಲಿ) ಎಲ್ಲರೆದುರಿಗೆ, ಹೆಂಡತಿಯನ್ನು ಬಹಿರಂಗವಾಗಿ ಪ್ರೀತಿಸಿ, ಮುತ್ತಿಟ್ಟುಕೊಂಡು, ಮುದ್ದಾಡುತ್ತಾರೆ; ಆದರೆ ಅಂತರಂಗದಲ್ಲಿ ಹೆಂಡತಿಯನ್ನು ತಿರಸ್ಕರಿಸುತ್ತಾರೆ. ಭಾರತದಲ್ಲಿ ಗಂಡನು ಬಹಿರಂಗದಲ್ಲಿ ಹೆಂಡತಿಗೆ ಹೆಚ್ಚು ಗೌರವವನ್ನು ತೋರಿಸಂವದಿಲ್ಲ, ಆದರೆ ಅವನ–ಅಂತರಂಗದ ಹೃದಯಾಂತರಾಳದಲ್ಲಿ ಆಕೆಯನ್ನು ಆರಾಧಿಸುತ್ತಾನೆ.

ಈ ದೇಶದಲ್ಲಿ ಖಾಸಗಿಯಾಗಿ ಹೆಂಡತಿಯೊಡನೆ ಇಟ್ಟುಕೊಳ್ಳುವ ನಡೆವಳಿಕೆಗಿಂತಲೂ ಪ್ರಕಟವಾಗಿ ಆಕೆಯೊಡನೆ ತೋರಿಸುವ ಹೊರಗಿನ ನಡೆವಳಿಕೆಯು ಬಹಳ ಮುಖ್ಯ. ಆದರೆ ಭಾರತದಲ್ಲಿ ಹಾಗಿಲ್ಲ; ಅವನು ಆಕೆಗೆ ಸಾರ್ವಜನಿಕರೆದುರಿನಲ್ಲಿ ಹೆಚ್ಚು ಗಮನವನ್ನು ಕೊಡುವದಿಲ್ಲ, ಆದರೆ ಪತಿಯು ತನ್ನ ಪತ್ನಿಯ ಹಿತಕ್ಕಾಗಿ ತನ್ನ ಸ್ವಂತ ರೀತಿಯಲ್ಲಿ, ಎಲ್ಲವನ್ನೂ ಬಲಿಕೊಡುತ್ತಾನೆ. ಆಕೆಯ ಸುಖವನ್ನು ಹೆಚ್ಚಿಸುವದಕ್ಕಾಗಿ ಎಷ್ಟಾದರೂ ಕಷ್ಟಪಡುವದಕ್ಕೆ ಹಿಂಜರಿಯುವದಿಲ್ಲ. ಆದರೆ ಒಂದು ವ್ಯತ್ಯಾಸವೆಂದರೆ, ಭಾರತದ ಸ್ತ್ರೀಯರಿಗೆ ಪುರುಷರಷ್ಟು ವಿದ್ಯೆಯನ್ನು ಕಲಿಸುವದಿಲ್ಲ. ಆದರೆ, ಈ ದೇಶದಲ್ಲಿಯಾದರೂ ಪುರುಷರು ಯಾವ ಮಟ್ಟದ ವರೆಗೆ ಶಿಕ್ಷಣವನ್ನು ಪಡೆಯುತ್ತಾರೋ ಆ ಮಟ್ಟದವರೆಗೆ ಸ್ತ್ರೀಯರಿಗೆ ಶಿಕ್ಷಣವನ್ನು ಕೊಡುವರೆ ? ಈ ದೇಶದಲ್ಲಿಯ ವಿದ್ಯೆಯ ಮಟ್ಟಕ್ಕೆ ಭಾರತದ ಪುರುಷರಾಗಲೀ ಸ್ತ್ರೀಯರಾಗಲೀ ಶಿಕ್ಷಣವನ್ನು ಪಡೆಯುವದಿಲ್ಲ.

ಇವತ್ತು, ಭಾರತದಲ್ಲಿಯ ವಿವಾಹಸಂಬಂಧಕ್ಕೆ ಎಲ್ಲಾ ದೂಷಣೆಯನ್ನೂ

ಕೊಡುತ್ತಿದ್ದಾರೆ ; ಆದರೆ ಇದು ಸರಿಯಲ್ಲ ಆ ಸಮಸ್ಯೆಗೆ ಸರಿಯಾದ ಪರಿಹಾರ ಇದಲ್ಲ.

ಭಾರತದಲ್ಲಿ ಒಬ್ಬ ಮನುಷ್ಯನು ತನ್ನ ಪತ್ನಿಯನ್ನು ಈಕೆ 'ನನ್ನ ಹೆಂಡತಿ' ಎಂದು, ಎಂದೂ ಕರೆಯಲು ಧೈರ್ಯಮಾಡಲಾರನು, ಹಾಗೆಂದು ಸೂಚಿಸಲಾರನು ಅಂಥಾ ಮಾತನ್ನು ಅಶ್ಲೀಲವೆಂದೂ ಅಸಹ್ಯವೆಂದೂ ಗ್ರಾಮೀಣವೆಂದೂ ದೈವ ದ್ರೋಹವೆಂದೂ ನಾಚಿಕೆಗೇಡಾದುದೆಂದೂ ಎಣಿಸುತ್ತಾರೆ. ಭಾರತದಲ್ಲಿ ಪುರುಷರು ತಮ್ಮ ಪತ್ನಿಯರಿಗೆ ಈ ಬಗೆಯ ಮಾತುಗಳನ್ನು ಎಂದೂ ಬಳಸುವದಿಲ್ಲ. ಪತ್ನಿಯ ಸಂಬಂಧವಾಗಿ ಪುರುಷನು ಮಾತನಾಡಬೇಕಾದರೆ, ಆಕೆ ತನ್ನ ಮಗನ ತಾಯಿಯೆಂದು, "ನನ್ನ ಕೃಷ್ಣನ ತಾಯಿ, ಅಥವಾ ನನ್ನ ರಾಮನ ತಾಯಿ ಇತ್ಯಾದಿ" ಎಂದು ಗೌರವದಿಂದ ಸೂಚಿಸುತ್ತಾನೆ, ಸಂಬೋಧಿಸುತ್ತಾನೆ.

*  *  *  *

ಒಂದು ಗುಡಸಲಿನಲ್ಲಿ ಒಬ್ಬ ಹುಡುಗನು ಪ್ಲೇಗುರೋಗದಿಂದ ನರಳುತ್ತಿದ್ದನು ಭಾರತದಲ್ಲಿ, ಪ್ಲೇಗುರೋಗಿಯ ಹತ್ತಿರ, ಕುಟುಂಬದವರಲ್ಲಿ ಯಾರು ಬರುವದಕ್ಕೂ ಅವಕಾಶಕೊಡಬಾರದೆಂಬ ನಿಯಮವಿದೆ ಆದರೆ ಆ ಬಾಲಕನ ರೋಗವು ಉಲ್ಬಣವಾಗಿ ಅವನು ಬದುಕುವ ಭರವಸೆಯು ಕಡಮೆಯಾದುದರಿಂದ ಅವನ ತಾಯಿಯು ಆ ಕುಟೀರದ ಒಳಗೆಹೋಗಿ ಅವನನ್ನು ಉಪಚರಿಸುತ್ತಿದ್ದಳು. ಕೊನೆಗೆ ಆ ಹುಡುಗನು ಆ ತನ್ನ ತಾಯಿಯ ಪಾದಗಳ ಮೇಲೆ ತಲೆಯನ್ನಿಟ್ಟುಕೊಂಡು ಪ್ರಾಣ ಬಿಟ್ಟನು. ಕ್ರೈಸ್ತನೊಬ್ಬನು ಕ್ರಿಸ್ತನ ಪಾದಗಳ ಮೇಲೆ ತಲೆಯನ್ನಿಟ್ಟುಕೊಂಡು ಪ್ರಾಣಬಿಡುವದು ಎಷ್ಟು ಪವಿತ್ರವೆಂದು ಎಣಿಸಲ್ಪಡುತ್ತದೆಯೋ ಹಿಂದೂ ಧರ್ಮದ ಪ್ರಕಾರ, ತಾಯಿಯ ಪಾದಗಳ ಮೇಲೆ ತಲೆಯನ್ನಿಟ್ಟುಕೊಂಡು ಪ್ರಾಣಬಿಡುವದೂ ಅಷ್ಟೇ ಪವಿತ್ರವೆಂದು ಭಾವಿಸಲ್ಪಡುತ್ತದೆ

ಈ ದೇಶದಲ್ಲಿ ನೀವು "The Father who art in Heaven" "ಸ್ವರ್ಗದಲ್ಲಿರುವ ತಂದೆ" ಎಂದು ದೇವರನ್ನು ತಂದೆಯೆಂಬ ಭಾವನೆಯಿಂದ ಪೂಜಿಸುತ್ತೀರಿ. ಭಾರತದಲ್ಲಿ ದೇವರನ್ನು ತಂದೆಯೆಂದು ಮಾತ್ರವಲ್ಲ, ತಾಯಿಯೆಂದೂ ಪೂಜಿಸುತ್ತಾರೆ. ಭಾರತದ ಭಾಷೆಗಳಲ್ಲಿ ತಾಯಿ ಎಂಬ ಮಾತು, ನುಡಿ, ಅತ್ಯಂತ

ಪ್ರಿಯವಾದುದು ; "ಮಾತಾಜಿ" ಯೇ ಧನ್ಯವಾದ ದೇವರು, ಅತ್ಯಂತ ಪ್ರೇಮದ ದೇವರು.

ಹಿಂದೂ ಒಬ್ಬನು ಕಾಹಿಲೆ ಬಿದ್ದಾಗ ಅಥವಾ ತೀವ್ರವಾದ ಯಾತನೆಯನ್ನು ಅನುಭವಿಸುತ್ತಿರುವಾಗ ಅವನ ಬಾಯಿಯಿಂದ ಹೊರಡುವ ಮಾತು "My God" "ನನ್ನ ದೇವರೆ" ಎಂದಲ್ಲ ; ಆದರೆ "ಮಾ ಮಾ ಮಾ" ಎಂದು. ಮಾ ಎಂದರೆ ಮಾತಾಜೀ, ತಾಯಿ ಎಂದು. ಬಹಳ ಕಷ್ಟದಲ್ಲಿಯೂ ಸಂಕಟದಲ್ಲಿಯೂ ಹಿಂದೂ ಜನರ ಮುಖದಿಂದ, ತುಟಿಗಳಿಂದ, ಹೃದಯದ ಅತ್ಯಂತ ಒಳಗಿನ ಆಳದಿಂದ ಹೊರ ಬೀಳುವ ಅತ್ಯಂತ ಪ್ರೇಮದ ನುಡಿಯು ಈ "ಮಾ ಮಾ ಮಾ" ಎಂದು. ಮಾತಾ ಎನ್ನುವ ಶಬ್ದವೇ ಹಿಂದೂಗಳ ಆತ್ಮದಿಂದ ಅತ್ಯಂತ ಆಳವಾದ ಪ್ರಿಯಭಾವನೆಗಳನ್ನು ಹೊರಚಿಮ್ಮಿಸುವ ಮಾತಾಗಿದೆ; ಅದೇ ಮಾತಾ ಆಗಿದೆ. 'ಮಾ, ಮಾ, ಮಾ' ಎನ್ನುವ ನುಡಿಯು ಓಂ, ಓಂ, ಓಂ ಎನ್ನುವದರ ಹ್ರಸ್ವರೂಪ ; ಸಂಕಟ ಸ್ಥಿತಿಯಲ್ಲಿ ಪ್ರಯತ್ನವಿಲ್ಲದೆ, ಸ್ವಾಭಾವಿಕವಾಗಿ, ತಾನೇ ತಾನಾಗಿ ಹೊರ ಹೊಮ್ಮುವ ಈ 'ಮಾ, ಓಂ, ಮಾ, ಓಂ, ಮಾ' ಎಂಬ ಪವಿತ್ರಮಂತ್ರದ–ಸಹಜ ಮಂತ್ರದ–ಉಚ್ಚಾರಣೆಯು ಸಮಾಧಾನವನ್ನು ಕೊಡುತ್ತದೆ.

ಓಂ ! ಓಂ ! ಓಂ !

# Letters from the Himalayas

# ಹಿಮಾಲಯದಿಂದ ಬರೆದ ಪತ್ರಗಳು

## ಹಿಮಾಲಯದ ಮನೋಹರ ದೃಶ್ಯಗಳು

೧

### ಗಂಗೋತ್ರಿ

ಸೆಪ್ಟೆಂಬರ್ 1901

ಪವಿತ್ರ ಗಂಗೆಯು ರಾಮನ ವಿರಹವನ್ನು ಸಹಿಸಲಾರದಾದಳು ; ಆದ್ದರಿಂದ ಒಂದು ತಿಂಗಳ ಬಳಿಕ ಅವನನ್ನು ತನ್ನಲ್ಲಿಗೆ ಸೆಳೆದು ಕರೆಸಿಕೊಂಡಳು. ಆಕೆಯು ದಿವ್ಯ ಜ್ಞಾನಿಯೂ ಸುಸಂಸ್ಕೃತಳೂ ಆದರೂ ರಾಮನನ್ನು ಕಂಡ ಕೂಡಲೇ ಮಧುರವಾದ ಆನಂದಬಾಷ್ಪಗಳನ್ನು ಸುರಿಸತೊಡಗಿದಳು. ಆಹಾ ! ಆ ಗಂಗೋತ್ರಿಯಲ್ಲಿ ಪ್ರಿಯ ಗಂಗೆಯ ಎಳಸಾದ, ಕೋಮಲವಾದ ರಮ್ಯತೆಯನ್ನೂ ವಿಚಿತ್ರಲೀಲೆಗಳನ್ನೂ ಹುಚ್ಚಾಟಿಕೆಗಳನ್ನೂ ವರ್ಣಿಸುವದು ಹೇಗೆ ಸಾಧ್ಯ ? ಯಾರಿಗೆ ಸಾಧ್ಯ ? ಅಲ್ಲಿ, ಆಕೆಯ ಸುತ್ತಲೂ ಎತ್ತರವಾಗಿ ನೇರವಾಗಿ ನಿಂತಿರುವ ಮುಗ್ಧಮನೋಹರ ದೇವದಾರು ವೃಕ್ಷಗಳನ್ನೂ ಶ್ವೇತಶೋಭೆಯ ಹಿಮಗಿರಿಗಳನ್ನೂ ನೋಡಿದರೆ, ಆಕೆಯ ಆ ಆಟದ ಗೆಳೆಯರ ಋಜುವಾದ ನಿಷ್ಕಪಟ ಶೀಲವನ್ನು ಅತಿಯಾಗಿ ವರ್ಣಿಸಿ ಕೊಂಡಾಡುವಂತಿದೆ. ನೀಳವಾದ ಆ ದೇವದಾರುಗಳನ್ನು ನೋಡಿದರೆ, ಪರ್ಷಿಯನ್ ಕವಿಯ ಮೆಚ್ಚಿನ ಪ್ರೇಯಸಿಯ ನೆನಪಾಗುತ್ತದೆ ; ಆಪ್ಯಾಯನಕರವಾದ ಅವುಗಳ ಸುಗಂಧದ ಉಸಿರು ಅರಣ್ಯದಲ್ಲೆಲ್ಲಾ ತುಂಬಿ ಉಲ್ಲಾಸಕರವೂ ಉತ್ತೇಜಕವೂ ಉನ್ನತಿಕರವೂ ಆಗಿದೆ.

"ದೇವರು ಶಿಲೆಯಲ್ಲಿ ನಿದ್ರಿಸಿ, ಸಸ್ಯಗಳಲ್ಲಿ ಉಸಿರಾಡಿ, ಪ್ರಾಣಿಗಳಲ್ಲಿ ಸಂಚರಿಸಿ, ಮನುಷ್ಯನಲ್ಲಿ ಎಚ್ಚೆತ್ತು ಸ್ವರೂಪಜ್ಞಾನವನ್ನು ಪಡೆಯುತ್ತಾನೆ." ಎಂಬ ತತ್ತ್ವವನ್ನು ಇಲ್ಲಿ ಸ್ಪಷ್ಟವಾಗಿ ಕಾಣಬಹುದು.

ಸಾಮಾನ್ಯವಾಗಿ ಯಾತ್ರಿಕರು ಜಮ್ನೋತ್ರಿಯನ್ನು ಬಿಟ್ಟು ಹತ್ತು ದಿನಗಳ ಮೇಲೆ ಗಂಗೋತ್ರಿಯನ್ನು ಸೇರುತ್ತಾರೆ. ಆದರೆ ರಾಮ ಜಮ್ನೋತ್ರಿಯನ್ನು ಬಿಟ್ಟ ಮೂರೇ ದಿನಗಳಲ್ಲಿ ಗಂಗೋತ್ರಿಗೆ ಬಂದನು. ಮೈದಾನದ ಜನರು ಯಾರೂ ಅದುವರೆಗೆ ಹೆಜ್ಜೆಯಿಡದಿದ್ದ ದಾರಿಯಲ್ಲಿ ಅವನು ಬಂಧಿದ್ದನು. ಈ ದಾರಿಯನ್ನು ಗುಡ್ಡಗಾಡಿನ ಜನರು ಛಾಯನ್‌ದಾರಿ ಎಂದು ಕರೆಯುತ್ತಾರೆ ಮೂರು ರಾತ್ರಿಗಳನ್ನು ಎಡೆಬಿಡದೆ, ನಿರ್ಜನವಾದ ಅರಣ್ಯಗುಹೆಗಳಲ್ಲಿ ಕಳೆದಿದ್ದೆವು. ನಮ್ಮ ದಾರಿಯಲ್ಲಿ ಒಂದು ಹಳ್ಳಿಯಾಗಲೀ ಒಂದು ಗುಡಿಸಿಲಾಗಲೀ ಸಿಕ್ಕಿರಲಿಲ್ಲ. ಉದ್ದಕ್ಕೂ ಎರಡು ಕಾಲಿನ ಪ್ರಾಣಿ ಯಾವದೂ ಕಣ್ಣಿಗೆ ಬಿದ್ದಿರಲಿಲ್ಲ.

ವರ್ಷದಲ್ಲಿ ಎಲ್ಲಾ ಕಾಲದಲ್ಲಿಯೂ ನೆರಳಿನಿಂದ ಮುಚ್ಚಿ, ಹಗಲಿನಲ್ಲಿಯೂ ಆ ಹಾದಿಯು ಕತ್ತಲು ಕವಿದಿರುವದರಿಂದ ಇದಕ್ಕೆ ಛಾಯಾಪಥ ಎನ್ನುತ್ತಾರೆ. ಮರಗಳ ನೆರಳು ಎಂದು ನಾನು ಹೇಳಿದೆನೆ? ಅಲ್ಲ, ಅಲ್ಲವೇ ಅಲ್ಲ. ಕೊರೆಯುವ ಚಳಿಯಿರುವ, ಆ ತಲೆ ತಿರುಗಿಸುವಷ್ಟು ಎತ್ತರದಲ್ಲಿ ಮರಗಳಿಗೇನು ಕೆಲಸ? ಅಲ್ಲಿ ಅವು ಹೇಗೆ ಕಾಣಿಸಿಕೊಳ್ಳಬೇಕು? ಆ ಹಾದಿಯಲ್ಲಿ ಹೆಚ್ಚು ಭಾಗ ಮೋಡಗಳೇ ಮುಸುಕಿರುತ್ತವೆ. ಜಮ್ನೋತ್ರಿ ಗಂಗೋತ್ರಿಗಳ ಹತ್ತಿರವಿರುವ ಹಳ್ಳಿಗಳ ಕುರುಬರು ವರ್ಷದಲ್ಲಿ ಎರಡು ಮೂರು ತಿಂಗಳು ಕುರಿಗಳನ್ನು ಕಾಯುತ್ತಾ ಆ ಅಡವಿಯಲ್ಲಿ ಕಳೆಯುತ್ತಾರೆ. ಈ ಎರಡು ಪ್ರಸಿದ್ಧ ಸೋದರೀ ನದಿಗಳ ಮೂಲಗಳನ್ನು ಸಂಬಂಧಿಸುವ ಬಂದರ್‌ಪೂಚ್ ಮತ್ತು ಹನುಮಾನ್‌ಮುಖ್ ಎಂಬ ಹಿಮಾಚ್ಛಾದಿತ ಶಿಖರಗಳ ಹತ್ತಿರ ಆ ಕುರುಬರ ಸಮಾಗಮವಾಯಿತು. ಅವರಿಂದ ಆ ದಾರಿಯು ತಿಳಿಯಿತು. ಬಹಳ ಮಟ್ಟಿಗೆ ದಾರಿಯುದ್ದಕ್ಕೂ ಬಗೆ ಬಗೆಯಾದ ಹೂವುಗಳು ಹೇರಳವಾಗಿರುವದರಿಂದ ಆ ಸ್ಥಳವೆಲ್ಲಾ ಬಂಗಾರದ ಜರತಾರಿಯಿಂದ ಕಸೂತಿ ಮಾಡಿರುವ ವಸ್ತ್ರವನ್ನು ಹಾಸಿರುವಂತೆ ಶೋಭಿಸುತ್ತದೆ. ಹಳದಿ, ನೀಲಿ, ಕೆನ್ನೀಲಿ ಕಡುಗೆಂಪು ಮೊದಲಾದ ಬಣ್ಣ ಬಣ್ಣದ ಹೂವುಗಳು ಅಲ್ಲಿ ಹುಚ್ಚಾಬಟ್ಟೆ ಹೇರಳವಾಗಿ ಬೆಳೆದಿವೆ. ರಾಶಿ, ರಾಶಿ 'ಲಿಲಿ' ಗಳೂ (ಉದ್ದನೆಯ ಸಣ್ಣದಂಟಿನ ತುದಿಯಲ್ಲಿ ಬಿಳಿಯ ಅಥವಾ ಕೆಂಪು ಛಾಯೆಯ ಅಥವಾ ಧೂಮ್ರಚ್ಛಾಯೆಯ ಅಂದವಾದ ದೊಡ್ಡಹೂವು ಬಿಡುವ ಗಡ್ಡೆಬೇರಿನ ಸಸ್ಯಜಾತಿಯಲ್ಲಿ) ನೇರಳೇ ಬಣ್ಣದ (violets) ವೈಲೆಟ್ ಹೂಗಳೂ, ಪುರುಷರತ್ನ ಸಸ್ಯ, ನೀಲ ಲೋಹಿತ, ಯೂರೋಪಿನಲ್ಲಿ ಸಿಗುವ ಒಂದುಜಾತಿಯ 'ಡೇಯ್ಸಿ' (Daisies) ಎನ್ನುವ ಸಣ್ಣ ಹೂಗಳು, ಟ್ಯೂಲಿಪ್ಸ್ (Tulips), ಗಂಟೆಯಾಕಾರದ ನಾನಾ ಬಣ್ಣಗಳ ಹೂಗಳೂ—

ಬಗೆಬಗೆಯ ಜಾತಿಯವು ಅಲ್ಲಿ ಪುಷ್ಕಲವಾಗಿವೆ; ಗುಗ್ಗುಳ (Guggal), ಧೂಪ್ (Dhoop), ಮಮಿರಾ (Mamora), ಮಿಥಾ ತೆಲಿಯಾ (Mitha telia), ಸಾಲಬ್ ಮಿಸ್ರಿ (Salab misri), ಅಂದವಾದ ಬಣ್ಣಗಳ ಎಲೆಗಳುಳ್ಳ ಬಗೆಬಗೆಯ ವನಸ್ಪತಿಗಳು; ಕುಂಕುಮ ಕೇಸರೀ ಗಿಡಗಳು (Saffron), ಇತ್ರಾಸೂ (Itrasoo), ಅತ್ಯಂತ ಮಧುರವಾದ ಪರಿಮಳವನ್ನು ಸೂಸುತ್ತಿರುವ ಇತರ ಅನೇಕ ವಿಧವಾದ ಗಿಡಗಳು, "ಭೆರ್‌ಗದ್ದ ಅಥವಾ ಭೇರ್‌ಗಡ್ಡಾ" (Bher Gadda), ಮತ್ತು ಘನವಾದ ಬ್ರಹ್ಮಕಮಲಗಳು,–ಪುಷ್ಪಪಾತ್ರೆಗಳಲ್ಲಿ ಮಂಜುಹನಿಗಳೂ ಸಣ್ಣಸಣ್ಣ ನೀರ್ಗಲ್ಲ ಪುಡಿಗಳೂ ತುಂಬಿರುವ ಅಟ್ಟಹಾಸದ ಬ್ರಹ್ಮಕಮಲಗಳು–ಇವೇ ಮೊದಲಾದ ರಮ್ಯವಸ್ತುಗಳು ತುಂಬಿರುವ ಪ್ರಕೃತಿ ಸೌಂದರ್ಯವುಳ್ಳ ಪರ್ವತಗಳು ನಂದನವನವಾಗಿಯೂ ಆ ಪ್ರದೇಶವು ಭೂಸ್ವರ್ಗವಾಗಿಯೂ ರಂಜಿಸುತ್ತಿವೆ

ಬಣ್ಣ, ಓ ಬಣ್ಣ, ಬಗೆ ಬಗೆ ಬಣ್ಣ, ಪ್ರೇಮದಂತಿಮ ಅಗ್ರದೈಶ್ವರ್ಯ!
ನಿನ್ನ ಸಾರ್ವತ್ರಿಕ ಮನೋಜ್ಞಭಾಷೆಯು ಪರಮೌದಾರ್ಯ,
ಸಕಲ ವೈಭವ ರಹಸ್ಯದ ಪವಿತ್ರ ವೇದಿಕೆಯು;
ಪ್ರಕೃತಿಗು ಮೀರಿದ ಮಂತ್ರಿಕೆ ನಿನ್ನಯುಪವಾಡ ಸಿರಿಯು.
ದೇವನೆ ಯೋಜಿಪ ಮಾತಿನ ಮೋಡಿಯು ಈ ವಿಸ್ತೃತ ರೂಪವ,
ಸಾವಿನ ಪಡಿನೆಳಲಿಲ್ಲದ ತನ್ನಾನಂದವನೀಪರಿ ಸುಲಭದಿ ಕರುಣಿಸುವ.

" ಗೋಲ್ ಚಾಂದ್‌ಕಾ ಜೋಬನ್ (ಯೌವನ) ಫೂಟ್, ಫೂಟ್‌ಕರ್ ಬಾಹರ್
ನಿಕಲ್ ರಹಾ ಹೈ."

ಸೌಂದರ್ಯವು ಎಲ್ಲೆಲ್ಲಿಯೂ ಸ್ಫೋಟವಾಗಿ ಸುತ್ತಲೂ ಹೊರಚಿಮ್ಮುತ್ತಿದೆ. ಮೆಲುಗಾಳಿಗಳು, ಸುಳಿಗಾಳಿಗಳು, ಸುತ್ತಲೆಲ್ಲಾ ಸ್ವಚ್ಛಂದವಾಗಿ ಸುಳಿಸುಳಿದು ಸೋಂಕುವೆಲ್ಲವನು ಮುತ್ತಿಡುತ್ತಿವೆ; ಆದರೆ ಅವು ವಿಶೇಷವಾಗಿ ಅತ್ಯಂತ ಉಜ್ಜ್ವಲ ಪ್ರಭೆಯ ಪುಷ್ಪಗಳನ್ನು ಮುದ್ದಾಡುತ್ತಿವೆ. ಕೆಲವು ಜಾಗಗಳಲ್ಲಿ, ತೀಡಿ ತುಯ್ಯುತ್ತಿರುವ ತಂಗಾಳಿಗಳ ತರಂಗಾಳಿಗಳ ಮೇಲೇರಿ ತೇಲಿ ಬರುತ್ತಿರುವ ಪರಿಮಳವು ತೂಗಾಡಿ ಸುಯ್ದು, ಮಧುರಗೀತೆಯಂತೆ ರಾಮನನ್ನು ಸಮ್ಮೋಹಿಸುತ್ತಿದೆ. ಮೃದುವಾಗಿ, ಮೆಲ್ಲನೆ ಬೀಸುವ ತೆಳುಗಾಳಿಯ ಮೇಲೆ, ನಯವಾಗಿ ತೂರಿಕೊಂಡು ತೇಲಿ ಬರುವ ಸವಿಯಾದ, ಮಿದುವಾದ ಸುಗಂಧವು ಈ ಪ್ರದೇಶದಲ್ಲಿ ಘಮಘಮಿಸುತ್ತಾ ಶ್ರೀಮಂತ ಸಮೃದ್ಧಿಯಲ್ಲಿದೆ. ಇದು ಮುಗ್ಧ, ಪ್ರಣಯಿಗಳ ಸಮಾಗಮದಲ್ಲಿ ಸೂಸುವ

ಮಂದಹಾಸದಷ್ಟು ಮಧುರವೂ ಅವರ ವಿಯೋಗದ ಕಂಬನಿಗಳಷ್ಟು ಮೃದುವೂ ಆಗಿದೆ.

ಆ ದೈತ್ಯಪರ್ವತಗಳ ಮೇಲೆ ಹರಡಿರುವ ಆ ಮನೋಹರ ಪ್ರದೇಶಗಳು, ದೇವತೆಗಳ ನರ್ತನಕ್ಕೂ ಭೋಜನಕ್ಕೂ ಸಿದ್ಧಪಡಿಸಿರುವ ವಿಚಿತ್ರಾಲಂಕಾರವುಳ್ಳ ರತ್ನಗಂಬಳಿಗಳಂತೆ ಶೋಭಿಸುತ್ತಿವೆ. ಈ ವನಸ್ಥಲಿಯಲ್ಲಿ ಜುಳುಜುಳು ಹರಿಯುವ ಸಣ್ಣ ಹೊಳೆಗಳೂ ಎತ್ತರವಾಗಿ ಕಡಿದಾಗಿರುವ ಬೆಟ್ಟಗಳ ತಲೆಯಿಂದ ಭೋರ್ಗರೆದು ಬೀಳುತ್ತಿರುವ ನದಿಗಳೂ ಆ ಗಿರಿಕಂದರಗಳನ್ನು ವಿಧ ವಿಧ ನಾದಗಳಿಂದ ತುಂಬುತ್ತಿವೆ. ಕೆಲವು ಅತ್ಯಂತ ಉನ್ನತವಾದ ಶಿಖರಗಳಲ್ಲಿ ನಿಂತು ನೋಡಿದರೆ, ದಾರಿಯಲ್ಲಿ ಅಡ್ಡ ನಿಲ್ಲುವ ಗುಡ್ಡಗಳು ಇಲ್ಲದಿರುವದರಿಂದಲೂ, ಆಕಾಶಪಥದಲ್ಲಿ ಅಡ್ಡೈಸುವ ಕ್ರುದ್ಧ ಮೇಘಗಳು ಕಾಣದಿರುವದರಿಂದಲೂ ದೃಷ್ಟಿಯು ಸುತ್ತಲೂ ಹತ್ತು ದಿಕ್ಕುಗಳಲ್ಲಿಯೂ ತಡೆಯಿಲ್ಲದೆ, ದೂರದಿಗಂತದವರೆಗೂ ವಿಶಾಲವಾಗಿ ಪ್ರಸರಿಸಿ ಸಂಪೂರ್ಣ ಸ್ವಾತಂತ್ರ್ಯವನ್ನೂ ವಿಮುಕ್ತತೆಯನ್ನೂ ಅನುಭವಿಸಿ ಆನಂದಿಸುತ್ತದೆ. ಕೆಲವು ಭವ್ಯವಾದ ಮಹೋನ್ನತ ಪರ್ವತ ಶೃಂಗಗಳು ಆಕಾಶದಲ್ಲಿ ಮೇಲು ಮೇಲಕ್ಕೇರಿ, ತೂರಿ ಧಾವಿಸುವ ಉತ್ಸಾಹದಲ್ಲಿಯೂ ಮೇಘಲೋಕವನ್ನು ಭೇದಿಸಿ, ಚಿಮ್ಮಿಹಾರುವ ಭರದಲ್ಲಿಯೂ ನಿಲ್ಲುವದನ್ನೇ ಪೂರಾ ಮರೆತಂತೆ ತೋರುತ್ತದೆ. ಮತ್ತು ಅತ್ಯಂತ ಉನ್ನತ ಬಾಹ್ಯಾಕಾಶದ ಸ್ವರ್ಗಸೀಮೆಯಲ್ಲಿ ಕರಗಿ ಕಣ್ಮರೆಯಾದಂತೆ ಕಾಣುತ್ತದೆ.

ಗರ್ವಿಷ್ಠವಾದ ಆ ಗಗನಚುಂಬಿ ಪರ್ವತಗಳ ಭಯಾನಕ ಭವ್ಯತೆಯ ಜೊತೆಗೆ, ಆ ಕ್ಷೇತ್ರಗಳನ್ನು ಹೆಚ್ಚು ಚಿತ್ತಾಕರ್ಷಕವಾಗಿ ಮಾಡಿರುವ, ಪ್ರಾತಃಕಾಲದಲ್ಲಿ ರತ್ನಮಯವಾಗಿ ಥಳಥಳಿಸುತ್ತಿರುವ ಮಂಜಿನ ಹನಿಗಳನ್ನು ಮರೆಯುವಂತೆ ಇಲ್ಲ. ಕಮಲ ದಳಗಳ ಮೇಲೂ ಪದ್ಮಪತ್ರಗಳ ಮೇಲೂ ವಿರಾಜಿಸುವ ಕ್ಷುದ್ರವೂ ಕ್ಷಣಭಂಗುರವೂ ಅತಿಚಂಚಲವೂ ಆದ ಮಂಜು ಹನಿಗಳು ಜೀವಿಯ ಬಾಳಿನ ಸ್ವಭಾವವನ್ನು ಪ್ರತಿಬಿಂಬಿಸುತ್ತದೆ. ಆದರೆ ಅದರಲ್ಲಿ ಹೊಳೆಯುವ ಸೂರ್ಯಪ್ರಭೆಯು ಜೀವಿಯಲ್ಲಿ ಪ್ರಕಾಶಿಸುವ ಆತ್ಮಚೈತನ್ಯವನ್ನು ಸೂಚಿಸುತ್ತದೆ. ಕಮಲ ಪತ್ರದ ಮೇಲೆ ಥಳಥಳಿಸುವ ಹಿಮಕಣವು ಅತಿ ಕ್ಷುದ್ರವು ಕ್ಷಣಿಕವು ; ಆ !–ಆದರೂ ತನ್ನ ವಕ್ಷಸ್ಥಳದಲ್ಲಿ ಪ್ರಕಾಶದ ಅಪಾರ ಭಂಡಾರವಾದ ಆತ್ಮಸೂರ್ಯನನ್ನು ಪ್ರತಿಬಿಂಬಿಸುತ್ತ ಅದು ಎಷ್ಟು ನಿರ್ಮಲವಾಗಿ ಮಿರುಗುಟ್ಟುತ್ತಿದೆ ! ಓ ಮಾನವ, ನೀನು, ಆ ಅಪಾರ ಸೂರ್ಯನ ಒಂದು ಪುಟ್ಟ ಕಣವೆಂದು ತಿಳಿದೆಯ ? ಆಹಾ, ನೀನು ಆ ಅತ್ಯಲ್ಪ ಕಣವಲ್ಲ ; ನಿಶ್ಚಿತವಾಗಿಯೂ ಪ್ರಕಾಶಗಳಿಗೆಲ್ಲಾ ಪ್ರಕಾಶವೇ ನೀನು. ಇಂಥಾ ಗಂಧರ್ವ ಲೋಕಕ್ಕೆ ಜೀವಕಳೆಯನ್ನೂ ಮೋಹಕ ಪ್ರಭೆಯನ್ನೂ ನೀಡುವದು ಜಾಜ್ವಲ್ಯವಾದ ನಿಮ್ಮ ಮಹಿಮೆಯೇ ಎಂದು

ಎಲ್ಲಾ ವೇದಗಳೂ ರಾಮನೂ ಸಂದೇಹಕ್ಕೆ ಅವಕಾಶವಿಲ್ಲದಂತೆ ಕಂಠೋಕ್ತವಾಗಿ ಸಾರಿಹೇಳುತ್ತಾರೆ. ಮೇಲೂ ಕೆಳಗೂ ಎಲ್ಲೆಲ್ಲಿಯೂ ನಿಮ್ಮ ಉಜ್ಜ್ವಲ ಸಾನ್ನಿಧ್ಯವೇ ಪ್ರಕಾಶಿಸುತ್ತಿದೆ. ಯಾವದು ಪರಿಮಾಣವನ್ನು-ಗಾತ್ರವನ್ನು-ಗೌರವಿಸದೆ ಪೂರ್ಣವನ್ನೂ ಅಂಶವಾದ ಕಣವನ್ನೂ ತನ್ನ ಪ್ರಕಾಶಕ್ಕೆ ಸಮಾನ ಸಾಧನವಾಗಿ ಮಾಡಿಕೊಳ್ಳುತ್ತದೋ ಆ ಪರಮಶಕ್ತಿಯೇ ನೀನು. ಪ್ರಾತಃಕಾಲಕ್ಕೆ ರಾಗರಂಜಿತವಾದ ಮಂದಹಾಸವನ್ನೂ ಗುಲಾಬಿಗೆ (ಲಜ್ಜಾರಾಗವನ್ನೂ) ರಂಗಿನ ಹೊಳಪನ್ನೂ ಪ್ರದಾನ ಮಾಡುವವನು ನೀನೇ

ಮಧ್ಯರಾತ್ರಿಯ ಗ್ರಹಗಳ ಪ್ರಭೆಯೊಳಗೆ ರೂಪಿಸಿಹ,
ಬೆಳಗಿನ ಮಂಜಿನ ಹನಿಯಲಿ ಮಿನುಗುತಿಹ,
ಸುಂದರ-ಮನೋಹರ ವಿಹುದೇನಾದರು ಇರಲಿ,
ಅದೆಲ್ಲವು ನಿನ್ನಯ ಮಹಿಮೆಯ ಪ್ರತಿಫಲನವೇ ಅಲ್ಲಿ.
ರಾತ್ರಿಯ ತಾರಾಚಂದ್ರಮ ನಿನ್ನವನೆ,
ಸಂಜೆಯ ಸಂಧ್ಯಾರಾಗವು-ಮಂಜಿನ ಮುಂಜಾನೆ.
ಸುಂದರ ಪ್ರಭಾಮಯ ವಿಹುದೇನಾದರು ಇರಲಿ,
ನಿನ್ನಯಕ್ಕೈಗಳೆ ರಚಿಸಿಹವೆಲ್ಲವನಲಂಕಾರದಲಿ ;
ನಿನ್ನಯ ವೈಭವವೆ ಮೆರೆದಿದೆ ಸಕಲ ವಲಯದಲಿ,
ಎಲ್ಲಾ ವಸ್ತುಗಳು ಪಿಸುಗುಟ್ಟುತ್ತಿವೆ, "ದೇವನಿಹನಿಲ್ಲಿ."

ಗೋಪಿಕಾ ಸ್ತ್ರೀಯರ ಬೆಣ್ಣೆಯನ್ನು ತನಗೆ ಸಂಪೂರ್ಣ ತೃಪ್ತಿಯಾಗುವಷ್ಟು ಕದ್ದು ತಿಂದು, ಅನಂತರ ಉಳಿದ ಅಲ್ಪಭಾಗದ ಬೆಣ್ಣೆಯನ್ನು ಕರುಗಳ ಮತ್ತು ಮೇಕೆಗಳ ಮೂತಿಗಳಿಗೆ ಬಳಿಯುವ ಜಾಣತನವೂ ಕಾರ್ಯಕೌಶಲವೂ ಬಾಲಕೃಷ್ಣನಿಗೆ (ಗೋಲ್ ಚಾಂದಗೆ) ಇದ್ದಿತು. ಪಾಪ, ಅವು ಬಡ ಪ್ರಾಣಿಗಳು. ಕೃಷ್ಣನ ಕಪಟ ಕೃತ್ಯವನ್ನು ತಿಳಿಯದ ಆ ಗೃಹಿಣಿಯರು ಆ ಬಡ ಪ್ರಾಣಿಗಳನ್ನು ಬಯ್ದು ಅವುಗಳ ಕಪಾಳಕ್ಕೆ ಹೊಡೆಯುತ್ತಿದ್ದರು ; ಆದರೆ, ಏನೂ ಅರಿಯದಂತಿದ್ದ ಮುದ್ದಾದ ಪುಟ್ಟಕಳ್ಳನು ಸುರಕ್ಷಿತವಾಗಿ ಪಾರಾಗುತ್ತಿದ್ದನು. ಸಮಸ್ತ ಜೀವರ ಆತ್ಮನೇ ಎಲ್ಲಾ ವ್ಯವಹಾರಗಳನ್ನೂ ತನ್ನ ಇಚ್ಛೆ ಬಂದಂತೆ ಮಾಡುತ್ತಿದ್ದಾನೆ ; ಎಲ್ಲಾ ಘಟನೆಗಳಿಗೂ ನಿಜವಾಗಿ ಆ ಮಾಟಗಾರ ರಾಮನೇ ಕಾರಣ ; ಆದರೆ ತನ್ನ ವಿಲಕ್ಷಣ ಮಾಯೆಯ ಮೂಲಕ ಅವನು ಹೊಣೆಗಾರಿಕೆಯಲ್ಲಿ ಸಿಕ್ಕಿಕೊಳ್ಳುವ ಸುಳ್ಳು ಅಹಂಕಾರವನ್ನು ಪಡೆಯುತ್ತಾನೆ ಆ ಬೆಣ್ಣೆಗಳ್ಳ ಕೃಷ್ಣನನ್ನು ನಿರಪರಾಧಿ ಎಂದಾವರೂ ಕರೆಯಿರಿ ;

ಕೆಟ್ಟ ತುಂಟನೆಂದಾದರೂ ಕರೆಯಿರಿ, ಆ ಎರಡನ್ನೂ ಹೇಳುವವರು ನೀವೇ. ಗಾರುಡಿಗನೋ ಐಂದ್ರಜಾಲಿಕನೋ ಮಾಯಾವಿಯೋ ರಾಮನು ನಿಮ್ಮ ನಿಜಾತ್ಮನು. ನಿಮ್ಮಲ್ಲಿ ಏನೇ ಇರಲಿ, ಎಲ್ಲಕ್ಕೂ ನೀವೇ ಆಧಾರ. ಈ ಪುಟ್ಟ ದೇಹವೆಂಬ ಪ್ರತ್ಯೇಕವಾದ ಕಾಂತಿಹೀನ ದ್ವೀಪದಲ್ಲಿ ನೀವು ಸೆರೆ ಸಿಕ್ಕಿಲ್ಲ. ಅಪರಾಧಿಯಾದ (ಮಿಥ್ಯಾ) ಅಹಂಕಾರ ಎಂದೆಂದೂ ನಿಮ್ಮ ಆತ್ಮನಲ್ಲ. ಅಲ್ಪವೂ ಅನಾಮಧೇಯವೂ ಆದ ಕಣವು (ಜೀವ) ನೀವಲ್ಲ ; ಮಹಾಪ್ರಚಂಡವಾದ ಸಾಗರವೇ ನೀವು !

## ಸದ್ಯದ ವಾಸ

ಈಗ ರಾಮನು ಭದ್ರವಾಗಿ ಬೆಚ್ಚಗೆ ಸುಖವಾಗಿರುವ ಕುಟೀರದಲ್ಲಿ ವಾಸ ಮಾಡುತ್ತಿದ್ದಾನೆ—ಹೊರಗಿನ ರೂಪಮೋಹಕ್ಕೆ ಸಿಕ್ಕಿದ ಕಣ್ಣಿಗೆ ಹೀಗೆನಿಸಬಹುದು- ಸುತ್ತಲೂ ಎತ್ತರವಾದ ಬೆಟ್ಟಗಳು ; ಮಧ್ಯದಲ್ಲಿ ಸ್ವಾಭಾವಿಕ ತೋಟದಂತಿರುವ ನಿರ್ಜನವಾದ ಹಚ್ಚನೆಯ ಹುಲ್ಲುಗಾವಲಿನ ಪ್ರದೇಶ ; ಸ್ವಲ್ಪ ದೂರದಲ್ಲಿಯೇ ಗಂಗಾ ಮಾತೆಯ ದರ್ಶನ ಚೆನ್ನಾಗಿ ಆಗುತ್ತದೆ. ನಾರಾಯಣ-ತುಲಾರಾಮರು ಬೇರೆಡೆಯಲ್ಲಿ ವಾಸಮಾಡುತ್ತಾರೆ ಇಲ್ಲಿ "ರಾಮ ಬೂತಿಯು" ಯಥೇಷ್ಟವಾಗಿ ಬೆಳೆಯುತ್ತದೆ. ಗುಬ್ಬಚ್ಚಿಗಳೂ ಬೇರೆ ಬಗೆ ಬಗೆಯ ಹಕ್ಕಿಗಳೂ ಹಗಲೆಲ್ಲಾ ಸ್ವಚ್ಛಂದವಾಗಿಯೂ ಆನಂದವಾಗಿಯೂ ಚಿಲಿಪಿಲಿಗುಟ್ಟುತ್ತವೆ. ಕಿಲಕಿಲ ಎಂದು ಹಾಡುತ್ತವೆ. ಇಲ್ಲಿ ಹವೆಯು ಹುರಿದುಂಬಿಸುವ ಹಾಗಿದೆ, ಉತ್ತೇಜಕವಾಗಿದೆ. ಪಕ್ಷಿಗಳ ಕಲಕಲರವದ ಪ್ರತಿಯ ಹಿನ್ನೆಲೆಯಲ್ಲಿ ಗಂಗಾದೇವಿಯ ಮಂಜುಳ ಗಾನವು ಸರ್ವಕಾಲದಲ್ಲಿಯೂ ಸ್ವರ್ಗೀಯ ಸತ್ಕಾರವನ್ನು ನೀಡುತ್ತಿದೆ. ಇಲ್ಲಿ ಗಂಗಾ ನದಿಯ ಕಣಿವೆಯು ಬಹಳ ವಿಶಾಲವಾಗಿದೆ. ಇಲ್ಲಿ ಗಂಗೆಯು ವಿಶಾಲವಾದ ಮೈದಾನದಲ್ಲಿ ಹರಿಯುತ್ತಿದ್ದಾಳೆ ಹೇಗಾದರೂ ಪ್ರವಾಹವು ವೇಗವಾಗಿದೆ. ಕೇದಾರ ಬದರಿಗಳೂ ಆಗಾಗ ಅತ್ಯಂತ ಅನುರಾಗದಿಂದ ರಾಮಬಾದಷಹನನ್ನು ಆಹ್ವಾನಿಸಿವೆ. ಆದರೆ ಪ್ರಿಯಗಂಗೆಯು ರಾಮನ ವಿಯೋಗದ ಆಲೋಚನೆ ಬಂದರೂ ಖಿನ್ನಳಾದಂತೆ- ಕಲಶ ಕಳಚಿಬಿದ್ದಂತೆ ಕೊರಗುವ ಹಾಗೆ --ತೋರುವದರಿಂದ ಆಕೆಯನ್ನು ಅಸಂತೋಷ ಪಡಿಸಲು ರಾಮನಿಗೆ ಇಷ್ಟವಿಲ್ಲ.

## ೨ ಸುಮೇರು ಸಂದರ್ಶನ

ಜಮ್ನೋತ್ರಿಯ ಗುಹೆಯಲ್ಲಿ ವಾಸಿಸುತ್ತಿದ್ದಾಗ ರಾಮನ ನಿತ್ಯದ ಆಹಾರವು–

ಇಪ್ಪತ್ತನಾಲ್ಕು ಗಂಟೆಗಳಲ್ಲಿ ಒಂದು ಸಲ-' ಮಾರ್ಚ' (Marcha) ಮತ್ತು ಆಲೂಗೆಡ್ಡೆಗಳಾಗಿದ್ದವು. ಇದರಿಂದ ಅಜೀರ್ಣವಾಯಿತು. ಮೂರುದಿನಗಳು ಬಿಡಪೆ, ದಿನಕ್ಕೆ ಸುಮಾರು ಏಳು ಸಲ ಭೇದಿಯಾಗುತ್ತಿತ್ತು. ನಾಲ್ಕನೆಯ ದಿನ, ಬೆಳಿಗ್ಗೆ ಮುಂಚೆ, ಬಿಸಿನೀರಿನ ಚಿಲುಮೆಗಳಲ್ಲಿ ಸ್ನಾನಮಾಡಿದ ಅನಂತರ, ರಾಮನು ಕೌಪೀನಧಾರಿಯಾಗಿ, ಸೊಂಟದ ಸುತ್ತಲೂ ಒಂದು ಹರಕು ಬಟ್ಟೆಯೊಡನೆ, ಸುಮೇರು ಸಂದರ್ಶನಕ್ಕೆ, ಬರಿಗಾಲು ಬರಿ ತಲೆಗಳಿಂದ ಛತ್ರಿಯೂ ಇಲ್ಲದೆ, ಹೊರಟನು. ಐದು ಜನ ದೃಢಾಂಗರಾದ ಪರ್ವತ ನಿವಾಸಿಗಳು ಬೆಚ್ಚನೆಯ ವಸ್ತ್ರಗಳನ್ನು ಧರಿಸಿ ಅವನ ಜೊತೆಗೆ ಬಂದರು. ನಾರಾಯಣ-ತುಲಾರಾಮರು ಕೆಳಗೆ ಘರ್ಸಲಿ ಗ್ರಾಮಕ್ಕೆ ಹಿಂದಿರುಗಿ ಕಳಿಸಲ್ಪಟ್ಟರು.

ಪ್ರಾರಂಭದಲ್ಲಿ ಬೆಳವಣಿಗೆಯ ಆರಂಭದಶೆಯ ಶಿಶು ಜಮುನೆಯನ್ನು ಮೂರು ನಾಲ್ಕು ಸಲ ದಾಟಬೇಕಾಯಿತು. ಅನಂತರ ಒಂದೂವರೆಫರ್ಲಾಂಗ್ ಉದ್ದವೂ ಸುಮಾರು ನಲವತ್ತೈದು ಗಜ ಎತ್ತರವೂ ಇದ್ದ ಉರುಳು ನಿರ್ಗಲ್ಲ ಗುಡ್ಡವು ಜಮುನಾ ಕಣಿವೆಯನ್ನು ಮುಚ್ಚಿ ತಡೆಗಟ್ಟಿತ್ತು. ಎರಡು ನಿಟ್ಟಿನಲ್ಲಿಯೂ ಎತ್ತರವಾಗಿ ಕಡಿದಾದ ಪರ್ವತಗಳು ಗೋಡೆಗಳಂತೆ ಸೊಕ್ಕಿನಿಂದ ನಿಂತಿದ್ದವು ಅವು ರಾಮ ಬಾದ್‌ಷಹನನ್ನು ಮುಂದಕ್ಕೆ ಬಿಡದಂತೆ ಒಳಸಂಚು ನಡೆಸಿರಬಹುದೆ ? ಪರವಾಯಿಲ್ಲ, ವಜ್ರದಂತೆ ದೃಢವಾದ ಸಂಕಲ್ಪದ ಎದುರಿಗೆ ಎಲ್ಲಾ ಅಡ್ಡಿಗಳೂ ಕಣ್ಮರೆಯಾಗಲೇ ಬೇಕು ನಾವು ಪಶ್ಚಿಮ ಭಾಗದ ಗೋಡೆಗಳನ್ನು ಹತ್ತುವದಕ್ಕೆ ತೊಡಗಿದೆವು ಆಗಾಗ ಮತ್ತೆ ಮತ್ತೆ ನಿಲ್ಲುವದಕ್ಕೆ ಆಧಾರವಿಲ್ಲದೆ, –ಅರ್ಧ–ಸುವಾಸನೆಯ, ಆದರೆ ತುಂಬಾ ಮುಳ್ಳಿನ ಗುಲಾಬಿ ಗಿಡಗಳನ್ನು ಹಿಡಿದುಕೊಳ್ಳುವದರಿಂದಲೂ–ಇನ್ನರ್ಧ–ನಮ್ಮ ಕಾಲಿನ ಹೆಬ್ಬೆರಳುಗಳನ್ನು ' ಚ ' ಎನ್ನುವ ಎಳೆಯ ಮೃದುವಾದ ಬೆಟ್ಟದ ಹುಲ್ಲುಗರಿಕೆಗಳಲ್ಲಿ ಸಿಕ್ಕಿಸಿ ಹಿಡಿದುಕೊಳ್ಳುವದರಿಂದಲೂ ನಮ್ಮ ದೇಹಗಳನ್ನು ಬೀಳದಂತೆ ಧಾರಣಮಾಡಿ ಕೊಳ್ಳಬೇಕಾಗುತ್ತಿತ್ತು. ಕೆಲವು ಸಮಯ ನಿಶ್ಚಿತವಾದ ಮೃತ್ಯುಮುಖದಿಂದ ಒಂದೇ ಅಂಗುಲ ದೂರದಲ್ಲಿ ತಪ್ಪಿಸಿಕೊಂಡೆವು. ನಮ್ಮ ಮಂಡಳಿಯಲ್ಲಿ ಯಾರೊಬ್ಬರ ಕಾಲು ಸ್ವಲ್ಪ ತತ್ತರಿಸಿ ಜಾರಿದರೂ ಸಾಕು, ಕೆಳಗೆ ಮಂಜುಗಡ್ಡೆಗಳ ಶೀತಶಯ್ಯೆ ಯಿಂದ ತುಂಬಿದ್ದ ಜಮುನಾ ಕಣಿವೆಯ ಅಗಾಧ ಪಾತಾಳವು, ನಮಗೆ ಅತ್ಯಾದರದ ಸ್ವಾಗತವನ್ನು ನೀಡುವದಕ್ಕೆ ಸರ್ವದಾಸಿದ್ಧವಾಗಿ, ಅಗಲವಾದ ಬಾಯಿ ತೆರೆದು ಕೊಂಡಿದ್ದ, ನಮ್ಮೆಲ್ಲರ ಭಯಂಕರ ಗೋರಿ (ಸಮಾಧಿ) ಯಂತೆ ತೋರುತ್ತಿತ್ತು. ಕೆಳಗೆ ರಸಾತಳದಿಂದ, ಸುಳು ಸುಳೂ ಜುಳು ಜುಳೂ ಹರಿಯುತ್ತಿದ್ದ ಜಮುನೆಯ ಮಂದವೂ ಅಸ್ಪಷ್ಟವೂ ಆದ ನಾದವು, ನಮ್ಮ ಕಿವಿಗಳಿಗೆ ಮರಣ ಕಾಲದಲ್ಲಿ ಬಾರಿಸುವ

ಡೋಲು–ತಮಟೆಗಳ ಶ್ಮಶಾನ ಗೀತೆಯಂತೆ ಕೇಳಿಸುತ್ತಿತ್ತು. ಮುಕ್ಕಾಲು ಗಂಟೆಗಳ ಕಾಲವಂತೂ ನಾವು ಸಾವಿನ ದವಡೆಯಲ್ಲಿಯೇ ಸಿಕ್ಕಿರುವೆವು ಎನ್ನುವಂತೆ ತೆವಳ ಬೇಕಾಗಿತ್ತು. ಭೀಕರ ವಿಲಕ್ಷಣ ಪರಿಸ್ಥಿತಿಯೇ ಸರಿ! ಒಂದು ಕಡೆ ಪ್ರತ್ಯಕ್ಷ ಮೃತ್ಯುವೇ ಹಸಿದಿರುವಂತೆ ನಮ್ಮ ಮೋರೆಗಳನ್ನು ದುರುದುರು ನೋಡುತ್ತಿದೆ. ಇನ್ನೊಂದು ಕಡೆಯಿಂದ ಉಲ್ಲಾಸಕರವೂ ಉತ್ತೇಜನಕರವೂ ಆಗಿದ್ದ ಸವಿಯಾದ ಸುವಾಸನೆಯನ್ನು ಬೀರುತ್ತಿದ್ದ ಗಾಳಿಯು ಬೀಸುತ್ತಿದೆ ಈ ಸುತ್ತು ಬಳಸು ಹಾದಿ ಯಲ್ಲಿ ಅಪಾಯಕರವಾದ ಸಾಹಸದಿಂದ ದಾರಿಗೆ ಅಡ್ಡವಾಗಿದ್ದ ಆ ರಾಕ್ಷಸಾಕಾರದ ನೀರ್ಗಲ್ಲ ಗುಡ್ಡವನ್ನು ದಾಟಿ ಮುಂದೆ ಹೋದೆವು. ಇಲ್ಲಿ ಜಮುನೆಯು ದೂರ ಬಿಟ್ಟಿತು. ಕಡಿದಾದ ಒಂದು ಪರ್ವತವನ್ನು ಎಲ್ಲರೂ ಹತ್ತಿದೆವು. ಅಲ್ಲಿ ಯಾವ ದಾರಿಯಾಗಲೀ ಕಾಲು ದಾರಿಯಾಗಲೀ ಇರಲಿಲ್ಲ. ಒಂದು ದಟ್ಟವಾದ ಕಾಡನ್ನು ಹಾದು ಹೋದೆವು. ರಾಮನ ದೇಹದಲ್ಲಿ ಹಲವು ಗಾಯಗಳಾದವು. ಓಕ್ ಮತ್ತು ಭೂರ್ಜ್ ಮರಗಳ ಅಡವಿಯಲ್ಲಿ ಒಂದು ಗಂಟೆಯ ಮೇಲೆ ಬಹಳ ಪ್ರಯಾಸ ಪಟ್ಟಿದ್ದರಿಂದ ಸಣ್ಣ ಸಣ್ಣ ಗಿಡ ಮರಗಳಿರುವ ಬಯಲು ಭೂಮಿಗೆ ಬಂದೆವು. ಅಲ್ಲಿಯ ವಾತಾವರಣವು ಪರಿಮಳದಿಂದ ತುಂಬಿ ತುಳುಕುತ್ತಿತ್ತು. ಆ ಬೆಟ್ಟಗಳನ್ನು ಏರುವುದು ಆ ಗುಡ್ಡಗಾಡು ಜನರನ್ನು ಸಹ ಉಸಿರು ಕಟ್ಟಿಸಿ, ಸಾಕು ಸಾಕು ಮಾಡಿತು. ರಾಮನಿಗೂ ಕೂಡ ಅದು ಒಳ್ಳೆಯ ವ್ಯಾಯಾಮವಾದಂತೆ ತೋರಿತು. 80 ಡಿಗ್ರಿ ಕೋಣದ ಅತಿ ಕಡಿದಾದ ಬೆಟ್ಟಗಳನ್ನು ಸಹ ಏರಬೇಕಾಗುತ್ತಿತ್ತು. ಬಹಳ ಕಡೆ ನೆಲವೂ ಜಾರುತ್ತಿತ್ತು. ದಾರಿಯುದ್ದಕ್ಕೂ ಇದ್ದ ರಮಣೀಯವಾದ ಗಿಡ ಮರಗಳ ಎಲೆಹೂವುಗಳು ಆ ಕಠಿಣವಾದ ಯಾತ್ರೆಯನ್ನು ವಿನೋದಕರವಾಗಿ ಮಾಡಿತು. ಭಾರತದ ಕಂಪೆನಿ–ಹೂ ತೋಟಗಳನ್ನು ಅಲಂಕರಿಸುವದಕ್ಕೆ ಸಾಮಾನ್ಯವಾಗಿ ಯೂರೋಪಿಯನ್ ತೋಟಗಾರರು ಇಂಥಾ ಸ್ಥಳಗಳಿಂದ ಹೂವಿನ ಬೀಜಗಳನ್ನು ತರಿಸುತ್ತಾರೆ. ಇಂಗ್ಲಿಷ್ ಮಾತನಾಡುವ ಅಜ್ಞಜನರು ಆ ಹೂವುಗಳನ್ನು ಇಂಗ್ಲಿಷ್ ಹೂವುಗಳು, ಎನ್ನುತ್ತಾರೆ. ಆದರೆ ಇವುಗಳಲ್ಲಿ ಗಮನಿಸಬೇಕದ ವೈಚಿತ್ರ್ಯವೇನೆಂದರೆ, ಈ ಹೂವುಗಳಲ್ಲಿ ಅತ್ಯಂತ ಹೆಚ್ಚಿನ ಬಗೆಗಳನ್ನು ಬೇರೆ ಎಲ್ಲಿ ಬೆಳೆಸಿದರೂ ಅವುಗಳ ಸ್ವಕೀಯವಾದ ಬಣ್ಣ ಇರುವದೇ ಹೊರತು, ಹಿಮಾಲಯದಲ್ಲಿ ಅವುಗಳಿಗೆ ಸಹಜ ವಾಗಿರುವ ಆ ಮೂಲಸುಗಂಧವು ಮಾತ್ರ ಇರುವದಿಲ್ಲ.

ಹೀಗೆಯೇ ಪಾಶ್ಚಾತ್ತ್ಯ ವಿದ್ಯಾಭ್ಯಾಸದಿಂದ ಮತ್ತರಾದ ನಮ್ಮ ತರುಣರು ತಮ್ಮ ಯೂರೋಪಿಯನ್ ಪ್ರೊಫೆಸರ್‌ಗಳು ಬರೆದಿರುವ ತತ್ತ್ವ ಶಾಸ್ತ್ರಗಳನ್ನು ಓದಿ, ಅವುಗಳು ಮೂಲತಃ ಪಾಶ್ಚಾತ್ತ್ಯ ತತ್ತ್ವವಿಚಾರಗಳೆಂದೇ ತಿಳಿದು, ಭಕ್ತರಾಗಿ

ಅವುಗಳನ್ನು ಮೆಚ್ಚಿ ಕೊಂಡಾಡುತ್ತಾರೆ. ಆದರೆ ಆ ತತ್ತ್ವವಿಚಾರಗಳು ನಮ್ಮ ವೇದಾಂತ ವಿಚಾರದ ಪ್ರತಿಧ್ವನಿಗಳೇ ಎಂಬದನ್ನು ತಿಳಿಯರು ; ಆ ಪಾಶ್ಚಾತ್ತ್ಯ ವಿಚಾರ ಕುಸುಮಗಳು, ತಮ್ಮ ಮಾತೃಭೂಮಿಯಾದ ಭಾರತದೇಶದ ವೇದಾಂತ ಕಮಲಾಕರದಿಂದಲೇ ಒಯ್ಯಲ್ಪಟ್ಟಿರುವ ಪುಷ್ಪ ಬೀಜಗಳಿಂದ ಆ ವಿದೇಶದಲ್ಲಿ ಬೆಳೆಸಲ್ಪಟ್ಟ ವಿಜಾತೀಯ ಕುಸುಮಗಳೆಂಬದನ್ನು ಆ ನಮ್ಮ ಮುಗ್ಧತರುಣರು ತಿಳಿಯರು. ಆದರೆ, ಮುಖ್ಯವಾದ ಭೇದವೇನೆಂದರೆ, ಆ ಅದ್ಭುತ ಕುಸುಮಗಳು ಯೂರೋಪಿಯನ್ ತತ್ತ್ವಬೋಧಕರ ಕೈಯಲ್ಲಿ ವಿರಾಗ-ತ್ಯಾಗರೂಪವಾದ ತಮ್ಮ ದಿವ್ಯ ಪರಿಮಳವನ್ನು ಕಳೆದುಕೊಂಡಿವೆ. ಯೂರೋಪಿಯನ್ ತತ್ತ್ವಜ್ಞರು ಬೋಧಿಸುವ ವೇದಾಂತದ ಪ್ರತಿರೂಪವು ಭಾರತೀಯ ಮೂಲ ವೇದಾಂತದ ರೂಪವನ್ನೂ ಬಣ್ಣವನ್ನೂ ಮಾತ್ರ ಉಳಿಸಿಕೊಂಡಿದೆ ; ಆದರೆ ಅದು ಸ್ವಾನುಭವ ರೂಪವಾದ ಮಧುರಗಂಧವನ್ನು ಕಳೆದುಕೊಂಡಿದೆ. ಕನ್ನಡಿಯಲ್ಲಿ ಅಥವಾ ನೀರಿನಲ್ಲಿ ತೋರುವ ಗುಲಾಬಿಯ ಪ್ರತಿಬಿಂಬದಲ್ಲಿ ನಿಜಗುಲಾಬಿಯ ರೂಪವೂ ವರ್ಣವೂ ಮಾತ್ರ ತೋರುತ್ತದೆ. ಆದರೆ ಅದರ ಸುವಾಸನೆಯು ಮಾತ್ರ ಇರುವದಿಲ್ಲ.

ಅವಸೇ ಗುಲ್ ಮೇ ರಂಗ್ ಹೈ ಗುಲ್‌ಕಾ, ವ ಲೇಕಿನ್. ಬೂ ನಹೀ.

ಈ ಕಠಿಣತಮ ಯಾತ್ರೆಯಲ್ಲಿ ಹೊರಡುವಾಗಲೇ ಅನಾರೋಗ್ಯವಾಗಿದ್ದ ರಾಮನ ಶರೀರದ ಗತಿಯೇನು ? ಆಶ್ಚರ್ಯ ! ಆ ದಿನ ಅವನಿಗೆ ತನ್ನಿಂದ ತಾನೇ ಆರೋಗ್ಯವಾಯಿತು ; ಕಾಹಿಲೆಯೂ ಇಲ್ಲ ; ಆಯಾಸವೂ ಆಗಲಿಲ್ಲ ; ಯಾವ ತೊಂದರೆಯೂ ಇಲ್ಲ, ಜೊತೆಗೆ ಬಂದಿದ್ದ ಆ ಐವರು ಕಾಡು ಜನರಲ್ಲಿ ಒಬ್ಬನಾದರೂ ರಾಮನನ್ನು ಹಿಂದೆ ಹಾಕಿ ಮುಂದೆ ನಡೆಯುವದು ಸಾಧ್ಯವಾಗಲಿಲ್ಲ. ನಾವು ಪರ್ವತಗಳನ್ನು ಸುಮ್ಮನೆ ಹತ್ತುತ್ತಾ ಹತ್ತುತ್ತಾ ಏರುತ್ತಾ ಏರುತ್ತಾ ಹೋದೆವು. ಎಲ್ಲಿ ಎಂದೂ ಮಳೆಯಾಗುವದಿಲ್ಲವೋ ಆದರೆ ಹಿಮವೇ ಕೃಪಾವರ್ಷಣದಂತೆ ಸಮೃದ್ಧಿಯಾಗಿ ಸುರಿಯುತ್ತಿರುತ್ತದೋ ಅಲ್ಲಿಗೆ ನಾವು ಸೇರುವದರೊಳಗೆ ಪ್ರತಿಯೊಬ್ಬರಿಗೂ ಬಹಳ ಹಸಿವಾಯಿತು. ಈ ಅತ್ಯುನ್ನತವಾದ ಬೋಳು ಬೆಟ್ಟಗಳ ಬಕ್ಕತಲೆಯ ಮೇಲೆ ಯಾವ ಬಗೆಯ ಸಸ್ಯದ ಸೆಲೆಯೇ ಇರಲಿಲ್ಲ. ನಾವು ಅಲ್ಲಿಗೆ ಹೋಗುವದಕ್ಕೆ ಮುಂಚೆ ಹೊಸದಾಗಿ ಮಂಜು ಬಿದ್ದಿತ್ತು.

ಅಲ್ಲಿ ದೊಡ್ಡದೊಂದು ಕಲ್ಲು ಚಪ್ಪಡಿಯ ಮೇಲೆ ಕೆಂಪದೊಂದು ಕಂಬಳಿಯನ್ನು ರಾಮನಿಗೆ ಜಮಖಾನವಾಗಿ ಹಾಸಿದರು. ಹಿಂದಿನ ರಾತ್ರಿ ಬೇಯಿಸಿದ್ದ ಬಟಾಟೆಗಳನ್ನು

(Potatoes) ರಾಮನಿಗೆ ಕೊಟ್ಟರು , ಆ ಕಾಡುಜನರು ತಂಗುಳಾದ ಅವುಗಳನ್ನೇ ತಾವೂ ಅತ್ಯಂತ ಸಂತೋಷ–ಕೃತಜ್ಞತೆಗಳಿಂದ ತಿಂದರು. ಬೆಳ್ಳಗೆ ಥಳಥಳಿಸುತ್ತಿದ್ದ ಹಗುರವಾದ ನೀರ್ಗಲ್ಲ ಹಳುಕುಗಳೇ ನಮಗೆ ಒಣ, ಗಟ್ಟಿಯಾದ ನೀರಿನ ಭೋಗ ವಾಯಿತು. ಊಟ ಮುಗಿದ ಕೂಡಲೇ ಉತ್ಸಾಹದಿಂದ ಪುನಃ ಎದ್ದು ಹೊರಟೆವು. ಎಡೆಬಿಡದೆ ಮುಂದೆ ಮುಂದೆ, ಮೇಲೆ ಮೇಲೆ ಶ್ರಮದಿಂದ ಏರುತ್ತಾ ಹೋದೆವು. ಆ ಪಳಗಿದ ಪರ್ವತಾರೋಹಿಗಳಲ್ಲಿ ಒಬ್ಬ ಕೇವಲ ಯುವಕನೇ ಬಹಳ ಆಯಾಸ ವಾದ್ದರಿಂದ ಮುಂದೆ ನಡೆಯಲಾರದೇ ಸುಸ್ತಾಗಿ ಬಿದ್ದು ಬಿಟ್ಟನು. ಅವನ ಶ್ವಾಸ ಕೋಶಗಳೂ ಅಂಗಾಂಗಗಳೂ ಕೆಲಸಮಾಡಲಾರದೆ ನಿರ್ವಿಣ್ಣವಾದವು. ಅವನು ತಲೆ ತಿರುಗುವದೆಂದು ಹೇಳಿದ್ದರಿಂದ ಅವನನ್ನು ಆಗಿನ ಮಟ್ಟಿಗೆ ಅಲ್ಲಿಯೇ ಬಿಟ್ಟು, ನಾವು ಸ್ವಲ್ಪ ಮುಂದೆ ನಡೆಯುತ್ತಿರುವದರೊಳಗೆ ಮತ್ತೊಬ್ಬ ಸಂಗಡಿಗನೂ ಎಚ್ಚರ ತಪ್ಪಿ ಬಿದ್ದನು. ಅವನು " ಅಯ್ಯೋ ! ನನ್ನ ತಲೆ ಗಿಮ್ಮನೆ ಸುತ್ತುತ್ತಾ ಇದೆ ; ತಲೆ ಎತ್ತಲಾರೆ. " ಎಂದು ಕುಸಿದುಬಿದ್ದನು. ತತ್ಕಾಲಕ್ಕೆ ಅವನನ್ನೂ ಕೈ ಬಿಟ್ಟು ಮುಂದೆ ನಡೆದೆವು. ಸ್ವಲ್ಪ ಮುಂದೆ ಹೋಗುವದರೊಳಗೆ ಮೂರನೆಯವನೂ ಬಿದ್ದು ಹೋದನು. ಅವನ ಮೂಗು ಬಿಚ್ಚಿಕೊಂಡು, ರಕ್ತ ಸುರಿಯತೊಡಗಿತು. ಈಗ ರಾಮನು ಇಬ್ಬರೇ ಸಂಗಡಿಗರೊಡನೆ ಮುಂದೆ ನುಗ್ಗುತ್ತಾ ಹೋಗುತ್ತಿದ್ದಾನೆ.

ಮೂರು ಸುಂದರವಾದ ಸಾರಂಗಗಳು ಅತ್ಯಂತ ಮನೋಹರವಾಗಿ ಪುಟನೆಗೆದು ಹಾರುತ್ತಾ ಓಡುತ್ತಿರುವದನ್ನು ಕಂಡೆವು.

ನಾಲ್ಕನೆಯ ಸಂಗಡಿಗನೂ ಹಿಂದೆ ಬೀಳುತ್ತಾ ಬರುತ್ತಿದ್ದಾನೆ ; ಕಡೆಗೆ ಮಂಜು ಮುಚ್ಚಿದ್ದ ಕಲ್ಲಿನ ಮೇಲೆ ಮಲಗಿ ಬಿಟ್ಟಿದ್ದಾನೆ. ಸಮೀಪದಲ್ಲಿ ಎಲ್ಲಿಯೂ ದ್ರವ ರೂಪವಾದ ಜಲವು ತೋರಲಿಲ್ಲ ; ಆದರೆ ಆ ಮನುಷ್ಯನು ಮಲಗಿದ್ದ ಕಲ್ಲಿನ ಕೆಳಗೆ ಆಳವಾದ ತಳದಲ್ಲಿ ನೀರು ಹರಿಯುತ್ತಿರುವ ಗುಳುಗುಳು ಶಬ್ದವು ಕೇಳಿಸುತ್ತಿತ್ತು. ಒಬ್ಬ ಬ್ರಾಹ್ಮಣನು ಮಾತ್ರ ಈಗ ರಾಮನ ಜೊತೆಗೆ ಬರುತ್ತಿದ್ದಾನೆ. ಅವನು ಹಿಂದೆ ತಿಳಿಸಿದ್ದ ಕೆಂಪು ಕಂಬಳಿಯನ್ನೂ ಒಂದು ದೂರವರ್ಶಕ " ಟೆಲೆಸ್ಕೋಪ್ "ನ್ನೂ ಹಸುರು ಕನ್ನಡಕವನ್ನೂ ಮತ್ತು ಒಂದು ಕೈಕೊಡಲಿಯನ್ನೂ ಹಿಡಿದುಕೊಂಡು ಬರುತ್ತಿದ್ದಾನೆ. ಇಲ್ಲಿ ಗಾಳಿಯು, ಉಸಿರಾಡುವದಕ್ಕೆ ಕಷ್ಟವಾಗುವಷ್ಟು ವಿರಳ ವಾಯಿತು ಬಹಳ ವಿಚಿತ್ರ ! ಎರಡು ಗರುಡಪಕ್ಷಿಗಳು ನಮ್ಮ ತಲೆಯ ಮೇಲೆ ಹಾರಿಹೋದವು. ನೀಲಿ ಬಣ್ಣದ ಬಹಳ ಹಳೆಯ ಮಂಜಿನ ಕಡಿದಾದ ಇಳಿಜಾರನ್ನು

ಏರಬೇಕಾಯಿತು ಆ ಇಳಿಜಾರಿನಲ್ಲಿ ಹೆಜ್ಜೆಗಳನ್ನು ಊರಿ ಏರಲು ಸಹಾಯವಾಗುವದಕ್ಕಾಗಿ ಜೊತೆಗಿದ್ದವನು ಮೆಟ್ಟಲುಗಳನ್ನು ಕಡಿಯುವದಕ್ಕೆ ತೊಡಗಿದನು. ಆದರೂ ಆ ಅತಿ ಪುರಾತನ ಮಂಜು ಬಹಳ ಕಠಿಣವಾಗಿದ್ದುದರಿಂದ ಅದನ್ನು ಕಡಿಯಲಾಗದೆ ಆ ಬಡಪಾಪಿಯ ಕೊಡಲಿಯು ಮುರಿದು ಬಿತ್ತು. ಆಗಲೇ ಅಲ್ಲಿಯೇ ಭಾರಿ ಮಂಜಿನ ಮಳೆ ಹಠಾತ್ತನೆ ಸುರಿದು ನಮ್ಮನ್ನು ಮುಸುಕಿತು. ಜೊತೆಗಾರನು ಬಹಳ ಎದೆಗೆಟ್ಟಿದ್ದರಿಂದ, ದೇವರು ಆ ಮಂಜಿನ ಮಳೆಯ ಮೂಲಕ ನಮಗೆ ಕೆಡುಕಿಗಿಂತಲೂ ಹೆಚ್ಚು ಒಳ್ಳೆಯದನ್ನೇ ಮಾಡಲು ಇಚ್ಛಿಸಿದ್ದಾನೆಂದು, ರಾಮನು ಅವನಿಗೆ ಬಹಳ ಭರವಸೆ ಕೊಟ್ಟು ಪ್ರೋತ್ಸಾಹಿಸಿದನು. ದೇವರ ದಯದಿಂದ ಅದು ಹಾಗೆಯೇ ಆಯಿತು. ಆ ಭಯಂಕರ ಮಂಜಿನ ಮಳೆಯಿಂದ ನಮ್ಮ ಪ್ರಯಾಣವು ಹೆಚ್ಚು ಸುಲಭವಾಯಿತು. ಗಟ್ಟಿಯಾದ ಚೂಪನೆಯ ಕೋಲುಗಳನ್ನು ಊರಿಕೊಂಡು ಆ ಉನ್ನತವಾದ ಇಳಿಜಾರು ಪರ್ವತವನ್ನು, ಅಂತೂ, ಹತ್ತಿದೆವು. ಆಹಾ! ನಮ್ಮೆದುರಿಗೆ ಮೈಲುಗಟ್ಟಲೆ ಅಗಲವಾದ ಕಣ್ಣು ಕೋರೈಸುವಂಥ ವಿಶಾಲವಾದ ಸುಂದರ ಹಿಮಾಚ್ಛಾದಿತ ಸಮತಳ ಕ್ಷೇತ್ರವು ಚಾಚಿಕೊಂಡಿದ್ದಿತು ಸುತ್ತಲೆಲ್ಲಾ ಪ್ರಕಾಶಿಸುತ್ತಿರುವ ರಜತಮಯವಾದ ಹಿಮರಾಶಿಯ ಉಜ್ವಲವಾದ ಭೂಪ್ರದೇಶ. ಸಂತೋಷವೇ ಸಂತೋಷ! ಉತ್ಕೃಷ್ಟವೂ ಭವ್ಯವೂ ದಿವ್ಯವೂ ಅದ್ಭುತವೂ ಆದ ದೇದೀಪ್ಯಮಾನ ಕ್ಷೀರಸಾಗರವಲ್ಲವೆ ಅದು! ರಾಮನ ಆನಂದಕ್ಕೆ ಮಿತಿಯೇ ಇರಲಿಲ್ಲ. ಈಗ ಅವನು ಅತ್ಯಂತ-ವೇಗದಿಂದ ಆ ನೀರ್ಗಲ್ಲ ನೆಲದ ಮೇಲೆ ಅಥವಾ ಆ ಘನಹಿಮದ ನದಿಯ ಮೇಲೆ ಓಡತೊಡಗಿದನು ಕಾಲಿನಲ್ಲಿ 'ಕ್ಯಾನ್ವಾಸ್ ಷೂ' ಗಳಿದ್ದವು, ಹೆಗಲ ಮೇಲೆ ಕೆಂಪು ಕಂಬಳಿ ಇದ್ದಿತು. ಈಗ ಕೊನೆಯಲ್ಲಿ ಅವನ ಜೊತೆಯಲ್ಲಿ ಯಾರೂ ಇಲ್ಲ

ಆಖಿರ್‌ಕೇ ತಈ ಹಸ್ ಅಕೇಲಾ ಹೋ ಸಿಧಾರಾ

ರಾಮನೊಬ್ಬನೇ ಮಂಜಿನ ಸಾಗರದ ಮೇಲೆ ಮೂರು ಮೈಲಿಗಳು ನಡೆದು ಹೋದನು ; ಕೆಲವು ಸಮಯ ಕಾಲುಗಳು ದಟ್ಟವಾದ ಮಂಜಿನ ಹಾಸಿನಲ್ಲಿ ಹೂತು ಕೊಂಡು ಬಿಡುತ್ತಿದ್ದವು, ಬಹಳ ಶ್ರಮದಿಂದ ಕಿತ್ತುಕೊಳ್ಳಬೇಕಾಗುತ್ತಿದ್ದಿತು. ಕೊನೆಗೆ ಒಂದು ಮಂಜಿನ ದಿಬ್ಬದ ಮೇಲೆ ಕೆಂಪು ಕಂಬಳಿಯನ್ನು ಹಾಸಿಕೊಂಡು ರಾಮನೊಬ್ಬನೇ, ಎರಡನೆಯ ಯಾರೂ ಇಲ್ಲದೆ—ಏಕಮೇವಾದ್ವಿತೀಯನಾಗಿ—ಪ್ರಪಂಚದ ಎಲ್ಲಾ ಗಲಭೆಗಳನ್ನೂ ಸಂಕ್ಷೋಭೆಗಳನ್ನೂ ಮೀರಿ, ಜನ ಜಂಗುಳಿಯ ಹೊಗೆಯನ್ನೂ ಹಗೆಯನ್ನೂ ಹಾರಿ ಬಹುದೂರ ಆಚೆಗೆ, ಕೈವಲ್ಯದಲ್ಲಿ ಕುಳಿತಿದ್ದಾನೆ. ಇಲ್ಲಿ ಪರಿಪೂರ್ಣ ನಿಶ್ಶಬ್ದದ ಮೌನವೇ ಮೌನ! ಇಲ್ಲಿ ಮೌನದ ಪ್ರಭುತ್ವ! ಮೌನ

ಸಾಮ್ರಾಜ್ಯದಲ್ಲಿ ಪರಮ ಶಾಂತಿಯ ಸಾರ್ವಭೌಮತ್ವ ! ಒಳಹೊರಗೆ ಪರಮಾನಂದದ ಅತ್ಯಂತ ಸೂಕ್ಷ್ಮಸಂವೇದನೆಯ ಸ್ಪಷ್ಟಸ್ಪಂದನವಲ್ಲದೆ ಬೇರಾವ ಬಗೆಯ ಶಬ್ದವೂ ಇಲ್ಲ. ಈ ಆನಂದವು ಘನ ಘೋರವೆನಿಸಿದೆ ! ಹೃದಯದಲ್ಲಿ ಆನಂದದ ಸ್ಫೋಟ ! ಆನಂದದ ಗುಡುಗು ಸಿಡಿಲು ; ಆನಂದದ ಬಿರುಮಳೆ ! ಆನಂದದ ಚಂಡಮಾರುತ ! ಪ್ರಚಂಡ ವೃಷ್ಟಿ ! ಆನಂದದ ಸೋನೆ, ಜಡಿಮಳೆ ! ಅತ್ಯಂತ ದಿವ್ಯಗಂಭೀರ ಏಕಾಂತ !

ಅಲ್ಲಿ ದಟ್ಟವಾಗಿ ಮುಸುಕಿದ್ದ ಮೋಡದ ತೆರೆಯು ಸ್ವಲ್ಪ ತೆಳ್ಳಗಾಯಿತು. ಆ ತೆಳುವಾದ ಮೋಡದ ಮೂಲಕ ತೂರಿಬಂದ ಸೂರ್ಯಕಿರಣಗಳು ಆ ಪ್ರಕೃತಿದೃಶ್ಯದ ಮೇಲೆ ಪ್ರಸರಿಸಿ, ಎಲ್ಲೆಲ್ಲಿಯೂ ಬೆಳ್ಳಗೆ ಬೆಳ್ಳಿಯಂತೆ ಬೆಳಗುತ್ತಿದ್ದ ಆ ಮಂಜಿನ ಕಡಲನ್ನು ಧಳಧಳಿಸುವ ಹೊಂಗಡಲನ್ನಾಗಿ ಮಾಡಿದವು. ರಂಜಿಸುತ್ತಿದ್ದ ರಜತ ಗಿರಿಯು ಜ್ವಲಿಸುತ್ತಿರುವ **ಸುವರ್ಣಮೇರುವಾಯಿತು - ಸುಮೇರುವಾಯಿತು !** ಆಹಾ ! ಬಂಗಾರದ ಬೆಟ್ಟ ಕನಕ ಪರ್ವತ ! ಸುಮೇರು ! ಎಷ್ಟು ಉಚಿತವಾದ ನಾಮ, ಸರಿಯಾದ ಹೆಸರು !

ಓ, ಪ್ರಪಂಚದ ಜನರೆ ! ಗಮನಿಸಿ, ಗುರುತಿಟ್ಟುಕೊಳ್ಳಿರಿ ; ನೆನಪಿನಲ್ಲಿಡಿರಿ. ಎಂಥಾ ಸುಂದರ ತರುಣಿಯ ಕೆನ್ನೆಯ ಮೇಲೆ ಮಿಂಚುವ ಗುಲಾಬಿಯ ಕಳೆಯಾದರೂ ಮುಖದ ಮನೋಹರ ಕಾಂತಿಯಾದರೂ ಯಾವ ಸ್ವರ್ಣಾಭರಣ ರತ್ನಾಭರಣ ಗಳಾದರೂ ಎಂಥಾ ಭವ್ಯ ಭವನಗಳಾದರೂ ಈ ಸುಮೇರುವಿನ ಅತೀಂದ್ರಿಯವಾದ ಅನಂತ ಸಮ್ಮೋಹಕ–ಚಿತ್ತಾಕರ್ಷಕ–ಶಕ್ತಿಯಲ್ಲಿ ಲವಲೇಶಗುಣವನ್ನೂ ಪಡೆಯ ಲಾರವು. ಆದರೆ ನಿಮ್ಮನ್ನು ನೀವು ತಿಳಿದಾಗ ಇಂಥಾ ಅಸಂಖ್ಯಾತ ಸುಮೇರುಗಳನ್ನು ನಿಮ್ಮೊಳಗೇ ಕಾಣುತ್ತೀರಿ. ಆಗ ಸಮಸ್ತ ಪ್ರಕೃತಿಯೂ 'ಮೋಡದಿಂದ ಮಣ್ಣು ಹೆಂಟೆಯವರೆಗೂ ನೀಲಾಕಾಶದಿಂದ ಪಚ್ಚೆ ಪೈರಿನ ವರೆಗೂ ಗರುಡನಿಂದ ಗುಬ್ಬಿಯ ವರೆಗೂ' ನಿಮಗೆ ಪೂಜೆಯನ್ನು ಸಲ್ಲಿಸುತ್ತದೆ. ಯಾವ ದೇವತೆಯೂ ನಿಮ್ಮ ಆಜ್ಞೆಯನ್ನು ಮೀರಲು ಧೈರ್ಯಮಾಡಲಾರ !

ಓ ಆಕಾಶವೆ ! ನಿರ್ಮಲವಾಗು ! ಭಾರತದ ಮೇಲೆ ತೂಗಾಡುತ್ತಿರುವ ಅಜ್ಞಾನ ಮೇಘಗಳೆ ಚೆಲ್ಲಾಪಿಲ್ಲಿಯಾಗಿ ಚೆದರಿಹೋಗಿ ! ಈ ಪುಣ್ಯಭೂಮಿಯ ಮೇಲೆ ನೀವಿನ್ನೂ ನಿಮ್ಮ ನೆರಳನ್ನು ಸಹ ಬೀಳಿಸಲಾಗದು. ಓ ಹಿಮಾಲಯದ ಹಿಮಗಳೆ, ನಿಮ್ಮ ಪಾರಿಶುದ್ಧತೆಯಲ್ಲಿ ನಿಮ್ಮ ಸ್ಥಿರತೆ ಇರಲಿ, ಸತ್ಯಪ್ರಕಾಶದಲ್ಲಿ ನಿಮ್ಮ ವಿಶ್ವಾಸ ನಿಷ್ಠೆಗಳಿರಲಿ, ಎಂದು ನಿಮ್ಮ ಪ್ರಭುವು ನಿಮಗೆ ಆಜ್ಞೆಮಾಡುತ್ತಾನೆ,

ದ್ವೈತಭ್ರಮೆಯಿಂದ ಮಲಿನವಾದ ನೀರನ್ನು ಎಂದೆಂದಿಗೂ ನೀವು ಕೆಳಗೆ ಮೈದಾನಗಳಿಗೆ ಕಳಿಸಕೂಡದು.

ಮೋಡಗಳು ದಿಕ್ಕಾಪಾಲಾಗಿ ಚೆದರಿ ಹೋದವು ಹಿಮಗಳೆಲ್ಲಾ ಕಾಷಾಯ ವರ್ಣದಿಂದ ರಂಜಿತವಾದವು. ಎಲೆಲಾ, ಇದೇನು ! ಈ ಪರ್ವತಗಳೂ ಸಂನ್ಯಾಸವನ್ನು ಸ್ವೀಕರಿಸಿದವೆ ? ರಾಮನ ಮೇಲಿನ ವಿಶ್ವಾಸದಿಂದ ಖಂಡಿತವಾಗಿಯೂ ಇವು, ರಾಮನ ಪರಿವಾರದ ವೈಶಿಷ್ಟ್ಯದ ಪೋಷಾಕನ್ನೇ ಧರಿಸಿವೆ. ಎಂಥಾ ಅದ್ಭುತ ದೃಶ್ಯ ! ಈ ಪರ್ವತಹಿಮಗಳು ರಾಮನ ಸಂದೇಶವಾಹಕ ರಾಗುವದಕ್ಕೆ ವಿನೀತ ವಿಶ್ವಾಸದಿಂದ ರಾಮನ ಕಡೆಗೆ ನೋಡುತ್ತಿವೆ ಓಂ ! ಓಂ ! ಓಂ !

ಹುರಾ ! ಹುರೇ ! ಭಲಾ ! ಭಲೇ ! ಉಘೇ ! ಉಘೇ ! ಜೈ ! ಜೈ !
ಅಖಂಡ ಮಂಡಲಾಕಾರದ ಈ ಚರಾಚರ ಜಗವೆಲ್ಲವು,
ಒಂಬತ್ತು ಪಟ್ಟು ರಹಸ್ಯಕವಿದಿಹುದ ನೋಡಲು ಕೌತುಕವು :
ದಿಗ್ಭ್ರಮೆ ಹಿಡಿದಿಹ ಜ್ಞಾನಿಗಳಾದರು ತಿಳಿಯದಾದರದರ,
ಶ್ರಮಿಸುವ ಹೃದಯದ ಗೂಢವ ತಿಳಿಸದೆ ಪೆಚ್ಚಾದರು, ಪೂರ್.
ಓ ಕಾಲವೆ, ತುಡಿ ತುಡಿ, ಮಿಡಿಯುವ ಪ್ರಕೃತಿಯ ಎದೆಯೊಡನೆ,
ಸಕಲವು ಸ್ಪಷ್ಟವು, ಮೂಡಲ-ಪಡವಲ ನಡುವೆಲ್ಲವು ಒಡನೆ.

ಅಮೆರಿಕಾದ ಋಷಿಯು,

"Well, Nature is the incarnation of a thought and turns to a thought again as ice becomes water and gas."

"ಒಳ್ಳೆಯದು, ಒಂದು ಭಾವದ ಅವತಾರವೇ ಪ್ರಕೃತಿ ; ಮಂಜಿನ ಗಡ್ಡೆಯು ನೀರು ಮತ್ತು ಆವಿಯು ಆಗುವಂತೆ ಪ್ರಕೃತಿಯು ಪುನಃ ಭಾವರೂಪಕ್ಕೆ ತಿರುಗುತ್ತದೆ" ಎಂದು ಹೇಳುತ್ತಾನೆ.

ಮನಸ್ಸು ಅವಪಾತವಾಗಿ (Precipitated)–ಪ್ರಕ್ಷೇಪವಾಗಿ–ಘನೀಭೂತವಾದುದೇ ಪ್ರಪಂಚ ; ಆವಿಯರೂಪವನ್ನು ಪಡೆಯುವ (ವಾಯುಪರಿಣಾಮಶೀಲ) ಅದರ ಸಾರವೇ ಎಂದೆಂದಿಗೂ ತೊರಸೂಸಿ ಪುನಃ ಸ್ವಚ್ಛಂದ ಭಾವಸ್ಥಿತಿಯನ್ನು

ಪಡೆಯುತ್ತದೆ. ಇದರಿಂದ ಸಜೀವ ಅಥವಾ ನಿರ್ಜೀವ (ಜೈವಿಕ ಅಥವಾ ಅಜೈವಿಕ) ಪ್ರಾಕೃತಿಕ ವಸ್ತುಗಳ ಪ್ರಭಾವದ ಗುಣವೂ ತೀಕ್ಷ್ಣತೆಯೂ ಮನಸ್ಸಿನ ಮೇಲೆ ಉಂಟಾಗುತ್ತದೆ. ವ್ಯಕ್ತಿರೂಪ ಧರಿಸಿದ ಮನುಷ್ಯನೊಡನೆ ಪಶುದೇಹದಲ್ಲಿ ಸೆರೆ ಸಿಕ್ಕ ಮನುಷ್ಯನೂ (ಜೀವಿಯೂ) ಧಾತು (ಖನಿಜ) ವರ್ಗದಲ್ಲಿ ಘನೀ ಭೂತ (ಸ್ಫಟಿಕೀಕೃತ –Crystallised) ಮನುಷ್ಯನೂ ಸಸ್ಯವರ್ಗದಲ್ಲಿ ಸುಮ್ಮನೆ ಬೆಳೆಯುತ್ತಿರುವ ಮನುಷ್ಯನೂ (ಜೀವಿಯೂ) ಮಾತನಾಡುತ್ತಾರೆ.

**ಪ್ರಶ್ನೆ**— ನನ್ನ ಭಾವವೇ ಪ್ರಪಂಚವಾದರೆ, ಮನಸ್ಸು ಘನೀಭೂತವಾದುದೇ (Mind Precipitated) ಪ್ರಪಂಚವಾದರೆ, ನನ್ನ ಇಷ್ಟಪ್ರಕಾರವಾಗಿ ಹೊರಗಿನ ವಸ್ತುಗಳೇಕೆ ಬದಲಾಯಿಸುವದಿಲ್ಲ ?

**ಉತ್ತರ** : ಗೌಡಪಾದ ಆಚಾರ್ಯರು ಹೇಳುವದೇನೆಂದರೆ,

ಜೀವಂ ಕಲ್ಪಯತೇ ಪೂರ್ವಂ ತತೋ ಭಾವಾನ್ ಪೃಥಗ್ವಿಧಾನ್ ।
ಬಾಹ್ಯಾನಾಧ್ಯಾತ್ಮಿಕಾಂಶ್ಚೈವ ಯಥಾ ವಿದ್ಯಸ್ತಥಾ ಸ್ಮೃತಿಃ ॥ ೨-೧೬ ॥
ಅವ್ಯಕ್ತಾ ಏವ ಯೇಽನ್ತಸ್ತು ಸ್ಫುಟಾ ಏವ ಚ ಯೇ ಬಹಿಃ ।
ಕಲ್ಪಿತಾ ಏವ ತೇ ಸರ್ವೇ ವಿಶೇಷಸ್ತ್ವಿನ್ದ್ರಿಯಾನ್ತರೇ ॥ ೨-೧೫ ॥

(ಜೀವನು) ಮೊದಲು (ನಾನು ಎನ್ನುವ) ಜೀವನನ್ನು ಕಲ್ಪಿಸುತ್ತಾನೆ. ಆ ಮೇಲೆ ಬೇರೆ ಬೇರೆಯ ವಿಧವಾದ ಹೊರಗಿನ ಮತ್ತು ಒಳಗಿನ ಭಾವಗಳನ್ನು (ಕಲ್ಪಿಸುತ್ತಾನೆ). ಎಂಥ ವಿದ್ಯೆಯುಳ್ಳವನೋ–ಅರಿವುಳ್ಳವನೋ, ಭಾವವುಳ್ಳವನೋ–ಅಂಥಾ ಸ್ಮೃತಿಯುವನಾಗಿ ಕಲ್ಪಿಸುತ್ತಾನೆ. ಕನಸಿನಲ್ಲಿ ಬರಿಯ ಅರಿವೇ ಹೊರಗಿನ ವಿಷಯ ಗಳಾಗಿಯೂ ಒಳಗಿನ (ವಿಷಯಿ) ನಾನು, ಭಾವನೆ, ಇಚ್ಛೆ ಮೊದಲಾದವು ಗಳಾಗಿಯೂ ಒಡೆದುಕೊಳ್ಳುತ್ತದೆ. ಎಚ್ಚರದಂತೆ ಕನಸಿನಲ್ಲಿಯೂ ಒಳಗಿನ ಭಾವಗಳು ನಮ್ಮ ಸ್ವಾಧೀನದಲ್ಲಿರುವಂತೆಯೂ ಹೊರಗಿನ ವಸ್ತುಗಳು (ಸಾಪೇಕ್ಷವಾಗಿ-ತಾರತಮ್ಯ ಭಾವದಿಂದ) ನಮ್ಮ ಹತೋಟಿಯನ್ನು ಮೀರಿರುವವೆಂದೂ ಹೊರಗಿನ ವಸ್ತುಗಳು ತಮ್ಮದೇ ಆದ ಇರುವಿಕೆಯನ್ನು ಪಡೆದು ಹೆಚ್ಚು ನಿಜವಾಗಿರುವವೆಂದೂ ತೋರು ತ್ತದೆ. ಆದರೆ ಎಚ್ಚರದ ದೃಷ್ಟಿಯಿಂದ ಕನಸಿನಲ್ಲಿರುವ ಹೊರಗಿನ ವಸ್ತುಗಳೂ ಒಳಗಿನ ಭಾವಗಳೂ ಅಲ್ಲಿ ತೋರುವ ನಿಜವೆಂಬುದೂ ಸುಳ್ಳೆಂಬುದೂ ಎಲ್ಲಾ ತನ್ನ ಭಾವನೆಯೇ, ಕಲ್ಪನೆಯೇ, ಸೃಷ್ಟಿಯೇ ಆಗಿವೆ. ಎಚ್ಚರದಲ್ಲಿ ಹೊರಗಿನ ವಸ್ತು ಗಳು ಹೆಚ್ಚು ವಾಸ್ತವವೆಂದೂ ಸ್ಥಿರವೆಂದೂ ಒಳಗಿನ ಭಾವನೆಗಳು ಸುಳ್ಳೆಂದೂ

ತೋರಿ ತೋರಿ ಅಡಗತಕ್ಕವೆಂದೂ ಕಾಣುತ್ತದೆ. ಆದರೆ ನಿಜವನ್ನು ತಿಳಿದವನಿಗೆ ಕನಸಿನ ಪ್ರಪಂಚದಂತೆ ಎಚ್ಚರದ ಪ್ರಪಂಚವೂ “ಕಲ್ಪಿತಾ ಏವ ತೇ ಸರ್ವೇ” ಎಲ್ಲವೂ ಕಲ್ಪಿತವೇ ಆಗಿ ತೋರುತ್ತವೆ. ತನ್ನ ಇಷ್ಟಾನುಸಾರವಾಗಿ ಹೊರಗಿನ ಜಗತ್ತನ್ನು ಬದಲಾಯಿಸುವದಕ್ಕೆ ಬಾರದಿದ್ದರೂ ಎಲ್ಲವೂ ಮನಃ ಕಲ್ಪಿತವಾದುವೆಂದೇ ಅವನು ತಿಳಿಯುತ್ತಾನೆ. ನಮ್ಮ ದೇಹದಲ್ಲಿ ನಡೆಯುವ ಅನೇಕ ಕಾರ್ಯಗಳಿಗೆ ನಮ್ಮ ಬುದ್ಧಿಯು ವಿವರಣೆಯನ್ನು ಕೊಡಲಾರದಾದರೂ ಈ ದೇಹವು ನಮ್ಮದೆಂದೇ ನಾವು ಭಾವಿಸುವದಿಲ್ಲವೇ ? ನಮ್ಮ ದೇಹವನ್ನು ಎತ್ತರದಲ್ಲಿ ಒಂದು ಅಂಗುಲ ಹೆಚ್ಚಾಗಲೀ ಕಡಿಮೆಯಾಗಲೀ ನಾವು ಮಾಡಿಕೊಳ್ಳಲಾರೆವಾದರೂ ಈ ದೇಹವು ನಮ್ಮದೆಂದೇ ಭಾವಿಸಂವದಿಲ್ಲವೆ ? ಹಾಗೆಯೇ ಜೀವನ್ಮುಕ್ತನು ತಾನು ಎಲ್ಲರ–ಎಲ್ಲವುಗಳ-ಆತ್ಮನೆಂದು ಅರಿತಿರುವದರಿಂದ ಎಲ್ಲವನ್ನೂ ತನ್ನವೆಂದೇ ಭಾವಿಸುತ್ತಾನೆ. ಅವನು ಪ್ರೇಮ ಸರ್ವಸ್ವವಾಗಿದ್ದಾನೆ; ವಿಶ್ವಪ್ರೇಮವಾಗಿದ್ದಾನೆ. ಎರಡನೆಯದಿಲ್ಲದ ಒಂದು ಅರಿವಿನ ಗಟ್ಟಿಯೇ ತಾನಾಗಿರುವದರಿಂದ ಎರಡಾಗಿ ತೋರುವ ಆದರ್ಶ–ವಾಸ್ತವ, ಸಿದ್ಧಿ–ಸಾಧನ, ಸ್ಥಿತಿ-ಗತಿ, ಊರು-ದಾರಿ ಈ ಮೊದಲಾದ ಭೇದಗಳು ಅವನ ದೃಷ್ಟಿಯಲ್ಲಿ ಹಾರಿಹೋಗುತ್ತವೆ.

## ಮಾಯಾ

ಭಾರತದಲ್ಲಿ ಕೆಲವು ಪ್ರಾಂತ್ಯಗಳಲ್ಲಿ ಬೆಂಕಿಯಕೊಳ್ಳಿಯನ್ನು ಅಥವಾ ಪಂಜಿನ ಜ್ವಾಲೆಯನ್ನು (Mahratti jwala) ತಿರುಗಿಸುವದು ಅಸಾಧಾರಣವೇನಲ್ಲ. ಭರಭರನೆ ಉರಿಯುವ ಪಂಜನ್ನು ಗಿರಗಿರನೆ ಸುತ್ತಿಸುವಾಗ ನಿಗಿ ನಿಗಿ ಹೊಳೆಯುವ ಜ್ವಾಲೆಯು ಒಮ್ಮೆ ಬೆಳಕಿನ ವಿಶಾಲವಾದ ವೃತ್ತದಂತೆ, ಇನ್ನೊಮ್ಮೆ ತುಂಡಾಗದಿರುವ ಬೆಂಕಿಯ ರೇಖೆಯಂತೆ, ಗೆರೆಯಂತೆ, ಪಟ್ಟೆಯಂತೆ, ಮತ್ತೊಮ್ಮೆ ಪ್ರಕಾಶದ ಅಂಡ ವೃತ್ತಾಕೃತಿಯಂತೆ, ಮೇಲೇರಿ, ಕೆಳಗಿಳಿದು, ಅಡ್ಡತಿರುಗಿ, ತನ್ನ ತೀವ್ರವಾದ ಪರಿಭ್ರಮಣದಲ್ಲಿ ವಿಸ್ಮಯಕಾರಕವಾದ, ವಿನೋದಕರವೂ ಆದ ವಿವಿಧ ಆಕೃತಿಗಳನ್ನೂ ರೂಪಗಳನ್ನೂ ಪಡೆದಂತೆ ತೋರುತ್ತದೆ. ಈ ಎಲ್ಲಾ ಆಕೃತಿವೈಚಿತ್ರ್ಯಗಳು ಆ ಪಂಜಿನ ಉರಿಯಲ್ಲಿ ಸ್ವಭಾವಸಿದ್ಧವಾಗಿ, ಅಂತರ್ಗತವಾಗಿ ಇವೆಯೆ ? ಅವು ಆ ಕೊಳ್ಳಿಯಿಂದ ಹೊರಗೆ ಬರುವವೆ ? ಅಥವಾ ಅವು ಹೊರಗಿಂದ ಬರುತ್ತವೆಯೆ ? ಆ ಪಂಜನ್ನು ಗಿರ್ರನೆ ತಿರುಗಿಸದಿರುವಾಗ ಆ ವಿಚಿತ್ರವಿಲಾಸವು ಅದರೊಳಗೆ ಪ್ರವೇಶಿಸುವದೆ ? ಅಥವಾ ಅದು ಹೊರಗೆ ಬೇರೆ ಎಲ್ಲಿಗಾದರೂ ಹೋಗುವದೆ ? ಕುತೂಹಲ

ಕರವಾದ ಬಗೆ ಬಗೆಯ ಈ ಎಲ್ಲಾ ಪ್ರಶ್ನೆಗಳಿಗೂ "ಇಲ್ಲ, ಇಲ್ಲ, ಇಲ್ಲ" ಎಂದು ನಿಷೇಧರೂಪವಾದ ಉತ್ತರವನ್ನೇ ಕೊಡಬೇಕಾಗುತ್ತದೆ. ಪಂಜು ಚಲಿಸಿ, ಗಿಮಿ ಗಿಮಿ ವೇಗದಿಂದ ಸುತ್ತುವಾಗ ನೇರವಾದ ಮತ್ತು ವಕ್ರವಾದ ರೇಖೆಗಳನ್ನು ತೋರಿಸುತ್ತದೆ; ಆ ಚಲನೆಯು ನಿಂತಾಗ ಪಂಜಿನಲ್ಲಿ ಅಂಥಾ ವಿಚಿತ್ರ ತೋರಿಕೆಯ ಸುಳಿವೂ ಇರುವದಿಲ್ಲ. ಪಂಜು ವೇಗವಾದ ಪರಿಭ್ರಮಣೆಯಲ್ಲಿ ಇದ್ದಾಗ ಕೂಡ ಆ ವಕ್ರ ರೇಖೆಗಳ ಯಾವ ಆಕೃತಿಗಳೂ ನಿಜವಾಗಿ ಇರಲಿಲ್ಲ. ಅವು ತೋರಿಕೆ ಮಾತ್ರ, ಅವು ಕ್ಷಣಿಕವಾಗಿ ತೋರಿ ಅಡಗಿದವು.

ಇದೇ ಪ್ರಕಾರ, ಚಲಿಸದೆ ಸುಮ್ಮನಿರುವ ಪಂಜಿನಂತೆ, ಶುದ್ಧ ಚೈತನ್ಯದಲ್ಲಿ ಅನೇಕ ವಿಧವಾದ ನಾಮರೂಪಗಳ–ದೃಶ್ಯ ಪ್ರಪಂಚದ–ಸೆಲೆಯೋ ಇಲ್ಲ. ಬಗೆ ಬಗೆಯ ನಾಮರೂಪಗಳು ತೋರುತ್ತಿರುವಾಗಲೂ ಪಂಜಿನ ಬೆಳಕಿನ (ಬೆಂಕಿಯ) ಆಕೃತಿಗಳಂತೆ ಅವು ಕೇವಲ ಭ್ರಮಾತ್ಮಕವಾದುವು. ದೃಶ್ಯವಿಲಾಸದ ದೋಷವು ಶುದ್ಧ ಚಿತ್ತನ್ನು ಚೈತನ್ಯವನ್ನು–ಎಂದೂ ಸೋಂಕುವದಿಲ್ಲ. ಚೈತನ್ಯವನ್ನು ದೃಶ್ಯವಿಲಾಸವು ಸೋಕುವದೂ ಇಲ್ಲ, ಬಾಧಿಸುವದೂ ಇಲ್ಲ. ಅವಿಭಾಜ್ಯವಾದ ಒಂದೇ ಜ್ಯೋತಿಯು ಯಾವಾಗಲೂ ಎಲ್ಲಾ ದೃಶ್ಯವಿಲಾಸಗಳಲ್ಲಿಯೂ ಸುಮನಾಗಿದೆ; ಆದರೆ ದೃಶ್ಯ ವಿಲಾಸವು ಮಾತ್ರ ಎಂದೂ ಜ್ಯೋತಿ (ಜ್ವಾಲೆ) ಯಲ್ಲಿ ಇಲ್ಲ. ಇದೇ ರೀತಿಯಲ್ಲಿ ಎಲ್ಲಾ ನಾಮ ರೂಪಗಳಲ್ಲಿಯೂ ಬ್ರಹ್ಮವಾಗಿರುವ ರಾಮನು ಅಭಿವ್ಯಕ್ತನಾಗಿದ್ದಾನೆ; ಆದರೆ ರಾಮನಲ್ಲಿ ನಾಮರೂಪಗಳು ಕ್ಷಣಿಕವೂ ಶೂನ್ಯಪ್ರಾಯವೂ ಆದುವು. ಪಂಜಿನ ಘಟನೆಯಲ್ಲಿ ಗೋಚರವಾಗುವ ದೃಶ್ಯಚಮತ್ಕಾರಕ್ಕೆ ಹೇಗೆ ಚಲನೆಯೋ ಕಾರಣವೋ ಹಾಗೆ ನಾಮರೂಪಾತ್ಮಕ ಪ್ರಪಂಚದ ನಾನಾತ್ವದ–ವೈವಿಧ್ಯತೆಯ–ತೋರಿಕೆಗೆ ಚೈತನ್ಯದ ಮಾಯಾಶಕ್ತಿಯೇ ಕಾರಣ.

ಇನ್ದ್ರೋ ಮಾಯಾಭಿಃ ಪುರುಷರೂಪ ಈಯತೇ !

ಶಕ್ತಿಗೆ ಸ್ವತಂತ್ರವಾದ, ತನ್ನ ಸ್ವಂತ ಇರುವಿಕೆ ಇಲ್ಲ. ಅದು ಒಮ್ಮೆ ವ್ಯಕ್ತವಾಗಬಹುದು; ಇನ್ನೊಮ್ಮೆ ವ್ಯಕ್ತವಾಗದೆ ಇರಬಹುದು. ಹೇಗಾದರೂ ಅದು ಆತ್ಮನನ್ನು ಬಿಟ್ಟು ಬೇರೆ ಇರಲಾರದು. ಈ ಮಾಯಾ ಶಕ್ತಿಯು ವ್ಯಕ್ತಿಯಸಂಬಂಧದಲ್ಲಿ ಅರಿವು ಎನ್ನಬಹುದಾದುದರಲ್ಲಿ ಅಥವಾ ಅರಿವು, ಚಲನೆ, ಅಥವಾ ಚಲನವಲನ, ಚಟುವಟಿಕೆ, ಕ್ರಿಯೆ, ಮನಸ್ಸು–ಈ ರೂಪಗಳಾಗಿ ತೋರಿಕೊಳ್ಳುತ್ತದೆ. ಚಲನೆಯಲ್ಲಿರುವ ಮನಸ್ಸು, ಮತ್ತು ದೃಶ್ಯಪ್ರಪಂಚ ಇವೆರಡೂ ಒಂದೇ ವಸ್ತುವಿನ

ಮುಮುಕ್ಷು, ಹಿಮ್ಮುಖಗಳಾಗಿವೆ. ಚಲಿಸದೆ ಸುಮ್ಮನಿರುವ ಮನಸ್ಸು ಅರಿವಿನೊಡನೆ (Consciousness) ಒಂದಾಗಿದೆ. ಕಾಮಗಳ ಮತ್ತು ಆಸಕ್ತಿಗಳ ಕಶ್ಮಲವನ್ನು ಕಳೆದ ಕೇವಲ (ಬ್ರಹ್ಮ) ಮನಸ್ಸು ತನ್ನ ಚಾಂಚಲ್ಯವನ್ನು ಬಿಟ್ಟು, ಸ್ಥಿರವಾಗುವ ಬಲವನ್ನು ಪಡೆಯುತ್ತದೆ. ಸಂಪೂರ್ಣ ಸ್ಥಿರತೆಯುಂಟಾದರೆ, ಮನಸ್ಸು ಬ್ರಹ್ಮ ದೊಡನೆ ಒಂದಾಗಿದೆ, ಅಥವಾ ಮನಸ್ಸು ಬ್ರಹ್ಮವಾಗಿದೆ. ಈ ಸಾಕ್ಷಾತ್ಕಾರದಿಂದ ಮಾಯೆಯನ್ನು ಮೀರಬಹುದು, ಜಯಿಸಬಹುದು ; ಪ್ರಪಂಚವು ಪರಿವರ್ತನೆಯಾಗಿ ನಂದನ ವನವಾಗುತ್ತದೆ. ಕಳೆದುಹೋದ ಸ್ವರ್ಗವು ಕೂಡಲೇ ಪುನಃ ಲಭಿಸುತ್ತದೆ. ಎಲ್ಲೆಲ್ಲಿಯೂ ಸೌಂದರ್ಯವು ಒಡೆದು ತೋರುತ್ತದೆ. ಭೇದಜ್ಞಾನವು ನಾಶವಾಗುವ ದರಿಂದ ಎಲ್ಲಾ ಚಿಂತೆಗಳೂ ಕಳವಳಗಳೂ ಪರಮ ದಿವ್ಯ ಸಚ್ಚಿದಾನಂದ ಸ್ವರೂಪದಲ್ಲಿ ಎಂದೆಂದಿಗೂ ಲೀನವಾಗಿ ಹೋಗುತ್ತವೆ.

ರಾಮನ ಸಮ್ಮುಖದಲ್ಲಿ, ಒಬ್ಬ ಯುವಕನು ಸುಗಂಧದ ಸುಖಾನುಭವಕ್ಕಾಗಿ ಒಂದು ಸುಂದರವಾದ ಗುಲಾಬಿಯನ್ನು ಗಿಡದಿಂದ ಕಿತ್ತನು ಅದರ ಪರಿಮಳವನ್ನು ಸೇವಿಸುವದಕ್ಕಾಗಿ ಅದನ್ನು ಅವನು ತನ್ನ ಮೂಗಿನ ಹತ್ತಿರ ತಂದ ಕೂಡಲೇ ಅದರೊಳಗಿಂದ ಒಂದು ಜೇನುಹುಳುವು ಹಾರಿ ಅವನ ಮೂಗಿನ ತುದಿಯನ್ನು ಕಡಿಯಿತು. ನೋವಿನಿಂದ ಅವನು ಕೂಗಿಕೊಂಡನು, ಕೈಯಿಂದ ಆ ಗುಲಾಬಿಯು ಜಾರಿ ಬಿದ್ದಿತು.

ಪ್ರತಿಯೊಂದು ಗುಲಾಬಿಯ ದಳಗಳೂ ಒಂದು ಜೇನುಹುಳುವನ್ನು ಮುಚ್ಚಿಟ್ಟು ಕೊಳ್ಳುವುದೆ ? ಖಂಡಿತವಾಗಿಯೂ ; ಪೀಡಾಕರವಾದ ಜೇನುಹುಳುವನ್ನು ಮುಚ್ಚಿಟ್ಟುಕೊಳ್ಳದ ವಿಷಯ ಸುಖದ ಒಂದು ಗುಲಾಬಿಯೂ ಇಲ್ಲ. ಅಂಕೆಯಿಲ್ಲದ ಆಶೆಗಳನ್ನು ಅನಿವಾರ್ಯವಾದ ದುಃಖಗಳು ಶಿಕ್ಷಿಸುತ್ತವೆ.

ಭಯಂಕರವಾದ ಮರೆವೆಗೆ ತುತ್ತಾಗಿರುವ ಓ ಜನರೆ, ನಿಮ್ಮನ್ನು ನೀವು ಮರೆಯಬೇಡಿರಿ. ಬೆಡಗಿನ ಗುಲಾಬಿಯನ್ನು ನೀವು ಕೀಳಬೇಕಾದುದಿಲ್ಲ ; ಪ್ರತಿ ಯೊಂದು ಪ್ರಫುಲ್ಲಿತ ಗುಲಾಬಿಯಲ್ಲಿರುವ ಮಧುರ ಸೌಂದರ್ಯವೂ ಸೌಗಂಧವೂ ನಿಮ್ಮದೇ, ನೀವೇ. ರಾಜನೂ ಅವನ ಪರಿವಾರವೂ ನಿಮ್ಮವೇ ಆಗಿವೆ. ಸೌಂದರ್ಯವೂ ಆಕೆಯ ಮೋಹಾಕರ್ಷಣೆಯೂ ರತ್ನ-ಬಂಗಾರಗಳೂ ಅವುಗಳ ಕಾಂತಿಯೂ ನಿಮ್ಮವೇ. ವ್ಯರ್ಥವಾದ ಕಾಮಗಳನ್ನು ಏತಕ್ಕಾಗಿ ಬೆಳೆಸಬೇಕು ? ಸರ್ವಸ್ವದಲ್ಲಿ, ದೇವ ರಲ್ಲಿ ನಿಮ್ಮ ಏಕತ್ವವನ್ನು ಅರಿಯಿರಿ. ಏಕಕಾಲದಲ್ಲಿ, ಸಹಸ್ರಾರು ಗೋಪಸ್ತ್ರೀಯರ

ಒಬ್ಬೊಬ್ಬರ ಕೈಯಲ್ಲಿಯೂ ಕೈಯಿಟ್ಟು ರಾಸಕ್ರೀಡೆಯಾಡಿದ ದಿವ್ಯ ಕೃಷ್ಣನೇ ನೀವು. ಸಮುದ್ರದಲ್ಲಿಯೂ ಅರಮನೆಯಲ್ಲಿಯೂ, ಹೂದೋಟದಲ್ಲಿಯೂ ಮರುಭೂಮಿಯಲ್ಲಿಯೂ, ಯುದ್ಧರಂಗದಲ್ಲಿಯೂ ಅಂತಃಪುರದಲ್ಲಿಯೂ ನೀವು ಯಾವಾಗಲೂ ಸಮವಾಗಿ ಇರುತ್ತೀರಿ.

ಅತ್ಯಂತ ಉನ್ನತವಾದ ಪರ್ವತಶಿಖರಗಳ ತುದಿಯಲ್ಲಿ ನಿಂತು ರಾಮನು ಕೂಗಿ ಹೇಳುತ್ತಾನೆ; ದಾರಿದ್ರ್ಯ ಮತ್ತು ದೌರ್ಬಲ್ಯಗಳನ್ನು ಹೇಳಿಕೊಳ್ಳುತ್ತಿರುವ ದುಃಖಿಗಳೇ, ಸರ್ವಸಮರ್ಥನಾದ ಪರಮಾತ್ಮನೇ, ರಾಮನೇ ನೀವು. ನಿಮ್ಮನ್ನು ನೀವು ಅಜ್ಞಾನದಲ್ಲಿ ಸೆರೆಹಾಕಿಕೊಳ್ಳಬೇಡಿ ; ನಿಮ್ಮ ಅವಿದ್ಯಾನಿದ್ರೆಯನ್ನೂ ಪ್ರಪಂಚದ ಸ್ವಪ್ನವನ್ನೂ ಜಾಡಿಸಿ, ಓಡಿಸಿರಿ. ಸರ್ವವಸ್ತುಗಳಲ್ಲಿಯೂ ಸರ್ವ ಸಾರವಾಗಿರುವುದು ನಿಮ್ಮ ಹೊರತು ಬೇರೆ ಇಲ್ಲದಿರುವಾಗ. ದುಃಖದುರವಸ್ಥೆಗಳಲ್ಲಿ ಸಹಾಯಶೂನ್ಯರಾಗಿ ಏಕೆ ಹೊರಳಾಡುತ್ತೀರಿ ? ನಿಮ್ಮನ್ನು ನೀವು ಅರಿತರೆ ಎಲ್ಲಾ ದುಃಖಗಳೂ ಮಾಯವಾಗುತ್ತವೆ. ಸರ್ವಸುಖದ ಸಾರವೇ ನೀವು ; ಎಲ್ಲಾ ಮೋದ ಪ್ರಮೋದಗಳ ಆತ್ಮವೇ ನೀವು. ನಿಮ್ಮನ್ನು ಯಾವದೂ ಬಾಧಿಸಲಾರದು. ಈ ರಾಮನಿಗಾಗಿ ಆದರೂ ನಿಮ್ಮ ಆತ್ಮನನ್ನು ಅರಿಯಿರಿ ; ತಡವೇಕೆ ? ಅದು ಹೇಗಿದೆಯೋ ಹಾಗೆ ಅರಿಯಿರಿ ; ಅದನ್ನು ಅರಿಯಲೇಬೇಕು. ಕುಂದದ ಸತತೋತ್ಸಾಹದಿಂದಲೂ ಶಕ್ತಿಗುಂದದ ಪ್ರಯತ್ನಗಳಿಂದಲೂ ಆದರೆ, ಎಂದಿಗೂ ಸೋಲದಿರುವ ಸೋಲಿನಿಂದಲೂ ರಾತ್ರಿಹಗಲೂ ನೀವು ಸುಖದ ಬೆನ್ನುಹತ್ತಿ ಬೇಟೆಯಾಡುತ್ತಿಲ್ಲವೆ ? ತಿಳಿಗೇಡಿಗಳೂ ಮೂರ್ಖರೂ ಆಗಬೇಡಿ. ಇಂದ್ರಿಯ ಗೋಚರ ವಿಷಯಗಳಲ್ಲಿ ಸುಖವನ್ನು ಹುಡಕಬೇಡಿ. ಇಂದ್ರಿಯಗಳಿಂದ ವಂಚಿತರಾದವರೆ ! ಹೊರಗೆ ವ್ಯರ್ಥವಾಗಿ ಹುಡುಕುವದನ್ನು ಬಿಡಿ. ಅಮೃತಸಾಗರವು ನಿಮ್ಮೊಳಗೇ ಇದೆ. ಸ್ವರ್ಗಸಾಮ್ರಾಜ್ಯವು ನಿಮ್ಮೊಳಗೇ ಇದೆ ಅಮೃತಗಳಿಗೆಲ್ಲಾ ಅಮೃತವು ನೀವೇ. ಮನಸ್ಸೂ ಮತ್ತು ಪ್ರಪಂಚವೂ ಎರಡೂ ಕೂಡ ಪರಮಾತ್ಮನ ಅರಿವಿನಲ್ಲಿ ಮುಳುಗಿ ಹೋಗಲಿ. ದಿವ್ಯವಾದ ಆನಂದೋನ್ಮಾದದಲ್ಲಿ ನಿಮ್ಮ ವ್ಯಕ್ತಿಗತವಾದ ಪುಟ್ಟ ಅಹಂಕಾರವನ್ನು ತೂರಿಬಿಡಿರಿ. ಪ್ರತ್ಯೇಕವಾದ ಈ ಮರ್ತ್ಯದೇಹಕ್ಕಾಗಿ, ಓ ಪ್ರೇಮಾತ್ಮರೆ ! ಅಷ್ಟೇಕೆ ಚಿಂತೆ ಮಾಡುತ್ತೀರಿ ? ಈ ಅನಾತ್ಮದ ಗತಿ ಏನಾಗುವದೋ ಎಂದು ಒಂದು ಆಲೋಚನೆಯನ್ನೂ ಮಾಡಬೇಡಿ. ಎಲ್ಲಾ ಸಂಬಂಧಗಳ ಮೂಢ ನಂಬಿಕೆಯನ್ನೂ ತೊಲಗಿಸಿರಿ. ಪರಮಾತ್ಮನನ್ನು ನೋಡದಿರುವ ಕಣ್ಣುಗಳು ನಾಶವಾಗಲಿ. ಕಾಮಗಳ ರೋಗವನ್ನು ಪೋಷಿಸುವ ಹೃದಯವು ಹಾಳಾಗಲಿ. ದೇವತ್ವವಿಲ್ಲದ ಎಲ್ಲವನ್ನೂ ತೊಡೆದುಹಾಕಿ. ನಿಮ್ಮಲ್ಲಿ

ಆತ್ಮನಿಷ್ಠೆಯು ದೃಢವಾಗಿರಲಿ. ಅಲ್ಲಿ ನಿಂದಾಸ್ತುತಿಗಳು ಪ್ರವೇಶಿಸಲಾರವು ; ಆಗ ಅಲ್ಪವಾದ ಸುಖದುಃಖಗಳು ಕದಲಿಸಲಾರವು. ನಿಮ್ಮ ಹೃದಯ ನೌಕೆಯಲ್ಲಿ ದೇವತ್ವವನ್ನು ಸ್ವೀಕರಿಸಿ ಎಲ್ಲವನ್ನೂ ಹೋಗಬಿಡಿ :—ಸಮುದ್ರದ ತೀರವನ್ನು ಬಿಡಿ ; ಅಹಂಕಾರವನ್ನು ಹೋಗ ಬಿಡಿ, ನೌಕಾಪಟವನ್ನು ಹೋಗ ಗೊಡಿ ! ಆದರೂ ವಿರಕ್ತಿ—ಭಕ್ತಿಗಳ ಬಿರುಗಾಳಿಯು ನಶ್ವರವಾದ ಮಾನವ ಜೀವದ ಸತ್ವವಿಲ್ಲದ ಕಪ್ಪು ಹತ್ತಿಯ ಬಡಪಟವನ್ನು ಬಿಡದೆ ತುಂಬಿಕೊಂಡು ಪರಮಾತ್ಮಪ್ರಜ್ಞೆಯ ಮಹಾ ಸಾಗರದ ಮೇಲೆ ನೇರವಾಗಿ ತಡೆಯಿಲ್ಲದೆ ತೇಲಿಸಿ ಸಾಗಿಸುತ್ತದೆ. ದಿವ್ಯವಾದ ಆನಂದಪರವಶತೆಯಲ್ಲಿ ಮುಳುಗಿ ಸತ್ತವನು ಸುಖಿ, ಸುದೈವಿ. ದಿವ್ಯೋನ್ಮಾದದಲ್ಲಿ ಪ್ರಜ್ಞಾಶೂನ್ಯನಾಗುವಷ್ಟು ಅಮಲೇರಿದವನು ಧನ್ಯ ! ಪ್ರಪಂಚದ ವಿಷಯಕ್ಕೆ ಇಲ್ಲದವನಾಗಿ ಆಳವಾದ ಆತ್ಮಾನಂದದ ಪರಮಾನಂದದಲ್ಲಿ ಮುಳುಗಿ ಲೀನನಾದವನೇ ಪರಮ ಪೂಜ್ಯ.

—ರಾಮ

ಓಂ ! ಓಂ ! ಓಂ !

ವರ್ತಮಾನ—ಭೂತ—ಭವಿಷ್ಯದ್ವಸ್ತುಗಳ ಮೂಲ ನೀನೆ.
ತಂದೆ-ತಾಯಿಯು ನೀನೆ ;
ಪುರುಷ ನೀನೆ ;
ಸ್ತ್ರೀಯು ನೀನೆ ;
ಓ ಜಗನ್ಮೂಲವೆ ನಮೋ ! ಜೈ ! ನಮೋ !
ವಸ್ತುಗಳ ಕೇಂದ್ರಸಾರವೆ, ಜೈ ನಮೋ !
ದಿವ್ಯ ಸಂಖ್ಯೆಗಳ ಏಕತೆಯೆ ನಮೋ !

* * *

ಉತ್ಪಾದಕವು ನೀನೆ ;
ಉತ್ಪಾದ್ಯವೂ ನೀನೆ ;
ಪ್ರಕಾಶಕವು ನೀನೆ ;
ಪ್ರಕಾಶ್ಯವೂ ನೀನೆ ;
ತೋರಿಕೆಯು ನೀನೆ ;
ಅಡಗಿಹುದು ನೀನೆ ;
ನಿನ್ನಯ ಸ್ವಕೀಯ ಉಜ್ಜ್ವಲತೆಯುಲಿ.

ಓಂ ! ಓಂ ! ಓಂ !

## 3
## ವಸಿಷ್ಠ ಆಶ್ರಮ

ಇವತ್ತು ಸಂಜೆ, ಮಳೆ ಸುರಿಯುವದು ನಿಂತಿತು. ಎಲ್ಲಾ ಬಗೆಯ ಚಿತ್ರ ವಿಚಿತ್ರ ಆಕೃತಿಗಳನ್ನೂ ಬಗೆಬಗೆಯ ಸಾಂದ್ರತೆಯನ್ನೂ ತಳೆಯುತ್ತಿದ್ದ ಮೋಡಗಳು, ಬೇರೆ ಬೇರೆ ದಿಕ್ಕುಗಳಿಗೆ ಚದರಿ ಹೋಗಿವೆ. ಆ ಮೋಡಗಳಿಂದ ವಕ್ರೀಕರಣವನ್ನೂ ಪ್ರತಿಫಲನವನ್ನೂ ಹೊಂದಿದ ಪ್ರಕಾಶವು ಸಂಪೂರ್ಣ ದೃಶ್ಯಜಾಲವನ್ನೇ ಉಜ್ಜ್ವಲ ವೈಭವದ ಪ್ರಭಾವಲಯವನ್ನಾಗಿ ಮಾಡಿದೆ. ಆಗ ಸ್ವರ್ಗದ ವಿನೋದ ಶೀಲ ಬಾಲಕ-ಬಾಲಕಿಯರು ಎಲ್ಲಾ ಬಗೆಯ ಮೋಹಕವಾದ ವರ್ಣಗಳನ್ನೂ ಧರಿಸಿದವು ಯಾವ ವರ್ಣ ಕರ್ಮ ನಿಪುಣನು ಅವುಗಳನ್ನು ಬಣ್ಣಗಳಿಂದ ಚಿತ್ರಿಸುವದು ಸಾಧ್ಯ ? ಸಣ್ಣ ದೊಡ್ಡ ಮೋಡಗಳು ಸಾಗುಸಾಗುತ್ತಿರುವಂತೆ ನಿಮಿಷ ನಿಮಿಷಕ್ಕೂ ಬಗೆ ಬಗೆಯಾಗಿ ಬದಲಾಯಿಸುತ್ತಿರುವ ಹಲವು ಬಣ್ಣಗಳ ರಂಗುಗಳನ್ನೂ ಛಾಯಾಂತರ ಗಳನ್ನೂ ಯಾವ ಚತುರ ಪ್ರೇಕ್ಷಕನು ಗುರುತಿಸುವದೂ ವರ್ಣಿಸುವದೂ ಸಾಧ್ಯ ? ನೀವು ಎತ್ತಬೇಕಾದರೂ ನೋಡಿರಿ ; ಕಿತ್ತಳೆಯ ಕೆಂಪುಗೂಡಿದ ಹಳದಿಯ ಬಣ್ಣದಿಂದಲೂ ಕೆನ್ನೀಲಿಯ ಬಣ್ಣದಿಂದಲೂ (ಊದಾ) ಎಳೆಗೆಂಪು, ಕಡುಗೆಂಪು (ಪಾಟಲ) ಬಣ್ಣಗಳಿಂದಲೂ ಮತ್ತು ಅವರ್ಣನೀಯವಾದ ಅವುಗಳ ಮಿಶ್ರ ವೈವಿಧ್ಯಗಳಿಂದಲೂ ಹಾಗೂ ಇವೆಲ್ಲವುಗಳ ನಡುನಡುವೆ, ಅಲ್ಲಿ-ಇಲ್ಲಿ, ಹಿನ್ನೆಲೆಯಲ್ಲಿ ಎಂದೆಂದಿಗೂ ಸುಸ್ವಾಗತವೆನಿಸುವಂತೆ ಮಿಂಚುವ ನೀಲಿವರ್ಣದಿಂದಲೂ ಕಣ್ಣುಗಳಿಗೆ ಸಮ್ಮೋಹಕವಾದ ಗಂಧರ್ವಲೋಕವಾಗಿದೆ. ವರ್ಣವೈಚಿತ್ರ್ಯದ ಈ ಉಜ್ಜ್ವಲ ಮಹಿಮೆಯು ಆನಂದದ ಪರವಶತೆಯನ್ನು ತರುತ್ತಿದೆ ; ರಾಮನ ಕಣ್ಣುಗಳಲ್ಲಿ ಆನಂದಬಾಷ್ಪಗಳು ಸೂಸುತ್ತಿವೆ ಮೋಡಗಳು ಕರಗಿ ಕಾಣದಾಗುತ್ತವೆ ; ಆದರೆ ಶಾಶ್ವತವಾದೊಂದು ಸಂದೇಶವನ್ನು ಲೋಕಕ್ಕೆ ನೀಡಿ ಮರೆಯಾಗುತ್ತವೆ. ಅವು ಸರ್ವೇಶ್ವರನಿಂದ ಒಂದು ಬಟ್ಟಲು ಅಮೃತವನ್ನೂ ತಂದಿತ್ತು ಪುನ ಅವನಲ್ಲಿಗೇ ಹಿಂದಿರುಗಿದವು. ವಾಸ್ತವವಾಗಿ, ಎಲ್ಲಾ ಆಕರ್ಷಕವಸ್ತುಗಳೂ ಹೀಗೇ ಇವೆ. ಅವು ತೋರಿಕೊಳ್ಳುತ್ತವೆ ; ಒಂದು ಕ್ಷಣಮಾತ್ರ ರಾಮನ ಮಹಿಮೆಯನ್ನು ಮರೆಯುತ್ತವೆ, ಕರಗಿ ಮರೆಯಾಗುತ್ತವೆ ಓಡುತ್ತಿರುವ ಮೋಡಗಳಲ್ಲಿ ಪ್ರೀತಿ ಮಾಡುವವನು ಖಂಡಿತವಾಗಿಯೂ ತಲೆಕೆಟ್ಟ ಹುಚ್ಚನಿರಬೇಕು. ಆದರೂ ತೋರಿಕೆಯ ವಸ್ತುಗಳ ಅಸ್ಥಿರವಾದ ಮೋಘಗಳನ್ನು ಭದ್ರವಾಗಿ ಹಿಡಿದಿಟ್ಟು ಕೊಳ್ಳುವದಕ್ಕೆ ಪಾಮರರು ಹಂಬಲಿಸಿ ಹೆಣಗಾಡುತ್ತಾರೆ. ಆದರೆ ಅವು ಕ್ಷಣದಲ್ಲಿ

ಕಣ್ಮರೆಯಾಗುವದನ್ನು ಕಂಡು ಅವರು ಮಕ್ಕಳಂತೆ ಗೋಳಾಡುತ್ತಾರೆ. ಇದೆಷ್ಟು ತಮಾಷೆಯಾಗಿದೆ ! ಓ ! 'ನಾನು-ಒಡೆದು ಬರುವ ನಗುವನ್ನು ತಡೆದುಕೊಳ್ಳಲಾರೆ.

ಮತ್ತೆ ಕೆಲವರು, ಮೋಡಗಳ ದೃಶ್ಯ ವಿಲಾಸದಲ್ಲಿ ತೋರುತ್ತಿರುವ ಕ್ಷಣಿಕವಾದ ಬದಲಾವಣೆಗಳ ಅತ್ಯಂತ ಸಣ್ಣ ವಿವರಗಳನ್ನೂ ಸಹ ಸೂಕ್ಷ್ಮವಾಗಿ ಪರಿಶೀಲಿಸುವ ವರಲ್ಲಿಯೂ ಮತ್ತು ಆಸ್ಥೆಯಿಂದ ಯಥಾವತ್ತಾಗಿ ಬರೆದಿಟ್ಟುಕೊಳ್ಳುವದರಲ್ಲಿಯೂ ತಮ್ಮ ಎಲ್ಲಾ ಕಾಲವನ್ನೂ ವ್ಯಯಮಾಡುತ್ತಾರೆ ಅಯ್ಯೋ ! ಇವರೆಂಥಾ ಜೀವಿಗಳು ! ಅವರ ಸುತ್ತಲೂ ಮಹಿಮಾ ಸಾಗರವೇ ತುಂಬಿ ತುಳುಕುತ್ತಿದ್ದರೂ ಬೆಳಕಿಗಾಗಿ ಹಂಬಲಿಸುವ ತಮ್ಮ ತೀವ್ರದಾಹವನ್ನು ತಣಿಸಿಕೊಳ್ಳುವದಕ್ಕೆ ಅವರು ಲಕ್ಷ್ಯಗೊಡುವದೇ ಇಲ್ಲ. ಇವರೇ ವಿಜ್ಞಾನಿಗಳು ಮತ್ತು ತತ್ತ್ವಜ್ಞಾನಿಗಳು ಎನಿಸಿ ಕೊಂಡವರು. ಅವರು ಕೂದಲನ್ನು ಸೀಳುವದರಲ್ಲಿ ಅತ್ಯಾಸಕ್ತರಾಗಿರುವದರಿಂದ ಆ ಕೂದಲು ಯಾವ ಇಷ್ಟದೇವನ ದಿವ್ಯವಾದ ತಲೆಗೆ ಸಂಬಂಧಿಸಿದೆ ಎನ್ನುವದನ್ನು ಅವರು ಗಮನಿಸುವದಿಲ್ಲ. ಆಹಾ ! 'ನಾನು—ಒಳಗಿಂದ—ಒಡೆದು ಹೊರಡುವ ನಗುವನ್ನು ತಡೆದುಕೊಳ್ಳಲಾರೆ.'

ಯಾರ ದೃಷ್ಟಿಯನ್ನು ನಾಮರೂಪಗಳ ಮೋಡಗಳು ಮುಸುಕಲಾರವೋ, ಯಾರು ಆಕರ್ಷಕವಾದ ಬೆಳಕನ್ನು ಅದರ ನಿಜಮೂಲವಾದ ಆತ್ಮನಲ್ಲಿಗೆ ತಪ್ಪದೆ ಯಾವಾಗಲೂ ಸುಳಿವುಹಿಡಿದು ಗುರುತಿಸಬಲ್ಲರೋ ಮತ್ತು ಸಮುದ್ರವನ್ನು ಸೇರುವದಕ್ಕೆ ಮುಂಚೆ ಒಣಗಿ ಹೋಗುವ ಹೊನಲುಗಳಂತೆ ಯಾರ ಪ್ರೇಮಾದರಗಳು ದಾರಿಯಲ್ಲಿಯೇ ಬತ್ತಿಹೋಗದೆ ತಮ್ಮ ಅಂತಿಮ ಗುರಿಯಾದ ಪರಮಾತ್ಮನನ್ನು ಸೇರುತ್ತವೆಯೋ ಅವರೇ ಸುಖಿಗಳು ; ಧನ್ಯರು ! ಪ್ರಿಯಕರವಾದ ಸಂಬಂಧಗಳು ಮಾಯವಾಗಬೇಕು. ಅವು ಕೇವಲ ಅಂಚೆಯ ಮನುಷ್ಯರಿದ್ದಂತೆ. ಆದರೆ ಅವರು ನಿಮಗೆ ತಂದ ಪತ್ರಗಳಲ್ಲಿ ಪ್ರಭುವಿನ ಪ್ರಣಯಪತ್ರವನ್ನು ಮಾತ್ರ ಕಂಡುಹಿಡಿಯದೆ ಕಳೆದುಕೊಳ್ಳಬೇಡಿ. ಬೆಂಕಿಯ ಕಡ್ಡಿಯೇನೋ ಗೀಚಿದೊಡನೆ-ಬೇಗ-ಸುಟ್ಟು ಹೋಗುತ್ತದೆ ; ಆದರೆ ಅಷ್ಟರಲ್ಲಿ ಅದರಿಂದ ತನ್ನ ದೀವಿಗೆಯನ್ನು ಶಾಶ್ವತವಾಗಿ ಹೊತ್ತಿಸಿಕೊಂಡವನೇ ಪುಣ್ಯಾತ್ಮ ಹಡಗಿನಲ್ಲಿರುವ ಉಗಿಯೂ ಆಹಾರಸಂಗ್ರಹವೂ ಎಂದಾದರೂ ಮುಗಿದು ಹೋಗಲೇ ಬೇಕು , ಆದರೆ ಆ ಅಪಾಯಕರವಾದ ಅಭಾವ ಉಂಟಾಗುವದಕ್ಕೆ ಮುಂಚೆ ಹಡಗು ಸುರಕ್ಷಿತವಾಗಿ ತನ್ನ ಮನೆಯನ್ನು—ಬಂದರನ್ನು ಸೇರಿಕೊಂಡರೆ ಒಳ್ಳೆಯ ಅದೃಷ್ಟ. ಯಾರು ಯಾವ ವಸ್ತುವನ್ನಾದರೂ. ದೇವತ್ವಕ್ಕೆ ಏರುವದಕ್ಕೆ ಮೆಟ್ಟುಗಲ್ಲನ್ನಾಗಿ ಅಥವಾ ದೇವರನ್ನು ನೋಡುವದಕ್ಕೆ ಒಂದು

ಕನ್ನಡಿಯನ್ನಾಗಿ ಮಾಡಿಕೊಳ್ಳಬಲ್ಲನೋ ಅವನೇ ಬದುಕಬಲ್ಲವನು, ನಕ್ಷತ್ರಗಳು, ಪರ್ವತಗಳು, ನದಿಗಳು, ದೊರೆಗಳು, ವಿಜ್ಞಾನಿಗಳು ಇತ್ಯಾದಿ ಎಲ್ಲವುಗಳಿಂದ ಕೂಡಿದ ಈ ಪ್ರಪಂಚವು ಅವನಿಗಾಗಿಯೇ ಸೃಷ್ಟಿಯಾಗಿದೆ. "ನಿಜವಾಗಿಯೂ ಅದು ಹಾಗೆಯೇ, ನಾನು ನಿಮಗೆ ಸತ್ಯವನ್ನೇ ಹೇಳುತ್ತೇನೆ."

ಹೊಲ–ಹುಲ್ಲುಗಾವಲುಗಳು ಮತ್ತು ಭೂದೃಶ್ಯಗಳು :

ಜುಗುಪ್ಸೆಯುಂಟುಮಾಡುವ ಹೊಗೆ–ಧೂಳು ತುಂಬಿದ ರಸ್ತೆಗಳಿಂದಲೂ ಜನರ ನಿಂದಾಸ್ತುತಿಗಳಿಂದಲೂ ಕೂಡಿದ ನಗರಗಳಿಗೆ ವಿರುದ್ಧ ಹೋಲಿಕೆಯಿಂದ, ಹಿಮಾಲಯದ ಭೂದೃಶ್ಯಗಳೂ ಹುಲ್ಲುಗಾವಲುಗಳೂ ಮನುಷ್ಯನಲ್ಲಿ ದೇಹವೇ ತಾನೆಂಬ ಪರಿಮಿತ ಜ್ಞಾನವನ್ನು ಪ್ರೇರಿಸುವದಿಲ್ಲ. ಆ ವಸಿಷ್ಠಾಶ್ರಮದ ಪ್ರಶಾಂತ ಸುಂದರ ವಾತಾವರಣದಲ್ಲಿ ಮನುಷ್ಯನು ಪ್ರಕಾಶಮಾನವಾದ ಸಾಕ್ಷಿಚೈತನ್ಯದ ಅನುಭವ ವನ್ನು ಪಡೆಯಬಹುದು. ಸಸ್ಯವರ್ಗವು–ಸಸ್ಯಸಾಮ್ರಾಜ್ಯವು–ತನ್ನೊಳಗೆ ನಾಗರಿಕ ಮಾನವ ಸಮಾಜದಷ್ಟು ಅಥವಾ ಅದಕ್ಕಿಂತಲೂ ಹೆಚ್ಚಾಗಿ ಹೆಣಗಾಟ-ಹೋರಾಟ ಗಳಿರಬಹುದು ; ಆದರೆ ಮನುಷ್ಯನು ದೇವದಾರು, ಓಕ್ ಮೊದಲಾದ ಮರಗಳ ಮಧ್ಯದಲ್ಲಿ, ತನ್ನೊಳಗೆ ಹೋರಾಟವಿರುವ ತಾನೂ ಅವುಗಳಂತೆಯೇ ಒಂದು ಒದ್ದಾಟದ ಜೀವಿಯೆಂದು ತಿಳಿಯದೆ, ಸರ್ವತ್ರ ಸಂಪೂರ್ಣ ಅನಾಸಕ್ತನಾಗಿ ನಿಶ್ಚಿಂತೆಯಿಂದ ಇರಬಹುದಾದ ಸಾಕ್ಷಿಚೈತನ್ಯವು ತಾನೆಂದು ತಿಳಿದರೆ ಆ ಹೋರಾಟವೂ ಕುತೂಹಲಕರವಾಗುತ್ತದೆ. ಗಿಡಗಳ ನಡುವಿರುವ ಒಂದು ಗಿಡದಂತೆ ತನ್ನ ದೇಹವನ್ನು ಕಾಣುತ್ತಾ, ಅದನ್ನು ತಾನೆಂದು ಭಾವಿಸದೆ, ತನ್ನ ಆತ್ಮನನ್ನು ಅನಾಸಕ್ತ ಸಾಕ್ಷಿಯಾದ ಪರಂಜ್ಯೋತಿಯೆಂದು ಅರಿತು, ಯಾರಾದರೂ ಕಾಡಿನಲ್ಲಿ ನಡೆದಾಡುವಂತೆ, ಕಾರ್ಯೋದ್ಯುಕ್ತ ಜನಸಾಂದ್ರವಿರುವ ನಗರದ ರಸ್ತೆಗಳಲ್ಲಿ ಆದರೂ ಯಾರು ನಿರ್ಲಕ್ಷ್ಯ ವಾಗಿ ಜೀವಿಸಬಲ್ಲನೋ ಅವನಿಗೆ ವಿಶ್ವವೇ ನಂದನ ವನವಾಗಿರುತ್ತದೆಯೆಂಬದನ್ನು ಯಾರು ಅಲ್ಲಗಳೆಯ ಬಲ್ಲರು ? ದೇವರಲ್ಲಿಯೇ ಜೀವಿಸುವ ಅಂಥಾ ಸಜ್ಜನರು ಲೋಕಕ್ಕೆ ಬೆಳಕಾಗಿರುತ್ತಾರೆ. ಯಾವ ಬೆಳಕು-ಜ್ಯೋತಿಯು–ಅನಾಸಕ್ತ ಸಾಕ್ಷಿಯಾಗಿ ತೋರುತ್ತದೆಯೋ ಅದು ಸಾಕ್ಷ್ಯವಾದ ಸರ್ವಕ್ಕೂ ಪ್ರಾಣವೇ ಆಗಿದೆ.

ಜೀವ ನದಿಯು ಹರಿಯುತ್ತಿದೆ. ದೇವರ ಹೊರತು ಇನ್ನೊಂದು ಯಾವದೂ ಇಲ್ಲ. ಯಾರಿಗಾಗಿ ನಾನು ಭಯಪಡಬೇಕು ? ಯಾರಿಗಾಗಿ ನಾಚಿಕೊಳ್ಳಬೇಕು ? ಎಲ್ಲಾ ಜೀವವೂ ದೇವರ ಜೀವವೇ, ಬೇರೆ ಇಲ್ಲ. ಅವನು ಮತ್ತು ನಾನೂ ಕೂಡ-

ಅವನೇ. ನನ್ನ ಸ್ವಂತ ಹಿಮಾಲಯದ ಅರಣ್ಯಗಳೇ ಇಡೀ ಜಗತ್ತಾಗಿದೆ. ಸೂರ್ಯ ಉದಯವಾದೊಡನೆ ಹೂವುಗಳು ನಗತೊಡಗುತ್ತವೆ, ಹಕ್ಕಿಗಳು ಹಾಡುತ್ತವೆ, ಹೊಳೆಗಳು ಸಂತೋಷದಿಂದ ನಲಿಯುತ್ತವೆ! ಓ, ಆ ಪ್ರಕಾಶಗಳ ಪ್ರಕಾರ! ಪ್ರಕಾಶಗಳ ಪ್ರಕಾಶ ಸಮುದ್ರವೇ ಹರಿಯುತ್ತಿದೆ! ಆನಂದದ ಮಂದ ಮಾರುತವು ಬೀಸುತ್ತಿದೆ!

ಸುಂದರವಾದ ಈ ಅರಣ್ಯದಲ್ಲಿ ನಾನು ಸ್ವಚ್ಛಂದವಾಗಿ ನಗುತ್ತೇನೆ, ಹಾಡುತ್ತೇನೆ, ಕೈಚಪ್ಪಾಳೆ ತಟ್ಟುತ್ತೇನೆ, ಮತ್ತು ಕುಣಿಯುತ್ತೇನೆ.

ಅವರು ಅಪಹಾಸ್ಯ ಮಾಡಿದರೆ? ಇಲ್ಲ, ಅದು ಮಂದಾನಿಲನ ಬೀಸುವಿಕೆ. ಅವರು ತಿರಸ್ಕಾರಮಾಡಿದರೆ? ಇಲ್ಲ, ಅದು ಎಲೆಗಳ ಮರ್ಮರ ದನಿ. ಹೊಳೆಗಳಲ್ಲಿಯೂ ದೇವದಾರುಗಳಲ್ಲಿಯೂ ಹಕ್ಕಿಗಳಲ್ಲಿಯೂ ಮತ್ತು ಮೆಲು ಗಾಳಿಗಳಲ್ಲಿಯೂ ಮಿಡಿಯುತ್ತಿರುವ ನನ್ನ ಸ್ವಂತ ಜೀವದಿಂದಲೇ ನಾನು ನೆರಳಿನಲ್ಲಿ ಹುದುಗುತ್ತೇನೋ?

ನಾ ನಲಿವೆ, ನಾ ನಲಿವೆ, ನಾ ನಗುವೆ ಮೇಣ್ ನಲಿವೆ.
ನರ್ತನದಲೆಬ್ಬಿಸುವ ಧೂಳಿನೊಲು ತಾರೆಗಳನೇರಿಸುವೆ.
ಇಲ್ಲ ಮತ್ಸರ, ಇಲ್ಲ ಭಯಂ,
ಪ್ರಿಯರೊಳಾನತ್ಯಂತ ಪ್ರಿಯಂ,
ಪಾಪವೇನಿಲ್ಲ, ಶೋಕವು ಇಲ್ಲ,
ನಿನ್ನೆಯೂ ಇಲ್ಲ ನಾಳೆಯೂ ಇಲ್ಲ,
ವಿರೋಧಿಯು ಇಲ್ಲ, ವೈರಿಯು ಇಲ್ಲ,
ಭಾಧೆಯು ಇಲ್ಲ, ದುಃಖವು ಇಲ್ಲ.
ಯಾವದೂ ನನಗೆ ಹಾನಿಮಾಡಲಾರದಲ್ಲ ಇಲ್ಲ,
ಯಾವದೂ ನನಗೆ ಗಾಬರಿಪಡಿಸಲಾರದಲ್ಲ ಇಲ್ಲ,
ಸರ್ವಾತ್ಮ
ಅಮೃತಾತ್ಮ
ಅತ್ಯಂತ ಮಧುರಾತ್ಮ
ಆ! ಸ್ವಸ್ಥಾತ್ಮ
ಜುಳು ಜುಳು ಹೊನಲುಗಳು

ಸುಖಿತಮ ಕನಸುಗಳು
ಸಕಲವು ಸುವಾಸನಾ–ಆಪ್ಯಾಯನಾ
ರಾವಣ ಮೋಣ್ ರಾಮ,
ಪರಿಶುದ್ಧಸ್ವಾಂತ, ಪ್ರಶಾಂತ,
ಇದೆಲ್ಲ ರಾಮ ಇವೆಲ್ಲ ರಾಮ,
ಸ್ವರ್ಲೋಕಗಳು, ನಕ್ಷತ್ರಗಳು,
ಹತ್ತಿರ–ದೂರ ಲೋಕಗಳು,
ತೂಗಾಡುತಿವೆ–ಸೂತ್ರಿತವಾಗಿವೆ,
ನಾನೇ ಪಾಡಿರುವೀ ಗೀತೆಗಳು ಇಂಪಾಗಿವೆ.

೪

ವಸಿಷ್ಠ ಆಶ್ರಮ 27-3-1906.

'ಬಾಸೂನ್' ಪುಸ್ತಕ

ಬೆಳ್ದಿಂಗಳು ಬೆಳಗುತ್ತಾ ಬೆಳ್ಳಿಯ ರಸದಂತಿರುವ ಶಾಂತಿ ಸಾಗರವನ್ನೇ ಪ್ರಸರಿಸಿದೆ. ರಾಮನ ಹುಲ್ಲಿನ ಹಾಸಿಗೆಯ ಮೇಲೆ ತುಂಬಾ ಹಾಲು ಚೆಲ್ಲಿದಂತಿದೆ. ಈ ಪರ್ವತದ ಮೇಲೆ ನಿಸರ್ಗದ ಸ್ವಚ್ಛಂದತೆಯಿಂದ ಹೇರಳವಾಗಿ ಬೆಳೆದಿರುವ, ಅಸಾಮಾನ್ಯ ಎತ್ತರವಾದ ಬಿಳಿ ಗುಲಾಬಿ ಗಿಡಗಳು ಹಾಸಿಗೆಯನ್ನು ಬೆಳಗುತ್ತಿರುವ ಚಂದ್ರನ ಬೆಳಕನ್ನು ಅಲ್ಲಲ್ಲಿ ತಡೆಯುತ್ತಿವೆ; ರಾಮನ ಸಮ್ಮುಖದಲ್ಲಿ ಪ್ರಶಾಂತವಾಗಿ ನಿದ್ರಿಸುತ್ತಿರುವ ಶಾಂತ ಚಂದ್ರಿಕೆಯ ಸೊಗಸಾದ ಸಣ್ಣ ಕನಸುಗಳಂತೆ, ಗುಲಾಬಿಯ ಪೊದೆಯ ನೆರಳು ಬೆಳಕುಗಳು ಲೀಲೆಯಿಂದ ನಲಿನಲಿದು ಮಿನುಗುಟ್ಟುತ್ತಿವೆ.

ಮಲಗು ನಿದ್ರಿಸು ಪುಗುವೆ ಮಲಗು ಉಂಡು,

ನಗು ನಗುತಲಿರು ಗುಲಾಬಿಯ ಕನಸ ಕಂಡು,

ಹಿಮಾಚ್ಛಾದಿತವಾದ ಜಮ್ನೋತ್ರಿ, ಗಂಗೋತ್ರಿ, ಸುಮೇರು, ಕೇದಾರ, ಬದರಿ, ಇವುಗಳು, ಕೈಗಳಿಂದ ಇವನ್ನು ಮುಟ್ಟಬಹುದೇನೋ ಎನ್ನುವಷ್ಟು ಸಮೀಪದಲ್ಲಿವೆ.

ವಾಸ್ತವವಾಗಿಯೂ ಥಳಥಳಿಸುವ ವಜ್ರದ ಪರ್ವತ ಶೃಂಗಗಳು ಅರ್ಧಚಂದ್ರಾಕೃತಿಯಲ್ಲಿ ದೇವರ ರತ್ನಕಿರೀಟದಂತೆ ವಸಿಷ್ಠಾಶ್ರಮವನ್ನು ಅಲಂಕರಿಸಿವೆ. ಅವುಗಳ ಬಿಳಿಯ ಮಂಜಿನ ಮಸ್ತಕಗಳು ಚಂದ್ರಪ್ರಕಾಶದ ಕ್ಷೀರಸಾಗರದಲ್ಲಿ ಸ್ನಾನಮಾಡುತ್ತಿವೆ. ಆ ಪರ್ವತಗಳ ' ಸೋಹಂ ' ಗತಿಯ ಉಸಿರಾಟಗಳು ತಂಪಾದ ಗಾಳಿಯ ರೂಪದಲ್ಲಿ ಎಡೆಬಿಡದೆ ಈ ಆಶ್ರಮದ ಮೇಲೆ ಬೀಸುತ್ತಿವೆ.

ಈ ಪರ್ವತದ ಮೇಲಿನ ಹಿಮಗಡ್ಡೆಗಳು ಕರಗಿ ಹೋಗಿರುವದರಿಂದ ಇದರ ನೆತ್ತಿಯ ಮೇಲಿನ ವಿಶಾಲ ಬಯಲ ಭೂಮಿಯು ಪೂರಾ ನೀಲಿ. ಎಳೆಗೆಂಪು, ಗುಲಾಬಿ ಹಳದಿ ಮತ್ತು ಬಿಳಿಯ ಬಣ್ಣಗಳ ಹೂಗಳಿಂದ ತುಂಬಿಹೋಗಿವೆ. ಅವುಗಳಲ್ಲಿ ಕೆಲವು ಬಹಳ ಪರಿಮಳವನ್ನು ಬೀರುತ್ತವೆ. ಈ ಸ್ಥಳವು ಗಂಧರ್ವರ ಮತ್ತು ವನ ದೇವತೆಗಳ ಉದ್ಯಾನವನವೆಂದು ಜನರು ನಂಬಿರುವದರಿಂದ ಇಲ್ಲಿ ಬರುವದಕ್ಕೆ ಜನರು ಹೆದರುತ್ತಾರೆ. ಪ್ರಕೃತಿಸೌಂದರ್ಯವನ್ನು ನಾಶಮಾಡುವ ದೈವದ್ರೋಹಿಗಳು ಇಲ್ಲಿ ಸುಳಿದಾಡದಂತೆ ಜನರ ಈ ಭಾವನೆಯು ದೇವತೆಗಳ ಈ ನಂದನವನವನ್ನು–ಆನಂದವನ್ನು-ರಕ್ಷಣೆಮಾಡಿದೆ. ಒರಟಾದ ತುಳಿದಾಟದಿಂದ ಯಾರಾದರೂ ನಗು ನಗುತ್ತಿರುವ ಕೋಮಲವಾದ ಪುಟ್ಟಹೂವು ನೊಂದೀತೆಂದು ರಾಮನು ಬಹಳ ಎಚ್ಚರದಿಂದ ಅತಿಶಯ ಮೃದುವಾಗಿ ಈ ಹೂವಿನ ಹಾಸಿಗೆಯ ಮೇಲೆ ನಡೆದಾಡುತ್ತಾನೆ.

ಕೋಗಿಲೆಗಳೂ ಪಾರಿವಾಳಗಳೂ ಮತ್ತು ಹಲವು ವಿಹಂಗಮಗಾಯಕರು ಪ್ರಾತಃ ಕಾಲದಲ್ಲಿ ಬಂದು, ತಮ್ಮ ಇಂಪಾದ ಬಗೆಬಗೆಯ ಗಾನದಿಂದ ರಾಮನನ್ನು ಸೇವಿಸುತ್ತವೆ. ಕೆಲವು ಸಮಯ ಬೆಳಿಗ್ಗೆ ರಾಮನು ವಾಸಮಾಡುತ್ತಿರುವ ಗುಹೆಯ ಮಾಳಿಗೆಯ ಮೇಲೆ ಭಾರಿ ಸರ್ಪವೊಂದು ಗಂಭೀರವಾಗಿ ಹರಿದು ಬಂದು ಪರ್ಷಿಯನ್ ಗಾಲಿಯಂತೆ ವಿಚಿತ್ರವಾದ ಧ್ವನಿಮಾಡಿ ರಾಮನನ್ನು ವಿನೋದಗೊಳಿಸುತ್ತದೆ ಮಧ್ಯಾಹ್ನದಲ್ಲಿ ನೀಲಮೇಘಗಳನ್ನು ಭೇದಿಸುವಂತೆ ಬಹಳ ಎತ್ತರವಾಗಿ ಹಾರಾಡುತ್ತಿರುವ ಪಕ್ಷಿ ರಾಜಗಳಾದ ಗರುಡಪಕ್ಷಿಗಳು ವಿಷ್ಣುವನ್ನು ಬೆನ್ನಿನ ಮೇಲೆ ಹೊತ್ತುಹಾರುತ್ತಿರುವ ವೈನತೇಯಗಳಲ್ಲವೆ ?---ಎಂದು ತೋರುತ್ತದೆ. ಒಂದು ರಾತ್ರಿ ಒಂದು ಹುಲಿಯು ರಾಮನನ್ನು ಹಿಂದೆ ಹಾಕಿ, ಜಿಗಿದು ಹಾರಿತು.

ಎಂಥ ಮನೋಹರ ಅಧಿನಿವೇಶ । ಅಂದವೇರಿ ಕಳೆತುಂಬಿದ ಪುಷ್ಕಲವಾದ ಪುಷ್ಪಗಳಿಂದ ನಳನಳಿಸುತ್ತಿರುವ ಆ ಅರಣ್ಯದ ದೈತ್ಯವೃಕ್ಷಗಳು ಅತ್ತಣ ಪರ್ವತಗಳ

ನಡುವಿರುವ ವಿಶಾಲ ಸರೋವರಕ್ಕೆ ನಡುಪಟ್ಟಿಯಂತೆ ಸುತ್ತುಗಟ್ಟಿವೆ । ಯಾವ ಪಾಶಬಂಧ ಅವುಗಳನ್ನು ಕೂಡಿಸುತ್ತಿದೆ ? ಅವುಗಳಲ್ಲಿ ಪರಸ್ಪರ ಸಂಪರ್ಕವಾಗಲೀ ವೈಯುಕ್ತಿಕ ಸಂಬಂಧವಾಗಲೀ ಏನೂ ಇಲ್ಲ. ಆದರೆ, ಒಂದೇ ಸರೋವರದೊಳಗೆ ಆ ಎಲ್ಲಾ ವೃಕ್ಷಗಳೂ ತಮ್ಮ ಬೇರುಗಳನ್ನು ಕಳಿಸಿರುವ ಮಟ್ಟಿಗೆ ಮಾತ್ರ, ಅವುಗಳು, ಸಾಮಾಜಿಕವೆನ್ನಬಹುದಾದಂಥ ಒಂದು ವ್ಯವಸ್ಥೆಯನ್ನು ಹೊಂದಿ ದಂತಿವೆ. ಒಂದೇ (ಸಮಾನ) ನೀರಿನ ಪ್ರೇಮವು ಅವುಗಳನ್ನು ಒಟ್ಟುಕೂಡಿಸಿಟ್ಟಿದೆ. ಹೀಗೆ ನಾವೆಲ್ಲರೂ ಸರ್ವಾಧಾರವಾದ ಒಂದೇ (ಸಮಾನ) ಸತ್ಯದ ಭಕ್ತಿಯಲ್ಲಿ- ಸ್ವರ್ಗದಲ್ಲಿ, ಹೃದಯದಲ್ಲಿ, ರಾಮನಲ್ಲಿ-ಸಂಧಿಸೋಣ, ಸಂಯುಕ್ತರಾಗೋಣ, ಏಕೀಭೂತರಾಗೋಣ.

ಜಿ

## ಜಗದೇವೀ ಹುಲ್ಲು ಮೈದಾನ

ಬಾಸೂನ್ ಪರ್ವತದ ನೆತ್ತಿಯ ಮೇಲಿರುವ ಎಲ್ಲಾ ಗುಹೆಗಳಲ್ಲಿ ಮಳೆಯಿಂದ ಸೋರುತ್ತಿದ್ದುದರಿಂದ, ರಾಮನು ಮೇಲಿರುವ ಗಂಧರ್ವ ವಿಹಾರದ ಆ ನಂದನ ವನವನ್ನು ಬಿಟ್ಟು ಕೆಳಗೆ ಅತ್ಯಂತ ಸುಂದರವೂ ಎತ್ತರವೂ ಆದ ಸಮತಳದ ಹುಲ್ಲಿನ ಬಯಲಿಗೆ ಬಂದನು. ಇಲ್ಲಿ ರಾತ್ರಿ ಹಗಲೂ ಮಂದಮಾರುತಗಳು ಕ್ರೀಡಿಸು ತ್ತಿರುತ್ತವೆ—ಮೆಲುಗಾಳಿಗಳು ಸುಳಿದಾಡುತ್ತಿರುತ್ತವೆ—ಇಲ್ಲಿ ಇತರ ಸಹೋದರೀ ಕುಸುಮಗಳ ಜೊತೆಯಲ್ಲಿ ಬಿಳಿ, ಹಳದಿ ಜಾಜಿ ಹೂಗಳು ಹುಚ್ಚಾಬಟ್ಟೆ ಹೇರಳವಾಗಿ ಬೆಳೆಯುತ್ತವೆ. ಇಲ್ಲಿ ‘ ಸ್ಟ್ರಾಬೆರಿ ’ (ಮೇಲ್ಭಾಗದಲ್ಲಿ ಹಳದಿ ಬೀಜಗಳು ತುಂಬಿರುವ ಕೆಂಬಣ್ಣದ, ಒಂದು ಬಗೆಯ ತಿರುಳುಳ್ಳ) ಹಣ್ಣುಗಳೂ ಕಡುಗೆಂಪು ಬಣ್ಣದ (Rose berries) ಗುಲಾಬಿ ಹಣ್ಣುಗಳೂ ಸಮೃದ್ಧಿಯಾಗಿ ಸಿಕ್ಕುತ್ತವೆ. ಹೊಸದಾಗಿ ಕಟ್ಟಿದ ಗುಡಿಸಲಿನ ಒಂದು ಕಡೆ ನುಗ್ಗಿ ರಭಸದಿಂದ ಹರಿಯುತ್ತಿರುವ ಎರಡು ತೊರೆಗಳ ನಡುವೆ ಕ್ರಮೇಣ ಮೇಲೇರುತ್ತಿರುವ ಇಳಿಜಾರಾದ ಹುಲ್ಲಿನ ಮೈದಾನವು ವಿಸ್ತಾರ ವಾಗಿದೆ. ಹರಿಯುವ ಹೊಳೆಗಳು, ಹೊಸದಾಗಿ ಚಿಗುರಿರುವ ಗಿಡಮರಗಳಿಂದ ತುಂಬಿರುವ ಬೆಟ್ಟಗಳು, ಅಲೆಅಲೆಗಳಾಗಿ ಕಾಣುವಂತೆ ಬೆಳೆದಿರುವ ಅರಣ್ಯಗಳು— ಇವುಗಳಿಂದ ಕೂಡಿದ ರಮಣೀಯವಾದ ಪ್ರಕೃತಿದೃಶ್ಯಗಳು ಎದುರಿಗೇ ಇವೆ. ಗುಡಿಸಲಿಗೆ ಸಮೀಪವಾಗಿ ಹುಲ್ಲುಗಾವಲಮೇಲಿರುವ ಸ್ವಚ್ಛವೂ ನಯವೂ ಆದ ಹಾಸು ಗಲ್ಲುಗಳು ರಾಮನಿಗೆ ರಾಜವೈಭವದ ಪೀಠೋಪಕರಣಗಳಾಗಿವೆ. ನೆರಳಿನ ಆಶ್ರಯವು ಬೇಕಾದರೆ, ದಟ್ಟವಾದ ಗಿಡಮರಗಳ ಪೊದೆಗಳು ಸಂತೋಷೋಲ್ಲಾಸಕರವಾಗಿವೆ.

೬

## ಮಳೆ

ಮೂರು ಗಂಟೆಗಳೊಳಗೆ ಕಾಡುಕುರುಬರು ಸೊಗಸಾದ ಒಂದು ಗುಡಿಸಲನ್ನು ಕಟ್ಟಿಕೊಟ್ಟರು. ಅವರು ತಮ್ಮ ಜಾಣತನವನ್ನೆಲ್ಲಾ ಉಪಯೋಗಿಸಿ, ಅದು ಮಳೆಯಿಂದ ಸೋರದಂತೆ ಮಾಡಿದರು. ರಾತ್ರಿಯಲ್ಲಿ ಉಗ್ರವಾದ ಮಳೆಗಾಳಿಗಳು ಉಪಕ್ರಮವಾದವು. ಎರಡು ಮೂರು ನಿಮಿಷಗಳಿಗೊಂದು ಸಲ ಸೆಳೆಮಿಂಚು ಫಳಾರನೆ ಹೊಳೆಯುತ್ತಿತ್ತು. ಹಿಂದೆಯೇ ಗುಡುಗು ಸಿಡಿಲುಗಳ ಆರ್ಭಟದಿಂದ ಪರ್ವತಗಳು ಗಡಗುಟ್ಟಿ ನಡುಗಿ ಹೋದವು. ಆ ಇಂದ್ರವಜ್ರಾಯುಧವು ಮೂರು ಗಂಟೆಗಳ ಕಾಲ ಎಡೆಬಿಡದೆ ಭಯಂಕರವಾಗಿ ಚಟಚಟಾರನೆ ಜಡಿಯುತ್ತಿತ್ತು. ಹುಚ್ಚು ಮಳೆ ಪ್ರಳಯಮಾಡುವಂತೆ ಸುರಿಯಿತು. ಈ ಬಡಗುಡಿಸಲು ಸೋರುವದಕ್ಕೆ ತೊಡಗಿತು. ಆ ಬಿರುಗಾಳಿ ಬಿರುಮಳೆಗೆ ಚಾವಣಿಯು ತಡೆಯಲಾರದಾಯಿತು. ಪುಸ್ತಕಗಳು ನೀರಿನಿಂದ ತೊಯಿದು ಕೆಡದಂತೆ ರಾತ್ರಿಯೆಲ್ಲಾ ಛತ್ರಿಯನ್ನು ಹಿಡಿದುಕೊಂಡೇ ಕೂತಿರಬೇಕಾಯಿತು. ಬಟ್ಟೆಗಳೆಲ್ಲಾ ತೊಯಿದು ತೊಪ್ಪೆ ಆದವು. ನೆಲದಲ್ಲಿ ಹುಲ್ಲು ಬೆಳದಿದ್ದರಿಂದ ಕೆಸರಾಗಲಿಲ್ಲ ಆದರೂ ಅದು ಮೇಲ್ಛಾವಣಿಯಿಂದ ಎಡೆಬಿಡದೆ ಸುರಿಯುತ್ತಿದ್ದ ನೀರಿನ ಹನಿಗಳನ್ನು ಇನ್ನು ಹಿಡಿಸಲಾರದೆನ್ನುವಷ್ಟು ಪೂರಾ ಕುಡಿಯುತ್ತಿತ್ತು. ರಾಮನು ಬಹಳ ಮಟ್ಟಿಗೆ ಮೀನು ಮತ್ತು ಆಮೆಗಳ ಜೀವನ ಸೌಖ್ಯವನ್ನು ಅನುಭವಿಸುತ್ತಿದ್ದಾನೆ. ರಾತ್ರಿಯಲ್ಲಿ, ಜಲಚರಗಳ ಜೀವನದ ಅನುಭವವು ತನ್ನದೇ ಆದ ಆನಂದವನ್ನು ಕೊಡುತ್ತದೆ.

"ನಿನ್ನ ಪೂರ್ಣಾಯುಷ್ಯದಿಂದ ಒಂದು ರಾತ್ರಿಯನ್ನು ಕಡಮೆಯಾಗಿ ಎಣಿಸಿ, ಆ ರಾತ್ರಿಯಲ್ಲಿ ನಿದ್ರಿಸಲೇ ಬೇಡ."

"Blessed is the storm to keep us up in the Lord's Company"

"ಭಗವಂತನ ಧ್ಯಾನದಲ್ಲಿರುವಂತೆ ನಿದ್ರೆಯನ್ನು ಕಳೆದು ಎಚ್ಚರವಾಗಿಟ್ಟಿರುವ ಬಿರುಗಾಳಿ, ಬಿರುಮಳೆಗಳು ಧನ್ಯವಾದವುಗಳು."

"ಶೌಹ ಜಾಗೇ, ಕಾಹನೂ ಸೋವಾ" (ಗ್ರಂಥ ಸಾಹೆಬ್)
ಮಹೇ ಚನ್ ತ್ವದ್ರಿವಃ ಪರಾ ಶುಲ್ಕಾಯ ದೇಯಾವನ್ ।
ನ ಸಹಸ್ರಾಯ ನಾಯುತಾಯ ವಜ್ರಿಣೋನ ಶತಾಯ ಶತಾಮಘ ॥
ಋಗ್ವೇದ (ಮಂಡಲ ೮)

"ಓ ಪರ್ವತಗಳನ್ನು ಅಲ್ಲಾಡಿಸುವವನೆ, ಎಷ್ಟು ದುಪತ್ತಾದ ಮೌಲ್ಯಕ್ಕಾದರೂ ನಿನ್ನನ್ನು ನಾನು ತ್ಯಜಿಸಲಾರೆ; ಓ ಗುಡುಗು ಸಿಡಿಲುಗಳ ವಜ್ರಾಯುಧನೆ! ಸಹಸ್ರಕ್ಕಾಗಲೀ ಹತ್ತುಸಹಸ್ರಕ್ಕಾಗಲೀ ಅದರ ಸಹಸ್ರಪಟ್ಟು ಮೌಲ್ಯಕ್ಕಾಗಲೀ (ಸಂಭಾವನೆಗಾಗಲೀ) ಓ ಅಗಣಿತ ಔದಾರ್ಯವುಳ್ಳ ಪ್ರಭೋ! ನಿನ್ನನ್ನು ನಾನು ಪರಿತ್ಯಜಿಸಲಾರೆ."

ಯಚ್ಛಕ್ರಾಸಿ ಪರಾವತಿ ಯದರ್ವಾವತಿ ವೃತ್ರಹನ್ ।
ಅತಸ್ತ್ವಾ ಗೋಭಿರ್ದ್ಯುಗದಿನ್ದ್ರ ಕೇಶಭಿಃ ಸುತಾವಾಂ ಆವಿವಾಸತಿ ॥

ರಾಮನ ವ್ಯಾಖ್ಯಾನ:—

ಸರ್ವಸಮರ್ಥನಾದ ಓ ಶಕ್ರ! ನೀನು ದೂರ (ದ್ಯುಲೋಕದಲ್ಲಿ, ಗರ್ಜಿಸುವ ಮೋಡಗಳಲ್ಲಿ) ಆದರೂ ಇರು; ಓ ವೃತ್ರನಾಶಕ! (ಸಂಶಯನಾಶಕ) ಸಮೀಪ (ಅಂತರಿಕ್ಷದಲ್ಲಿ, ಬೀಸುವ ಗಾಳಿಯಲ್ಲಿ) ಆದರೂ ಇರು; ಇಲ್ಲಿ ನಿನಗಾಗಿ (ನೀನು ಸವಾರಿ ಮಾಡುವದಕ್ಕಾಗಿ) ಕುತ್ತಿಗೆಯಲ್ಲಿ ಉದ್ದವಾದ ಕೂದಲುಗಳುಳ್ಳ ಯುದ್ಧಾಶ್ವಗಳಂತೆ, ಸ್ವರ್ಗಭೇದಕವಾದ ಗಾನಗಳನ್ನು (ತೀವ್ರವಾದ ಸ್ತೋತ್ರಗಳನ್ನು), ಕಳಿಸುತ್ತಿದ್ದೇವೆ. ಯಾರು (ತನ್ನ ಜೀವನ) ರಸವನ್ನು ನಿನಗಾಗಿ ಹಿಂಡಿ ಕೊಟ್ಟಿದ್ದಾನೋ ಅವನಲ್ಲಿಗೆ ತೀವ್ರವಾಗಿ ಬಾ. ಬಾ, ನನ್ನ ಹೃದಯದಲ್ಲಿ ಕುಳಿತುಕೋ, ನನ್ನ ಜೀವನದ ದ್ರಾಕ್ಷಾರಸವನ್ನು (ಸೋಮವನ್ನು) ಸೇವಿಸು.

ಮನುಷ್ಯನು ತನ್ನ ಎಲ್ಲಾ ಕಾಲವನ್ನೂ ಕ್ಷುದ್ರಭಯಗಳಲ್ಲಿಯೂ ತವಕಗಳಲ್ಲಿಯೂ ಮತ್ತು "ನಾನು ಹೇಗೆ ಜೀವಿಸಬೇಕು? ಮುಂದೆ ನನ್ನ ಗತಿ ಏನು?" ಎಂಬ ಬುದ್ಧಿಹೀನ, ಅಸಂಬದ್ಧ ಚಿಂತೆಗಳಲ್ಲಿಯೂ ವ್ಯರ್ಥವಾಗಿ ಕಳೆಯಬಾರದು.

ಮೀನುಗಳಿಗೂ ಹಕ್ಕಿಗಳಿಗೂ ಕಡೆಗೆ ಮರಗಳಿಗೂ ಇರುವಷ್ಟು ಆತ್ಮಗೌರವವಾದರೂ ಮನುಷ್ಯನಿಗಿರಬೇಕು. ಅವೇನೂ ಬಿರುಗಾಳಿ-ಮಳೆ, ಬಿರುಬಿಸಿಲುಗಳನ್ನು

ಸಹಿಸಲಾರದ ಅಸಮಾಧಾನದಿಂದ ಗೊಣಗಾಡುವದಿಲ್ಲ ; ಅವು ಪ್ರಕೃತಿಯೊಡನೆ ಒಂದಾಗಿ ಬಾಳುತ್ತವೆ. (ನನ್ನ ಆತ್ಮನೇ) ನಾನೇ ಸುರಿಯುತ್ತಿರುವ ಮಳೆ ಆಗಿದ್ದೇನೆ. ನಾನು ಮಿಂಚಾಗಿ ಪಳ್ಳನೆ ಹೊಳೆಯುತ್ತೇನೆ : ನಾನು ಗುಡುಗುತ್ತೇನೆ. ನಾನು ಎಷ್ಟು ಸುಂದರವಾದ ಘೋರನೂ ಪ್ರಬಲ-ಪ್ರಚಂಡನೂ ಆಗಿದ್ದೇನೆ। ಹೃದಯದಿಂದ ಶಿವೋಹಂ ಗೀತೆಗಳು ಉಕ್ಕಿ ಹರಿಯುತ್ತವೆ.

ಆಮೇಖಲಂ ಸಂಚರತಾಂ ಘನಾನಾಂ ಛಾಯಾಮಧಃ ಸಾನುಗತಾಂ ನಿಷೇವ್ಯ ।
ಉದ್ವೇಜಿತಾ ವೃಷ್ಟಿಭಿರಾಶ್ರಯನ್ತೇ ಶೃಂಗಾಣಿ ಯಸ್ಯಾತಪವನ್ತಿ ಸಿದ್ಧಾಃ ॥
ಭಾಗೀರಥೀ ನಿರ್ಝರ ಶೀಕರಾಣಾಂ ವೋಢಾ ಮುಹುಃ ಕಮ್ಪಿತದೇವದಾರುಃ।
ಯದ್ವಾಯುರನ್ವಿಷ್ಟ ಮೃಗೈಃ ಕಿರಾತೈಃ ಆಸೇವ್ಯತೇ ಭಿನ್ನ ಶಿಖಣ್ಡಿ ಬರ್ಹೈಃ ॥

ಬಿರುಸಾದ ಮಳೆಯ ಭರವೃಷ್ಟಿ ಇಲ್ಲದೆ ಯಾವ ಒಂದು ಹಗಲೂ ಒಂದು ರಾತ್ರಿಯೂ ಕಳೆಯುವದಿಲ್ಲ, ಮೇಲೆ ಉದಾಹರಿಸಿರುವ ಕಾಳಿದಾಸನ ಮೊದಲನೆಯ ಶ್ಲೋಕದಲ್ಲಿ ವರ್ಣಿಸಿರುವಂತೆ, ನಿತ್ಯವೂ ಗುಡ್ಡವನ್ನು ಹತ್ತಿ ಹೋಗುವಾಗ ರಾಮನು ಪದೇ ಪದೇ ಮಳೆಯಲ್ಲಿ ಸಿಕ್ಕಿಕೊಳ್ಳುತ್ತಾನೆ ಆದರೆ, ಸಮೀಪದಲ್ಲಿ ಗುಹೆಗಳಿಲ್ಲ ವಾದುದರಿಂದ ಅವನು ಮೋಡಗಳನ್ನೇ ಕೊಡೆಗಳನ್ನಾಗಿ ಮಾಡಿಕೊಳ್ಳ ಬೇಕಾಗುತ್ತದೆ; ಮಳೆಯ ಸುಖವನ್ನು ತಾನೆಂದೂ ತನ್ನದೆಂದೂ ಅವನು ಅನುಭವಿಸುತ್ತಾನೆ.

ಕಾಳಿದಾಸನ ಮೇಲಿನ ಎರಡನೆಯ ಶ್ಲೋಕದಲ್ಲಿ ವರ್ಣಿಸಿರುವಂತೆ, ದೇವದಾರು, ಪೀತದಾರು ವೃಕ್ಷಗಳು (cedars and pines) ಹಿಮಾಲಯದ ಚಳಿಯಲ್ಲಿ ಗಡಗಡ ನಡುಗುತ್ತಿದ್ದರೂ ಕಂಪಿಸುತ್ತಿದ್ದರೂ ಗಂಗೆಯಿಂದ ಗಾಳಿಯಲ್ಲಿ ಎರಚಿಬರುವ ತುಂತುರು ಸೀರ್ಪನಿಗಳ ತಂಪಾದ ವೃಷ್ಟಿಗೆ ಗುರಿಯಾಗಿರುವದರಿಂದ ಪುಣ್ಯಪುಂಜವಾಗಿವೆ.

ರಭಸದ ತಂಪಿಗೂ ಸಂಕ್ಷುಬ್ಧವಾದ ಅನುಗ್ರಹಕ್ಕೂ (Raging coolness and stormy grace) ನಮ್ಮ ಧೈರ್ಯದಿಂದ ನಮ್ಮ ಎದೆಯನ್ನು ಒಡ್ಡುವದೇ ಒಂದು ಸೌಭಾಗ್ಯ ।

೭

# A Visit to Sahastaru Tal

# ಸಹಸ್ತ್ರರುತಲ ಸಂದರ್ಶನ

ಸಪ್ತರ್ಷಿಹಸ್ತಾವಚಿತಾವಶೇಷಾಣ್ಯಧೋ ವಿವಸ್ವಾನ್ ಪರಿವರ್ತಮಾನಃ ।
ಪದ್ಮಾನಿ ಯಸ್ಯಾಗ್ರಸರೋರುಹಾಣಿ ಪ್ರಬೋಧಯತ್ಯೂರ್ಧ್ವ
ಮುಖೈರ್ಮಯೂಖೈಃ ॥

ಉತ್ತರದಿಶೆಯ ಗಗನದಲಿ ಬೆಳಗುವಾ ಸಪ್ತರ್ಷಿತಾರೆಗಳು
ತಮ್ಮೆತ್ತರದ ನೆಲೆಗಳಿಂ ಬಿಡಿಸುವಂತಿಹ ಚೆಲು ಕುಸುಮಗಳು ;
ಅಷ್ಟು ಮೇಲೆತ್ತರದಿ ಕಡಿದಾದ ಹಿಮಗಿರಿಶ್ರೇಣಿಗಳ ಮಧ್ಯದಲಿ,
ಹೃಷ್ಟ ಭಾವದಿ ಪವಡಿಸಿವೆ ಕಮಲಗಳು ಶಾಂತಸರಸ್ಸಿನಲಿ ;
ತಾರೆಗಳ ಕೆಳಗಿನಾ ಪಥದಿಂದ ಸೂರ್ಯದೇವನು ತನ್ನ,
ಸುಪ್ರಭಾತ ಪ್ರಭಾರಶ್ಮಿಗಳ ದಿವ್ಯ ಪ್ರವಾಹದಲಿ ಸುರಿಯುತಿರೆ ಮುನ್ನ,
ಪರ್ವತಸರೋವರದಿ ಮಲಗಿರ್ಪ ಪ್ರೇಯಸಿಯ ನಿದ್ರೆಯನು,
ಒಡೆದವನ ಮುತ್ತುಗಳು, ಪಡೆದಿರ್ಪವವಪೂರ್ವ ಸೌಂದರ್ಯವನು.

ಕೆಳಗೆ ಬಹುದೂರ ಅಗಾಧ ಆಳದವರೆಗೆ ಹರಡಿರುವ ಭೂರ್ಜವೃಕ್ಷಗಳ (Birch) ಮತ್ತು ನಿತ್ಯಹಸುರಿನ ಶಂಕುಫಲಜಾತಿಯ (Juniper) ವೃಕ್ಷಗಳ ಅಲೆಅಲೆಯಾಗಿ ತೊನೆದಾಡುತ್ತಿರುವ ವನಗಳನ್ನೂ, ಎಡಬಲಗಳಲ್ಲಿರುವ ಹೂಗಳಿಂದ ತುಂಬಿ ಸೊಬಗಿನ ಬೀಡಾದ ಪ್ರಪಾತಗಳನ್ನೂ ನೋಡುತ್ತಾ, ಬಹಳಮಟ್ಟಿಗೆ ಸ್ವರ್ಗ ಸ್ಪರ್ಶಿಗಳಾದ ಪರ್ವತಪಂಕ್ತಿಗಳ ಮೇಲೆ ನಡೆದಾಡುವದು ಆನಂದಕರವೂ ಸಾಹಸವೂ ಆಗಿದ್ದಿತು. ನಾವು ಬರಿಗಾಲಿನಿಂದ ಹೋಗುತ್ತಿರುವಾಗ, ಮೃದುವಾದ ರೇಷ್ಮೆ ಮಖಮಲ್ಲಿನಂಥ ಎಳೆ ಹುಲ್ಲುಗಳು ಬೆಳೆದು ಮುಸುಕಿರುವ ವಿಶಾಲವಾದ ಮೈದಾನದಲ್ಲಿ, ಪ್ರೀತಿಯಿಂದ ಕೋಮಲ ಕುಸುಮಗಳು ಬೆರಳುಗಳ ನಡುವೆ ಸಿಕ್ಕಿಕೊಂಡು, ಕಾಲುಗಳಿಗೆ ಅಂಟಿಕೊಳ್ಳುತ್ತಿದ್ದವು. ದೂರ ಕೈಲಾಸದ ಕಡಿದು

ಬಂಡೆಗಳ ಮೇಲಿಂದ ಅತಿಶಯ ರಭಸದಿಂದ ನುಗ್ಗುವ ಜಲಝರಿಗಳೂ ಜಲಪಾತಗಳೂ ಕರಗಿದ ಬೆಳ್ಳಿಯು ಹರಿದು ಬರುವಂತೆ, ಬೀಳುವಂತೆ ತೋರುತ್ತಿತ್ತು. ನಮ್ಮೆದುರಿಗೆ ಜಾಣ ಪುಟ್ಟ ಕಸ್ತೂರಿ ಮೃಗವು ಮಿಂಚಿನ ವೇಗದಿಂದ ಜಿಗಿಯುವದನ್ನು ನೋಡಿದರೆ ಇಂಥಾ ಮನೋಹರ ವೇಗಶಾಲಿಯು ಚಂಚಲನಾದ ಚಂದ್ರನಿಗೆ ವಾಹನವಾಗಿರುವದು ಎಷ್ಟು ಉಚಿತ!—ಎನಿಸುತ್ತದೆ. ಆಗಾಗ ಗರುಡ ಪಕ್ಷಿಗಳು ಈಗೊಮ್ಮೆ ಇತ್ತಕಡೆ, ಇನ್ನೊಮ್ಮೆ ಅತ್ತಕಡೆ ಹಾರಾಡಿ, ತಮ್ಮ ಬಣ್ಣಬಣ್ಣದ ದೊಡ್ಡ ರೆಕ್ಕೆಗಳನ್ನು ಬೀಸಿ ಬೀಸಿ ರಪರಪನೆ ಬಡಿಯುತ್ತಾ ನಾವು ಬೆಚ್ಚಿ ಬೀಳುವಂತೆ ಮಾಡುತ್ತವೆ. ತಮ್ಮ ಸೊಗಸಾದ ದಳಗಳಲ್ಲಿ ಬಂಗಾರವನ್ನೂ ಪರಿಮಳವನ್ನೂ (ಸೌವರ್ಣವನ್ನೂ ಸೌಗಂಧವನ್ನೂ) ಕೂಡಿಸಿಟ್ಟುಕೊಂಡಿರುವ ಸುಂದರವಾದ ಕೈಲಾಸದ ಬ್ರಹ್ಮಕಮಲಗಳನ್ನು ಕುಯಿದುಕೊಳ್ಳುವದಕ್ಕೆ ನಾವು ಆಗಾಗ ಅಲ್ಲಲ್ಲಿ ಬಗ್ಗುತ್ತಿರುತ್ತೇವೆ. ಇಲ್ಲಿ ಆಕರ್ಷಕ ಸಮೃದ್ಧಿಯಿಂದ ದೊರಕುವ 'ಮಾಸಿ' 'ಲೀಸರ್' 'ಗುಗ್ಗುಳ್' ಮೊದಲಾದ ಬಗೆಬಗೆಯ ಪುಷ್ಕಳ ಸುಗಂಧ ದ್ರವ್ಯಗಳನ್ನು ಅಗೆದು ಕೀಳುವದರಲ್ಲಿ ಕೂಲಿಯವರು ಒಬ್ಬರೊಡನೊಬ್ಬರು ಸ್ಪರ್ಧಿಸುತ್ತಿರುವದನ್ನು ನೋಡುವದಕ್ಕೆ ತಮಾಷೆಯಾಗಿರುತ್ತದೆ. ಇವನ್ನೆಲ್ಲಾ ನೋಡುತ್ತಾ ಸ್ತೋತ್ರಪಾಠ ಹೇಳುತ್ತಾ ಓಂಕಾರಗಾನಮಾಡುತ್ತಾ ನಾವು ಹಿಮಾಲಯದಲ್ಲಿ ಹೋಗುತ್ತಿದ್ದೆವು. ಪ್ರಾಪಂಚಿಕ ಜೀವನದ ಬೇಸರಗೊಳಿಸುವಂಥ ಕಿವಿ ಕಿವುಡು ಮಾಡುವ ಎಡೆಬಿಡದ ಗದ್ದಲ–ಗೊಂದಲಗಳಿಗೆ ಬಹಳ ದೂರದಲ್ಲಿ ಮೇಲೆ, ಪರಿಶುದ್ಧವೂ ನಿಷ್ಕಳಂಕವೂ ಆದ ಮಂಜುಗಡ್ಡೆಗಳಿಂದ ಸುತ್ತುವರಿಯಲ್ಪಟ್ಟ ಆಳವೂ ಅಪರಿಮಿತವೂ ಆದ ನೀಲಜಲದ ಪುಷ್ಕರಿಣಿಗಳು, ತಮ್ಮ ಸ್ಫಟಿಕಸದೃಶವಾದ ನೀರಿನ ವೈಶಾಲ್ಯದಲ್ಲಿ, ಕೈಲಾಸದ ಸ್ವಚ್ಛಂದವೂ ಶುದ್ಧವೂ ಆದ ಗಾಳಿಯಿಂದ ಅಲೆಯುಲೆಯಾಡುತ್ತಾ ಉಜ್ವಲಕಾಂತಿಯಿಂದ ಕೆಂಪೇರುತ್ತಿರುವ ಸೂರ್ಯನ ಮುಖಕ್ಕೇ ಪ್ರತ್ಯಕ್ಷವಾಗಿ ಕನ್ನಡಿಯನ್ನು ಮೇಲಕ್ಕೆ ಹಿಡಿದಂತೆ ಕಾಣುತ್ತವೆ. ಅಂಥ ಮಹೋನ್ನತ ನಿರ್ಜನ ಪ್ರದೇಶದಲ್ಲಿ ಸೂರ್ಯ ಭಗವಾನನೂ ತನ್ನ ಮನೋಹರ ವೈಭವದಲ್ಲಿ ಗಂಭೀರವಾಗಿ ಮೆರೆಯುತ್ತಾನೆ. ಅಷ್ಟು ತಲೆ ತಿರುಗಿಸುವ ಎತ್ತರದಲ್ಲಿ ಒಂದು ಸಣ್ಣ ಹಳ್ಳಿಯಾಗಲೀ ಗುಡಿಸಲಾಗಲೀ ಇರುವದು ಸಾಧ್ಯವಿಲ್ಲ; ನಾವು ಮಂದಮಾರುತಗಳು ನಿದ್ರಿಸುವ ಗುಹೆಗಳಲ್ಲಿ ರಾತ್ರಿಗಳನ್ನು ಕಳೆದೆವು.

ಓ! ಶೋಷಕವಾದ ದೇಹಪ್ರಜ್ಞೆಯು ನೀರಸವಾದ ಮೈದಾನಗಳನ್ನು ಬಹಳ ಹಿಂದೆಯೇ ಬಿಟ್ಟು ಬಲುದೂರ ಮುನ್ನಡೆದ ಆ ಆನಂದವು ಎಷ್ಟು ರೋಮಾಂಚಕವಾದುದು! ಓ! ಸೂರ್ಯಪ್ರಕಾಶದೊಡನೆಯೂ ಮಂದಮಾರುತನೊಡನೆಯೂ

ಸ್ವಚ್ಛಂದವಾಗಿ ಬೆರೆಯುವ ಆ ಸಂತೋಷವು ಎಷ್ಟು ಅಪರಿಮಿತವಾದುದು ! ಓ, 'ಏಕಮೇವಾದ್ವಿತೀಯಂ' (ಎರಡನೆಯದಿಲ್ಲದ ಒಂದೇ ತತ್ತ್ವದ) ಅನುಭವದ ಸ್ವರ್ಗೀಯವಾದ ಅನಂತಾರಣ್ಯಗಳ ಆಳದಲ್ಲಿ ಅಲೆದಾಡುವ ಆ ಪರಮಾನಂದವು ಎಷ್ಟು ಅದ್ಭುತವಾದುದು !

*    *    *

ಗೌರವದ ಪದವಿಗಳನ್ನು ಗಳಿಸಿದವರೆ, ಜ್ಞಾನಸಂಪಾದಕರೆ, ಸಮಾಜಸುಧಾರಕರೆ! ಪ್ರಿಯ ಶ್ರಮಜೀವಿಗಳೆ ! ಒಳ್ಳೆಯದು ! ಏಕೋ ದೇವನಾದ ರಾಮನು ನಿಮ್ಮನ್ನು ಆಶೀರ್ವದಿಸುತ್ತಾನೆ. ಮಧುರಾತ್ಮರೆ ! ನಡೆಸಿರಿ, ನಡೆಸಿರಿ, ಭರವಸೆಯಿಂದಲೂ ಉತ್ಸಾಹದಿಂದಲೂ ನಿಮ್ಮ ನಿಮ್ಮ ಕರ್ತವ್ಯಗಳನ್ನು ಬಿಡದೆ, ಬೆನ್ನುಹತ್ತಿ ನಡೆಸಿರಿ. ನಿಮ್ಮ ಪ್ರಯತ್ನಗಳೆಲ್ಲಾ ಪುಷ್ಕಳ ಯಶಸ್ಸಿನ ಸಾಫಲ್ಯ ಹೊಂದಲಿ. ನಿಮ್ಮ ನಿಮ್ಮ ವಿಶಿಷ್ಟ ಗಮ್ಯಸ್ಥಾನಗಳನ್ನು ನೀವು ನೀವು ಸುಖವಾಗಿಯೂ ಸುರಕ್ಷಿತವಾಗಿಯೂ ಹೋಗಿ ಸೇರಿರಿ ; ನಿಮ್ಮ ನಿಮ್ಮ ನಿಲ್ದಾಣಗಳಲ್ಲಿ ಸಂತೋಷವೇ ನಿಮಗೆ ಜಯಕಾರಮಾಡಲಿ. ಆದರೆ ರಾಮನ ಸಮಾಚಾರವೇನು ? ರಾಮನು ತೆಗೆದುಕೊಂಡಿರುವ ಟಿಕೆಟ್ಟೇ ಬೇರೆ. ಅವನು ಪ್ರಯಾಣಗತಿಯನ್ನು ಕಡಿದು, ನಡುವಿನ ನಿಲ್ದಾಣಗಳಲ್ಲಿ ಎಲ್ಲಿಯೂ ಹೆಚ್ಚು ಕಾಲ ವಸತಿ ಮಾಡಲಾರ. ನಮಸ್ತೇ ! ಶುಭಮಸ್ತು ! ಪ್ರೇಮಾತ್ಮರೆ ! ಓ ಅಂತಿಮ ಧಾಮವೆ ! ಎಂದಿಗೂ ಮುಗಿಯದ ಕೊನೆಯ ನಿಲ್ದಾಣವೆ !

೧

ಭೂಲೋಕ ಸ್ವರ್ಲೋಕಗಳ, ಮೃಗಪಕ್ಷಿಗಳ ಸೃಷ್ಟಿಸುತ್ತೆ,
ಮೂಲ ಚಿನ್ಮಯ, ಜೀವ ಮೋಕ್ಷಾತ್ಮರಾಗಿವನೆ ತಾ ಪ್ರವೇಶಿಸುತ್ತೆ,
ಭಕ್ತಿ ಮೋಕ್ಷಜ್ಞಾನ ಸಾಧನಗಳಿಂ ಬಿಟಬಡಿದು ಚೆನ್ನಾಗಿ,
ಯುಕ್ತಿಯಿಂ ತನುಮನಗಳೆಂಬ ಸಿಪ್ಪೆಗಳಿಂದ ಹೊರಡಿಸಿದ ಯೋಗಿ,
ನಾಮರೂಪಗಳೆಂಬ ವಸ್ತ್ರಧರಿಸಿರ್ಪ ಆ ಸದ್ರೂಪವೇ ನೀನು,
ಭೂಮಾ ಸುಖದ ಆ ಮಹಾಸತ್ತೆ, ಆ ಚಿತ್ತೆ, ತತ್ತ್ವಮಸಿ, ಅದೆ ನೀನು.

೨

ದಾರಿ ತಪ್ಪಿದ ಕುದುರೆಗಳ ಚಾವಟಿಯ ಜಡಿತದಿಂ ಸರಿಪಡಿಸಿದಂತೆ,
ಭೂರಿ ವಿಷಯೇಂದ್ರಿಯಂಗಳ ಚಿಂತೆಗಳನು ತಾ, ಜಗ್ಗಿ ತಿರುಗಿಸುತೆ,
ಸುಜ್ಞರಾ ಸುವಿವೇಕ ಕಡಿವಾಣದಿಂ ಮನವ ವಶದಲ್ಲಿರಿಸಿಕೊಳುತೆ,
ಪ್ರಾಜ್ಞರವುಗಳನು ತರುವರು ತಾವ್ ಸ್ವಧಾಮಕೇ ಓಂ ನಾಮಕೇ.
ಆ ಸ್ವಧಾಮವೆ ನೀನು, ಓಂಕಾರವದೆ ನೀನು, ಆ ಪರಂಧಾಮ ನೀತತ್ತ್ವಮಸಿ।

೩

ಬಗೆಬಗೆಯ ಬದಲಾವಣೆಗಳೆಲ್ಲ—ಎಚ್ಚರವು ಕನಸು ನಿದ್ದೆಗಳು,
ಮಿಗೆ ಬಾಲ್ಯ ಮೇಣ್ ಪ್ರೌಢ, ಆರೋಗ್ಯ ಮತ್ತೆ ವಿವಿಧ ರೋಗಗಳು,
ಸೋಲು–ಗೆಲು, ಸುಖ-ದುಃಖ, ಮಾನಾಪಮಾನ, ವರಲಾಭ, ನಷ್ಟಗಳು,
ಸಾಲಾಗಿ ಬಂದೆರಗುವಿವು ಎಲ್ಲ ದಾರದಲಿ ಪೋಣಿಸಿಹ ಬರಿಹೂವುಗಳು
ಎಂದಿಗೂ ಮಾರ್ಪಡದ ಆದಾರ, ಆಧಾರ ಸಕಲಕ್ಕು, ಏಕಸೂತ್ರವದೆ.
ಒಂದು ಸಹ ಗಂಟಿಲ್ಲ, ತೊಡಕಿಲ್ಲದಾ ದಾರ, ನಿಜದಿ ಸರ್ವಾಧಾರ. ಶುದ್ಧಾತ್ಮವದೆ,
ನೀನೆ ಆ ಶುದ್ಧಾತ್ಮ, ಬುದ್ಧಾತ್ಮನೇ ನೀನು, ಸಂದೇಹವೇ ಇಲ್ಲ, ಅದೆ ನೀನು, ತತ್ತ್ವಮಸಿ।

೪

ಸೂರ್ಯನಲಿ ಬೆಳಗುವಾ ಸದ್ರೂಪ ಚಿದ್ರೂಪ ನಾನಲ್ಲದಿನ್ನಿಲ್ಲ,
ಎನ್ನೊಳಗಿರುವಾತ್ಮನೇ ನಿಶ್ಚಿತದಿ ಸೂರ್ಯನಲಿ ಬೆಳಗುವಾ ಚಿಜ್ಜ್ಯೋತಿ ತಾನೆಲ್ಲ,
ಎಲ್ಲಾ ಪ್ರಕಾಶಗಳ ಸುಪ್ರಕಾಶವು, ತಾ ಸ್ವಯಂಜ್ಯೋತಿ ಪರಮಾತ್ಮ।
ಆ ಆತ್ಮನೇ ನೀನು, ನಿಜವಾಗಿ, ಅದೆ ನೀನು, ತತ್ತ್ವಮಸಿ। ತತ್ತ್ವಮಸಿ।

೫

ಬೆಳಕು ತೋರಿಕೊಂಡೊಡನೆ ಸಹಸ್ರ ವರ್ಷಗಳ
ಕತ್ತಲದು ಕೂಡೆ ಓಡುವ ತೆರದಿ ತೊಲಗುವವು,
ಚಿಂತೆಗಳು, ಸಂಶಯಗಳು, ಭಯಗಳು, ಮೋಹ್ ಪತನ,
ದುಷ್ಪ್ರೇರಣೆಗಳು, ಅಪಾಯಗಳು, ದೌರ್ಬಲ್ಯಗಳು ಎಲ್ಲ ;
ಶೋಕ ಮೋಹಗಳ, ಪಾಪ ತಾಪಗಳ ತೊಲಗಿಪದು ಆ ಬೆಳಕು,
ಅಂತರಾತ್ಮನ ಅರಿವಿನಾ ನಿತ್ಯ ಪ್ರಕಾಶವೆ ಅದು.
ಆ ಪ್ರಜ್ಞಾನವೇ ನೀನು, ಈ ಆತ್ಮನೇ ನೀನು, ಆ ಬ್ರಹ್ಮಾತ್ಮನಾನೆ-ನೀನು ;
ನಿಜವಾಗಿ ಅದೆ ನೀನು ; ನೀನೆ ಅದು, ತತ್ತ್ವಮಸಿ । ತತ್ತ್ವಮಸಿ ।

೬

ನಿನ್ನ ಕಣ್ಣುಗಳ ಮೋಹ್ ಕೈಗಳ ನಡಸುವದಾವುದದೆ, ಸರ್ವ ಪ್ರೇರಕವು
ನಿನ್ನ ಸ್ಥಿತಿಗದೆ ಕಾರಣವು ಅದೆ ನಿನ್ನ ಗತಿಗೂ ಕಾರಣವು,
ಯಾವದೊಂದು ಚಿದಾತ್ಮ ಸದ್ರೂಪ ಒಳಗಿಹುದೊ ಅದೆ ಎಲ್ಲ ಹೊರಗಿಹುದು,
ಸಾವಿಲ್ಲದಾ ಒಂದೆ ತರುತಿಹುದು ಬಗೆಬಗೆಯ ಆಗುಹೋಗುಗಳ ಸೊಲಿದು ;
ಹೊರಗೆ ಬೇರಾವ ಶಕ್ತಿಯು ಇಲ್ಲ, ಶತ್ರುವೂ ಇಲ್ಲ, ಇನ್ನೊಂದೆಂಬದಿಲ್ಲ,
ಬರಿ ಸಚ್ಚಿದಾನಂದ ಸರ್ವಾತ್ಮ ನೀನಲ್ಲದಿನ್ನಿಲ್ಲ, ಬೇರಿಲ್ಲ,
ಏಕಮೇವಾದ್ವಿತೀಯಂ ಬ್ರಹ್ಮ, ನೀನೆ ಅದು ; ಅದೆ ನೀನು ತತ್ತ್ವಮಸಿ ।
ತತ್ತ್ವಮಸಿ ।
ತತ್ತ್ವಮಸಿ, ತತ್ತ್ವಮಸಿ, ತತ್ತ್ವಮಸಿ, ಆತ್ಮನ್ । ಮಧುರಾತ್ಮನ್ ।
ಪ್ರೇಮಾತ್ಮನ್ !

ಆತ್ಮನೇ ದೇವರೆಂಬ ದೃಷ್ಟಿಯಿಂದ ನೋಡಿದಾಗ, ಇಡೀ ಜಗತ್ತು ಸೌಂದರ್ಯದ ಉಕ್ಕಿಹರಿಯುವಿಕೆಯೂ ಸಂತೋಷದ ಅಭಿವ್ಯಕ್ತತೆಯೂ, ಆನಂದದ ಹೊರಸೂಸುವಿಕೆಯೂ ಆಗಿ ತೋರುತ್ತದೆ. ನಮ್ಮ ದೃಷ್ಟಿಯ ಪರಿಮಿತಿಯನ್ನು ಮೀರಿ ನೋಡಿದಾಗ ನಮಗೆ ಅನಿಷ್ಟವಾದುದೂ ಅಸಹ್ಯವಾದುದೂ ಕುರೂಪವಾದುದೂ ಯಾವದೂ ಉಳಿಯುವದಿಲ್ಲ. ಎಲ್ಲವೂ ನಾನೇ ಆದಾಗ, —ಆಗಿರುವಾಗ—ಯಾವದಾದರೂ ಘನೀಭೂತ ಮಾಧುರ್ಯವಲ್ಲದೆ ಬೇರೇನಿದ್ದೀತು ! ನಾನು—ಆತ್ಮನು—ಆನಂದ

ಸ್ವರೂಪ; ಆದ್ದರಿಂದ ಆತ್ಮಾನುಭವವೆಂದರೆ ಸಮಸ್ತ ಜಗತ್ತು ಸ್ಫಟಿಕೀಕೃತ ಆನಂದವೇ ಆಗಿ ನಮಗೆ ಅನುಭವವಾಗುತ್ತದೆ; ಪ್ರಕೃತಿ ಶಕ್ತಿಗಳು ನನ್ನ ಸ್ವಂತ ಅಂಗಗಳಾಗಿಯೂ ವಿಶ್ವವೇ ನನ್ನ ಸ್ವಂತ ಆತ್ಮದ ಮೂರ್ತ ಸ್ವರೂಪವಾಗಿಯೂ ಕಾಣುತ್ತದೆ.

ಓ ಆನಂದ! ಅದು ನನ್ನಿಂದ ಬೇರಲ್ಲ!
ಆ ವ ಹಾದ್ವಾರದೊಳಿರುವ ಆವ ಕಾಪಿನವನೂ
ಜ್ಞಾನಿಯನು ಒಳಗೆ ನಿರ್ಬಂಧಿಸಿಡಲಾರನು ;
ಎಲ್ಲರಾ ಮೇಲಿರುವ ಸೂರ್ಯದೇವನ ತೆರದಿ,
ದುರ್ಗವನು ಬಿಡದವನಂ ಗೆಲಿದು ಬಲದಿ
ಬೆಳಗುವನು ಗೋಡೆಯುದ್ದಕ್ಕು ಭರದಿ.
ಮೋಡಗಳು ಗಾಳಿಯಿಂ ತೇಲಿ ತೊಲಗುವವರೆಗೆ,
ಆಗಸವು ಕಾಯ್ವವೊಲವನು ಕಾಯುವನು ಕಡೆಗೆ,
ಆದೊಡಾ ಗಗನ ಬೆಳಗುವದು ಗಂಭೀರದಲಿ,
ಆ ಮೋಡಗಳು ಮುಸುಕಿದರು, ತೊಲಗಿದರು
ಒಂದೆ ಸಮದಿ, ನಿಶೆಯಿಲ್ಲದಾ ಸತ್ಯ ಹಗಲಿನಲಿ.

* * *

ಓ ದಿವ್ಯತೆಯೆ! ವಿಶ್ವವನ್ನು ಆಳುವವರಾರು? ದೇವರಲ್ಲದೆ ಮತ್ತಾರು? ದೇವರ ಇಚ್ಛೆಗೂ ನಿಯಮಗಳಿಗೂ ವಿರುದ್ಧವಾಗಿ ಏನಾದರೂ ನಡೆಯಬಹುದೆ? ಎಂದಿಗೂ ಇಲ್ಲ. ಆದದ್ದೆಲ್ಲಾ ಒಳ್ಳೆಯದೆ. ಯಾರಿಗೆ ಈ ಜಗತ್ತು ಸತ್ಯವಾಗಿದೆಯೋ ಅವರು ಯೋಜನೆಗಳಿಗೂ ಕಾರ್ಯ ನೀತಿ–ಚಾತುರ್ಯಗಳಿಗೂ ಶರಣು ಹೋಗಲಿ. ಇರುವದು–ನಿಜವಾಗಿರುವದು–ದೇವರೊಬ್ಬನೇ ; ದೇವರ ಹೊರತು ಬೇರಾವದೂ ಇಲ್ಲ! ಜಯ ಜಯ! ಭಲೆ! ಜೈ!

ತನ್ನನ್ನು ರಕ್ಷಣೆ ಮಾಡಿಕೊಳ್ಳಬೇಕೆಂಬ ಭಾವನೆಯು ಒಂದು ಕ್ಷಣಾರ್ಧವಾದರೂ ಒಳಗೆ ಅಡಗಿದ್ದರೆ, ನಾಶವಾಗಲಿ ಈ ತನುಮನಗಳು! ನಾನೇ ದೇವರು; ನನ್ನ ದೇಹಗಳು ಕೋಟಿ ಕೋಟಿ; ದೇವರಾದ ನನಗೆ ರಕ್ಷಣೆಯ ಅಗತ್ಯವಿಲ್ಲ.

ಒಡೆದು ಪುಡಿ ಪುಡಿ ಮಾಡಲು ಬಾಂಬಿನ ಹೊರಗೆ ಯಾರೂ ಇಲ್ಲ. ವಿಶ್ವಾಧಾರವಾದ ಆ ಒಂದೆ ಗಟ್ಟಿ ಬಂಡೆ ನಾನೇ.

ಹ್ರಸ್ವದೃಷ್ಟಿಯ (ಕಣ್ಣಿನ) ಪಾಪೆಗಳ ಚಂಚಲ ತಾರೆಗಳು ನಮ್ಮ ಲಕ್ಷ್ಯವನ್ನು ಬೇರೆಡೆಗೆ ತಿರುಗಿಸಲು ನಾವು ಸ್ವಲ್ಪವೂ, ಅವಕಾಶ ಕೊಡಬಾರದು.

ತನ್ನ ಸ್ವಂತ ಆತ್ಮನಂತೆಯೇ ಎಲ್ಲಾ ಜೀವರನ್ನೂ ತನ್ನ ಹೃದಯಾಂತರಾಳದಿಂದ ಪ್ರೀತಿಸಿದ ಒಬ್ಬ ವ್ಯಕ್ತಿಯು ಎಂದಾದರೂ ಇದ್ದರೆ ಅವನು ರಾಮನೇ ಸರಿ. ನನ್ನ ಮಕ್ಕಳು ನನ್ನನ್ನು ಅರ್ಥಮಾಡಿಕೊಳ್ಳದಿರಬಹುದು ; ಆದರೂ ನಾನು ಅವರ ಸ್ವಂತ, ಶಾಂತ, ಗಂಭೀರ, ಪ್ರೀತಿಯ, ಅನುಗ್ರಾಹಕ ಆತ್ಮನೇ ರಾಮ ; ಆತ್ಮಾರಾಮ ! ಸರ್ವಾತ್ಮರಾಮ !

೮

ಡಾರ್ಜಿಲಿಂಗಿನ ಹಿಮಾಲಯದ ಅರಣ್ಯಗಳಿಂದ ಒಂದು ಪತ್ರ,

ಹಗಲು ಕಳೆದು ರಾತ್ರಿಯಾಗುತ್ತದೆ ; ರಾತ್ರಿಯು ಪುನ ಹಗಲಾಗಿ ಪರಿವರ್ತನೆ ಹೊಂದುತ್ತದೆ ; ಇಲ್ಲಿ ರಾಮನಿಗೆ ಏನು ಮಾಡುವದಕ್ಕೂ ಸಮಯವೇ ಇಲ್ಲ ; ಏಕೆಂದರೆ ಅವನು (ಇವನು) ಅವಿಶ್ರಾಂತವಾಗಿ ಕಾರ್ಯೋದ್ಯುಕ್ತನಾಗಿದ್ದಾನೆ ; ಸ್ವಲ್ಪವೂ ಬಿಡುವಿಲ್ಲದೆ ಕಾರ್ಯನಿರತನಾಗಿದ್ದಾನೆ ; ಬಹಳ ಬಹಳ ಚಟುವಟಿಕೆಯಲ್ಲಿ ಮುಳುಗಿದ್ದಾನೆ ; ಉಸಿರಾಡುವದಕ್ಕೂ ವಿರಾಮವಿಲ್ಲ ; ಅಂಥಾ ಕಾರ್ಯವೇನು ? ಅಷ್ಟು ಕಾರ್ಯಗಳೇನು ? ಯಾವದೂ ಇಲ್ಲ, ಏನೂ ಇಲ್ಲ ; ಆದರೂ ನಿಮಿಷವೂ ಪುರುಸತ್ತಿಲ್ಲ ! ಯಾವದಕ್ಕೂ ಏನೂ ಅವಕಾಶವಿಲ್ಲ. ಅದೇಕೆಂದು, ಅದು ಹೇಗೆಂದು ಆಶ್ಚರ್ಯಪಡಬಹುದು.

"Because, Rama is very very busy in doing nothing."

"ಏಕೆಂದರೆ, ಏನನ್ನೂ ಮಾಡದೆ ರಾಮನು ಅತಿಶಯ ; ಅತೀವ ಚಟುವಟಿಕೆಯಿಂದಿದ್ದಾನೆ."

ಅತ್ಯಂತ ಹೆಚ್ಚಾದ ಮಳೆ ಸುರಿಯುವ ಈ ಪ್ರಾಂತ್ಯದಲ್ಲಿ, ಬಿಡುವಿಲ್ಲದೆ ಸುರಿಯುತ್ತಿರುವ ಮಳೆಯೊಡನೆ, ಎಡೆಬಿಡದೆ ಹರಿಯುತ್ತಿರುವ ಕಣ್ಣೀರು ಸ್ಪರ್ಧಿಸುತ್ತಿದೆ; ರೋಮಗಳು ನೆಟ್ಟಗೆ ನಿಂತಿವೆ, ಕಣ್ಣುಗಳು ಎವೆಯಿಕ್ಕದೆ ಅಗಲವಾಗಿ ಅರಳಿ ತೆರೆದಿದ್ದರೂ ಎದುರಿಗಿರುವ ಯಾವ ವಸ್ತುವನ್ನೂ ಏನನ್ನೂ ನೋಡುತ್ತಿಲ್ಲ. ಮಾತು ನಿಂತಿದೆ; ಕೆಲಸ ನಿಂತಿದೆ—ದುರ್ದೈವದಿಂದ (?) ಅಲ್ಲ, ಅಲ್ಲ, ಅತ್ಯಂತ ಸುದೈವದಿಂದ. ಓ, ನನ್ನೊಬ್ಬನನ್ನೇ ಬಿಡಿ, ಬಿಟ್ಟುಬಿಡಿ. ಬಿಡುವಿಲ್ಲದೆ ಅಲೆ ಅಲೆಯಾಗಿ ಏಳುತ್ತಿರುವ ಈ ಮೂಕ ಹರ್ಷೋನ್ಮಾದದ ಸಂತತ ಪ್ರವಾಹವು, ಓ ಪ್ರೇಮವೇ! ಮುಂದುವರಿಯಲಿ, ಮುಂದುವರಿಯಲಿ! ಓ! ಅತ್ಯಂತ ಮಧುರವಾದ, ಹಿತಕರವಾದ ನೋವೇ!

ತೊಲಗಲಿ ಬರೆವಣಿಗೆ,
ತೊರೆದು ಹೋಗಲಿ ಭಾಷಣ.
ದೂರಾಗಲಿ ಖ್ಯಾತಿ-ನಾಮಗಳು
ಕೀರ್ತಿಗೌರವಗಳು! ಅಸಂಬದ್ಧ—ಅವಿವೇಕ.
ಅಪಕೀರ್ತಿ! ಅರ್ಥಹೀನ.
ಈ ಎಲ್ಲಾ ಹುಡುಗಾಟ, ಹುಚ್ಚಾಟಗಳು ಬಾಳಿನ ಗಮ್ಯ—ಗುರಿಗಳೆ?
ತರ್ಕ-ವಿಜ್ಞಾನಗಳು, ಬಡ ಅತಂತ್ರಗಳು, ಅವ್ಯವಸ್ಥೆಗಳು!
ಅವು ನನ್ನನ್ನುನೋಡಿ ತಮ್ಮ ಅಂಧತೆಯನ್ನು ಕಳೆದುಕೊಳ್ಳಲಿ,
ಕನಸುಗಳಲಿ ಪವಿತ್ರಪ್ರವಾಹವೊಂದು ಹರಿಯುತಿಹುದು,
ಎಚ್ಚರದೊಳದು ಬೆಳೆ ಬೆಳೆದು ಹೊಳೆಯಾಗುವದು.
ಕೆಲವೊಂದು ಸಮಯದಲಿ ಮರ್ತ್ಯ ದೇಹೇಂದ್ರಿಯಂಗಳೆನಿಪಾ
ದಂಡೆಗಳ ಮೇಲ್ವಾಯ್ದು ಹುಚ್ಚೆದ್ದು ಹರಿಯುವದು.
ಅದು ಜಗದಿ ಸರ್ವತ್ರ ಹರಡಿ ಹರಿಯುತ್ತಲಿಹುದು,
ಹುಚ್ಚಾಟದಿಂದುಬ್ಬುತುಕ್ಕೇರಿ ತಾ ಪ್ರಳಯ ಗೈಯುತಿಹುದು.
ಇದಕಾಗಿ ಸೂರ್ಯದೇವನು ನಿತ್ಯ ಉದಯವಾಗುತಿಹನು,
ಇದಕಾಗಿ ಜಗವೆಲ್ಲ ಶತಕೋಟಿ ವರ್ಷಗಳಲುರುಳುತ್ತಲಿಹುದು.
ಜನನ ಮರಣಗಳೆಲ್ಲ ಇದಕಾಗಿ, ಇದಕಾಗಿ,
ಉಕ್ಕೇರುವಾಶ್ಚರ್ಯ ತರಂಗಿತಾನಂದ ಉರುಳುರುಳಿ ಬರುತಿಹುದು,
ಉಕ್ಕುಕ್ಕಿ ಬರುತಿಹುದು ನಗು, ಮತ್ತುರುಳಿ ತಾ ಮೌನವಾಗುವದು.

## ಕ್ರಿಯಾಶೀಲ ವೇದಾಂತ ಎಂದರೇನು ?

ಮುನ್ನುಗ್ಗಿ ಮುನ್ನಡಸುವ ದುಡಿಮೆಯಲ್ಲದೆ ಜಡತೆಯಿಂದ ನಿಂತಲ್ಲಿ ನಿಲ್ಲುವ ಮೈಗಳ್ಳತನವಲ್ಲ,
ಉದ್ಯೋಗ–ಗೆಯ್ಮೆಗಳ ಸುಖಾನುಭವವಲ್ಲದೆ, ಬೇಜಾರು ಬಳಲಿಕೆಗಳ ಜೀತದ ಗುಲಾಮ ಚಾಕರಿಯಲ್ಲ,
ಮನಸ್ಸಿನ ಶಾಂತಿ-ಸಮಾಧಾನಗಳಲ್ಲದೆ, ಅನುಮಾನ-ಅಪನಂಬಿಕೆಗಳ ಒಳಗೇ ಕುದಿಯುತ್ತಿರುವ ಮಂತ್ಸರವಲ್ಲ
ಸಕ್ರಮವಾದ ಸುವ್ಯವಸ್ಥೆಯಲ್ಲದೆ, ವಿಚ್ಛೇದಕಾರಿಯಾದ ವಿಷಮ ಅವ್ಯವಸ್ಥೆಯಲ್ಲ,
ಸಮಯೋಚಿತ ಸುಧಾರಣೆಯಲ್ಲದೆ, ಪದ್ಧತಿ ಬದ್ಧ ಸಂಪ್ರದಾಯ ಪಾಲನೆಯಲ್ಲ,
ದೃಢವಾದ ನೈಜಭಾವನೆಯಲ್ಲದೆ, ಅಂದಚೆಂದದ ಬಣ್ಣನೆಯ ಮಾತು ಗಾರಿಕೆಯಲ್ಲ
ವಾಸ್ತವಿಕ ಕೃತ್ಯಗಳ ಕಾವ್ಯವಲ್ಲದೆ, ಊಹಾಪೋಹದ ಕಾದಂಬರಿಯಲ್ಲ,
ವಾಸ್ತವ ಸಂಗತಿಗಳ (ಅಥವಾ ಘಟನೆಗಳ) ತರ್ಕವಲ್ಲದೆ, (ಗತಕಾಲದ) ಮೃತ ಲೇಖಕರ ಪ್ರಮಾಣಗಳಲ್ಲ,
ಜೀವಂತ ಸತ್ಯಾನುಭವವಲ್ಲದೆ, ಕೇವಲ ಮೃತವಾದ ಉದ್ಧೃತ ವಾಕ್ಯಾಧಾರಗಳಲ್ಲ—

## ಕ್ರಿಯಾಶೀಲ ವೇದಾಂತದ ನಿಯೋಜನೆಗೆ ಇವೇ ಘಟಕಗಳು

ವ್ಯಕ್ತಿಗಳ ಮತ್ತು ಪಕ್ಷಗಳ ಅಭಿಮಾನದಿಂದ ಮನಸ್ಸನ್ನು ಚೆದರಿ ಚೆಲ್ಲಾಪಿಲ್ಲಿಯಾಗಗೊಡದೆ, 'ಅಹಂಬ್ರಹ್ಮಾಸ್ಮಿ' 'ನಾನು ಬ್ರಹ್ಮವಾಗಿದ್ದೇನೆ' 'ನಾನೇ ದೇವರು' ಎಂಬ ಮಹಾವಾಕ್ಯದ ಮೇಲೆ ಮನಸ್ಸನ್ನು ಕೇಂದ್ರೀಕರಿಸಿ ಮಾಡುವ ಧ್ಯಾನವು ಸ್ವಾಭಾವಿಕವಾಗಿ ಬಲದಲ್ಲಿಯೂ ಬಿಡುಗಡೆಯಲ್ಲಿಯೂ ಪ್ರೀತಿಯಲ್ಲಿಯೂ ವ್ಯಕ್ತ ವಾಗುತ್ತದೆ. ಶರೀರದ ಪ್ರತಿಯೊಂದು ರೋಮ ರೋಮದಲ್ಲಿಯೂ ಸ್ಪಂದಿಸುವ ಅನಂತಾಪಾರವಾದ ಈ ದೇವತ್ವವನ್ನೇ, ರಕ್ತಮಾಂಸಾಸ್ಥಿಗತವಾದ ಈ ಅದ್ವೈತ ಭಾವವನ್ನೇ, ಚೈತನ್ಯಮಯವಾದ ಈ ಭಕ್ತಿಯನ್ನೇ, ಜೀವಂತ-

ಜ್ವಲಂತವಾದ ಈ ಜ್ಯೋತಿಯನ್ನೇ ಶಾಸ್ತ್ರಗಳು ಅಸ್ಖಲಿತವಾದ ಬ್ರಹ್ಮನಿಷ್ಠೆ ಅಥವಾ ಬ್ರಾಹ್ಮೀಸ್ಥಿತಿ ಎನ್ನುತ್ತವೆ.

ಓ, ಚಂಚಲ ಚಿತ್ತರಾದ ಚಪಲಸ್ವಭಾವದ ಸಂಶಯಾತ್ಮರೆ! ಉತ್ಸಾಹಶೂನ್ಯವಾದ ಸಂಪ್ರದಾಯ ಪ್ರಿಯತೆಯೂ ಉದಾಸೀನ ಭಾವದ ಸಂಪ್ರದಾಯದ್ವೇಷವೂ ಈ ಎರಡೂ ಇನ್ನು ಸಾಕು! ಎಲ್ಲಾ 'ಡಾಕ್ಸಿ'ಗಳೂ–(Orthodoxy-Heterodoxy) ಮತಗಳೂ ನಿಮ್ಮ ಸೃಷ್ಟಿ. ಎಲ್ಲಾ ಸಂದೇಹ–ಸಂಕೋಚಗಳನ್ನೂ–ಸುಟ್ಟು ಬೂದಿಮಾಡಿರಿ ಒಂದು ವೇಳೆ, ಸೂರ್ಯಮಂಡಲವನ್ನು ಪಾದರಸದ ಬಿಂಬವೆಂದು ತೋರಿಸಬಹುದು, ಒಂದು ವೇಳೆ, ಈ ಭೂಮಿಯನ್ನು ಒಳಬಾಗಿನ ಗೋಳವೆಂದು ಪ್ರಮಾಣಪೂರ್ವಕವಾಗಿ ಸಿದ್ಧಪಡಿಸಬಹುದು; ಒಂದು ಸಮಯ, ವೇದಗಳು ಅಪೌರುಷೇಯವಲ್ಲವೆಂದು ಸಾಧಾರಣವಾಗಿ ಸಾಧಿಸಬಹುದು; ಆದರೆ ನೀವು ಮಾತ್ರ ದೇವರಲ್ಲದೆ ಬೇರೊಂದೂ ಅಲ್ಲ, ಬೇರೇನೂ ಅಲ್ಲ. ನಿಮ್ಮ ದೈವೀ ಭಾವದ ದಿವ್ಯೋನ್ಮಾದದಿಂದ ಒಂದೇ ಒಂದು ಸ್ವರವು–ಉದ್ಗಾರವು-ಹೊರ ಸೂಸಿದರೂ ಸಾಕು, ಅದನ್ನು ಹುಲ್ಲಿನ ಎಸಳುಗಳೂ ಮರಳಿನ ಹರಳುಗಳೂ ಧೂಳಿನ ಕಣಗಳೂ ಗಾಳಿಯ ಸುಳಿಗಳೂ ಮಳೆಯ ಹನಿಗಳೂ ಪಶು–ಪಕ್ಷಿಗಳೂ ಮಾನವರೂ ದೇವತೆಗಳೂ ಹೀರಿಕೊಂಡು, ಗುಹೆಗಳ ಮೇಲೂ ಅರಣ್ಯಗಳ ಮೇಲೂ ಆ ಭಾವನೆಯನ್ನು–ಸ್ವರವನ್ನು–ಗುಡುಗುತ್ತಾರೆ; ಹಳ್ಳಿಗಳ ಮೇಲೂ ಗಡಿಸಲುಗಳ ಮೇಲೂ ಅದನ್ನೇ ಘಂಟಾನಾದದಿಂದ ಸಾರುತ್ತಾರೆ, ನಗರಗಳ ಮೇಲೂ ಪಟ್ಟಣಗಳ ಮೇಲೂ ಬೀದಿಬೀದಿಗಳ ಮೇಲೂ ಅದನ್ನೇ ಭೇರಿ ಹೊಡೆದು ಮೊಳಗಿಸುತ್ತಾರೆ; ಆ ನಿಮ್ಮ ಸತ್ತ್ವಭರಿತವಾದ ಭಾವನೆಯೇ ಇಡೀ ಜಗತ್ತಿನಲ್ಲೆಲ್ಲಾ ತುಂಬಿ ಎಲ್ಲರನ್ನೂ ರೋಮಾಂಚನ ಗೊಳಿಸುತ್ತದೆ! ಓ, ವಿಮೋಚನೆಯೇ! ಓ, ಸ್ವಾತಂತ್ರ್ಯವೇ!

ಸ್ವರ್ಣಮಯವಾದ ಹಿಮರಾಜಿಗಳ ಅಪಾರ ಸಂಪತ್ತಿನಿಂದ ನದಿಯ ಪರ್ವತ ಪ್ರಾಂತದ ಮೂಲ ಉಗಮಗಳು ತುಂಬಿದರೆ, ಸ್ವಚ್ಛಂದವಾಗಿ ಅಭಿವೃದ್ಧಿ ಹೊಂದುವಂತೆ ಹೊಲಗದ್ದೆಗಳಿಗೆ ನೀರುಣಿಸುತ್ತಾ ಆ ನದಿಯ ಶಾಖೋಪಶಾಖೆಗಳೂ ಹೊಳೆ–ಹೊನಲುಗಳೂ ಕಾಲುವೆಗಳೂ ನೀರಿನಿಂದ ತುಂಬಿ ತುಳುಕುತ್ತಾ ಪ್ರವಹಿಸುತ್ತವೆ. ಇದೇ ರೀತಿಯಲ್ಲಿ, ಜೀವಾತ್ಮನ ಮೂಲವೂ ಪ್ರೇಮದ ಉಗಮವೂ ಸಂತೋಷ– ಪ್ರಕಾಶಗಳ ಚಿಲುಮೆಯೂ ಆಗಿರುವ ಅನಂತ ಶಕ್ತಿಯೂ ಶುದ್ಧಿಯೂ ದಿವ್ಯತೆಯೂ ನಿಮ್ಮನ್ನು ಗಾಢವಾಗಿ ಆಲಂಗಿಸಿ, ಅಲ್ಪವಾದ ಜೀವನನ್ನು ಉಚ್ಚಾಟನೆ

ಮಾಡಿ, ಅದರ ಸ್ಥಾನವನ್ನು ಆಕ್ರಮಿಸಿ, ಮನಸ್ಸಿನಲ್ಲಿಯೂ ಭಾವನೆಗಳಲ್ಲಿಯೂ ತುಂಬಿ, ತುಂಬಿ, ಕೈ-ಕಾಲು-ಕಣ್ಣುಗಳ ಮೂಲಕ ಅಷ್ಟೇ ಅಲ್ಲ, ದೇಹದ ಪ್ರತಿಯೊಂದು ನರನಾಡಿಯ ಮೂಲಕವಾಗಿ ತುಳುಕುವವರಿಂದ, ಸುತ್ತಲ ಆವರಣ-ಸನ್ನಿವೇಶಗಳು ಸಹಮಧುರ ಮೈತ್ರಿ-ಮೇಳ-ಸಾಮರಸ್ಯಗಳ ಸ್ವರ್ಗವನ್ನೇ ಸೃಷ್ಟಿಮಾಡಿ ಅಪರಿಮಿತ ಶಕ್ತಿಯ ಪ್ರವಾಹವನ್ನೇ ಹರಿಸಬೇಕು.

ರಾಜವೈಭವದ ಸಿಂಹಾಸನದ ಮೇಲೆ ಮಹಾರಾಜನು ಮಂಡಿಸಿದ ಮಾತ್ರದಿಂದ ಆವನ ದರ್ಬಾರಿನೊಳಗೆಲ್ಲಾ ಸುವ್ಯವಸ್ಥೆಯಿರುವಂತೆ ಒಬ್ಬ ಮನುಷ್ಯನು ತನ್ನ ದೇವತ್ವದ ಸ್ವರಾಜ್ಯಸಿಂಹಾಸನದಲ್ಲಿ ಸಮಾಸೀನನಾಗುವುದರಿಂದ ಇಡೀ ಕುಲದ ತುಂಬ ವ್ಯವಸ್ಥೆಯೂ ಜೀವವೂ ಸುಸ್ಥಾಪಿತವಾಗುತ್ತವೆ.

ಎಲೈ ಅಲ್ಪ ತೃಪ್ತಿಯ ಸಂತಮಾತ್ರರೆ! ಎದ್ದೇಳಿ, ಎಚ್ಚರಗೊಳ್ಳಿ, ನಿಮ್ಮ ಪವಿತ್ರವಾದ ದೇವತಾ ಸಾರ್ವಭೌಮತ್ವವನ್ನು ಅರಿಯಿರಿ. ಆ ರಾಜಪದವಿಯ ಉದಾಸೀನತೆಯಿಂದ ಜಿಪುಣ್ಣದ ಬಿರುದು ಕುಡಿ ಹೋಗಲಿ, ನಿಮ್ಮ ಅಸಹ್ಯವಾದ ನಿರ್ಲಕ್ಷ್ಯತೆಯಿಂದ ಸೋಸುವ ಪರೋಕ್ಷ ಪ್ರಭಾವದ ಶಕ್ತಿಗಳು ಸಹ ಪ್ರತ್ಯಕ್ಷ ನರಕಗಳನ್ನೂ ಸಮ್ಮೋಹಕ ಸ್ವರ್ಗಗಳನ್ನಾಗಿ ಬದಲಿಸುವುದಕ್ಕೆ ಸಾಕಷ್ಟು ಸಾಮರ್ಥ್ಯವುಳ್ಳವುಗಳಾಗಿವೆ.

ಓ ಮನೆಗೆ ಬಾ, ಓ, ಮನೆಗೆ ಬಾ ಓ ತೌರಿಗೆ ಬಾರೋ,
ಓ, ನೆಲೆಗಾಣದ ಅಲೆಮಾರಿಯೆ, ಓ, ಮನೆಗೆ ಬಾ! ಓಂ! ಓಂ!
(Come Home! om! om!)

ಮಂದ ಮಾರುತಗಳೆ ಬೀಸಿರಿ, ಮಾರುತಗಳೆ, ನಿಮ್ಮ ಉದ್ವೇಗಗಳನ್ನೇ ತಮ್ಮವಾಗಿ ಉಳ್ಳ ಈ ನುಡಿಗಳೊಡನೆ ಬೆರೆಯಿರಿ

ಓ ನಗು! ನಗು! ನಗು!
ಅಳಿಯಲಾಗದ, ಅಡಗಿಸಲಾಗದ ಮೋದ, ವಿನೋದ-ನಗು!
ಅಡವಿಗಳ ನಡುವಿರುವ ನವಿಲ ಕೂಗಿನ ಕರೆಗೆ,
ಓ ಗೋಟ್ಟು, ಬಹುಕಾಲದ, ಆದರೆ, ಅವರ್ಣ್ಯ ಬೇರ್ಪಟ್ಟಿರುವುದ ಬಳಿಕ,
ಒಂದಿರುಗಿ ಬಂದು,

ದೀರ್ಘಕಾಲಾನಂತರದಿ, ಕಡಿದ ದಾರವ ಕೈಲೆತ್ತಿಕೊಂಡು,
ಗತ ಜೀವಗಳ ಮೃತಪರ್ಣಾಂಗಗಳ ಮಧ್ಯದಿಂ ಬಿಚ್ಚುತೇಳುವ ಜರೀಗಿಡ
ಗಳೊಡನೆದ್ದೇಳಿ.
ಪ್ರೇಮಸಂಗಮದ ಪ್ರಥಮರಾತ್ರಿಯ ಬಳಿಕ ಪ್ರಣಯಿಗಳು,
ಲೋಕದಲಿ ಮರುದಿವಸ ಮುಂಜಾನೆ ರವಿಯ ಹೊಸ ಉದಯವನು
ಕಾಂಬಂತೆ,
ಇಷ್ಟದೇವನ ಪ್ರೇಮದಲಿ ಮಗ್ನಚಿತ್ತಗೆ, ಅಲ್ಪವಸ್ತುವು
ಸಹಿತ ಸೌಂದರ್ಯ ಸುಖದಿಂ ಕಂಪಿಸುತೆ, ಸಕಲವೂ ದಿವ್ಯತೆಯ
ಪಡೆದು, ಪರಿವರ್ತಿತವಾಗಿ ದೇವತ್ವದಲಿ ಸುಸ್ನಾತವಾದಪೊಲು,
ಸರ್ವವೂ ಉಜ್ಜೀವಿತವಾಗಿ ಚೈತನ್ಯ ಚಿಮ್ಮುತೆ, ಹಳೆಯ ದೃಶ್ಯಗಳೆಲ್ಲ
ನವನೂತನವಾಗಿ ವಿಶ್ವಾತ್ಮನ ವಿಸ್ಮಿತದರ್ಶನವಾಗುವದು !

ಈಗ, ಬುದ್ಧಿಚಾತುರ್ಯದ ಮತ್ತು ನಾಗರಿಕತೆಯ–ಅವಶ್ಯವಾಗಿ ಕಲಿಯ ಬೇಕಾದ–ವಿಷಯಗಳನ್ನೆಲ್ಲಾ ಕಲಿತಿರುವುದರಿಂದಲೂ ಅವುಗಳಲ್ಲಿ ಒಳಗೆ ಗ್ರಹಿಸ ಬೇಕಾದ ಉಚಿತ ವಿಷಯಗಳನ್ನೆಲ್ಲಾ ಗ್ರಹಿಸಿ, ಜೀರ್ಣಿಸಿಕೊಂಡು, ಪುನಃ ಅವುಗಳಲ್ಲಿ ಪರಿತ್ಯಾಜ್ಯವಾದ ಫಲಿತಾಂಶಗಳನ್ನು ವಿಸರ್ಜಿಸಿರುವದರಿಂದಲೂ ಧಾತುವರ್ಗ–ಸಸ್ಯವರ್ಗ - ಪ್ರಾಣಿವರ್ಗಗಳಿಂದ ಕೂಡಿದ-ರವಿಚಂದ್ರ ನಕ್ಷತ್ರಗಳಿಂದ ಬೆಳಗುವ ಪ್ರಕೃತಿಯ ಮೂಲಸ್ಥಾನಕ್ಕೆ ನಮ್ಮ ಜೀವನ ಯಾತ್ರೆಯ ಮಹಾಮಾರ್ಗದಲ್ಲಿ ಮತ್ತೊಮ್ಮೆ ಹಿಂದಿರುಗೋಣ.

ಸಕಲ ಭಾಷೆಗಳ ಶಬ್ದಕೋಶಗಳಲಿ ಅರಸಿದರೂ ಆ ಅಪಾರ ಶಬ್ದ ಸಂಪತ್ತಿನಲಿ
ಕನಸು ಕಾಣದಿರುವ ಬೇರೆ ಬಗೆಯ ಹಗಲು ರಾತ್ರಿಗಳಿಗೆ
ಓ, ಸೂರ್ಯಮಾರುತರ ಮಧುರ ಚುಂಬನಗಳು !
ಓ, ಮುಕ್ತಾತ್ಮನ ಆನಂದ, ಪರಮಾನಂದ (ಕೃತಕೃತ್ಯ ಮತ್ತು ಸಂಪ್ರದಾಯ
ಬದ್ಧತೆಯಿಂದ ವಿಮೋಚನೆ.)
ಎಲ್ಲವನೂ ಸಾಹಸಧೈರ್ಯದ ಎದೆಗಾರಿಕೆಯಿಂದ ಎದುರಿಸುತೆ,
ಮೃದುವಾಗಿ ಹೆಜ್ಜೆಯಿಡುತೆ, ಅಂಗೈಯೊಳೆ ಜೀವವನ್ನು ಹಿಡಿಯುತ್ತೆ,
ಕಟ್ಟಕಡೆಗೆ ಆ ಚಪಲ ಅಲೆಮಾರಿ **ಮನೆಗೆ** ಹಿಂದಿರುಗುವನು.
ವ್ಯರ್ಥವಾಗಿ ಅವನನ್ನು ತಡೆದು ನಿಲ್ಲಿಸಲು ಯತ್ನಿಸಿದ ಎಲ್ಲ ವಿಷಯಗಳನ್ನು,
ಆವನೀಗ ಬರುವಾಗ ಎಡಬಲದಿ ಆ ವಿಷಯಗಳಲಾವುದನು ಲಕ್ಷ್ಯಮಾಡದಿಹನು.

ಅವುಗಳ ವ್ಯಾಮೋಹಕ್ಕೆ ಇನ್ನೆಂದೂ ವಶವಾಗದಾ ಜ್ಞಾನಿ ಅವುಗಳೆಲ್ಲವನು
ಅಲ್ಲಲ್ಲೆ ಬಿಡುತ್ತೈದುವನು ಭಯದೋರುತಲೆ,
ಹಾಗಾದರೀಗ ಪಳಿ, ಅವನನ್ನು ಹಿಂಬಾಲಿಸಿ ;
ಹಿಂದೆ, ಅವನ ಹಾದಿಯಲಿದ್ದ ಮುಳ್ಳುಗಳು, ಕಾಡುಗುಲಾಬಿಯ ಮುಳ್ಳು
ಪೊದೆಗಳು ಸಹಿತ ಈಗ ಹೂ–ಹಣ್ಣುಗಳಾಗಿಹವು.
ಅವನು ಅವುಗಳ ದಿವ್ಯ ಪರಿವರ್ತನೆಯ ತಿಳಿದ ಹೊರತು ಅವುಗಳಲಿರುವ
ಪ್ರೀತಿವಿಶ್ವಾಸಗಳ ಕಲಿಯನು.
ಎಂದೆಂದಿಗೂ ವಿಶ್ವಾಸದಿಂದಿರುತೆ ಅವು ಅವನ ಹೆಚ್ಚಿನ ಸೇವಕರಾಗಿಹವು !
ಆಗ ಈ ಲೋಕವೆ ಸ್ವರ್ಲೋಕವಾಗಿಹುದು !!!

*　　*　　*

೯

ರಾವ್‌ಸಾಹೇಬ್ ಬೈಜ್‌ನಾಥ್ ಇವರಿಗೆ ಬರೆದ ಪತ್ರ

ವಸಿಷ್ಠಾಶ್ರಮ
27 3—1906

ಅತ್ಯಂತ ಧನ್ಯವಾದ ದಿವ್ಯತೆಯೆ,

ಎನ್ನಲ್ಲಿಗಾ ಶಾಂತಿ ಹೊಳೆಯಂತೆ ಹರಿಯುತಿಹುದು.
ಎನ್ನಲ್ಲಿಗಾ ಮಂದ ಮಾರುತಗಳಂತೆ ಶಾಂತಿಯು ಬೀಸುತಿಹುದು
ಎನ್ನಲ್ಲಿಗಾ ಶಾಂತಿ ಗಂಗಾಪ್ರವಾಹದೊಲು ಹರಿಯುತಿಹುದು
ನನ್ನೆಲ್ಲ ರೋಮಗಳ ಕಾಲ್ವೆರಳ್ಗಳ ಮೂಲಕವೆ ಹರಿದಿಹುದು,
ಶಾಂತಿಸಾಗರದ ಉಕ್ಕೇರುವಾ ತೆರೆಗಳೆಲ್ಲವು,
ಎಲ್ಲಾ ಹೃದಯಗಳನು ಮಸ್ತಕಗಳನು ಪಾದಗಳ ಬಿಡಲಿ
ಓಂ ಪ್ರಮೋದ : ಆಂ ಆನಂದ : ಓಂ ಶಾಂತಿ !

ಈ ಆಶ್ರಮವು ಮಂಜಿನ ರೇಖೆಯನ್ನು ಮೀರಿ ಮೇಲಿದೆ. ರಾಮನ ಗುಹೆಯ ಕೆಳಗೆ ಸಮೀಪದಲ್ಲಿ ವಾಸಿಷ್ಠಗಂಗಾ ಎಂಬ ಸುಂದರ ಪ್ರವಾಹವು ಹರಿಯುತ್ತಿದೆ.

ಆ ಪ್ರವಾಹದಲ್ಲಿ ಐದಾರು ಜಲಪಾತಗಳಿವೆ. ಈ ನದಿಯ ಕಣಿವೆಯಲ್ಲಿ ಶಿವನು ತನ್ನ ಸ್ವಂತ ಕೈಯಿಂದ ಗಟ್ಟಿ ಬಂಡೆಗಳಲ್ಲಿ ಸ್ವಾಭಾವಿಕವಾದ ಬೋಗುಣಿಗಳನ್ನು ಕಟೆದು, ಸುಮಾರು ಇಪ್ಪತ್ತು ಸುಂದರವಾದ ಸಣ್ಣ ಸಣ್ಣ ನೀರಿನ ಕೊಳಗಳನ್ನು ಮಾಡಿದ್ದಾನೆ. ಪರ್ವತಗಳನ್ನು ನಿಜವಾಗಿಯೂ ಪ್ರಕಾಶಪ್ರಿಯವಾದ ಅರಣ್ಯದ ಕಠಿಣ ದೈತ್ಯರುಗಳ ಮುಸುಕಿದೆ. ಅವುಗಳ ಸುತ್ತಲೂ ಆರು ಅಡಿಗಳಿಗೂ ಹೆಚ್ಚು ದಪ್ಪವಾದ ಮಂಜು ಮುಚ್ಚಿಕೊಂಡರೂ ಆ ಮರಗಳ ಹಸುರು ಬಾಡುವದಿಲ್ಲ. ಅವು ಖಂಡಿತವಾಗಿಯೂ ಆ ಮಹಾ ವನಮಾಲಿಯ ದಯಾಪ್ರೀತಿಗಳಿಗೆ ಅರ್ಹವಾಗಿವೆ.

ಅಮುಂ ಪುರಃ ಪಶ್ಯಸಿ ದೇವದಾರುಂ ಪುತ್ರೀಕೃತೋಸೌ ವೃಷಭ ಧ್ವಜೇನ । ಮಹಾದೇವನ ಮಕ್ಕಳಾದ ಎದುರಿಗಿರುವ ಕೆಚ್ಚೆದೆಯ ಹಸುರು ತೋಳುಗಳ ಈ ದೇವದಾರು ವೃಕ್ಷಗಳೇ ರಾಮನ ಜೊತೆಗಾರರು. ಕೊನೆಯ ಪಕ್ಷ ಎರಡು ವರ್ಷಗಳಿಗೆ ಮುಂಚೆ ರಾಮನ ದರ್ಶನ ಮಾಡಕೂಡದೆಂದು ನಾರಾಯಣಸ್ವಾಮಿಯನ್ನು ಸಹ ಕೆಳಗೆ ಮೈದಾನಗಳಿಗೆ ಕಳಿಸಲಾಯಿತು. ಒಬ್ಬ ಯುವಕನು ನಿತ್ಯವೂ ಬಂದು, ಅಡಿಗೆ ಮಾಡಿಟ್ಟು, ಅತ್ಯಂತ ಸಮೀಪವೆಂದರೆ, ಮೂರು ಮೈಲಿಗಳಿಗಿಂತಲೂ ಹೆಚ್ಚು ದೂರದಲ್ಲಿರುವ ನೆರೆಯ ಒಂದು ಹಳ್ಳಿಗೆ ಹೋಗಿ ರಾತ್ರಿ ಮಲಗಿದ್ದು, ಬೆಳಿಗ್ಗೆ ಇಲ್ಲಿಗೆ ಬರುತ್ತಾನೆ.

ಈ ಬೆಟ್ಟದ ಮೇಲೆ ಅರ್ಧ ಮೈಲಿ ನಡೆದರೆ ಸಾಕು, ಕೇದಾರ, ಬದರಿ, ಸುಮೇರು, ಗಂಗೋತ್ರಿ ಮತ್ತು ಕೈಲಾಸಗಳ ಪವಿತ್ರವಾದ,—ಜಾರಿಬರುತ್ತಿರುವ— ನೀರ್ಗಲ್ಲಿನ ಮಹಾರಾಶಿಗಳು ಕಾಣುತ್ತಿರುವ ಬಾಸೂನ್ ಪರ್ವತದ ನೆತ್ತಿಗೆ ರಾಮನನ್ನು ಕರೆದೊಯ್ಯುತ್ತದೆ. ಕೇದಾರ ಖಂಡದಲ್ಲಿ ಈ ಪ್ರದೇಶವನ್ನು ವಿಸ್ತಾರವಾಗಿ ವರ್ಣಿಸಿದೆ. ಯೋಗವಾಸಿಷ್ಠದ ಲೇಖಕರಾದ ವಸಿಷ್ಠರು ಇಂಥಾ ಮನೋಹರ ಸ್ಥಾನವನ್ನು ತಮ್ಮ ಆಶ್ರಮಪದಕ್ಕಾಗಿ ಆರಿಸಿಕೊಂಡಿದ್ದರು. ಸುದೈವದಿಂದ ಯಾವ ಪಟ್ಟಣವಾಗಲಿ, ರಸ್ತೆಯಾಗಲಿ ಇನ್ನೂ ಇಲ್ಲಿ ಸಮೀಪದಲ್ಲಿ ಬಂದಿಲ್ಲ. ರಾಮನ ಆನಂದ ಪರವಶತೆಯ ವಿಷಯವಾಗಿ ಮಾತ್ರ ಪ್ರಶ್ನಿಸಬೇಡಿ ಮುಂದೆ ಕೆಲವು ವರ್ಷಗಳಲ್ಲಿ, ಕೆಳಗೆ ಮೈದಾನಕ್ಕೆ ಪ್ರಕಟಣೆಗಾಗಿ ಹೋಗುವ ರಾಮನ ಮುಖ್ಯಕೃತಿಯಿಂದ ಈಗ ರಾಮನಲ್ಲಿ ಉಕ್ಕಿ ಹರಿಯುತ್ತಿರುವ ಪರಮಾನಂದ ಭರಿತ ಶಾಂತಿಯು ಪ್ರಕಾಶ ಪಡುತ್ತದೆ. ಅದುವರೆಗೆ ಯಾರೂ ದಯವಿಟ್ಟು ರಾಮನ ದರ್ಶನಕ್ಕೆ ಬಾರದಿರಲಿ—ದೇವರೊಬ್ಬನೇ ಸತ್ಯ

ನಿಮ್ಮ ಪ್ರಿಯರಾಗ ಕು[illegible] [illegible] ಅಪ್ರತಿಮ ಶ್ರದ್ಧಾ ಸಂಪಾದಿತವಾಗಿದ್ದಿತು. ರಾವಣನು ಅದರ [illegible] ಮಹಾರಾಜರಿಗೆ ಸಮರ್ಪಿಸಿದ್ದಾನೆ. ಪ್ರಿಯ [illegible], [illegible]; ಈ ದಾಂಪತ್ಯ ಬೂಟಾಟಿಕೆಯಲ್ಲ; ದಂಭಾಚಾರದ ಮಾತಲ್ಲ; [illegible] [illegible] ಭಾವಿಸುವವನು ನಾಶಹೊಂದುತ್ತಾನೆ. [illegible] ಹೌದು, ಹೌದು, ಅಹುದು, ಅಹುದು ; ಓಂ.

ಯಶಸ್ಸು ಮತ್ತು ಅದರ ಅಭಾವದ ಆಧ್ಯಾತ್ಮಿಕ ಪರಿಣಾಮವನ್ನು ವೇದವು ಎಷ್ಟು ಸೊಗಸಾಗಿ ನಿರೂಪಿಸುತ್ತದೆ :

ಬ್ರಹ್ಮ ತಂ ಪರಾದಾದ್ಯೋಽನ್ಯತ್ರಾತ್ಮನೋ ಬ್ರಹ್ಮ ವೇದ ।

ಯಾವನಾದರೂ ತನ್ನ ಹೃದಯಾಂತರಾಳದಲ್ಲಿ ಯಾವುದನ್ನಾದರೂ ಸತ್ಯವೆಂದು ತಿಳಿದರೆ, ಆ ವಸ್ತುವು ಅನಿವಾರ್ಯವಾಗಿ ಅವನನ್ನು ಬಿಟ್ಟು ಬಿಡುತ್ತದೆ; ಅಥವಾ ಅವನಿಗೆ ದ್ರೋಹಕರವಾಗುತ್ತದೆ. ಈ ನಿಯಮವು ಗುರುತ್ವಾಕರ್ಷಣ ನಿಯಮಕ್ಕಿಂತಲೂ ಕಠೋರವಾದುದು. ಆತ್ಮನಿಂದ ಅನ್ಯವೆಂಬ ಅನುಭವವು, ಬೇರೆ ಯಾವುದನ್ನಾದರೂ ಸತ್ಯವೆಂದು ತಿಳಿಯುವುದು ಆತ್ಮನ ದ್ರೋಹವೆಂಬುದನ್ನು ಸ್ಪಷ್ಟವಾಗಿ ಮನಗಾಣಿಸುತ್ತದೆ.

ಒಬ್ಬ ಮನುಷ್ಯನಿಗೆ ಯಾವದಾದರೂ ಬಯಕೆ ಇರುವವರೆಗೂ 'ಶಿವೋಽಹಂ' ಭಾವದ ಆನಂದವನ್ನು ಅನುಭವಿಸಲಾರನು [illegible],

ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಶ್ರಿತಾ ।
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥

ಇವನ ಹೃದಯವನ್ನು ಆಶ್ರಯಿಸಿರುವ ಸಕಲ ಕಾಮಗಳೂ ಯಾವಾಗ ಬಿಡುಗಡೆ ಹೊಂದುತ್ತವೆಯೋ ಆಗ ಮರ್ತ್ಯನು ಅಮೃತ (ಸಾವಿಲ್ಲದವ) ನಾಗುತ್ತಾನೆ; ಇಲ್ಲಿಯೇ ಬ್ರಹ್ಮವನ್ನು ಅನುಭವಿಸುತ್ತಾನೆ.

## Letters to Mrs. Wellman (Suryananda)
## ಶ್ರೀಮತೀ ವೆಲ್‌ಮನ್ (ಸೂರ್ಯಾನಂದ)ರಿಗೆ ಬರೆದ ಪತ್ರಗಳು

ಈ ಮುಂದಿನ ಪತ್ರವು ಶ್ರೀಮತೀ ವೆಲ್‌ಮನ್ (ಸೂರ್ಯಾನಂದ) ಶ್ರೀ ಪೂರಣಸಿಂಗರಿಗೆ ಬರೆದುದು ; ಸ್ವಾಮಿರಾಮ ಅಮೆರಿಕಾ ಮತ್ತು ಇಂಡಿಯಾ (ಭಾರತ) ದಿಂದ ಆಕೆಗೆ ಬರೆದಿದ್ದ ಇಪ್ಪತ್ತು ಪತ್ರಗಳ ಸಾರ ಸಂಗ್ರಹವು ಇದರಲ್ಲಿದೆ.

ಓಂ।

ಶಾಂತಿ ಆಶ್ರಮ–ಎಡೆನ್‌ಡೇಲ್,
ಜನವರಿ, 1907.

Dear and most Blessed Puran, ಪ್ರಿಯ ಮತ್ತು ಅತ್ಯಂತ ಪುಣ್ಯಶಾಲಿ ಪೂರಣ್,

ಓ, ಆನಂದತುಂದಿಲತೆಯ ಕಂಪನವನ್ನೇ ನಿನ್ನ ಪತ್ರವು ನನಗೆ ತಂದಿತು। ಆ ಪತ್ರವನ್ನೂ ನನ್ನ ಆತ್ಮವನ್ನೂ ಸಹ, ನಮ್ಮ ರಾಮನ ಪವಿತ್ರ ಪ್ರಜ್ಞೆಯು ವ್ಯಾಪಿಸಿದ್ದುದು ನಿಜವಿರಬಹುದೆ, ಅಥವಾ ನನ್ನ ವಿಶ್ವಾಸಕ್ಕೆ ಹಾಗೆ ತೋರಿರಬಹುದೆ? ಅವರ ಪತ್ರಗಳಲ್ಲಿ ಒಂದು. "ತಾಯಿ, ರಾಮನು ಯಾವಾಗಲೂ ನಿನ್ನ ಜೊತೆಯಲ್ಲಿದ್ದಾನೆ" ಎಂದು ತಿಳಿಸಿರುವಂತೆ, ಖಂಡಿತವಾಗಿಯೂ ಅದು ಇನ್ನೂ ಸತ್ಯ ; ಚೈತನ್ಯಕ್ಕೆ ಪರಿಮಿತಿಯಿಲ್ಲ, ಹಾಗೆ ನಾನು ನಂಬುತ್ತೇನೆ, ಹೌದು, ರಾಮನು ಪೂರಣನೊಡನೆ ಸರ್ವದಾ ಇದ್ದಾನೆಂದು ನಾನು ನಿಶ್ಚಿತವಾಗಿ ತಿಳಿದಿದ್ದೇನೆ. ಈ ನಿನ್ನ ಪ್ರಾರ್ಥನೆಯಿಂದ ಕೂಡಿದ, ನಿನ್ನ ಪತ್ರದಲ್ಲಿರುವ ಆ ಮಹಾಪ್ರಜ್ಞೆಯು ಮುನ್‌ಸೂಚಕವಾದ ಈ ದಿವಸವು ಎಷ್ಟು ಪವಿತ್ರವೂ ಪ್ರಶಾಂತವೂ ಆಗಿದೆ! ಸ್ವಾಮಿ ರಾಮ ನನಗೆ ಬರೆದಿದ್ದ ಪತ್ರಗಳಿಂದ ಎತ್ತಿ ತೆಗೆದ (ಉದ್ಧೃತ) ಕೆಲವು ಭಾಗಗಳನ್ನೂ, ಅವರ ನುಡಿಗಳ ಮತ್ತು ನಡೆಗಳ ಕೆಲವು ನೆನಪುಗಳನ್ನೂ ಸಹ ನಿನಗೆ ಕಳಿಸುತ್ತೇನೆ. ನಮ್ಮ ದೇವರನ್ನು, ನಮ್ಮ ದಿವ್ಯಾತ್ಮನನ್ನು ನಾವು ಸೇರುವುದಕ್ಕಾಗಿ, ನಮ್ಮ ಹೃದಯಗಳನ್ನೂ ಮನಸ್ಸುಗಳನ್ನೂ ಮೇಲೆತ್ತಿ ಒಯ್ದು -ಮಗುವಿನ ವಿನೀತ-ಸಾಧು-ಸ್ವಭಾವದ ಮಹತ್ತಾದ ಆತ್ಮಪ್ರಕಾಶವುಳ್ಳ ಈ ದಿವ್ಯಾತ್ಮ ರಾಮನು, ನಮ್ಮಲ್ಲಿ ಅತ್ಯಂತ ಕನಿಷ್ಠ ವ್ಯಕ್ತಿಯಲ್ಲಿ ಸಹ ಸರ್ವದಾ ವೈಯಕ್ತಿಕವಲ್ಲದ–ಅಮೂರ್ತವಾದ ಕೃಪಾದೃಷ್ಟಿಯನ್ನಿಟ್ಟು ನಮ್ಮನ್ನು

ಪ್ರೀತಿಯಿಂದ ಕೈಹಿಡಿದು ಮುನ್ನಡೆಸಿದನು. ಆಧುನಿಕ ಋಷಿಯಾದ ರಾಮನ ಮೂಲಕ ಅಭಿವ್ಯಕ್ತವಾದ ಆ ಮಹಾ ಪರಮಾತ್ಮಪ್ರಜ್ಞೆಯ ಮಾಧುರ್ಯವನ್ನೂ ಮಾರ್ದವತೆಯನ್ನೂ ಸೌಮ್ಯತೆಯನ್ನೂ ಕೋಮಲತೆಯನ್ನೂ ದಯಾಪರತೆಯನ್ನೂ ಎಷ್ಟೆಂದು ವರ್ಣಿಸಬೇಕು। ಹೆಚ್ಚು ಹೇಳುವದೇನು ? ದೇವರೇ ನಮ್ಮ ಜೊತೆಗಿದ್ದನು ; ನಮ್ಮಲ್ಲಿ ಕೆಲವರು ಅದನ್ನು ತಿಳಿದಿರಲಿಲ್ಲ. ಈಗಲೂ ದೇವರು ನಮ್ಮೊಡನೆ ಇದ್ದಾನೆ ; ಪೂಜ್ಯರಾಮ ಆಗಾಗ ಹೇಳುತ್ತಿದ್ದಂತೆ 'ಮರಣವೆಂಬದೇ ಇಲ್ಲ" ಕಾಣಬಲ್ಲ ಕಣ್ಣೂ ಕೇಳಬಲ್ಲ ಕಿವಿಯೂ ಉಳ್ಳವರಿಗೆ ಅವನೇನೂ ದೂರವಿಲ್ಲ. ಈ ಮಹಾತ್ಮನನ್ನು ನಾನು 1903ರ ಪ್ರಾರಂಭದಲ್ಲಿ ಮೊಟ್ಟಮೊದಲ ಸಲ ದರ್ಶನ ಮಾಡಿದೆ. ಸ್ಯಾನ್ ಫ್ರ್ಯಾನ್‌ಸಿಸ್ಕೋದಲ್ಲಿ ಅವರು ಉಪನ್ಯಾಸಮಾಡುತ್ತಿದ್ದರು. ಅವರ ಭಾಷಣವನ್ನು ನಾನು ಒಲವಿಲ್ಲದ ಮನಸ್ಸಿನಿಂದಲೇ ಕೇಳುವದಕ್ಕೆ ಹೋದೆ. ಆದರೆ, ಅವರ ಓಂಕಾರದ ಉಚ್ಚಾರಣೆಯನ್ನು ಕೇಳಿದ ಕೂಡಲೇ ನನ್ನ ಮನಸ್ಸು ಮೇಲಕ್ಕೆ ಎತ್ತಲ್ಪಟ್ಟಿತು. ಅದುವರೆಗೆ ಮೊದಲೆಂದೂ ಅನುಭವಿಸದಿದ್ದ—ಅಪೂರ್ವವಾದ—ಒಂದು ಬಗೆಯ ಆನಂದದಿಂದ ನನ್ನ ಇಡೀ ಜೀವವೇ ಪರಿಸ್ಪಂದಿತವಾದಂತಾಯಿತು. ಸ್ವರ್ಗೀಯವಾದೊಂದು ಆನಂದಭರಿತ ಶಾಂತಿಯು ನನ್ನ ಹೃದಯವನ್ನು ಬೆಳಗಿತು !

ಅವರು ಅಷ್ಟು ಉದಾರವಾಗಿ ಉಚಿತವಾಗಿತ್ತ ಆ ಜೀವಾಮೃತವನ್ನು ಸವಿಯಲು ಮುಂದೆಂದೂ ನಾನು ಮತ್ತೊಂದು ಸುವರ್ಣಸಂದರ್ಭವನ್ನು ಕಳೆದುಕೊಳ್ಳಲಿಲ್ಲ. ಇಂಡಿಯಾ (ಭಾರತಕ್ಕೆ ಹೋಗಿ, ಅಲ್ಲಿ, ಭಾರತೀಯರ ಕುಟುಂಬಗಳಲ್ಲಿಯೋ ಒಬ್ಬ ಆತ್ಮೀಯ ಬಂಧುವಾಗಿ ಜೀವಿಸಿ, ತಮ್ಮ ಜನತೆಗೆ ಸಹಾಯ ಮಾಡಬೇಕೆಂದು, ಅಮೇರಿಕಾ ಜನರಲ್ಲಿ ರಾಮ ಮನವೆ ಮಾಡಿಕೊಂಡರು. ಅವರ ಇಚ್ಛೆಯಂತೆ, ಆದೇಶದಂತೆ, ತಾವು ಭಾರತಕ್ಕೆ ಹೋಗುವದಾಗಿ ಅನೇಕರು ಉತ್ಸಾಹದಿಂದ ಹೇಳಿಕೊಂಡರು. ಆದರೆ ಅವರಲ್ಲಿ ಒಬ್ಬರೂ ನುಡಿದಂತೆ ನಡೆಯಲಿಲ್ಲ. ನಾನು ಒಂದು ದಿನ ಸ್ವಾಮಿಗಳನು, ಕುರಿತು " ಸ್ವಾಮಿ ರಾಮ, ತಾವು ನನಗೆ ತೋರಿಸಿದ ಪ್ರೇಮಾನುಗ್ರಹಕ್ಕೆ ಪ್ರತಿಯಾಗಿ ನಿಮ್ಮ ಜನರಿಗೆ ನಾನೇನು ಮಾಡಬಲ್ಲೆ ?" ಎಂದು ಕೇಳಿದೆ. ಅವರು 'ನೀನು ಮನಸ್ಸು ಮಾಡಿದರೆ, ಮಹತ್ತಾಗಿ ಮಾಡಬಲ್ಲೆ. ಆದರೆ, ಮೊದಲು ಇಂಡಿಯಾಕ್ಕೆ ಹೋಗು." ಎಂದರು. "ಆಗಲಿ, ನಾನು ಹೋಗುತ್ತೇನೆ." ಎಂದು ಹೇಳಿದೆ. ಆದರೆ ಸ್ನೇಹಿತರು ಬೇಡವೆಂದು ಬೋಧಿಸಿದರು ; ನನ್ನನ್ನು ಅಪಹಾಸ್ಯವನ್ನು ಕೂಡ ಮಾಡಿದರು. ಮುಖ್ಯವಾಗಿ, ಒಂದಿರುಗಿ ಬರುವದಕ್ಕೆ ನನ್ನಲ್ಲಿ ಸಾಕಷ್ಟು ಹಣವಿಲ್ಲದಿರುವದರಿಂದ ಇಂಡಿಯಾಕ್ಕೆ ಹೋಗುವ ಯೋಚನೆ

ಮಾಡುವದು ಸಹ ನನ್ನ ಹುಚ್ಚುತನವೆಂದು ಕೆಲವರು ವಾದಿಸಿದರು ಆದರೆ ರಾಮು ಹೇಳಿದ್ದೇನೆಂದರೆ, " ಅಮೇರಿಕಾದಲ್ಲಿರುವ ದೇವರೇ ಇಂಡಿಯಾದಲ್ಲಿಯೂ ಇದ್ದಾನೆಂದು ನೀನು ಕಂಡುಕೊಳ್ಳುವದರಿಂದ, ನೀನು ನಿಜವಾಗಿ ವೇದಾಂತವನ್ನು ತಿಳಿದಿದ್ದರೆ, ಎಂದೂ ಹೆದರುತ್ತಿರಲಿಲ್ಲ." ಅದೇ ಪ್ರಕಾರವಾಗಿ, ನನ್ನ ಪ್ರೀತ್ಯಭಿಮಾನದ ಹಿಂದೂ ಸಹೋದರ-ಸಹೋದರಿಯರ ಅಲ್ಲ, ಆ ನನ್ನ ಮಮತೆಯ ಮಕ್ಕಳ—ಕೋಮಲವಾದ— ಪ್ರೇಮಾದರದ ಪಾಲನೆಯ ಮೂಲಕವಾಗಿ ಜೀವನದ ದಿವ್ಯಚೇತನತತ್ತ್ವವಾದ ದೇವರು ತನ್ನ ಸರ್ವರಕ್ಷಕ ಶಕ್ತಿಯನ್ನು ನನ್ನ ಅನುಭವದಲ್ಲಿ ತೋರಿಸಿಕೊಟ್ಟನು ಆದರೂ ನಮ್ಮ ಪೂಜ್ಯ ಪವಿತ್ರ ರಾಮುವಿಗೆ ವಾಗ್ದಾನ ಮಾಡಿದಂತೆ ನಾನು ನಡೆದು, ಅವನ ಮಾತೃಭೂಮಿಗೆ ಸಮುದ್ರಯಾನ ಮಾಡುವದಕ್ಕಾಗಿ ಹೊರಡಲು ಐದು ತಿಂಗಳು ಕಳೆಯಬೇಕಾಯಿತು. ಒಬ್ಬಳೇ ಏಕಾಕಿಯಾಗಿ! ಹನ್ನೆರಡು ಸಾವಿರ ಮೈಲಿಗಳ ಆ ದೂರ ದೇಶದಲ್ಲಿ ಯಾರೊಬ್ಬರ ಪರಿಚಯವೂ ಇಲ್ಲದೆ, ಆದರೆ, ರಾಮು ಕಲಿಸಿದಂತೆ, ಸರ್ವಶಕ್ತನ ಸಕಲ ಪೋಷಕವಾದ ವರದ ಹಸ್ತವನ್ನು ವಿಶ್ವಾಸದಿಂದ ಅವಲಂಬಿಸಿ, ಇಂಡಿಯಾ ದೇಶಕ್ಕೆ ಪ್ರಯಾಣ ಮಾಡಿದೆ ಹೊರಡುವದಕ್ಕೆ ಮುಂಚೆ, ಕೊನೆಯಲ್ಲಿ ಸ್ವಾಮಿಗಳನ್ನು ಕ್ಯಾಲಿಫೋರ್ನಿಯಾದ ಶಸ್ತಾ ಚಿಲುಮೆಗಳಲ್ಲಿ ದರ್ಶನ ಮಾಡಿದೆ. ಸ್ಯಾನ್‌ಫ್ರಾನ್ಸಿಸ್ಕೋ ನಗರಕ್ಕೆ ನನ್ನ ಟ್ರೈನ್ ಹೊರಡುವದಕ್ಕೆ ಕೆಲವು ಗಂಟೆಗಳು ಮಾತ್ರ ಉಳಿದಿತ್ತು. ನಮ್ಮ ತಲೆಗಳ ಮೇಲೆ ಎತ್ತರವಾಗಿ ಶಿಖರಪ್ರಾಯವಾಗಿ ಎದ್ದ, ಹಿಮಾಚ್ಛಾದಿತ ಶಸ್ತಾ ಪರ್ವತಗಳಲ್ಲಿ ಕಳೆದ ಆ ಪವಿತ್ರ ದಿವಸವನ್ನು ನಾನೆಂದೂ ಮರೆಯಲಾರೆ. ಅದೇ ರೀತಿಯಲ್ಲಿ, ಎರಡೂವರೆ ವರ್ಷಗಳ ಅನಂತರ, ಅಮೇರಿಕಾಕ್ಕೆ ಹಿಂದಿರುಗುವದಕ್ಕೆ ಮೊದಲು, ಹಿಮಾಲಯದ ವ್ಯಾಸಾಶ್ರಮದಲ್ಲಿದ್ದ ಈ ಮಹಾತ್ಮಾ ರಾಮರಿಗೆ ಬೀಳ್ಕೊಳ್ಳುವ ಅಭಿವಂದನೆ ಸಲ್ಲಿಸುವದಕ್ಕೋಸ್ಕರ ನಾನು ಹಿಮಾಲಯ ಪರ್ವತಗಳಲ್ಲಿ ಬಹಳ ದಿನಗಳು ಪ್ರವಾಸ ಮಾಡಿದೆ. ' ದೇವರು ನಿನ್ನನ್ನು ರಕ್ಷಿಸಲಿ ' ಎನ್ನುವ ಸ್ವಾಮಿಗಳ ಕೊನೆಯ ಬೀಳ್ಕೊಡಿಗೆಯ ಸ್ವಸ್ತಿವಾಚನವು— ಆಶೀರ್ವಚನವು—ಹೃದಯವನ್ನು ಎಷ್ಟು ಕಲಕುವಂತಿತ್ತು, ಎನ್ನುವದನ್ನು ಉಲ್ಲೇಖಿಸುವದಾಗಲಿ, ವಿವರಿಸುವದಾಗಲಿ ಸಾಧ್ಯವಿಲ್ಲ ಆ ಕೊನೆಯ ಬೀಳ್ಕೊಡಿಗೆ, ಹೌದು, ಅಯ್ಯೋ! ಅದೇ ಕೊನೆಯಾಯಿತು. ಕೆಲವು ತಿಂಗಳುಗಳ ಮೇಲೆ ಈ ಮಹಾತ್ಮಾ ದೇಹವನ್ನು ಬಿಟ್ಟು ಬ್ರಹ್ಮನಿರ್ವಾಣವನ್ನು ಪಡೆದರು

ಇಂಡಿಯಾ ದೇಶಕ್ಕೆ ನಾನು ಹಡಗುಹತ್ತುವದಕ್ಕೆ ಮೊದಲು, ಕ್ಯಾಲಿಫೋರ್ನಿಯಾದ ಶಸ್ತಾ ಪರ್ವತಗಳ ಚಿಲುಮೆಯಲ್ಲಿ ಕೆಲವು ಕಾಲ ವಾಸವಾಗಿದ್ದ ದಿವ್ಯಾತ್ಮಾ ರಾಮರಿಂದ ನನಗೆ ಅನೇಕ ಪತ್ರಗಳು ಬಂದವು.

ಓಂ !

ಕ್ಯಾಸ್‌ಲ್‌ಸ್ಪ್ರಿಂಗ್ಸ್, ಕ್ಯಾಲಿಫೋರ್ನಿಯ
ಜೂನ್ 11, 1903.

My dearest Beloved Self, ನನ್ನ ಅತ್ಯಂತ ಪ್ರೀತಿಪಾತ್ರ ಆತ್ಮ,

ಬರೆಯುವದಕ್ಕಾಗಲಿ, ಹೇಳುವದಕ್ಕಾಗಲಿ ಏನಾದರೂ ಅಗತ್ಯವಿದೆಯೆ? ರಾಮ ಎಲ್ಲವನ್ನೂ ಬಲ್ಲನು, ಅಂದರೆ, ನೀನು ಎಲ್ಲಾ ಬಲ್ಲೆ. ಹಾಗಿದ್ದರೂ, ರಾಮನಿಗೆ ಮಹಾ ಸಂತೋಷವನ್ನುಂಟುಮಾಡಿದ, ಇತ್ತೀಚೆಗೆ ನಡೆದ ಕೆಲವು ಘಟನೆಗಳನ್ನು ರಾಮನು ನಿನಗೆ ಹೇಳುತ್ತಾನೆ. ಎಲ್ಲವೂ ರಾಮನಿಗೆ ಸಂತೋಷವನ್ನೇ ತರುತ್ತವೆ.

ಮೇ 19ನೇ ತಾರೀಖು, ರಾಮನು ನದಿಯ ಬದಿಯಲ್ಲಿ ಒಂದು ಉದ್ದವಾದ ಬಂಡೆಗಲ್ಲಿನ ಮೇಲೆ ಮೈಚಾಚಿಕೊಂಡು ಮಲಗಿದ್ದಾಗ, ಸೀಟ್ಲ್‌ನಿಂದ ಅಪರೀಕ್ಷಿತವಾಗಿ ಒಬ್ಬ ಮಿತ್ರನಿಂದ ಕಳಿಸಲ್ಪಟ್ಟ ಬಹಳ ಸೊಗಸಾದೊಂದು ರೇಷ್ಮೆಬಟ್ಟೆಯ ಜೋಲಿಯನ್ನು ಡಾಕ್ಟರ್ ಹಿಲ್ಲರ್ ಸ್ಥಳದ ಮ್ಯಾನೇಜರ್ ರಾಮನಿಗೆ ತಂದುಕೊಟ್ಟನು. ಒಡನೆಯೇ ಅದನ್ನು ಹಸುರು ಓಕ್ ಮರಕ್ಕೂ ಮತ್ತು ಒಂದು ಕೆಂಪು ಅತ್ತಿಮರಕ್ಕೂ ನಡುವೆ ಎತ್ತರದ ಅಂತರಿಕ್ಷದಲ್ಲಿ ತೂಗುಕಟ್ಟಿ ಕೊಟ್ಟರು. ಬುದ್ಬುದವಾಗೇಳುತ್ತಿರುವ ಸಂತೋಷದಿಂದಲೂ ಉಕ್ಕುಕ್ಕಿ ಬರುವ ನಗುವಿನಿಂದಲೂ ರಾಮನು ಆ ತೂಗು ಹಾಸಿಗೆಯಲ್ಲಿ ಉರುಳಿಕೊಂಡನು ಸುವಾಸನೆಯ ಮೃದು ಮಂದ ಗಾಳಿಗಳು ರಾಮನನ್ನು ಆ ಜೋಕಾಲಿಯಲ್ಲಿ ಹಿಂದಕ್ಕೂ ಮುಂದಕ್ಕೂ ತೂಗಾಡಿಸತೊಡಗಿದವು; ಕೆಳಗೆ ಹೊಳೆಯು ತನ್ನ ಮಂಜುಳವಾದ ಓಂಕಾರ ಗಾನದಿಂದ ಹರಿಯುತ್ತಿತ್ತು. ರಾಮನು ಸ್ವೇಚ್ಛೆಯಾಗಿ ನಕ್ಕು ನಕ್ಕು ನಕ್ಕು ಸುತ್ತಲಡವಿಯೆಲ್ಲಾ ಅವನ ಸಂತೋಷದ ಚೆಲ್ಲಾಟದಿಂದ ದುಮುದುಮಿಸುವಂತಾಯಿತು. ರೋಮಾಂಚಕಾರಿಯಾದ ಅವನಾ ಬಿಚ್ಚುನಗುವನ್ನು, ಹುಚ್ಚು ನಗುವನ್ನು ನೀನೂ ಕೇಳಿದೆಯ? ರಾಮನು ಹಿಂದಕ್ಕೂ ಮುಂದಕ್ಕೂ ಓಲಾಡುತ್ತಿರುವಾಗ, ತಲೆಯ ಮೇಲೆ ಚಿಲಿಪಿಲಿಗುಟ್ಟುತ್ತಾ ಕುಳಿತಿದ್ದ ಒಂದು ರಾಬಿನ್ ಹಕ್ಕಿಯು ಕಾದು ನೋಡುತ್ತಿದ್ದಿತು. ಪ್ರಾಯಶಃ ರಾಮನ ನಿರ್ಭಯ, ನಿರ್ಲಕ್ಷ್ಯವಾದ ಸ್ವಚ್ಛಂದತೆಯನ್ನು ಕಂಡು ಆ ಪುಟ್ಟ ಹಕ್ಕಿಗೆ ಅಸೂಯೆಂ ಆಗಿರಬೇಕು. ಅದು ನಿಜವೆ? ಅಲ್ಲ, ಹಾಗಿರಲಾರದು; ರಾಮನು ತನ್ನವನೇ

ಎಂದು ಪ್ರತಿಯೊಂದು ರಾಬಿನ್ನಿಗೂ ಗುಬ್ಬಚ್ಚಿಗೂ (ರಾತ್ರಿಯೂ ಹಗಲೂ ಉಚ್ಚ ಸ್ವರದಿಂದ ಇಂಪಾಗಿ ಹಾಡುವ) ಬುಲ್ ಬುಲ್ (ನೈಟಿನ್‌ಗೇಲ್) ಹಕ್ಕಿಗೂ ಗೊತ್ತು. ಹೇಗಾದರೂ ಆಗಲಿ, ರಾಮನು ಒಳಗೆ ಅಡಗಿಸಲಾಗದ ಹರ್ಷವನ್ನು ಕುಣಿದಾಡುತ್ತಾ ನೆಗೆದಾಡುತ್ತಾ ಹೊರಗೆಡಹುವುದಕ್ಕಾಗಿ ಸ್ವಲ್ಪ ಹೊತ್ತು ಜೋಕಾಲಿಯನ್ನು ಬಿಟ್ಟಾಗ, ಆ ಮಧುರವಾದ ಸಮಯವನ್ನು ಕದ್ದು, ಕಾದಿದ್ದ ಆ ಮುದ್ದು ರಾಬಿನ್ನು ಆ ಜೋಲಿಯಲ್ಲಿ ಕುಳಿತು ಒಮ್ಮೆ ಜಿಯ್ಯೆಂದು ಜೀಕಿತು. ಈಗಲಾದರೂ ಹೇಳು, ರಾಮನ ಪುಟ್ಟ ಹಕ್ಕಿಗಳೂ ಹೂವುಗಳೂ ಉಲ್ಲಾಸದಿಂದ ನಲಿದಾಡುತ್ತಾ ಸಂತೋಷ ಸಂಭ್ರಮದಲ್ಲಿ ಯಾವ ಅಂಕೆಯೂ ಶಂಕೆಯೂ ಇಲ್ಲದೆ ಬಿಡುಬೀಸಾಗಿಲ್ಲವೆ ?

ಮೇ 30, ಮಧ್ಯಾಹ್ನ. ಅಮೆರಿಕಾ ಸಂಯುಕ್ತ ಸಂಸ್ಥಾನದ ಅಧ್ಯಕ್ಷರು ತಮ್ಮ ಉತ್ತರ ಪ್ರವಾಸದ ಮಾರ್ಗದಲ್ಲಿ ಈ ಚಿಲುಮೆಗಳ (Springs) ಹತ್ತಿರ ಸ್ವಲ್ಪ ಹೊತ್ತು ನಿಂತರು. ಆಗ ಸ್ಪ್ರಿಂಗ್ಸ್ ಕಂಪೆನಿಯ ಮಹಿಳಾ ಪ್ರತಿನಿಧಿಯು ಸೊಗಸಾದ ಹೂವುಗಳು ತುಂಬಿರುವ ಒಂದು ಬುಟ್ಟಿಯನ್ನು ಅವರಿಗೆ ಒಪ್ಪಿಸಿದರು ; ಆ ಬಳಿಕ ಒಡನೆಯೇ, ಅಧ್ಯಕ್ಷರು ರಾಮನಿಂದ ಇಂಡಿಯಾ (ಭಾರತ)ದ ಪರವಾದ ಬೇಡಿಕೆಯನ್ನು (An appeal on behalf of India) ಅತ್ಯಂತ ಪ್ರಸನ್ನತೆಯಿಂದಲೂ ಪ್ರೀತಿಯಿಂದಲೂ ಸಾನುಕಂಪತೆಯಿಂದಲೂ ಸಂತೋಷದಿಂದಲೂ ಸ್ವೀಕರಿಸಿದರು. ಅವರು ಆ ಸಣ್ಣ ಪುಸ್ತಕವನ್ನು ಅಲ್ಲಿದ್ದ ಸಮಯವೆಲ್ಲಾ ತಮ್ಮ ಬಲಗೈಯಲ್ಲಿಯೇ ಇಟ್ಟುಕೊಂಡಿದ್ದರು ; ಮತ್ತು ಅಲ್ಲಿದ್ದ ಸಹಸ್ರಾರು ಜನರ ನಮಸ್ಕಾರಗಳಿಗೆ ಅವರು ತಮ್ಮ ಬಲಗೈಯಿಂದ ಪ್ರತಿನಮಸ್ಕಾರ ಮಾಡುತ್ತಿರುವಾಗ, ಕೊನೆಯ ಪಕ್ಷ ನೂರಾರು ಸಲವಾದರೂ ಆ ಪುಸ್ತಕವು ಸ್ವಾಭಾವಿಕವಾಗಿಯೂ ತಾನೇ ತಾನಾಗಿಯೂ ಅವರ ಹಣೆಗೆ ಏರುತ್ತಿದ್ದಿತು. ಅವರ ರೈಲು ಬಂಡಿಯು ಹೊರಟಾಗ ಅವರು ತಮ್ಮ ಗಾಡಿಯಲ್ಲಿ ಅದನ್ನು ಲಕ್ಷ್ಯಪೂರ್ವಕವಾಗಿ ಆದರದಿಂದ ಓದುತ್ತಿದ್ದಂತೆ ಕಂಡಿತು ; ಅವರು ಕೊನೆಗೆ ಮತ್ತೊಂದು ಬಾರಿ, ಆ ಚಲಿಸುತ್ತಿರುವ ರೈಲಿನಿಂದ ರಾಮನಿಗೆ ಕೈಬೀಸಿ ತಮ್ಮ ಕೃತಜ್ಞತಾಪೂರ್ಣ ವಂದನೆಯನ್ನು ಸೂಚಿಸಿದರು.

ಆದರೆ, ಅಗೋ ! ರಾಮನು ತನ್ನ ಕಾವ್ಯಮಯವಾದ ಜೋಕಾಲಿಯಲ್ಲಿ ಒಂದು ಜೋಲಿಯನ್ನಾದರೂ ಜೀಕಾಡುವ ಸುಖ ಭೋಗಕ್ಕೆ ಅಧ್ಯಕ್ಷರನ್ನು ಎಂದೂ ಆಹ್ವಾನಿಸಲಿಲ್ಲ. ಅದೇಕೆ ? ನೀನು ಊಹಿಸಬಲ್ಲೆಯ ? ದಯವಿಟ್ಟು ಊಹಿಸು ನೋಡೋಣ. ಒಳ್ಳೆಯದು, ನೀನು ಮಾತನಾಡದಿರುವದರಿಂದ ರಾಮನು ನಿನಗೆ

ಹೇಳುತ್ತಾನೆ. ಕಾರಣವು ಸಾಕಷ್ಟು ಸ್ಪಷ್ಟವಾಗಿಯೇ ಇದೆ. ಸ್ವತಂತ್ರರೆನಿಸಿಕೊಂಡ ಅಮೆರಿಕನ್ ಜನರ ಅಧ್ಯಕ್ಷರು, ರಾಮನ ಮುದ್ದು ಹಕ್ಕಿಗಳ ಮತ್ತು ಸುಳಿಗಾಳಿಯ ಸ್ವಾತಂತ್ರ್ಯದ ಸಹಸ್ರದಲ್ಲಿ ಒಂದಂಶವೂ ಸ್ವತಂತ್ರರಾಗಿಲ್ಲ.

ಅಧ್ಯಕ್ಷರ ವಿಷಯ ಏನಾದರೂ ಇರಲಿ; ರಾಮನಷ್ಟೇ ನೀನೂ ಸ್ವತಂತ್ರನಾಗಿರ ಬಹುದು. ಗಾಳಿ ಬೆಳಕುಗಳೇ ನಿನ್ನ ನಿಷ್ಠಾವಂತ ಸೇವಕರು. ನೀನು ರಾಮನಾಗಿರು। ರಾಮನು ನಿನಗೆ ಎಲ್ಲವನ್ನೂ—ಸೂರ್ಯ, ಚಂದ್ರ, ನಕ್ಷತ್ರಗಳು, ಗಾಳಿ, ಸಮುದ್ರಗಳು, ಮೋಡಗಳು, ಕಾಡುಗಳು, ಬೆಟ್ಟಗಳು, ಯಾವದಲ್ಲ, ಎಲ್ಲವನ್ನೂ ಕೊಡುತ್ತಾನೆ. ಎಲ್ಲವೂ ನಿನ್ನವೇ. ಇದು ಸೊಗಸಾದ ಲಾಭದ ವ್ಯವಹಾರವಲ್ಲವೆ ? ಪ್ರಿಯತಮೆ, ಅದು ನಿಜವೆ ? ಹಾಗಾದರೆ, ದಯವಿಟ್ಟು ಎಲ್ಲವನ್ನೂ ಪಡೆದುಕೋ.

ಮುಂಜಾನೆ ನಾಲ್ಕು ಗಂಟೆಗೆ, ನಿತ್ಯವೂ, ಅರುಣೋದಯದ ಮಧುರ ಪ್ರಭೆಯ ಮಿದು ಮುತ್ತುಗಳಿಂದ ಎಚ್ಚರಗೊಂಡು, ಸ್ವಚ್ಛಂದವಾದ ಮಂದಾನಿಲಗಳ ಕಚಕುಳಿ ಯಿಂದ ನಗುನಗುತ್ತಾ ಮೇಲೆದ್ದು, ಇಂಪಾಗಿ ಚಿಲಿಪಿಲಿಗುಟ್ಟುವ ಪುಟ್ಟಹಕ್ಕಿಗಳ ಮಧುರಗಾನದಿಂದ ಸ್ವಾಗತಪಡೆದು, ರಾಮನು ಪರ್ವತ ಶಿಖರಗಳ ಮೇಲೂ ನದಿಯ ತೀರದಲ್ಲಿಯೂ ನಡೆದಾಡುವ ವಿಹಾರಕ್ಕಾಗಿ ಹೊರಗೆ ಹೋಗುತ್ತಾನೆ.

ಬಾ, ಬಾ, ನಾವು ಜೊತೆಗೂಡಿ ನಗೋಣ, ಬಿಡುಬೀಸಾಗಿ ನಗೋಣ, ನಿಶ್ಚಿಂತೆಯಿಂದ ನಗೋಣ, ನಿರ್ಭಯವಾಗಿ ನಗೋಣ, ಸಂತೋಷದ ಅಮಲೇರಿ ನಗೋಣ, ನಕ್ಕು ನಕ್ಕು ಸಾಯೋಣ, ಸತ್ತು ಸತ್ತು ಬದುಕೋಣ, ನಗುವದಕ್ಕಾಗಿಯೇ ಬದುಕೋಣ, ಸಾವು-ಬದುಕುಗಳು ಸುಳ್ಳೆಂದು ನಗೋಣ, ಕುಡಿಕಟ್ಟಿನ, ಎಡೆಬಿಡದ ಸಂತಸೋಲ್ಲಾಸದ ನಗುವೊಂದೇ ನಿಜವೆಂದು ನಗೋಣ, ನಮ್ಮ ನಗುವಿನ ಸಾಂಕ್ರಾಮಿಕವು ಲೋಕವನ್ನೆಲ್ಲಾ ನಗಿಸಲೆಂದು ನಗೋಣ, ಬಾ. ಸೂರ್ಯಾನಂದ, ಬಾ ಬಾ ನನ್ನ ಮಗು, ಸೂರ್ಯನೇ ಬಾ, ಓಡಿಬಾ, ರಾಮನ ನಿರ್ಭಯವಾದ ನಗು ಮಿನುಗು ತ್ತಿರುವ ಹೊಳಪುಗಣ್ಣುಗಳಲ್ಲಿ ಇಣಿಕಿ ನೋಡು, ಬಾರಾ, ಪ್ರಕೃತಿಗೂ ರಾಮನಿಗೂ ಸಮೀಪವಾಗಿರು ಸೂರ್ಯಾನಂದ। ಕಂದ। ಪರಮಾನಂದ ಪರವಶತೆಯೇ ನಾನು ;

ನಿನ್ನ,
**ರಾಮ.**

— 0 —

೨

ಓಂ ।

ಶಸ್ತಾಸ್ಪ್ರಿಂಗ್ಸ್, ಕ್ಯಾಲಿಫೋರ್ನಿಯ
ಜೂಲೈ 9, 1903.

ಪ್ರಿಯ ಪವಿತ್ರಾತ್ಮ,

ನಿನ್ನ ಪತ್ರ ಕೈಸೇರಿತು. ಸತ್ಯವೇ, ಸತ್ಯವೊಂದೇ, ನಮ್ಮ ನಿಜವಾದ ಮಿತ್ರ, ಬಂಧು - ಅಲ್ಲ-ಆತ್ಮ.

ಸತ್ಯವನ್ನು ಪಾಲಿಸು ; ಧರ್ಮಮಾರ್ಗದಲ್ಲಿ ನಡಿ. ಹಾಗಾದರೆ ನಿನ್ನ ದೇಹದ ಒಂದು ಕೂದಲೂ ಕೊಂಕುವದಿಲ್ಲ, ನೋಯುವದಿಲ್ಲ.

ಯೋಗವಾಸಿಷ್ಠ ಗ್ರಂಥವನ್ನೂ ಭಗವದ್ಗೀತೆಯನ್ನೂ ಮೇಲಿಂದ ಮೇಲೆ ಪಠನಮಾಡು.

ನಿನ್ನ ಆತ್ಮ,
Rama, So-Am-I, (Swami)
ರಾಮ ಸೋಽಸ್ಮಿ (ಸ್ವಾಮಿ)

---

೩

ಓಂ ।

ಶಸ್ತಾಸ್ಪ್ರಿಂಗ್ಸ್, ಕ್ಯಾಲಿಫೋರ್ನಿಯ
ಅಕ್ಟೋಬರ್ 8, 1903

ಅತ್ಯಂತ ಪವಿತ್ರ ಬಪ್ಪ ಮಾತೆ,

ನಿನ್ನ ಪ್ರತಿಯೊಂದು ಚಲನವಲನವನ್ನೂ ರಾಮನು ಪೂರ್ಣವಾಗಿ ಮೆಚ್ಚು ತ್ತಾನೆ ; ನಿನ್ನನ್ನು ತಪ್ಪಾಗಿ ತಿಳಿಯುವಷ್ಟು ಅವನು ಸ್ವಾರ್ಥಿಯಲ್ಲ. ಮತ್ತು ಇಂಡಿಯಾದೇಶಕ್ಕಾಗಿಯೂ ಸತ್ಯಕ್ಕಾಗಿಯೂ ದುಃಖಾರ್ತ ಮಾನವ ಜನತೆಗಾಗಿಯೂ

ತನ್ನ ಪ್ರೇಮದಲ್ಲಿ ರಾಮನಾದ ನಿನ್ನನ್ನು ಮರೆಯುವ ಸಂಭವವು ಎಂದಿಗೂ ಬರುವುದಿಲ್ಲ. ನೀನು ಸೂರ್ಯಾನಂದ; ರಾಮನೇ ನಿನಗಿಟ್ಟ ಹೆಸರು ಇದು. 'ಕೇಡನ್ನು ತಡೆಗಟ್ಟಬೇಡ' ಎಂದರೆ, ನಿಶ್ಚೇಷ್ಟ ಜಡ. ಅನಾಮಧೇಯನಾಗು ಎಂದೇನೂ ಅರ್ಥವಲ್ಲ; ಅಲ್ಲ, ಅಲ್ಲವೇ ಅಲ್ಲ. ಆ ಮಾತು ದೈಹಿಕ ಕ್ರಿಯೆಗೆ ಸಂಬಂಧ ಪಡುವದಿಲ್ಲ. ಅದು ಮನಸ್ಸನ್ನು ಮಾತ್ರವೇ ಮುಟ್ಟುವ ಆದೇಶ. ಅದು ಮನಸ್ಸಿನ ಸಮತೆಯನ್ನೂ ಸಮಾಧಾನವನ್ನೂ ಬೆಳೆಸುವ ಉಪದೇಶ. ಮನಸ್ಸಿನ ನಿರೋಧವೂ ವಿರೋಧವೂ ಪ್ರತಿಭಟನೆಯೂ ಬಂಡಾಯವೂ ಯಾವಾಗಲೂ ದ್ವೇಷವನ್ನೂ ವೈಮನಸ್ಯವನ್ನೂ ಉದ್ರೇಕವನ್ನೂ ಚಿಂತೆಯನ್ನೂ ತರುತ್ತವೆ. ನಿಡುಸುರುಳಿಯಾಗಿ ಸುತ್ತಿಕೊಳ್ಳುವ ಪರಿಣಾಮವಾಗಿ ಸಮತೋಲನೆಯನ್ನು ಕಳೆದುಕೊಳ್ಳುವದಕ್ಕೆ ಬದಲಾಗಿ, ತೋರಿಕೆಯ ಕೇಡನ್ನು ಆತ್ಮ ಬಲಿದಾನದ ಪ್ರೇಮದಿಂದ ಜಯಿಸಬೇಕು. ಸ್ವಾತ್ಮಸಮರ್ಪಣೆಯಿಂದ ಅಥವಾ ಸ್ವಾರ್ಥತ್ಯಾಗದಿಂದ ಪ್ರಕಟವಾಗುವ ಈ ಸ್ವಭಾವಕ್ಕಿಂತಲೂ ಹೆಚ್ಚು ಶ್ರೇಷ್ಠವೂ ಪ್ರಬಲವೂ ಆದ ಶಕ್ತಿಯು ಬೇರಾವದೂ ಇಲ್ಲ.

'ದುಷ್ಟತನವನ್ನು ನಿರೋಧಿಸಬೇಡ' ಮತ್ತು ಯಾವಾಗಲೂ ಮಹಾದಾತ್ಮನ ಉಲ್ಲಾಸ–ಖೇದಾಯಕಗಳಾದ ಯಾವ ಘಟನೆಯನ್ನಾದರೂ ಸ್ವಾಗತಿಸು. ಮಹಾತ್ಮರು ಎಂದೂ ಮನಸ್ಸಿನ ಸಮತೆಯನ್ನು ಕಳೆದುಕೊಳ್ಳುವದಿಲ್ಲ. ಮನಸ್ಸಿನ ಶಾಂತಿಯನ್ನು ರಕ್ಷಿಸಿಕೊಳ್ಳುವದರಿಂದ ಯಾವಾಗಲೂ ನಾವು ವಿಪತ್ತುಗಲ್ಲುಗಳನ್ನು ಮೆಟ್ಟುಗಲ್ಲುಗಳನ್ನಾಗಿ ಪರಿವರ್ತಿಸಿಕೊಳ್ಳಬಹುದು. ಎಂದೆಂದಿಗೂ ನೀನು ಅಸಹಾಯಕತೆಯ ಭಾವನೆಯನ್ನು ಮನಸ್ಸಿನಲ್ಲಿ ಹಾದುಹೋಗುವದಕ್ಕೆ ಸಹ ಬಿಡಬಾರದು.

ಇಂಡಿಯಾ ದೇಶವನ್ನು ನೀನು ಸೇರಿದ ಕೂಡಲೇ, ನಿನ್ನ ಅನುಕೂಲತೆಯಲ್ಲಿ ಸಾಧ್ಯವಾದಷ್ಟು ಅತ್ಯಂತ ಶೀಘ್ರವಾಗಿ, ಪಂಜಾಬಿನಲ್ಲಿ ಎಲ್ಲಿಯೋ ಇರುವ ಶ್ರಾವಣ ಸಿಂಗನ ವಾಸಸ್ಥಾನವನ್ನು ವಿಚಾರಿಸಬೇಕು, —ಹೀಗೆಂದು ರಾಮನಿಗೆ ಈಗತಾನೇ ಆಲೋಚನೆ ಹೊಳೆದಿದೆ. ಅವನು 'Thundering Dawn' 'ಉದಯಗರ್ಜನೆ' ಎಂಬ ಪತ್ರಿಕೆಯ ಸಂಪಾದಕನಿದ್ದಾನೆ. ಅವನಿಗೆ ಪರಿಚಯ ಪತ್ರಗಳ ಅಗತ್ಯವಿಲ್ಲ.

ಹಡಗಿನಲ್ಲಿ ನಿನಗೆ ಪ್ರಯಾಣಸೌಕರ್ಯವು ದೊರಕಿದ ಕೂಡಲೇ ರಾಮನಿಗೆ ಬರೆದು ತಿಳಿಸುತ್ತೀಯೆಂಬ ಭರವಸೆಯಿದೆ.

ನಿನ್ನದೇ ಆದ ಪರಿಶುದ್ಧ, ವೀರಆತ್ಮ
ರಾಮಸ್ವಾಮಿ

(ಇಂಡಿಯಾ ದೇಶಕ್ಕೆ ನಾನು ಪ್ರಯಾಣ ಮಾಡಬೇಕೆಂದು ಯೋಚಿಸುತ್ತಿರುವಾಗ ನನ್ನ ಮಿತ್ರರಿಂದ ಉಂಟಾದ ತೀವ್ರ ವಿರೋಧದಿಂದ, ನನ್ನ ಮನಸ್ಸಿನಲ್ಲಿ ಮಹಾ ಉಗ್ರವಾದ ಚಿಂತಾಕುಲತೆಗಳು ಭೋರ್ಗರೆಯುತ್ತಿರುವ ಸಮಯದಲ್ಲಿ ಈ ಪತ್ರವು ನನಗೆ ಬಂದು ಸೇರಿತು. ಸೂರ್ಯಾನಂದ.)

---

ಳ

ಓಂ !

ಶಸ್ತಾಸ್ಪ್ರಿಂಗ್ಸ್, ಕ್ಯಾಲಿಫೋರ್ನಿಯ
ಅಕ್ಟೋಬರ್ 10, 1903.

ಪ್ರಿಯ ಮಾತಾ,

ಕಾಗದ, ಲಕೋಟೆಗಳೊಡನೆ* ನಿನ್ನ ಪ್ರೀತಿಯ ಪತ್ರವು ಕೈಸೇರಿತು. ಇಂಡಿಯಾದ ಸಾನುಕಂಪ-ಸ್ನೇಹಗಳ ಭೂಮಿಯಲ್ಲಿ ನೀನು ಪಾದವಿಟ್ಟ ಕೂಡಲೇ ನಿನಗೆ ಹೃತ್ಪೂರ್ವಕವಾದ ಸ್ವಾಗತವನ್ನು ನೀಡುತ್ತಾರೆ ಈಗಾಗಲೇ ರಾಮನು ಭಾರತಕ್ಕೆ ಬರೆದಿದ್ದಾನೆ. ನೀನು ಅಲ್ಲಿಗೆ ಹೋಗುವದಾದರೆ, ನಿನಗಿಂತಲೂ ನಿನ್ನ ಹೆಸರು ಮುಂದಾಗಿಯೇ ವೇಗವಾಗಿ ಹೋಗಿರುವದನ್ನು ಕಾಣುತ್ತಿ ನಿನ್ನ ಪ್ರವಾಸ ಮಧ್ಯದಲ್ಲಿ ಎಲ್ಲಿ ಇಳಿಯುವದಾದರೂ ನಿನಗೆ ಸ್ವಾಗತವಿದೆ **ನಾವು ಲಾಘವತೆಗೂ ಚಾಪಲ್ಯಕ್ಕೂ ವಿನೋದಕ್ಕೂ ಹುಡುಗಾಟಿಕೆಗೂ ನಲಿದಾಟಕ್ಕೂ ಮನಸ್ಸು ಕೊಟ್ಟರೆ, ಈ ನಮ್ಮ ಅಲ್ಪಭಾವನೆಗಳಿಗೆ ಅಪರಿಹಾರ್ಯವಾದ ಪ್ರತಿಕ್ರಿಯೆಯಾಗಿ, ಅದೃಷ್ಟವಾದ ಪ್ರಕೃತಿ ನಿಯಮದ ಪ್ರಕಾರ ನಾವು ಬಹಳ ಕೆಳಗೆ ತಳ್ಳಲ್ಪಟ್ಟು ಭಗ್ನೋತ್ಸಾಹಿಗಳೂ ದೀನ ದಲಿತರೂ ದುಃಖಿಗಳೂ ಆಗುತ್ತೇವೆ. ಆದ್ದರಿಂದ ವಿವೇಕಿಯಾದವನು ತನ್ನ ಹೃದಯವನ್ನು ಯಾವಾಗಲೂ, ಹೊರಗೆ ಆಸಕ್ತವಾಗದಂತೆ ತನ್ನೊಳಗೇ ಇರಿಸಿಕೊಂಡು, ಪರಮ ಸತ್ಯವಾದ ಪರಮಾತ್ಮನಲ್ಲಿಯೇ ನೆಲೆನಿಲ್ಲಿಸುತ್ತಾನೆ.

ಪ್ರಪಂಚದ ವಿಷಯದಲ್ಲಿ ಅವನು ರಾಗ-ದ್ವೇಷಗಳಿಲ್ಲದೆ, ಅನಾಸಕ್ತವಾಗಿಯೂ ಉದಾಸೀನತೆಯಿಂದಲೂ ತಟಸ್ಥನಾಗಿ, ಧಾರಾಳ ಮನಸ್ಸಿನಿಂದ ಸಮೃದ್ಧವಾಗಿ ನೀಡುವ ಮಹಾದಾತನಂತೆ ಉದಾರಭಾವದಿಂದ ನಡೆದುಕೊಳ್ಳುತ್ತಾನೆ.

---

*ನಾನು ಅವರಿಗೆ ಕಾಗದ ಲಕೋಟೆಗಳ ಒಂದು ಪೆಟ್ಟಿಗೆಯನ್ನೇ ಕಳಿಸಿದೆ.-ಸೂರ್ಯಾನಂದ.
**ಇದನ್ನು ಸ್ವಾಮಿಗಳು ನನ್ನ ಒಂದು ಪ್ರಶ್ನೆಗೆ ಉತ್ತರವಾಗಿ ಬರೆದಿದ್ದಾರೆ.

ಎಲ್ಲಾ ಉತ್ಸಾಹಭರಿತ ಕಾರ್ಯಗಳಲ್ಲಿಯೂ ಅವನು ಈ ಉದಾತ್ತ ಭಾವನೆಯನ್ನೇ ಇಟ್ಟುಕೊಳ್ಳುತ್ತಾನೆ. ಇನ್ನು, ಕ್ರಿಯಾಶೀಲವಲ್ಲದ, ಪ್ರಯತ್ನವಿಲ್ಲದ ಅನುಭವಗಳಲ್ಲಿ ಮುಕ್ತಾತ್ಮನು ತನ್ನ ಸ್ವಾನಂದ ಸಾಮ್ರಾಜ್ಯದ ಸಹಜ ಮಹಿಮೆಯನ್ನು ಸರ್ವದಾ ಸ್ಪಷ್ಟವಾಗಿ ಸ್ಮರಿಸುತ್ತ ಅಕ್ಷುಬ್ಧವೂ ಅಚಲವೂ ಆದ ಮನಸ್ಸಿನಿಂದ ಪರಿಪೂರ್ಣೋಲ್ಲಸಿತನಾಗಿರುತ್ತಾನೆ. 'ಚೈತನ್ಯಸ್ವರೂಪವಾದ ನಾನು ಒಂದೇ, ಎರಡನೆಯದೆಂಬುದೇ ಇಲ್ಲ; ಸೂರ್ಯನು ನನ್ನ ಪ್ರತೀಕ, ಹೊರರೂಪ'. ಎಂದು ಯಾವಾಗಲೂ ಭಾವಿಸು. ನಿನ್ನ ನಿಜವಾದ ಸೂರ್ಯಗುಣವನ್ನು ಸಂತತವಾಗಿ ಚಿಂತನೆಮಾಡುತ್ತಾ, ಜೀವನದ ನಿತ್ಯವ್ಯವಹಾರದಲ್ಲಿ ಆ ಭಾವನೆಯನ್ನು ಪ್ರತಿಯೊಂದು ಸಂದರ್ಭದಲ್ಲಿಯೂ ಅನ್ವಯಿಸುತ್ತಾ ನಿನ್ನ ವ್ಯಕ್ತಿತ್ವವನ್ನು ಪ್ರೇಮ, ಪ್ರಕಾಶ, ಪ್ರಾಣಶಕ್ತಿಗಳ (Love, Light and Life) ಪರಮೋತ್ತಮ ಅಭಿವ್ಯಕ್ತತೆಯನ್ನಾಗಿ ಮಾಡಿಕೊ. ನೀನು ಹಡಗು ಹತ್ತುವದಕ್ಕೆ ಮುಂಚೆ ರಾಮನಿಗೆ ಬರೆ. ನೀನು ಜಪಾನ್ ಮತ್ತು ಹಾಂಗ್‌ಕಾಂಗ್‌ಗಳನ್ನು ಸೇರಿದಾಗ ಸಹ ಮತ್ತೆ ಬರೆಯಬೇಕು. ಇಂಡಿಯಾದಲ್ಲಿ ನಿನಗೆ ಏನು ಸಹಾಯಮಾಡುವದಕ್ಕೂ ರಾಮನು ಸಂತೋಷವಾಗಿ ಎಂದಿಗೂ ಸಿದ್ಧನಾಗಿದ್ದಾನೆ.

ನಿನ್ನ ಉದಾತ್ತವಾದ ಮನೋಹರ ಆತ್ಮಾ
ರಾಮ.

0

೫೫

ಓಂ !

ಶಾಸ್ತಾ ಸ್ಪ್ರಿಂಗ್ಸ್, ಕ್ಯಾಲಿಫೋರ್ನಿಯಾ,
ಅಕ್ಟೋಬರ್ 16, 1903.

ಅತ್ಯಂತ ಭಾಗ್ಯಶಾಲಿಯಾದ ಉದಾತ್ತ ಧನ್ಯ ಸೂರ್ಯಾನಂದ,

ನಿನ್ನ ಎರಡು ಪತ್ರಗಳೂ ಒಮ್ಮೆಗೇ ರಾಮನ ಕೈಗೆ ಮಧ್ಯಾಹ್ನ ತಲ್ಪಿದವು. ಎಲ್ಲವೂ ಚೆನ್ನಾಗಿಯೂ ತೃಪ್ತಿಕರವಾಗಿಯೂ ಇವೆ. ನೀನು ದೀರ್ಘಪ್ರವಾಸದ ಮೇಲೆ ಹೋಗುವದರಿಂದ, ಮಾನವ ಸ್ವಭಾವದ ನಿನ್ನ ತಿಳಿವಳಿಕೆಗೆ ನೀನು ಇನ್ನೂ ಸ್ವಲ್ಪ ಹೆಚ್ಚಾಗಿ ಸೇರಿಸಿಕೊಳ್ಳುವದು ನಿನಗೆ ಲಾಭಕರವಾಗಿ ತೋರಬಹುದು;

ಮತ್ತು ಎಲ್ಲಾ ಸಮಯದಲ್ಲಿಯೂ ಸಂದರ್ಭಗಳಲ್ಲಿಯೂ ನಾವು ಮನಃಕ್ಷೋಭೆಯನ್ನು ಹೊಂದದೆ, ಸಂಪೂರ್ಣ ಸಮಾಹಿತ–ಸ್ಥಿರ–ಚಿತ್ತರಾಗಿಯೂ ಪ್ರಸನ್ನರಾಗಿಯೂ ಪ್ರಶಾಂತರಾಗಿಯೂ ಆತ್ಮಸ್ಥರಾಗಿರಬೇಕಾದ ಮಹತ್ವವನ್ನು ನಿನ್ನ ಮನಸ್ಸಿನ ಮೇಲೆ ಅಚ್ಚಳಿಯದಂತೆ ಅಚ್ಚೊತ್ತಬೇಕಾಗಿದೆ. ತೋರಿಕೆಯ ವಿಲಂಬಗಳೂ ವಿರೋಧಗಳೂ ನಿನ್ನ ಒಳಗಿನ ಶಕ್ತಿಯನ್ನೂ ಶುದ್ಧಿಯನ್ನೂ ಬೆಳಸುವದಕ್ಕೆ ಸಹಾಯವಾಗಲು ಉದ್ದಿಷ್ಟವಾಗಿವೆ. ಹೆಣಗಾಟಗಳೂ ಹೋರಾಟಗಳೂ ಪ್ರತಿರೋಧಗಳೂ ಇಲ್ಲವಾಗಿದ್ದರೆ, ಯಾವ ವಿಕಾಸವೂ ಪ್ರಗತಿಯೂ ಎಂದಿಗೂ ಸಾಧ್ಯವಾಗುತ್ತಿರಲಿಲ್ಲವೆಂದು ಪ್ರಕೃತಿಶಾಸ್ತ್ರಜ್ಞರು (Naturalists) ನಿರ್ಣಾಯಕವಾಗಿ ತೋರಿಸಿದ್ದಾರೆ

ರಾಬರ್ಟ್‌ಬ್ರೂಸ್ ಮತ್ತು ಜೇಡರ ಹುಳುವಿನ ಕಥೆ ನಿನಗೆ ನೆನಪಿರಬಹುದು. ಪ್ರತಿಯೊಂದು ಮಹತ್ವದ ಶೋಧನೆಗೂ ಮೊದಲು ಯಶಸ್ವಿಯಾಗದಿರುವ ನೂರಾರು -ಅಲ್ಲ--ಸಾವಿರಾರು ಪ್ರಯತ್ನಗಳು ನಡೆದಿರುವದಿಲ್ಲವೆ ? ಪ್ರತಿನಿತ್ಯವೂ ಮುಂಜಾನೆ, ಮುಂಚೆ ಸುಮಾರು ಅರ್ಧ ಗಂಟೆಯ ಕಾಲವನ್ನಾದರೂ ನಿನ್ನೊಳಗೆ ನೀನು ಈ ಓಂಕಾರ ಮಹಾಮಂತ್ರವನ್ನು–ಓಂ ! ಓಂ !ಓಂ !–ಉಚ್ಚರಿಸುವದರಲ್ಲಿ ವಿನಿಯೋಗಿಸಬೇಕು. ಅದನ್ನು ಉಚ್ಚರಿಸುತ್ತಿರುವಾಗ ಈ ಮಂತ್ರಾರ್ಥವು ತಿಳಿಸುವ ಸತ್ಯವನ್ನು ನಿಮ್ಮ ಸ್ವಭಾವದ ಒಳಗೇ ತೀವ್ರವಾಗಿ ಹೀರಿಕೊಳ್ಳುತ್ತಿರಬೇಕು. ಎಡೆಬಿಡದ ಈ ಬಗೆಯ ಆತ್ಮಸೂಚನೆಯು–ಅನುಸಂಧಾನವು-ನಿನ್ನನ್ನು ಸಂಪೂರ್ಣ ಸಂನ್ಯಾಸಿಯನ್ನಾಗಿ ಮಾಡುತ್ತದೆ. ನಿನ್ನ ಪ್ರಯಾಣಕ್ಕೆ ಏನೇನು ವ್ಯವಸ್ಥೆ ಮಾಡಿದೆ ಎಂಬದನ್ನು ದಯವಿಟ್ಟು ಬೇಗ ತಿಳಿಸು.

ಅತ್ಯಂತ ಗಾಢವಾದ ಪ್ರೇಮ ಮತ್ತು ಹೃತ್ಪೂರ್ವಕ ವಿಶ್ವಾಸದೊಂದಿಗೆ,

ನಿನ್ನ ಆತ್ಮ
ರಾಮಸ್ವಾಮಿ.

೬

ಓಂ!

ಶಸ್ತಾ ಸ್ಪ್ರಿಂಗ್ಸ್, ಕ್ಯಾಲಿಫೋರ್ನಿಯ,
ಅಕ್ಟೋಬರ್ 21, 1903.

ಅತ್ಯಂತ ಧನ್ಯ ದಿವ್ಯ ಸೂರ್ಯಾನಂದ,

ನಿನ್ನ ನಿನ್ನೆಯ ಪತ್ರವು ಈಗ ತಾನೇ ಕೈಗೆ ಬಂದಿತು. ನೀನು ಭಾರತಕ್ಕೆ ಸಮುದ್ರಯಾನಮಾಡುತ್ತಿರುವದು ಎಂಥಾ ಸಂತೋಷದ ಸಮಾಚಾರ! ನೀನು ಹಾಂಗ್‌ಕಾಂಗ್‌ನಲ್ಲಿ ಕ್ಲಾಕ್‌ಟವರ್ ಗಡಿಯಾರದ ಗೋಪುರದ ಹತ್ತಿರವಿರುವ ವಾಸಿ, ಯಮಲ್ ಅಸ್ಸೋಮಲ್ ಇವರನ್ನು ಭೇಟಿಯಾಗಿ, ರಾಮ (ಲೇಖಕ) ಸ್ವಾಮಿಯ ಆನಂದಸ್ಥಿತಿಯನ್ನೂ ಮತ್ತು ನಿನ್ನ ಉದಾತ್ತವಾದ ಉದ್ದಿಷ್ಟಕಾರ್ಯವನ್ನೂ ತಿಳಿಸಿದರೆ, ಅಲ್ಲಿರುವ ಹಿಂದೂ ವರ್ತಕರನ್ನು ನೀನು ಸಂತೋಷಪಡಿಸಬಹುದು.

ಯಾವ ಯಾವ ಜನರಿಗೆ ಇಷ್ಟರಲ್ಲಿಯೇ ಪತ್ರಗಳನ್ನು ಬರೆದಿದೆಯೋ ಅವರು ಆಯಾ ಸ್ಥಳೀಯ ವಿದ್ಯಮಾನಗಳ ಸಮಾಚಾರವನ್ನು ನಿನಗೆ ಸಮರ್ಪಕವಾಗಿ ಒದಗಿಸುತ್ತಾರೆ. ನೀನು ಕಾರ್ಯಾರಂಭಮಾಡುವದಷ್ಟೇ ಅವಶ್ಯವಾಗಿದೆ; ಅನಂತರ ಮಿಕ್ಕ ಎಲ್ಲವೂ ಸಾಕಷ್ಟು ಸುಗಮವಾಗಿ ನಡೆಯುತ್ತವೆ. ಒಂದನ್ನು ಮಾತ್ರ ಮನಸ್ಸಿನಲ್ಲಿ ಚೆನ್ನಾಗಿ ನೆನಪಿಡು. ನೀನು ಯಾವ ಒಂದು ಜಾತಿಮತದ ಜನರನ್ನು ಭೇಟಿಮಾಡಿದಾಗ, ಬೇರೆ ಜಾತಿಯ ಜನರ ವಿಷಯದಲ್ಲಿ ಅವರು, ಏನು ಟೀಕೆಮಾಡುತ್ತಾರೆಂಬದಕ್ಕೆ ನೀನು ಎಂದೆಂದಿಗೂ ಗಮನಕೊಡದೆ, ಅಥವಾ ಗುರುತುಮಾಡಿ ನೆನಪಿಟ್ಟುಕೊಳ್ಳದೆ ಇರು. ಯಾರಲ್ಲಿಯಾದರೂ ಭಕ್ತಿಯ ಮನೋಭಾವವನ್ನೂ ದೈವೀ ಪ್ರೇಮವನ್ನೂ ಔದಾರ್ಯವನ್ನೂ ಆಧ್ಯಾತ್ಮಜ್ಞಾನವನ್ನೂ ಕಂಡದ್ದೇ ಆದರೆ ಅವನ್ನು ಗ್ರಹಿಸಿ, ಹೀರಿಕೊಂಡು, ಜೀರ್ಣಮಾಡಿಕೊ; ಯಾರಲ್ಲಿ ಆದರೂ ದ್ವೇಷಾಸೂಯೆಗಳನ್ನು ಕಂಡರೆ ಅವನ್ನು ಗ್ರಹಿಸಲು ನಿನಗೆ ಸಮಯವಿಲ್ಲದಿರಲಿ. ಅವರಲ್ಲಿರುವ ಕುಂದು ಕೊರತೆಗಳನ್ನೂ ದೌರ್ಬಲ್ಯಗಳನ್ನೂ ಗಮನಿಸಬೇಡ.

ಕಲ್ಕತ್ತಾದಲ್ಲಿ ಸೇಟ್ ಸೀತಾರಾಮರನ್ನು ನೋಡುವದಕ್ಕೆ ಮರೆಯಬೇಡ. ಕಲ್ಕತ್ತಾದಲ್ಲಿರುವಾಗ, ನಿಗರ್ವಿಗಳೂ ಪರಿಶುದ್ಧರೂ ಸ್ವಾರ್ಥತ್ಯಾಗಿಗಳೂ ಶ್ರದ್ಧಾಭಕ್ತಿಯುಳ್ಳ ನಿಷ್ಠಾವಂತರೂ ಸಂಪ್ರದಾಯ ಪ್ರಿಯ ವೇದಾಂತಿಗಳೂ ಆದ ''The

Dawn ' ' ಉದಯ ' ಪತ್ರಿಕೆಯ ಮಾನ್ಯ ಸಂಪಾದಕರನ್ನು ಸಹ ನೀನು ಭೇಟಿಯಾಗಬಹುದು ಅವರು ಒಂದು ವಿದ್ಯಾಸಂಸ್ಥೆಯನ್ನೂ ಭೋಜನ ಶಾಲೆಯನ್ನೂ ಸಹ ಯಶಸ್ವಿಯಾಗಿ ನಡೆಸುತ್ತಿದ್ದಾರೆ ಕಲ್ಕತ್ತಾದಲ್ಲಿ ನೀನು ಸಂಕೀರ್ತನೆಯನ್ನೂ ಭಕ್ತಿಪರವಾದ ನೃತ್ಯಗಳನ್ನೂ ಸಹ ಕೇಳಿ, ನೋಡಿ ಆನಂದಪಡಬಹುದು.

ಅನೇಕ ವರ್ಷಗಳು, ದೂರ ಹೊರದೇಶಕ್ಕೆ ಹೋಗಿ, ಅಗಲಿ, ಹಿಂದಿರುಗಿ ಶಾಲೆಗೆ ಬರುವ ಮಗುವನ್ನು, ಮಮತೆಯ ತಾಯಿಯು ವಿಶ್ವಾಸದಿಂದ ಬರಮಾಡಿ ಕೊಳ್ಳುವಂತೆ, ಭಾರತಮಾತೆಯು ನಿನ್ನನ್ನು ಪ್ರೀತ್ಯಾದರಗಳಿಂದ ಸ್ವೀಕರಿಸುತ್ತಾಳೆ ಸದ್ಯಕ್ಕೆ ನಿನಗೆ ಸ್ವಸ್ತಿ, ದೇವರು ನಿನ್ನನ್ನು ರಕ್ಷಿಸಲಿ ! ಯಾವಾಗಲೂ ರಾಮನು ನಿನ್ನ ಜೊತೆಗೇ ಇದ್ದಾನೆ

ಭಾರತಕೆ ಪ್ರಯಾಣ, ಸಮುದ್ರ ಯಾನ !
ಓ ! ನಾವಿನ್ನು ಕಾಯಲಾರೆವು, ತಾಳಲಾರೆವು !
ನಾವೂ ಸಹ ಹಡಗ ಹತ್ತುವೆವು, ಓ ಆತ್ಮ !
ನಿನಗೂ, ಜಾಡಿಲ್ಲದ ಕಡಲುಗಳ ಮೇಲೆ ನಾವೂ ದೋಣಿಯಲಿ ತೇಲಿ ಮುನ್ನುಗ್ಗುವೆವು !
ಅಜ್ಞಾತ ತೀರಗಳಿಗಾಗಿ ನಿರ್ಭಯದಿ. ಆನಂದ ಪರವಶತೆಯ ತೆರೆಗಳ ಮೇಲೆ,
ಹಾಯಿ ಹಡಗಿನಲಿ ತೇಲಲು. ಬೀಸು ಗಾಳಿಗಳ ನಡುವೆ
ಸ್ವಚ್ಛಂದ ಗಾಯನದಿ ನಮ್ಮ ದೇವರ ಗೀತೆಯ ಗಾನಮಾಡುತಲಿ !
ಸಂತಸದಿ ಸಂತೈಸುವ ಓಂಕಾರ ಮಂತ್ರವ ಉಚ್ಚರಿಸುತೆ ! ಭಾರತಕೆ ಪ್ರಯಾಣ, ಸಾಗರ ಯಾನ ! ಈ ಕಡಲುಗಳ ಹಾಯುತ್ತ, ಅಥವಾ ಬೆಟ್ಟಗಳ ಮೇಲೆ, ಅಥವಾ ರಾತ್ರಿ ಜಾಗರದಿ,
ಆಲೋಚನೆಗಳು, ಕಾಲ-ದೇಶ-ಮೃತ್ಯುಗಳ ಮೂಕ ಭಾವಗಳು ನೀರಿನಂತೆ ಹರಿಯುತ್ತ,
ಅನಂತ ಲೋಕಗಳ ಮೂಲಕವೆನ್ನ ನಿಜದಿ ವಹಿಸುವಂತೆ,
ಯಾರ ಗಾಳಿಯ ನಾನುಸಿರಾಡುವೆನೊ, ಯಾರ ತೆರೆಗಳನು

. . .

ಸ್ನಾನಮಾಡಿಸು ಎನ್ನ, ಓ ದೇವ ನಿನ್ನಲ್ಲಿ, ನಿನ್ನಲ್ಲಿಗೇರಲು,
ನಿನ್ನ ಸಾಲಿನಲಿ, ನಾನು ಮೋಕ್ಷ ನನ್ನಾತ್ಮ ಸಾಲುಸೇರಲಿಕಾಗಿ,

ಭಾರತಮಾತೆಗೆ ಪ್ರಯಾಣ, ಸಮುದ್ರ ಯಾನ!

ನಿನ್ನ ಆತ್ಮನೇ,
ರಾಮ

೭

ಓಂ!

ಬೆಂಗಿನ್, ಸ್ವಿಟ್ಜರ್ಲ್ಯಾಂಡ್.
ತಾ॥ 1. 2 1904

ಪರಮ ದಿವ್ಯಾತ್ಮ:

ನಿನ್ನ ಹಲವು ಪತ್ರಗಳೂ ನಿನ್ನ ಟೆಲಿಗ್ರಾಫ್ ಮತ್ತು ಎಲ್ಲವೂ ಸಕಾಲದಲ್ಲಿ ರಾಮನ ಕೈ ಸೇರಿದವು. ಸತ್ಯವು ಒಂದೇ ಇರುವಾಗ ಯಾರು ಯಾರಿಗೆ ಕೃತಜ್ಞರಾಗಿರಬೇಕು? ಯಾರು ಯಾರನ್ನು ಅಭಿನಂದಿಸಬೇಕು? ರಾಮನಲ್ಲಿ ಸಂತೋಷವು ತುಂಬಿದೆ. ರಾಮನೇ ಶಾಂತಿಸರ್ವಸ್ವ. ಪರ್ವತದಿಂದ ಹೊಳೆಯು ಹರಿಯುವಂತೆ ರಾಮನಿಂದ ಕರ್ಮವು ಹರಿಯುತ್ತಿದೆ. ಆದರೆ ರಾಮನು ಯಾವ ಕೆಲಸವನ್ನೂ ಮಾಡುವದಿಲ್ಲ. ಪರಿಮಳ ಗುಲಾಬಿಯು ನೀನಾದರೆ, ಮಧುರ ಸುಗಂಧವು ನಿನ್ನ ಸುತ್ತಲೂ ತನ್ನಿಂದ ತಾನೇ ನಿನ್ನಿಂದ-ಅಂದರೆ-ನನ್ನಿಂದ ನಿನ್ನಿಂದ ಸಹಜವಾಗಿ ಬೀಸುತ್ತದೆ.

ನಿನ್ನ ಪೂರ್ಣಹೃದಯದಿಂದ ನಿನ್ನನ್ನು ನೀನು ಒಂದು ದಿನ ಕ್ಷಮಿಸಬಲ್ಲೆಯಾ? ಅವರ ತಪ್ಪುಗಳನ್ನೂ ಮೂಢ ನಂಬಿಕೆಗಳನ್ನೂ ನಿನ್ನವೆಂದೇ ಮನಗಾಣಬಲ್ಲೆಯಾ? ಅವರನ್ನು ನೀನು ನಿನ್ನ ಸ್ವಂತ ಸಹೋದರ ಸಹೋದರಿಯರೆಂದು ನಂಬಬಲ್ಲೆಯಾ? ರಾಮನು ತನ್ನನ್ನು ತಾನು ಆಗಾಗ ಗಾಢ ಮತಾಂಧ ಕ್ರೈಸ್ತನಾಗಿ ಕಾಣುವಂತೆ, ನೀನು ಹುಟ್ಟಿನಿಂದ ಅಮೇರಿಕಾದವಳೆಂಬುದನ್ನು ಮರೆತು, ಜನ್ಮದಿಂದ ಹಿಂದುವಾಗಿ ಪರಿವರ್ತನೆ ಹೊಂದಿರುವಂತೆ ಕಂಡಿದ್ದೀಯಾ? ಹಾಗಾದರೆ ನಿನ್ನಿಂದ ಆಶ್ಚರ್ಯಕರಕಾರ್ಯವು ತಾನಾಗಿಯೇ ಹೊರಹೊಮ್ಮುವದು!

ನೀನು ಯಾರು ? ನಷ್ಟರನ್ನೂ ಭ್ರಷ್ಟರನ್ನೂ ರಕ್ಷಿಸುವದಕ್ಕೆ. ಉದ್ಧರಿಸುವದಕ್ಕೆ ನೀನು ಯಾರು ? ನೀನು ಮೊದಲು ಪಾರಾಗಿದ್ದೀಯ ? ಉದ್ಧಾರವಾಗಿದ್ದೀಯ ?

Whosoever would save his life, must lose it ?

'ಯಾರು ತಮ್ಮ ಜೀವವನ್ನು ಉಳಿಸಿಕೊಳ್ಳಬೇಕೆನ್ನುವರೋ ಅವರು ಅದನ್ನು ಕಳೆದುಕೊಳ್ಳಬೇಕು. ಎಂಬದನ್ನು ನೀನು ಬಲ್ಲೆಯ ?

ಹಾಗಾದರೆ ನಷ್ಟ ಚೇತನರಲ್ಲಿ ನೀನೂ ಒಬ್ಬಳೆ ? ಹಾಗಿದ್ದರೆ, ಎದ್ದೇಳು; ರಕ್ಷಕಳಾಗು. ಪಾಪಿಯಲ್ಲಿರುವದು ನೀನೇ ಎಂದರಿತು, ನಿನ್ನನ್ನು ನೀನು ಪಾಪಿಯೆಂದು ತಿಳಿದರೆ, ಅವನನ್ನು ನೀನು ರಕ್ಷಿಸಬಲ್ಲೆ. ಎಲ್ಲರನ್ನೂ ಜಯಿಸುವದಕ್ಕೆ ಪ್ರೇಮದ ಒಂದು ಮಾರ್ಗವನ್ನು ಬಿಟ್ಟರೆ ಬೇರೆ ದಾರಿಯಿಲ್ಲ.

ನಿನ್ನ ಆತ್ಮ
ಸ್ವಾಮಿ ರಾಮ

ಅ

ಓಂ

ಮಿನ್ನೀಪೋಲಿಸ್
ತಾ॥ 3-4-1904

ಪರಮ ಪುಣ್ಯಾತ್ಮ !

ನೀನು ಈಗ ಎಲ್ಲಿದ್ದಿ ? ಮಥುರೆಯಿಂದ ಬರೆದಿದ್ದ ನೂತನ ವರ್ಷದ ಶುಭ ಸಂದೇಶದ ಪತ್ರದ ಅನಂತರ ಪ್ರಿಯ ಉದಾತ್ತ ಮಾತೆಯಿಂದ ಯಾವ ಪತ್ರವೂ ಇಲ್ಲ. ಒಳಗಿನಿಂದ ಹೊರಸೂಸಿ ಹರಿಯುತ್ತಿದೆ, ಶಾಂತಿ, ಶಾಂತಿ, ಶಾಂತಿ. ಸ್ವರ್ಗಸಾಮ್ರಾಜ್ಯ ಒಳಗೇ ಇದೆ ಪುಸ್ತಕಗಳಲ್ಲಿಯೂ ದೇವಾಲಯಗಳಲ್ಲಿಯೂ ಸಭಾಭಗಳಲ್ಲಿಯೂ ಪ್ರವಾದಿಗಳಲ್ಲಿಯೂ ಮತಸ್ಥಾಪಕ ಆಚಾರ್ಯರಲ್ಲಿಯೂ ಸಂತ-ಮಹಾಂತರಲ್ಲಿಯೂ ಸುಖವನ್ನು ಹುಡುಕುವದು ವ್ಯರ್ಥ, ವ್ಯರ್ಥ. ಇಷ್ಟರೊಳಗೆ ನಿಮ್ಮ ಅನುಭವವೂ ಇದನ್ನು ತೋರಿಸಿರಬೇಕು. ಆ ಪಾಠವನ್ನು

ಒಮ್ಮೆ ಕಲಿತರೆ, ಅವಕ್ಕೆ ಎಷ್ಟು ಬೆಲೆಯಾದರೂ ಅದು ತುಟ್ಟಿಯಲ್ಲ ಏಕಾಂತವಾಗಿ ಒಬ್ಬರೇ ಕುಳಿತುಕೊಳ್ಳಬೇಕು ; ನಿಮ್ಮ ಸಂಕಟವನ್ನೇ ದೈವಿಕ ಸಂತೋಷವನ್ನಾಗಿ ಪರಿವರ್ತನೆಮಾಡಬೇಕು. " The Thundering Dawn " " ಉಷೆಯ ಗರ್ಜನೆ " ಎಂಬ ರೀತಿಯ ಪುಸ್ತಕಗಳಿಂದ ಸ್ಫೂರ್ತಿಯುಕ್ತವಾದ ಸೂಚನೆಗಳನ್ನು ಪಡೆಯಬಹುದು. ಓಂಕಾರದ ಮೇಲೆ ಚಿಂತನೆಮಾಡಿ ; ಮನಸಿನ ಶುದ್ಧಿ ಶಾಂತಿಯನ್ನು ನೀಡತಕ್ಕವರಾಗಿ, ಬೇಡತಕ್ಕವರಾಗಬೇಡಿ. ಪ್ರೇಮಾತ್ಮಾ, ಶಿಪ್ಪಾಸ್ಪ್ರಿಂಗ್ಸ ಹತ್ತಿರ, ಕ್ರೀಕ್‌ದಂಡೆಯ ಮೇಲೆ, ರಾಮನು ನಿನಗೆ ಹೇಳಿದ ಕೊನೆಯ ಮಾತನ್ನು ನೆನಪಿನಲ್ಲಿಟ್ಟಿದ್ದೀಯ ? ಬೇಡುವವನಂತೆ ಅದನ್ನು ಕೊಡಲಿಲ್ಲ ; ಆದರೆ ಪ್ರಕಾಶವನ್ನೂ ಪ್ರೇಮವನ್ನೂ ನಿರಂತರ ನೀಡುವವನಂತೆ ಕೊಟ್ಟಿದೆ. ಬೇಡುವ ಮನೋಭಾವದಲ್ಲಿದ್ದಾಗ ನಮ್ಮ ಹೃದಯಗಳು ಒಡೆದು ಹೋಗುತ್ತವೆ. " ಅಮೆರಿಕನ್ನರಿಗೆ ರಾಮನ ಮನವಿ " ಯಲ್ಲಿ ವಿವರಿಸಿದ್ದ ಇಂಡಿಯಾದ ಪರಿಸ್ಥಿತಿಯನ್ನು ಪರೀಕ್ಷಿಸಿ, ನೀನು ನಿಜವೆಂದು ಮನಗಂಡಿರಬಹುದು. ನಿನಗೆ ಬೇಕಾದರೆ ಆ ಉಪನ್ಯಾಸವನ್ನು ಇನ್ನೊಮ್ಮೆ ದಯವಿಟ್ಟು ಓದಿಕೋ. ನಿನ್ನ ಪ್ರೀತಿಯ ಶ್ರಮಕ್ಕೆ, ಹೇಳಿಕೊಳ್ಳುವಂಥ ಯಾವ ತತ್‌ಕ್ಷಣದ ಫಲಿತಾಂಶವನ್ನೂ ನಿರೀಕ್ಷಿಸಬೇಡ. ಕ್ರಿಸ್ತನ ಜೀವನವು " ಸೇವಿಸುವದರಲ್ಲಿ ತೃಪ್ತಿಯನ್ನು ಹೊಂದು " ಎಂದು ಹೇಳುತ್ತದೆ.

'We cannot receive any gift, benediction or reward higher than the privilege of serving'.

'ಸೇವಿಸುವ ಸುಯೋಗಕ್ಕಿಂತಲೂ ಸೌಭಾಗ್ಯಕ್ಕಿಂತಲೂ ಹೆಚ್ಚಿನ ದಾನವನ್ನಾಗಲೀ ಬಹುಮಾನವನ್ನಾಗಲೀ ಆಶೀರ್ವಚನವನ್ನಾಗಲೀ ದೈವಾನುಗ್ರಹವನ್ನಾಗಲೀ ನಾವು ಪಡೆಯಲಾರೆವು'. ಲಕ್ನೋ ನಗರದ 'ಅಡ್ವೋಕೇಟ್' ಪತ್ರಿಕೆಯ ಸಂಪಾದಕರಾದ ಗಂಗಾಪ್ರಸಾದ ವರ್ಮಾ ಇವರನ್ನು ಇದುವರೆಗೆ ಭೇಟಿಯಾಗದಿದ್ದರೆ, ದಯವಿಟ್ಟು ಅವರನ್ನು ನೋಡು. ಇಂಡಿಯಾದಲ್ಲಿರುವ ಬಡ ಹಿಂದೂಗಳ ಕಷ್ಟಗಳಲ್ಲಿ ಭಾಗಿಯಾಗುವದರಲ್ಲಿ ನೀನು ಹೆಚ್ಚು ಆನಂದವನ್ನು ಕಾಣುತ್ತೀಯೋ ಅಥವಾ ಅಮೇರಿಕಾ ಜೀವನದ ಸೌಖ್ಯದಲ್ಲಿ ಹೆಚ್ಚು ಸಂತೋಷವನ್ನು ಹೊಂದುತ್ತೀಯೋ ? ಪುನಃ ಭಾರತದಲ್ಲಿಯೇ ಇರಬೇಕೆಂದು ನಾನು ಬಯಸುತ್ತೇನೆ.

ರಾಮನು ಪೋರ್ಟ್‌ಲ್ಯಾಂಡ್, ಓರ್‌ಗನ್ (Oregon) ಗಳಲ್ಲಿ ಒಂದು ತಿಂಗಳು, ಡೆನ್‌ವರ್ (Denver) ನಲ್ಲಿ ಒಂದು ತಿಂಗಳು, ಚಿಕಾಗೋನಲ್ಲಿ ಎರಡು

ವಾರಗಳು, ಮಿನ್ನಿಯಾಪಾಲಿಸ್ (Minneapolis) ನಲ್ಲಿ ಎರಡು ಮೂರು ವಾರಗಳು ಇದ್ದನು. ಈ ಸ್ಥಳಗಳಲ್ಲಿ ವೇದಾಂತ ಸಂಸ್ಥೆಗಳು ವ್ಯವಸ್ಥೆ ಮಾಡಲ್ಪಟ್ಟವು. ಬೇರೆ ಬೇರೆ ವಿಶ್ವವಿದ್ಯಾನಿಲಗಳಲ್ಲಿ ಬಡ ಹಿಂದೂ ವಿದ್ಯಾರ್ಥಿಗಳಿಗೆ ಉಚಿತ ವಿದ್ಯಾರ್ಥಿವೇತನಗಳನ್ನು ನೀಡುವಂತೆ ಏರ್ಪಡಿಸಲಾಯಿತು. ಇಲ್ಲಿಂದ ರಾಮನು ಬಫೆಲೊ, ಎನ್. ವೈ., (Buffalo, N. Y.,) ಗೂ, ಅಲ್ಲಿಂದ ಬಾಸ್ಟನ್, ನ್ಯೂಯಾರ್ಕ್, ಫಿಲಿಡಲ್‌ಫಿಯಾ ನಗರಗಳಿಗೂ ಮತ್ತು ವಾಷಿಂಗ್‌ಟನ್ ಡಿ ಸಿ. ನಗರಕ್ಕೂ ಹೋಗುತ್ತಾನೆ. ಜೂನ್ 29, 30, 31, ನೇ ದಿನಗಳಲ್ಲಿ ಸೆಯಿಂಟ್ ಲೂಯಿಯಲ್ಲಿ (St Louis) ಪ್ರಪಂಚದ ಏಕೀಕರಣ ಸಂಘದ (World's Unity League) ಸಭೆಗಳಲ್ಲಿ ರಾಮನು ಉಪಸ್ಥಿತನಾಗಿರಬೇಕು. ಜೂಲೈ ತಿಂಗಳಲ್ಲಿ ರಾಮನು 'ಲೇಕ್ ಜಿನೀವಾ' (Lake Geneva) ದಲ್ಲಿರಬೇಕು. ಮುಂದಿನ ಮಾಗಿ ಕಾಲದಲ್ಲಿ ರಾಮನು ಇಂಗ್ಲೆಂಡಿನ ಲಂಡನ್ನಿಗೆ ಬರುತ್ತಾನೆ. ಪ್ರಿಯ ಮಾತೆ, ನಿರುತ್ಸಾಹಿಯಾಗಬೇಡ ಯಾವಾಗಲೂ ವಸ್ತುಗಳ ನಗುಮುಖವನ್ನೇ ಪ್ರಸನ್ನ ಗುಣಗಳನ್ನೇ ನೋಡು. ಮುಳ್ಳಿಲ್ಲದ ಗುಲಾಬಿಯಿಲ್ಲ. ಈ ಪ್ರಪಂಚದಲ್ಲಿ ದೋಷಮಿಶ್ರವಿಲ್ಲದ ಗುಣಗಳನ್ನು ಕಾಣಲಾರೆವು. ಎಲ್ಲಾ ಒಳ್ಳೆಯದು, ಸರ್ವ ಶುಭ, ಎನ್ನುವದು ಪರಮಾತ್ಮನೊಬ್ಬನೇ. ಅವನು ಅನಂತ ಕಲ್ಯಾಣಗುಣ ಪರಿಪೂರ್ಣನಾದವನು. ಭಾರತದಲ್ಲಿ ವೇದಾಂತವು—ಸತ್ಯವು—ವ್ಯವಹಾರದಲ್ಲಿ ಕಾರ್ಯಗತವಾಗಿದ್ದರೆ, ಅಮೆರಿಕಾ ಜನರಲ್ಲಿ ಬೇಡಿಕೆ ಸಲ್ಲಿಸುವ ಆವಶ್ಯಕತೆ ಏನಿತ್ತು ? ಸಮಸ್ತ ವಸ್ತುಗಳ ಸೌಂದರ್ಯಕ್ಕೆ ನಿಮ್ಮ ಹೃದಯವು ಸಂಪೂರ್ಣವಾಗಿ ಶ್ರುತಿಗೂಡಿದ್ದರೆ ಎಲ್ಲೆಲ್ಲಿಯೂ ನಿಮಗೆ ಎಲ್ಲವೂ ಭವ್ಯವಾಗಿಯೇ ದಿವ್ಯವಾಗಿಯೇ ಕಾಣುತ್ತವೆ.

ಶಾಂತಿ ! ಶಾಂತಿ !! ಶಾಂತಿ !!!

ಎಂದಿಗೂ ಎಂದೆಂದಿಗೂ ಕೇಂದ್ರದ ಆನಂದ, ಅಂತರಂಗದ ಸಂತೋಷ,

ನಿನ್ನ ಆತ್ಮನೇ,
**ಸ್ವಾಮಿ ರಾಮ.**

---

೯

ಓಂ।

ಶಿ.ಕ್ ಜೂನಾ
ತಾ॥ 8 7 1904.

ಪರಮ ದಿವ್ಯ ಧನ್ಯಾತ್ಮ,

ನಿನ್ನ ಪತ್ರಗಳು ರಾಮನಿಗೆ ತಲ್ಪಿದವು. ನಿನಗೆ ವಂದನೆಗಳು. ಸಧ್ಯ ಪರಿಸ್ಥಿತಿ ಏನೆಂಬದನ್ನು ರಾಮನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳುತ್ತಾನೆ. ಶಾಂತಿಯೂ ಸಂತೋಷವೂ ಯಶಸ್ಸೂ ಎಂದೆಂದಿಗೂ ನಿನ್ನಲ್ಲಿ ಸ್ಥಿರವಾಗಿ ನೆಲೆಸಿರಲಿ. ತನ್ನದೆನ್ನುವ ಸ್ವತ್ತಿನ ಭಾವನೆಯನ್ನೂ ಬಯಕೆಯನ್ನೂ ನೀಗಿರುವ ಪರಿಶುದ್ಧ ಚೇತನಕ್ಕೆ ಯಾವ ಬಗೆಯ ಭಯವಾಗಲೀ ಅಪಾಯವಾಗಲೀ ಕಷ್ಟವಾಗಲೀ ಇರಲಾರದು. ಈ ವಿಶ್ವದಲ್ಲಿ ನನ್ನನ್ನು ನಾನು ಚಾಚಿಕೊಂಡು ವಿಮುಕ್ತನಾಗಿ ವಿಶ್ರಮಿಸುತ್ತೇನೆ. ಈ ಪುಟ್ಟ 'ನಾನು' ಎನ್ನುವದೇ ಎದೆಯಲ್ಲಿರುವ ವಿಷಸರ್ಪ. ಅದನ್ನೊಂದು ಎತ್ತಿ ಎಸೆದರೆ ಜಗತ್ತೆಲ್ಲಾ ನಿಮಗೆ ಗೌರವ ಸಲ್ಲಿಸುವದು. ಮಿನ್ನಿಯಾಪೋಲಿಸ್‌ನಿಂದ (Minneapolis) ರಾಮನು ಹಿಂದಿರುಗಿದ ಮೇಲೆ 'Practical Wisdom' 'ವ್ಯಾವಹಾರಿಕ ಜಾಣತನ' ಎಂಬ ಪತ್ರಿಕೆಯಲ್ಲಿ ಪ್ರಕಟವಾಗಲು ಟೈಪ್ ಮಾಡಿದ ದೀರ್ಘವಾದ ಪತ್ರವನ್ನು ಉದಾತ್ತಚೇತನವಾದ ನಿನಗೆ ಅಂಚೆಯ ಮೂಲಕ ಕಳಿಸಿತ್ತು. 'ವ್ಯಾವಹಾರಿಕ ಜಾಣತನ' ಅಥವಾ 'ಕಾರ್ಯಶೀಲ ವಿವೇಕ' ಎನ್ನುವದೇ ಪತ್ರದ ವಿಷಯವಾಗಿತ್ತು. ಸೆಯಿಂಟ್ ಲೂಯಿ ಪಟ್ಟಣದಲ್ಲಿ "The World's Unity League" ಜಗತ್ತಿನ ಏಕೀಕರಣ ಸಂಸ್ಥೆಯ ಪ್ರಥಮ ಸಭೆಯು ರಾಮನ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ಸೆಯಿಂಟ್ ಲೂಯಿಯಲ್ಲಿಯೂ (St. Louis) ಬೇರೆ ಸ್ಥಳಗಳಲ್ಲಿಯೂ ರಾಮನ ಉಪನ್ಯಾಸಗಳ ಜೊತೆಗೆ ಥಿಯಸಾಫಿಕಲ್ ಸಂಸ್ಥೆಯ ಆಶ್ರಯದಲ್ಲಿಯೂ ಚರ್ಚ್ ಆಫ್ ಪ್ರಾಕ್ಟಿಕಲ್ ಕ್ರಿಶ್ಚಿಯಾನಿಟಿಯ (Church of Practical Christianity) ಸಭಾಶ್ರಯದಲ್ಲಿಯೂ ಯೂನಿಟಿ ಲೀಗ್‌ನಲ್ಲಿ ಬೇರೆ ಕೆಲವು ಉಪನ್ಯಾಸಗಳಾದವು. ರಾಮನು ಇನ್ನು ಕೆಲವು ದಿನಗಳಲ್ಲಿ ಚಿಕಾಗೊ ಪಟ್ಟಣಕ್ಕೂ ಅಲ್ಲಿಂದ ಬಫೆಲೋ, ಲಿಲಿ ಡೇಲ್,

ಗ್ರೀನೇಕರ್ ಮೆಯಿನ್ (Greenacre Maine) ಪಟ್ಟಣಗಳಿಗೂ ಹೋಗಿ, ಸೆಪ್ಟೆಂಬರ್‌ನಲ್ಲಿ ಅಥವಾ ಅದಕ್ಕೂ ಮುಂಚೆ ಅಮೆರಿಕಾ ದೇಶವನ್ನು ಬಿಡುತ್ತಾನೆ.

ಸಕಲರಿಗೂ ಶಾಂತಿ, ಆಶೀರ್ವಾದಗಳು, ಪ್ರೇಮ.

ನಿನ್ನ ಆತ್ಮ
ಸ್ವಾಮಿ ರಾಮ,

---

ಓಂ ।

೧೦

ಫ್ಲೋರಿಡಾ
1–10–1904

ಅತ್ಯಂತ ಧನ್ಯ, ಪ್ರಿಯ ದಿವ್ಯತೆಯೆ,

ನಿನ್ನ ಒಳಗಿನ ದನಿಗೆ ಅನುಸಾರವಾಗಿ ನೈಜವಾಗಿಯೂ ನಡೆಯುವದರಲ್ಲಿ ಯಾರಿಗೂ ವಂಚನೆ ಇರುವದಿಲ್ಲ. ನಾವು ಯಾರಿಗೂ ಋಣಿಗಳಲ್ಲ. ನಮ್ಮ ಶ್ರಮವೆಲ್ಲಾ ಪ್ರೇಮದ ಶ್ರಮವಾಗಿರಲಿ. ಎಂದೆಂದಿಗೂ ಸ್ವಸ್ಥವಾಗಿರುವದೂ ಎಲ್ಲವನ್ನೂ ಕರಗಿಸಿಕೊಳ್ಳುವ ಲೀನಕಾರಿಯಾಗಿರುವದೂ ನಮ್ಮ ತತ್ತ್ವವೂ ಆಚಾರ ಸೂತ್ರವೂ ಆಗಿರಬೇಕು.

ನಮ್ಮ ಜನರ ಮುನ್ನಡೆಯಲ್ಲಿ ಸಹಾಯ ಮಾಡುವದೂ ಸೇವೆ ಮಾಡುವದೂ ಮಾತ್ರ ನಮ್ಮ ಹಕ್ಕು, ಅಧಿಕಾರ. ಕೇವಲ ನಟನೆಯಾಗಿರದೆ, ನಡೆಯು ನಿಜವಾಗಿಯೂ ಮುನ್ನಡೆಯಾಗಿರಲಿ. ಆಧ್ಯಾತ್ಮಿಕ ಮಾರ್ಗದಲ್ಲಿ ಹಿಂದಕ್ಕೆ ಚಲಿಸುತ್ತಿರುವ ನನ್ನ ಮಿತ್ರರಿಗೆ ಸಹಾಯ ಮಾಡುವಾಗ ನಾನೂ ಅವರೊಡನೆ ಸೇರಿಕೊಳ್ಳುತ್ತೇನೆ. ನಾಡಿದ್ದು ರಾಮನು ನ್ಯೂಯಾರ್ಕಿಗೆ ಹೊರಡುತ್ತಾನೆ ಬಹಳಮಟ್ಟಿಗೆ ಅಕ್ಟೋಬರ್ ೪ನೇ ತಾರೀಖು ಜಿಬ್ರಾಲ್ಟರ್‌ಗೆ ಅವನು ಹಡಗು ಹತ್ತುತ್ತಾನೆ. ದಾರಿಯಲ್ಲಿ ಹಲವು ಸ್ಥಳಗಳಲ್ಲಿ ನಿಲ್ಲಬೇಕಾಗಿರುವದರಿಂದ ಇಂಡಿಯಾ ದೇಶವನ್ನು ಸೇರಲು ಸ್ವಲ್ಪ ತಡವಾಗಬಹುದು.

ಬರುತ್ತಾನೆ ರಾಮನು ಇಷ್ಟುದಿನಗಳೂ ಉಪನ್ಯಾಸಗಳಲ್ಲಿಯೂ ಕಾರ್ಯಕ್ರಮ ಗಳಲ್ಲಿಯೂ ಬಿಡುವಿಲ್ಲದೆ ತೊಡಗಿದ್ದನು. ಎಂದಿನಂತೆ ರಾಮನು ಅಪಾರವಾದ ಆನಂದದಲ್ಲಿ ಮುಳುಗಿದ್ದಾನೆ. ನೀನು ಇನ್ನೂ ಭಾರತದಲ್ಲಿಯೇ ಇರುವದನ್ನು ತಿಳಿದು ರಾಮನಿಗೆ ಬಹಳ ಸಂತೋಷವಾಯಿತು ನಿನಗೆ ಪೂರ್ಣಾರೋಗ್ಯವೂ ಉಲ್ಲಾಸವೂ ಶಾಂತಿಯೂ ಆನಂದವೂ ಸ್ಥಿರವಾಗಿರಲೆಂದು ಹಾರೈಸಿ ನಿನ್ನನ್ನು ಮಧುರೆಯಲ್ಲಿ ಕಾಣಲು ಆಶಿಸುತ್ತೇನೆ.

ನಿನ್ನ ಆತ್ಮ,
ಸ್ವಾಮಿ ರಾಮತೀರ್ಥ.

* * *

ಓಂ

೧೨

ಪುಷ್ಕರ
14–2–1905

ಪರಮ ಪ್ರಿಯ-ಪುಣ್ಯ-ದಿವ್ಯಮಾತೆ,

ಇವತ್ತು, ಬೊಂಬಾಯಿ ವಿಶ್ವವಿದ್ಯಾನಿಲಯದ ಪದವೀಧರನಾದ ಸುಂದರ ತರುಣನೊಬ್ಬನು ರಾಮನ ಕಾರ್ಯಕ್ಕಾಗಿ ತನ್ನ ಜೀವನವನ್ನೇ ಅರ್ಪಿಸಿದ್ದಾನೆ. ಸಾಹಿತ್ಯ ಕಾರ್ಯದಲ್ಲಿ ಸಹಾಯಮಾಡುತ್ತಾ ಅವನು ರಾಮನೊಡನೆ ಇರುತ್ತಾನೆ. ನನ್ನ ಪ್ರೀತಿಯ ದೇವರು ಎಷ್ಟು ಒಳ್ಳೆಯವರು ? ಅದನ್ನು ಅಥವಾ ಅವನನ್ನು ನಂಬಿ ಕೆಲಸಮಾಡತಕ್ಕವರಿಗೆ ಅವನೆಂದೂ ಮೋಸಮಾಡುವದಿಲ್ಲ.

ಉಪನ್ಯಾಸಮಾಡುವದಕ್ಕಾಗಿ ನಾರಾಯಣಸ್ವಾಮಿಯನ್ನು ಸದ್ಯದಲ್ಲಿಯೇ ವಿದೇಶಕ್ಕೆ ಕಳಿಸುತ್ತದೆ. ಪ್ರಕಾಶವಾದ ಅಥವಾ ಪ್ರಸಿದ್ಧವಾದ ಕೇಂದ್ರಗಳಲ್ಲಿ ಮಾಡುವ ಕೆಲಸವು ಎಷ್ಟು ಮಹತ್ವದ್ದೋ ಸಂದಿ ಮೂಲೆಗಳಲ್ಲಿ ನಡೆಸುವ ಕೆಲಸವೂ ಅಷ್ಟೇ ಮುಖ್ಯವಾದುದು. ಪರ್ಷಿಯನ್ ಗಾಲಿಯಲ್ಲಿ ಸಣ್ಣ ಹಲ್ಲಿನಂಥ ಮರದ

ಆಧಾರವು (ಹಿಂದೂಸ್ಥಾನಿಯಲ್ಲಿ ಕುಟ್ಟಿ) ಅದನ್ನು ತಿರುಗಿಸುವ ಎತ್ತುಗಳಷ್ಟೇ ಮುಖ್ಯವಾದುದು. ಆ ಅಲ್ಪವೆನಿಸುವ ಮರದ ಆಧಾರವನ್ನು ತೆಗೆದುಬಿಟ್ಟರೆ ಆ ಇಡೀ ಯಂತ್ರಯೋಜನೆಯೇ ವ್ಯರ್ಥವಾಗುವದು ಅಷ್ಟೇ ಅಲ್ಲ ; ಚಕ್ರದ ಅರೆಯ ಕಂಬಿಗಳಿಗೆ ಕೂಡಿಸಿದ ಪ್ರತಿಯೊಂದು ಮೊಳೆಯೂ ಸರ್ವಾಧಿಕ ಮಹತ್ವವುಳ್ಳದು. ಮಕ್ಕಳು ಅಷ್ಟು ಸಣ್ಣವಸ್ತುಗಳನ್ನು ಉಪಯೋಗಿಸದಿದ್ದರೆ ಏನಾಯಿತು ? ಎಷ್ಟೇ ಸಣ್ಣ ಕೆಲಸವನ್ನಾದರೂ ಪ್ರೀತಿಯಿಂದ ಮಾಡಿದಾಗ ದೇವರ ಕಣ್ಣಿನಲ್ಲಿ ಅದು ಮಹತ್ವಾದುದೇ ಆಗುತ್ತದೆ. ಮಹಾದ್ಭುತವಾದ ಸೂರ್ಯನ ಎದುರಿಗೆ ಒಂದು ಪುಟ್ಟ ಮಂಜಿನ ಹನಿಯು ಶೂನ್ಯಪ್ರಾಯವೇ ಸರಿ ; ಆದರೆ, ಆ ಪುಟಾಣಿ ಹನಿಯು ತನ್ನ ಪುಟ್ಟ ಮಧುರ ವಕ್ಷದಲ್ಲಿ ಇಡೀ ಸೂರ್ಯಮಂಡಲವನ್ನೇ ಪ್ರತಿಫಲನ ಮಾಡುವದನ್ನು ನೋಡಬಲ್ಲ ಕಣ್ಣು ಕಾಣಬಹುದು. ಆದ್ದರಿಂದ ನನ್ನ ಪ್ರಿಯ ಪುಣ್ಯಮಾತೆ, ಇಡೀ ಮಾನವ ಜನಾಂಗದ ಗಮನವನ್ನು ಸೆಳೆಯುವ ದೊಡ್ಡ ಗದ್ದಲದ ಕೋಲಾಹಲವೆಬ್ಬಿಸುವ ಕೆಲಸದಷ್ಟೇ ಹೆಸರಿಗೂ ಖ್ಯಾತಿಗೂ ದೂರವಾಗಿ, ಎಲ್ಲರೂ ಅಸಡ್ಡೆಮಾಡಿರುವ ಮೂಲೆಯಲ್ಲಿ ಮಾಡುವ ನಿಶ್ಶಬ್ದವೂ ನಿರಾಡಂಬರವೂ ನಮ್ರವೂ ಆದ ಕೆಲಸವು ಅನಿವಾರ್ಯವೂ ಅತ್ಯವಶ್ಯವೂ ಉದಾತ್ತವೂ ಆಗಿರುತ್ತದೆ. "ನಾನು ಮೂಡತಕ್ಕವನು ಎಂಬ ಭಾವನೆಯನ್ನು ಈ ಸಣ್ಣ ನಾನು ತಳೆದಿರುವದನ್ನು ನೋಡಿ ನಾನು ಎದೆಗುಂದಿದೆ." "ಯಾರು ನಿಂತು ಕಾದಿರುವ ಪಾತ್ರವೋ ಅವರೂ ಸಹ ಸೇವೆ ಸಲ್ಲಿಸುವರು" ಕೋಮಲ ಶಿಶುವನ್ನು ಲಾಲನೆ ಪಾಲನೆಮಾಡುವ ತಾಯಿಯ ಕರ್ತವ್ಯವು, ಮುಂದೆ ಆ ಶಿಶುವಿನ ತಾರುಣ್ಯದಲ್ಲಿ ಶಿಕ್ಷಣಕೊಡುವ ವಿಶ್ವವಿದ್ಯಾ ನಿಲಯದ ಪ್ರೊಫೆಸರ ಕಾರ್ಯದಷ್ಟು ಕೀರ್ತಿಯನ್ನು ತರುವಂಥ ಮತ್ತು ಮಹತ್ವಾಗಿ ಕಾಣುವಂಥಾದ್ದಲ್ಲವಾದರೂ ಆ ತಾಯಿಯ ವಾತ್ಸಲ್ಯ ಪೂರ್ಣ ಕರ್ತವ್ಯವು ಆ ಪ್ರೊಫೆಸರರ ಕಾರ್ಯಕ್ಕಿಂತಲೂ ಹೆಚ್ಚು ಮಧುರವೂ ಮಹತ್ವನ್ನೂ ಆದುದು. ಬಾಲ್ಯದಲ್ಲಿ ತಾಯಿಯ ಪ್ರೀತಿಯ ತೊಡೆಯನ್ನೂ ಜೋಗುಳವನ್ನೂ ಕಳೆದು ಪ್ರೊಫೆಸರರ ಶಿಕ್ಷೆಯನ್ನೂ ಉಪನ್ಯಾಸವನ್ನೂ ಇಡಲಾರೆವು. ಸಾಮಾನ್ಯ ಕೂಲಿಯವನು ತನ್ನ ಅಲ್ಪವಾದ ಶ್ರಮವನ್ನು, ಕ್ರಿಸ್ತ ಅಥವಾ ಕೃಷ್ಣನ ಲೋಕೋದ್ಧಾರ ಕಾರ್ಯದಷ್ಟೇ ಪವಿತ್ರವಾದುದೂ ಮಹತ್ವವುಳ್ಳದೂ ಆದುದೆಂದು ತಿಳಿಯ ಬೇಕೆಂದು ವೇದಾಂತವು ಹೇಳುತ್ತದೆ. ಕುರ್ಚಿಯ ಒಂದು ಕಾಲನ್ನು ಎತ್ತುವದರಿಂದ ಇಡೀ ಕುರ್ಚಿಯನ್ನೇ ಎತ್ತಿದಂತೆ ಆಗುವದಿಲ್ಲವೆ ? ಆದ್ದರಿಂದ ಒಬ್ಬ ಜೀವನನ್ನು ನಾವು ಮೇಲೆತ್ತುವದರಿಂದ ಅವನ ಮೂಲಕ ಇಡೀ ಜಗತ್ತನ್ನೇ ಉದ್ಧರಿಸಿ ದಂತಾಗುತ್ತದೆ ; ಮಾನವ ಕುಲದ ಏಕತ್ವವು ಇಷ್ಟು ಘನವಾದುದು.

ನೀನು ನೀನೇ ಆಗಿರುವದಕ್ಕೆ ನಿಶ್ಚಯಿಸು ; ಯಾರು ತನ್ನನ್ನು ತಾನು ಕಂಡುಕೊಳ್ಳುವನೋ ಅವನು ಶೋಕವನ್ನು ಕಳೆದುಕೊಳ್ಳುವನು,—ಎಂದು ತಿಳಿ.

ಆನಂದ ! ಆನಂದ ! ಓಂ ! ಶಾಂತಿ ! ಆಶೀರ್ವಾದ !
ಪ್ರೇಮ.

ನಿನ್ನ ಆತ್ಮ
ರಾಮ.



ಓಂ !

೧೩

ಪುಷ್ಕರ್
22–2–1905

ಶಾಂತಿ ! ಆಶೀರ್ವಾದಗಳು ! ಪ್ರೇಮ ! ಆನಂದ !

ಅತ್ಯಂತ ಧನ್ಯ ದಿವ್ಯ ಮಾತೆ,

ನಿನ್ನ ಮಧುರ ಸ್ವರ್ಗೀಯ ಪತ್ರವು ಕೈಸೇರಿತು (ಅಸ್ವಸ್ಥಳಾಗಿದ್ದ ಸೂರ್ಯಾನಂದ ಪ್ರೇಮದ ದಿವ್ಯ ಶಕ್ತಿಯಿಂದ ಗುಣ ಹೊಂದಿದ್ದಳು ) ಪುಣ್ಯಾತ್ಮಳಾದ ಸೂರ್ಯಾನಂದಳಿಗೆ ತನ್ನ ಭೌತಿಕ ಶರೀರದ ಮೇಲಿದ್ದ ಹತೋಟಿಯು, ದೇವರಲ್ಲಿ ಆಶ್ಚರ್ಯಕರವಾದ ಏಕತ್ವವೂ ಪ್ರೇಮದಲ್ಲಿ ಅದ್ಭುತವಾದ ಸುಸಾಂಗತ್ಯವೂ ಇಲ್ಲದೇ ಸತ್ಯವಾಗಿಯೂ ಬರಲಾರದು.

ಓಂ ! Joy ! Jai ! Jai ! ಸಂತೋಷ ! ಜೈ ! ಜೈ !

ಹೌದು, ಶ್ರೀ ಜ್ಯೋತಿಸ್ಸ್ವರೂಪನು ಸತ್ಯವಾಗಿಯೂ ಒಳ್ಳೆಯತನದ ಅತ್ಯಂತ ಧನ್ಯ ಸ್ವರ್ಗೀಯ ಅವತಾರವೇ ಸರಿ. ಅವನು ಅಷ್ಟು ದಯಾಳು.

ನಿನ್ನ ಆತ್ಮ
ಸ್ವಾಮಿ ರಾಮತೀರ್ಥ

ಓಂ

೧೪

ಪುಷ್ಕರ್, ಅಜ್ಮೀರ್ ಡಿಸ್ಟ್ರಿಕ್ಟ್.
ಮಾರ್ಚ್ 1905.

ಸಂತೋಷ ! ಹರ್ಷ ! ಮೋದ ! ಓಂ ! ಶಾಂತಿ !

ಧನ್ಯ ದಿವ್ಯ ಮಾತೆ,

ಹಾಸಿಗೆಯ ಮೇಲೆ ನೀನು ಜೊತೆಗೆ ಕುಳಿತಿದ್ದಲ್ಲಿಯೇ ರಾಮನು ಮಲಗಿದ್ದನು.

ನಿನ್ನ ಪತ್ರವನ್ನೂ ಜೊತೆಗೆ ಬೇರೆಯವರ ಪತ್ರಗಳನ್ನೂ ತಂದು ಕೈಯಲ್ಲಿಡುವ ವರೆಗೂ ರಾಮನು ದಿವ್ಯಪ್ರಜ್ಞೆಯಲ್ಲಿ ಮುಳುಗಿದ್ದುದರಿಂದ ಬಾಹ್ಯಪ್ರಜ್ಞೆ ಇಲ್ಲದೆ ಇದ್ದನು. ನಿನ್ನ ಪತ್ರವನ್ನು ತೆರೆಯುವುದಕ್ಕೂ ಮುಂಚೆ ಹೃತ್ಪೂರ್ವಕವೂ ಸಂತೋಷಪೂರ್ಣವೂ ದೀರ್ಘವೂ ಆದ ಗಟ್ಟಿಯಾದ ನಗುವನ್ನು ನಿನ್ನ ದಿವ್ಯಾತ್ಮನಿಗೆ ಕಳಿಸಿಕೊಟ್ಟ. ಓಂ ! ಶಾಂತಿ ! ಶಾಂತಿ ! ಶಾಂತಿ ! ಅತ್ಯಂತ ಪ್ರಿಯ ಮಾತೇ, ನಿನ್ನ ಮಧುರ ಪತ್ರವನ್ನು ಓದಿದ ಮೇಲೆ ರಾಮನು ಇನ್ನೊಮ್ಮೆ ತರಂಗ ತರಂಗವಾದ ನಾದವುಳ್ಳ ಸಂತೋಷಭರಿತವಾದ ನಗುವನ್ನು ನಿನಗೆ ಕಳಿಸುತ್ತಾನೆ.

ತಾಯೆ, ನಿನ್ನ ನಡೆನುಡಿಗಳು ಎಲ್ಲಾ ರೀತಿಯಿಂದಲೂ ಸರಿಯಾಗಿವೆ; ಪರಮೋಚಿತವಾಗಿವೆ. ನಿನ್ನ ಪರಿಶುದ್ಧವೂ ಮಧುರವೂ ಕೋಮಲವೂ ಮೃದುವೂ ಆದ ಸ್ವಭಾವವನ್ನು ರಾಮನು ಸಂಪೂರ್ಣವಾಗಿ ಅರಿತಿದ್ದಾನೆ. ದೇವರು ಹೇಳಿ ಬರೆಸುತ್ತಿರುವಂತೆ ರಾಮನು ಬೇರೆ ಬೇರೆ ವಿಷಯಗಳ ಮೇಲೆ ಬರೆಯುತ್ತಿದ್ದಾನೆ. ಕೆಲವು ಪದ್ಯಗಳನ್ನೂ ಬರೆಯುತ್ತಿದ್ದಾನೆ ರಾಮನು ಪ್ರಾಯಶಃ ಬೇಸಿಗೆಯಲ್ಲಿ ಮೈದಾನಗಳಲ್ಲಿರುವುದಿಲ್ಲ. ರಾಮನು ಕಾಶ್ಮೀರವನ್ನು ಬಹಳ ಪ್ರೀತಿಸುತ್ತಾನೆ; ನಿನ್ನ ದಯಾಮಯವಾದ ಸಹವಾಸದಲ್ಲಿಯೂ ರಾಯ್ ಭವಾನಿದಾಸ್ ಮತ್ತು ಇತರ ಮಿತ್ರರ ಸಹವಾಸದಲ್ಲಿಯೂ ರಾಮನು ಬಹಳ ಸಂತೋಷಪಡುತ್ತಾನೆ. ರಾಮನು ನಿನ್ನೊಡನೆ ಕಾಶ್ಮೀರಕ್ಕೆ ಹೋಗುವುದಾದರೆ, ರಾಮನ ಸಾನ್ನಿಧ್ಯವೂ ಸಂಭಾಷಣೆಯೂ ಹಲವು ದಣಿದ ಜೀವರನ್ನು ಸಂತೃಪ್ತಿಪಡಿಸಬಹುದು ಆದರೆ

ದಿವ್ಯ ಮಾತೆ, ಸತ್ಯ ಮತ್ತು ಮಾನವತೆಯ ಯಜ್ಞವೇದಿಕೆಯ ಮೇಲೆ ಬಲಿಯಾಗುವದಕ್ಕಾಗಿ ಹೃದಯವೂ ಮನಸ್ಸೂ ದೇಹವೂ ಎಡೆಬಿಡದೆ ಹಹದಹಿಸುತ್ತಿರುವದು ಒಂದು ಮಹತ್ತಾದ ಸೌಭಾಗ್ಯವೇ ಸರಿ ಒಳಗಿರುವ ಅಮೂರ್ತವಾದ ಪರಮಾತ್ಮ ಚೈತನ್ಯದ ನಿರ್ಮಲವಾದ ಸದ್ದಿಲ್ಲದ ಸಣ್ಣ ದನಿಗೆ ಇದೇ ಒಪ್ಪಿಗೆಯಾದುದು.

ತಾಯೆ, ದೇವರ ಸೇವೆಗೆ ಮೀಸಲಾಗಿ ಸಮರ್ಪಿತವಾದ ಜೀವನವನ್ನು ವಿಮರ್ಶೆಗೂ ವಿಶ್ಲೇಷಣೆಗೂ ಸಿಕ್ಕದಿರುವ ಗೂಢವಾದ ದೈವಶಕ್ತಿಯು ಆಗಾಗ ಪ್ರೇರಿಸಿ ಮುಂದೊಯ್ಯುತ್ತದೆ.

ರಾಮನು ನಿನ್ನೊಡನೆ ಕಾಶ್ಮೀರಕ್ಕೆ ಬರಬಹುದು ; ಆದರೆ ಹೊರಡುವ ಗಳಿಗೆಯವರೆಗೂ ನಿಶ್ಚಿತವಾಗಿ ಏನನ್ನೂ ಹೇಳಲಾಗುವದಿಲ್ಲ.

ನಿನ್ನ ಆತ್ಮ
ರಾಮತೀರ್ಥ.

---

ಓಂ !

೧೫

ಜಯಪುರ
9-3-1905

ಪರಮ ಧನ್ಯ ಪ್ರಿಯತಮ ದಿವ್ಯತೆಯೆ,

ರಾಮನು ಪುಷ್ಕರವನ್ನು ಬಿಟ್ಟಿರುವ ಮಟ್ಟಿಗೆ ನಿನ್ನ ಭವಿಷ್ಯವಾಣಿಯು ನಿಜವಾಯಿತು. ಇಲ್ಲಿಂದ ರಾಮನು ಯಾವ ಮಾರ್ಗವಾಗಿ ಹೋಗುತ್ತಾನೆಂಬದನ್ನು ನಿರ್ಣಯಿಸಲು ಸೂರ್ಯರ ಸೂರ್ಯನಾದ ಪರಮ ದೈವಾನುಗ್ರಹದ ಕೈಯಲ್ಲಿ ಬಿಡುತ್ತಾನೆ. ಅಜ್ಮೀರದ ಟೌನ್‌ಹಾಲ್‌ನಲ್ಲಿ ಎರಡು ಉಪನ್ಯಾಸಗಳಾದವು. ಜಯಪುರದ ನಗರಭವನದಲ್ಲಿಯೂ ಉಪನ್ಯಾಸಗಳಿಗೆ ಏರ್ಪಡಿಸುತ್ತಾರೆ. ಪೂರಣಸಿಂಗ್

ಪುಷ್ಕರಕ್ಕೆ ಬಂದಿದ್ದು, ಎರಡು ಮೂರು ದಿನಗಳು ರಾಮನ ಜೊತೆಗೆ ಗುಡ್ಡಗಳ ಮೇಲೆ ಅಡ್ಡಾಡಿದನು. ರಾಮನನ್ನು ನೋಡಲು ಜನರು ಗುಂಪು ಗುಂಪಾಗಿ ಬರುತ್ತಿದ್ದಾರೆ; ಇದನ್ನು ಕೊನೆಗಾಣಿಸಬೇಕು. ದೇವರು ಮತ್ತು ನಾನು ಇಬ್ಬರೇ ಇರಬೇಕು.

ಈ ದಿವಸವೆಲ್ಲಾ ನಾವು ಒಟ್ಟಿಗೆ ಹೋಗೋಣ. ಎಂದೆಂದಿಗೂ ತೃಪ್ತಿಯಾಗದಿರುವ ಪ್ರೇಮದ ರಾತ್ರಿಯಲ್ಲಿ ಜೊತೆಗೂಡಿ ಮಲಗೋಣ. ಬೆಳಿಗ್ಗೆ ಮುಂಚೆ ಎದ್ದು, ನಿರ್ಜನವಾದ ಸ್ಥಳಗಳಲ್ಲಿ ಆಗಲಿ, ಜನಭರಿತವಾದ ಸ್ಥಾನಗಳಲ್ಲಿ ಆಗಲಿ, ನಮ್ಮ ಹೆಜ್ಜೆಗಳು ಒಯ್ದಲ್ಲಿಗೆ ಹೋಗೋಣ. ನಮ್ಮ ಪ್ರವಾಸದ ಕೊನೆಯನ್ನು ಕಾಣುವ ಬಯಕೆಯೂ ಬೇಡ, ಕೊನೆ ಯಾವದಿರಬಹುದೆಂಬ ವಿಚಾರವು ಸಹ ನಮಗೆ ಬೇಡ. ಏಕೆಂದರೆ, ಎಲ್ಲಾ ವಸ್ತುಗಳ ಅಂತಿಮಗತಿಯಾದ ಆತ್ಮವು ಈಗಾಗಲೇ ನಮ್ಮೊಳಗೆ ನಮ್ಮ ಸ್ವರೂಪವೇ ಆಗಿಲ್ಲವೆ? ಓಂ! ಓಂ! ಓಂ!

ಇನ್ನು ಬಹಳ ಬೇಗ, ರಾಮನು, ಪತ್ರಗಳು ಸೇರುವದಕ್ಕೂ ಆಚೆ ದೂರ ಅರಣ್ಯಗಳಲ್ಲಿಯೂ ಪರ್ವತಗಳ ಮೇಲೂ ದೇವರಲ್ಲಿಯೂ ನಿಮ್ಮಲ್ಲಿಯೂ ಎಲ್ಲೆಡೆಯಲ್ಲಿಯೂ ಎಲ್ಲಾ ವಸ್ತುಗಳಲ್ಲಿಯೂ ತುಂಬಿರುತ್ತಾನೆ. ರಾಮನಿಂದ ಪುನ ನೀನು ಯಾವಾಗ ಅವನ ಸುದ್ದಿಯನ್ನು ಕೇಳುತ್ತಿ ಎಂಬದು ತಿಳಿಯದು. ಶಾಂತಿ, ಆಶೀರ್ವಾದಗಳು, ಮತ್ತು ಪ್ರೇಮ--ಇವು ಎಂದೆಂದಿಗೂ ನಿನ್ನನ್ನು ಬೆಂಬಿಡದೆ ರಕ್ಷಿಸಲಿ!

ನಿನ್ನ ಆತ್ಮ,
ರಾಮ.

---

ಓಂ!

೧೬

ಹರಿದ್ವಾರ
ಗುರುವಾರ ಸಂಜೆ

ಅತ್ಯಂತ ಪುಣ್ಯ ಪ್ರಿಯಮಾತೆ,

ನಿನ್ನ ಭವಿಷ್ಯ ವಾಣಿಯು ನಿಜವಾಗಿದೆ. ದೆಹ್ರಾಕ್ಕೆ ರಾಮನು ಬರುತ್ತಿದ್ದಾನೆ.

ಆದರೆ, ಜನರು ಪರಮಾವಧಿಯ ಪ್ರೇಮದಿಂದ, ದಾರಿಯಲ್ಲಿ ಹಲವು ಸ್ಥಳಗಳಲ್ಲಿ ರಾಮನನ್ನು ನಿಲ್ಲಿಸಿದರು. ಆಲ್ವಾರ್, ಮೊರದಾಬಾದ್, ಅಜ್ಮೀರ್, ಮತ್ತು ಜಯಪುರಗಳಲ್ಲಿ ಉಪನ್ಯಾಸಗಳಾದವು. ಟ್ರೈನಿನಲ್ಲಿ ನಮ್ಮ ಅತ್ಯಂತ ಪ್ರಿಯ ಪುಣ್ಯಾತ್ಮರಾದ ಶ್ರೀ ಜ್ಯೋತಿಸ್ವರೂಪರನ್ನು ಬೀಳ್ಕೊಟ್ಟು ರಾಮನು ಹರಿದ್ವಾರದಲ್ಲಿ ನಿಂತನು. ರಾಮನು ಇಲ್ಲಿರುವದು ಜನರಿಗೆ ತಿಳಿದಿರುವದರಿಂದ, ಇಲ್ಲಿಯೇ ಹೆಚ್ಚು ಕಾಲ ಉಳಿಯಬೇಕೆಂದು ಅತ್ಯಂತ ಪ್ರೇಮದಿಂದ ಅವರು ರಾಮನನ್ನು ಪ್ರಾರ್ಥಿಸುತ್ತಿದ್ದಾರೆ. ರಾಮನಿಂದ ಹೊರಹೊಮ್ಮುವ ಯಾವ ವಿಚಾರಕ್ಕಾದರೂ ಹಸಿದಿರುವ ಮತ್ತು ಆಶ್ಚರ್ಯಕರ ಗ್ರಾಹಕ ಮನೋಭಾವವುಳ್ಳ ತರುಣ ಸಾಧುಗಳ ಮತ್ತು ಇತರರ ಸ್ಥಿತಿಯನ್ನು ಉತ್ತಮಪಡಿಸುವದಕ್ಕೆ ಸಾಧ್ಯವಾದುದನ್ನು ಮಾಡಬಹುದಾದ ಸುಸಂದರ್ಭವನ್ನು ಕಳೆದುಕೊಳ್ಳುವದು ಉಚಿತವಲ್ಲವೆಂದು ರಾಮನೂ ಯೋಚಿಸುತ್ತಾನೆ. ತಾಯೆ, ಸಾಧುಗಳ ಸ್ಥಿತಿಯನ್ನು ಸುಧಾರಿಸುವ ಕೆಲಸವನ್ನು ಕೈಗೊಳ್ಳಬೇಕೆಂದು ನಾವು ಮಧುರೆಯಲ್ಲಿ ಸೇರಿದ್ದಾಗ ನೀನೇ ಹೇಳಿದ್ದೆಯಲ್ಲವೆ ? ಇಲ್ಲಿಯ ಶ್ರದ್ಧಾಪೂರ್ಣರಾದ ಸ್ವಾಮಿಗಳು ಬಹಳ ಆದರದಿಂದ ರಾಮನ ಉಪದೇಶಗಳನ್ನು ಸ್ವೀಕರಿಸುತ್ತಿದ್ದಾರೆ.

ಇವತ್ತು ರಾಮನು ಗಂಗೆಯ ಆಚೆಯ ತೀರದಲ್ಲಿರುವ ಚಂಡಿಯ ದೇವಾಲಯಕ್ಕೆ ಹೋದನು. ಆ ದೇವಾಲಯವು ಸಣ್ಣದೊಂದು ಸೊಗಸಾದ ಬೆಟ್ಟದ ನೆತ್ತಿಯ ಮೇಲಿದೆ. ನದಿಯ ಆಚೆಯ ದಂಡೆಯ ಮೇಲಿರುವ ಅಡವಿಯು ಬಹಳ ದಟ್ಟವಾಗಿದೆ ಮತ್ತು ಅಲ್ಲಿಯ ದೃಶ್ಯವು ಅತ್ಯಂತ ಆಕರ್ಷಕ ಚಿತ್ರದಂತೆ ಇದೆ. ಹಲವು ಶಾಖೆಗಳ ಝರಿಗಳಾಗಿ ಒಡೆದಿರುವ ಗಂಗೆಯ ನೋಟವೂ ಅದರ ತಿರುವುಗಳೂ ಅತಿಶಯ ಸುಂದರವಾಗಿವೆ. ಚಂಡಿಯ ದೇವಾಲಯದಿಂದ ನೋಡಿದರೆ, ಎತ್ತರವಾದ ಹಿಮಾಲಯ ಪರ್ವತ ಪ್ರದೇಶದಿಂದ ನಿಧಾನವಾಗಿ ಜಾರಿ ಬರುತ್ತಿರುವ ನೀರ್ಗಲ್ಲ ದೊಡ್ಡ ರಾಶಿಗಳೂ ನೀರ್ಗಲ್ಲ ನದಿಗಳೂ ಸುವರ್ಣಮಯವಾದ ಅಥವಾ ವಜ್ರಮಯವಾದ ಕೌತುಕ ದೃಶ್ಯವನ್ನು ತೋರಿಸುತ್ತವೆ.

ನಿಂದೆಯಾಗಲೀ ಸ್ತುತಿಯಾಗಲೀ
ಮಿತ್ರರಾಗಲೀ ಶತ್ರುಗಳಾಗಲೀ
ರಾಗವಾಗಲೀ ದ್ವೇಷವಾಗಲೀ
ದೇಹವಾಗಲೀ ಬಂಧುಗಳಾಗಲೀ
ಗೃಹವಾಗಲೀ ! ಪರದೇಶವಾಗಲೀ

ಈ ಪ್ರಪಂಚದ ಈ ಯಾವದೂ ಮುಖ್ಯವಲ್ಲ; ದೇವರು ಮಾತ್ರ ಸತ್ಯ; ದೇವರೊಬ್ಬನೇ ಸತ್ಯ.

ಎಲ್ಲಾ ಹೋಗಲಿ, ದೇವರೇ ನಮ್ಮ [illegible] ದೇವರೊಬ್ಬನು ಇರಲಿ. ಎಲ್ಲದರಲ್ಲಿಯೂ ಎಲ್ಲರಲ್ಲಿಯೂ [illegible] ದೇವರೇ. ಅಪಾರವಾದ ಶಾಂತಿಯು ಅಮೃತಮಯವಾಗಿ ಮಳೆಯ ಹಾಗೆ [illegible] ಸುರಿಯುತ್ತಿದೆ. ರಾಮನ ಮನಸ್ಸು ಶಾಂತಿಯಿಂದ ತುಂಬಿದೆ. ಸಂತೋಷವು ಅಪಾರ [illegible].

ರಾಮನು ಸುಖವಾಗಿದ್ದಾನೆ; [illegible] ಮಾತ್ರ [illegible] ಆಗಿದ್ದು. ಶಾಂತಿ! ಆಶೀರ್ವಾದಗಳು!

ಪ್ರೇಮ! ಸಂತೋಷ! ಸಂತೋಷ! ಓಂ! ಓಂ! ಓಂ! ನಿನ್ನ ವಿದ್ಯಾರ್ಥಿಗಳಿಗೂ ನಿನ್ನ ಆತಿಥೇಯರಾದ ಶ್ರೀಮತೀ ಮತ್ತು ಶ್ರೀ [illegible] ವಿಸ್ವರೂಪರಿಗೂ ಪ್ರೀತಿಯ ಆಶೀರ್ವಾದಗಳು.

ನಿನ್ನ ಆತ್ಮ
ರಾಮ

ಓಂ!

೧೭

ಹಿಮಾಲಯ
10 8 1905

ಆಶೀರ್ವಾದಗಳು! ಪ್ರೇಮ! ಸಂತೋಷ! ಶಾಂತಿ! ಶಾಂತಿ!

ಅತ್ಯಂತ ಪ್ರಿಯ ದಿವ್ಯ ಮಾತೆ,

ನಿನ್ನ ಪತ್ರವು ಕೆಲವು ದಿನಗಳ ಹಿಂದೆ ತಲ್ಪಿತು. ಈಚೆಗೆ ರಾಮನು ಯಾವದಕ್ಕೂ ಉತ್ತರವನ್ನು ಕೊಟ್ಟಿಲ್ಲ. ತಾಯ್ನುಡಿಯಲ್ಲಿ ರಾಮನು ಬರೆಯುತ್ತಿರುವ ಬಹಳ ಉಪಯೋಗಕರವಾದ ಮೂರು ಪುಸ್ತಕಗಳು ಇವತ್ತು ಮುಗಿದಿವೆ. ಈಗ ನಿನ್ನ

ಆರೋಗ್ಯ ಹೇಗಿದೆ ? ನಿನಗೆ ಪೂರ್ಣಾರೋಗ್ಯವನ್ನೂ ಶಕ್ತಿಯನ್ನೂ ರಾಮನು ಆಶೀರ್ವದಿಸುತ್ತಾನೆ. ಓಂ ! ಓಂ ! ಓಂ !

ನಿನ್ನ ಅಮೆರಿಕಾದ ಪ್ರವಾಸಕ್ಕೆ ವ್ಯವಸ್ಥೆಮಾಡುವದು ಎಷ್ಟಾದರೂ ಕಷ್ಟದ ಕೆಲಸವೇನಲ್ಲ ; ಆದರೆ ನೀನು ನಮ್ಮೊಡನೆ ಇರಬೇಕೆಂದು ನಮ್ಮ ಇಚ್ಛೆ. ಅದು ಸ್ವಾರ್ಥಪೆನಿಸಬಹುದು ; ಆದರೆ, ನೀನೂ ಇಲ್ಲಿಯ ಜನರನ್ನು ಪ್ರೀತಿಸುತ್ತೀಯ. ನಿನ್ನ ದೈಹಿಕ ನಿಶ್ಶಕ್ತಿಗೆ ಇಂಡಿಯಾದ ಹವಾ ಗುಣವೇ ಕಾರಣವೆನ್ನುವದು ನಿಜವೆಂದು ನಿನಗೆ ನಿಶ್ಚಯವಿದೆಯೆ ? ಅಮೆರಿಕಾಕ್ಕೆ ಹಿಂದಿರುಗುವದರಿಂದ ಖಂಡಿತವಾಗಿಯೂ ನಿನಗೆ ಒಳ್ಳೆಯದಾಗುವದೆಂದು ತಿಳಿದಿದ್ದೀಯ ? ಹಾಗಿದ್ದರೆ ಇಲ್ಲಿ ನಿನ್ನನ್ನು ಇಟ್ಟು ಕೊಳ್ಳುವದಕ್ಕೆ ನಾವು ಯಾರೂ ಒತ್ತಾಯಪಡಿಸಕೂಡದು. ಕ್ಯಾಲಿಫೋರ್ನಿಯಾದಲ್ಲಿ ನೀನು ಸುಖವಾಗಿಹೋಗಿ ಸೇರುವದಕ್ಕೆ ನಾವೆಲ್ಲರೂ ಸಹಾಯ ಮಾಡಬೇಕು.

ಈ ಪತ್ರವು ನಿನಗೆ ಸೇರುವಾಗ ನೀನು ಆರೋಗ್ಯವಾಗಿರುತ್ತೀಯೆಂದು ನಂಬುತ್ತೇನೆ.

ನಿನ್ನ ಆತ್ಮ, ರಾಮ.

ಓಂ

೧೮

ಶಾಂತಿ ! ಆಶೀರ್ವಾದಗಳು ! ಪ್ರೇಮ ! ಸಂತೋಷ !

ಡಾರ್ಜೀಲಿಂಗ್
1–9–1905

ಅತ್ಯಂತ ಪ್ರಿಯ ಧನ್ಯ ದೇವಿ,

ಮುಸ್ಸೂರಿಯಿಂದ ಒಂದುಸಾವಿರ ಮೈಲಿ ದೂರದಲ್ಲಿ ಪರ್ವತಗಳ ಮೇಲೆ ರಾಮನಿದ್ದಾನೆಂದು ಪ್ರಾಯಶಃ ನಿನಗೆ ಆಗಲೇ ತಿಳಿದಿರಬಹುದು. ಬಂಗಾಳದ ಅರಣ್ಯದ ಅಧಿಕಾರಿಗಳಿಗೆ ಸೇರಿರುವ ಒಂದು ಹಳೆಯ ಮನೆಯಲ್ಲಿ ರಾಮನು ಒಬ್ಬನೇ ವಾಸಿಸುತ್ತಿದ್ದಾನೆ. ರೈಲ್ವೇ ಲೈನಿನಿಂದಲೂ ಪೋಸ್ಟಾಫೀಸಿನಿಂದಲೂ ದೂರದಲ್ಲಿ, ದರ್ಶನಾರ್ಥಿಗಳಿಗೂ ಭೇಟಿಗಾಗಿ ಬರತಕ್ಕವರಿಗೂ ಸಿಕ್ಕದಂತೆ, ಸಮೀಪದಲ್ಲಿರುವ

ಸುಂದರವಾದ ಝರಿಗಳಿಂದಲೂ ಚಿಲುಮೆಗಳಿಂದಲೂ ಪ್ರಪಂಚದಲ್ಲಿಯೇ ಅತ್ಯಂತ ಶ್ರೀಮಂತ ಮನೋಹರ ದೃಶ್ಯಗಳಲ್ಲಿ ಒಂದರಿಂದ ಸುತ್ತುವರಿಯಲ್ಪಟ್ಟಿದೆ. ಹವಾಮಾನವು ಚೆನ್ನಾಗಿದ್ದಾಗ ಪ್ರಪಂಚದಲ್ಲಿಯೇ ಅತ್ಯಂತ ಉನ್ನತ ಶಿಖರವಾದ ಕೈಲಾಸವನ್ನು ಅಲ್ಲಿಂದ ದೂರದಲ್ಲಿ ನೋಡಬಹುದಾಗಿತ್ತು. ಇಲ್ಲಿಯೂ ಕೂಡ ಅರಣ್ಯವಾಸಿಗಳಾದ ಗಿರಿಜನರು ರಾಮನಿಗೆ ಶುದ್ಧವಾದ ಹೊಸಹಾಲನ್ನು ತರುತ್ತಿದ್ದಾರೆ. ಅಡವಿಯಲ್ಲಿ ಅಡ್ಡಾಡುವದು ಮತ್ತು ವ್ಯಾಸಂಗ ಇವು ರಾಮನ ಹೊತ್ತನ್ನು ತುಂಬುತ್ತವೆ.

ಕಾನನದಲ್ಲಿರುವ ಮಾನವ ದೇವರನ್ನು ಕಾಣುತ್ತಿರುವಾಗ, ಹೆಸರು, ಕೀರ್ತಿ, ಐಶ್ವರ್ಯ, ಮಹತ್ವಾಕಾಂಕ್ಷೆ, ಸಾಧನೆಗಳು, ಸಿದ್ಧಿಗಳು ಇತ್ಯಾದಿಗಳಿಗೆಲ್ಲಾ ಏನು ಮಹತ್ವ ? ಮಾಡು, ಮಾಡು, ದುಡಿ ಎನ್ನುವ ಜ್ವರವನ್ನು ನಾವೇಕೆ ಹಿಡಿಸಿಕೊಳ್ಳಬೇಕು.

ನಾವೆಲ್ಲರೂ ದೈವೀ ಸ್ವಭಾವದವರೂ ದೇವರೂ ಆಗಿರೋಣ. ಮುಂಜಾನೆಯ ನಸುಗಾಳಿ ಬೀಸುತ್ತದೆ ; ಯಾವ ಬಗೆಯ, ಎಷ್ಟು ಹೂವುಗಳು ಅರಳುತ್ತವೆ ಎನ್ನುವ ಚಿಂತೆಯೇನೂ ಆ ಗಾಳಿಗಿಲ್ಲ. ಅರಳುವುದಕ್ಕೆ ತುಂಬಾ ಮಾಗಿದ ಮೊಗ್ಗುಗಳು ಕಣ್ಣು ತೆರೆಯುತ್ತವೆ. ನಮ್ಮಲ್ಲಿ ಪರಮಾತ್ಮ ಪ್ರಜ್ಞೆಯು ಇರುವದಾದರೆ ಸಿಂಹನ ಗುಹೆಗಳೂ ಉರಿಯುವ ಕಾಡೂ ಮಂಕಾದ ಕತ್ತಲೆಗವಿಗಳೂ ಭೂಕಂಪದ ಆಘಾತಗಳೂ ಬೀಳುವ ಬಂಡೆಗಳೂ ಬಿರುಗಾಳಿಗಳೂ ರಣರಂಗಗಳೂ ಬಾಯಿತೆರೆದ ಗೋರಿಗಳೂ ಅಡಂಬರ ಅಟ್ಟಹಾಸಗಳಿಗಿಂತಲೂ ಗೌರವ–ವೈಭವಗಳಿಗಿಂತಲೂ ಸಿಂಹಾಸನಗಳಿಗಿಂತಲೂ ಹೆಚ್ಚು ಮಧುರವಾಗಿರುತ್ತವೆ. ಒಳಗಿನ ಏಕಾಂತದಲ್ಲಿ ಅದ್ವಿತೀಯಬ್ರಹ್ಮನಲ್ಲಿ ಒಂದಾಗಿ ತಾನೇ ತಾನಾಗದ ಮೇಲೆ ಭೋಗ-ವೈಭವಗಳೆಲ್ಲಾ ವ್ಯರ್ಥವೇ! ಸರಿ ಆಹಾ ! ಪ್ರತಿಯೊಂದು ಹೆಜ್ಜೆಯನ್ನೂ ನಮ್ಮ ಗುರಿಯನ್ನಾಗಿ ಪ್ರತಿರಾತ್ರಿಯನ್ನೂ ದೇಹದ ಸಾವಿನ ಅನಂತರ ಪ್ರತಿ ಹಗಲನ್ನೂ ಹೊಸ ಜೀವನವನ್ನಾಗಿ ಮಾಡಿಕೊಳ್ಳುವ ಕೃತಕೃತ್ಯತೆಯ ಆನಂದವನ್ನು ಎಷ್ಟು ಹೇಳೋಣ !

ಓಂ ! ಆನಂದ ! ಆನಂದ !

ನಿನ್ನ ಆತ್ಮ, ರಾಮ.

ಓಂ !

೧೯

ಪ್ರಿಯ ಪೂರಣ,

ನಾವಿಬ್ಬರೂ ರಾಮನ ಶಿಷ್ಯರಾಗಿರುವದರಿಂದ ಈ ಅಮೂಲ್ಯವಾದ ಪತ್ರಗಳನ್ನು ನಿನಗೆ ಕಳಿಸುವದಕ್ಕೆ ಸಂತೋಷವಾಗುತ್ತದೆ. ಓ ಭಾರತ ಮಾತೆ, ನಿನಗಾಗಿ ನನ್ನ ಹೃದಯವು ಚಿಮ್ಮಿ ಬರುತ್ತದೆ. ನನ್ನ ಮಮತೆಯ ಮಕ್ಕಳೆ, ಸೂರ್ಯಾನಂದಳನ್ನು ಮರೆಯಬೇಡಿ

ಆಧುನಿಕ ಋಷಿಯ ಶಿಷ್ಯನು ನಿನ್ನನ್ನು ಎಂದೂ ಮರೆಯಲಾರನು ನಾವು ನಮ್ಮ ಒಳಗಿನ ದನಿಯನ್ನು ಆಲಿಸೋಣ; ದೇವರನ್ನು ನೆನೆಯಲು ನಾಚಿಕೊಳ್ಳದಿರೋಣ. ದೇವರಿಂದಲೇ ನಾವು ಹುಟ್ಟಿರುವದರಿಂದ ನಾವು ಸ್ತ್ರೀ, ಪುರುಷ, ನಪುಂಸಕ ಯಾವದೂ ಅಲ್ಲ; 'ಅಹಮಸ್ಮಿ' ಎನ್ನುವದರಲ್ಲಿ ನಾವು ಒಂದಾಗಿದ್ದೇವೆ, ಆದ್ದರಿಂದ ಆ ದೇವರ ಹೆಸರಿನಿಂದಲೇ ನಮ್ಮನ್ನು ನಾವು ಕರೆದುಕೊಳ್ಳೋಣ.

ವ್ಯಕ್ತಿತ್ವವನ್ನು ನೋಡದೆ ಬಿಟ್ಟಿರುವವರು ಇರುವಿಕೆಯ ಅನಂತತೆಯನ್ನು ಅರಿಯಬಲ್ಲರು. ಸಂಕುಚಿತ ಮನಸ್ಸಿನವರು 'ಇವರು ನಮ್ಮ ಕುಲದವರೆ'? ಎಂದು ಕೇಳುತ್ತಾರೆ. ಆದರೆ ದ್ವಿಜರು ಅಥವಾ ಸತ್ಯಸಂಜಾತರು ಉದಾತ್ತಭಾವ ಉಳ್ಳವರು. ಇಡಿಯ ವಿಶ್ವವೇ ಒಂದು ಕುಟುಂಬವಾಗಿದೆ.

ಪ್ರಕಾಶವೂ ಪ್ರೇಮವೂ ಒಂದೇ. ನೀನು ಸ್ವಯಂಪ್ರಕಾಶರೂಪ.

'ದ್ವೇಷವು ಜಗಳವನ್ನೂ ಹೋರಾಟವನ್ನೂ ಕೆರಳಿಸುತ್ತದೆ. ಆದರೆ ಪ್ರೇಮವು ಎಲ್ಲಾ ಪಾಪಗಳನ್ನೂ ಮುಚ್ಚುತ್ತದೆ'

ಮನುಷ್ಯನ ಹೃದಯವು ತನ್ನ ಹಾದಿಯನ್ನು ಬಯಸುತ್ತದೆ; ಆದರೆ ಪರಮೇಶ್ವರನು ಅವನ ಹೆಜ್ಜೆಯನ್ನು ನಿರ್ದೇಶಿಸುತ್ತಾನೆ.

ಪ್ರಿಯ ಪೂರಣ, ನೀನು ಇಚ್ಛಿಸುವದನ್ನೆಲ್ಲಾ ಪ್ರಕಟಿಸುವದಕ್ಕೆ ಅವಶ್ಯವಾದ ಹಣವನ್ನು ಇದರ ಜೊತೆಗೆ ಕಳಿಸಿಕೊಡಬಹುದಾಗಿತ್ತೆಂದು ಬಯಸುತ್ತೇನೆ. ಈ

ಪತ್ರವು ನಿನಗೆ ತಲ್ಪಿತೋ ಇಲ್ಲವೋ ಎನ್ನುವದನ್ನು ತಿಳಿಯಬೇಕಾಗಿರುವದರಿಂದ, ಇದಕ್ಕೆ ನೀನು ಉತ್ತರ ಬರೆಯುವದನ್ನು ವಿಳಂಬಮಾಡುವದಿಲ್ಲವೆಂದು ಭಾವಿಸುತ್ತೇನೆ.

ನಿನ ತಾಯಿಗೂ ಪತ್ನಿಗೂ ಪ್ರೀತಿಯ ನೆನಪುಗಳು. ನನ್ನನ್ನು ವಿಚಾರಿಸಿ ಕೊಳ್ಳುವವರಿಗೆಲ್ಲಾ ದಯವಿಟ್ಟು ನನ್ನ ನೆನಪು ಕೊಡು. ಶ್ರೀ ಜ್ಯೋತಿಸ್ವರೂಪರಿಂದ ಯಾವ ಉತ್ತರವೂ ಇಲ್ಲವಾದ್ದರಿಂದ ಎರಡು ಪತ್ರಗಳನ್ನು ಬರೆದಿದ್ದೇನೆ. ಸ್ವಾಮಿ ಶಿವಗಣಾಚಾರ್ಯರು ಏನಾದರು ? ಅವರು ಇನ್ನೂ ಮಥುರೆಯಲ್ಲಿಯೋ ಇದ್ದಾರೆಯೆ ತಿಳಿಸು. ಪ್ರಿಯ ರಾಮರ ಕುಟುಂಬದವರನ್ನು ಕಂಡರೆ, ಅಥವಾ ಅವರಿಗೆ ತಿಳಿಸುವ ದಾದರೆ ನನ್ನ ಪ್ರೀತಿಯ ನೆನಪುಗಳನ್ನು ಹೇಳಿ ಕಳಿಸು. ಸತ್ಯಪ್ರೇಮ–ದಿವ್ಯಗಳ ಸಾಮ್ರಾಜ್ಯದಲ್ಲಿ ನಾವೆಲ್ಲರೂ ಒಂದೇ ಎನ್ನುವದನ್ನು ನೀನು ಅರಿತಿರು. ಓಂ ! ಓಂ ! ಓಂ ! ಎಂದೂ ಎಂದೆಂದೂ ಎಲ್ಲರ ವಾತಿ.

ವಿಳಾಸ :

M ಲಾಸ್ ಏಂಜಲೆಸ್ ಕ್ಯಾಲಿಫೋರ್ನಿಯಾ, ಅಮೆರಿಕಾ.

## National Anthem ರಾಷ್ಟ್ರಗೀತೆ

ದೇವರು ಅನುಗ್ರಹಿಸಲಿ ನಮ್ಮ ಪ್ರಾಚೀನ ಹಿಂದೂ ದೇಶವನು,
ಪ್ರಾಚೀನ ಹಿಂದೂ ದೇಶವನು, ಒಮ್ಮೆ ವೈಭವೋಪೇತವಾಗಿದ್ದ ದೇಶವನು.
ಸಾಗರದ್ವೀಪದಿಂ ಹಿಂಧುವಿನ ವರೆಗಿದ್ದ ದೇಶವನು,
ಎಂದೆಂದು ಶಾಂತಿಯೂ ಪ್ರಭುತ್ವನಡೆಸಲಿ ಅಲ್ಲಿ ನೀಡುತೆ ಸುಖವನ್ನು,
ದೇವನನುಗ್ರಹಿಸಲಿ ನಮ್ಮ ಶಾಂತ ಹಿಂದೂ ದೇಶವನು.

೨

ಆಕೆಯ ಪುತ್ರರೆಲ್ಲರು ಪ್ರೇಮದಲಿ ಕೂಡಲಿ,
ತಮ್ಮ ತಮ್ಮ ಧರ್ಮಗಳನವರು ಸರಿಯಾಗಿ ಆಚರಿಸಲಿ,
ಎಂದೆಂದು ನಿಜವಾದ ಜ್ಞಾನದಿಂದವರು ತುಂಬಿರಲಿ,
ಅವರ ಸದ್ಗುಣಗಳೆಲ್ಲವು ಹೊಸಹೊಸದಾಗಿ ಹೊಳೆಯಲಿ.

೩

ನಿಮ್ಮ ಸಹಾಯವನು ಆ ದೇಶ ಬೇಡುವದು,
ಓ ಅಮೆರಿಕೆ, ಮತ್ತೊಮ್ಮೆ ಆಕೆಯ ಪ್ರಾರ್ಥನೆಯನಾಲಿಸುವದು,
ಆಕೆಯ ರಾಷ್ಟ್ರೀಯ ಮನೋಭಾವ ಬಿಡದೆ ಸುರಿಯುವದು,
ಕಡಲಿಂದ ಕಡಲಿಗೂ ಆಕೆಯ ಕೀರ್ತಿಯನು ಬೆಳೆಸುವದು,
ಒಮ್ಮೆ ಸಮರ್ಥವಾಗಿರ್ದ ಹಿಂದೂ ದೇಶವನು ದೇವರನುಗ್ರಹಿಸುವದು

೪

ಅವರ್ಣನೀಯ ಮಹಾಕಾರ್ಯಗಳ ಓ, ಕೃಷ್ಣ ಪರಮಾತ್ಮ,
ಧೀರ ಗಂಭೀರ ಮಹಾಮಹಿಮ ಓ, ರಾಮ ಧರ್ಮಾತ್ಮ,
ದುರ್ದಿನಗಳಲಿ ಆ ಜನರ ನಿಮ್ಮವರ ಕೈಯ್ಯ ಬಿಡಬೇಡಿ
ಬಹುರೀತಿಯಲಿ ಅಯೋಗ್ಯರೆನಿಸಿದರು ದಯದಿಂದವರ ಕಾಪಾಡಿ.
ಅಸಹಾಯರಾಗಿರುವ ನಮ್ಮ ಹಿಂದುಗಳ ದೇವರನುಗ್ರಹಿಸಲಿ !

—ರಾಮಪ್ರೇಮಿ.

ಸ್ವಾಮಿ ರಾಮ ಅಮೆರಿಕೆಯಿಂದ ಭಾರತಕ್ಕೆ ಹಿಂದಿರುಗುವಾಗ ಅದಕ್ಕಾಗಿ ಅಮೆರಿಕಾದಲ್ಲಿ ಏರ್ಪಡಿಸಿದ್ದ ಸತ್ಕಾರ ಸಮಾರಂಭದಲ್ಲಿ ಈ ಮುಂದಿನ ಪದ್ಯವನು ಹಾಡಿದರು

ಪೀತದಾರು ಮರದಡಿಯ ಸುವರ್ಣ ಪಕ್ಷಿಯೊಲು
ರಾಮನುಚ್ಚರಿಸುವನೆಮಗೆ ದಿವ್ಯ ಮಂತ್ರಗಳ
ಪೌರ್ವಾತ್ಯಶಾಸ್ತ್ರಗಳಲಿ ಶ್ರೀಮಂತ ನಿಷ್ಣಾತ,
ಎಮ್ಮ ಪಾಶ್ಚಾತ್ತ್ಯ ದೇಶಗಳಲಿ ಬಿತ್ತರಿಪನಾತ,
ಹಾರಿಹಿಡಿದು ಹಾರಾಡುತಿಪ ಪಕ್ಷಿಯಾತ,
ದೇವಸಂ ತರುತಿಹನು ಸಂದೇಶವನು ದೇವದೂತ,
ಎಲ್ಲ, ಎಲ್ಲ ದೇವರಿಗಾಗಿ ದೇವರೆಲ್ಲರಿಗಾಗಿ
ಇದೆ ಅವನ ಸ್ಪಷ್ಟ ಅನುರಣಿತ ಕರೆ ಜನತೆಗಾಗಿ.
ಸಂದೇಶಹೀಯುತ್ತ ಇವ ದೂರಕ್ಕೆ ಹಾರುವನು
ವೇಗಗಾಮಿಯಹ ಉಲ್ಕಾಪಾತದೊಲವನು,

ಆದೊಡಾ ಸ್ವರ್ಗವಕ್ಕಿಯು ಸೆಲೆಯು ಬಿಟ್ಟಿಹನು —
ತನ್ನ ಕುಲಕೆಲ್ಲ ನೂತನ ಜಾತ ಪ್ರೀತಿಯನು.
ನಮಸ್ತೇ ! ಮಧುರ ಮಯ ರಾಮ, ನಿನ್ನಾ ಬೆಳಕಸೂಸುವ ನಗೆಯು,
ಎಲ್ಲರನು ಮುಗ್ಧರನು ಮಾಡುವಾ ಸಂತೋಷದಾ ಸಿರಿಯು,
ಸಂತತವು ಮಾರ್ಪಡುವ ಈ ಭೂಮಿಯಾ ಮೇಲೆ,
ಸೇರದಿದ್ದರು ನಾವು ಮತ್ತೊಮ್ಮೆ ನಾಳೆ,
ಸ್ವಾಮಿದೇವನೆ ತಮಗೆ ಸಕಲ ಶುಭಮಕ್ಕೆ,
ಪ್ರೇಮಿರಾಮನೆ ತಮ್ಮೊಳಗೆ ದೇವರೂ ದೇವರಲಿ ತಾವೂ ಇರುವ ಪುಣ್ಯಕ್ಕೆ.

ಓಂ ! ಓಂ ! ಓಂ !

## Letters to Mrs. Pauline Whitman
(ಕಮಲಾನಂದ)

ಶ್ರೀಮತೀ ಪೌಲಿನ್ ವ್ಹಿತ್‌ಮನ್ (ಕಮಲಾನಂದ) ಇವರಿಗೆ
ಬರೆದಿರುವ ಪತ್ರಗಳು.

ಓಂ !

ಶಸ್ತ್ರಸ್ಪ್ರಿಂಗ್ಸ್, ತಾ 22-7 1903

ಪ್ರಿಯ ಪುಣ್ಯ ಚಂಪ (ಫ್ಲೋರಾ)

ಹೀಗೆ ಸಂಬೋಧಿಸಲ್ಪಡುವದು ನಿನಗೆ ಇಷ್ಟವಿಲ್ಲದೇ ಇರಬಹುದು. ನಿನಗೆ ಪ್ರಿಯವಾಗಲೀ, ಅಪ್ರಿಯವಾಗಲಿ ಈ ಹೆಸರಿನಿಂದಲೇ ನಿನ್ನನ್ನು ಕರೆಯಬೇಕೆಂದು ರಾಮನಿಗೆ ಪ್ರೀತಿಯು ಒಲವುಂಟಾಗಿದೆ. ಹಿಂದೂಗಳ ಭಾಷೆಯಲ್ಲಿ ಪ್ರತಿಯೊಂದು ಹೆಸರಿಗೂ ಗಮನಾರ್ಹವಾದ ಮಹತ್ವವಿದೆ. ಉದಾತ್ತ ಮತ್ತು ಉನ್ನತ ಕುಲೀನ ಕುಟುಂಬಗಳ ಬಾಲಕಿಯರನ್ನು ಚಂಪ ಎನ್ನುವ ಹೆಸರಿನಿಂದ ಕರೆಯುವ ವಾಡಿಕೆಯಿದೆ. ಚಂಪ ಎಂದರೆ ಮಧುರಗಂಧವುಳ್ಳ, ಪೂರ್ಣಪ್ರಫುಲ್ಲಿತವಾದ (ಸಂಪಿಗೆ ಹೂವು ಎಂದಾಗ ಬಹುದು, ಅಥವಾ) ಬಿಳಿ ಜಾಜಿ-ಮಲ್ಲಿಕಾ ಎಂದಾಗುತ್ತದೆ.

ಈ ಪತ್ರವನ್ನು ಬರೆಯುವದಕ್ಕೆ ಲೇಖನಿಯನ್ನು ತೆಗೆದುಕೊಂಡು ಪ್ರಾರಂಭಿಸಿದಾಗ 'ಚಂಪ' ಎನ್ನುವ ಈ ಮುದ್ದಾದ ಹೆಸರು ಸ್ವಾಭಾವಿಕವಾಗಿ ತಾನಾಗಿಯೇ ರಾಮನ ಮನಸ್ಸಿಗೆ ಹೊಳೆಯಿತು. ಇದನ್ನು Champa ಅಥವಾ Chumpa ಎಂದು ಬರೆಯಬಹುದು.

ಹಿಂದೊಂದು ದಿನ, ನಿನ್ನ ಎಲ್ಲಾ ಪ್ರಶ್ನೆಗಳಿಗೂ ಉತ್ತರವಾಗಿ ಒಂದು ದೀರ್ಘವಾದ ಪತ್ರವನ್ನು ಕಮಲಾಗೆ (ಪೌಲಿನ್‌ಗೆ) ಹೇಳಿ ಬರೆಸಿದೆ. ಆಕೆಯಿಂದ ನಿನಗೆ ಆ ಪತ್ರವು ಕೈಸೇರಿತೆ ? ಅದರಲ್ಲಿ ಇತ್ತೀಚೆಗೆ ರಾಮನು ರಚಿಸಿದ್ದ ಕೆಲವು ಪದ್ಯಗಳೂ ಇದ್ದವು.

## ವೇದಾಂತದ ನಿರ್ದೇಶನಗಳು

1. ವೇದಾಂತ ಧರ್ಮದ ತತ್ತ್ವವನ್ನು ಒಂದೇ ಒಂದು ಆದೇಶದಲ್ಲಿ ಸಂಗ್ರಹ ಮಾಡಬಹುದು—

ರೋಗ, ಮರಣ, ಹಸಿವು, ಅಪವಾದ, ಏನಾದರೂ ಬರಲಿ, ನಿಮ್ಮನ್ನು ನೀವು ಪೂರ್ಣ ಸ್ವಸ್ಥತೆಯಲ್ಲಿಯೂ ಸಂಪೂರ್ಣ ಸಂತೋಷಸ್ಥಿತಿಯಲ್ಲಿಯೂ ನೆಲೆಗೊಂಡಿರಬೇಕು.

ದಿವ್ಯವಾದ, ಆನಂದಸ್ವಭಾವವೇ ನಿಮ್ಮ ಸ್ವರೂಪವಾಗಿರುವದರಿಂದ ಅದನ್ನು ಮರೆಯದಂತೆ, ಅದರ ಆಧಾರದ ಮೇಲೆ ಸಂತತ ಸಂತೋಷವಾಗಿಯೂ ಶಾಂತವಾಗಿಯೂ ನೀವು ಇರಬೇಕು.

2. ನಿಮ್ಮ ನಿಜಾತ್ಮನ ರಾಜಯೋಗ್ಯ ಪ್ರಭುತ್ವವನ್ನು ಸ್ಥಾಪಿಸಬೇಕೆಂದಿದ್ದರೆ ಈ ಪ್ರಪಂಚವೂ ಇದರಲ್ಲಿರುವ ಜನರೂ ಅವರ ಬಾಂಧವ್ಯವೂ ಕಣ್ಮರೆಯಾಗುವ ಮಿಥ್ಯಾ ವಸ್ತುಗಳೆಂದು ನಿಶ್ಚಯಿಸಬೇಕು.

ತನಿಖೆಮಾಡು, ಲಕ್ಷ್ಯವಿಟ್ಟು ನೋಡು, ಕಾದು ನೋಡು, ಅಥವಾ ಏನಾದರೂ ಮಾಡು ; ಆದರೆ ಎಲ್ಲವನ್ನೂ ನಿಜವಾದ ಆತ್ಮನ ಬೆಳಕಿನಲ್ಲಿ ಮಾಡಬೇಕು : ನಿಮ್ಮ ಆತ್ಮನು ಇವೆಲ್ಲವನ್ನೂ ಕಾಮವನ್ನೂ ಮೀರಿದ್ದಾನೆಂಬುದನ್ನು ಮರೆಯಬಾರದು.

ನಿಮಗೆ ನಿಜವಾಗಿ ಯಾವುದರ ಆವಶ್ಯಕತೆಯೂ ಇಲ್ಲ, ಹೀಗಿರುವಾಗ ಯಾವ ಬಯಕೆಯಾದರೂ ನಿಮಗೇಕೆ ಉಂಟಾಗಬೇಕು ? ಸಂತೋಷಾರ್ಥವಾಗಿ ಆದರೂ ತಮಾಷೆಗಾಗಿ ಆದರೂ ಕೇವಲ ವಿನೋದಕ್ಕಾಗಿ ಆದರೂ ವಿಶ್ವಪ್ರಭುವಿನ ದಯೆಯಿಂದ ನಿಮ್ಮ ಕೆಲಸವನ್ನು ನೀವು ಮಾಡಿ. ಏನಾದರೂ ಬೇಕೆಂದು ನೀವು ಎಂದೆಂದೂ ಬಯಸಬಾರದು.

3 ಈ ವೇದಾಂತ ತತ್ತ್ವಗಳನ್ನು ನೀವು ಜೀವನದಲ್ಲಿ ಅಳವಡಿಸಿಕೊಂಡರೆ, ಸತ್ಯ-ಧರ್ಮಗಳ ಮಧುರಸುಗಂಧವು ತಾನಾಗಿಯೇ ನಿಮ್ಮಿಂದ ಎಲ್ಲಾ ದಿಕ್ಕುಗಳಿಗೂ ಪ್ರಸರಿಸುತ್ತದೆ.

ಪ್ರತಿ ರಾತ್ರಿಯಾಗಲೀ ಮಧ್ಯಾಹ್ನವಾಗಲೀ ನಿದ್ರೆ, ಮಾಡುವದಕ್ಕಾಗಿ ಕಣ್ಣು ಮುಚ್ಚುವದಕ್ಕೆ ಮುಂಚೆ, 'ಪವಿತ್ರವಾದ ಮೇಲೆ ವೇದಾಂತ ಸತ್ಯದ ಸಾಕ್ಷಾತ್ ಮೂರ್ತಿಯೇ ನಾನಾಗಿರುತ್ತೇನೆ' ಎಂದು ನಿಮ್ಮ ಮನಸ್ಸಿನಲ್ಲಿ ದೃಢವಾದ ನಿರ್ಧಾರಮಾಡಿ.

ನಿಮಗೆ ಸಾಧ್ಯವಾದಾಗಲೆಲ್ಲಾ ನಿಮ್ಮಷ್ಟಕ್ಕೆ ನೀವು ಓಂಕಾರವನ್ನು ಉಚ್ಚರಿಸುತ್ತಿರಿ.

ಹೀಗೆ ಸಾಧನೆಮಾಡಿದರೆ, ನೈಜವಾದ ಚಂಪಾಕುಸುಮದಂತೆ ನಿನ್ನ ಸುತ್ತಲೂ ಸರ್ವಕಾಲದಲ್ಲಿಯೂ ಮಧುರ ಸುಗಂಧವನ್ನೂ ಆಕರ್ಷಕವಾದ ಮಹಿಮೆಯನ್ನೂ ನೀನು ಹೊರಸೂಸುತ್ತಿರುತ್ತಿ.

ಕಮಲಾಗೆ; ನೆನಪಿಟ್ಟುಕೊಳ್ಳಬೇಕಾದ ಟಿಪ್ಪಣಿಗಳು.

ಶ್ರೀಮಂತರು ಕೂಡ ನಮ್ಮ ಎದುರಿನಲ್ಲಿ ತಮ್ಮ ದಾರಿದ್ರ್ಯವನ್ನು ಮನಗಂಡು ಕೊಂಡು, ತಮ್ಮ ಆಸ್ತಿ, ಪಾಸ್ತಿ, ಐಶ್ವರ್ಯಗಳ ಭಾವನೆಯನ್ನು ಮೀರಿ ಮೇಲೇರುವಷ್ಟು, ನಾವು ನಮ್ಮ ಜ್ಞಾನಾನಂದ ಸಮೃದ್ಧಿಯ ಸಂಪತ್ತನ್ನು ಇಲ್ಲಿಯೇ ಈಗಲೇ ಅನುಭವಮಾಡುವದೊಂದೇ ವೇದಾಂತದ ಸಮಾಜವಾದವನ್ನು ರೂಢಿಯಲ್ಲಿ ತರುವ ನಿಜವಾದ ರೀತಿ. ಸಾಗರದ ತುಂತುರಿನ ಹನಿಯಷ್ಟು ಐಶ್ವರ್ಯವನ್ನು ಪಡೆದಿರುವ ಶ್ರೀಮಂತರೆನಿಸಿಕೊಂಡವರ ಐಶ್ವರ್ಯಾಭಿಮಾನದ ಭಾರಕ್ಕಾಗಿ ಕನಿಕರಪಡದೆ,

ಅಸೂಯೆಪಡುವದೇ ವರ್ತಮಾನ ಕಾಲದ ಸಮಾಜವಾದಿಗಳು ಮಾಡುತ್ತಿರುವ ಅತ್ಯಂತ ದೊಡ್ಡ ತಪ್ಪು.

ಉಜ್ಜ್ವಲ ನಕ್ಷತ್ರಗಳಿಂದ ಪ್ರಕಾಶಮಾನವಾದ ಅಂತರಿಕ್ಷದಲ್ಲಿ ಥಳಥಳಿಸುತ್ತಿರುವ ವಜ್ರಗಳನ್ನು ನೋಡಿ ಸಂತೋಷಪಡಬಲ್ಲ ಮನೋಭಾವವುಳ್ಳವರು, ನಗುನಗುತ್ತಿರುವ ಅರಣ್ಯಗಳನ್ನೂ ನಲಿಯುತ್ತಿರುವ ನದಿಗಳನ್ನೂ ನೋಡಿ ಹೇರಳವಾದ ಆನಂದವನ್ನು ಪಡೆಯಬಹುದು, ತಂಗಾಳಿಯಿಂದಲೂ ಸೂರ್ಯ ಪ್ರಭೆಯಿಂದಲೂ ಚಂದ್ರ ಕಾಂತಿಯಿಂದಲೂ ಪ್ರಕೃತಿಮಾತೆಯು ಸರ್ವರಿಗೂ ಉಚಿತವಾದ ಸುಖಭೋಗವನ್ನು ಕೊಡುತ್ತಿದ್ದಾಳೆ.

ತಮ್ಮ ಸುಖವು ವಿಶಿಷ್ಟವಾದ ಪರಿಸ್ಥಿತಿಯನ್ನು ಅವಲಂಬಿಸಿದೆಯೆಂದು ನಂಬಿರತಕ್ಕವರು ತಮ್ಮ ಸುಖದ ದಿನಗಳು ಹಿಂದೆ ಸರಿಯುತ್ತಿರುವದನ್ನೂ ಆಗಾಗ ತೋರಿಹಾರುತ್ತಿರುವದನ್ನೂ ಕಾಣಬಹುದು ಪ್ರಾಪಂಚಿಕ ಸಂಪತ್ತೆನ್ನುವದು ಸುಖಕ್ಕೆ ಸಾಧನವಾಗುವದಕ್ಕೆ ಬದಲು ಸಕಲ ಪ್ರಕೃತಿಯ ಸ್ವರ್ಗೀಯ ಸೌಂದರ್ಯ ಸೌರಭ ಗಳನ್ನು ಮುಚ್ಚಿಡುವ ಕೃತಕವಾದ ಪರದೆಯಾಗುತ್ತದೆ

ಪುನಃ ಪುನಃ ಕೇಳುತ್ತಿದ್ದರೆ, ಎಲ್ಲಾ ಬಗೆಯ ಕೃತಕ ಸಂಗೀತಗಳೂ-ಅವರಲ್ಲಿಯೂ ಗ್ರಾಮೊಫೋನ್ ಸಂಗೀತವು-ಕಿವಿಗಳ ಮೇಲೆ ಜಾರಿಹೋಗುತ್ತವೆ, ಮತ್ತು ಸಹಜವಾದ ಭಾವೋನ್ನತಿಯನ್ನು ಪ್ರೇರಿಸಲಾರದೆ ಆತ್ಮನನ್ನು ಭೌತಿಕ ಭೂಮಿಕೆಗೆ ಜಾರಿಸುತ್ತದೆ.

ಕಲ್ಲು ಹರಳುಗಳನ್ನೂ ಮಣ್ಣುಹೆಂಟೆಗಳನ್ನೂ ಸಮವಾಗಿ ಹಂಚುವದಕ್ಕಾಗಿ ನಾವೇಕೆ ಜಗಳವಾಡಬೇಕು ?

ಐಶ್ವರ್ಯವೆನ್ನುವ ರೋಗವನ್ನು ತಾವೊಬ್ಬರೇ ಹೊಂದಿರಬೇಕೆಂಬ ಭ್ರಮೆ ಯಲ್ಲಿ ಬಿದ್ದು ತಮ್ಮನ್ನು ತಾವು ಮುಟ್ಠಾಳರನ್ನಾಗಿ ಮಾಡಿಕೊಳ್ಳುತ್ತಿರುವ ಶ್ರೀಮಂತ ರೆನ್ನಿಸಿಕೊಂಡಿರುವ ಜನರ (ಆತ್ಮವಂಚನೆ ಮಾಡಿಕೊಳ್ಳುವ) ಸ್ವಾತಂತ್ರ್ಯವನ್ನು ಕಮುಲ್ ಅವರಿಂದ ಕಸಿದುಕೊಳ್ಳಬೇಕಾಗಿಲ್ಲ.

## ಹಿಮಾಲಯದ ಏಕಾಂತವಾಸ

(ಇನ್ನೂ ಕೆಲವು ವರ್ಷಗಳು ಮುಂದುವರಿಯಬೇಕಾಗಿದೆ)

ಈ ಉನ್ನತವಾದ ಏಕಾಂತದಲ್ಲಿ, ಆಳವಾದ ಧ್ಯಾನ, ವೇದಶಾಸ್ತ್ರಗಳ ವ್ಯಾಸಂಗ (ಸ್ವಾಧ್ಯಾಯ), ತತ್ತ್ವವಿಚಾರ ಮತ್ತು ಧರ್ಮಗಳ ಮೇಲೆ ಬರವಣಿಗೆ ಇವು ರಾಮನನ್ನು ಯಾವಾಗಲೂ ಉದ್ಯೋಗಶೀಲನನ್ನಾಗಿ ಮಾಡುತ್ತಿವೆ. ಇಲ್ಲಿಂದ ಎಂಟು ಮೈಲಿಗಳೊಳಗೆ ಯಾವ ಹಳ್ಳಿಯೂ ಇಲ್ಲ. ರಾಮನಿಗೆ ಅಡಿಗೆ ಮಾಡುವ ದಕ್ಕಾಗಿ ಒಬ್ಬ ಸೇವಕನು ಬೆಟ್ಟದ ಕೆಳಗೆ ಒಂದು ಮೈಲಿಯ ಮೇಲೆ ವಾಸಮಾಡು ತ್ತಾನೆ. ಹಲವು ತಿಂಗಳು ರಾಮನು ಯಾವ ಬಗೆಯ ಪತ್ರವನ್ನಾಗಲೀ ಉತ್ತರ ವನ್ನಾಗಲೀ ಬರೆಯದೆ, ಎಲ್ಲಾ ಪತ್ರ ವ್ಯವಹಾರಗಳನ್ನೂ ಬಿಟ್ಟುಬಿಟ್ಟಿದ್ದನು.

K. and O. (ಕಮಲಾ ಮತ್ತು ಓಂ) ಇಂಡಿಯಾದೇಶಕ್ಕೆ ಬರಲು ಆತುರಪಡಬೇಕಾಗಿಲ್ಲ.

ನಮ್ಮಲ್ಲಿ ಯಾವ ಅವಸರ ಅಸಮಾಧಾನಗಳೂ ಇಲ್ಲವಾದರೆ ಎಲ್ಲವೂ ಸಕಾಲದಲ್ಲಿ ಸುಂದರವಾಗಿ—ಸೊಗಸಾಗಿ—ಬಂದೊದಗುತ್ತವೆ. ನೀವು ದೇವರಾಗಿ ದೇವರಲ್ಲಿ ಮಾತ್ರ ವಾಸಮಾಡುತ್ತೀರಿ.

ಅತ್ಯಂತ ಪುಣ್ಯಶಾಲಿಗಳಾದ ಗಿರಿಜಾ ಮತ್ತು ಚಂಪಾ ಇವರಿಗೆ, ಶಾಂತಿ ಆಶೀರ್ವಾದಗಳು, ಸಂತೋಷ.

ರಾಮನ ಪುಣ್ಯವಂತ ಪ್ರಿಯಮಿತ್ರನೊಬ್ಬ ಅನುವಾದ ಮಾಡಿರುವ ಅಷ್ಟಾವಕ್ರ ಗೀತೆಯನ್ನು ಇದರ ಜೊತೆಗೆ ಪ್ರತ್ಯೇಕವಾಗಿ ಕಳಿಸಿದೆ.

1. ಅಹಂಕಾರ ಪೂರ್ವಕವಾದ ಮನೋಭಾವದಲ್ಲಿ ಏನನ್ನೂ ಮಾಡಬಾರದು.

2. ಈ ದೇಹ, ಇಂದ್ರಿಯಗಳು, ಮನಸ್ಸು ಮೊದಲಾದವು ಎಂದೂ ಇರಲೇ ಇಲ್ಲವೇನೋ ಎನ್ನುವಂತೆ ಜೀವಿಸಿರೋಣ.

3. ಯಾರಾದರೂ ನೋಡುತ್ತಾರೋ ಅಥವಾ ಉಸಿರಾಡುತ್ತಾರೋ ಅಥವಾ

ಹೇಳಿದ್ದನ್ನು ಕೇಳುತ್ತಾರೋ ತಿನ್ನುತ್ತಾರೋ ಅವರೆಲ್ಲರೂ ಎಲ್ಲ ವ್ಯವಹಾರವನ್ನೂ ನನ್ನ ಶಕ್ತಿಯಿಂದಲೇ ನಡೆಸುತ್ತಾರೆ, ಅದನ್ನು ಅವರು ತಿಳಿಯರು; ಆದರೂ ಅವರೆಲ್ಲಾ ನನ್ನ ವಶದಲ್ಲಿದ್ದಾರೆ. ಪ್ರತಿಯೊಬ್ಬರೂ ಎಲ್ಲರೂ ಇದನ್ನು ಕೇಳಿ; ಇದು ಬಹಳ ಸತ್ಯ; ಖಂಡಿತವಾಗಿಯೂ ಇದು ಹೀಗೆಯೇ ಸರಿ.

4. ಎಲ್ಲಾ ಲೋಕಗಳನ್ನೂ ಹಿಡಿದುಕೊಂಡು ಸ್ವರ್ಗವನ್ನೂ ಭೂಮಿಯನ್ನೂ ಅತಿಕ್ರಮಿಸಿ, ಗಾಳಿಬೀಸುವಂತೆ ಬೀಸುತ್ತೇನೆ ಸಮಸ್ತ ಶಕ್ತಿಯೂ ನಾನೇ.

5. ಅಪರಿಹಾರ್ಯವಾದ ನಿಯಮವೇ ನಾನು. ದಯಾದಾಕ್ಷಿಣ್ಯಶೂನ್ಯವಾದ ಕಠೋರ ಸತ್ಯವೇ ನಾನು. ದಿವ್ಯ ಜೀವನವನ್ನು ನಡೆಸಲಾರದ ಜನರನ್ನು ಪ್ರಕೃತಿಯ ಬಾಣವು ಇರಿಯಲೆಂದು ಆಕೆಯ ಬಿಲ್ಲನ್ನು ಆಕೆಗಾಗಿ ಬಗ್ಗಿಸುತ್ತೇನೆ.

ಸ್ವರ್ಗದ ಮೇಲಿರುವ ನನ್ನ ಆಧಿಪತ್ಯಕ್ಕಾಗಿ ಈ ಮಹಾಪೃಥ್ವಿಯನ್ನು ವಿಸ್ತರಿಸಿದ್ದೇನೆ

ಸಂಜೆಯ ಸಮಯದಲ್ಲಿ ಅರಣ್ಯದಿಂದ ಕೂಗುತ್ತಿರುವ ಹಸುಗಳು ಮನೆಗೆ ಬರುವಂತೆ ಮಾನವರ ಪ್ರಾರ್ಥನೆಗಳು ನನ್ನಲ್ಲಿಗೆ ಬರುತ್ತವೆ.

ನಿನ್ನ ಆತ್ಮ
ರಾಮಸ್ವಾಮಿ.

ಓಂ।

೩

ಶಸ್ತ ಸ್ಪ್ರಿಂಗ್ಸ್ ತಾ 15-9-1903

ಅತ್ಯಂತ ಪ್ರಿಯ "ಒಳ್ಳೆಯ ಹುಡುಗ"
ಅಥವಾ ಅತ್ಯಂತ ಮಧುರ ಮಗು ಕಮಲಾ,

ನೀನು ಪರಿಶುದ್ಧಳೂ ನಿರ್ದೋಷಿಯೂ ಪವಿತ್ರಗಳಿಗೆಲ್ಲಾ ಪವಿತ್ರವೂ ಆಗಿದ್ದಿ.

ನಿನ್ನಲ್ಲಿ ಯಾವ ಕಳಂಕವೂ ನಿಂದೆಯೂ ಪ್ರಾಪಂಚಿಕವಾದ ಯಾವ ಕಲೆಯೂ ಮಾಲಿನ್ಯದ ಸೋಂಕೂ ಭಯವೂ ಪಾಪವೂ ಇಲ್ಲ. ಮುದ್ದು ಅಣುಗಿ, ಪ್ರಿಯತಮ-ವತ್ಸೆ, ನೀನು ಹಾಗಿಲ್ಲವೆ ?

ನಿನಗೆ ತೊಂದರೆಯಾಗದಿದ್ದರೆ, ಈ ಮುಂದಿನ ಭಾವನೆಗಳನ್ನು ನೀನು ಕವಿತೆಯ ರೂಪದಲ್ಲಿ ರಚಿಸಬಹುದು. ಹಾಗೆ ಮಾಡುವ ಪ್ರಯತ್ನವು ನಿನ್ನನ್ನು ದಿವ್ಯ ಭಾವದ ಔನ್ನತ್ಯದಲ್ಲಿ ಇಟ್ಟಿರುತ್ತದೆ.

ರಾಮನು ಇವತ್ತು ಬೆಳಿಗ್ಗೆ ಬರೆದ ಒಂದು ಪರ್ಷಿಯನ್ ಕವಿತೆಯಿಂದ ಇವುಗಳನ್ನು ಅನುವಾದಮಾಡಿದೆ. ನೀನು ಫ್ರೋಟರ್‌ಲ್ಯಾಂಡ್ ಅಥವಾ ಡೆನ್ವರ್‌ನಲ್ಲಿ ಇರುವಾಗ ಈ ಭಾವನೆಗಳನ್ನು ಪದ್ಯರೂಪದಲ್ಲಿ ಹೆಣೆಯಬಹುದು. ನಿನಗೆ ಅನುಕೂಲವಿದ್ದ ಹಾಗೆ ಮಾಡಬಹುದು.

ಈ ಭಾವನೆಗಳನ್ನು ನೀನು ಮಾರ್ಪಡಿಸುವುದಕ್ಕೂ ನಿನಗೆ ಅಧಿಕಾರವಿದೆ.

1. ಆನಂದಾವೇಶದ ಸಾಗರವೇ, ಅತ್ಯುಗ್ರವಾಗಿ ಘೋರ್ಗರೆ, ಪ್ರಕ್ಷುಬ್ಧವಾಗಿ ಉಕ್ಕೇರಿ, ಹುಚ್ಚೆದ್ದು ಕಲ್ಲೋಲವಾಗು, ಸ್ವರ್ಗ ಮರ್ತ್ಯಗಳನ್ನು ಮುಳುಗಿಸಿ ಪ್ರಳಯಮಾಡು. ಎಲ್ಲಾ ಆಲೋಚನೆಗಳನ್ನೂ ಭಾವನೆಗಳನ್ನೂ ವಿಚಾರಗಳನ್ನೂ ಚಿಂತೆಗಳನ್ನೂ ಆಳವಾಗಿ ಮುಳುಗಿಸಿ, ಧ್ವಂಸಮಾಡಿ, ತೂರಿ ಬಿಸು, ಓ! ಇವು ಗಳನ್ನೆಲ್ಲಾ ಕಟ್ಟಿಕೊಂಡು ನನಗೇನು ?

2. ಬಾ, ಬಾ, ಇನ್ನೂ ಆಳವಾಗಿ ಕುಡಿಯೋಣ, ಹೆಚ್ಚು ಆಳವಾಗಿ ಹೀರೋಣ. ಓ! ಪ್ರಜ್ಞೆ ತಪ್ಪುವಷ್ಟು ಕುಡಿದು ನಮಗೆ ಈಗಲೇ ಅಮಲೇರಿದೆ. ಭೇದ ಭಾವದ ಕಳೆಯನ್ನು ಕಿತ್ತು ಹಾಕಿ, ಪರಿಮಿತದ ಇರುವಿಕೆಯ ಗೋಡೆಗಳನ್ನು ಒಡೆದು ಕೆಡವಿ, ಮುಚ್ಚು ಮರೆ ಇಲ್ಲದ ಆನಂದವನ್ನು ಬಿಚ್ಚಿ ಬೀರೋಣ.

3. ಬಾ, ದೈವೀ ಹುಚ್ಚೇ; ಬೇಗ ಓಡಿಬಾ, ತೀಕ್ಷ್ಣವಾಗಿ ನೋಡು, ತಡಮಾಡಬೇಡ! ಈ ಮಾಂಸಮಯ ದೇಹದ ಸಂಗವು ನನಗೆ ಸಾಕಾಗಿದೆ; ಬೇಸರ ವಾಗಿದೆ; ಓ! ಈ ಮನಸ್ಸು ಮುಳುಗಲಿ, ನಿನ್ನಲ್ಲಿ ಮುಳುಗಲಿ. ಸುಟ್ಟು ಹಾಕುತ್ತಿರುವ ಈ ಅಭಿಮಾನದ ಬೆಂಕಿಯೊಲೆಯಿಂದ ತಡಮಾಡದೆ ರಕ್ಷಿಸು.

4 ನಾನು, ನೀನು ; ನನ್ನದು, ನಿನ್ನದು, ಈ ಭಾವನೆಗಳನ್ನು ಸುಟ್ಟುಹಾಕು. ಭಯವನ್ನೂ ಭರವಸೆಯನ್ನೂ ಗಾಳಿಗೆ ತೂರು ; ಭೇದಭಾವನೆಯನ್ನು ತೊಡೆದು ಹಾಕು. ಪಾದದಿಂದ ತಲೆಯನ್ನು ಬೇರೆಯೆಂದು ತಿಳಿಯದಿರಲಿ.

5. ಓ ಪ್ರೇಮದ ಅಮೂಲ್ಯವಾದ ಶೋಷಕ ದಾಹವೆ! ರೊಟ್ಟಿಯನ್ನಾಗಲೀ ನೀರನ್ನಾಗಲೀ ರಕ್ಷಣೆಯನ್ನಾಗಲೀ ವಿಶ್ರಾಂತಿಯನ್ನಾಗಲೀ ನೀಡುವದು ಬೇಡ. ಇಂಥಾ ಲಕ್ಷಾಂತರ ದೋಷಗಳ ನಾಶಕ್ಕೆ, ಓ ಪ್ರೇಮ, ನೀನೊಂದೆ ಇದ್ದರೆ ಸಾಕು ; ಉತ್ತಮ ಪರಿಹಾರ.

ನಿನ್ನ ಆತ್ಮ,
ರಾಮ

ಓಂ

೩

ಪುಷ್ಕರ, 22–2–1905

ಅತ್ಯಂತ ಪುಣ್ಯಶಾಲಿಯಾದ ಪ್ರಿಯ ದೇವತೆಯೆ,

ರಾಮನಿರುವಲ್ಲಿ ಎಂಥ ಸವ್ಯವಾದ ಹವೆ ಇದೆ! ಪ್ರತಿ ದಿನದ ಹಗಲೂ ಯುಗಾದಿ, ರಾತ್ರಿಯೂ ದೀಪಾವಳಿ. ನೀಲಾಕಾಶವೇ ನನ್ನ ಬಟ್ಟಲು, ಅದರಲ್ಲಿ ಥಳಥಳಿಸುವ ಬೆಳಕೇ ದ್ರಾಕ್ಷಾರಸ. ಬೆಟ್ಟಗಳಲ್ಲಿರುವ ಹಗುರವಾದ ಗಾಳಿಯೇ ನಾನು. ಹಾಡು, ಹಾಡು, ನಾನು ಹಾಡುಹೋಗುತ್ತೇನೆ. ಬೆಟ್ಟಗಳಿಂದ ಪಟ್ಟಣಗಳೊಳಗೂ ನಗರಗಳೊಳಗೂ ಕೆಳಗಿಳಿದು ಹರಿದು ಬರುತ್ತೇನೆ. ಹೊಸದಾಗಿಯೂ ಹರವಾಗಿಯೂ ಎಲ್ಲಾ ಬೀದಿಗಳಲ್ಲಿಯೂ ನಾನು ಹಾಡು ಬರುತ್ತೇನೆ.

ಅವನನ್ನು ಸೋಂಕುತ್ತೇನೆ ; ಅವಳನ್ನು ಸೋಕುತ್ತೇನೆ, ನಿನ್ನನ್ನೂ ಸೋಂಕುತ್ತೇನೆ.—ಇದೇ ನನ್ನ ಹುಡುಗಾಟಿಕೆಯ ವಿನೋದ

ನಾನು ಬೆಳಕು ; ನನ್ನ ಮಕ್ಕಳಾದ ಹೂವುಗಳನ್ನೂ ಗಿಡಗಳನ್ನೂ ನಾನು

ಪ್ರೇಮದಿಂದ ಪೋಷಿಸುತ್ತೇನೆ. ಸೌಂದರ್ಯಶಾಲಿಗಳ ಮತ್ತು ಬಲಿಷ್ಠರ ಕಣ್ಣುಗಳಲ್ಲಿಯೂ ಹೃದಯಗಳಲ್ಲಿಯೂ ನಾನು ವಾಸಿಸುತ್ತೇನೆ.

ಪ್ರಕಾಶಗಳ ಪ್ರಕಾಶದಲ್ಲಿ ಜೀವಿಸುವದರಿಂದ ದಾರಿಯು ತಾನಾಗಿಯೇ ತೆರೆದು ತೋರುತ್ತದೆ.

'ಥಂಡರಿಂಗ್‌ಡಾನ್'ನ 'ಉದಯ ಗರ್ಜನೆ'ಯ ಜನವರಿ ಸಂಚಿಕೆಯಲ್ಲಿ ಸ್ವಾಮಿಯ ಪೂರ್ಣನಾಮವಾದ 'ಕಮಲಾನಂದ' ಎಂಬ ಹೆಸರಿನಲ್ಲಿ ನಿನ್ನ ಪದ್ಯಗಳು ಪ್ರಕಟವಾಗಿವೆ.

ನಿನಗೆ ಒಪ್ಪಿಗೆಯಾದರೆ, ನಿನ್ನ ಮುಂದಿನ ಪದ್ಯಗಳು 'ಓಂ' ಎಂಬ ಹೆಸರಿನ ಕೆಳಗೆ ಪ್ರಕಟವಾಗುತ್ತವೆ.

ಪ್ರಿಯ ದಿವ್ಯ ಗಿರಿಜಾ ಮತ್ತು ಇತರರಿಗೆ ಪ್ರೇಮ, ಆಶೀರ್ವಾದಗಳ ಸಂತೋಷ, ಶಾಂತಿ.

ನಿನ್ನ ಆತ್ಮ
ಸ್ವಾಮಿ ರಾಮ Truth (ತೀರ್ಥ)

ಓಂ !

೪

ಪುಷ್ಕರ, ಮಾರ್ಚ್ 1905

ಅತ್ಯಂತ ಪ್ರಿಯ ಅತ್ಯಂತ ಪುಣ್ಯ ಶೀಲ ಆತ್ಮ,

ರಾಮನು ಪ್ರಶಾಂತವೂ ಪ್ರಸನ್ನವೂ ಗಂಭೀರವೂ ನಿರ್ಮಲವೂ ಆದ ಒಂದು ಸರೋವರದ ದಂಡೆಯ ಮೇಲೆ ವಾಸಮಾಡುತ್ತಿದ್ದಾನೆ. ಇದರ ಒಂದು ದಿಕ್ಕಿನಲ್ಲಿ, ಮೈತುಂಬಾ ಸುಂದರವಾದ ಹಸಿರು ಶಾಲನ್ನು ಹೊದ್ದಿರುವಂತಿರುವ ಉನ್ನತವಾದ ಬೆಟ್ಟದ ಸಾಲುಗಳು ತುಂಡಾಗದೆ ಸಮವಾಗಿ ಬೆಳೆದು ನಿಂತಿವೆ. ಇಲ್ಲಿ ಮಾವಿನ

ತೋಪುಗಳು ಹೇರಳವಾಗಿವೆ. ರಾಮನು ವಾಸಮಾಡುತ್ತಿರುವ ಮನೆಯಲ್ಲಿ ಎರಡು ಸೊಗಸಾದ ಸಣ್ಣ ಹೂವಿನ ತೋಟಗಳಿವೆ. ಉಜ್ಜ್ವಲ ವರ್ಣಗಳ ಕಾಂತಿಯುಳ್ಳ ಬೆಡಗಿನ ನವಿಲುಗಳ ತಂಡಗಳು ತಮ್ಮ ಕಂಚಿನ ಕಂಠಗಳಿಂದ ಕೇಕೆಹಾಕುತ್ತಿರುತ್ತವೆ. ಈ ಪುಷ್ಕರಿಣಿಯಲ್ಲಿ ಬಾತುಕೋಳಿಗಳೂ (ಹಂಸಗಳೂ) ಈಜುತ್ತಾ ಮುಳುಗುತ್ತಾ ಕ್ರೀಡಿಸುತ್ತಿವೆ. ರಾಮನು ಸುಂದರ ತರುಣ ನಾರಾಯಣಸ್ವಾಮಿಯ ವಿಚಾರವನ್ನು ಹಿಂದೆ ಹೇಳಿರಬಹುದು. ಅವನು ರಾಮನ ಬರೆವಣಿಗೆಗಳನ್ನು ನಕಲು ಮಾಡುವುದರಲ್ಲಿ ಸಹಾಯಮಾಡುತ್ತಿದ್ದಾನೆ.

ಈ ಪುಷ್ಕರಿಣಿಯನ್ನು ಭೂಮಿಯ ಕಣ್ಣು ಎಂದು ಕರೆಯುತ್ತಾರೆ. ಕಾಡುಗಳು ಬೆಳೆದಿರುವ ಬೆಟ್ಟಗಳೂ ಕಡಿದಾದ ಬಂಡೆಗಳೂ ಅದರ ಮೇಲೆ ತೂಗಾಡುತ್ತಿರುವ ಹುಬ್ಬುಗಳಂತಿವೆ. ಈ ಕಾಸಾರದ ಜಲರಾಶಿಯು ಯಾವ ಕಲ್ಲೂ ಒಡೆಯಲಾರದ ಕನ್ನಡಿಯಂತಿದೆ. ಈ ಕನ್ನಡಿಗೆ ಲೇಪಿಸಿದ ರಸತವರವು ಎಂದೂ ಸವೆಯುವದಿಲ್ಲ. ಈ ಕನ್ನಡಿಯ ಮೇಲೆ ಬೀಳುವ ಯಾವ ಕೊಳೆಯೇ ಆಗಲಿ ಇದರಲ್ಲಿ ಮುಳುಗಿ ಹೋಗುತ್ತದೆ ; ಮತ್ತು ಸೂರ್ಯನ ಬಿಸಿಲೆಂಬ ಬ್ರಷ್ ಧೂಳನ್ನು ಜಾಡಿಸುವ ವಸ್ತ್ರದಂತೆ, ನೀರಿನ ಮೇಲೆ ಗಾಳಿಯಿಂದ ಹಾರಿ ಬಂದು ಬೀಳುವ ಕೊಳೆಯನ್ನು ತೊಡೆದುಹಾಕುತ್ತದೆ.

ರಾಮನು ಇದುವರೆಗೆ ಸಂಧಿಸಿರುವ ಎಲ್ಲಾ ಶೀಲವಂತ ವ್ಯಕ್ತಿಗಳಲ್ಲಿ ಈ ಜಲಾಶಯವು ಅತ್ಯುತ್ಕೃಷ್ಟವಾದುದು. ಇದು ತನ್ನ ನೈರ್ಮಲ್ಯವನ್ನು ಎಷ್ಟು ಚೆನ್ನಾಗಿ ಕಾಪಾಡಿಕೊಳ್ಳುತ್ತದೆ ! ಈ ಪುಷ್ಕರಿಣಿಯ ವಿಸ್ತಾರ ಜಲದ ಮುಖದ ಮೇಲೆ ಎಷ್ಟು ತೆರೆಗಳೂ ಸುಳಿಗಳೂ ಅಲೆಗಳೂ ಇದ್ದರೂ ಸ್ಥಿರವಾದ ಒಂದು ಸುಕ್ಕೂ ಉಂಟಾಗಿಲ್ಲ, ನಿರಂತರವಾದ ಭರವಸೆಯಿಂದ ತುಂಬಿದೆ. ನಮ್ಮೆಲ್ಲರ ಹೃದಯಗಳೂ ಹೀಗೆಯೇ ಇರಲಿ. ಓಂ ! ಓಂ ! !

ಬೇಸಿಗೆಯಲ್ಲಿ ರಾಮನು ಮೇಲೆ, ತಂಪಾಗಿರುವ ಹಿಮಾಲಯ ಪರ್ವತಗಳಿಗೆ ಹೋಗುತ್ತಾನೆ.

" ಥಂಡರಿಂಗ್ ಡಾನ್ " ' ಉದಯ ಗರ್ಜನೆಯು ' ' ಗರ್ಜಿಸುವ ಉದಯ ' ಪತ್ರಿಕೆಯು ಪುನಃ ಪ್ರಾರಂಭವಾಗಿದೆ. ಹೊಸ ನಾಲ್ಕು ಸಂಚಿಕೆಗಳು ಹೊರಬಂದಿವೆ.

ಜನವರಿಯ ಸಂಚಿಕೆಯು ಬಹಳ ಮಟ್ಟಿಗೆ ಪೂರ್ಣವಾಗಿ ರಾಮನ ಬರವಣಿಗೆಯೇ ಆಗಿದೆ. ಕಮಲಾಳ ಕೆಲವು ಪದ್ಯಗಳೂ ಕಮಲಾನಂದ ಎಂಬ ಹೆಸರಿನಿಂದ ಪ್ರಕಾಶವಾಗಿದೆ.

ಕಮಲೆಯಿಂದ ಇಂಡಿಯಾದಲ್ಲಿ ಪತ್ರಗಳು ಬಂದಿಲ್ಲ.
ಶಾಂತಿ, ಆಶೀರ್ವಾದಗಳು, ಪ್ರೇಮ

ನಿನ್ನ ಆತ್ಮನಿಂದ
ಸ್ವಾಮಿ ರಾಮ.

ಓಂ !

೨೧

ಡಾರ್ಜೀಲಿಂಗ್
30-8-1905

Most Blessed Dearest One,
ಅತ್ಯಂತ ಧನ್ಯ, ಅತ್ಯಂತ ಪ್ರಿಯ ಆತ್ಮ,

ರಾಮನು ಮೂರು ತಿಂಗಳು, ಜಗತ್ತಿನ ಅತ್ಯಂತ ಉನ್ನತ ಪರ್ವತವಾದ ಕೈಲಾಸ ಶಿಖರದ ಎದುರಿಗೆ 8000 ಅಡಿಗಳ ಎತ್ತರವಿರುವ ಒಂದು ಪರ್ವತಶಿಖರದ ಮೇಲೆ ವಾಸಮಾಡಿದನು. ನಾಡಿದ್ದು ಅವನು ಕೆಳಗೆ ಮೈದಾನಗಳಿಗೆ ಹೋಗುತ್ತಾನೆ. ಐದು ಪುಸ್ತಕಗಳನ್ನು ಬರೆದು ಇಪ್ಪತ್ತು ಪುಸ್ತಕಗಳನ್ನು ಓದಿದ್ದಾನೆ.

ರಾಮನ ಮನಸ್ಸಿನಲ್ಲಿ ಆನಂದವೂ ಶಾಂತಿಯೂ ತುಂಬಿವೆ. ಮನಸ್ಸಿನಿಂದ ಪ್ರಪಂಚವು ಪೂರ್ಣವಾಗಿ ಅದೃಶ್ಯವಾದಂತಿದೆ.

ದೇವರು, ದೇವರು ಒಬ್ಬನೇ
ಎಲ್ಲೆಲ್ಲಿಯೂ !

ಒಳಗೆ, ಹೊರಗೆ
ದೂರ---ಹತ್ತಿರ !
ಓ ಆನಂದ !
ರೋಮಾಂಚಕಾರಿಯಾದ ಶಾಂತಿ !
ಉಕ್ಕುಕ್ಕಿ ಹೊರಸೂಸಿ, ಓಲಾಡಿಸುತ್ತಿರುವ ಆನಂದ !

ಆಹಾ ! ಎಂಥಾ ಸ್ವರ್ಗಸಾಮ್ರಾಜ್ಯ !
ಶಾಂತಿ ! ಆಶೀರ್ವಾದಗಳು ! ಪ್ರೇಮ !

ಆಧ್ಯಾತ್ಮಿಕ, ಮಾನಸಿಕ, ದೈಹಿಕ ಆರೋಗ್ಯವು ಎಲ್ಲಾ ಚೆನ್ನಾಗಿದೆ. ಗಿರಿಜಾ, ಓಂ, ಚಂಪಾ, ನಿನಗೆ ಪ್ರಿಯರಾದ ಮಿಕ್ಕ ಎಲ್ಲರಿಗೂ ಅಮರ ಶಾಂತಿಯ ಅಮೃತ ವರ್ಷಣವಾಗಲಿ !

ನಿನ್ನ ಆತ್ಮ
ರಾಮ

ಓಂ ! ಓಂ ! ಓಂ !

ಅಮೇರಿಕಾದಿಂದ ಬರೆದ ಪತ್ರಗಳು.

೧

ಶಸ್ತಾಸ್ಪ್ರಿಂಗ್ಸ್, ಕ್ಯಾಲಿಫೋರ್ನಿಯಾ
10-8-1903

(ನಕ್ಷತ್ರಗಳಿಂದ ಪ್ರಕಾಶಿತವಾದ ಆಗಸದ ಮೇಲ್ಕಟ್ಟಿನ ಕೆಳಗೆ, ಒಂದು ಪರ್ವತಪ್ರವಾಹದ ತೀರದಲ್ಲಿರುವ ಪ್ರಕೃತಿಯ ತೋಟದಲ್ಲಿ.)

Dear Blessed Self

ಪ್ರಿಯಧನ್ಯಾತ್ಮ, 14,444 ಅಡಿಗಳ ಎತ್ತರವಿರುವ ಶಸ್ತ ಪರ್ವತ ಶಿಖರಕ್ಕೆ

ಅತ್ಯಂತ ಆನಂದಮಯವಾದ ಪ್ರವಾಸ ಹೋಗಿ ಹಿಂತಿರುಗಿ ಬಂದ ಮೇಲೆ, ಬೇರೆ ಕೆಲವು ಪತ್ರಗಳೊಡನೆ ನಿಮ್ಮ ಪತ್ರವು ಸೇರಿತು.

ಪ್ರಿಯ ಆತ್ಮ, ನೀನು ಏನನ್ನೂ ಸರ್ವಥಾ ಮಾಡಬೇಕಾದುದು ಬೇಡ.

ಆದರೆ, ಇಷ್ಟೇ ಮಾಡಬಹುದು; ನಿನ್ನ ಮನೆಯನ್ನು ವ್ಯವಸ್ಥೆ ಮಾಡು. ನಿನ್ನ ಮನೆಯ ಬಾಗಿಲುಗಳನ್ನು ಬಿಚ್ಚಿಡು; ಯಾರೂ ಒಳಗೆ ಪ್ರವೇಶಮಾಡುವದಕ್ಕೆ ಅನುಕೂಲವಾಗಿ ಅವು ಯಾವಾಗಲೂ ಅಗಲವಾಗಿ ತೆರೆದು ನಿಂತಿರಲಿ. ಅತ್ಯಂತ ಬಡವರು ನಿನ್ನ ಸಂಪತ್ತನ್ನು ಸೂರೆಗೊಳ್ಳಲಿ, ಅನಂತರ, ನಿನಗಾಗಿ ಕಾದಿರುವ ನನ್ನಲ್ಲಿಗೆ ಕೂಡಲೇ ಬಂದು ಬಿಡು.

ಹೊರಗೆ ಬಾ ಸ್ವತಂತ್ರವಾಗಿ; ಓ ಆನಂದವೇ ಹರಿ, ಪ್ರವಹಿಸು, ಸ್ವೇಚ್ಛೆಯಾಗಿ! ಎಲ್ಲಾ ಕಟ್ಟುಗಳನ್ನೂ ಕರ್ತವ್ಯಗಳನ್ನೂ, ಧಿಕ್ಕರಿಸಿ ಒಂದೇ ಬೀಸಿಗೆ ಕತ್ತರಿಸಿ ಒಗೆ. ಸಹ. ತಾ ಸಮುದ್ರದಲ್ಲಿ ನಿರಾತಂಕವಾಗಿ ಈಜಾಡು. ನಿನ್ನ ದೇವತಾ ಸ್ವರೂಪದಲ್ಲಿ ವೈಭವದಿಂದ ನಿಂತು ಬೆಳಗು!

ರಾಮನಿಗೆ ಇನ್ನು ಮೇಲೆ ಪತ್ರಗಳನ್ನು ಬರೆಯಬೇಡಿ. ಆದರೆ ರಾಮನಿಗೆ ಇಚ್ಛೆ ಬಂದರೆ ಅವನು ಯಾರಿಗಾದರೂ ಒಂದೆರಡು ಪಂಕ್ತಿಗಳನ್ನು ಬರೆಯಬಹುದು. ಆದರೆ ರಾಮನ ವಿಳಾಸಕ್ಕೆ ಬರೆದ ಪತ್ರಗಳು ಅವನಿಗೆ ತಲುಪುವದಿಲ್ಲ.

ಒಳಗೆ ನೋಡಿಕೊಳ್ಳಿ, ನಿಮ್ಮ ಒಳಗೆ ಹುಡುಕಿಕೊಳ್ಳಿ, ನಿಮ್ಮ ಪ್ರಶ್ನೆಗಳಿಗೆ ನಿಮ್ಮ ಒಳಗೇ ಉತ್ತರ ಸಿಕ್ಕುತ್ತದೆ. ರಾಮನು ಹೊರಗಿಲ್ಲ. ಅವನು ನಿಮ್ಮಿಂದ ಬೇರೆ ಇಲ್ಲ, ನೀವೇ ರಾಮ.

## ವ್ಯವಹಾರ ವಿಷಯ

1. ಒಂದೊಂದು ದಿನ ಇಪ್ಪತ್ತೊಂದು ಪುಟಗಳನ್ನು ಕಳಿಸಿತ್ತು. ಶ್ರೀ ಹರಲಾಲ್‌ರು ಅವುಗಳನ್ನು ಪ್ರಕಾಶಗೊಳಿಸುವದಾದರೆ ಒಳ್ಳೆಯದೆ; ಇಲ್ಲವಾದರೆ ಅವರ ಒಪ್ಪಿಗೆಯನ್ನು ಪಡೆದು ನೀವು ಅವನ್ನು ಪ್ರಕಟಪಡಿಸಬಹುದು.

2. 'ರಾಮ ವರ್ಷಾ' ಮತ್ತು ಉರ್ದುಭಾಷೆಯಲ್ಲಿದ್ದ ಉಪನ್ಯಾಸಗಳನ್ನು ಮುದ್ರಿಸಿದ್ದಾರೋ ಇಲ್ಲವೋ ಎನ್ನುವದನ್ನು,

ಶ್ರೀ ರಾಮ ನಾರಾಯಣ,
ಕೇರಾಫ್, ರಾಯ್ ಚಂದುಲಾಲ್, ಡೆಪ್ಯುಟಿ ಕಲೆಕ್ಟರ್ ಅಂಡ್
ಮ್ಯಾಜಿಸ್ಟ್ರೇಟ್, ಆಗ್ರಾ,
ಈ ವಿಳಾಸಕ್ಕೆ ಪತ್ರ ಬರೆದು ತಿಳಿದುಕೊಳ್ಳಿ.

3. ಇದರ ಜೊತೆಗೆ ಇಂಗ್ಲಿಷ್ ಪದ್ಯಗಳ ಎಂಟುಪುಟಗಳನ್ನು ಕಳಿಸಿದೆ.

4. "An appeal to Americans" 'ಅಮೆರಿಕನ್‌ರಿಗೆ ಒಂದು ಮನವಿ" ಎಂಬ ಲೇಖನವನ್ನು ರಾಮನು, ಅಮೆರಿಕಾಸಂಯುಕ್ತ ಸಂಸ್ಥಾನದ ಅಧ್ಯಕ್ಷರಿಗೆ (President of the United States) ಖಾಸಗಿ ಸಂದರ್ಶನದಲ್ಲಿ ಅರ್ಪಿಸಿದನು. ಈ ವಿಷಯುವನ್ನು ವಿಚಾರ ಮಾಡುವದಕ್ಕಾಗಿ ಸ್ಯಾನ್‌ಫ್ರ್ಯಾನ್‌ಸಿಸ್ಕೋ ನಗರದ ಶ್ರೀಮಂತರ ಸಮಿತಿಯು ಕೈಯಲ್ಲಿ ಇಟ್ಟದೆ.

5. ಸ್ಯಾನ್‌ಫ್ರ್ಯಾನ್‌ಸಿಸ್ಕೋದಿಂದ ಕಳಿಸಿದ್ದ ನಾಲ್ಕು ಉಪನ್ಯಾಸಗಳನ್ನು ಇಂಡಿಯಾದಲ್ಲಿ ಪುನಃ ಮುದ್ರಣಮಾಡಬೇಕಾಗಿತ್ತು ಅಲ್ಲಿ ನಿಮಗೆ ಬೇಕಾದಷ್ಟು ಪ್ರತಿಗಳು ಸಿಕ್ಕಬಹುದು. ಹೆಚ್ಚು ವಿವರಗಳನ್ನು ತಿಳಿಯಬೇಕಾದರೆ ಶ್ರೀ ಹರಲಾಲ್‌ರಿಗೆ ಬರೆಯಿರಿ.

ಪಂಡಿತ ಉದಯಚಂದ್ರರಿಗೂ ಎಲ್ಲರಿಗೂ ಓಂ ! ಓಂ ! ಓಂ !
ಓಂ ! ಓಂ !! ಓಂ !!!

ಓಂ

೩

ಪೋರ್ಟ್‌ಲ್ಯಾಂಡ್, ಓರ್,
ಅಕ್ಟೋಬರ್ 1903.

ಶ್ರೀಮತೀ ಇ. ಸಿ. ಕ್ಯಾಂಪ್‌ಬೆಲ್‌ರಿಗೆ,
ಡೆನ್‌ವರ್, ಕೊಲೊರಾಡೋ (Denver Colorado)

ಜನರು ಒಂದು ವಿಷಯದ ಮೇಲೆ ಮನಸ್ಸನ್ನು ಇಟ್ಟು ಅದನ್ನು ಬಯಸುತ್ತಿರುವಾಗ, ಅದಕ್ಕೆ ಅಡ್ಡಿ ಬಂದರೆ, ಕ್ಷುಬ್ಧರಾಗಿ ರೇಗಾಡುತ್ತಾರೆ. ಅವರ ಮನಸ್ಸು ತಲೆಕೆಳಗಾಗುತ್ತದೆ, ಬುದ್ಧಿ ಪಲ್ಲಟವಾಗುತ್ತದೆ. ತೋರಿಕೆಯ ಕೇಡನ್ನು ತಡೆಗಟ್ಟುವ ಪ್ರವೃತ್ತಿಯೇ ಈ ಬಗೆಯ ಉದ್ವೇಗಕ್ಕೂ ಅಸಮಾಧಾನಕ್ಕೂ ಮನಶ್ಶಾಂತಿ ಇಲ್ಲದಂತೆ ಕಾರಣವೆನ್ನಬಹುದು. ಕ್ರಿಸ್ತನು 'Resist not evil' 'ಕೇಡನ್ನು ತಡೆಗಟ್ಟಬೇಡ' ಎನ್ನುವಾಗ, ಅವನಿಗೆ ತಲೆ ಕೆಟ್ಟಿಗಿತ್ತೆಂದು ತಿಳಿಯುವೆಯೋ ಇಲ್ಲವೆ ತಲೆ ಕೆಟ್ಟಿತೆಂದು ಭಾವಿಸುವೆಯೋ? ಎಲ್ಲಾ ಸಂದರ್ಭಗಳಲ್ಲಿಯೂ ಸುಖವಾಗಿ, ಪೂರ್ಣ ಸಂತೋಷದಿಂದ, ಶಾಂತವಾಗಿರು, ನಿನ್ನ ಬದುಕಿನ ಪ್ರವಾಹವನ್ನು ವಿರೋಧಿಸುವಂತೆ ಕಾಣುವ ಏನನ್ನಾದರೂ ಪ್ರಸನ್ನ ಮನಸ್ಸಿನಿಂದಲೂ ಸ್ವಸ್ಥಚಿತ್ತದಿಂದಲೂ ಉಲ್ಲಾಸದಿಂದಲೂ ಸಂತಸದಿಂದಲೂ ಸ್ವಾಗತಿಸಿ, ಸ್ವೀಕರಿಸಬೇಕು. ಮನಸ್ಸು ತನ್ನಲ್ಲಿ ತಾನೇ ಇದ್ದು ನಮ್ಮ ಸಮತೆಯನ್ನು ನಾವು ಕಳೆದುಕೊಳ್ಳದಿದ್ದರೆ, ತೋರಿಕೆಯ ಕೇಡು ಒಳಿತೇ ಆಗುವದೆಂದು ರಾಮನು ತನ್ನ ಸ್ವಂತ ಅನುಭವದಿಂದ ಯಾವಾಗಲೂ ಕಂಡುಕೊಂಡಿದ್ದಾನೆ. ಒಂದು ತೋರಿಕೆಯ ಕೇಡಿನ ಅನಂತರ ಆ ಹಿಂದೂ ವಿದ್ಯಾರ್ಥಿಗೆ ಆ ಹತ್ತು ರೂಪಾಯಿಗಳು ಹೇಗೆ ಕಳಿಸಲ್ಪಟ್ಟುವೆಂಬುದು ನಿನಗೆ ನೆನಪಿಲ್ಲವೆ? ಆದರೆ, ಅಸಮಾಧಾನದಿಂದಲೂ ಅಶಾಂತಿಯಿಂದಲೂ ಉದ್ರೇಕದಿಂದಲೂ ಎಲ್ಲಾ ಆಶೀರ್ವಾದಗಳ, ಉದಾತ್ತ ಭಾವನೆಗಳ, ಮುಂದೆ ನಮಗಾಗಿ ಕಾದಿರಬಹುದಾದ ಸೌಭಾಗ್ಯಗಳ ದ್ವಾರವನ್ನೂ ಮುಚ್ಚಿಬಿಟ್ಟಂತೆ ಆಗುತ್ತದೆ. ತನ್ನ ಕೈಯಲ್ಲಿಯೇ ದೇಹವನ್ನೂ ಪ್ರಾಪಂಚಿಕ ಜೀವನವನ್ನೂ ಹಿಡಿದು ಕೊಂಡಿರುವ ಮನಸ್ಸಿನಿಂದ ಅಥವಾ ಯಾವುದಕ್ಕಿಂತಲೂ ಹೆಚ್ಚಿನ ಶಕ್ತಿ ಇಲ್ಲವೋ ಅಂಥಾ ಪ್ರೇಮದಿಂದ ತುಂಬಿದ ಮನಸ್ಸಿನಿಂದ ಎಲ್ಲಾ ಬಗೆಯ ಕೇಡುಗಳನ್ನೂ ಕಷ್ಟಗಳನ್ನೂ ಮೀರಬೇಕು.

ನಿನ್ನ ಪ್ರಿಯ ಆತ್ಮ
ರಾಮಸ್ವಾಮಿ

ಓಂ !

೩

ಪೋರ್ಟ್‌ಲ್ಯಾಂಡ್ ಓರ್,
ನವೆಂಬರ್ 1903

ಶ್ರೀಮತೀ ಇ. ಸಿ. ಕ್ಯಾಂಪ್‌ಬೆಲ್,
ಡೆನ್ವರ್, ಕೊಲೊರಾಡೋ ಇವರಿಗೆ,
ರಾಮನು ಸರ್ವದಾ ನಿನ್ನನ್ನು ನೆನೆಯುತ್ತಾನೆ

ಓಂ ! ಓಂ ! !

ನೀವು ಎಷ್ಟು ಪ್ರಾಮಾಣಿಕರೂ ಪರಿಶುದ್ಧರೂ ಉದಾತ್ತ ಭಾವನೆಯುಳ್ಳವರೂ ಶ್ರದ್ಧಾತ್ಮರೂ ನಿಷ್ಠಾವಂತರೂ ಬಹಳ ಒಳ್ಳೆಯವರೂ ಆಗಿದ್ದೀರಿ ! ಅಲ್ಲವೆ ?

ಈ ಕೆಳಗಿನ ಎಂಟು ಗುಣಗಳೂ ಅಭ್ಯಾಸಗಳೂ ಜನರ ಮನಸ್ಸಿನಲ್ಲಿ ಅಸಮಾಧಾನವನ್ನೂ ಅತೃಪ್ತಿಯನ್ನೂ ಉಂಟುಮಾಡುವದಕ್ಕೆ ಕಾರಣವಾಗುತ್ತವೆ. ಆದ್ದರಿಂದ ತೊಂದರೆಗೆ ಕಾರಣವಾದ ಈ ಎಂಟು ಮೂಲಗಳನ್ನು ದೂರವಿಡಿ ಅಥವಾ ತಿರಸ್ಕರಿಸಿ.

1. ಮನಸ್ಸಿನಲ್ಲಿ ಒಂದು ವ್ಯಕ್ತಿಯನ್ನು ಇನ್ನೊಂದು ವ್ಯಕ್ತಿಯೊಡನೆ ಹೋಲಿಸಿ, ಇಬ್ಬರ ಪರಸ್ಪರ ಸಾಮ್ಯ-ವೈಲಕ್ಷಣ್ಯಗಳನ್ನು ವಿಚಾರ ಮಾಡುವದು.

2. ಮನಸ್ಸಿನಲ್ಲಿ ತನ್ನನ್ನು ಬೇರೆ ಯಾರೊಡನೆಯಾದರೂ ಹೋಲಿಸಿ ನೋಡಿ ಕೊಳ್ಳುವದು.

3. ಇಂದಿನ ಸ್ಥಿತಿಯನ್ನು ಅಥವಾ ವರ್ತಮಾನವನ್ನು ಹಿಂದಿನ ಸ್ಥಿತಿಯೊಡನೆ ಅಥವಾ ಕಳೆದ ಕಾಲದೊಡನೆ ಹೋಲಿಸಿ, ಹಿಂದಿನ ತಪ್ಪಿನ ನೆನಪಿನಲ್ಲಿಯೇ ತೊಳಲುತ್ತಾ ಮಿಡುಕುತ್ತಿರುವದು.

4. ಮುಂದಿನ ಯೋಜನೆಗಳ ಕನಸನ್ನು ಕಾಣುತ್ತಾ ಕಲ್ಪಿತ ಕಷ್ಟಕ್ಕಾಗಿ ಭಯಪಡುತ್ತಿರುವದು.

5. ಪರಮಾತ್ಮನ ಹೊರತು ಬೇರೆ ಯಾವ ವಿಷಯದಲ್ಲಿ ಆದರೂ ನಮ್ಮ ಹೃದಯವನ್ನು ಇರಿಸುವದು.

6. ಎಲ್ಲದರ ಮೇಲೆ ಪ್ರಭುತ್ವ ನಡೆಸುತ್ತಿರುವ ಒಳಗಿರುವ ಸಾಮರಸ್ಯವನ್ನೂ ಸ್ವರ ಮೈತ್ರಿಯನ್ನೂ ವಾಸ್ತವವಾಗಿ ನಂಬದೆ, ಹೊರಗಿನ ತೋರಿಕೆಗಳನ್ನು ನಂಬಿ ಕೊಂಡಿರುವದು.

7. ಕೆಲವು ಶಬ್ದಗಳನ್ನು ಮಾತ್ರ ಓದಿದು ಒಮ್ಮೆಗೇ ತೀರ್ಮಾನಕ್ಕೆ ಹಾರುವದು, ಅಥವಾ ಜನರ ತೋರಿಕೆಯ ವರ್ತನೆಯಿಂದ ಒಮ್ಮೆಗೇ ಅವರ ಯೋಗ್ಯತೆಯನ್ನು ನಿರ್ಣಯಿಸುವದು; ಮತ್ತು ಆಧ್ಯಾತ್ಮಿಕ ನಿಯಮದಲ್ಲಿ ವಿಶ್ವಾಸ ವಿಟ್ಟು ಪೂರ್ಣಸಂತೃಪ್ತರಾಗಿ ನೆಮ್ಮದಿಯಿಂದ ಇಲ್ಲದಿರುವದು.

8. ಜನರೊಡನೆ ಸಂಭಾಷಣೆ ಮಾಡುತ್ತಿರುವಾಗ ತತ್ತ್ವವನ್ನು ಬಿಟ್ಟು, ನಿಷ್ಪ್ರಯೋಜಕವಾಗಿ ಮಾತಿನಲ್ಲಿ ಎತ್ತೆತ್ತಲೋ ದೂರ ಸುತ್ತುತ್ತಿರುವದು ಓಂ !

ನಿಮ್ಮ ಆತ್ಮ,
ರಾಮಸ್ವಾಮಿ.

ಇಂಡಿಯಾದ ಮೈದಾನಗಳಿಂದ ಬರೆದ ಪತ್ರಗಳು,

ಕಿಷನ್‌ಗರ್ ಹೌಸ್
ಪುಷ್ಕರ್, ಅಜ್ಮೀರ್.

(‘ಥಂಡೆರಿಂಗ್‌ಡಾನ್’ನಲ್ಲಿ ಅಥವಾ ಬೇರೆ ಯಾವದರಲ್ಲಿ ಆದರೂ ಕೂಡಲೇ ಪ್ರಕಟಿಸಲು)

೧

ನಾನು ಯಾರು ?

ಅತ್ಯಂತ ಪ್ರಿಯ ಪುಣ್ಯ ಆತ್ಮ,

ಒಂದು ಕನ್ನಡಿಯನ್ನು ತೆಗೆದುಕೊಂಡು, ಅದರಲ್ಲಿ ಪ್ರತಿಫಲನವಾದ ನನ್ನನ್ನು ನೋಡು. ಒಳಗಿನ ಏಕಾಂತದಲ್ಲಿ ಪ್ರವೇಶಿಸಿ, ನನ್ನನ್ನು ನಿಶ್ಶಬ್ದ-ಮೌನದ ಶಕ್ತಿಯನ್ನಾಗಿ ಭಾವಿಸು. ಸೂರ್ಯನನ್ನು ನೋಡಿ, ಅದರಲ್ಲಿ ನನ್ನ ಸಾಮ್ಯವನ್ನು ಕಾಣು

" ನನ್ನನ್ನೇ ಸರಿಯಾಗಿ ತಿಳಿ, ಇದೇ ಮನುಷ್ಯನಿಗೆ ಅತ್ಯಂತ ಶ್ರೇಷ್ಠ ಲಾಭ. ನನ್ನನ್ನು ತಿಳಿ. ಯಾರು ನನ್ನನ್ನು ತಿಳಿಯುವರೋ ಅವರ ಮುಂದಿನ ಆನಂದವು ಯಾವ ಕರ್ಮದಿಂದಲೂ ಕಳೆಗೆಡಲಾರದು. ನನ್ನನ್ನು ತಿಳಿದವರ ಮುಖದ ಮೇಲಿನ ತೇಜಸ್ಸು ಎಂದೆಂದೂ ಕುಂದುವದಿಲ್ಲ. "

—ಉಪನಿಷತ್ತು

ನನ್ನನ್ನು ನೋಡಲು ಯಾರ ಕಣ್ಣುಗಳ ಪೊರೆಯು ತೆಗೆಯಲ್ಪಟ್ಟಿದೆಯೋ ಅವರು ಯಾರೇ ಇರಲಿ, ಆ ನೀವು ಧನ್ಯರು ! ಅಂಥಾ ನೀವು ನಡೆದಾಡಿದ ಭೂಮಿಯೆಲ್ಲಾ ಧನ್ಯ ; ನಿಮ್ಮ ರಾಮನ ಪ್ರೇಮದೃಷ್ಟಿಯಿಂದ ಅಥವಾ ಅನುಗ್ರಾಹಕ ಕಟಾಕ್ಷದಿಂದ ಅದು ಸ್ವರ್ಗಸೀಮವಾಗಬೇಕು. ಎಲ್ಲೆಲ್ಲಿಯೂ ಇರುವದು ನನ್ನ ತೌರೇ.

ನಿಮ್ಮ ಎದೆಯಲ್ಲಿ ಬಡಿಯುತ್ತಿರುವವನೇ ರಾಮನು ; ನಿಮ್ಮ ಕಣ್ಣುಗಳಿಂದ ನೋಡುತ್ತಿರುವವನೇ ರಾಮನು ; ನಿಮ್ಮ ನಾಡಿಗಳಲ್ಲಿ ಮಿಡಿಯುತ್ತಿರುವವನೇ ರಾಮನು , ಹೂವುಗಳಲ್ಲಿ ನಗುತ್ತಿರುವವನೇ ರಾಮನು ; ಮಿಂಚಿನಲ್ಲಿ ರಾಮನು ನಗುತ್ತಿದ್ದಾನೆ ; ರಾಮನು ನದಿಗಳಲ್ಲಿ ಭೋರ್ಗರೆಯುತ್ತಿದ್ದಾನೆ ; ರಾಮನು ಪರ್ವತಗಳಲ್ಲಿ ನಿಶ್ಶಬ್ದ-ಮೌನವಾಗಿದ್ದಾನೆ. ಬ್ರಾಹ್ಮಣತ್ವವನ್ನು ಕಿತ್ತೆಸಿ , ಸ್ವಾಮಿತ್ವವನ್ನು ಸುಡಿರಿ ; ಬಿರುದುಗಳನ್ನೂ ಗೌರವದ ಪ್ರಶಸ್ತಿಗಳನ್ನೂ ತೊರೆದು ಬಿಡಿರಿ. ಪ್ರಿಯತಮೆ, ವತ್ಸೆ, ರಾಮನು ನಿನ್ನಲ್ಲಿ ಒಂದಾಗಿದ್ದಾನೆ. ನೀನು ಜ್ಞಾನಿಯಾಗಿರಲಿ, ಅಜ್ಞಾನಿಯಾಗಿರಲಿ , ಧನಿಕನಾಗಿರಲಿ, ದರಿದ್ರನಾಗಿರಲಿ, ಪುರುಷನಾಗಿರಲಿ, ಸ್ತ್ರೀಯಾಗಿರಲಿ ; ಪುಣ್ಯವಂತನಾಗಿರಲಿ, ಪಾಪಿಯಾಗಿರಲಿ ; ಕ್ರಿಸ್ತನಾಗಿರಲಿ, ಅವನಿಗೆ ದ್ರೋಹವೆಸಗಿದ ಜೂಡಾಸ್‌ನಾಗಿರಲಿ ; ಕೃಷ್ಣನಾಗಿರಲಿ, ಗೋಪಿಯಾಗಿರಲಿ ; ನೀನು ಯಾರೇ ಆಗಿದ್ದರೂ ರಾಮನು ನಿನ್ನ ಸ್ವಂತ ಆತ್ಮನೇ. ನನ್ನ ದೇವತ್ವವನ್ನೂ ನಿನ್ನ ದೇವತ್ವವನ್ನೂ ನಿನ್ನ ವಕ್ಷಸ್ಥಲದಿಂದ ಗುಡುಗಿ ಗುಡುಗಿ ಹೊರಗೆಡಹುವದಕ್ಕೂ

ಓಂ ।

೩

ಮುಜಾಫರ್ ನಗರ್, 18–10–1905

ಮಧುರ ಹೃದಯವೆ, ಮಹಾಹೃದಯವೆ,

ಕೈಗಳಿಗೆ ಹಚ್ಚಿಕೊಂಡ ಬೂದಿಯು ಕೈಚರ್ಮವನ್ನು ನಿರ್ಮಲವಾಗಿ ತೊಳೆಯುತ್ತದೆ.

ಆದ್ದರಿಂದ, ದೇಹಕ್ಕೆ ಬಾಧೆಕೊಟ್ಟು, ಅವು ಅಳಿಯುವಾಗ ತಮ್ಮ ಜೊತೆಗೆ, ದೇಹಭಾವವನ್ನೂ ಕಳೆಯುವ ವ್ಯಾಧಿಗಳು ಭಗವಂತನ ಮೂರುಪಟ್ಟು ಅನುಗ್ರಹ ದಿಂದ ಬರುವ ಮಹಾ ಪ್ರಸಾದಗಳು.

ಓ ವ್ಯಾಧಿಗಳೆ, ಬಾಧೆಗಳೆ, ನಿಮಗೆ ಸ್ವಾಗತ ! ಸುಸ್ವಾಗತ !

ಮನೆಯಲ್ಲಿ ಒಂದು ಹೆಣವು ಇರುವವರೆಗೂ ಎಲ್ಲಾ ಬಗೆಯ ಉಪದ್ರವಗಳ ಭಯವೂ ಇರುತ್ತದೆ, ಹೆಣವನ್ನು ಹೊತ್ತುಹಾಕಿದರೆ ಆರೋಗ್ಯವೇ ಸಾರ್ವಭೌಮ ವಾಗಿ ಪ್ರಭುತ್ವಮಾಡುತ್ತದೆ. ಹಾಗೆ, ದೇಹವೇ ನಾನೆಂಬ ಭಾವನೆಯು ಇರುವ ವರೆಗೆ ಲೋಕದಲ್ಲಿರುವ ರೋಗಗಳನ್ನೆಲ್ಲಾ ಕರೆದುಕೊಳ್ಳುತ್ತಿರುತ್ತೇವೆ. ಆದ್ದರಿಂದ ದೇಹದ ಮತ್ತು ದೇಹ ಸಂಬಂಧವಾದ ಎಲ್ಲಾ ಅಭಿಮಾನವನ್ನೂ ಸುಟ್ಟುಹಾಕಿದರೆ, ಆ ಕೂಡಲೇ ಅಬಾಧಿತವೂ ಅವಿರುದ್ಧವೂ ನಿರ್ವೈರವೂ ಆದ ಪರಮ ಪ್ರಭುತ್ವವನ್ನು ಅನುಭವಿಸುತ್ತೇನೆ

ಹುರಾ ! ಹುರಾ ! ಭಲ್ ! ಭಲ್ !
ಅಸೂಯೆ ಇಲ್ಲ, ಭಯವಿಲ್ಲ ;
ಪಾಪವಿಲ್ಲ ದುಃಖವಿಲ್ಲ ;
ನಿನ್ನೆಯಿಲ್ಲ, ನಾಳೆಯಿಲ್ಲ .
ಪ್ರಿಯೆ ! ನಾನತ್ಯಂತ ಪ್ರಿಯರಿಗೆಲ್ಲಾ ಪ್ರಿಯ

ಕೂದಲನ್ನು ಸೀಳಿದಂತೆ ತರ್ಕವಾದಮಾಡುವ ವಕೀಲರುಗಳು, ಜೊಳ್ಳು ಹೊಟ್ಟಿನ ಪಂಡಿತರಾದ ಮಹಾತ್ಮರು,

ಪ್ರಯೋಗಶಾಲೆಗಳಲ್ಲಿಯಾಗಲೀ ಪ್ರಕೃತಿ ಸಮೀಕ್ಷಾ ಅಥವಾ ಗ್ರಹನಕ್ಷತ್ರ ಸಮೀಕ್ಷಾ (ಖಗೋಳ) ಶಾಲೆಗಳಲ್ಲಿಯಾಗಲೀ ಮುಗ್ಧ ವಿದ್ಯಾರ್ಥಿಗಳನ್ನು ಚಕಿತಗೊಳಿಸುವ ಮನೋಹರ ಕಲ್ಪನಕಥಾವಳಿಗಳ ಪ್ರೊಫೆಸರ್‌ಗಳು,

ವೇದಿಕೆಗಳಿಂದ ಅಥವಾ ಉಪದೇಶವೇದಿಕೆಗಳಿಂದ ತಮ್ಮ ವಾಗ್ವೈಖರಿಯ ಶಬ್ದಝರಿಯಿಂದ ಶ್ರೋತೃವೃಂದವನ್ನು ಮೂಕರನ್ನಾಗಿ ಮಾಡಿ, ಮುಕ್ಕುಹಿಡಿಸುವ ಬಕ್ಕತಲೆಯ ವಾಗ್ಮಿಗಳು.

ಯಾವುದಾದರೊಂದು ಬಗೆಯ ಆಕ್ಷೇಪಣೆಗಳೂ ದೋಷಾರೋಪಣೆಗಳೂ ಅಸಮಾಧಾನಗಳೂ ತುಂಬಿಕೊಂಡಿರುವ ಬಡಪಾಯಿ ಶ್ರೀಮಂತರು ಕೂಡ

ಈ ಎಲ್ಲವೂ ನಾನೇ.

ನಿನ್ನ ಆತ್ಮನೇ
ರಾಮ.

ಓಂ! ಓಂ! ಓಂ!

## ಸಂಕೀರ್ಣ ಪತ್ರಗಳು

ಓಂ

೧

ಸ್ವಾಮಿ ಶಿವಗಣಾಚಾರ್ಯರಿಗೆ. ಟೆಹ್ರಿ 1902
ಕಿಶನ್‌ಗರ್.

ನಾರಾಯಣ,

ಆಹಾರವು ಎಷ್ಟೇ ರುಚಿಕರವಾಗಿರಲಿ, ಹಿತಕರವಾಗಿರಲಿ, ಮತ್ತು ನಮ್ಮ ಪ್ರೀತಿಯ ಮಿತ್ರರೂ ಬಂಧುಗಳೂ ನಮ್ಮನ್ನು ಎಷ್ಟೇ ಉಪಚರಿಸಲಿ, ಪ್ರೋತ್ಸಾಹಿಸಲಿ, ನಮ್ಮ ಒಳಗೆ ನಿಜವಾಗಿಯೂ ಹಸಿವಾಗಿ ತಿನ್ನಬೇಕೆಂದು ತೀವ್ರ ಬಯಕೆಯಾಗದಿದ್ದರೆ ಎಂದಿಗೂ ತಿನ್ನಬಾರದೆಂದು ವೈದ್ಯರು ಹೇಳುತ್ತಾರೆ. ನೀವು ಬರೆದಿರುವದೆಲ್ಲಾ ಪೂರಾ ಸತ್ಯ. ಈಗಲೇ ಹೊರಟು ನಿಮ್ಮಲ್ಲಿಗೆ ಬಂದರೆ, ನಿಮ್ಮ ಮತ್ತು ಕಿಶನ್‌ಗರ್ ರಾಜ್ಯದ ಯೋಗ್ಯರಾದ ಮುಖ್ಯಮಂತ್ರಿಯವರ ಸಹವಾಸ ಸೌಖ್ಯದಿಂದಲೂ ಜಾಣ ಸಲಹೆಗಳಿಂದಲೂ ಲಾಭಹೊಂದುವ ಬಹಳ ಒಳ್ಳೆಯ ಅವಕಾಶವಿದೆ. ಆದರೆ, ನಾನು ಪೂರ್ಣ ಸಿದ್ಧತೆಯನ್ನು ಪಡೆದ ಮೇಲೆ, ಇದಕ್ಕಿಂತಲೂ ಉತ್ತಮವಾದ ಅವಕಾಶಗಳು ತಾವಾಗಿಯೇ ಒದಗುತ್ತವೆಯೆಂಬ ಭವಿಷ್ಯ ಸೂಚನೆಯಿಂದ ನನ್ನ ಅಂತರ್ವಾಣಿಯು, ಅದುವರೆಗೆ ನಾನು ತಡೆದು ಕಾಯಬೇಕೆಂದು ಆದೇಶ ನೀಡುತ್ತಿದೆ. ಅನುಕೂಲವಾದ ಸಂದರ್ಭಗಳನ್ನು ಉಪಯೋಗಿಸಿಕೊಳ್ಳುವದಕ್ಕೆ ನಾವು ಯಾವಾಗಲೂ ಎಚ್ಚರವಾಗಿರಬೇಕೆಂಬುದು ನಿಜ, ಸಂಶಯವಿಲ್ಲ ಮೊದಲು ಮೊದಲಿನ ಸೋಲುಗಳಿಂದ (ಅವುಗಳನ್ನು ಸೋಲುಗಳೆಂದು ಕರೆಯಬಹುದಾದರೆ) ಸ್ವಲ್ಪವೂ ಧೈರ್ಯಗೆಡದೆ, ನಾನು ನನ್ನ ಭಾವೀ ಜೀವನಕ್ಕೆ ಸಮೃದ್ಧಿಯಾದ ಯಶಸ್ಸು ಕಾದಿದೆಯೆಂದು ತುಂಬಾ ಭರವಸೆಯುಳ್ಳವನಾಗಿದ್ದೇನೆ. ಕಿಸನ್‌ಗರ್‌ನಲ್ಲಿ ನಿಮ್ಮ ಸ್ನೇಹಪೂರ್ವಕವಾದ ಸಲಹೆಯು ಫಲಿತಾಂಶವೇನಾಗಬೇಕಾಗಿದ್ದೋ ಅದನ್ನೇ ಇಲ್ಲಿ ಮಾಡುತ್ತಿದ್ದೇನೆ. ನಾವು ಅನುಕೂಲ ಸಂದರ್ಭಗಳನ್ನು ಸದುಪಯೋಗಮಾಡಿಕೊಳ್ಳುವದಕ್ಕೆ ಯಾವಾಗಲೂ ಜಾಗ್ರತರಾಗಿರಬೇಕಾದುದು ನಿಜವಾದರೂ ಅನವಶ್ಯಕವಾಗಿ ಆತುರವನ್ನೂ ಪಡಕೂಡದು. ಬೇಕಾಗಿರುವದೆಲ್ಲಾ ಕ್ರಿಯಾಶೀಲತೆ. ನಮ್ಮ ದೇಶದ ಜನರಲ್ಲಿ ಸತತ ಕಾರ್ಯೋತ್ಸಾಹವನ್ನೂ ಶಕ್ತಿಯನ್ನೂ ಪ್ರೇರೇಪಿಸಲು

ನಾನು ಉಪದೇಶವಮಾಡಬೇಕು ; ಇಲ್ಲವಾದರೆ, ನನ್ನ ಕೇವಲ ಬಾಲ್ಯದಿಂದಲೂ ಅತಿಪ್ರೀತಿಯಿಂದ ಆ ಬಯಕೆಯನ್ನೇಕೆ ನಾನು ಬೆಳೆಸಬೇಕಾಗಿತ್ತು ! ನಾನು ಉಪದೇಶ ಮಾಡಬೇಕು , ಹಾಗಿಲ್ಲದಾದರೆ, ನನ್ನ ತಂದೆ ತಾಯಿಗಳನ್ನೂ ಹೆಂಡತಿ ಮಕ್ಕಳನ್ನೂ ಪ್ರಾಪಂಚಿಕ ಸ್ಥಾನ ಮಾನಗಳನ್ನೂ ಉಜ್ವಲವಾದ ಭವಿಷ್ಯ ಜೀವನವನ್ನೂ ಏತಕ್ಕಾಗಿ ನಾನು ಪರಿತ್ಯಜಿಸಬೇಕಾಗಿತ್ತು ! ದಿವ್ಯವಾದ ಭಾವಾವೇಶದ ಅಗ್ನಿಯಿಂದ ತುಂಬಿ ಜ್ವಲಿಸುತ್ತಾ, ಧೈರ್ಯವಾಗಿಯೂ ನಿರ್ಭಯವಾಗಿಯೂ ಎಲ್ಲಾ ಬಗೆಯ ಉಪದ್ರವಗಳ ಮತ್ತು ವಿರೋಧಗಳ ಎದುರಿನಲ್ಲಿ ಸಹ, ಇಲ್ಲಿ ನಾನು ಅನುಭವ ಪಡೆಯುತ್ತಿರುವದನ್ನು ಉಪದೇಶಿಸಬೇಕು.

ನನ್ನ ಮುಂದಿನ ಉಪಯೋಗಕ್ಕಾಗಿ ಹಣವನ್ನು ಇಟ್ಟಿರಬೇಕೆಂಬ ನಿಮ್ಮ ಸಲಹೆಯನ್ನು ನಾನು ಕೃತಜ್ಞತೆಯಿಂದ ಸ್ವೀಕರಿಸುತ್ತೇನೆ

ತಪ್ಪದೆ, ನಿಯತವಾಗಿ ವ್ಯಾಯಾಮವು ನಡೆಯುತ್ತಿದೆ, ಆರೋಗ್ಯವು ಚೆನ್ನಾಗಿದೆ ವಾಯುಗುಣವು ಅತ್ಯಂತ ಹಿತಕರವಾಗಿದೆ.

ಶಾಂತಿ ! ಶಾಂತಿ ! ಶಾಂತಿ !

ನಿಮ್ಮ ಆತ್ಮ ,
ರಾಮತೀರ್ಥ ಸ್ವಾಮಿ.

ಓಂ !

೨

ಪಂಡಿತ ರಾಮಧನ ಸಾಹೆಬ್
ಭಿಂಬಾರ್, ಜಮ್ಮೂಸಂಸ್ಥಾನ ಕಾಡಿಯ 1902.

ಅತ್ಯಂತ ಪ್ರಿಯ ರಾಮ,

ಈ ದಿನಗಳಲ್ಲಿ ರಾಮಬಾದಷಹನು, ಇಲ್ಲಿಂದ ಎಳೆಂಟು ಮೈಲಿಗಳಲ್ಲಿರುವ ಜಮ್ನೋತ್ರಿ, ಗಂಗೋತ್ರಿ, ಕೇದಾರ, ಬದರಿ ಮತ್ತು ಗಂಗಿ-ಇವುಗಳ ನೀರ್ಗಲ್ಲ

ಶಾಂಗಳ ಅತ್ಯಂತ ಮನೋಹರ ನೋಟವನ್ನು ಭವ್ಯವಾಗಿ ತೋರಿಸುವ ಎತ್ತರವಾದ ಪರ್ವತಶಿಖರದಲ್ಲಿ ವಾಸಿಸುತ್ತಿದ್ದಾನೆ. ಮಸೂರಿಯ ರಸ್ತೆಯಲ್ಲಿ ಡೆಹರಾಡೂನ್ ರೈಲ್ವೇ ಸ್ಟೇಷನ್ನಿನಿಂದ ಎರಡು ದಿನಗಳ ಪ್ರಯಾಣವು ಅತ್ಯಂತ ಮನೋಜ್ಞವಾಗಿಯೂ ಸಂತೋಷಕರವಾಗಿಯೂ ಇರುವ ಈ ದೃಶ್ಯಗಳಿಗೆ ಕರೆತರುತ್ತದೆ.

ನಿಮ್ಮ ಆತ್ಮ,
ರಾಮತೀರ್ಥಸ್ವಾಮಿ

ಓಂ !

೩

## 'ಸಾಧಾರಣ ಧರ್ಮ ಚಳವಳಿ'ಯ ಶಾಶ್ವತ ತತ್ತ್ವಗಳು
## (Common Path Movement)

1. ವಿಶ್ವದ ವ್ಯವಸ್ಥಿತವಾದ ಸೃಷ್ಟಿಗೆ ಸಾರಭೂತ ಪ್ರಧಾನ ಕಾರಣವೇ (ನಿಮಿತ್ತೋಪಾದಾನ ಕಾರಣವೇ) ಸರ್ವಶಕ್ತ ಪರಮಾತ್ಮ.

2. ಅವನು ಅದೃಶ್ಯನಾಗಿದ್ದು ಎಲ್ಲಾ ಜೀವರ ಗುಣಗಳನ್ನೂ ಕರ್ಮಗಳನ್ನೂ ಪ್ರವೃತ್ತಿಗಳನ್ನೂ (ಒಲವುಗಳನ್ನೂ) ಕುಲಗಳನ್ನೂ ರಾಷ್ಟ್ರಗಳನ್ನೂ ಸಾಕ್ಷಿಯಾಗಿ ನೋಡುತ್ತಾ ಅವುಗಳ ಕರ್ಮಾನುಸಾರ ಸುಖವನ್ನೋ ದುಃಖವನ್ನೋ ಉನ್ನತಿಯನ್ನೋ ಅವನತಿಯನ್ನೋ ಕೊಡುತ್ತಾನೆ.

3. ದೈಹಿಕ, ಮಾನಸಿಕ, ಆಧ್ಯಾತ್ಮಿಕ ಶಕ್ತಿಗಳನ್ನು ಕ್ರಮೇಣ ಬೆಳೆಸಿಕೊಂಡು, ಮಾನವ ಜನಾಂಗದ ಹಿತಸಾಧನೆಗಾಗಿ ಅವನ್ನು ವಿಹಿತವಾಗಿ ಉಪಯೋಗಿಸುವುದರಿಂದ ಪರಮಾತ್ಮನನ್ನು ಅನುಭವದಿಂದ ಕಂಡುಕೊಳ್ಳಬಹುದು.

4. ಈ ಮೇಲೆ ತಿಳಿಸಿರುವ ತತ್ತ್ವಗಳನ್ನು ನಂಬತಕ್ಕವರೆಲ್ಲರೂ 'ಸಾಧಾರಣ ಧರ್ಮಚಳವಳಿ'ಗೆ ಸದಸ್ಯರಾಗಿ ಸೇರಲು ಅರ್ಹತೆಯುಳ್ಳವರು.

5. ಪ್ರತಿಯೊಬ್ಬ ಸದಸ್ಯನೂ ತನ್ನ ದೈಹಿಕ, ಮಾನಸಿಕ, ಮತ್ತು ಆಧ್ಯಾತ್ಮಿಕ ಶಕ್ತಿಗಳನ್ನು ಬೆಳೆಸಿಕೊಂಡು ವಾಸ್ತವವಾಗಿ ಮುಂದುವರಿಯುತ್ತಾ ಇರುವಾಗಲೇ ತನ್ನ ಕುಟುಂಬದ, ಕುಲದ, ರಾಷ್ಟ್ರದ ಮತ್ತು ಇಡಿಯ ಜಗತ್ತಿನ ಸ್ಥಿತಿಯನ್ನೂ ಉತ್ತಮ ಗೊಳಿಸುವದಕ್ಕೆ (ಪ್ರಯತ್ನ ಪಡುವದರಲ್ಲಿ) ಪ್ರಯೋಗ ನಡೆಸಬೇಕಲ್ಲದೆ, ಈ ಕೃತಿ ಯನ್ನು ಪುರುಷಾರ್ಥವೆಂದೂ (ಸ್ವಂತ ಸಂಸ್ಕೃತಿ ಸುಧಾರಣೆಯೆಂದೂ) ಪರೋಪ ಕಾರವೆಂದೂ ಪರಿಗಣಿಸಬೇಕು.

6 ಬೇರೆ ಬೇರೆ ಮತಗಳ ಭೇದಭಾವನೆಗಳನ್ನೂ ಮನಸ್ತಾಪಗಳನ್ನೂ ದುರಭಿಪ್ರಾಯಗಳನ್ನೂ ದ್ವೇಷಗಳನ್ನೂ ಕಡಿಮೆ ಮಾಡಲು ಅಥವಾ ಕಳೆಯಲು ಜನಸಾಮಾನ್ಯರ ಗಮನವನ್ನು ಧರ್ಮದ ಕಡೆಗೆ ತಿರುಗಿಸುವದೂ ಅವರಲ್ಲಿ ಸಹನ ಗುಣವನ್ನು ಪ್ರೋತ್ಸಾಹಿಸುವದೂ ಪ್ರತಿಯೊಬ್ಬ ಸದಸ್ಯನ ಕರ್ತವ್ಯವಾಗಿದೆ.

7. 'ಸಾಧಾರಣಧರ್ಮ' ಎನ್ನುವ ಬಗೆಯ ಧರ್ಮ ಮತ್ತು ನೀತಿಗಳ ಮೇಲಿನ ಪುಸ್ತಕಗಳನ್ನು ಅಧ್ಯಯನಮಾಡಬೇಕು ; ಅವುಗಳಲ್ಲಿರುವ ಬೋಧನೆ ಯಂತೆ ಶ್ರದ್ಧಾದರಗಳಿಂದ ನಡೆದುಕೊಳ್ಳಬೇಕು ; ಮತ್ತು ಬೇರೆಯವರೂ ಹಾಗೇ ಮಾಡುವಂತೆ ಪ್ರೋತ್ಸಾಹಿಸಬೇಕು.

8. ಧರ್ಮಬೋಧೆ ಮಾಡುವ ಎಲ್ಲಾ ಸಾಧುಸತ್ಪುರುಷರಿಗೂ ಇತರ ಯೋಗ್ಯ ವ್ಯಕ್ತಿಗಳಿಗೂ ಎಲ್ಲಾ ಸದಸ್ಯರೂ ಸಾಧ್ಯವಾದಷ್ಟು ಸಹಾಯಮಾಡಬೇಕು.

ರಾಮನ ಯೋಜನೆಯ ತತ್ತ್ವಗಳು

1. ವಿಜ್ಞಾನದ ಆದೇಶಗಳಿಗೂ ನಿಜವಾದ ವೇದಾಂತದ ಬೋಧೆಗಳಿಗೂ ವಿಧಿಗಳಿಗೂ ವರ್ತಮಾನಕಾಲದ ಅಗತ್ಯಗಳಿಗೂ ಹೊಂದಿಕೆಯಾದ–ಶೀಲ–ಸಾಧನಗಳ ಪದ್ಧತಿಯು 'ಸಾಧಾರಣ ಧರ್ಮ'ದಲ್ಲಿ (Common Path) ಅಡಗಿದೆ. ಮುಂದುವರಿಯುತ್ತಿರುವ ವಿಜ್ಞಾನದ ಮತ್ತು ವರ್ತಮಾನಯುಗದ ಜೊತೆ ಜೊತೆಗೇ ಕೈಯಲ್ಲಿ ಕೈಯಿಟ್ಟು ನಡೆಯುತ್ತಿರುವದರಿಂದ 'ಸಾಧಾರಣ ಧರ್ಮ' ಚಳವಳಿಯು ಕ್ರಿಯಾಶಕ್ತಿಯುತವಾಗಿ (ಪ್ರ)ಗತಿಶೀಲವಾಗಿದೆಯೇ ಹೊರತು ಸ್ಥಾಯೀ ಸ್ವಭಾವದ್ದಾಗಿಲ್ಲ.

ದೇಶಗಳಿವೆ. ನಾನು ಚಂದ್ರನ ರಜತಮಯವಾದ ತಂತುಗಳನ್ನೂ ಸೂರ್ಯನ ಸುವರ್ಣಮಯವಾದ ಕಿರಣಗಳನ್ನೂ ಧರಿಸಿ ಸುಖವಾಗಿ ಜೀವಿಸಬಲ್ಲೆ. ನಾನು ಬೆಟ್ಟಗಳಲ್ಲಿ ಹಳ್ಳಗಳಾಗಿಯೂ ಹೊಳೆಗಳಾಗಿಯೂ ಹಾಡುತ್ತಾ ಮೊರೆಯುತ್ತಾ ಸ್ವಚ್ಛಂದವಾಗಿ ಅಲೆದಾಡುತ್ತೇನೆ ಸಾಗರದ ತರಂಗಗಳಲ್ಲಿ ನಾನು ಸಂತೋಷವಾಗಿ ಕುಣಿಯುತ್ತಿರುತ್ತೇನೆ ಮಂದಮಾರುತನ ಮನೋಹರ ವಿಲಾಸವು ನಾನೇ , ಉನ್ಮತ್ತ ಮಾರುತನು ನಾನೇ. ನನ್ನೀ ರೂಪಗಳು ಬದಲಾವಣೆಯ ಸಂಚಾರೀ ಭಾವಗಳು. ಮೇರು ಶಿಖರದಿಂ ಕೆಳಗಿಳಿದು ಬಂದೆ, ಬಾಗಿಲುಗಳ ತಟ್ಟಿದೆನು, ನಿದ್ರಿಪರನೆಚ್ಚರಿಸಿದೆ. ಸಂತೈಸಿದೆನೊಬ್ಬನಂ, ಇನ್ನೊಬ್ಬನ ಕಣ್ಣೀರುಗಳನೊರಸಿದೆ ಕೆಲವರಿಗೆ ಹೊದಿಸಿದೆ ; ಇತರರ ಮುಸುಕುಗಳ ಕಿತ್ತೊಗೆದೆ. ನಾನಿದನು ಸೋಂಕಿದೆನು, ಅದನು ಸ್ಪರ್ಶಿಸಿದೆ ತೆಗೆದೆ ನಾ ಟೋಪಿಯನು, ಒಗೆದು ನಾ ಓಡಿದೆನು. ನನ್ನೊಡನೆ ಇಹೆನು ಏನನ್ನೂ, ಯಾರೂ ಎನ್ನನು ಕಂಡುಹಿಡಿಯಲಾರರಲಾ !”

ಓಂ ! ಓಂ ಓಂ !